ಕನ್ನಡ ನುಡಿ

ಸಂಪುಟ 5 ಸಂಚಿಕೆ 1

ರಿಂದ

ಸಂಪುಟ 5 ಸಂಚಿಕೆ 47

[1942 ರಿಂದ 1943]

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧೨
ಬಿಡಿ ಪತ್ರಿಕೆ: ೬ ಕಾಸು



ಸಂಪಾದಕ:
ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೧
ಬೆಂಗಳೂರು: ಶುಕ್ರವಾರ, ಅಕ್ಟೋಬರ್ ೨೩, ೧೯೪೨

# ಮೈಸೂರಿನಲ್ಲಿ ವಿದ್ಯಾಭ್ಯಾಸ ಪ್ರಗತಿ

[ಮೈಸೂರು ಪ್ರಜಾಪ್ರತಿನಿಧಿ ಸಭೆಯಲ್ಲಿ ಪ್ರಧಾನ ಶಿರೋಮಣಿ ಶ್ರೀ. ಎನ್. ಮಾಧವರಾಯರವರು ಮಾಡಿದ ಭಾಷಣದಿಂದ]

## ವಿಶ್ವವಿದ್ಯಾನಿಲಯ

೧೯೪೧-೪೨ನೆಯ ಸಾಲಿನಲ್ಲಿ ವಿಶ್ವವಿದ್ಯಾನಿಲಯದ ಎಲ್ಲ ಕಾಲೇಜುಗಳಿಂದಲೂ ಸೇರಿ ಒಟ್ಟು ೫,೦೫೩ ಮಂದಿ ವ್ಯಾಸಂಗ ಮಾಡುತ್ತಿದ್ದರು. ೧೯೪೦-೪೧ನೆಯ ಸಾಲಿನಲ್ಲಿ ವಿಶ್ವವಿದ್ಯಾನಿಲಯದ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿದ್ದವರ ಸಂಖ್ಯೆ ೪,೯೦೬. ವಿಶ್ವವಿದ್ಯಾನಿಲಯದ ನಾನಾ ಪರೀಕ್ಷೆಗಳಲ್ಲಿಯೂ ತೇರ್ಗಡೆ ಹೊಂದಿ "ಡಿಗ್ರಿ" ಪ್ರಶಸ್ತಿಗಳನ್ನು ಪಡೆಯಲು ಅರ್ಹರಾಗಿ ಇದ್ದವರ ಸಂಖ್ಯೆ ೫೩೧. ಈ ಸಂಖ್ಯೆಯಲ್ಲಿ ೪೬ ಮಂದಿ ವಿದ್ಯಾರ್ಥಿನಿಯರೂ ಸೇರಿದ್ದಾರೆ.

ವಿಶ್ವವಿದ್ಯಾನಿಲಯದ ಪ್ರಚಾರೋಪನ್ಯಾಸಗಳೂ ಎಂದಿನಂತೆಯೇ ನಡೆದುವು. ವಿಶ್ವವಿದ್ಯಾನಿಲಯದ ಅಧ್ಯಾಪಕ ಸಂಘದವರು ಸಾಹಿತ್ಯ ಸಂಬಂಧವಾದ ವಿಷಯಗಳನ್ನೂ ಇತರ ವಿಷಯಗಳನ್ನೂ ಕುರಿತು ಅನೇಕ ಸ್ಥಳಗಳಲ್ಲಿ ಉಪನ್ಯಾಸಗಳನ್ನು ಮಾಡಿದರು. ಬಿ.ಇ. ಡಿಗ್ರಿ ಪರೀಕ್ಷೆಯ ವ್ಯಾಸಂಗ ಕ್ರಮವನ್ನು ತಿದ್ದುಪಡಿ ಮಾಡಿ ಪರಿಷ್ಕರಿಸಲಾಯಿತು. "ಡಾಕ್ಟರೇಟ್ ಡಿಗ್ರಿ"ಗಳನ್ನು ಕೊಡುವ ವ್ಯವಸ್ಥೆಯನ್ನೂ ವಿಶ್ವವಿದ್ಯಾನಿಲಯದಲ್ಲಿ ಏರ್ಪಡಿಸಲಾಯಿತು.

ಭರತಖಂಡದ ಐತಿಹಾಸಿಕ ದಾಖಲೆಗಳ ಕಮಿಷನ್ ಸಂಸ್ಥೆಯವರು ೧೯೪೧ನೆಯ ಇಸವಿ ಡಿಸೆಂಬರು ತಿಂಗಳಿನಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಮೈಸೂರಿನಲ್ಲಿ ತಮ್ಮ ವಾರ್ಷಿಕಾಧಿವೇಶನವನ್ನು ನಡೆಯಿಸಿದರು. ಶ್ರೀಮನ್ಮಹಾರಾಜರವರು ಅದರ ಸಮಾರಂಭ ಮಹೋತ್ಸವವನ್ನು ನೆರವೇರಿಸಿದರು. ಭರತಖಂಡದ ನಾನಾ ಭಾಗಗಳಿಂದಲೂ ಆ ಸಂಸ್ಥೆಯ ಸದಸ್ಯರು ದಯಮಾಡಿದ್ದರು...

## ವಿದ್ಯಾಭ್ಯಾಸ

೧೯೪೨ನೆಯ ಇಸವಿ ಮಾರ್ಚಿ ೧ನೆಯ ತಾರೀಖಿಗೆ ಅಖೈರಾದ ಸ್ಕೂಲು ವರ್ಷದಲ್ಲಿ ಸಂಸ್ಥಾನದಲ್ಲಿ ೪೯ ಹೈಸ್ಕೂಲುಗಳೂ ಮತ್ತು ೩೭೭ ಮಿಡ್ಲ್ ಸ್ಕೂಲುಗಳೂ ಇದ್ದುವು. ಹೈಸ್ಕೂಲುಗಳಲ್ಲಿ ೧೩,೨೪೯ ಮಂದಿಯೂ, ಮಿಡ್ಲ್ ಸ್ಕೂಲುಗಳಲ್ಲಿ ೫೯,೮೦೦ ಮಂದಿಯೂ ವ್ಯಾಸಂಗ ಮಾಡುತ್ತಿದ್ದರು. ೧೯೪೧-೪೨ನೆಯ ಸಾಲಿನಲ್ಲಿ ೬,೮೫೧ ಪ್ರೈಮರಿ ಸ್ಕೂಲುಗಳಿದ್ದುವು. ಅವುಗಳಲ್ಲಿ ೨,೮೪,೫೫೬ ಮಂದಿ ಬಾಲಕ ಬಾಲಕಿಯರು ವ್ಯಾಸಂಗಮಾಡುತ್ತಿದ್ದರು. ಎಂದರೆ, ೧೯೪೦-೪೧ನೆಯ ಸಾಲಿನಲ್ಲಿದ್ದುದಕ್ಕಿಂತಲೂ ೩೪೬ ಸ್ಕೂಲುಗಳೂ ಮತ್ತು ೧೦,೧೦೨ ಮಂದಿ ಬಾಲಕ ಬಾಲಕಿಯರೂ ಹೆಚ್ಚಾಗಿದ್ದಂತೆ ಆಯಿತು. ೧೯೪೧ನೆಯ ಇಸವಿಯ ಪ್ರಾಥಮಿಕ ವಿದ್ಯಾಭ್ಯಾಸದ ಆಕ್ಟಿನ ಮೇರೆಗೆ ಪ್ರಾಥಮಿಕ ವಿದ್ಯಾಭ್ಯಾಸದ ಆಡಳಿತವನ್ನು ೧೯೪೧ನೆಯ ಇಸವಿ ಜುಲೈ ಒಂದನೆಯ ತಾರೀಖಿನ ಲಾಗಾಯಿತು ವಿದ್ಯಾಭ್ಯಾಸದ ಇಲಾಖೆಯವರೇ ವಹಿಸಿಕೊಂಡರು. ಸಂಸ್ಥಾನದಲ್ಲಿರತಕ್ಕ ಎಲ್ಲ ಪ್ರೈಮರಿ ಸ್ಕೂಲುಗಳ ಆಡಳಿತವನ್ನೂ ನೋಡಿಕೊಳ್ಳುವುದಕ್ಕಾಗಿ ವಿದ್ಯಾಭ್ಯಾಸದ ಇಲಾಖೆಗೆ ಒಬ್ಬ ಡೆಪ್ಯುಟಿ ಡೈರೆಕ್ಟರನ್ನು ನೇಮಕ ಮಾಡಲಾಯಿತು. "ಟೆಕ್ಸ್ಟ್ ಬುಕ್ ಕಮಿಟಿ" ಎಂಬ ಪಠ್ಯ ಪುಸ್ತಕಗಳ ಸಂಬಂಧವಾದ ಸಮಿತಿ, ಎಸ್.ಎಸ್.ಎಲ್.ಸಿ. ಬೋರ್ಡು ಮತ್ತು ಲೋಕಲ್ ಎಗ್ಸಾಮಿನೇಷನ್ಸ್ ಬೋರ್ಡು-ಇವುಗಳನ್ನು ವಜಾ ಮಾಡಲಾಯಿತು. ಅವುಗಳಿಗೆ ಬದಲಾಗಿ 'ಸೆಕೆಂಡರಿ ಎಜುಕೇಷನ್ ಬೋರ್ಡ್' ಎಂಬ ಒಂದು ಮಂಡಲಿಯನ್ನೂ, 'ಟ್ರೈನಿಂಗ್' ಪರೀಕ್ಷೆಗಳಿಗೆ ಸಂಬಂಧಪಟ್ಟ ಒಂದು 'ಬೋರ್ಡ್' ಮಂಡಲಿಯನ್ನೂ ಏರ್ಪಡಿಸಲಾಯಿತು. ಹೈಸ್ಕೂಲುಗಳ, ಮಿಡ್ಲ್ ಸ್ಕೂಲುಗಳ ಮತ್ತು ಪ್ರೈಮರಿ ಸ್ಕೂಲುಗಳ ಉಪಾಧ್ಯಾಯರುಗಳ ವಿಷಯದಲ್ಲಿಯೂ, ಅಸಿಸ್ಟೆಂಟ್ ಇನ್‌ಸ್ಪೆಕ್ಟರುಗಳ ವಿಷಯದಲ್ಲಿಯೂ ಮತ್ತು ಹೈಸ್ಕೂಲುಗಳಲ್ಲಿರತಕ್ಕ ಪಂಡಿತರ ಮತ್ತು ಮೌಲ್ವಿಗಳ ವಿಷಯದಲ್ಲಿಯೂ ತಿದ್ದುಪಾಟಾದ ಸಂಬಳದ ಸ್ಕೇಲುಗಳನ್ನು ಸರ್ಕಾರದವರು ಮಂಜೂರು ಮಾಡಿದ್ದರಷ್ಟೆ. ಹಾಗೆ ಮಂಜೂರಾದ ಸ್ಕೇಲುಗಳನ್ನು ೧೯೪೧ನೆಯ ಇಸವಿ ಜುಲೈ ೧ನೆಯ ತಾರೀಖಿನ ಲಾಗಾಯಿತು ಜಾರಿಗೆ ತರಲಾಯಿತು...

ಪ್ರಾಥಮಿಕ ವಿದ್ಯಾಭ್ಯಾಸ ವಿಚಾರದಲ್ಲಿ ಸಲಹೆ ಹೇಳಲು ನೇಮಕವಾಗಿದ್ದ ವಿಶೇಷ ಸಮಿತಿಯವರು ಸಂಸ್ಥಾನದ ಮಲೆನಾಡು ಮತ್ತು ಮೈದಾನ ಪ್ರದೇಶಗಳಲ್ಲಿ ನಾಲ್ಕು ವರ್ಷಗಳ ಅವಧಿಯಲ್ಲಿ ೧,೦೦೦ ಪ್ರೈಮರಿ ಸ್ಕೂಲುಗಳನ್ನು ಏರ್ಪಡಿಸಬೇಕೆಂಬುದಾಗಿ ಸಲಹೆ ಮಾಡಿದ್ದರಷ್ಟೆ. ಆ ಸಲಹೆಯನ್ನನುಸರಿಸಿ, ೧೯೪೧-೪೨ನೆಯ ಸಾಲಿನಲ್ಲಿ, ೩೭೫ ಗ್ರಾಮಗಳನ್ನು ಆರಿಸಿಕೊಂಡು ಅವುಗಳಲ್ಲಿ ಸ್ಕೂಲುಗಳನ್ನು ಏರ್ಪಡಿಸಲಾಯಿತು. ಈ ಸ್ಕೂಲುಗಳಿಗೆ ಪ್ರತಿ ವರ್ಷವೂ ತಗಲತಕ್ಕ ವೆಚ್ಚ ೭೪,೫೬೨ ರೂಪಾಯಿಗಳು. ಪ್ರಾರಂಭದಲ್ಲಿ ಒಟ್ಟು ಮೊತ್ತದಲ್ಲಿ ತಗಲಿದ ಅನಾವೃತ್ತ ಸ್ವಭಾವದ ವೆಚ್ಚ ೪೫,೦೦೦ ರೂಪಾಯಿಗಳು ಈ ಸ್ಕೂಲುಗಳ ಜೊತೆಗೆ ಚಾಲ್ತಿ ವರ್ಷದಲ್ಲಿ, ಎಂದರೆ ೧೯೪೨-೪೩ನೆಯ ಸಾಲಿನಲ್ಲಿ ಇದುವರೆಗೆ ೨೫೬ ಪ್ರೈಮರಿ ಸ್ಕೂಲುಗಳನ್ನು ಹೊಸದಾಗಿ ಏರ್ಪಡಿಸುವುದಕ್ಕೆ ಮಂಜೂರಾತಿಯನ್ನು ಕೊಡಲಾಗಿದೆ... ಪ್ರೈಮರಿ ಸ್ಕೂಲಿಗೆ ಸೇರಿದ ವಿದ್ಯಾರ್ಥಿಗಳು ಸ್ವಲ್ಪಕಾಲ ಮಾತ್ರ ವ್ಯಾಸಂಗ ಮಾಡುತ್ತಿದ್ದು ಅನಂತರ ವಿದ್ಯಾಭ್ಯಾಸವನ್ನು ಬಿಟ್ಟುಬಿಡುವುದರಿಂದ ಅದುವರೆಗೆ ಅವರು ಕಲಿತ ಓದುಬರಹಗಳೂ ಮರೆತುಹೋಗಿ, ಅವರ ವಿದ್ಯಾಭ್ಯಾಸವು ನಿರರ್ಥಕವಾಗಿ ಪರಿಣಮಿಸುವುದಷ್ಟೆ. ಅದನ್ನು ತಪ್ಪಿಸುವುದಕ್ಕಾಗಿ ಪ್ರೈಮರಿ ಸ್ಕೂಲುಗಳಲ್ಲಿ ವ್ಯಾಸಂಗವು ಸ್ವಲ್ಪಮಟ್ಟಿಗೆ ನಿರ್ಬಂಧಕವಾಗಿರುವಂತೆ ಮಾಡುವ ಏರ್ಪಾಡನ್ನು ಜಾರಿಗೆ ತರುವುದೇ ಈಗ ಪರ್ಯಾಲೋಚನೆಯಲ್ಲಿದೆ.

ಸಂಸ್ಥಾನದಲ್ಲಿ ಸ್ತ್ರೀಯರ ವಿದ್ಯಾಭ್ಯಾಸ ಕ್ರಮವನ್ನು ಪುನರ್ವ್ಯವಸ್ಥೆಗೊಳಿಸುವ ವಿಚಾರವನ್ನು ಪರಿಶೀಲಿಸುವುದಕ್ಕಾಗಿ ಒಂದು ಸಮಿತಿಯನ್ನು ಏರ್ಪಡಿಸಲಾಯಿತು. ಮೈಸೂರಿನಲ್ಲಿ ಮಹಿಳೆಯರಿಗಾಗಿ ಏರ್ಪಟ್ಟಿರತಕ್ಕ ಕಸಬುಗಳ ಶಿಕ್ಷಣ ಸಂಸ್ಥೆಯನ್ನು ಸರ್ಕಾರದ ಆಡಳಿತಕ್ಕೆ ವಹಿಸಿಕೊಂಡು ಸರ್ಕಾರದವರಿಗೆ ಸೇರಿದ ಒಂದು ಸಂಸ್ಥೆಯನ್ನಾಗಿ ಮಾರ್ಪಡಿಸಲಾಯಿತು... ಸಂಸ್ಥಾನದಲ್ಲಿ ವಯಸ್ಕರ ವಿದ್ಯಾಭ್ಯಾಸಕ್ಕಾಗಿ "ಮೈಸೂರ್ ಲಿಟರಸಿ ಕೌನ್‌ಸಿಲ್" ಎಂಬ ಅಕ್ಷರ ಪ್ರಚಾರ ಸಂಸ್ಥೆಯೊಂದನ್ನು ಏರ್ಪಡಿಸಲಾಯಿತು. ಇದಕ್ಕಾಗಿ ೧೨,೦೦೦ ರೂಪಾಯಿಗಳನ್ನು ಮಂಜೂರ್ಮಾಡಲಾಗಿದೆ. ಈ ಸಮಿತಿಯವರು ಈ ವರ್ಷದ ಪ್ರಾರಂಭದಲ್ಲಿ ಕೆಲಸ ಮಾಡಲು ತೊಡಗಿದರು. ಇದುವರೆಗೆ ೧೯೩ ತರಗತಿಗಳು ತೆರೆಯಲ್ಪಟ್ಟವೆ. ಅವುಗಳಲ್ಲಿ ೨,೮೪೯ ಮಂದಿ ವಿದ್ಯೆ ಕಲಿಯುತ್ತಿದ್ದಾರೆ. ಅಕ್ಷರ ಪ್ರಚಾರಕ್ಕೆ ಸಂಬಂಧಪಟ್ಟ ಕೆಲಸವನ್ನು ನಡೆಯಿಸುವುದಕ್ಕಾಗಿ ೨೦೦ ಮಂದಿ ಉಪಾಧ್ಯಾಯರುಗಳಿಗೂ ಮತ್ತು ೧೪ ಮಂದಿ ಸೂಪರ್‌ವೈಜರುಗಳಿಗೂ ತರಬೇತನ್ನು ಕೊಡಲಾಗಿದೆ.

## ವೃತ್ತಿ ಶಿಕ್ಷಣ ಶಾಲೆ

ಬೆಂಗಳೂರಿನಲ್ಲಿರುವ ಶ್ರೀ ಕೃಷ್ಣರಾಜೇಂದ್ರ ವೃತ್ತಿ ಶಿಕ್ಷಣ ಶಾಲೆಗೆ ಸೇರಿದಂತೆ (ಸರ್ ಎಂ. ವಿಶ್ವೇಶ್ವರಯ್ಯನವರ ಕೋರಿಕೆಯಂತೆ) ಒಂದು ಔದ್ಯೋಗಿಕ ಶಿಕ್ಷಣ ಶಾಲೆಯನ್ನು ಏರ್ಪಡಿಸಬೇಕೆಂದಿರುವ ವಿಚಾರವನ್ನು ನಾನು ಕಳೆದ ಬಡ್ಜೆಟ್ ಅಧಿವೇಶನದ ಭಾಷಣದಲ್ಲಿ ಸೂಚಿಸಿದ್ದೆನಷ್ಟೆ. ಅದು ಈಗ ಪ್ರಬಲವಾದ ಪರ್ಯಾಲೋಚನೆಯಲ್ಲಿದೆ. ಅದರ ತಪಸೀಲು ವಿವರಗಳು ನಿರ್ಧರವಾಗುತ್ತಿವೆ.

## ಆಕಾಶವಾಣಿ

ಕಳೆದ ಜನವರಿ ತಿಂಗಳಿನ ಪ್ರಾರಂಭದಿಂದಲೂ ಮೈಸೂರಿನ "ಆಕಾಶವಾಣಿ" ಕಾರ್ಯಾಲಯವು ಸರ್ಕಾರದವರ ನೇರವಾದ ಹತೋಟಿಗೊಳಪಟ್ಟು ಕೆಲಸ ಮಾಡುತ್ತಿದೆ. ಭಾಷಣಗಳೂ ಸಂಗೀತಗಳೂ ನಡೆಯುವ ಕಾಲವನ್ನು ಹೆಚ್ಚು ಮಾಡಲಾಗಿದೆ. ಕಾರ್ಯಕ್ರಮಗಳು ಗುಣದಲ್ಲಿ ಮೇಲಾಗಿ ವೈವಿಧ್ಯದಿಂದ ಕೂಡಿರುವಂತೆ ಏರ್ಪಡಿಸಲಾಗುತ್ತಿದೆ. ವಾಸ್ತವವಾದ ಸುದ್ದಿಗಳನ್ನು ಕನ್ನಡದಲ್ಲಿ ತಿಳಿಸುವುದನ್ನೂ ಕಾರ್ಯಕ್ರಮದಲ್ಲಿ ಸೇರಿಸಲಾಗಿದೆ. ಮೈಸೂರು ನಗರದಲ್ಲಿ "ಆಕಾಶವಾಣಿ" ವ್ಯವಸ್ಥೆಗಾಗಿ ಕಟ್ಟಡವು ಪೂರೈಸುವುದರಲ್ಲಿದೆ. ಅದಕ್ಕೆ ಸುಮಾರು ೮೦,೦೦೦ ರೂಪಾಯಿಗಳು ವೆಚ್ಚವಾಗುವುವೆಂದು ಅಂದಾಜಾಗಿದೆ

# ಕನ್ನಡ ನುಡಿ

ಶುಕ್ರವಾರ, ಅಕ್ಟೋಬರ್ ೨೩, ೧೯೪೭

## ನಮ್ಮ ಮಾತು

**ಕನ್ನಡ ನುಡಿ** ತನ್ನ ನಾಲ್ಕು ವರ್ಷಗಳ ಸೇವೆಯನ್ನು ಮುಗಿಸಿ ಐದನೆಯ ವರ್ಷದಲ್ಲಿ ಅಡಿಯಿಟ್ಟಿದೆ. ಇದುವರೆಗೆ ನಾನಾ ವಿಧವಾಗಿ ಆಸರೆ ಕೊಟ್ಟು ಬೆಳಸಿಕೊಂಡು ಬಂದಿರುವ ಎಲ್ಲರಿಗೂ ಪರಿಷತ್ತು ಕೃತಜ್ಞತೆಯುಳ್ಳದ್ದಾಗಿದೆ.

ನುಡಿಯ ಉದ್ದೇಶಗಳು ಎಲ್ಲರಿಗೂ ಚೆನ್ನಾಗಿ ತಿಳಿದಿದೆಯಾಗಿ ಇಲ್ಲಿ ಅವನ್ನು ಮತ್ತೆ ವಿವರಿಸಬೇಕಾಗಿಲ್ಲ. ಪರಿಷತ್ತಿನ ಎಲ್ಲ ಮುಖದ ಚಟುವಟಿಕೆಗಳನ್ನು ಕನ್ನಡಿಸುವುದೇ ಅದರ ಮೊದಲ ಗುರಿಯಾಗಿದೆ. ಜೊತೆಗೆ, ತಿಳಿವನ್ನೂ ನಲಿವನ್ನೂ ಕೊಡುವ ಸ್ವಾರಸ್ಯವಾದ ಲೇಖನಗಳನ್ನು ವಾರವಾರವೂ ಪ್ರಕಟಿಸಿ, ಪರಿಷತ್ತಿನ ಸದಸ್ಯರನ್ನು ಮತ್ತು ಮಹಾಜನರನ್ನು ಕನ್ನಡದ ಯೋಗಕ್ಷೇಮದ ಕಡೆಗೆ ಮನಸ್ಸು ಕೊಡುವಂತೆ ಪ್ರೇರಿಸುವ ಕಾರ್ಯವನ್ನು ತನ್ನ ಶಕ್ತಿಯಿದ್ದಷ್ಟು ನಡಸಿಕೊಂಡು ಬರುತ್ತಿದೆ. ಈ ಕಾರ್ಯ ಹೆಚ್ಚು ಫಲಕಾರಿಯಾಗಲು ಲೇಖಕರ ಸಹಕಾರ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ದೊರೆಯಬೇಕಾಗಿದೆ.

ಪರಿಷತ್ತಿನ ಸಾಹಿತ್ಯ ಪರೀಕ್ಷೆಗಳು ಜನಪ್ರಿಯವಾಗುತ್ತಿವೆ. ಸದ್ಯಕ್ಕೆ ಈ ಪರೀಕ್ಷೆಗಳಲ್ಲಿ 'ಜಾಣ' ಪರೀಕ್ಷೆಯೇ ಪ್ರೌಢ ಪರೀಕ್ಷೆಯಾಗಿದೆ. ಇದುವರೆಗೆ ಇಡಿಯ ಕರ್ನಾಟಕದಿಂದ ಒಟ್ಟು ೧೫೪ ಮಂದಿ ಜಾಣ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ್ದಾರೆ. ಇವರಲ್ಲಿ ಹಲವರು ಇನ್ನೂ ಹೆಚ್ಚಿನ ಮಟ್ಟದ ಕನ್ನಡ ವ್ಯಾಸಂಗವನ್ನು ಬಯಸಿ, ಪರಿಷತ್ತು ಯೋಚಿಸಿರುವ 'ರನ್ನ' ಪರೀಕ್ಷೆಯಲ್ಲಿ ಆಸಕ್ತಿ ತೋರಿಸುತ್ತಿದ್ದಾರೆ. ಮುಂದಿನ ವರ್ಷದಿಂದಲಾದರೂ ಈ ಪ್ರೌಢ ಸಾಹಿತ್ಯ ವರ್ಗವನ್ನು ತೆರೆಯಬೇಕೆಂಬುದು ಪರಿಷತ್ತಿನ ಹಂಬಲವಾಗಿದೆ.

ಎರಡನೆಯದಾಗಿ, ಪರಿಷತ್ತಿಗೆ ಅಂಗಸಂಸ್ಥೆಗಳಾಗಿ ಇನ್ನೂ ಸೇರದೆ ಇರುವ ಕರ್ನಾಟಕ ಸಂಘಗಳು ಬೇಗನೆ ಸೇರಿ ಬೆಂಬಲ ನೀಡಬೇಕೆಂದು ಬಿನ್ನೈಸುತ್ತೇವೆ. ನಾಡಿನ ಪ್ರತಿಯೊಂದು ಜಿಲ್ಲೆಯಲ್ಲಿಯೂ ಪರಿಷತ್ತಿನ ಶಾಖೆಗಳ ಸ್ಥಾಪನೆಯಾಗಬೇಕಾಗಿದೆ. ಈ ಜಿಲ್ಲಾ ಸಮಿತಿಗಳು ಕರ್ನಾಟಕ ಸಂಘಗಳೊಂದಿಗೆ ಸ್ಥಳೀಯ ಪರಿಷತ್ತುಗಳಾಗಿ, ಪರಿಷತ್ತನ್ನು ಆರ್ಥಿಕವಾಗಿ ಬಲಪಡಿಸಿ ಕನ್ನಡದ ಹಲವು ಅಶೋತ್ತರಗಳು ಕೈಗೂಡುವಂತೆ ಒಂದು ಕಟ್ಟಿನಲ್ಲಿ ದುಡಿಯುವ ದಿನ ಬೇಗ ಬರಲೆಂದು ಪರಿಷತ್ತು ಹಾರೈಸುತ್ತದೆ.

ಈಗ ಇಡಿಯ ಭರತಖಂಡಕ್ಕೇ ಸತ್ವಪರೀಕ್ಷೆಯ ಕಾಲ ಒದಗಿದೆ. ಒಟ್ಟು ಭಾರತದ ಪ್ರಗತಿಗೆ ಪ್ರತಿಯೊಂದು ಪ್ರಾಂತವೂ ತನ್ನ ತನ್ನ ಕಾಣಿಕೆಯನ್ನು ತೆರಬೇಕಾಗಿದೆ. ಭಾರತದ ಭವಿಷ್ಯದ ಮಾತು ಈಗ ದಿನದಿನಕ್ಕೂ ಗಟ್ಟಿಯಾಗಿ ಕೇಳಿಸುತ್ತಿದೆ. ಆಳುವ ಅರಸರಿಗೂ ನಾಡ ರಾಜಕಾರಣಿಗಳಿಗೂ ಬಿಡುವೇ ಇಲ್ಲ. ದೇಶ ಹಿತದೃಷ್ಟಿಯಿಂದ ಒಬ್ಬೊಬ್ಬರು ಒಂದೊಂದು ಯೋಜನೆಯನ್ನು ಮುಂದಿಡುತ್ತಿದ್ದಾರೆ. ಈ ಯೋಜನೆಗಳೆಲ್ಲಾ ಪರಿಶೀಲನೆಯಾಗಿ ಕಡೆಗೆ, ಸಿಂಧ್ ಪ್ರಾಂತದ ಹಿಂದಿನ ಮುಖ್ಯ ಮಂತ್ರಿಗಳಾದ ಶ್ರೀ. ಅಲ್ಲಾ ಬಕ್ಷ್ ಅವರು ಆಜಾದ್ ಮುಸ್ಲಿಂ ಸಮ್ಮೇಳನದ ಪರವಾಗಿ ಈಚೆಗೆ ಹೇಳಿರುವಂತೆ, ಭಾರತ ಕಾಂಗ್ರೆಸ್ ಸಂಸ್ಥೆ ಹಿಂದೆಯೇ ಅಂಗಿಕರಿಸಿರುವ ತತ್ವಕ್ಕನುಸಾರವಾಗಿ ಭಾಷಾ ಪ್ರಾಂತಗಳ ನಿರ್ಮಾಣವಾಗಬೇಕಾಗಿದೆ. ಸಾಹಿತ್ಯ ಸಂಸ್ಕೃತಿಗಳ ಏಳಿಗೆಯ ದೃಷ್ಟಿಯಿಂದ ಈ ಭಾಷಾಪ್ರಾಂತಗಳ ನಿರ್ಮಾಣ ಬಹಳ ಆವಶ್ಯಕವಾದುದು. ಈ ಬಗೆಯಲ್ಲಿ ಏಳಿಗೆ ಪಡೆದ ಪ್ರಾಂತಗಳು ಒಟ್ಟು ಭಾರತದ ರಾಜಕೀಯವಾದ ಏಳಿಗೆಗೂ ಕಾರಣವಾಗುವುವೆನ್ನಲು ಅಡ್ಡಿಯಿಲ್ಲ. ತತ್ವವನ್ನೆಲ್ಲರೂ ಒಪ್ಪುವ ಕಾಲ ಬಂದಿದೆ; ತತ್ವವನ್ನು ಕಾರ್ಯರೂಪಕ್ಕೆ ತರಲು ವಿವರಗಳನ್ನು ಪರಸ್ಪರ ಸಹಾನುಭೂತಿಯಿಂದಲೂ ತಾಳ್ಮೆಯಿಂದಲೂ ಔದಾರ್ಯದಿಂದಲೂ ಪರಿಶೀಲಿಸುವ ಕಾಲ ಬೇಗನೆ ಬರಲಿ. ದಿಗಂತದಲ್ಲಿ ಸ್ವಾತಂತ್ರ್ಯದ ಸೂರ್ಯ ಮೂಡುತ್ತಿದೆ. ಕರುಣಾಳು ಬೆಳಕು ನಾಡಿನ ಸೌಭಾಗ್ಯವನ್ನು ಬೆಳಸಲಿ, ಕಾಯಲಿ.

## ಪ್ರಜಾಪ್ರತಿನಿಧಿ ಸಭೆಯಲ್ಲಿ ದಿವಾನರವರ ಭಾಷಣ

ಮೈಸೂರು ಸಂಸ್ಥಾನದ ದಿವಾನರಾದ ಪ್ರಧಾನ ಶಿರೋಮಣಿ ಶ್ರೀ. ಎನ್. ಮಾಧವರಾಯರವರು ಮೈಸೂರು ಪ್ರಜಾಪ್ರತಿನಿಧಿ ಸಭೆಯ ದಸರಾ ಅಧಿವೇಶನದಲ್ಲಿ ಅಪ್ಪಣೆಕೊಡಿಸಿದ ಭಾಷಣದಲ್ಲಿ ಸರ್ಕಾರದ ನಾನಾ ಇಲಾಖೆಗಳ ಪ್ರಗತಿಯನ್ನು ಅಂಕಿ ಅಂಶಗಳೊಡನೆ ವಿವರಿಸಿದ್ದಾರೆ. ವಿದ್ಯಾಭ್ಯಾಸಕ್ಕೆ ಸಂಬಂಧಿಸಿದ ವಿವರಗಳನ್ನು ಬೇರೆ ಕಡೆ ಕೊಟ್ಟಿದೆ. ಸಂಸ್ಥಾನದ ಆದಾಯ ಹತ್ತಿರ ಹತ್ತಿರ ೫॥ ಕೋಟಿಗೆ ಮುಟ್ಟಿರುವ ಅಂಶ ಗಮನಾರ್ಹವಾದುದು. ಮತ್ತು ಇಂದಿನ ಕಷ್ಟಕಾಲದಲ್ಲಿ, ನಾಡಿನ ರಚನಾತ್ಮಕ ಹಾಗೂ ಅಭಿವೃದ್ಧಿ ಕಾರ್ಯಗಳಿಗೆ ಹಣವೊದಗಿ, ಅನಾವೃತ್ತ ವೆಚ್ಚಗಳು, ಇಳಿವರಿ ಕಿಮ್ಮತು ಭರ್ತಿನಿಧಿ, ಸಾಲತೀರ್ವೆ ನಿಧಿ ಮುಂತಾದುವಕ್ಕೆ ಹೆಚ್ಚಿಗೆ ಹಣ ಮಿಕ್ಕು ಕೊನೆಗೆ ೪·೭೫ ಲಕ್ಷ ರೂಪಾಯಿಗಳ ಉಳಿತಾಯವಾಗಿದೆ. ಈ ಆರ್ಥಿಕ ಸ್ಥಿತಿಗೆ ಕನ್ನಡಿಗರು ಸಂತೋಷಪಡುವುದರಲ್ಲಿ ಸಂಶಯವೇ ಇಲ್ಲ.

ಈ ಸಂದರ್ಭದಲ್ಲಿ ಇನ್ನೊಂದು ಮಾತು. ಮೈಸೂರು ಪ್ರಜಾಪ್ರತಿನಿಧಿ ಸಭೆಯಲ್ಲಿ ಈ ವರ್ಷದಿಂದ ಕನ್ನಡಕ್ಕೆ ಸಂಪೂರ್ಣವಾದ ಸ್ಥಾನ ಸಿಕ್ಕುವಂತಾಗಿದೆಯೆಂದು ಕೇಳಿ ಹರ್ಷಿಸುತ್ತೇವೆ. ಸಭೆಯ ನಡವಳಿಕೆಗಳೆಲ್ಲ ಕನ್ನಡದಲ್ಲೇ ಸಾಗುತ್ತವೆ. ಅವನ್ನು ಕನ್ನಡದಲ್ಲೂ ಇಂಗ್ಲಿಷಿನಲ್ಲೂ ಅಚ್ಚುಹಾಕಿಸುವ ಸಂಪ್ರದಾಯವಿರುವುದನ್ನು ತಪ್ಪಿಸಿ ಇನ್ನುಮೇಲೆ ಕನ್ನಡವೊಂದರಲ್ಲೆ ಪ್ರಕಟಿಸುವುದು ಸರ್ಕಾರದ ಉದ್ದೇಶವಾಗಿದೆಯೆಂತೆ. ಈ ಸುಧಾರಣೆಗಾಗಿ ಸರ್ಕಾರದವರನ್ನು ಮುಕ್ತಕಂಠದಿಂದ ಅಭಿನಂದಿಸಬೇಕಾಗಿದೆ. ಈ ಸುಧಾರಣೆಯ ಮುಮ್ಮಜಲಾಗಿ ದಿವಾನರವರು ಅಪ್ಪಣೆಕೊಡಿಸುವ ಭಾಷಣವೂ ಕನ್ನಡದಲ್ಲೇ ನಡೆದು, ಹೊರಗಿನ ಪತ್ರಿಕೆಗಳಿಗಾಗಿ ಇಂಗ್ಲಿಷಿನಲ್ಲಿ ಭಾಷಣವನ್ನು ಅಚ್ಚುಮಾಡಿ ಹಂಚಿಸುವ ಏರ್ಪಾಡು ನಡೆಯುವಂತಾಗಲೆಂದು ವಿನಯಪೂರ್ವಕವಾಗಿ ಸೂಚಿಸಲು ಇಷ್ಟಪಡುತ್ತೇವೆ. ನ್ಯಾಯವಿಧಾಯಕ ಸಭೆಯಲ್ಲೂ ಈ ತೆರದಲ್ಲಿ ಕನ್ನಡ ಮುನ್ನಡೆದು ಅದು ಬಹುಬೇಗ ಆಡಳಿತದ ಭಾಷೆಯಾಗಲೆಂದು ಹಾರೈಸುತ್ತೇವೆ. ಕನ್ನಡ ರಾಜ್ಯರಮಾರಮಣರು ಇದನ್ನು ಆಗಮಾಡಿಸುವರೆಂದು ಕನ್ನಡಿಗರೆಲ್ಲರೂ ಎದುರು ನೋಡುತ್ತಿದ್ದಾರೆ.

## ಮೈಸೂರು ಸಂಸ್ಥಾನದ ಅಕ್ಷರ ಪ್ರಚಾರ ಸಮಿತಿ

(ವರದಿ: ಸಮಿತಿಯ ಕಾರ್ಯದರ್ಶಿಗಳಿಂದ)

೧೫-೧೦-೧೯೪೭ನೆಯ ಗುರುವಾರ ಸಂಜೆ ೫ ಗಂಟೆಗೆ ಜಿಲ್ಲಾ ಮತ್ತು ತಾಲ್ಲೂಕು ಅಕ್ಷರ ಪ್ರಚಾರ ಸಮಿತಿಗಳ ಕಾರ್ಯದರ್ಶಿಗಳ ಸಭೆ ಕೇಂದ್ರಸಮಿತಿಯ ಕಚೇರಿಯಲ್ಲಿ ನಡೆಯಿತು. ಇವರಿಗೆಲ್ಲ ಕಾರ್ಯಸಮಿತಿಯ ಅಧ್ಯಕ್ಷರೂ ಕಾರ್ಯದರ್ಶಿಗಳೂ ಸ್ವಾಗತ ಬಯಸಿದರು. ಅಕ್ಷರ ಪ್ರಚಾರದ ವ್ಯವಸ್ಥೆ, ಗ್ರಾಮೋದ್ಧಾರದೊಂದಿಗೆ ಅಕ್ಷರ ಪ್ರಚಾರವನ್ನೂ ಸಾಧಿಸುವ ಕಾರ್ಯ, ಪಾಠಪುಸ್ತಕಗಳು ಮತ್ತು ಶಿಕ್ಷಣ ವಿಧಾನ – ಇವನ್ನು ಕುರಿತು ವಿಚಾರ ಮಾಡಲಾಯಿತು.

೧೬-೧೦-೧೯೪೨ನೆಯ ಶುಕ್ರವಾರ ಬೆಳಗ್ಗೆ ೮-೩೦ಕ್ಕೆ ಸಂಸ್ಥಾನ ಅಕ್ಷರ ಪ್ರಚಾರ ಸಮಿತಿಯ ಸಭೆ ನಡೆಯಿತು. ಈ ಸಭೆಗೆ ಸಮಿತಿಯ ಸದಸ್ಯರಲ್ಲದೆ ಜಿಲ್ಲಾ ಮತ್ತು ತಾಲ್ಲೂಕು ಪ್ರಚಾರ ಸಮಿತಿಗಳ ಕಾರ್ಯದರ್ಶಿಗಳೂ ಬಂದಿದ್ದರು. ಶಿಕ್ಷಣ ಶಾಖಾಧಿಕಾರಿಗಳಾದ ರಾಜಸೇವಾಸಕ್ತ ಶ್ರೀ. ಎ.ಆರ್. ವಾಡಿಯಾ ಅವರು ವಿಶೇಷ ಆಹ್ವಾನದ ಮೇಲೆ ದಯಮಾಡಿಸಿ ಕಾರ್ಯಕಲಾಪಗಳಲ್ಲಿ ಭಾಗವಹಿಸಿದರು.

ವಿಚಾರ ವಿನಿಮಯಾನಂತರ ಕೆಳಗೆ ಕಂಡ ಗೊತ್ತುವಳಿಗಳ ಅಂಗೀಕಾರವಾಯಿತು.

(೧) ಪುಸ್ತಕ ಭಂಡಾರ ಮತ್ತು ವಯಸ್ಕರ ವಿದ್ಯಾಭ್ಯಾಸ ಉಪಸಮಿತಿಯ ಸಲಹೆಗಳನ್ನು ಒಪ್ಪಲಾಯಿತು. ಈ ಸಲಹೆಗಳಂತೆ ಈ ವರ್ಷ ಎರಡು ಜಿಲ್ಲೆಗಳಲ್ಲಿ ಗ್ರಾಮಾಂತರ ಪುಸ್ತಕ ಭಂಡಾರಗಳನ್ನು ತೆರೆಯಲಾಗುವುದು. ಪ್ರತಿ ಜಿಲ್ಲೆಯ ೪ ತಾಲ್ಲೂಕುಗಳಲ್ಲಿ ಕೇಂದ್ರ ಭಂಡಾರಗಳನ್ನೂ ಅವಕ್ಕೆ ಸೇರಿದಂತೆ ಎಂಟು ಗ್ರಾಮಾಂತರ ಪುಸ್ತಕ ಭಂಡಾರಗಳನ್ನೂ ಸ್ಥಾಪಿಸಿ, ಕ್ರಮವಾಗಿ ಜಿಲ್ಲೆಯ ಇತರ ಭಾಗಗಳಿಗೂ ಈ ಭಂಡಾರಗಳನ್ನು ವಿಸ್ತರಿಸಲಾಗುವುದು. ಮುಂದೆ ಸಂಸ್ಥಾನದ ಪ್ರತಿ ಅಕ್ಷರ ಪ್ರಚಾರ ಕೇಂದ್ರದಲ್ಲೂ ವಯಸ್ಕರ ಶಿಕ್ಷಣದ ಮುನ್ನಡೆಗಾಗಿ ಭಂಡಾರಗಳನ್ನು ತೆರೆಯುವುದು ಸಮಿತಿಯ ಉದ್ದೇಶವಾಗಿದೆ.

(೨) ದಿವಾನರವರು ವಯಸ್ಕರ ವಿದ್ಯಾಭ್ಯಾಸ ಸಮ್ಮೇಳನದಲ್ಲಿ ಅಪ್ಪಣೆ ಕೊಡಿಸಿದ ಸಲಹೆಯಂತೆ, ಸ್ಥಳೀಯ ಸಂಸ್ಥೆಗಳ ಮತ್ತು ಆರೋಗ್ಯ ಇಲಾಖೆಯ ಸಚಿವರು ದಯಮಾಡಿ ಒಪ್ಪಿದ ಮೇರೆಗೆ, ಅಕ್ಷರ ಪ್ರಚಾರವನ್ನು ಗ್ರಾಮೋದ್ಧಾರ ಕಾರ್ಯದ ಒಂದು ಅಂಗವಾಗಿ ಯೋಜಿಸಿ ಕೆಲಸ ನಡಸಲು ಗ್ರಾಮೋದ್ಧಾರ ನಿಧಿಯಿಂದ ಅಕ್ಷರ ಪ್ರಚಾರಕ್ಕೂ ಸ್ವಲ್ಪ ಭಾಗವನ್ನು ತೆಗೆದಿಡಬೇಕೆಂದು ಸರ್ಕಾರವನ್ನು ಪ್ರಾರ್ಥಿಸಲಾಯಿತು.

(೩) ಅಕ್ಷರ ಪ್ರಚಾರ ತರಗತಿಯ ಪೂರ್ಣ ಪ್ರಯೋಜನವನ್ನು ಪಡೆದು ತೇರ್ಗಡೆಯಾಗಿ ಅಕ್ಷರಸ್ಥರೆಂದು ಪ್ರಶಸ್ತಿ ಪತ್ರಿಕೆ ಪಡೆದ ಎಲ್ಲ ವಯಸ್ಕರಿಗೂ ಮತದಾನದ ಹಕ್ಕನ್ನು ಕೊಡಬೇಕೆಂದು ಸರ್ಕಾರವನ್ನು ಪ್ರಾರ್ಥಿಸಲಾಯಿತು.

(೪) ಸರ್ಕಾರದ ವಿವಿಧ ಇಲಾಖೆಗಳಲ್ಲಿ ಸೇವಕರನ್ನು ನೇಮಿಸಿಕೊಳ್ಳುವಾಗ ಅಕ್ಷರಸ್ಥರಾದವರಿಗೆ ಮೊದಲ ನೇಮಕದ ಅವಕಾಶ ಕೊಡಬೇಕೆಂದು ಪ್ರಾರ್ಥಿಸಲಾಯಿತು.

ಕಾರ್ಯದರ್ಶಿಯವರು ಸಭೆಗೆ ಒಪ್ಪಿಸಿದ ವರದಿಯ ಮುಖ್ಯ ಅಂಶಗಳಿವು: ಇಂದಿನ ಕಷ್ಟಕಾಲದಲ್ಲಿಯೂ ಸಂಸ್ಥಾನದ ಹಲವೆಡೆಗಳಲ್ಲಿ ಅಕ್ಷರಪ್ರಚಾರ ತರಗತಿಗಳು ಹೆಚ್ಚಿ ಕೆಲಸ ಮಾಡುತ್ತಿವೆ.

೧೯೪೨-೪೩ರ ಆಯವ್ಯಯದಲ್ಲಿ ಮೈಸೂರು ಸರ್ಕಾರದವರು ೨೦,೦೦೦ ರೂ.ಗಳನ್ನು ಅಕ್ಷರ ಪ್ರಚಾರಕ್ಕಾಗಿ ತೆಗೆದಿಟ್ಟಿದ್ದಾರೆ. ಅದರಂತೆ ನಮ್ಮ ಆಯವ್ಯಯವನ್ನು ತಿದ್ದುಪಾಟು ಮಾಡಿ ಕಳಿಸಬೇಕೆಂದು ಕೋರಿದ್ದಾರೆ. ಅಕ್ಷರಪ್ರಚಾರ ಕಾರ್ಯ ಹೆಚ್ಚಿನ ಪ್ರಮಾಣದಲ್ಲಿ ನಡೆಯಲು ಉಪಕ್ರಮವಾದಲ್ಲಿ ಇನ್ನೂ ಹೆಚ್ಚಿಗೆ ದ್ರವ್ಯ ಸಹಾಯ ಮಾಡುವುದಾಗಿ ದಿವಾನರು ತಮ್ಮ ಪ್ರಜಾಪ್ರತಿನಿಧಿ ಸಭೆಯ ಆಯವ್ಯಯ ಅಧಿವೇಶನದ ಭಾಷಣದಲ್ಲಿ ಭರವಸೆ ಕೊಟ್ಟಿರುವುದನ್ನು ಗಮನದಲ್ಲಿರಿಸಿ, ೫೭,೦೦೦ ರೂ.ಗಳಿಗೆ ಒಂದು ಆಯವ್ಯಯ ಪಟ್ಟಿಯನ್ನು ಮಾಡಿ ಸರ್ಕಾರಕ್ಕೆ ಕಳಿಸಿದೆ. ಸರ್ಕಾರ ೩೨,೦೦೦ ರೂಗಳನ್ನು ಕೊಡಬೇಕೆಂದೂ, ಮಿಕ್ಕ ಹಣವನ್ನು ಸ್ಥಳೀಯ ಸಂಸ್ಥೆಗಳು ಕೊಡಬೇಕೆಂದೂ ಪ್ರಾರ್ಥಿಸಿದೆ.

ಈಗಾಗಲೆ ಮೈಸೂರು ವಿಶ್ವವಿದ್ಯಾನಿಲಯ, ಸಂಸ್ಥಾನದ ಜಿಲ್ಲಾ ಸಂಸ್ಥೆಗಳು, ಪೌರಸಭೆಗಳು ಮುಂತಾಗಿ ೨೫ ಸ್ಥಳೀಯ ಸಂಸ್ಥೆಗಳೂ ವಿದ್ಯಾಸಂಸ್ಥೆಗಳೂ ಹತ್ತು ಸಾವಿರ ರೂಪಾಯಿಗಳ ದ್ರವ್ಯ ಸಹಾಯದ ವಾಗ್ದಾನ ಮಾಡಿವೆ. ಈ ದ್ರವ್ಯಸಹಾಯಗಳೆಲ್ಲ ಸರ್ಕಾರದ ಒಪ್ಪಿಗೆಯನ್ನು ಪಡೆದಿವೆ ಅಥವಾ ಇನ್ನು ಕೆಲವು ಪಡೆಯಲಿವೆ. ಮೂರು ನಾಲ್ಕು ಖಾಸಗಿ ಸಂಸ್ಥೆಗಳೂ ಧನ ಸಹಾಯ ಮಾಡಿವೆ.

ಒಂದು ಸಂತೋಷದ ಸಂಗತಿಯೆಂದರೆ, ಮೈಸೂರಿನ ಶ್ರೀ ಕೃಷ್ಣರಾಜೇಂದ್ರ ಗಿರಣಿಯವರು ೪,೦೦೦ ರೂಗಳ ವೆಚ್ಚದಲ್ಲಿ ಅಕ್ಷರ ಪ್ರಚಾರ ತರಗತಿಗಳಿಗಾಗಿ ಒಂದು ಕಟ್ಟಡವನ್ನು ಕಟ್ಟಿಸಿಕೊಡಲು ವಾಗ್ದಾನ ಮಾಡಿದ್ದಾರೆ.

## ತಿದ್ದಿದ ಕನ್ನಡ ಲಿಪಿ

ಈಗಿರುವ ಮೊಳೆಗಳನ್ನೇ ಬಳಸಿಕೊಂಡು "ಕನ್ನಡ ಬಾವುಟ"ದಲ್ಲಿ ಪ್ರಯತ್ನಿಸಿರುವಂತೆ "ನುಡಿ"ಯಲ್ಲಿ ವಾರವಾರವೂ ಸಣ್ಣಸಣ್ಣ ಕವಿತೆ ಕತೆ ಲೇಖನಗಳನ್ನು ತಿದ್ದಿದ ಲಿಪಿಯಲ್ಲಿ ಪ್ರಕಟಿಸಲಾಗುವುದು. ಅಭ್ಯಾಸವಾಗುವ ವರೆಗೆ ಇದು ವಿಕಾರವಾಗಿ ಕಾಣಬಹುದು; ಆದರೆ ತಿದ್ದುಪಾಡು ಆವಶ್ಯಕವೆಂದು ಒಪ್ಪಲಾಗಿದೆ. ನಾಡಿನ ಇತರ ಸಹೋದ್ಯೋಗಿಗಳೂ ತಮ್ಮ ತಮ್ಮ ಪತ್ರಿಕೆಗಳಲ್ಲಿ ಸ್ವಲ್ಪ ಸ್ಥಳವನ್ನು ಮೀಸಲಾಗಿಟ್ಟು ಈ ಪ್ರಯೋಗವನ್ನು ನಡಸಿ ಸಹಕಾರ ನೀಡುವರೆಂದು ನಂಬುತ್ತೇವೆ.—ಸಂ.

**ಸುಳಿವು:**

೧) ದೀರ್ಘ ಸ್ವರಕ್ಕೆ—ೕ; ಆ – **ಅೕ**, ರಾ – **ರೕ**, ನೂ – **ನುೕ.**

೨) ಮಹಾಪ್ರಾಣಕ್ಕೆ—ಹೊಕ್ಕುಳು ಸೀಳುವುದು; ಥ – **ತ಼**, ಭ – **ಬ಼.**

೩) ಸಂಯುಕ್ತ ವ್ಯಂಜನಗಳನ್ನು ಉಚ್ಚಾರಣೆಯ ಕ್ರಮದಲ್ಲಿ ಬಿಡಿಸುವುದು; ಶ್ರೀ – **ಶ್‌ರೀ**, ಭಾಗ್ಯ – **ಬ಼ೕಗ್‌ಯ**, ಲಕ್ಷ್ಮಿ – **ಲಕ್‌ಷ್‌ಮಿ.**

ಶ್‌ರೀವನಿತೆಯರಸನೆ ವಿಮಲ ರೕ
ಜೀವಪೀಟ಼ನ ಪಿತನೆ ಜಗಕತಿ
ಪೕವನನೆ ಸನಕೕದಿ ಸಜ್‌ಜನನಿಕರ ದೕತೕರ
ರೕವಣೕಸುರಮತ಼ನ ಶ್‌ರವಣಸು
ಧೕ ವಿನುತನ ಕತ಼ನಕೕರಣ
ಕೕವುದೕನತ ಜನವ ಗದುಗಿನ ವೀರನೕರಯಣ

ಶ್‌ರೀವಧುವಿನಂಬಕಚಕೋರಕಂ ಪೊರೆಯೆ ಭ
ಕ್‌ತೕವಳಿಯ ಹೃತ್‌ಕುಮುದಕೋರಕಂ ಬಿರಿಯೆ ಜಗ
ತೀವಲಯದಮಲ ಸೌಬ಼ೕಗ್‌ಯ ರತ್‌ನೕಕರಂ ಪೆರ್‌ಚಿನಿಂ
ಮೇರೆವರಿಯೆ
ಅೕವಗಂ ಸರಸ ಕರುಣೕಮೃತದ ಕಳಿಗಳಿಂ
ತೀವಿದೆಳನಗೆಯ ಬೆಳ್‌ದಿಂಗಳಂ ಪಸರಿಸುವ
ದೇವಪುರ ಲಕ್‌ಷ್‌ಮೀರಮಣನೕಸ್‌ಯಚಂದ್‌ರನೕನಂದಮಂ
ನಮಗೀಯಲಿ

## ಪರಿಷತ್ತಿನ ಸುದ್ದಿ

### ೨೭ನೆಯ ಕನ್ನಡ ಸಾಹಿತ್ಯ ಸಮ್ಮೇಳನ

ಈ ಸಲದ ಸಮ್ಮೇಳನ ಶಿವಮೊಗ್ಗ ನಗರದಲ್ಲಿ ನಡೆಯಬೇಕಾಗಿದ್ದು ಈ ಬಗ್ಗೆ ಅಲ್ಲಿನ ಸ್ವಾಗತ ಸಮಿತಿಯವರು ತಾ|| ೧೧-೧೦-೪೨ರಲ್ಲಿ ಸಭೆ ಸೇರಿ ಸಮ್ಮೇಳನ ನಡಸುವುದನ್ನು ಮುಂದುವರಿಸಿ ಮಾಡಿರುವ ನಿರ್ಣಯವನ್ನು ಸದಸ್ಯರ ಮತ್ತು ಕನ್ನಡ ಮಹಾಜನರ ಅವಗಾಹನೆಯ ಬಗ್ಗೆ ಈ ಕೆಳಗೆ ಕೊಟ್ಟಿದೆ.

"ಕನ್ನಡ ಸಾಹಿತ್ಯ ಸಮ್ಮೇಳನವನ್ನು ಇದೇ ಡಿಸೆಂಬರ್ ತಿಂಗಳಿನಲ್ಲಿ ನಡಸುವ ವಿಷಯದಲ್ಲಿ ಈ ದಿವಸ ಪುನರ್ವಿಮರ್ಶೆ ಮಾಡಲಾಗಿ ಪಟ್ಟಣದ ಆರೋಗ್ಯ ತಕ್ಕಮಟ್ಟಿಗೆ ಸಮರ್ಪಕವಾಗಿ ಇದ್ದರೂ ದೇಶದ ಪರಿಸ್ಥಿತಿ ಉತ್ತಮಗೊಂಡಂತೆ ಕಂಡು ಬರುವುದಿಲ್ಲವಾದ್ದರಿಂದಲೂ ಮತ್ತು ಇನ್ನೂ ಕೆಲವು ಸ್ಥಳೀಯ ತೊಂದರೆಗಳಿರುವುದರಿಂದಲೂ ಸಾಹಿತ್ಯ ಸಮ್ಮೇಳನವನ್ನು ಇದೇ ಬರುವ ಡಿಸೆಂಬರ್ ತಿಂಗಳಿನಲ್ಲಿ ನಡಸಲು ಅನುಕೂಲವಿಲ್ಲವೆಂದು ಈ ಸಭೆ ಸಂಕೋಚದಿಂದ ತೀರ್ಮಾನಿಸುತ್ತದೆ. ಮತ್ತು ಸಾಹಿತ್ಯ ಸಮ್ಮೇಳನವನ್ನು ಅನಿಶ್ಚಿತ ಕಾಲದವರೆಗೆ ಮುಂದುವರಿಸಬೇಕೆಂದು ಅಭಿಪ್ರಾಯಪಡುತ್ತದೆ."

## ಕನ್ನಡ ಸಾಹಿತ್ಯ ಪರೀಕ್ಷೆಗಳು

**ಈ ವರ್ಷ ಡಿಸೆಂಬರ್ ತಿಂಗಳಲ್ಲಿ ನಡೆಯಲಿರುವ ಜಾಣ, ಕಾವ ಪರೀಕ್ಷೆಗಳಿಗೆ ನಾಡಿನಲ್ಲಿ ಎಲ್ಲೆಲ್ಲಿ ತರಗತಿಗಳು ನಡೆಯುತ್ತಿವೆ, ಪರೀಕ್ಷೆಗೆ ಕಟ್ಟಬಹುದಾದ ವಿದ್ಯಾರ್ಥಿಗಳ ಸಂಖ್ಯೆ ಮೊದಲಾದ ವಿವರಗಳನ್ನು ಆಯಾ ಕೇಂದ್ರ ವ್ಯವಸ್ಥಾಪಕರು ಇದೇ ನೊವೆಂಬರ್ ೧ನೆಯ ತಾರೀಖಿನೊಳಗಾಗಿ ಪರಿಷತ್ತಿನ ಕಾರ್ಯದರ್ಶಿಗಳಿಗೆ ದಯಮಾಡಿ ತಿಳಿಸಬೇಕಾಗಿ ಪ್ರಾರ್ಥನೆ. ಈ ವಿವರಗಳು ಬಂದೊಡನೆ ಪರೀಕ್ಷೆಯ ಕೇಂದ್ರ, ಕಾಲ ಮೊದಲಾದುವುಗಳನ್ನು ಗೊತ್ತುಪಡಿಸಬೇಕಾಗಿದೆ.**

ಬೆಂಗಳೂರು
೨೩-೧೦-೧೯೪೨

ಕ. ವೆಂ ರಾಘವಾಚಾರ್
ಕಾರ್ಯದರ್ಶಿ

# ಕನ್ನಡ ಸುದ್ದಿ

## ನಾಡಹಬ್ಬ

**ಮಡಿಕೇರಿಯಲ್ಲಿ:** ೧೯-೧೦-೪೨ನೆಯ ಸೋಮವಾರ ಪ್ರಾಂತಸಮಿತಿಯ ಆಶ್ರಯದಲ್ಲಿ ನಾಡಹಬ್ಬ ಜರುಗಿತು. ಶ್ಲೋಕ ಸಂಗೀತ ಗಮಕ ವಿದ್ವಾನ್ ಕೆ. ಜಿ. ಸಂಪತ್ಕುಮಾರಾಚಾರ್ಯರವರು ಆಧುನಿಕ ಕವಿತೆಗಳ ವಾಚನ ಮಾಡಿದರು. ಕಲ್ಕತ್ತಾದ ಶ್ರೀ. ಅ. ನಾರಾಯಣಸ್ವಾಮಿ ಅಯ್ಯರವರು "ಕವಿ ರವೀಂದ್ರರ ಸಾಹಿತ್ಯ ಜೀವನ"ವೆಂಬ ವಿಷಯದ ಮೇಲೆ ಭಾಷಣವಿತ್ತರು.

**ಮಂಗಳೂರು:** ಕೆನರಾ ಹೈಸ್ಕೂಲಿನಲ್ಲಿ, ಫೆಡರಲ್ ಹಿಂದೂ ಸ್ಕೂಲ್ ಬೋರ್ಡ್ ಮತ್ತು ವಿವೇಕಾನಂದ ಸೊಸೈಟಿಯವರು ನವರಾತ್ರಿ ಸಮಾರಂಭವನ್ನು ೧೨-೧೦-೪೨ರಿಂದ ೧೮-೧೦-೪೨ನೆಯ ದಿನದ ವರೆಗೆ ಯಶಸ್ವಿಯಾಗಿ ನಡಸಿದರು.

ಶ್ರೀ. ಎಂ. ಎಸ್. ಏಕಾಂಬರರಾವ್, ಬಿ.ಎ., ಎಲ್.ಟಿ. ಅವರು 'ಯುವಕ ಸಂದೇಶ', ಶ್ರೀ. ಕೆ. ಕೃಷ್ಣರಾವ್, ಬಿ.ಎ. ಅವರು 'ಋಷಿ ದಯಾನಂದರ ಜೀವನ', ಶ್ರೀ. ಬಿ. ನಂಜುಂಡಸ್ವಾಮಿಯವರು 'ದಾಸರು', ಶ್ರೀಮತಿ ಆನಂದಿ ಬಾಯಿಯವರು 'ಸರಸ್ವತಿ ಪೂಜೆ ಮತ್ತು ನವರಾತ್ರಿ ಮಹೋತ್ಸವದ ಮಹತ್ವ', ಶ್ರೀ. ನಿಡ್ಲೋಡಿ ಅನಂತೋಪಾಧ್ಯಾಯರು 'ವೇದ ಮತ್ತು ದೇವರು', ಶ್ರೀ. ಟಿ. ಕೆ. ರಾಮಚಂದ್ರ ಅಯ್ಯರ್, ಬಿ.ಒ.ಎಲ್. ಅವರು 'ರಾಮಾಯಣ' ಈ ವಿಷಯಗಳನ್ನು ಕುರಿತು ಬೇರೆ ಬೇರೆ ದಿನಗಳಲ್ಲಿ ಭಾಷಣ ಮಾಡಿದರು. ಶ್ರೀ. ಆರ್. ಎಸ್. ಚಾರ್ಯರೂ ಇತರ ಉತ್ಸಾಹಿ ತರುಣರೂ ಸೇರಿ ಪ್ರಹಸನಗಳನ್ನು ಪ್ರಯೋಗಿಸಿ ಸಭಿಕರನ್ನು ಸಂತೋಷಗೊಳಿಸಿದರು.

ಎಂಟು ದಿನಗಳ ಕಾರ್ಯಕ್ರಮವಿಟ್ಟುಕೊಂಡು ನವರಾತ್ರಿ ಮಹೋತ್ಸವ ಮಂಗಳೂರಿನಲ್ಲಿ ಜರುಗಿದುದು ಇದೇ ಮೊದಲನೆಯ ಬಾರಿ ಎನ್ನಬಹುದು.

**ಉಡುಪಿ:** ೧೧-೧೦-೪೨ರಿಂದ ಪರ್ಯಾಯ ಶ್ರೀ ಕೃಷ್ಣಾಪುರ ಮಠದ ವಸಂತ ಮಹಲಿನಲ್ಲಿ ಉತ್ಸವ ವಿವಿಧ ಕಾರ್ಯಕಲಾಪಗಳಿಂದ ಜರುಗಿ ೧೯-೧೨-೪೨ನೆಯ ದಿನ ಕೊನೆಗಂಡಿತು.

**ಹುಬ್ಬಳ್ಳಿ:** ತಾ॥ ೧೧-೧೦-೪೨ನೆಯ ದಿನ ಇಲ್ಲಿಯ ಅಕ್ಕನ ಬಳಗದವರ ವತಿಯಿಂದ ಪ್ರಾರಂಭವಾಗಿದ್ದು. ಅದರ ಪ್ರಾರಂಭೋತ್ಸವವನ್ನು ಸೌ॥ ಲಕ್ಷ್ಮೀದೇವಿ ಕಬಾಡೆಯವರು ನೆರವೇರಿಸಿದರು. ಸೌ॥ ರಾಜವ್ವ ಸೆಟ್ಟರವರು ಅಧ್ಯಕ್ಷಸ್ಥಾನ ವಹಿಸಿದ್ದರು. ಈ ಸಮಾರಂಭಕ್ಕೆ ಪಾರ್ವತೀಬಾಯಿ ನಿರಡಿ ಅವರು ಅಧ್ಯಕ್ಷಿಣಿಯರು, ಸೌ॥ ಗೌರವ್ವ ಸಾದರಹಳ್ಳಿ ಅವರು ಉಪಾಧ್ಯಕ್ಷಿಣಿಯರು, ಪಾರ್ವತವ್ವ ಬಂಕಾಪುರ ಅವರು ಕಾರ್ಯದರ್ಶಿನಿಯರು ಆಗಿ ಕೆಲಸ ಮಾಡಿದರು.

**ಸುರಪುರ:** ೧೫-೧೬-೧೭ನೆಯ ದಿನಗಳಲ್ಲಿ ನಾಡಹಬ್ಬ ವಿಜೃಂಭಣೆಯಿಂದ ನಡೆಯಿತು. ಬೆಂಗಳೂರಿನಿಂದ ಗುಲ್ಬರ್ಗಕ್ಕೆ ದಯಮಾಡಿಸಿದ್ದ ಪರಿಷತ್ತಿನ ಕಾರ್ಯದರ್ಶಿಗಳಾದ ಶ್ರೀ. ಕೆ. ವಿ. ರಾಘವಾಚಾರ್ಯರು ೧೬ನೆಯ ದಿನ ರಾತ್ರಿ 'ಕನ್ನಡ ಶಾಸನಗಳು', ೧೭ನೆಯ ದಿನ ಮಧ್ಯಾಹ್ನ 'ಸಾಕ್ರಟೀಸ್', ಅದೇ ರಾತ್ರಿ 'ಯಶೋಧರ ಚರಿತ್ರೆ' ಈ ವಿಷಯಗಳನ್ನು ಕುರಿತು ಉಪನ್ಯಾಸ ಮಾಡಿದರು.

**ಚಿತ್ರದುರ್ಗ: ಕರ್ನಾಟಕ ಸಂಘ**

೨೦—೧೦—೪೨ನೆಯ ಮಂಗಳವಾರ ಸಂಜೆ ಜಿಲ್ಲಾ ಸಮಿತಿಯ ಭವನದಲ್ಲಿ ಸಂಘದ ಪರವಾಗಿ 'ಸಾಹಿತ್ಯ ಮತ್ತು ಸತ್ಯ' ಎಂಬ ವಿಷಯವಾಗಿ ಶ್ರೀ. ಸಿದ್ದವನಹಳ್ಳಿ ಕೃಷ್ಣಶರ್ಮರವರು ಭಾಷಣ ಮಾಡಿದರು. ಶ್ರೀಮತಿ ಲೀಲಾ ಕಾರಂತರವರ ಕಾವ್ಯಗಾಯನ ನಡೆಯಿತು. ಸಂಘದ ಕೈಬರಹದ ಪತ್ರಿಕೆಯ (ನಲ್ನುಡಿ) ದಸರಾ ಸಂಚಿಕೆಯನ್ನು ಕಾರ್ಯದರ್ಶಿಗಳು ಸಭೆಯಲ್ಲಿ ಪ್ರಕಟಪಡಿಸಿದರು.

## ಕೊಡಗಿನಲ್ಲಿ ಗಮಕ ಪ್ರಚಾರ

ಗಮಕವಿದ್ವಾನ್ ಶ್ರೀ. ಸಂಪತ್ಕುಮಾರಾಚಾರ್ಯರು ಮಡಿಕೇರಿ ವೇದಾಂತ ಸಂಘದ ಮಂದಿರದಲ್ಲಿ ಗಮಕ ಕಲೆಯ ಮೇಲೆ ಭಾಷಣವನ್ನೂ ಕುಮಾರವ್ಯಾಸ ಜೈಮಿನಿ ಭಾರತಗಳಿಂದ ವಾಚನವನ್ನೂ ಇದೇ ತಿಂಗಳು ೧೫, ೧೬ನೆಯ ತಾರೀಖು ಗಳಲ್ಲಿ ಮಾಡಿದರು. ವೀರರಾಜಪೇಟೆಯಲ್ಲಿ ಶ್ರೀ. ಬಿ. ಎಸ್. ವಿ. ಕೆ. ವಿಠ್ಠಲ್ ಅವರ ಮನೆಯಲ್ಲೂ, ಕಾವೇರಿ ಆಶ್ರಮದಲ್ಲೂ ಭಾರತವಾಚನಗಳನ್ನು ನಡಸಿ ಜನರ ಆದರಕ್ಕೆ ಪಾತ್ರರಾದರು.

**ಹೈದರಾಬಾದ್: ಕನ್ನಡ ಸಾಹಿತ್ಯ ಪರೀಕ್ಷೆಗಳು**

ನೈಜಾಂ ಕರ್ನಾಟಕ ವಿದ್ಯಾರ್ಥಿ ಸಂಘದ ಆಶ್ರಯದಲ್ಲಿ ಇದೇ ಅಕ್ಟೋಬರ್ ೧ರಿಂದ ಕನ್ನಡ ಸಾಹಿತ್ಯ ಪರೀಕ್ಷೆಗಳ ಕಾವ, ಜಾಣ ತರಗತಿಗಳು ಪ್ರಾರಂಭವಾಗಿವೆ. ಶ್ರೀ.ಗಳಾದ ಡಿ. ಕೆ. ಭೀಮಸೇನರಾವ್, ನರಸಿಂಗರಾವ ಮಾನ್ವಿ, ರಾಮಚಂದ್ರರಾವ ಪಟವಾರಿ, ಹನುಮಂತರಾವ ಕಮತಗಿ, ಪಾಂಡುರಂಗಾಚಾರ್ಯ ವೈದ್ಯ ಇವರುಗಳು ಶಿಕ್ಷಕರಾಗಿದ್ದು ಸಹಾಯ ಮಾಡುತ್ತಿರುತ್ತಾರೆ.

## ಸಾದರ ಸ್ವೀಕಾರ

**ವಾಯುಗುಣ:** ಬರೆದವರು: ಶ್ರೀ. ಕೆ. ಶೇಷಾದ್ರಿ ಅಯ್ಯಂಗಾರ್. ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರಪುಸ್ತಕ ಮಾಲೆ.

ಈ ಸಣ್ಣ ಪುಸ್ತಕ ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರ ಪುಸ್ತಕ ಮಾಲೆಯಲ್ಲಿ ಒಂದಾಗಿದೆ. ಜನರ ಆಹಾರ ವಿಹಾರಗಳನ್ನೂ ಮತ್ತು ಪ್ರಗತಿಯನ್ನೂ ನಿರ್ಧರಿಸುವುದರಲ್ಲಿ ವಾಯುಗಣ ಒಂದು ಮುಖ್ಯ ಕಾರಣವೆಂಬುದು ಎಲ್ಲರಿಗೂ ತಿಳಿದ ವಿಷಯವಾಗಿದೆ. ವಾಯುಗುಣದಲ್ಲುಂಟಾಗುವ ಬದಲಾವಣೆಗಳು ಅನೇಕ ವೇಳೆ ಜನಾಂಗಗಳ ಚರಿತ್ರೆಯನ್ನೇ ಬದಲಾಯಿಸಿವೆ. ೧೬ನೆಯ ಶತಮಾನದಲ್ಲಿ ಸ್ಪೈಯಿನ್ ದೇಶದ ಪ್ರಬಲವಾದ ನೌಕೆಯನ್ನು ನಾಶಪಡಿಸಿ ಇಂಗ್ಲೀಷರಿಗೆ ಜಯವನ್ನು ಕೊಟ್ಟದ್ದು ಪ್ರಚಂಡ ಮಾರುತವೇ. ನೆಪೋಲಿಯನ್ನಿನ ರಾಜ್ಯದಾಹವನ್ನು ಹಿಂಗಿಸಿದುದು ರಷ್ಯಾದೇಶದ ಹಿಮಕಾಲದ ಚಳಿಯೇ. ಈ ಪುಸ್ತಕದಲ್ಲಿ ವಾಯುಗುಣವನ್ನು ನಿರ್ಧರಿಸಲು ಉಪಯೋಗಿಸುವ ಯಂತ್ರಗಳು, ವಾಯುಗುಣದ ಭವಿಷ್ಯವನ್ನು ತಿಳಿಸಲು ಇದಕ್ಕೆ ಸಂಬಂಧಪಟ್ಟ ಇಲಾಖೆಯವರು ಮಾಡುತ್ತಿರುವ ಪ್ರಯತ್ನಗಳು ಮೊದಲಾದ ವಿಷಯಗಳು ಸಂಕ್ಷೇಪವಾಗಿ ಸೂಚಿಸಲ್ಪಟ್ಟಿವೆ. ಮೈಸೂರು ದೇಶದ ವಾಯುಗುಣದ ಕೆಲವು ಅಂಶಗಳನ್ನೂ ತಿಳಿಸಿದೆ.

—ಸಿ. ಶೇಷಾಚಾರ್.

**ತೆಲುಗು ಚಾಟು ಪದ್ಯಗಳು:** ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರ ಪುಸ್ತಕಮಾಲೆ ೪೩. ಬರೆದವರು: ಶ್ರೀ. ಕೆ. ವೆಂಕಟರಾಮಪ್ಪನವರು, ಎಂ.ಎ. ಫೂಲ್‌ಸ್ಕೇಪ್ ಅಷ್ಟಪತ್ರ ೫೨ ಪುಟಗಳು. ಬೆಲೆ ಸಾದ ಪ್ರತಿ ೩ ಆಣೆ. ಉತ್ತಮ ಪ್ರತಿ ೪ ಆಣೆ.



೬೨೫—೧೯೪೨ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

## ವಿಮರ್ಶೆ

### ಪ್ರಾರ್ಥನೆ ಮತ್ತು ಗಾಂಧೀಜಿ

**೧. ಕಸ್ತೂರೀ ತಿಲಕಂ, ೨. ಮಾಕ್ಲೈಬ್ಯಂ, ೩. ಶ್ರೀ ಭಗವಾನುವಾಚ.** 'ರತ್ನನ ಶಿಶು ಸಾಹಿತ್ಯ ಮಾಲೆ'ಯಲ್ಲಿ ೩, ೪, ೫ನೆಯ ಹೂಗಳು. ಶಾಕ್ಯಸಾಹಿತ್ಯ ಮಂಟಪದಲ್ಲಿ ಪ್ರಕಟವಾದುವು. ಬೆಲೆ 'ಮಾಕ್ಲೈಬ್ಯಂ' ಮೂರಾಣೆ; ಉಳಿದೆರಡೂ ಎರಡೆರಡಾಣೆ.

ಜಗತ್ತಿನ ಪ್ರತಿಯೊಂದು ಧರ್ಮವೂ ಭಗವಂತನ ಸರ್ವಶಕ್ತತೆಯನ್ನೂ ಭಕ್ತರಲ್ಲಿ ಆತನಿಗಿರುವ ಅಪಾರ ಕಾರುಣ್ಯವನ್ನೂ ಸಾರಿ, ಆ ಧರ್ಮವನ್ನು ಅನುಸರಿಸುವ ಪ್ರತಿಯೊಬ್ಬ ಮಾನವನನ್ನೂ ಆ ಭಗವಂತನಲ್ಲಿ ಅನನ್ಯಭಕ್ತಿಯಿಂದ ಶರಣುಹೊಂದುವಂತೆ ಮಾಡಿ ಆ ಮನುಷ್ಯನ ಪರಮಹಿತವಾದ ಮೋಕ್ಷ ಅಥವಾ ಶಾಂತಿಯನ್ನು ದೊರಕಿಸಿ ಕೊಡುವುದೇ ಮುಖ್ಯವಾದ ಕರ್ತವ್ಯವನ್ನಾಗಿ ಮಾಡಿಕೊಂಡಿದೆ. ಎಲ್ಲ ಪ್ರಯತ್ನಗಳೂ ವಿಫಲವಾದಾಗ, ಮನುಷ್ಯನು ತನಗಿಂತ ಪ್ರಜ್ಞೆ, ಶಕ್ತಿಗಳಲ್ಲಿ ಮೀರಿದ ತತ್ವವೊಂದನ್ನು ಶರಣುಹೊಂದಿ ಮನಸ್ಸಿಗೆ ಕೊಂಚವಾದರೂ ಶಾಂತಿಸಮಾಧಾನಗಳನ್ನು ತಂದುಕೊಳ್ಳುವುದು ಸಹಜ. ಆದುದರಿಂದಲೇ ಎಲ್ಲ ಧರ್ಮಗಳಲ್ಲಿಯೂ ಪ್ರಾರ್ಥನೆಗೆ–ಏನಾದರೊಂದು ಬೇಕಾದುದನ್ನು ಬೇಡುವುದೋ, ಇರುವ ಸೌಕರ್ಯಕ್ಕಾಗಿ ಕೃತಜ್ಞತೆಯನ್ನು ವ್ಯಕ್ತಪಡಿಸುವುದೋ – ಒಂದು ಪ್ರಾಶಸ್ತ್ಯ ಪ್ರಾಮುಖ್ಯತೆಗಳು ದೊರೆತಿವೆ. ಭಗವಂತನ ನಾಮಸ್ಮರಣೆಯಿಂದ ಮಾತ್ರವೇ ಸರ್ವಕಾರ್ಯಗಳಲ್ಲಿಯೂ ಜಯವನ್ನೂ ಮನಸ್ಸಿಗೆ ಶಾಶ್ವತವಾದ ಶಾಂತಿಯನ್ನೂ ಗಳಿಸಿಕೊಂಡ ಭಕ್ತರ ಕಥೆಗಳು ಭರತ ಖಂಡದಲ್ಲಲ್ಲದೆ ಪ್ರಪಂಚದಲ್ಲಿ ಎಲ್ಲ ಕಡೆಯೂ ಪ್ರಚಲಿತವಾಗಿವೆ. ಭಗವಂತನ ಅಸ್ತಿತ್ವ, ಮಹತ್ವ, ಸರ್ವಶಕ್ತತ್ವ, ಕಾರುಣಿಕತ್ವಗಳನ್ನು ಒಪ್ಪಿಕೊಂಡೊಡನೆಯೇ ಪ್ರಾರ್ಥನೆಯ ಅಗತ್ಯ ಸಿದ್ಧವಾಗುವುದು. ಪ್ರಾರ್ಥನೆಯ ಶಕ್ತಿಯೂ ಸಹ ಭಗವಂತನಲ್ಲಿ ಮನುಷ್ಯನಿಗಿರತಕ್ಕ ನಿಜವಾದ ಮತ್ತು ದೃಢವಾದ ವಿಶ್ವಾಸದ ಶಕ್ತಿಯಷ್ಟೇ ಇರುವುದು. ಸಾಮಾನ್ಯವಾಗಿ, ಹಿಂದೂ ಧರ್ಮದಲ್ಲಡಗಿರುವ ಎಲ್ಲ ಮತಗಳ ಜನರಿಗೂ ಭಗವಂತನಲ್ಲಿ – ಯಾವುದೇ ಒಂದು ಸ್ವರೂಪದಲ್ಲಿ, ರೀತಿಯಲ್ಲಿ–ಭಕ್ತಿಯುಂಟು. ಆದುದರಿಂದಲೇ, ಭಗವಂತನ ಸ್ತೋತ್ರಗಳು ವಿವಿಧವಾಗಿ ವಿಶ್ವತೋಮುಖವಾಗಿ ಬೆಳೆದಿರುವುದು ಈ ಭರತಖಂಡದಲ್ಲಿ. ವೇದಗಳ ಕಾಲದಿಂದ ಹಿಡಿದು ಇಂದಿನವರೆಗೆ ಈಕ್ಷಣದ ವರೆಗೆ ಭಗವಂತನ ಸ್ತೋತ್ರ ಒಂದೇ ಸಮನೆ ಅವಿಚ್ಛಿನ್ನವಾಗಿ ನಡೆದಿದೆ; ಹಿಂದೂಧರ್ಮವಿರುವ ತನಕ ನಡೆದೇ ನಡೆಯುತ್ತದೆ. ಈ ತೆರನ ಭಾವ ಹಿಂದೂ ಧರ್ಮದ ವೈಶಿಷ್ಟ್ಯವೆಂದರೂ ಎನ್ನಬಹುದು.

ಪ್ರತಿಯೊಬ್ಬ ಮನುಷ್ಯನೂ ತನ್ನ ಧರ್ಮ ತನಗುಪದೇಶಿಸಿರುವಂತೆ ಭಗವಂತನನ್ನು ಸ್ತೋತ್ರಮಾಡಿ ಆತನ ಕೃಪೆಗೆ ಪಾತ್ರನಾಗಬೇಕಾದುದು ಆತನ ಮೊಟ್ಟಮೊದಲ ಕರ್ತವ್ಯ. ಸ್ತೋತ್ರಮಾಡುವುದನ್ನು ಹೇಗೆ ಬೇಕಾದರೂ ಮಾಡಬಹುದು. ಆದರೆ ಮಾಡುವ ರೀತಿಯಲ್ಲಿ ಒಂದು ಸಮಾನರೀತಿ ಏರ್ಪಟ್ಟರೆ ಸ್ತೋತ್ರದ ಅಂದ ಹೆಚ್ಚಿ, ಹಾಗೆ ಏಕರೀತಿಯಲ್ಲಿ ಸ್ತೋತ್ರಮಾಡುವವರಲ್ಲಿ ಸಂಘಟನೆ ಬೆಳೆದು ಪರಸ್ಪರರ ಏಳ್ಗೆಗೆ ಅನುಕೂಲವಾಗುತ್ತದೆ. ಮಾಡುವ ಸ್ತೋತ್ರ ಅಂದವಾಗಿ ಉದಾತ್ತವಾಗಿ ಗಂಭೀರವಾಗಿ ಇದ್ದು ಅದರ ಭಾವದಲ್ಲಿ ಮನುಷ್ಯನ ಮನಸ್ಸು ಲೀನವಾಗುವಂತಿರಬೇಕು. ಒಟ್ಟಿಗೆ ಕುಳಿತು ಪ್ರಶಾಂತವಾಗಿ 'ರಘುಪತಿ ರಾಘವ ರಾಜಾ ರಾಂ, ಪತಿತ ಪಾವನ ಸೀತಾರಾಂ' ಎಂದು ಹಲವರು ಒಕ್ಕೊರಲಿಂದೆಂಬಂತೆ ಹಾಡಿದಾಗ ರೋಮಾಂಚವೆದ್ದು ಆ ಸ್ತೋತ್ರದೊಡನೆ ದನಿಗೂಡಿಸದಿರುವವರು ವಿರಳ; ನಮಾಜಿನ ವೇಳೆಯಲ್ಲಿ ಮಶೀದಿಯಿಂದ ಕೂಗುವ 'ಮುಲ್ಲಾ'ನ ಧ್ವನಿಯಿಂದ ಭಕ್ತಿಭರಿತರಾಗದ ಜನರು ಕೆಲವರೇ; ಚರ್ಚಿನಲ್ಲಿ ಸಾಮೂಹಿಕ ಪ್ರಾರ್ಥನೆಯ ಸಮಯದಲ್ಲಿ ಎಂತಹವನ ಮನಸ್ಸೂ ಸಹ ಒಂದು ಉನ್ನತವಾದ ಮಟ್ಟಕ್ಕೆ ಏರದೇ ಇರದು. ಹೀಗೆ ಸ್ತೋತ್ರ ಮಾಡುವುದರಲ್ಲೂ ರೀತಿ ನಿಯಮಗಳನ್ನು ಅನುಸರಿಸಿದರೆ ಸ್ತೋತ್ರದ ಫಲ ಇಮ್ಮಡಿಯಾದೀತು. ಇಷ್ಟಿದ್ದರೂ ಸ್ತೋತ್ರವಾಗಲಿ ಪ್ರಾರ್ಥನೆಯಾಗಲಿ ಶುದ್ಧವಾಗಿ ವ್ಯಕ್ತಿಗೆ ಸಂಬಂಧಿಸಿದ್ದು, ಪ್ರತಿಯೊಂದು ಜೀವಿಗೂ ಪ್ರತ್ಯೇಕವಾಗಿ ಸಂಬಂಧಿಸಿದ್ದು.

ಪ್ರಾರ್ಥನೆ ಮಾಡುವುದು ಉಂಟಾದುದು ಹೇಗೆ, ಅದನ್ನು ಮಾಡುವುದು ಹೇಗೆ ಎಂಬ ಬಗ್ಗೆ ನಾಲ್ಕಾರು ಮಾತು ಹೇಳಿದ್ದಾಯ್ತು. ಪ್ರಾರ್ಥನೆ ಮಾಡುವುದು ಎಲ್ಲರ ಕರ್ತವ್ಯ ಮತ್ತು ಹಾಗೆ ಪ್ರಾರ್ಥನೆ ಮಾಡುವುದರಲ್ಲೂ ಒಂದು ರೀತಿಯುಂಟು ಎಂದು ಹೇಳಿದ ಮೇಲೆ, ಆ ನಿಯಮವನ್ನು ಕಲಿಯಬೇಕು ಮತ್ತು ಚಿಕ್ಕಂದಿನಿಂದ ಮಕ್ಕಳಿಗೆ ಕಲಿಸಬೇಕು. ದೊಡ್ಡವರು, ವಯಸ್ಸು ಬಂದವರು ಮನಸ್ಸುಮಾಡಿದರೆ ಕಲೆತಾರು; ಚಿಕ್ಕಮಕ್ಕಳಿಗೆ ಅಂದವಾದ ಸ್ತೋತ್ರಗಳನ್ನು ಕಲಿಸಿ ಕೇಳಿ ಸಂತೋಷಪಡುವುದು ಅವರ ಪಾಲಿಗೆ ಬರಬೇಕಾದ ಭಾಗ್ಯ. ಈಗ ಹತ್ತು ಹದಿನೈದು ವರ್ಷಗಳಿಂದೀಚೆಗೆ ಹುಟ್ಟಿದ ಬಾಲಕರಲ್ಲನೇಕರಿಗೆ ದೇವರ ಸ್ತೋತ್ರವೇ ಬಾರದು; ಅವರಲ್ಲಿ ಒಬ್ಬಿಬ್ಬರಿಗೆ ಬಂದರೂ ಬರುವುದು ಅರ್ಧಮರ್ಧ; ಅದರಲ್ಲಿ ನಾಲ್ಕು ಪಾದದಲ್ಲಿ ಎಂಟು ತಪ್ಪುಗಳು; ಹಾಗೆ ಕೇಳಿದರೂ ಕಿವಿಗೆ ಅಹಿತ, ಮನಸ್ಸಿಗೆ ಅಪ್ರಿಯ. ಈ ಮಾತು ಕೊಂಚ ಕಟುವಾಗಿರಬಹುದು; ಆದರೆ ಸತ್ಯ. ಆದುದರಿಂದಲೇ ನಮ್ಮ ಬಾಲಕರಿಗೆ ದೇವರ ಸ್ತೋತ್ರಗಳನ್ನು ಹೇಳಿಕೊಡಬೇಕಾದುದು ಮೊದಲು ತಂದೆತಾಯಿಯರ ತರುವಾಯ ಉಪಾಧ್ಯಾಯರ ಕರ್ತವ್ಯ. ಈ ಪುಣ್ಯವನ್ನು ಗಳಿಸಿಕೊಳ್ಳಿರೆಂದು ಪೋಷಕರಿಗೆ ಉಪಾಧ್ಯಾಯರಿಗೆ ಒತ್ತಿಹೇಳಬೇಕಾಗಿಲ್ಲವಷ್ಟೆ.

**'ಕಸ್ತೂರೀ ತಿಲಕಂ'** ಎಂಬುದು ಹಲಕೆಲವು ದೇವರ ಸ್ತೋತ್ರಗಳನ್ನೊಳಗೊಂಡ ಪುಸ್ತಕ. ಇದರಲ್ಲಿನ ಪ್ರಾರ್ಥನೆಗಳು ಯಾರು ಯಾವ ಧರ್ಮವನ್ನೇ ಅನುಸರಿಸುವವರಿರಲಿ, ಅವರು ನಿರಾಂತಕವಾಗಿ ತಮ್ಮ ದೇವರಿಗೆ ಅನ್ವಯಿಸಿ ಹೇಳಿಕೊಳ್ಳಬಹುದಾದಂತಹವು. ಈ ಪ್ರಾರ್ಥನೆಗಳನ್ನು ಒಟ್ಟುಗೂಡಿಸಿದ ಶ್ರೀ. ರಾಜರತ್ನಂ ಅವರ ಆಶಯವಾದರೂ, ಸ್ತೋತ್ರಗಳಲ್ಲಿ ಉದಾತ್ತತೆ ಮತ್ತು ಸೌಂದರ್ಯ ಇವೆರಡಿದ್ದರಾಯಿತು ಎಂಬುದೇ. ೫೪ ಸ್ತೋತ್ರಗಳನ್ನೊಳಗೊಂಡ ಈ ಪ್ರಾರ್ಥನೆಯ ಪುಸ್ತಕದಲ್ಲಿ ಆಯಾ ಶ್ಲೋಕಗಳ ಎದುರು ಭಾಷಾಂತರವೂ ಸಿಗುತ್ತದೆ. ಉಚ್ಚರಿಸುವ ಸ್ತೋತ್ರದ ಅರ್ಥವೂ ತಿಳಿದಿದ್ದರೆ, ಸ್ತೋತ್ರದ ಶಕ್ತಿ, ಸ್ತೋತ್ರಮಾಡುವವನ ಭಕ್ತಿ ಹೆಚ್ಚಾಗುವುದರಲ್ಲಿ ಸಂದೇಹವಿಲ್ಲ. ಇಲ್ಲಿರುವ ಸ್ತೋತ್ರಗಳೆಲ್ಲವೂ ಸಂಸ್ಕೃತ ಭಾಷೆಯಲ್ಲಿವೆಯೇಕೆ ಎಂಬ ಪ್ರಶ್ನೆಗೆ ಉತ್ತರವಾಗಿ ಇಷ್ಟು ಹೇಳಬಹುದು. ಉಳಿದ ಭಾಷೆಗಳಲ್ಲಿನ ಸ್ತೋತ್ರಗಳಲ್ಲಿ ಕಾಣದ ಒಂದು ಆಸೇತುಹಿಮಾಚಲಪರ್ಯಂತ ವ್ಯಾಪಕತೆ ಈ ಶ್ಲೋಕಗಳಲ್ಲಿ ಕಾಣುವುವು ಎಂಬುದೇ. 'ಶುಕ್ಲಾಂಬರಧರಂ ವಿಷ್ಣು' ಅಥವಾ 'ಅಗಜಾನನ ಪದ್ಮಾರ್ಕಂ' ಈ ಎರಡು ಶ್ಲೋಕಗಳೂ ಭರತಖಂಡದಲ್ಲಿ ಸುಪ್ರಸಿದ್ಧವಾದುವುಗಳು. ಅಲ್ಲದೆ, ಈ ಪುಸ್ತಕ ಪ್ರಕಟವಾದುದರಲ್ಲಿ ಇನ್ನೊಂದು ಉದ್ದೇಶವಿರಬಹುದು. ಸಾಮಾನ್ಯವಾಗಿ, ಹಿಂದಿನ ಎಲ್ಲರಿಗೂ ಹುಡುಗರಾಗಿದ್ದಾಗ ಪರಿಚಯವಿರುತ್ತಿದ್ದ ಅನೇಕ ಶ್ಲೋಕಗಳ ಪರಿಚಯ ಇಂದಿನ ಬಾಲಕರಿಗೆ ಇಲ್ಲದಿರುವುದರಿಂದ, ಆ ಶ್ಲೋಕಗಳೆಲ್ಲವನ್ನೂ ಒಟ್ಟಿಗೆ ಸೇರಿಸಿ ಕಾಣಿಕೆಯಾಗಿ ಕೊಟ್ಟಿದ್ದರೂ ಇರಬಹುದು. ಚಿಕ್ಕವಯಸ್ಸಿನಿಂದ ಮಕ್ಕಳಿಗೆ ಈ ಶ್ಲೋಕಗಳನ್ನು ಹೇಳಿಕೊಟ್ಟು ಬಾಯಿಪಾಠ ಮಾಡಿಸಿದರೆ, ಈಗ ಕೊಂಚ ಹೆಚ್ಚಾಗಿ ಕಾಣಬರುತ್ತಿರುವ ಅಶುದ್ಧೋಚ್ಚಾರಣೆಗಳು ಮಾಯವಾದಾವು. ಮುಖ್ಯವಾಗಿ ಸುಂದರವಾದ ಮತ್ತು ಗಂಭೀರವಾದ ಹಲವು ಪುಟ್ಟ ಸ್ತೋತ್ರಗಳನ್ನು ಸಂಕಲನ ಮಾಡಿರುವ ಶ್ರೀ. ರಾಜರತ್ನಂ ಅವರಿಗೆ ಶಿಶುಲೋಕವೂ ಪೋಷಕವೃಂದವೂ ಕೃತಜ್ಞರಾಗಿರಬೇಕು.

**'ಮಾ ಕ್ಲೈಬ್ಯಂ' ಮತ್ತು 'ಶ್ರೀ ಭಗವಾನ್ ಉವಾಚ'.** ಇವೆರಡೂ ಭಗವದ್ಗೀತೆಯಿಂದ ಕೂಡಿದ ಆಯ್ಕೆ. ಅರ್ಜುನ ಕುರುಕ್ಷೇತ್ರದಲ್ಲಿ ರಥಾರೂಢನಾಗಿ ಯುದ್ಧ ಇನ್ನು ಆರಂಭವಾಗಬೇಕು ಎನ್ನುವ ವೇಳೆಯಲ್ಲಿ ಎದುರಿಗೆ ನಿಂತ ಭೀಷ್ಮ, ದ್ರೋಣ, ಅಶ್ವತ್ಥಾಮ, ದುರ್ಯೋಧನ ಇವರೆಲ್ಲರನ್ನೂ ನೋಡಿ ಕರ್ತವ್ಯವನ್ನೂ ಧರ್ಮವನ್ನೂ ಮರೆತು ಅಧೀರನಾಗಿ ಬಿಲ್ಲನ್ನು ರಥದಲ್ಲಿರಿಸಿ ಮುಖದ ಕಳೆ

ಗುಂದಿ, ನಡುಗುತ್ತ, ತನ್ನನ್ನು ವೈರಿಗಳು ಕೊಂದರೂ ಸರಿ, ತಾನು ಯುದ್ಧಮಾಡುವುದಿಲ್ಲ ಎಂದಾಗ ಶ್ರೀ ಕೃಷ್ಣ – ಅರ್ಜುನನ ಪರಮ ಮಿತ್ರ ಮತ್ತು ಈಗ ಸಾರಥಿ– ಅರ್ಜುನನಿಗೆ ಕವಿದಿದ್ದ ಕಗ್ಗತ್ತಲೆಯನ್ನು ಜ್ಞಾನವೆಂಬ ಬೆಳಕಿನಿಂದ ಓಡಿಸಿ ಕಣ್ದೆರೆಯಿಸಿ ಆತನನ್ನು ಹೇಡಿತನ ಬಿಡುವಂತೆ ಮಾಡಿ ಕರ್ಮನಿಷ್ಠನೂ ಧರ್ಮನಿಷ್ಠನೂ ಆಗುವಂತೆ ಮಾಡಿದ ಪ್ರಸಂಗ. 'ಮಾ ಕ್ಲೈಬ್ಯಂ' ಎಂಬುದಕ್ಕೆ 'ಹೇಡಿತನ ಬೇಡ– ನಪುಂಸಕತೆ ಬೇಡ' ಎಂದರ್ಥ. "ಗಂಡುಗಲಿಯಾಗಿ ಯುದ್ಧ ಮಾಡಿ ನಿನ್ನ ಕ್ಷತ್ರಿಯ ಧರ್ಮವನ್ನು ಪಾಲಿಸು. ಕೊಲ್ಲುವುದೂ ಕೊಲ್ಲಲ್ಪಡುವುದೂ ಶಾಶ್ವತವಾದ ಆತ್ಮಕ್ಕೆ ತಾಗದವು. ಕರ್ಮಮಾಡ ಬೇಕಾದುದು ಎಲ್ಲರೂ; ಆದರೆ ಕರ್ಮದ ಫಲದಲ್ಲಿನ ಆಸಕ್ತಿಯನ್ನು ಬಿಟ್ಟು ಕರ್ಮಮಾಡಬೇಕು; ಕರ್ಮದಿಂದಲೇ – ಫಲಾಪೇಕ್ಷಾರಹಿತ ವಾದ ಕರ್ಮಸಾಧನೆಯಿಂದಲೇ – ಧರ್ಮವನ್ನನುಸರಿಸಿದಂತಾಗುವುದು. ತನ್ನ ಧರ್ಮವನ್ನು ಪಾಲಿಸುವುದರಿಂದಲೇ ಮನುಷ್ಯನಿಗೆ ಶ್ರೇಯಸ್ಸು" ಎಂದು ಮುಂತಾಗಿ ತಿಳಿಸಿ ಶ್ರೀ ಕೃಷ್ಣ ಅರ್ಜುನನ ಮೋಹವನ್ನು ಕಳೆದು ಆತನನ್ನು ಯುದ್ಧೋದ್ಯತನನ್ನಾಗಿ ಮಾಡುತ್ತಾನೆ. ಇಡಿಯ ಪುಸ್ತಕವನ್ನು ಓದಿದಲ್ಲಿ ಶ್ರೀ ಕೃಷ್ಣ ಅರ್ಜುನನ ಮಿತ್ರ ಮಾತ್ರ; ಆತ ತಾನು ಭಗವಂತನೆಂದು ಹೇಳಿಕೊಂಡ ಶ್ಲೋಕಗಳು ಇಲ್ಲಿ ಕಾಣು ವುದಿಲ್ಲ; ಹಾಗೆಯೇ ಶ್ಲೋಕಗಳ ಆಯ್ಕೆಯೂ ಮಾಡಲಾಗಿದೆ. 'ಶ್ರೀ ಭಗವಾನುವಾಚ' ಎಂಬ ಪುಸ್ತಕ 'ಮಾ ಕ್ಲೈಬ್ಯಂ' ಎಂಬುದರ ಜತೆಯಲ್ಲಿಯೇ ಇರತಕ್ಕದ್ದು. ಇದರಲ್ಲಿ ಭಗವಂತನ ಸ್ವರೂಪ, ಮಹಿಮೆ, ಈಶ್ವರತ್ವ, ಜಗತ್ತಿನ ಸೃಷ್ಟಿ ಸ್ಥಿತಿ ಲಯ ಕಾರಣನಾಗಿರುವಿಕೆ, ಭಕ್ತಲಕ್ಷಣ, ಭಕ್ತಿಲಕ್ಷಣ ಇವೇ ಮುಂತಾದುವನ್ನು ಶ್ರೀಕೃಷ್ಣನ ಮಾತಿನಲ್ಲಿಯೇ ವಿವರಿಸಿದೆ.

ಈ ಎರಡು ಪುಸ್ತಕಗಳಲ್ಲಿಯೂ ಎದುರು ಪುಟಗಳಲ್ಲಿ ಕಾಣುವ ಸರಳ ಕನ್ನಡ ಭಾಷಾಂತರವು ಅತಿ ಪ್ರಯೋಜನಕಾರಿಯಾಗಿದೆ.

ಈ ಮೇಲೆ ವಿಮರ್ಶಿಸಿರುವ ಮೂರು ಪುಸ್ತಕಗಳೂ 'ಗಾಂಧೀ ಜಯಂತಿ'ಯ ಸುಸಮಯದಲ್ಲಿ ಪ್ರಕಟವಾದುವು; ಹೀಗೆ ಪ್ರಕಟವಾದ ಸಮಯದ ಔಚಿತ್ಯವನ್ನು ಕುರಿತು ಎರಡು ಮಾತು ಹೇಳಬೇಕಾದೀತು. ಮಹಾತ್ಮ ಗಾಂಧಿಯವರು ಮಾಡಿರುವ ಕಾರ್ಯ ರಾಜಕೀಯ, ಸಾಮಾಜಿಕ, ಆರ್ಥಿಕ ಕ್ಷೇತ್ರಗಳಲ್ಲಿ ಬಹಳವಾಗಿದ್ದರೂ, ಅವರು ಭರತಖಂಡಕ್ಕೇ ಅಲ್ಲದೆ ಜಗತ್ತಿಗೇ ಧಾರ್ಮಿಕ ಕ್ಷೇತ್ರದಲ್ಲಿ ಅತಿ ದೊಡ್ಡ ಕೆಲಸಮಾಡಿ ಕೊಟ್ಟಿದ್ದಾರೆ. ಜಾನ್ ಮಿಡ್ಲ್‌ಟನ್ ಮರಿ ಎಂಬೊಬ್ಬ ಆಂಗ್ಲ ಲೇಖಕರು ಹೇಳುವಂತೆ ಗಾಂಧೀಯವರು ಪಾಶ್ಚಾತ್ಯದೇಶ ಗಳಲ್ಲಿ ವಾಸಿಸುವ ಅನೇಕ ನಿಜವಾದ ಕ್ರೈಸ್ತರ ಧರ್ಮಗುರುಗಳಾಗಿದ್ದಾರೆ. ಅಷ್ಟೇ ಅಲ್ಲದೆ, ಗಾಂಧೀಜಿಯವರೇ ಹೇಳುವಂತೆ, "ನಾನು ಹಿಂದೂ ಧರ್ಮಿ, ಹಿಂದೂ ಧರ್ಮದಲ್ಲಿ ಎಲ್ಲ ಧರ್ಮಗಳ ತತ್ವಗಳಿಗೂ ಅವಕಾಶ ವಿದೆ, ಹಾಗೂ ಅವು ಅಡಕವಾಗಿವೆ. ಸನಾತನವಾಗಿ ಸತ್ಸಂಪ್ರದಾಯ ದಲ್ಲಿ ಬೆಳೆದು ಬಂದಿರುವ ಹಿಂದೂ ಧರ್ಮದಲ್ಲಿ ಭಗವಂತನಲ್ಲಿ ಅನನ್ಯ ಭಾವದಿಂದ ಮರೆಹೋಗುವುದೇ ಅತಿಮುಖ್ಯ. ಭಗವಂತನ ಸ್ವರೂಪ ವಾದರೋ ಸತ್ಯವೇ. ಸತ್ಯವೇ ದೇವರು. ಸೇವೆಯೇ ದೇವರ ಪೂಜೆ. ಭಗವಂತನ ಪ್ರಾರ್ಥನೆಯೇ ಎಲ್ಲ ಕಷ್ಟಗಳ ಪಾಪಗಳ ನಿವಾರಕ. ಭಗವದ್ಗೀತೆಯೇ ಯಾವೊಂದು ಧರ್ಮದ ಮೂಲ ತತ್ವಗಳನ್ನೂ ವಿರೋ ಧಿಸದ ಪರಮ ಶಾಸ್ತ್ರ" ಎಂಬ ಮಾತುಗಳ ಸತ್ಯತೆ ಸುಸ್ಪಷ್ಟವಾಗಿದೆ. ಗಾಂಧೀಜೀಯವರ ಆಶ್ರಯದಲ್ಲಿ ದಿನವೂ ನಡೆಯತಕ್ಕ ಬೆಳಗಿನ ಮತ್ತು ಸಂಜೆಯ ಪ್ರಾರ್ಥನೆಗಳೇ ಈ ಮಾತಿಗೆ ಸಾಕ್ಷಿ. ಗಾಂಧೀಜಿ ಯವರಿಗೆ ಅತಿ ಪ್ರಿಯವಾದ–ಭಗವಂತನ ಪ್ರಾರ್ಥನೆ ಮತ್ತು ಭಗವದ್ಗೀತೆ – ಇವೆರಡಲ್ಲದೆ ಅವರ ಜನ್ಮದಿನವನ್ನಾಚರಿಸುವಾಗ ಯುಕ್ತವೂ·ಉಚಿತವೂ ಆದ ಕಾಣಿಕೆ ಬೇರೊಂದಿಲ್ಲ.

'ಕಸ್ತೂರೀ ತಿಲಕಂ' ಎಂಬ ಪುಸ್ತಕದ ೪ನೆಯ ಪುಟದಲ್ಲಿ ೬ನೆಯ ಶ್ಲೋಕದ ಭಾಷಾಂತರದಲ್ಲಿ ಈಗ ಇರುವ 'ಹೇ ವಿಷ್ಣುಪತ್ನಿ (ಲಕ್ಷ್ಮಿ)' ಎಂಬುದನ್ನು 'ಹೇ ವಿಷ್ಣುಪತ್ನಿ (ಭೂಮಿ)' ಎಂದು ಪಾಠಕರು ತಿದ್ದಿಕೊಂಡರೆ ಒಳ್ಳಿತು, ಸೂಕ್ತ.

ಈ ಪುಸ್ತಕಗಳನ್ನು ಕಾಣಿಕೆಯಾಗಿ ಪಡೆದ ಬಾಲಕರ ಮುಖದಲ್ಲಿ '**ಕಸ್ತೂರೀ ತಿಲಕ**' ವಿರಾಜಿಸಲಿ; '**ಮಾ ಕ್ಲೈಬ್ಯಂ**' ಎಂದು ಭೀರುತನವನ್ನು ಕಳೆದೀಡಾಡಿದ ಅವರು ಭಾರತ ವೀರರಾಗಲಿ; '**ಶ್ರೀ ಭಗವಾನುವಾಚ**'ವನ್ನೋದಿದ ಅವರಿಗೆ ಭಗವಂತನು ಎಲ್ಲ ತೆರನ ಅಭಿವೃದ್ಧಿಯನ್ನೂ ಕೊಟ್ಟು ಕಾಪಾಡಲಿ.

—ಶಿರೀಷ.

## ಕನ್ನಡ ಸಾಹಿತ್ಯ ಪರಿಷತ್ತಿನ ಮಹಿಳಾ ಶಾಖೆ

### ೧೯೪೨ರ ಮೇಲಾಟಗಳು

ಕಳೆದ ವರ್ಷ ಮಹಿಳಾ ಶಾಖೆ ಏರ್ಪಡಿಸಿದ ಮೇಲಾಟಗಳಲ್ಲಿ ಅನೇಕ ಮಹಿಳೆಯರು ಉತ್ಸಾಹದಿಂದ ಭಾಗವಹಿಸಿದ್ದ ಕಾರಣ ಮೇಲಾಟಗಳು ಯಶಸ್ವಿಯಾಗಿ ನಡೆದವು. ಮಹಿಳಾ ಶಾಖೆ ಈ ವರ್ಷವೂ ಮೇಲಾಟಗಳನ್ನು ಏರ್ಪಡಿಸಲಿದೆ. ಸೋದರಿಯರೆಲ್ಲರೂ ಇವುಗಳಲ್ಲಿ ವಿಶ್ವಾಸದಿಂದ ಭಾಗವಹಿಸಬೇಕೆಂದು ಬಿನ್ನಹ.

### ವಿವರಗಳು

೧. i) ಹೊಸ ಕನ್ನಡ ಹಾಡುಗಳು, ಶಿವಶರಣರ ವಚನಗಳು, ದಾಸರ ಪದಗಳು, ಕನ್ನಡ ಕೃತಿಗಳು – ಇವುಗಳ ಗಾಯನ;
   ii) ಸಾಮಾಜಿಕ ವಸ್ತುವುಳ್ಳ ಏಕಾಂಕ ನಾಟಕ ರಚನೆ;
   iii) ಕವನ ನಿರ್ಮಾಣ;
   iv) ಸ್ವಭಾವ ಚಿತ್ರ;
   –ಒಟ್ಟು **ನಾಲ್ಕು** ಮೇಲಾಟಗಳನ್ನು ಏರ್ಪಡಿಸಲಾಗಿದೆ.

೨. ಮೇಲಾಟಗಳಿಗೆ ಎರಡು ಆಣೆ ಪ್ರವೇಶಧನ ತೆರಬೇಕು. ಸೇರುವವರ ಸಂಖ್ಯೆ ಪ್ರತಿ ಮೇಲಾಟಕ್ಕೂ ಆರಕ್ಕೆ ಕಡಮೆ ಆದಲ್ಲಿ ಮೇಲಾಟಗಳನ್ನು ನಡಸದೆ ಇರಬಹುದು.

೩. ಪ್ರತಿ ಮೇಲಾಟದಲ್ಲಿ ಮೊದಲಸ್ಥಾನ ದೊರೆತವರಿಗೆ ತಕ್ಕ ಬಹುಮಾನ ಕೊಡಲಾಗುವುದು.

೪. i) ಕವಿತೆ ೨೦ ಸಾಲುಗಳಿಗೆ ಕಡಮೆಯಿಲ್ಲದೆ ಇರತಕ್ಕದ್ದು.
   ii) ಹೊಸಕನ್ನಡ ಹಾಡು, ವಚನಗಳು, ದಾಸರ ಪದಗಳು, ಕನ್ನಡ ಕೃತಿಗಳು ಈ ಭಾಗಗಳ ಗಾಯನದಲ್ಲಿ ಸ್ಪರ್ಧೆಗೆ ಸೇರುವ ವರು ತಮಗೆ ಉಚಿತವೆಂದು ತೋರುವ ಹಾಡುಗಳನ್ನು ಆರಿಸಿಕೊಳ್ಳಬಹುದು. ಪ್ರತಿಯೊಬ್ಬರೂ ಎರಡು ಕೃತಿ ಗಳನ್ನು– ಬೇರೆ ಬೇರೆ ತಾಳಗಳಲ್ಲಿ ಹಾಡಲು ಸಿದ್ಧರಿರ ಬೇಕು.

೫. ಕವನ, ಏಕಾಂಕ ನಾಟಕಗಳನ್ನು ಕಳಿಸುವವರು ಅವನ್ನು ಯಾರಿತರರ ಸಹಾಯವಿಲ್ಲದೆ ತಾವೇ ಬರೆದುದೆಂಬ ಅಂಶ ವನ್ನು ಸ್ಥಿರಪಡಿಸುವಂತೆ ವಚನ ಬರೆದು ಕಳಿಸಬೇಕು.

೬. ಮಹಿಳಾ ಶಾಖೆ ಗೊತ್ತುಮಾಡುವ ಪರೀಕ್ಷಕ ವರ್ಗ ಹೇಗೆ ತೀರ್ಮಾನಿಸುವುದೊ ಅದಕ್ಕೆ ಮೇಲಾಟಗಾರರೆಲ್ಲರೂ ಒಳಪಟ್ಟು ನಡೆಯಬೇಕು.

೭. i) **ನೊವೆಂಬರ್ ಕೊನೆಯ ವಾರದ ಹೊತ್ತಿಗೆ** ಈ ಮೇಲಾಟದ ಪರೀಕ್ಷೆ ನಡೆದು, ಪರಿಷತ್ತಿನ ಮಹಿಳಾ ಶಾಖೆ ಗೊತ್ತುಮಾಡುವ ದಿನ ಬಹುಮಾನ ಪಡೆದವರಿಗೆ ಪಾರಿತೋಷಿಕಗಳನ್ನು ಹಂಚುವ ಸಮಾರಂಭ ನಡೆಯು ವುದು.
   ii) ಮೇಲಾಟಗಳಿಗೆ ಸೇರಬಯಸುವವರು **ನೊವೆಂಬರ್ ೧ನೆಯ ತಾರೀಖಿನೊಳಗಾಗಿ** ಪ್ರಾರ್ಥನಾಪತ್ರಿಕೆಯನ್ನು ಪ್ರವೇಶಧನದೊಂದಿಗೆ ಪರಿಷತ್ತಿಗೆ ಕಳಿಸಬೇಕು.
   iii) ಕಳೆದ ವರ್ಷ ನಡೆದ ಮೇಲಾಟಗಳಿಗೆ ಸೇರಿ ಮೊದಲ ಬಹುಮಾನ ಪಡೆದವರಿಗೆ ಈ ಸಲದ ಮೇಲಾಟಗಳಲ್ಲಿ ಭಾಗವಹಿಸಲು ಅವಕಾಶವಿಲ್ಲ.

ಬೆಂಗಳೂರು
೨೩-೧೦-೪೨

**ಬಿ. ಎಲ್. ಸುಶೀಲಮ್ಮ**
ವ್ಯವಸ್ಥಾಪಕರು, ಮಹಿಳಾಶಾಖೆ

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧೨
ಬಿಡಿ ಪತ್ರಿಕೆ: ೬ ಕಾಸು




ಸಂಪಾದಕ:
ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೯ನೇಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈ ಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೨

ಬೆಂಗಳೂರು: ಶುಕ್ರವಾರ, ಅಕ್ಟೋಬರ್ ೩೦, ೧೯೪೨

## ತಿದ್ದಿದ ಕನ್ನಡ ಲಿಪಿ

ಈಗಿರುವ ಮೊಳೆಗಳನ್ನೇ ಬಳಸಿಕೊಂಡು "ಕನ್ನಡ ಬಾವುಟ"ದಲ್ಲಿ ಪ್ರಯತ್ನಿಸಿರುವಂತೆ "ನುಡಿ"ಯಲ್ಲಿ ವಾರವಾರವೂ ಸಣ್ಣಸಣ್ಣ ಕವಿತೆ ಕತೆ ಲೇಖನಗಳನ್ನು ತಿದ್ದಿದ ಲಿಪಿಯಲ್ಲಿ ಪ್ರಕಟಿಸಲಾಗುವುದು. ಅಭ್ಯಾಸವಾಗುವ ವರೆಗೆ ಇದು ವಿಕಾರವಾಗಿ ಕಾಣಬಹುದು; ಆದರೆ ತಿದ್ದುಪಾಡು ಆವಶ್ಯಕವೆಂದು ಒಪ್ಪಲಾಗಿದೆ. ನಾಡಿನ ಇತರ ಸಹೋದ್ಯೋಗಿಗಳೂ ತಮ್ಮ ತಮ್ಮ ಪತ್ರಿಕೆಗಳಲ್ಲಿ ಸ್ವಲ್ಪ ಸ್ಥಳವನ್ನು ಮೀಸಲಾಗಿಟ್ಟು ಈ ಪ್ರಯೋಗವನ್ನು ನಡಸಿ ಸಹಕಾರ ನೀಡುವರೆಂದು ನಂಬುತ್ತೇವೆ.—ಸಂ.

**ಸುಳಿವು:**

೧) ದೀರ್ಘ ಸ್ವರಕ್ಕೆ—ೕ; ಆ – **ಅೕ**, ನಾ – **ನೕ**, ಕೂ – **ಕುೕ**.

೨) ಮಹಾಪ್ರಾಣಕ್ಕೆ—ಹೊಕ್ಕುಳು ಸೀಳುವುದು; ಘ – **ಗ಼**, ಭ – **ಭ**.

೩) ಸಂಯುಕ್ತ ವ್ಯಂಜನಗಳನ್ನು ಉಚ್ಚಾರಣೆಯ ಕ್ರಮದಲ್ಲಿ ಬಿಡಿಸುವುದು; ಒಬ್ಬ – **ಒಬ್‌ಬ**, ಆತ್ಮ – **ಅೕತ್‌ಮ**, ಭಕ್ತ – **ಭಕ್‌ತ**, ಮರ್ತ್ಯ – **ಮರ್‌ತ್‌ಯ**.

(೨)

ದೕವನೊಬ್‌ಬ, ನೕಮ ಹಲವು. ಪರಮ ಪತಿವ್‌ರತೆಗೆ ಗಂಡನೊಬ್‌ಬ. ಮತ್‌ತೊಂದಕ್‌ಕೆರಗಿದೊಡೆ ಕಿವಿ ಮುೕಗ ಕೊಯ್‌ಯುವನು. ಹಲವು ದೈವದ ಎಂಜಲ ತಿಂಬವರ ನೕನೆಂಬೆನಯ್‌ಯ ಕುೕಡಲಸಂಗಮದೕವ!

ನಂಬಿ ಕರೆದಡೆ ಓ ಎಂಬ ಶಿವನು. ನಂಬದೆ ಕರೆದಡೆ ಓ ಎಂಬನೆ ಶಿವನು? ನಂಬಲರಿಯರು, ನಚ್‌ಚಲರಿಯರು, ಡಂಬಿನ ಭಕ್‌ತರು. ನಂಬದೆ ನಚ್‌ಚದೆ ಬರಿದೆ ಕರೆದಡೆ, ಶಂಭು ಮೌನದಲಿಪ್‌ಪ ಕುೕಡಲಸಂಗಮದೕವ.

ಹುತ್‌ತವ ಬಡಿದಡೆ, ಹೕವು ಸೕಯಬಲ್‌ಲುದೇ ಅಯ್‌ಯ? ಗ಼ೋರ ತಪವ ಮೕಡಿದಡೇನು? ಅಂತರಂಗ ಅೕತ್‌ಮಶುದ್‌ಧಿಯಿಲ್‌ಲದವರನೆಂತು ನಂಬುವನಯ್‌ಯ ಕುೕಡಲಸಂಗಮದೕವ?

ಮರ್‌ತ್‌ಯಲೋಕವೆಂಬುದು ಕರ್‌ತೕರನ ಕಮ್‌ಮಟವಯ್‌ಯ. ಇಲ್‌ಲಿ ಸಲ್‌ಲುವರು ಅಲ್‌ಲಿಯುೕ ಸಲ್‌ಲುವರಯ್‌ಯ. ಇಲ್‌ಲಿ ಸಲ್‌ಲದವರು ಅಲ್‌ಲಿಯುೕ ಸಲ್‌ಲರಯ್‌ಯ, ಕುೕಡಲಸಂಗಮದೕವ.

ಇರಿಸಿಕೊಂಡು ಭಕ್‌ತರೕದರೆಮ್‌ಮವರು. ತರಿಸಿಕೊಂಡು ಭಕ್‌ತರೕದರೆಮ್‌ಮವರು. ಜರಿಸಿಕೊಂಡು ಭಕ್‌ತರೕದರೆಮ್‌ಮವರು. ಕೊರಸಿಕೊಂಡು ಭಕ್‌ತರೕದರೆಮ್‌ಮವರು. ಕುೕಡಲಸಂಗನ ಶರಣರಿಗೆ ಮುನಿಸ ತೕಳಿ ಎನ್‌ನ ಭಕ್‌ತಿ ಅರೆಯಾಯಿತ್‌ತು.

## ವಿದ್ಯಾಶಾಲೆಗಳಲ್ಲಿ ಇಂಗ್ಲಿಷ್ ಪದಗಳು

(ಶ್ರೀ. ಜಿ. ಎನ್. ಜೋಶಿಯವರು, ಆರ್ಯವಿದ್ಯಾಶಾಲೆ, ಬೆಂಗಳೂರು)

ವಿದ್ಯಾಶಾಲೆಗಳಲ್ಲಿ ಇತ್ತೀಚೆಗೆ ನಡೆಯುತ್ತಿರುವ ನಾನಾ ಚಳವಳಿಗಳಲ್ಲಿ 'ಕನ್ನಡ ಭಾಷೆಯಲ್ಲಿ ಪಾಠಗಳನ್ನು ಬೋಧಿಸತಕ್ಕದ್ದು,' ಎಂಬುದೂ ಒಂದಾಗಿದೆ. ಅದರಲ್ಲಿಯೂ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳಲ್ಲಿ ಇದು ಅತ್ಯಂತ ಅಗತ್ಯವಾದುದೆಂದು ಕನ್ನಡದ ಎಲ್ಲಾ ಅಭಿಮಾನಿಗಳೂ ಅಭಿಪ್ರಾಯಪಟ್ಟಿರುತ್ತಾರೆ. ಇದನ್ನು ಕಾರ್ಯತಃ ನಡಸಲು ಈಗಾಗಲೇ ಬೇಕಾದಷ್ಟು ಪ್ರಚಾರ ಕಾರ್ಯ ನಡೆದಿದೆ. ಇಷ್ಟಾದರೂ, ಈ ಕೆಲಸ ಸಂಪೂರ್ಣವಾಗಿ ತೃಪ್ತಿಕರವಾಗಿ ನಡೆದಿಲ್ಲವೆಂಬ ವಿಚಾರ ಮನಸ್ಸಿಗೆ ತುಸು ವ್ಯಾಕುಲವನ್ನುಂಟುಮಾಡದೆ ಇರದು. ಈ ಉದ್ಯಮದ ಸಾಧಕ ಬಾಧಕಗಳನ್ನು ಕುರಿತು ಚರ್ಚೆ ಮಾಡುವುದು ನನ್ನ ಈ ಪತ್ರದ ಉದ್ದೇಶವಲ್ಲ.

ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳಲ್ಲಿ ಬೋಧಕರು ಪಾಠ ಪುಸ್ತಕಗಳ ವಿಷಯಗಳನ್ನು ಬೋಧಿಸುವ ಸಮಯಗಳಲ್ಲಿ ಎಷ್ಟರ ಮಟ್ಟಿಗೆ ಶುದ್ಧವಾದ ಕನ್ನಡ ಭಾಷೆಯನ್ನೇ ಆಡುತ್ತಾರೆ ಎಂಬ ವಿಚಾರವನ್ನು ಈಗ ಸ್ಪಷ್ಟವಾಗಿಯೂ ನಿರ್ದಿಷ್ಟವಾಗಿಯೂ ತಿಳಿಯಬೇಕಾಗಿದೆ. ಸಾಮಾನ್ಯವಾಗಿ ಈ ಶಾಲೆಗಳಲ್ಲಿ ಭಾಷೆ, ಗಣಿತ, ಚರಿತ್ರೆ, ಭೂಗೋಳ ಮತ್ತು ಆರೋಗ್ಯ ಇತ್ಯಾದಿ ಪಾಠಗಳು ಕನ್ನಡದಲ್ಲಿಯೇ ನಡೆಯಬೇಕೆಂಬ ನಿಯಮವಿದೆ. ಆದರೆ ಈ ನಿಯಮ ಪರಿಪಾಲನೆ ಸರಿಯಾಗಿ ನಡೆಯುತ್ತಿದೆಯೇ ಎಂಬುದು ಈಗಿನ ಪ್ರಶ್ನೆ. ಪಾಠ ನಡೆಯುವ ವೇಳೆಯಲ್ಲಿ ಉಪಾಧ್ಯಾಯರಾಗಲಿ ವಿದ್ಯಾರ್ಥಿಗಳಾಗಲಿ ಶೇಕಡ ಎಷ್ಟು ಕನ್ನಡ ಪದಗಳನ್ನು ಉಪಯೋಗಿಸುವರು, ಎಷ್ಟು ಇಂಗ್ಲಿಷ್ ಪದಗಳನ್ನು ಉಪಯೋಗಿಸುವರು ಎಂಬುದನ್ನು ಕುರಿತು ವಿಚಾರಮಾಡಬೇಕಾಗಿದೆ. ಪ್ರಾಥಮಿಕ ಶಾಲೆಗಳಲ್ಲಂತು ಇಂಗ್ಲಿಷ್ ಪದ ಪ್ರಯೋಗಕ್ಕೆ ಅವಕಾಶವೇ ಇರುವುದಿಲ್ಲವೆಂದು ನನ್ನ ನಂಬಿಕೆ. ಇಷ್ಟೇ ಅಲ್ಲದೆ, ಇನ್ನಿತರ ವಿಚಾರಗಳನ್ನು ಕುರಿತು ಸಂಭಾಷಣೆ ನಡಸುವಾಗ ಕನ್ನಡ ಪದಗಳ ಬಳಕೆಗೆ ಎಷ್ಟರಮಟ್ಟಿನ ಪ್ರಾಶಸ್ತ್ಯವಿದೆ ಎಂಬ ವಿಚಾರವನ್ನೂ ತಿಳಿಯಬೇಕಾಗಿದೆ. ಈ ವಿಷಯವನ್ನು ಪರಿಶೀಲಿಸಿ ನೋಡಿದರೆ ಪರಿಣಾಮ ಬಹಳ ಖೇದಕರವಾಗಿದೆ ಎಂಬುದು ಗೋಚರವಾಗುವುದು.

ಪ್ರಾಥಮಿಕ ೧ನೆಯ ತರಗತಿಯ ಕಂದನಿಂದ ಆರಂಭವಾಗಿ ಪ್ರತಿಯೊಬ್ಬ ವಿದ್ಯಾರ್ಥಿಯೂ ತನ್ನ ಗುರುವನ್ನು 'ಸಾರ್' ಎಂದು ಸಂಬೋಧಿಸಿ ಮಾತನಾಡಬೇಕಾಗಿದೆ. ಪ್ರತಿ ಮಾತಿನ ಕಡೆಯ ಪದವೂ ಸಾರ್ ಆಗಿಯೇ ಇರುತ್ತದೆ. ಸರ್ (Sir) ಎಂಬ ಇಂಗ್ಲಿಷ್ ಪದ ಕನ್ನಡದ ಬಳಕೆಯಲ್ಲಿ ಸಾರ್ ಆಗಿ ವಿಷದಂತೆ ವ್ಯಾಪಿಸಿ ಬಲವಾಗಿ ಬೇರೂರಿದೆ. ಈ ಪದಕ್ಕೆ ಪ್ರತಿಯಾಗಿ ಒಂದು ಕನ್ನಡ ಪದವನ್ನು ಬಳಕೆಯಲ್ಲಿ ತರಲು ಕನ್ನಡಿಗರಾದ ನಮಗೆ ಇದುವರೆಗೂ ಆಗದೇ ಹೋಯಿತೇ? ಎಂತಹ ಅಪಮಾನ! ಇಂಗ್ಲಿಷ್ ವಿದ್ಯಾಭ್ಯಾಸ ಬರುವ ಮುನ್ನ ವಿದ್ಯಾರ್ಥಿಗಳು ತಮ್ಮ ಗುರುಗಳನ್ನು ಸಾರ್ ಎಂದು ಸಂಬೋಧಿಸುತ್ತಿದ್ದರೇ? ಮೊದಲು ಈ ಸಾರ್ ಪದ ಸಂಪೂರ್ಣವಾಗಿ ಮರೆಯಾಗಿ ಅದರ ಸ್ಥಾನದಲ್ಲಿ ಸುಲಭವಾಗಿಯೂ,

(೧೦ನೆಯ ಪುಟಕ್ಕೆ)

# ಕನ್ನಡ ನುಡಿ

**ಶುಕ್ರವಾರ, ಅಕ್ಟೋಬರ್ ೩೦, ೧೯೪೨**

## ಕನ್ನಡದಲ್ಲಿ ಹೊರಗಿನ ಮಾತುಗಳು

ಕನ್ನಡ ನುಡಿ ಈ ಕಾಲಕ್ಕೆ ತಕ್ಕಂತೆ ಬೆಳೆಯುತ್ತಿರುವ ಪ್ರಸಂಗದಲ್ಲಿ ತನ್ನ ಸ್ವಂತ ಶಬ್ದಗಳನ್ನು ಎಷ್ಟರಮಟ್ಟಿಗೆ ಉಳಿಸಿಕೊಳ್ಳಬೇಕು, ಅವುಗಳ ಆಧಾರದ ಮೇಲೆಯೆ ಹೊಸ ಶಬ್ದಗಳನ್ನು ಸೃಷ್ಟಿಸಿ ಬೆಳಸಿಕೊಳ್ಳಬೇಕು, ಮತ್ತು ಪರಭಾಷೆಗಳಿಂದ ಶಬ್ದಗಳನ್ನು ಎಷ್ಟರಮಟ್ಟಿಗೆ ಎರವಲಾಗಿ ತೆಗೆದು ಬೆರಸಿಕೊಳ್ಳಬೇಕು ಎಂಬ ವಿಚಾರ ಬರೆಯುವರಲ್ಲಿ ಮತ್ತು ಓದುವರಲ್ಲಿ ಚರ್ಚೆಯಾಗುತ್ತಲೆ ಇದೆ. ಪ್ರಪಂಚದ ಎಲ್ಲಾ ಪ್ರಸಿದ್ಧ ಭಾಷೆಗಳೂ ಪರಭಾಷೆಯಿಂದ ಮಿಶ್ರವಾಗಿವೆಯೆ ಹೊರತು ಸ್ವಚ್ಛವಾಗಿಲ್ಲ. ಇಂಗ್ಲಿಷ್ ಭಾಷೆ ಬಲುಮಟ್ಟಿಗೆ ಎಲ್ಲಾ ಭಾಷೆಗಳ ಶಬ್ದಗಳನ್ನೂ ಸೇರಿಸಿಕೊಂಡಿದೆ, ಇನ್ನೂ ಸೇರಿಸಿಕೊಳ್ಳುತ್ತಿದೆ. ಅದರ ನಿಘಂಟು ದಿನ ದಿನಕ್ಕೆ ಬೆಳೆಯುತ್ತಲೆ ಇದೆ. ಬಹು ಪರಿಶುದ್ಧವಾದ, ಮಿಶ್ರವೇ ಇಲ್ಲದ, ಭಾಷೆ ಎಂದು ಕೀರ್ತಿಪಡೆದಿರುವ ನಮ್ಮ ಸಂಸ್ಕೃತ ಕೂಡ ಕಾಲಕಾಲಕ್ಕೆ ತನ್ನ ಪರಿಸ್ಥಿತಿಯನ್ನು ಮಾರ್ಪಡಿಸಿಕೊಂಡು ಹಳೆಯ ಮಾತುಗಳನ್ನು ಬಿಡುತ್ತಲೂ ಹೊಸ ಮಾತುಗಳನ್ನು ಕಟ್ಟುತ್ತಲೂ ತನ್ನ ಸಂಪರ್ಕಕ್ಕೆ ಬಂದ ಪಾರ್ಸಿ, ಗ್ರೀಕ್, ದ್ರಾವಿಡ ಮುಂತಾದ ಭಾಷೆಗಳಿಂದ ಶಬ್ದಗಳನ್ನು ತತ್ಸಮ ರೂಪದಲ್ಲಿಯೊ ತದ್ಭವ ರೂಪದಲ್ಲಿಯೊ ಸೇರಿಸಿಕೊಂಡೇ ಇದೆ. ಚೆನ್ನಾಗಿ ವಿಚಾರ ಮಾಡಿದವರಿಗೆಲ್ಲಾ ಇದು ಸ್ಪಷ್ಟವಾಗುತ್ತದೆ.

ಹೀಗೆ, ಬದುಕಿದ್ದು ಬೆಳೆಯತಕ್ಕ ಭಾಷೆ, ಬೆಳೆದು ಬದುಕಬೇಕೆಂಬ ಭಾಷೆ, ಸಂಪರ್ಕ ಬೆಳೆದಂತೆ ಹೊಸ ಭಾವಗಳಿಗೆ, ರೀತಿಗಳಿಗೆ, ಉದ್ಯೋಗಗಳಿಗೆ, ಅನುಭವಗಳಿಗೆ ಬೇಕಾದ ಮಾತುಗಳನ್ನು ಹೊರಗಿನಿಂದ ತೆಗೆದುಕೊಳ್ಳಬೇಕು. ಸ್ವಾಭಾವಿಕವಾಗಿ ಜನರು ಮಾಡುವುದೂ ಇದೇ. ಆದರೆ ಹಳೆಯ ನುಡಿಗಳೆಲ್ಲಾ ಬಿಟ್ಟು ಹೋಗುತ್ತ, ಹೊಸ ನುಡಿಗಳು ಒಳಕ್ಕೆ ಹೆಚ್ಚಾಗಿ ದುಮುಕುತ್ತ ಬಂದಲ್ಲಿ ಭಾಷೆಯ ಸ್ವರೂಪವೆ ಬದಲಾಯಿಸಿಹೋಗಬಹುದು. ದೊಡ್ಡ ಭಾಷೆಯ ಹೊಟ್ಟೆಯಲ್ಲಿ ಸಣ್ಣ ಭಾಷೆ ಹೊಕ್ಕು ಜೀರ್ಣವಾಗಬಹುದು. ಮಾತುಗಳ ಪರಿಚಯ ತಪ್ಪಿ ಹಿಂದಿನ ಸಾಹಿತ್ಯ ಮುಂದಿನ ಪೀಳಿಗೆಗೆ ಅರ್ಥವಾಗದೆಯೆ ಹೋಗಬಹುದು. ವ್ಯಾಖ್ಯಾನವಿಲ್ಲದೆ ದಾರಿಯೇ ಕಾಣದಿರಬಹುದು. ಹಿರಿಯರಿಗೂ ಇಂದಿನವರಿಗೂ ಸಂಬಂಧವೇ ತಪ್ಪಿ ಅವರ ಬಾಳಿಕೆಯ ಗುರಿ, ಆತ್ಮತೇಜಸ್ಸು ಮುರಿದು ಹೋಗಬಹುದು. ಆದ್ದರಿಂದ ಹಿಂದಿನದಕ್ಕೂ ಇಂದಿನದಕ್ಕೂ ಸಂಬಂಧ ಸ್ಥಿರವಾಗಿರುವಂತೆ 'ಯಾವೊಂದು ಜನಾಂಗವೂ ತನ್ನ ನುಡಿಯನ್ನು ಕೂಡಿದಮಟ್ಟಿಗೆ ಶುದ್ಧವಾಗಿಯೂ ಸ್ವಚ್ಛವಾಗಿಯೂ ಇಟ್ಟುಕೊಳ್ಳಬೇಕಾದುದು ಅದರ ಕರ್ತವ್ಯ. ಕೀರ್ತಿಗಳಿಸಿ ನಿಂತಿರತಕ್ಕ ದೊಡ್ಡ ಜನಾಂಗಗಳ ಭಾಷೆಗಳ ವಿಷಯದಲ್ಲಿ ಲೇಖಕರೂ, ವಿದ್ವಾಂಸರೂ ಈ ಬಗ್ಗೆ ಬಹಳವಾಗಿ ಗಮನಕೊಟ್ಟು ಶ್ರಮಿಸುತ್ತಾರೆ. ಎಲ್ಲಿ ಹೊರಗಿನದು ಸ್ವಾಭಾವಿಕವೋ, ಅತ್ಯಗತ್ಯವೊ ಅಲ್ಲಿ ಹೊರಗಿನವಕ್ಕೆ ಬಾಗಿಲು ತೆರೆದು ಹೊಸ ಪರಿಸ್ಥಿತಿಗೆ ಭಾಷೆಯನ್ನು ಹದಗೊಳಿಸಬೇಕು. ಸಾಧ್ಯವಾದಲ್ಲಿ ಪಳಗಿದ, ಎಲ್ಲರಿಗೂ ಸುಲಭವಾಗಿ ಅರ್ಥವಾಗುವ ತಮ್ಮ ಶಬ್ದಭಂಡಾರವನ್ನೇ ಬಳಸಬೇಕು. ಇವೊತ್ತಿನ ಗ್ರಂಥದಲ್ಲಿ ಕಂಡ ಮಾತು ಸಾವಿರ ವರ್ಷದ ಹಿಂದಿನ ಗ್ರಂಥದಲ್ಲಿ ಕಂಡು ಓದುವವನಿಗೆ ತಿಳಿಯುವಂತಿರಬೇಕು. ಹೊಸ ಮಾತುಗಳನ್ನು ಕಟ್ಟುವಾಗಲೂ ಕೂಡಿದಮಟ್ಟಿಗೆ ಸ್ವಭಾಷೆಯ ಮಾತುಗಳಿಂದಲೇ ಜೋಡಿಸಬೇಕು. ಹೀಗಾದರೆ ಭಾಷೆಯ ಶಕ್ತಿಯೂ ಬೆಳೆಯುವುದು; ಸಾಧನೆ ಮಾಡಿದ ಅಂಗಗಳಂತೆ ಬಲವಾಗಿಯೂ ಪುಷ್ಟವಾಗಿಯೂ ಇರುವುದು. ಇಲ್ಲದಿದ್ದರೆ ಶಕ್ತಿ ಕುಗ್ಗಿ ಇದು ಯಾವುದಕ್ಕೂ ಬಾರದ, ಚೈತನ್ಯವಿಲ್ಲದ, ಭಾಷೆಯೆಂದು ತಿರಸ್ಕಾರಕ್ಕೆ ಗುರಿಯಾಗುವುದು.

ಭಾಷೆಯ ಬೆಳವಣಿಗೆಗೆಯ ಸಾಧಕಬಾಧಕಕ್ಕೆ ನಿದರ್ಶನವಾಗಿ ಕನ್ನಡದಲ್ಲಿ ಅರಿಸಮಾಸದ ಕಟ್ಟಳೆಯನ್ನು ವಿಮರ್ಶಿಸಬಹುದು. ಸಾಮಾನ್ಯಜನಕ್ಕೆ ತನ್ನ ಭಾಷೆಯ ಮಾತು ಯಾವುದೋ ಪರಭಾಷೆಯ ಮಾತು ಯಾವುದೋ ತಿಳಿಯುವುದಿಲ್ಲ. ಮಿಶ್ರ ಭಾಷೆಯಲ್ಲಿ ಬಳಕೆಯಾಗುತ್ತಿರುವ ಮಾತುಗಳೆಲ್ಲವೂ ತನ್ನವೆ. ಹೀಗೆ ಕನ್ನಡಸಂಸ್ಕೃತಗಳನ್ನು ಅವನು ಬೆರಸಬಹುದು. ಸಮಾಸ ಪದಗಳನ್ನು ಬೆರಸಿ ನಿರ್ಮಿಸಬಹುದು. ಹಿಂದೆ ಸಂಸ್ಕೃತ ಕನ್ನಡ ಹೀಗೆ ಬೆರೆಯಿತು. ಈಗ ಕನ್ನಡದೊಂದಿಗೆ ಸಮಾಸಗಳಲ್ಲಿ ಹಿಂದೂಸ್ತಾನಿ (ಪಾರ್ಸಿ, ಅರಬ್ಬಿ), ಇಂಗ್ಲಿಷ್ ಈ ಮಾತುಗಳೂ ಬೆರೆಯಬಹುದು. ಇದು ಸ್ವಾಭಾವಿಕವಾಗಿ ನಡೆಯುವ ಕೆಲಸ. ಬೇರೂರಿದರೆ, ರೂಢಿಯಾಗಿ ಬಂದುಬಿಟ್ಟರೆ, ಇದು 'ಪ್ರಯೋಗ'. ವೈಯಾಕರಣಿಗಳು ಈ 'ಪ್ರಯೋಗ'ಕ್ಕೆ ಶರಣರು. ಇದು ಒಂದು ದೃಷ್ಟಿ. ಇನ್ನೊಂದು ದೃಷ್ಟಿಯಿಂದ ವಿದ್ವಾಂಸರು ಯಾವುದು ಸಾಧು, ಸುಂದರ, ಅಗತ ಎಂಬುದನ್ನು ಶೋಧನೆ ಮಾಡಬೇಕಾದದ್ದೂ ಸರಿ. ಯಾವ ಬಗೆಯ ಹಟವೂ ಇಂತಹ ಬದುಕಿನ ಪ್ರಶ್ನೆಗಳನ್ನು ಬಿಡಿಸಲಾರದು. ಉದಾಹರಣೆಗಾಗಿ, ನೃಪತುಂಗನು 'ಅರಿಸಮಾಸ' ಅಂದರೆ ಸಂಸ್ಕೃತವೂ ಕನ್ನಡವೂ ಕೂಡುವುದು ಆಗದೆಂದು ಹೇಳಿ 'ಅರಸುಕುಮಾರ' ಮುಂತಾದುವನ್ನು ಕೊಟ್ಟಿದ್ದಾನೆ. ಆಗ ಇದು ಪ್ರಯೋಗದಲ್ಲಿತ್ತೆಂದು ಕಾಣುತ್ತದೆ. ಈಗಲೂ ಇದನ್ನು ಜನರು ಬಳಸುತ್ತಾರೆ. ಕೇಶಿರಾಜನೂ ಅರಿಸಮಾಸವನ್ನು ನಿಷೇಧಿಸಿ, ನೃಪತುಂಗನ ಮತವನ್ನೇ ಎತ್ತಿಹಿಡಿದು, "ಸಮಸಂಸ್ಕೃತಂಗಳಂ ಅಚ್ಚಗನ್ನಡದೊಳ್ ಬೆರಸಿ ಸಮಾಸಂ ಮಾಡಲಾಗದು" ಎಂದು ಹೇಳಿ ನೃಪತುಂಗನ ಉದಾರಣೆಗಳನ್ನೇ ಕೊಟ್ಟಿದ್ದಾನೆ:

"ಅರಸುಕುಮಾರನನಾಯತ
ತರಗಡೆಗಣ್ಣಿಂದೆ ನೋಡಿ ಕೆಳದಿಸಮೇತಂ
ಪರಿಗತನಗೆಯಿಂದಿರ್ದೆಂ
ಗುರುನಾಣ್ಭರದಿಂದಮೆಜಿಗಿ ಮುಖದಾವರೆಯುನ್ ॥
ಮುಖತಾವರೆ, ಕಣ್ಕಮಲಮೆಂಬಂತೆ."

ಇಲ್ಲಿ ಸ್ವಲ್ಪ ವಿಚಾರ ಮಾಡಿದರೆ ಆಯತತರಗಡೆಗಣ್ಣು, ಪರಿಗತನಗೆ ಎಂಬ ಸಮಾಸಗಳನ್ನು ಯಾರೂ ಒಪ್ಪಲಾರರು. ಅರಸುಕುಮಾರ, ಕೆಳದಿಸಮೇತ, ಮುಖತಾವರೆ ಇವುಗಳ ವಿಷಯದಲ್ಲಿ ಭಿನ್ನಾಭಿಪ್ರಾಯ ಬರಬಹುದು. ಸುಲಭವಾಗಿ ಅರ್ಥವಾಗುವ ಪದಗಳನ್ನು ಬಿಟ್ಟು ಅರಿಸಮಾಸ ಭೂತದ ಭೀತಿಗಾಗಿ ಅರ್ಥವಾಗದ ಸಂಸ್ಕೃತ ಶಬ್ದಗಳನ್ನು ಎರಡು ಕಡೆಯೂ ಸೇರಿಸುವುದರಿಂದ ಏನು ಪ್ರಯೋಜನ? ಮಾಣಿಕ್ಯ ಭಂಡಾರ ಎಂಬ ಕವಿ ಪ್ರಯೋಗ ತಪ್ಪು, ಮಾಣಿಕ ಭಂಡಾರ ಎನ್ನಬೇಕು, ಎರಡೂ ತದ್ಭವ ಶಬ್ದಗಳು ಸೇರಬೇಕು ಎಂದು ಇನ್ನೊಂದು ಕಡೆ ಕೇಶಿರಾಜನು ಹೇಳುತ್ತಾನೆ. ಇದು ಅನಾವಶ್ಯಕವಾದ ಅತಿಪಾಂಡಿತ್ಯವೆಂದು ತೋರುವುದಿಲ್ಲವೆ? ಪುಸ್ತಕಭಂಡಾರ ತಪ್ಪು, ಇಲ್ಲವೆ ಹೊತ್ತಗೆಬಂಡಾರ, ಇಲ್ಲವೆ ಪುಸ್ತಕಭಾಂಡಾಗಾರ ಎನ್ನಬೇಕೆ? ಲೋಕಪ್ರಯೋಗವನ್ನು ಅನುಸರಿಸಿ ಕೇಶಿರಾಜನೇ ಅರಿಸಮಾಸದ ನಿರ್ದೋಷಕ್ಕೆ ಬೀಸುವ ಚಾಮರಂ, ಆದ ವಿಷ್ಣು ಮುಂತಾದ ಪ್ರಯೋಗಗಳನ್ನು ಕೊಡುತ್ತಾನೆ ಮತ್ತು

ಪದವಿಧಿ ಕನ್ನಡಕಂ ಸ
ಕ್ಕದಕ್ಕಮಿಲ್ಲಾದ್ಯರಿಂದೆ ಸಂದುವನಜ಼ಿದಿ
ರ್ಪ್ಪುದು ಜ಼ರುಪಾವಳಿಯೊಳ್ ಪೇ
ಳ್ವುದು ಪೆಜಿವಜ಼ಿೊಳಾಗದಿದು ವಿರುದ್ಧ ಸಮಾಸಂ ॥

ಎಂದು ಸೂತ್ರಹೇಳಿ, ಕಡುರಾಗಂ, ಅಜ಼ಿಕೆನಾಯಕಂ, ಕಟ್ಟೀಕಾಂತಂ, ಪೆರ್ಬಲಂ, ಮಂಗಳಾರತಿ, ಅರಸುಗುಣಂ ಮೊದಲಾದುವು ಕವಿ ಪ್ರಯೋಗದಲ್ಲಿ ಉಂಟು; ಇವುಗಳಂತೆ ಬೇರೆ ಮಾಡಲಾಗದು

ಎನ್ನುತ್ತಾನೆ. ಬಿರುದಿನಲ್ಲಿ 'ಎತ್ತಾನುಂ ಸಲ್ವುದು' ಎಂದು ಹೇಳಿ ಕೋಟೆಯ ಹೆಬ್ಬಾಗಿಲನ್ನೇ ತೆರೆದಿದ್ದಾನೆ: ನರಲೋಕದಲ್ಲಣಂ, ದಳಮುಖಧವಳಂ. ಕ್ರಿಯಾಸಮಾಸದಲ್ಲಂತೂ ಸ್ವೇಚ್ಛೆ-ವಜ್ರಂಗೊಳಿ ಮುಂತಾಗಿ. ಕಾವ್ಯ ಓದು, ರೈಲು ಹತ್ತು, ಹೋಟಲು ತೆರೆ ಮುಂತಾಗಿ ನಾವು ಈಗ ಹೇಳುವಂತೆ.

ಸೂತ್ರ ಪಾಂಡಿತ್ಯ ಸಾಕು. ಕೇಶಿರಾಜನಿಂದೀಚೆಗೆ ಲೋಕ ಪ್ರಯೋಗದಲ್ಲಿ ಇವೊತ್ತಿಗೂ ನಾವೆಲ್ಲರೂ ಈ ಅರಿಸಮಾಸಗಳನ್ನು ಒಪ್ಪಿ ಬಳಸುತ್ತ ಇಲ್ಲವೆ? ದೇವರ ಮನೆ, ದೇವಕೂಟ, ಗರ್ಭಗುಡಿ, ತೆಪ್ಪೋತ್ಸವ, ಊಟೋಪಚಾರ, ಶಿವಕೂಟ, ದಾಸಕೂಟ, ಗುರುಹಿರಿಯರು, ಸರ್ಪಕಾವಲು, ಶನಿಕಾಟ, ಭೂತಕನ್ನಡಿ, ಕೈವಸ್ತ್ರ, ಗಡಿಪ್ರಾಂತ, ನಿತ್ಯಗಟ್ಟಳೆ, ಲಕ್ಷಗಟ್ಟಳೆ, ಕೋಟಿಗಟ್ಟಳೆ, ಅನ್ನನೀರು, ಅನ್ನಬಟ್ಟೆ, ವೈದ್ಯಪಾಲು, ಅರ್ಧಪಾಲು, ಬರಗಾಲ, ಮಳೆಗಾಲ, ರಾಜಮನೆತನ, ಒಳದೇಶ, ಒತ್ತುವ ಕಾಗದ, ಬಡರೈತ, ರೈಲುಗಾಡಿ ರೈಲು ಬಂಡಿ, ಎದುರು ವಾದಿಸು, ಎದುರು ಪಕ್ಷ, ಕೆಲಸ ಕಾರ್ಯ. ಹೀಗೆ ಎಷ್ಟೋ ಶಬ್ದಗಳು ಪ್ರಯೋಗಕ್ಕೆ ಬಂದು ಸಾಧುವೆಂದೇ ಹೇಳಬೇಕಾಗುತ್ತದೆ. ಇಷ್ಟೇ ಅಲ್ಲ, ದುರ್ನನಡತೆ, ಅಪನಂಬಿಕೆ, ಅಪತಿಳಿವಳಿಕೆ, ದುಡ್ಡಸ್ಥ, ನಂಟಸ್ತನ, ಸಂದಾಯ, ಒತ್ತಾಯ; ಮುಕ್ತಾಯ, ಇಂತಹ ಮಾತುಗಳಲ್ಲಿ ಬೆರಕೆ ಎಷ್ಟರಮಟ್ಟಿಗೆ ಹೋಗುತ್ತಿದೆ ಎಂದು ಗಮನಿಸಬಹುದು. ಊರುಗಳ ಹೆಸರುಗಳಲ್ಲಿ ಮಂಗಳೂರು, ಶ್ರವಣಬೆಳ್ಗೊಳ ಮುಂತಾದುವನ್ನು ಗಮನಿಸಬಹುದು.

ಇಂತಹ ಕಡೆಗಳಲ್ಲಿ ದೋಷ ನಿರ್ದೋಷ ನಿರ್ಣಯಕ್ಕೆ ಅನುಮಾನವಿಲ್ಲದ ತತ್ವವೇನು?

ಒಟ್ಟಿನಲ್ಲಿ ಬದುಕಿ ಬೆಳೆಯತಕ್ಕ ಭಾಷೆಗಳಲ್ಲಿ, ಜನಾಂಗಗಳಲ್ಲಿ ಶುದ್ಧಿ ಅತ್ಯಗತ್ಯವಾದರೂ, ಕಾರಣವಿಲ್ಲದೆ ತಪ್ಪುದಾರಿಗೆ ಹೋಗಕೂಡದಾದರೂ ಸಂದರ್ಭಾನುಸಾರವಾಗಿ ಲೋಕ ಸ್ವಭಾವವನ್ನು ಅನುಸರಿಸಿ ಅರ್ಥ ಸೌಕರ್ಯಕ್ಕಾಗಿ ಅರಿಸಮಾಸ ಮುಂತಾದ ಬೆರಕೆಗಳು ಅನಿವಾರ್ಯವೆಂದು ಹೇಳಬಹುದಾಗಿದೆ. ಕಟ್ಟಿಲ್ಲದ ಬಿಡುಗಡೆಯೂ, ಬಿಡುಗಡೆಯಿಲ್ಲದ ಕಟ್ಟೂ ಜೀವಕ್ಕೆ ಹಾನಿ. ಅತಿ ಸಂಪರ್ಕ ಆತ್ಮಕ್ಕೆ ಹಾನಿ.

## ಪುದುಕೋಟೆಯಲ್ಲಿ
### ತಮಿಳು ಸಂಗೀತ ಸಮ್ಮೇಳನ

೨೩-೧೦-೪೭ನೆಯ ಶುಕ್ರವಾರ ಪುದುಕೋಟೆಯಲ್ಲಿ ತಮಿಳು ಸಂಗೀತ ಸಮ್ಮೇಳನ ನಡೆದು ತಮಿಳು ಹಾಡುಗಳನ್ನು ಬಳಕೆಗೆ ತರಬೇಕೆಂಬ ಚಳವಳಿ ಇನ್ನಷ್ಟು ಬಲಪಟ್ಟಿತು.

ರಾಜಾ ಸರ್ ಅಣ್ಣಾಮಲೈ ಚೆಟ್ಟಿಯಾರರು ಸಮ್ಮೇಳನದ ಪ್ರಾರಂಭ ಭಾಷಣದಲ್ಲಿ ಹೀಗೆ ಹೇಳಿದರು:

"ತಮಿಳು ಸಂಗೀತದ ಪುನರುಜ್ಜೀವನಕ್ಕಾಗಿ ಹೂಡಿರುವ ಚಳವಳಿ ನಾಡಿನ ಇತರ ಭಾಷೆಗಳ ಮೇಲಣ ದ್ವೇಷದಿಂದಲ್ಲ. ಇದು ರಾಜಕೀಯ ವಿಚಾರವೂ ಅಲ್ಲ. ತಮಿಳಿನಲ್ಲಿ ಹೆಚ್ಚು ಹಾಡುಗಳು ಹುಟ್ಟಬೇಕೆಂಬ ಹಾರೈಕೆ ವಿವಾದಾಸ್ಪದವಲ್ಲ.

ಪುದುಕೋಟೆಯ ತೊಂಡೈಮನ್ ರಾಜವಂಶದವರು ಬಹುಕಾಲದಿಂದ ಸಂಗೀತ ಕಲೆಗೂ ಸಾಹಿತ್ಯಕ್ಕೂ ಬಹಳ ಪ್ರೋತ್ಸಾಹ ಕೊಟ್ಟರು. ಇನ್ನು ಮುಂದೆಯೂ ಹಿಂದೂ ಸಂಸ್ಥಾನವಾದ ಪುದುಕೋಟೆಯಲ್ಲಿ ಸಂಗೀತ ಸಾಹಿತ್ಯಗಳಿಗೆ ಹೆಚ್ಚಿನ ಪ್ರೋತ್ಸಾಹ ಲಭಿಸುವುದೆನ್ನುವುದರಲ್ಲಿ ಸಂದೇಹವಿಲ್ಲ.

ಈಗಾಗಲೆ ಅಣ್ಣಾಮಲೈ ವಿಶ್ವವಿದ್ಯಾನಿಲಯದಲ್ಲಿ ತಮಿಳು ಸಂಗೀತಕ್ಕೆ ಪ್ರೋತ್ಸಾಹ ಕೊಡಲಾಗುತ್ತಿದೆ. ತಮಿಳಿನಲ್ಲಿ ಹಾಡುಗಳನ್ನು ಕಟ್ಟಿ ಕಲೆಯನ್ನು ಬೆಳಸಲು ತಮಿಳು ವಿದ್ವಾಂಸರನ್ನು ಪ್ರಾರ್ಥಿಸಲಾಗುತ್ತಿದೆ. ಪತ್ರಿಕೆಗಳೂ, ಆಕಾಶವಾಣಿಯೂ ಚಲಚಿತ್ರಗಳೂ ಈ ಚಳವಳಿಯ ಹರಡಿಕೆಗೆ ಹೆಚ್ಚಿನ ಸಹಕಾರವನ್ನು ನೀಡಬೇಕು. ತಿರುಚನಾಪಳ್ಳಿಯ ಆಕಾಶವಾಣಿ ಈ ವಿಷಯದಲ್ಲಿ ಬೆಂಬಲವಾಗಿದ್ದು ಈಚೆಗೆ ತನ್ನ ಕಾರ್ಯಕ್ರಮಗಳಲ್ಲಿ ಹೆಚ್ಚು ತಮಿಳು ಹಾಡುಗಳ ಗಾಯನವನ್ನು ಸೇರಿಸಿರುವುದಕ್ಕಾಗಿ ನಾವೆಲ್ಲ ಕೃತಜ್ಞರಾಗಿರಬೇಕಾಗಿದೆ.

ತಮಿಳು ವಿದ್ವಾಂಸರೂ ಸಂಗೀತಜ್ಞರೂ ಧರ್ಮವೇ ಮುಂತಾದ ಬದುಕಿಗೆ ಸಂಬಂಧಿಸಿದ ಹಲವು ವಿಷಯಗಳನ್ನು ಕುರಿತು ತಮಿಳಿನಲ್ಲಿ ಸುಲಭ ಶೈಲಿಯಲ್ಲಿ ಕೃತಿರಚನೆ ಮಾಡಬೇಕಾಗಿದೆ. ರಂಗಭೂಮಿಗೂ ಚಲಚ್ಚಿತ್ರ ರಂಗಕ್ಕೂ ತಕ್ಕ ಕೃತಿಗಳನ್ನು ಒದಗಿಸಿ ತಮಿಳು ಭಾಷೆಯ ಏಳಿಗೆಗೆ ನೆರವಾಗಬೇಕು. ದ್ರಕ್ಷಿಣದೇಶದಲ್ಲಿ ಇನ್ನೂ ಅನೇಕ ಸ್ಥಳಗಳಲ್ಲಿ ತಮಿಳು ಸಂಗೀತದ ಪುನರುಜ್ಜೀವನ ಚಳವಳಿಗೆ ಬೆಂಬಲ ಕೊಡಲು ಸಂಗೀತ ಸಭೆಗಳು ಹುಟ್ಟಿ ಉಪಕಾರ ಮಾಡುವುವೆಂದು ಹಾರೈಸೋಣ."

## ಕನ್ನಡ ಸುದ್ದಿ
### ಮೈಸೂರು ವಿಶ್ವವಿದ್ಯಾನಿಲಯದ ಕೌನ್ಸಿಲ್ ಆಯ್ಕೆ

೨೪-೧೦-೪೭ನೆಯ ದಿನ ಮೈಸೂರು ವಿಶ್ವವಿದ್ಯಾನಿಲಯದ ಸೆನೆಟಿನಿಂದ ಕೌನ್ಸಿಲಿಗೆ ನಡೆದ ಆಯ್ಕೆಯಲ್ಲಿ ಪರಿಷತ್ತಿನ ಅಚ್ಚುಕೂಟದ ಗೌರವ ಮೇಲ್ವಿಚಾರಕರಾದ ಶ್ರೀ. ಬಿ. ಪುಟ್ಟಯ್ಯನವರೂ, ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀ. ಬಿ. ಎಂ. ಶ್ರೀಕಂಠಯ್ಯನವರೂ ಆರಿಸಿ ಬಂದಿದ್ದಾರೆ.

ಹಿಂದೆ, ವಿಶ್ವವಿದ್ಯಾನಿಲಯದಲ್ಲಿ ಕನ್ನಡದ ಸ್ಥಾನಮಾನವನ್ನು ಉತ್ತಮಪಡಿಸಬೇಕೆಂದು ಸ್ಥಾನಪತಿಗಳನ್ನು ಕಾಣಲು ಪರಿಷತ್ತು ಏರ್ಪಡಿಸಿದ್ದ ನಿಯೋಗಗೋಷ್ಠಿಯಲ್ಲಿ ಇವರಿಬ್ಬರೂ ಇದ್ದರು. ಈಗ ಇವರು ಕೌನ್ಸಿಲಿನಲ್ಲಿರುವರಾದ್ದರಿಂದ ಕನ್ನಡದ ಯೋಗಕ್ಷೇಮವನ್ನು ಕಾಯಲು ಇವರಿಗೆ ಇನ್ನೂ ಹೆಚ್ಚಿನ ಅವಕಾಶವಾಗಿದೆಯೆಂದು ನಂಬುತ್ತೇವೆ.

### ನಾಡಹಬ್ಬ

**ಗುಬ್ಬರ್ಗ: ಕನ್ನಡ ಸಾಹಿತ್ಯ ಸಂಘ**

೧೧-೧೦-೪೭ನೆಯ ಭಾನುವಾರ ಪ್ರಾತಃಕಾಲ ೮ ಗಂಟೆಗೆ ನಾಡದೇವಿಯ ಸ್ಥಾಪನೆಯಾಯಿತು. ಪ್ರತಿದಿನ ಸಾಯಂಕಾಲ ೬-೩೦ರಿಂದ ಕಾರ್ಯಕ್ರಮಗಳು ಆರಂಭವಾಗುತ್ತಿದ್ದವು. ಮೊದಲನೆಯ ದಿನ ಶ್ರೀ. ಮೃತ್ಯುಂಜಯ ಸ್ವಾಮಿಗಳು ಮುಧೋಳ ವೇದಧರ್ಮ ಪಂಡಿತ ಇವರು '೧೯ನೆಯ ಶತಮಾನದ ಕನ್ನಡಿಗರ ಕ್ರಾಂತಿ' ಎಂಬ ವಿಷಯದ ಬಗ್ಗೆ ಉಪನ್ಯಾಸ ಮಾಡಿದರು. ೧೨-೧೦-೪೭ನೆಯ ಸೋಮವಾರ ಮೊದಲು ವಿದ್ಯಾರ್ಥಿಗಳ ವಕ್ತೃತ್ವ ಸ್ಪರ್ಧೆಯಾಗಿ ಅನಂತರ ಶ್ರೀ. ಪ್ರೊ. ಕೇಶವನಾಥರ 'ಪೂಜಾನೃತ್ಯ' 'ದಶಾವತಾರನೃತ್ಯ' ಮತ್ತು 'ಹಾವಾಡಿಗನ ನೃತ್ಯ' ಎಂಬ ಭರತನಾಟ್ಯಗಳು ಜರುಗಿದವು. ೧೩-೧೦-೪೭ನೆಯ ಮಂಗಳವಾರ ಬಾಲಕರ ಕವಿತಾಪಠನಸ್ಪರ್ಧೆ (Recitation) ನಡೆಯಿತು. ಅನಂತರ ವಿದ್ಯಾರ್ಥಿಗಳು ಶ್ರೀ. ರಂ. ಶ್ರೀ. ಮುಗಳಿಯವರ 'ಮೋಟಾರ್ ಮಾರಿಕಾ' ಎಂಬ ಪ್ರಹಸನವನ್ನು ಅಭಿನಯಿಸಿದರು. ೧೪-೧೦-೪೭ನೆಯ ಬುಧವಾರ ವಿದ್ಯಾರ್ಥಿ ಕವಿ ಸಮ್ಮೇಳನ ಜರುಗಿತು. ೧೫-೧೦-೪೭ನೆಯ ಗುರುವಾರ ಶ್ರೀ. ಕೆ. ವಿ. ರಾಘವಾಚಾರ್, ಎಂ.ಎ. ಇವರು 'ಸೊಕ್ರೆಟೀಸನ ಜೀವನ'ದ ವಿಚಾರವಾಗಿ ಒಳ್ಳೆಯ ಉದ್ಬೋಧಕ ಭಾಷಣ ಮಾಡಿದರು. ೧೬-೧೦-೪೭ನೆಯ ಶುಕ್ರವಾರ ಶ್ರೀ. ಮಾನ್ವಿ ನರಸಿಂಗರಾಯರು, ಎಂ.ಎ. ಹಾಗೂ ಶ್ರೀ. ವ್ಹಿ.ಎಂ. ಇನಾಂದಾರ್, ಎಂ.ಎ. ಅವರು ಕ್ರಮವಾಗಿ 'ಸಾಹಿತ್ಯ ಸೃಷ್ಟಿ' ಮತ್ತು 'ಇಂದಿನ ಸಾಹಿತ್ಯದ ವ್ಯಾಪ್ತಿ' ಎಂಬ ವಿಷಯಗಳ ಮೇಲೆ ಭಾಷಣ ಮಾಡಿದರು. ೧೭-೧೦-೪೭ನೆಯ ಶನಿವಾರ ಶ್ರೀ. ಕೆ. ಐ. ವಿದ್ಯಾಸಾಗರ ದುವ್ವಮ್ ತಾಲೂಕದಾರರ ಹಸ್ತದಿಂದ ಪಾರಿತೋಷಿಕದ ಸಮಾರಂಭ ಜರುಗಿತು. ಅನಂತರ ಶ್ರೀಯುತರು ಒಂದು ಚಿಕ್ಕ ಭಾಷಣ ಮಾಡಿ ಅವಸರಕಾರ್ಯದ ನಿಮಿತ್ತ ಹೊರಟು ಹೋದರು. ಶ್ರೀ. ಮಾನ್ವಿ ನರಸಿಂಗರಾಯರು 'ಹೈದರಾಬಾದು ಕರ್ನಾಟಕ ಕನ್ನಡಕ್ಕೆ ನೀಡಿದ ಕಾಣಿಕೆ' ಎಂಬ ವಿಷಯದ ಮೇಲೂ ಶ್ರೀ. ವ್ಹಿ. ಎಂ ಇನಾಂದಾರರು 'ನಾಟಕ' ಎಂಬ ವಿಷಯದ ಮೇಲೂ ಭಾಷಣ ಮಾಡಿದರು. ಅಂದೇ ವಿದ್ಯಾರ್ಥಿನಿಯರು 'ವಸುಂಧರ ವ್ಯಾಖ್ಯಾನ' ಎಂಬ ಪ್ರಹಸನವನ್ನೂ, ವಿದ್ಯಾರ್ಥಿಗಳು 'ನಾಗರಿಕ' ಎಂಬ ನಾಟಕವನ್ನೂ ಅಭಿನಯಿಸಿದರು. ಕರ್ನಾಟಕ ಮಾತೆಯ ಜಯ ಜಯಕಾರ ಹಾಗೂ 'ವಂದೇ ಮಾತರಂ' ರಾಷ್ಟ್ರಗೀತೆಯೊಡನೆ ಸಭೆ ಮುಗಿದು ನಾಡಹಬ್ಬ ಅತ್ಯಂತ ಯಶಸ್ವಿಯಾಗಿ ಸಾಂಗವಾಯಿತು.

ತಾ॥ ೧೮ರಲ್ಲಿ ನೂತನ ವಿದ್ಯಾಶಾಲೆಯ ಆವರಣದಲ್ಲಿ ವಿಜಯದಶಮಿ ಉತ್ಸವ ಶ್ರೀಮಾನ್ ವಿ. ಸೀತಾರಾಮಯ್ಯ, ಎಂ.ಎ. ಅವರ ಅಧ್ಯಕ್ಷತೆಯಲ್ಲಿ ಬಹು ವಿಜೃಂಭಣೆಯಿಂದ ನಡೆಯಿತು.

**ಕಾರ್ಕಳ:** ಶ್ರೀರಾಮ ಭಟ್ಟರವರ ಯಮುನಾ ನಿವಾಸದಲ್ಲಿ ದಸರಾ ಮಹೋತ್ಸವ, ಸಂಗೀತ ಸಾಹಿತ್ಯ ವಿಚಾರಗಳನ್ನು ಕುರಿತು ಭಾಷಣಾದಿಗಳಿಂದ ಬಹಳ ವಿಜೃಂಭಣೆಯಿಂದ ಜರುಗಿತು.

## ವಿದ್ಯಾಶಾಲೆಗಳಲ್ಲಿ ಇಂಗ್ಲಿಷ್ ಪದಗಳು

(೭ನೆಯ ಪುಟದಿಂದ)

ಸರಳವಾಗಿಯೂ, ಪುಟ್ಟದಾಗಿಯೂ, ಸಾಧ್ಯವಾದರೆ ಅಲ್ಪ ಪ್ರಾಣಾಕ್ಷರಗಳನ್ನೇ ಹೊಂದಿರುವ, ಸಾಮಾನ್ಯವಾಗಿ ರೂಢಿಯಲ್ಲಿರುವ ಒಂದು ಕನ್ನಡ ಪದವೊಂದನ್ನು ತಾವು ತಿಳಿಸಿ ಅದನ್ನು ಬಳಕೆಯಲ್ಲಿ ತರಲು ಸಾಕಾದಷ್ಟು ಪ್ರಚಾರ ಕಾರ್ಯವನ್ನು ನಡಸಬೇಕೆಂದು ನಾನು ಅರಿಕೆ ಮಾಡಿಕೊಳ್ಳುತ್ತೇನೆ. ಈ ವಿಚಾರದಲ್ಲಿ ಎಲ್ಲಾ ಕನ್ನಡ ಪತ್ರಿಕೆಗಳಲ್ಲಿಯೂ ಪ್ರಚಾರ ಕಾರ್ಯ ನಡೆಯಬೇಕಾಗಿದೆ. ಕನ್ನಡ ಭಾಷೆ ಇತರ ಭಾಷೆಗಳ ಮಟ್ಟಕ್ಕೆ ಬಂದು ಸರ್ವಮಾನ್ಯತೆಯನ್ನು ಪಡೆಯಬೇಕಾದರೆ ಈ ಕಾರ್ಯ ಮೊದಲು ಅತ್ಯಗತ್ಯವಾಗಿ ನಡೆಯಲೇಬೇಕು.

ಸ್ವಲ್ಪ ಕಾಲ ಪರೀಕ್ಷೆ ಮಾಡಿ ನೋಡಿದರೆ, ಒಬ್ಬ ವಿದ್ಯಾರ್ಥಿ ಶಾಲೆಯಲ್ಲಿರುವ ಕಾಲದಲ್ಲಿ ಸಾರ್ ಪದವನ್ನು ಕಡೆಯಪಕ್ಷ ಒಂದು ನೂರು ಸಲವಾದರೂ ಉಪಯೋಗಿಸುತ್ತಾನೆ. ಈ ತಪ್ಪಿಗೆ ಯಾರು ಕಾರಣರು? ಬೋಧಕರೇ ಎಂದು ಹೇಳಬಹುದು. ಅವರೇ ತಮ್ಮ ಸಹ ಉಪಾಧ್ಯಾಯರೊಡನೆಯೂ, ಮುಖ್ಯೋಪಾಧ್ಯಾಯರೊಡನೆಯೂ, ತಂದೆ ತಾಯಿ ಹಿರಿಯರೊಡನೆಯೂ ಸಂಭಾಷಣೆ ಮಾಡುವಾಗ ಸಾರ್, ಸಾರ್ ಎಂಬುದಾಗಿ ಹೇಳುತ್ತಲೇ ಇರುತ್ತಾರೆ. ಎಂತಹ ಅಪರಾಧ ಮಾಡುತ್ತಿದ್ದೇವೆ, ಕನ್ನಡದ ವಿಷಯದಲ್ಲಿ ಎಂತಹ ಅಪಚಾರ ನಡಸುತ್ತ ಇದ್ದೇವೆ ಎಂಬ ಅರಿವಾದರೂ ಅವರಿಗುಂಟಾಗುವುದೇ? ಇದೇ ಸಾಕು, ವಿದ್ಯಾರ್ಥಿಗಳಿಗೆ ಮೇಲ್ಪಂಕ್ತಿ. ಯಾವ ತರಗತಿಯಲ್ಲೇ ಹೋಗಿ ನೋಡಿದರೂ, ಕಡೆಗೆ ಪ್ರಾಥಮಿಕ ೧ನೆಯ ತರಗತಿಯಲ್ಲಿಯೂ ಸಹ ಉಪಾಧ್ಯಾಯರೇ, ಕ್ಲಾಸ್, ಸ್ಟ್ಯಾಂಡ್, ಸಿಟ್, (Class, Stand, Sit) ಎಂಬುದಾಗಿ ಅರಚಿದ ಮೇಲೆ ತಮ್ಮ ಪಾಠದ ಬೋಧನೆಗೆ ಆರಂಭಿಸುತ್ತಾರೆ. ಹಾಜರಿ ತೆಗೆದುಕೊಳ್ಳುವಾಗಲೂ ಸಹ ಇದೇ ದುಷ್ಟ ಪದ್ಧತಿ ಇದೆ. ಪ್ರತಿಯೊಬ್ಬನೂ 'ಪ್ರಸೆಂಟ್, ಸಾರ್' (Present, Sir) ಎಂದು ಕೂಗಲೇ ಬೇಕು. ಇವೆಲ್ಲವನ್ನೂ ಗಣನೆಗೆ ತಂದುಕೊಂಡರೆ ವಿದ್ಯಾಭ್ಯಾಸದ ತಳಹದಿ ಸಮಯದಲ್ಲಿಯೇ ಇಂಗ್ಲಿಷ್ ಪದಗಳ ಉಪಯೋಗವೆಂಬ ವಿಷ ಬೀಜವನ್ನು ನಾಟಿದಂತೆ ಆಗುವುದು. ಇನ್ನು ಮುಂದಾದರೂ ಇದನ್ನು ತಡೆಗಟ್ಟಲು ಸಾಧ್ಯವೇ? ತಕ್ಕ ಬೆಂಬಲವೂ, ಪ್ರೋತ್ಸಾಹವೂ ದೊರೆತರೆ ಸಾಧ್ಯವೇ ಎಂದು ನಾನು ನಂಬಿದ್ದೇನೆ. ಮುಖ್ಯವಾಗಿ ಕನ್ನಡ ನಮ್ಮದು ಎಂಬ ಅಭಿಮಾನ ವಿಶ್ವಾಸ ಬೋಧಕರಲ್ಲಿ ಉಂಟಾಗಬೇಕು. ಹೀಗುಂಟಾಗಲು ತಿಳಿವಳಿಕೆ ಕೊಡತಕ್ಕವರೊಬ್ಬರಿರಬೇಕು. ಇದು ತಮ್ಮಿಂದ ನಡೆಯಬೇಕಾಗಿದೆ.

ಯಾವಾಗ ಪ್ರಾಥಮಿಕ ೧ನೆಯ ತರಗತಿಯಿಂದ ಮಾಧ್ಯಮಿಕ ನಾಲ್ಕನೆಯ ತರಗತಿ ಕಳೆಯುವವರೆಗೂ, ಅಂದರೆ ಎಂಟು ವರುಷಗಳ ಕಾಲ ಒಂದೇ ಸಮನಾಗಿ ವಿದ್ಯಾರ್ಥಿ ಕನ್ನಡ ಭಾಷೆಯನ್ನೇ ಉಪಯೋಗಿಸುತ್ತಾನೆಯೋ, ಆಗ ಪರಭಾಷೆಗೆ ಮೋಹ ಬೀಳುವ ಆಸಕ್ತಿ ಉಂಟಾಗುವುದಿಲ್ಲ. ಕನ್ನಡ ತನ್ನದೆಂಬ ಅಭಿಮಾನವುಂಟಾಗಬೇಕಾದರೆ ಉಪಾಧ್ಯಾಯರು ಮೊದಲಿಗೆ ಈ ಅಭಿಮಾನವನ್ನು ಪಡೆಯಬೇಕು. ಸಾಧ್ಯವಾದಷ್ಟು ಇಂಗ್ಲಿಷ್ ಪದಗಳನ್ನು ಕಡಮೆಯಾಗಿ ಬಳಸಬೇಕು. ಎಚ್ಚರದಿಂದಲೇ ಮಾತನಾಡುವುದನ್ನು ಅಭ್ಯಾಸ ಮಾಡಬೇಕು. ಆಕಸ್ಮಾತ್ ಅಭ್ಯಾಸ ಬಲದಿಂದ ಇಂಗ್ಲಿಷ್ ಪದವೊಂದನ್ನು ಉಪಯೋಗಿಸಿದರೆ ಅದನ್ನು ತಿದ್ದಿಕೊಳ್ಳಲು ಪ್ರಯತ್ನಿಸಬೇಕು. ಈ ವಿಚಾರದಲ್ಲಿ ನಿರ್ಲಕ್ಷ್ಯದಿಂದಿರುವುದು ಒಂದು ಅಪರಾಧವೆಂದೇ ನಾನು ತಿಳಿದಿದ್ದೇನೆ.

ಹೀಗೆ ಮೇಲೆ ಹೇಳಿದ ರೀತಿಯಲ್ಲಿ ಹಲವು ವರುಷಗಳು ನಡೆದುವೆಂದರೆ ಕಾಲಕ್ರಮದಲ್ಲಿ ಅತ್ಯಾಶ್ಚರ್ಯಕರವಾದ ಅದ್ಭುತ ಪರಿಣಾಮ ಉಂಟಾಗುವುದರಲ್ಲಿ ಸಂದೇಹವೇ ಇರುವುದಿಲ್ಲ. ಎಲ್ಲೆಲ್ಲಿಯೂ ಕನ್ನಡ ವಾತಾವರಣವುಂಟಾಗುವುದು. ಎಲ್ಲರಲ್ಲಿಯೂ ಕನ್ನಡಿಗರೆಂಬ ಭಾವನೆ ಬರುವುದು. ಕನ್ನಡದಲ್ಲಲ್ಲದೆ ಬೇರೆ ಭಾಷೆಯಲ್ಲಿ ಸಂಭಾಷಣೆ ನಡಸಲು ಅಪಮಾನವಾಗುವುದು. ಅಂತಹ ಪರಿಸ್ಥಿತಿಯುಂಟಾಗಲೆಂದು ನನ್ನ ಬಯಕೆ.

ಶಾಲೆಗಳಲ್ಲಿ ಸಾಮಾನ್ಯವಾಗಿ ಬಳಕೆಯಲ್ಲಿರುವ ನನಗೆ ಕಾಣಬಂದ ಕೆಲವು ಇಂಗ್ಲಿಷ್ ಪದಗಳ ಪಟ್ಟಿಯೊಂದನ್ನು ಬರೆದಿದ್ದೇನೆ. ಅವುಗಳಿಗೆ ತಕ್ಕ ಕನ್ನಡ ಪದಗಳನ್ನು ಒದಗಿಸಿ, ಅವುಗಳನ್ನು ಬೋಧಕರು ತಮ್ಮ ಶಾಲಾವೇಳೆಯಲ್ಲಿ ಉಪಯೋಗಿಸುವಂತೆ ಪ್ರಚಾರ ಕಾರ್ಯ ತಾವು ನಡಸಬೇಕೆಂದು ಕೋರುತ್ತೇನೆ.

[ಉತ್ತರ ಕರ್ನಾಟಕದಲ್ಲಿ ಮಾಸ್ತರ (Master) ಎಂಬ ಮಾತು ಅತಿ ಪ್ರಚಾರದಲ್ಲಿದೆ. ಬೇಡದ ಕಡೆಯೂ ಸಂಸ್ಕೃತ ಮತ್ತು ಮಿಕ್ಕ ಭಾಷೆಗಳ ಮಾತುಗಳನ್ನೂ ಬಳಸುತ್ತೇವೆ. ಕೂಡಿದಮಟ್ಟಿಗೆ ಕನ್ನಡವಾದರೆ ಒಳ್ಳೆಯದು – ಆದರೆ ಕನ್ನಡಕ್ಕಾಗಿ ತಿಣುಕಬಾರದು. ಲೇಖಕರ ಇಂಗ್ಲಿಷ್ ಪದಗಳ ಪಟ್ಟಿಗೆ ಕೆಲವು ಕನ್ನಡ ನುಡಿಗಳನ್ನು ಕೊಟ್ಟಿದ್ದೇವೆ. ಬೇರೆ ಸೂಚನೆಗಳು ಬಂದರೆ ಸಂತೋಷದಿಂದ ಹಾಕುತ್ತೇವೆ.— ಸಂ.]

Sir - ಅಯ್ಯಾ, ಸ್ವಾಮಿ. Class - ತರಗತಿ. Present - ಇದ್ದೇನೆ. Absent - ಇಲ್ಲ, ಬಂದಿಲ್ಲ. On Roll - ಹೆಸರು (ಹಾಜರು) ಪಟ್ಟಿಯಲ್ಲಿ. No. present - ಬಂದವರ ಸಂಖ್ಯೆ. Late - ತಡ. Copy - ಪ್ರತಿ. Attendance Register - ಹಾಜರಿ ಪುಸ್ತಕ. Marks Register - ಅಂಕದ ಪುಸ್ತಕ. Monthly Returns - ತಿಂಗಳು ಲೆಕ್ಕಗಳು. Teacher - ಬೋಧಕ. Asst.Master - ಉಪಾಧ್ಯಾಯ. Headmaster - ಮುಖ್ಯೋಪಾಧ್ಯಾಯ. Library work - ಪುಸ್ತಕಭಂಡಾರದ ಪಾಠ, ಕೆಲಸ. Sports - ಆಟ. Drill - ಕವಾಯಿತು, ಡ್ರಿಲ್. Uniform - ಸಮವಸ್ತ್ರ. Extra Curricular - ಹೆಚ್ಚಿಗೆ ಪಾಠಗಳ ವಿಷಯ. Tuition - ಪಾಠ, ಶಿಕ್ಷಣ. Time Table - ವೇಳೆಪಟ್ಟಿ. Writer - ಗುಮಾಸ್ತ. Office Room - ಕಚೇರಿ, ಕೆಲಸದ ಕೋಣೆ, ಕಾರ್ಯಾಲಯ. Map - ಭೂಪಟ. Atlas - ಭೂಪಟ ಪುಸ್ತಕ, ಅಟ್ಲಾಸು. Globe - ಗೋಳ. 1st Terminal Examination - ಮೊದಲನೆಯ ಅರ್ಧವರ್ಷ ಪರೀಕ್ಷೆ. Annual Examination - ವರ್ಷದ, ವಾರ್ಷಿಕ ಪರೀಕ್ಷೆ. Weekly Test - ವಾರ ಪರೀಕ್ಷೆ, ವಿಮರ್ಶೆ. Text-Book - ಪಾಠ ಪುಸ್ತಕ. Selection Examination - ಆಯ್ಕೆಯ ಪರೀಕ್ಷೆ. Scout class - ಚಮೂ ತರಗತಿ. Excursion, Trip - ಪ್ರವಾಸ, ಸುತ್ತುಪಯಣ. Fees - ತೆರ. Fine - ದಂಡ. Debating Society - ಚರ್ಚೆಯ ಸಂಘ. Chalk piece - ಸೀಮೆಸುಣ್ಣ. Black Board - ಕಪ್ಪು ಹಲಗೆ. Duster - ಒರಸುವ ಬಟ್ಟೆ. Table - ಮೇಜು. Bench - ಬೆಂಚು. Chair - ಕುರ್ಚಿ. Ink bottle - ಮಸಿ, ಶಾಯಿ ಸೀಸೆ. Blotting paper - ಒತ್ತುವ ಕಾಗದ. Pen - ಲೆಕ್ಕಣಿಕೆ, ಬರೆಯುವ ಕಡ್ಡಿ, ಪೇನಾ. Desk - ಇಳಿಮೇಜು. Pencil - ಸೀಸದಕಡ್ಡಿ. Pin - ಗುಂಡುಸೂಜಿ.

### ಮೈಸೂರು ಸಂಸ್ಥಾನದ ಅಕ್ಷರ ಪ್ರಚಾರ ಸಮಿತಿ, ಮೈಸೂರು

ಸಂಸ್ಥಾನದ ವಿದ್ಯಾಮಂತ್ರಿಗಳು ಶ್ರೀ. ಜೆ. ಎಂ. ಇಮಾಂ, ಬಿ.ಎ., ಬಿ.ಎಲ್. ಅವರು ಇದೇ ತಿಂಗಳು ೨೨ನೆಯ ತಾರೀಖು ಅಕ್ಷರ ಪ್ರಚಾರ ಸಮಿತಿಯ ಕಚೇರಿಗೆ ಭೇಟಿ ಕೊಟ್ಟು ಪ್ರಚಾರಕರೊಂದಿಗೆ ಮಾತನಾಡಿ, ಅಕ್ಷರ ಪ್ರಚಾರದ ಕೆಲಸದಲ್ಲಿ ತಮಗಿರುವ ಆಸಕ್ತಿಯನ್ನು ತೋರಿಸಿ ಕೆಲವು ಸೂಕ್ತವಾದ ಸಲಹೆಗಳನ್ನಿತ್ತರು. ಅಲ್ಲದೆ ಸದ್ಯದಲ್ಲೆ ನಗರದಲ್ಲಿ ಕೆಲಸ ಮಾಡುತ್ತಿರುವ ಅಕ್ಷರ ಪ್ರಚಾರ ತರಗತಿಗಳನ್ನು ನೋಡುವುದಾಗಿಯೂ ಹೇಳಿದರು. ಈಗ ಹರಿಜನರಲ್ಲಿ ಕೇವಲ ಶೇಕಡ ೨ರಷ್ಟೆ ಅಕ್ಷರಸ್ಥರಿದ್ದಾರೆಂದೂ ಅವರಲ್ಲಿರುವ ಈ ನಿರಕ್ಷರತೆಯನ್ನು ಹೋಗಲಾಡಿಸುವುದಕ್ಕಾಗಿ ತಕ್ಕ ಕಾರ್ಯಕ್ರಮ ಬೇಗ ಕೈಕೊಳ್ಳಬೇಕೆಂದೂ ಸೂಚಿಸಿ ಅನಕ್ಷರತೆಯ ನಿವಾರಣೋಪಾಯ ಒಂದೇ ಸಾಲದೆಂದೂ ಅದರ ಜೊತೆಗೆ ಅಕ್ಷರಸ್ಥರಾದವರು ಮತ್ತೆ ಅನಕ್ಷರಸ್ಥರಾಗದ ಹಾಗೆ ನೋಡಿಕೊಳ್ಳಲು ಒಂದು ತಕ್ಕ ಯೋಜನೆಯನ್ನು ಕೈಕೊಳ್ಳಬೇಕೆಂದೂ ತಿಳಿಸಿದರು.

೬೨೯—೧೯೫೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

## ಸಂಭವಾಮಿ ಯುಗೇ ಯುಗೇ*

ಮಲ್ಲೇಶ್ವರದಲ್ಲಿ ಗಾಂಧೀಜಯಂತಿ ನಡೆದ ಸಮಯದಲ್ಲಿ ಮಕ್ಕಳಿಗಾಗಿ ದಿನಕ್ಕೊಂದು ಪುಸ್ತಕ ಪ್ರಕಟವಾದುದು ಎಲ್ಲರಿಗೂ ತಿಳಿದ ವಿಚಾರವೇ ಆಗಿದೆ. ಎಂಟನೆಯ ದಿನವೇ ಕಡೆಯ ದಿನ, ಮಹಾಮಂಗಳಾರತಿಯ ದಿನ. ಆ ದಿನ ಪ್ರಕಟವಾದ ಪುಸ್ತಕ **'ಸಂಭವಾಮಿ ಯುಗೇ ಯುಗೇ'**. ಮಕ್ಕಳಿಗಾಗಿ ಅಲ್ಲ, ದೊಡ್ಡವರಿಗಾಗಿ.

ಸಂಭವಾಮಿ ಯುಗೇಯುಗೇ. ಈ ಮಹಾವಾಕ್ಯವನ್ನು ಕೇಳದವರು, ಇದರಲ್ಲಿ ಶ್ರದ್ಧೆ ವಿಶ್ವಾಸಗಳಿಲ್ಲದ ಜನ ನಮ್ಮ ದೇಶದಲ್ಲಿಯೇ ಇರಲಾರರೆಂದು ನನ್ನ ನಂಬಿಕೆ. ಪ್ರಪಂಚದ ಇತಿಹಾಸವನ್ನು ನೋಡಿದವರಿಗೆಲ್ಲಾ ಗೊತ್ತು: ಆಗಿಂದಾಗ ಆಯಾ ದೇಶಕಾಲಗಳಿಗೆ ತಕ್ಕಂತೆ ಧರ್ಮಸಂಸ್ಥಾಪನೆಗೋಸ್ಕರ, ಜನರನ್ನು ಸುಮಾರ್ಗದಲ್ಲಿ ಜೀವಿಸುವಂತೆ ಪ್ರೇರಿಸಿ ಜೀವನ ಚೊಕ್ಕಟವೂ ಸುಖಮಯವೂ ಆಗುವುದಕ್ಕೋಸ್ಕರ ಅನೇಕ ಬಗೆಯ ಮಹಾಪುರುಷರು ಹುಟ್ಟಿ ಧರ್ಮಪ್ರಚಾರ ಮಾಡಿರುವುದು. ಪ್ರತಿಯೊಂದು ಯುಗದಲ್ಲಿಯೂ ಒಬ್ಬ ಮಹಾಪುರುಷ ಜನಕ್ಕಾಗಿ ತನ್ನ ಜೀವವನ್ನೆ ಒತ್ತೆ ಇಟ್ಟು ದುಡಿದರೂ ಜನತೆಯ ಸ್ಥಿತಿ ಕಾಲಕ್ರಮದಲ್ಲಿ ಹೀನವಾಗಿ ಹೋಗುತ್ತಿರುವುದು ಕಾಣುತ್ತಿದೆ. ಆದರೂ ನಿರಾಶೆಗೆ ಎಡೆಗೊಡಸಲ್ಲದು. ಆಗಿಂದಾಗ ಮಹಾಪುರುಷನೊಬ್ಬ ಬಂದು ಜನತೆಯನ್ನುದ್ಧರಿಸುವುದೇ, ಧರ್ಮಕಾರ್ಯ ನಿರಂತರವಾಗಿ ನಡೆಯುವುದೇ ಒಂದು ದೊಡ್ಡ ಆಶೀರ್ವಾದವಾಗಿದೆ ಲೋಕಕ್ಕೆ. ಆದರೆ ಈ ಮಹಾಪುರುಷರ ಮಾತುಕತೆಗಳನ್ನು ಪರೀಕ್ಷಿಸಿದರೆ ಒಂದು ದೊಡ್ಡ ಲಕ್ಷಣ ಕಾಣಬರುತ್ತದೆ: ಎಲ್ಲರೂ ಲೋಕಕಲ್ಯಾಣಕ್ಕಾಗಿ ದುಡಿದವರು, ಜೀವತ್ಯಾಗ ಮಾಡಿದವರು. ಈಗಿನವರಿಗೆ ಹಿಂದಿನ ಮಹಾಪುರುಷರ 'ಲೋಕ'ವೆಂದರೆ ಸಣ್ಣಲೋಕವೆಂದು ಭಾವನೆ ಇರಬಹುದು. ಆ ಲೋಕ ಒಂದು ಸಣ್ಣಜನಾಂಗ ಮಾತ್ರವಾಗಿದ್ದಿತು ಎನ್ನುವ ಭಾವನೆ ಬರಬಹುದು. ಈಗ ಮಹಾತ್ಮಾ ಗಾಂಧಿಯವರ ಕರುಣಾಮಯವಾದ ಮಾತುಗಳು ಭೂಲೋಕದ ಎಲ್ಲ ಜನಾಂಗಗಳಿಗೂ ಅನ್ವಯಿಸುತ್ತವೆ. ನಮ್ಮ ಲೋಕ ಬಹು ವಿಶಾಲ; ಅಂತೆಯೇ ಮಹಾತ್ಮಾಗಾಂಧಿಯವರ ಹೃದಯವೂ ವಿಶ್ವದಷ್ಟು ವಿಶಾಲ; ಅದು ಕರುಣೆಯ ಸಾಗರ. ಅವರ ವ್ರತ ಒಂದು ಜನಾಂಗ, ಒಂದು ದೇಶಕ್ಕಾಗಿ ಅಲ್ಲ. ಜಾತಿ ಮತ ವಲಯ ವರ್ಣ ಭೇದಗಳಿಲ್ಲದೆ ಎಲ್ಲರ ಸುಖವನ್ನೂ ಕಲ್ಯಾಣವನ್ನೂ ಸಾಧಿಸುವುದೇ ಅವರ ಮಹಾವ್ರತ. ಅಂಥಾ ಮಹಾಪುರುಷರ ಜೀವನ, ಅವರ ಪ್ರಾರ್ಥನೆ ಮುಂತಾದ ವಿಚಾರಗಳನ್ನು ಮಕ್ಕಳಿಗೂ ದೊಡ್ಡವರಿಗೂ ತಿಳಿಗನ್ನಡದಲ್ಲಿ ತಿಳಿಸಲು ಸರ್ವಸಮಯವೂ ಸುಸಮಯವೆ.

'ಸಂಭವಾಮಿ ಯುಗೇಯುಗೇ' ಒಂದು ದೃಶ್ಯ ಮಾಲೆ. ಒಟ್ಟು ಆರು ದೃಶ್ಯಗಳು. ಮೊದಲ ಮತ್ತು ಕೊನೆಯ ದೃಶ್ಯಗಳು ಒಂದೇ. ಗಾಂಧೀಜಯಂತಿ ಉತ್ಸವದ ಮಹಾಮಂಗಳಾರತಿಯ ದೃಶ್ಯ. ಈ ದೃಶ್ಯವಿಲ್ಲದ ಮನೆ ಹಳ್ಳಿ ಪಟ್ಟಣ ಯಾವುದಾದರೂ ಉಂಟೆ ಈಗ ನಮ್ಮ ನಾಡಿನಲ್ಲಿ! ಈ ಎರಡು ದೃಶ್ಯಗಳೂ ಎಲ್ಲರಿಗೂ ಪ್ರಿಯವಾದುವು, ಪವಿತ್ರವಾದುವು. ಎಲ್ಲರ ಮನಸ್ಸನ್ನೂ ಪ್ರಚೋದಿಸಿ, ಹೃದಯವನ್ನು ದೋಷರಹಿತವನ್ನಾಗಿ ಮಾಡಿ, ಪವಿತ್ರವೂ ಸುಖಮಯವೂ ಆದ ಹೊಸ ಜೀವನವನ್ನು ನಡಸಲು ಬೇಕಾದ ಧೈರ್ಯಸ್ಥೈರ್ಯಗಳನ್ನು ಕೊಡುವಂಥವು. ಇವುಗಳನ್ನು ಅಭಿನಯಿಸುವ ಕಾಲದಲ್ಲಿ ಪ್ರಾರ್ಥನೆಮಾಡುವ ಸಮೂಹ ರಂಗಭೂಮಿಯ ಮೇಲಿರುವವರನ್ನು ಮಾತ್ರವೇ ಒಳಗೊಂಡಿಲ್ಲ – ಪ್ರೇಕ್ಷಕರೂ ಸಮೂಹದಲ್ಲಿ ಸೇರುವರು. ಇತರ ನಾಲ್ಕು ದೃಶ್ಯಗಳಲ್ಲಿ ಕ್ರಮವಾಗಿ ನಾಲ್ವರು ಮಹಾಪುರುಷರು ಬಂದು ನಾಲ್ಕು ಬಗೆ ವಿಷದ ಬೇರುಗಳನ್ನು ನಮ್ಮ ಜೀವನದಿಂದ ಕಿತ್ತುಹಾಕುವರು. ಕಾಮ ಕ್ರೋಧ ಮೋಹಗಳು ಅರಿಷಡ್ವರ್ಗಗಳಲ್ಲಿ ಮುಖ್ಯವಾದ ಮೂರು. ಮೊದಲ ದೃಶ್ಯ **'ಕ್ರೋಧ ವಿಸರ್ಜನೆ'**; ಎರಡನೆಯದು **'ಕಾಮದಹನ'**; ಮೂರನೆಯದು **'ಮೋಹ ನಿರ್ಮೂಲನ'**; ನಾಲ್ಕನೆಯ ದೃಶ್ಯ **'ಮರಣಭಯ ನಿವಾರಣೆ'**; ಮುಕ್ತಾಯ ದೃಶ್ಯ **'ಸಕಲ ಭಯ ಸಂಹಾರ'**. ಇಲ್ಲಿ ದೇವತಾ ಪ್ರಾರ್ಥನೆಯ ಮೂಲಕ, ಮಹಾತ್ಮಾ ಗಾಂಧಿಯವರನ್ನು ಧ್ಯಾನಿಸುವುದರ ಮೂಲಕ ಸಕಲಭಯಸಂಹಾರ ಸೂಚಿತವಾಗಿದೆ. ತಪಸ್ಸಿನಿಂದ ಕೃಶವಾದ ದೇಹವುಳ್ಳ, ತಮ್ಮ ಪವಿತ್ರಜೀವನದಿಂದ ಹಿಂದಿನ ಋಷಿವರ್ಯರನ್ನೂ ಮಹಾಪುರುಷರನ್ನೂ ನಮ್ಮ ನೆನಪಿಗೆ ತರುವ ಮಹಾತ್ಮಾ ಗಾಂಧೀಜೀ ಸಕಲಭಯಸಂಹಾರ ಮಾಡಿ, ಪ್ರಪಂಚದಲ್ಲಿರುವ ಸಕಲ ವಿಧವಾದ ಅಧರ್ಮದ ಎದುರಿಗೂ ಒಬ್ಬರೇ ನಿಂತು ಹೋರಾಡುತ್ತಿರುವರು. ಆಧ್ಯಾತ್ಮಿಕ ಶಕ್ತಿ ಹೊರತು ಇನ್ನಾವ ಶಕ್ತಿಯೂ ಅವರನ್ನೇನೂ ಮಾಡಲಾರದು. ಆಸುರೀವೃತ್ತಿಯವರಿಗೆ ಭಯ ಉಂಟು. ದೇಹರಕ್ಷಣೆಗೆ ವಜ್ರಕವಚಾದಿಗಳು ಬೇಕು. ಅಹಿಂಸೆ ಸತ್ಯಗಳ ಅಮೃತದಿಂದ ಅಮೃತರಾಗಿರುವ ಮಹಾತ್ಮಾ ಗಾಂಧಿಯವರಿಗೆ ಯಾವ ಭಯವಾಗಲಿ ಹೇಗೆ ಬಂದೀತು! ಅವರನ್ನು ಧ್ಯಾನಿಸುವವರಿಗೆ ಸಕಲಭಯಸಂಹಾರವಾಗುವುದರಲ್ಲಿ ಸಂಶಯವೇನು!

ಮೊದಲ ದೃಶ್ಯದಲ್ಲಿ ಶಾಂತಮೂರ್ತಿಯಾದ ಶ್ರೀರಾಮಚಂದ್ರ ಕುಪಿತನಾದ ಲಕ್ಷ್ಮಣನಿಗೆ ವಿವೇಕ ಹೇಳಿ, ಅವನಲ್ಲಿದ್ದ ಮಹಾಕ್ರೋಧ ವಿಸರ್ಜನೆ ಆಗುವಂತೆ ಮಾಡುವನು. ಎರಡನೆಯ ದೃಶ್ಯ ಮಹಾಭಾರತದ್ದು; ಶ್ರೀಕೃಷ್ಣ ಅರ್ಜುನನಿಗೆ ಗೀತೋಪದೇಶಮಾಡಿ, ಅವನಲ್ಲಿದ್ದ ಕಾಮವನ್ನು ದಹಿಸಿ, ಅನಾಸಕ್ತಿಯ ಶಕ್ತಿಯನ್ನು ಅವನಿಗೆ ತಿಳಿಸಿಕೊಡುವನು. ಮೂರನೆಯ ದೃಶ್ಯದಲ್ಲಿ ಬುದ್ಧದೇವನು ಆನಂದನಲ್ಲಿದ್ದ ಮೋಹವನ್ನು ಹೋಗಲಾಡಿಸಿ ದುಃಖದ ಬೇರನ್ನು ಕಿತ್ತೊಗೆಯುವನು. ನಿತ್ಯಾನಿತ್ಯವಸ್ತು ವಿವೇಚನೆಯೇ ಈ ಉಪದೇಶದ ಸಾರ. ನಾಲ್ಕನೆಯ ದೃಶ್ಯದಲ್ಲಿ ಶಿಲುಬೆಯನ್ನೇರಿ ಪುನರುತ್ಥಾನಗೊಂಡ ಯೇಸುಸ್ವಾಮಿ ತನ್ನ ಶಿಷ್ಯರಲ್ಲಿ ಅಯೋಗ್ಯತನದಿಂದ ವರ್ತಿಸಿ ಪ್ರಾಣಭಯಕ್ಕೀಡಾಗಿದ್ದ ಪೇತ್ರನಿಗೆ ಅಭಯವನ್ನು ನೀಡಿ ಮರಣಭಯವನ್ನು ಹೋಗಲಾಡಿಸುವನು. ಮುಕ್ತಾಯ ದೃಶ್ಯದಲ್ಲಿ ಸರ್ವಭಯಸಂಹಾರಕರಾದ ಗಾಂಧೀಜೀಯ ಧ್ಯಾನ, ಸ್ತೋತ್ರ. ಈ ನಾಲ್ಕು ದೃಶ್ಯಗಳಲ್ಲಿಯೂ ಎರಡೆರಡೇ ವ್ಯಕ್ತಿಗಳು. ಬಹುಸಂಖ್ಯೆಯ ಮಾತು ಮಹಾಪುರುಷರದೇ, ಉಪದೇಶ ಮಾಡುವವರದೇ.

ಈ ಪುಸ್ತಕ ಪ್ರಕಟವಾದ ದಿನವೋ ಮರುದಿನವೋ ನನ್ನ ಸ್ನೇಹಿತರೊಬ್ಬರು ಅಂದರು: ಪುಸ್ತಕ ಚೆನ್ನಾಗಿದೆ, ಆದರೆ ನಾಟ್ಯರಂಗಕ್ಕೆ ಯೋಗ್ಯವಲ್ಲ; ಅಭಿನಯಕ್ಕೆ ಯೋಗ್ಯವಲ್ಲ; ಓದುವುದಕ್ಕೇ ಸರಿ ಎಂದು. ಇದೊಂದು ದೃಶ್ಯಮಾಲೆ, ನಾಟಕವಲ್ಲ ಎನ್ನುವ ಅಂಶ ಆ ಹೊತ್ತಿನಲ್ಲಿ ಅವರ ನೆನಪಿನಿಂದ ಜಾರಿಹೋಗಿದ್ದಿತೋ ಏನೋ. ಏಕಾಂಕ ಏಕದೃಶ್ಯವಾದ 'ನಾಟಕ'ಗಳಿಲ್ಲವೇ? ಒಂದೇ ವ್ಯಕ್ತಿಯೇ ಮಾತನಾಡುತ್ತಿದ್ದರೆ ಎರಡನೆಯ ಮೂಕವ್ಯಕ್ತಿಯ ಪಾತ್ರ ಅಭಿನಯಕ್ಕೆ ಬಹಳ ಕಠಿಣವಾಗುವುದು, ನಟ ನೆಟ್ಟಗಿಲ್ಲದಿದ್ದರೆ ನಿರ್ಜೀವವಾಗುವುದು. ಆದರೆ ದೃಶ್ಯಗಳು ಚಿಕ್ಕವು, ಮಾತನಾಡುವವರು ಮಹಾಪುರುಷರು. ಅವರ ಮಾತುಗಳು ಮಹಾವಾಕ್ಯಗಳು. ಅವುಗಳ ಪ್ರಭಾವಕ್ಕೆ ಸಿಕ್ಕಿದ ಶ್ರೋತೃವಿಗೆ, ಮಹಾಪುರುಷರ ಮುಂದೆ ಇರುವ ಪ್ರೇಕ್ಷಕರಿಗೆ, ಮನಸ್ಸು ಹೇಗೂ ಚಂಚಲವಾಗುವುದಿಲ್ಲ. ಇದರಲ್ಲಿ ನಂಬಿಕೆ ಇಲ್ಲದವರು ಶ್ರೀ. ಕಾರಂತರು 'ಮುಕ್ತಾದ್ವಾರ'ವನ್ನು ತೋರಿಸಿದಂತೆ ಛಾಯಾ ನಾಟಕ ರೀತಿಯಲ್ಲಿ ಈ ದೃಶ್ಯಮಾಲೆಯನ್ನು ಅಭಿನಯಿಸಬಹುದು. ಈ ದೃಶ್ಯಮಾಲೆಯ ಉದ್ದೇಶ ಅದು ರಂಗಭೂಮಿಯಲ್ಲಿ ಬರಬೇಕು; ಅದರ ಪ್ರಭಾವ ಜನದ ಮೇಲೆ ಬೀಳಬೇಕು; ಅರಿವರ್ಗಗಳೂ ಸಕಲ ಭಯಗಳೂ ನಮ್ಮ ಜೀವನದಿಂದ ತೊಲಗಿ ಹೋಗಿ ನಾವು ಪುರುಷಸಿಂಹರಾಗಬೇಕು ಎನ್ನುವುದೇ. ಶ್ರೀ. ರಾಜರತ್ನಂ ಅವರ

* 'ಶಾಕ್ಯಸಾಹಿತ್ಯ ಮಂಟಪ'ದ ಪ್ರಕಟನೆ. ಪುಟ ೩೨. ಬೆಲೆ ೪ ಆಣೆ.

ಈ ಉದ್ದೇಶ ಸಫಲವಾಗಲಿ ಎಂದು ಹರಸುವುದು ಮಾತ್ರವೇ ಅಲ್ಲ; ಆಗುತ್ತದೆ ಎನ್ನುವ ನಂಬಿಕೆಯೂ ದೃಢವಾಗಿದೆ.

'ಗಾಂಧೀಜೀ ಅವರ ಅವ್ಯಕ್ತಕ್ಕೆ ಸುವ್ಯಕ್ತದಂತೆಯೂ ಗಾಂಧೀಜೀ ಅವರ ನಿರಾಕಾರಕ್ಕೆ ಸಾಕಾರದಂತೆಯೂ ಗಾಂಧೀಜೀ ಅವರ ದ್ವಿತೀಯ ದೇಹಾತ್ಮಗಳಂತೆಯೂ ಇದ್ದ' ದಿವಂಗತ ಭಾಯಿ ಮಹಾದೇವ ದೇಸಾಯರ ದಿವ್ಯವಾದ ನೆನಪಿಗೆ ಈ ದೃಶ್ಯಮಾಲೆ ಅರ್ಪಿತವಾಗಿರುವುದು ಸರ್ವಸೂಕ್ತ. ರಾಮಚಂದ್ರನಿಗೆ ಲಕ್ಷ್ಮಣ ನಿದ್ದಂತೆ, ಕೃಷ್ಣನಿಗೆ ಅರ್ಜುನನಿದ್ದಂತೆ, ಬುದ್ಧನಿಗೆ ಆನಂದ ನಿದ್ದಂತೆ, ಯೇಸುವಿಗೆ ಸೀಮೋನ ಪೇತ್ರನಿದ್ದಂತೆ ಮಹಾತ್ಮಾ ಗಾಂಧಿಯವರಿಗೆ ಮಹಾದೇವ ದೇಸಾಯರು ಇದ್ದರೆಂಬುದನ್ನು ಚಿತ್ರಿಸುವುದೇ ಈ 'ಸಂಭವಾಮಿ ಯುಗೇಯುಗೇ' ದೃಶ್ಯಮಾಲೆಯ ಉದ್ದೇಶ.

ಈ ಅಪೂರ್ವ ದೃಶ್ಯಮಾಲೆಯನ್ನು ಕೊಟ್ಟ ಶ್ರೀ. ರಾಜರತ್ನಂ ಅವರಿಗೆ ಕನ್ನಡಿಗರು ಚಿರಋಣಿಗಳು.

—ಮಂ.

## ಬಟ್ಟು

(ಬರೆದವನು – ಸೂಫಿ)

**ಗೆಳತಿ :**

ಸೂಕ್ಷ್ಮವಾದಾ ಬಟ್ಟನಿಡುತಿರುವ ಎಲೆ ಗೆಳತಿ
ನಿನ್ನ ಆ ಬೆರಳುಗಳ ಅಂದವನು ಗ್ರಹಿಸಿದೆನು.
ಎಲ್ಲ ಕಲೆಗಳ ಸಾರವಿದಕಾನು ಮರುಳಾಗಿ
ಮೌನತಾಳದ ಮುನ್ನ ಹೇಳುವೆನು ನಾ ಕೇಳು.

ಕನ್ನಡಿಯ ಇದಿರಿನಲಿ ನಿನಗೆ ನೀ ಬೆರಗಾಗಿ
ಏನು ಧ್ಯಾನದೊಳಿಂತು ಕುಳಿತಿರುವೆಯೋ ಕಾಣೆ.
ಮೂಡಿಹುದು ಮೈಬಳುಕಿನಂದವೆಲ್ಲವು ಕೇಳು
ತಿದ್ದಿದಾ ಕುರುಳಿನಲಿ ಎಲೆ ಗೆಳತಿ ಸಾಕೇಳು.

ನೋಡುವೆಯ ಹೂ ಮುಡಿಯ ಬೇರೆ ಕನ್ನಡಿ ಹಿಡಿದು
ನೋಡಿರುವೆನದ ನಾನು ಒಪ್ಪವಾಗಿದೆ ಕೇಳು.
ಕಲೆತಿಹುದು ಸೊಗಸಿನೊಂದಿಗೆ ಸೊಗಸು ಮೆಚ್ಚಿದೆನು
ಒಪ್ಪವಾಗಿದೆ ಹೂವು ಎಲೆ ಗೆಳತಿ ಸಾಕೇಳು.

ಗೆಳತಿಯರು ಕಾದಿಹರು ನಿನ್ನ ವ್ರತ ಫಲಿಸಿಹುದು
ಸೂರೆಗೊಂಬುದು ಮನವ ನಿನ್ನ ಆ ಒಯ್ಯಾರ.
ಎಲ್ಲ ಚೆಲುವಿನ ಒಟ್ಟು ಆ ಬಟ್ಟು ಬೇಡಿನ್ನು
ಹೆಚ್ಚಿನಾ ಸಾಧನೆಯು ಗೆಳತಿ ಸಾಕೇಳು.

**ಹಿರಿಯಾಕೆ :**

ಬೆಡಗು ಬಣ್ಣಗಳೆಷ್ಟು, ಬಹುಸೂಕ್ಷ್ಮ ಹೆಣ್ಣುಗಳು
ತಿದ್ದುತ್ತ ತಿದ್ದುತ್ತ ಕನ್ನಡಿಯ ಇದಿರಿನಲಿ
ಹೋಗುವುವು ತಾವಾಗಿ ಗಂಟೆ ಗಂಟೆಗಳುರುಳಿ.
ಬಳಬಳದು ಅಳಿಸಳಿಸಿ ಉಳಿದುದೇನದೊ ಕಾಣೆ.

ನಮ್ಮ ಆ ಕಾಲದಲಿ ಮೊಟ್ಟಮೊದಲಾಚಾರ
ಆಮೇಲೆ ಗುಣವರಿತು ಮತ್ತೆಲ್ಲಲಂಕಾರ.
ಆಗೆಮಗೆ ಅರಿಸಿನದ ಕುಂಕುಮದ ಅಧಿಕಾರ
ಹಣೆ ಅಷ್ಟು ಬಟ್ಟೆಷ್ಟು ಈಗಿನವರೊಯ್ಯಾರ.

ಬೆಳ್ದಿಂಗಳಾವರಿಸಿ ಬೆಳಗಿರಲು ಆಗಲ್ಲಿ
ಇದ್ದು ಇರದಾವೊಂದು ನವಿರಾದ ಬೆಡಗಿನಲಿ
ಭೂದೇವಿ ಆಯ್ದುಟ್ಟ ರೇಸಿಮೆಯು ಸೀರೆಯೋ
ಎನಿಸಿ ಕಣ್ಗೊಳಿಸಿತ್ತು ನದಿಯ ತೀರದ ವನವು

ಹಬ್ಬಿದಾ ವನದ ವಸ್ತ್ರಕೆ ತಾನು ಸೆರಗಾಗಿ
ಸೊಗಸಿನಲಿ ಬಳುಬಳುಕಿ ಹರಿದಿತ್ತು ಹೊಳೆನೀರು.
ಉದಯವಾದುದು ಅಲ್ಲಿ ಆ ಸಂಜೆ ಬೆಡಗಿನಲಿ
ಚೆಲುವೆಯರನನುಕರಿಸಿ ಭೂದೇವಿ ಕನಸೊಂದು.

ವೃಕ್ಷರಾಶಿಯ ಮೇಲೆ ತಿಳಿನೀಲಿಯಾಕಾಶ
ಒಪ್ಪಾಗಿ ಬಿಂಬಿಸಿತು ನಯವಾಂತ ಶುಭ್ರತೆಯ.
ಬಿಂಬಿಸುತ ಮನದ ಲವಲವಿಕೆಯನು, ತೋರಿತ್ತು
ಸೊಬಗಿನ ವಿಶಾಲತೆಯ ಚೆಲುವೆಯಳ ಹಣೆಯಂತೆ.

ತಿಳಿನೀಲಿ ಗಗನದಲಿ ತೊಳತೊಳಗಿ ರಾಜಿಸುತ
ಭೂಮಿದೇವಿಯ ಹಣೆಗೆ ತಿದ್ದಿಟ್ಟ ಚಂದ್ರಮನು
ಸೊಗಸಿರಲು ಬಟ್ಟನಂದದಿ ತಾನು, ನೆನೆಸಿದೆನು
ಚೆಲುವೆಯಳ ಹಣೆಬಟ್ಟು ಇದಕೆ ಸಮನೀಗೆಂದು.

**ಹಾಫಿಸ್ ಕವಿಯ ಶಿಷ್ಯ :**

ಚೆಲುವೆಯಳ ಹಣೆಬಟ್ಟು ಗಂಗೆ ಕಾವೇರಿಗಳ
ಸಾಕ್ಷ್ಯದಲಿ ಧಾರೆಯದಕಿಡಿಯ ಭಾರತಭೂಮಿ.
ಚೆಲುವಿನಾ ಸಂಗ್ರಹವು ನೀಲನದಿ ಟೈಗ್ರೀಸ
ಸಾಕ್ಷ್ಯದಲಿ ಧಾರೆಯಿದಕಿಸ್ಲಾಮ ಸಾಮ್ರಾಜ್ಯ.

**ಸೂಫಿ**

ನೂರಾರು ಒಡವೆಗಳ ಮೀರಿಸುವುದೀಬಟ್ಟು
ಕೇಳುವೆಯ ಈ ಒಂದು ಸಾರುವುದು ಏನೆಂದು?
ಪ್ರೇಮನಿಧಿ ಪರಮಾತ್ಮನಿಹನೊಬ್ಬನೇ ಎಂದು
ಎಲ್ಲ ಪ್ರೇಮಿಗಳೊಡೆಯ ಜಗಕೊಬ್ಬ ತಾನೆಂದು ;
ಹದಿನಾರು ಸಾವಿರದ ಸಂಖ್ಯೆಯಲಿ ಹೃದಯಗಳು,
ಅರಸುತಿಹವವುಯೆಲ್ಲ ಒಬ್ಬನನೆ ತಾವೆಂದು ;
ಮುಂಗುರುಳ ತೊಡಕಿನಲಿ ಬಳಬಳಸಿ ಬರಲೇನು
ಎಲ್ಲ ಬಳಸಿಗು ಇರುವ ಗುರಿಯೊಂದೆ ತಾನೆಂದು;
ಸಾರುವುದು ಈ ಬಟ್ಟು ಸಕಲ ಪ್ರೇಮದ ಸಾರ
ಐಕ್ಯವಾಗಿಹುದೆಲ್ಲ ಒಬ್ಬ ದೇವನೊಳೆಂದು.

## ಪ್ರಜಾಪ್ರತಿನಿಧಿ ಸಭೆಯಲ್ಲಿ ಕನ್ನಡ

"ಈ ದಿನ ಅಸೆಂಬ್ಲಿಯಲ್ಲಿ ಶ್ರೀ. ಜಿ. ಅಹ್ಮದ್‌ಖಾನ್ ಅವರು ಅರಿಕೆಯೊಂದನ್ನು ಹಿಂದೂಸ್ಥಾನಿಯಲ್ಲಿ ಹೇಳಲು ಆರಂಭಿಸಿದರು.

ಶ್ರೀ. ಭೂಪಾಲಂ ಚಂದ್ರಶೇಖರಯ್ಯನವರು ಆ ಸದಸ್ಯರು ಹಿಂದೂಸ್ಥಾನಿಯಲ್ಲಿ ಮಾತನಾಡುತ್ತಿರುವುದನ್ನು ವಿರೋಧಿಸಿದರು. ಈ ಸಭೆ ಹುಟ್ಟಿದ ದಿನದಿಂದ ಕನ್ನಡ ಇಲ್ಲವೆ ಇಂಗ್ಲಿಷು ಭಾಷೆಯನ್ನು ಮಾತ್ರ ಉಪಯೋಗಿಸುತ್ತಿರುವುದಾಗಿದೆ. ಆದರೆ ಈಗ ಹಿಂದೂಸ್ಥಾನಿ ಬಳಸಲಾಗದು ಎಂದು ಆಕ್ಷೇಪವೆತ್ತಿದರು.

ದಿವಾನರು ಶ್ರೀ. ಅಹ್ಮದ್‌ಖಾನ್ ಅವರನ್ನು ಕನ್ನಡದಲ್ಲಿಯೇ ಮಾತನಾಡಬೇಕೆಂದರು.

ಶ್ರೀ. ರಜ್ವಿ – ಸ್ವಾಮಿ, ಈ ಸಭೆಯಲ್ಲಿ ಒಂದೆರಡು ಸಲ ತಮಿಳಿನಲ್ಲಿ ಸಹ ಮಾತನಾಡಲು ಅವಕಾಶಕೊಟ್ಟಿದೆ. ಹಾಗೆಯೇ ಹಿಂದೂಸ್ಥಾನಿಯಲ್ಲಿ ಸಹ ಮಾತನಾಡಲು ಅವಕಾಶ ಕೊಡಿ.

ದಿವಾನರು – ಆ ವಿಚಾರ ಯೋಚಿಸೋಣ. ಈಗ ಸದಸ್ಯರು ಕನ್ನಡದಲ್ಲಿಯೇ ಮಾತನಾಡಲಿ.

ದಿವಾನರು ಹಾಗೆ ಹೇಳಿದರೂ ಸಹ ಶ್ರೀ. ಅಹಮದ್‌ಖಾನ್ ಅವರು ಹಿಂದೂಸ್ಥಾನಿಯಲ್ಲೇ ವಿದ್ಯಾಮಂತ್ರಿಗಳನ್ನುದ್ದೇಶಿಸಿ ಮಾತನಾಡಲು ಮೊದಲು ಮಾಡಿದರು.

ದಿವಾನರು—ಈ ಸಭೆಗೆ ನಾನು ಅಧ್ಯಕ್ಷ; ನೀವು ನನ್ನನ್ನು ಉದ್ದೇಶಿಸಿ ಮಾತನಾಡಿ. ವಿದ್ಯಾಸಚಿವರಾದ ಶ್ರೀ. ಇಮಾಂ ಅವರನ್ನು ಉದ್ದೇಶಿಸಿ ಮಾತನಾಡಬಾರದು. ಕನ್ನಡದಲ್ಲಿ ಮಾತನಾಡಿರೆಂದು ನಾನು ನಿಮ್ಮನ್ನು ಕೇಳಿದ್ದೇನೆ. ಕನ್ನಡದಲ್ಲಿಯೇ ನೀವು ಮಾತನಾಡಬೇಕು. ಭಾಷೆ ಚೆನ್ನಾಗಿ ಬರುವುದಿಲ್ಲವೆನ್ನಬಹುದು: ಬಂದ ಹಾಗೆ ಮಾತನಾಡಿ. ಎಲ್ಲರಿಗೂ ನೀವು ಹೇಳುವುದು ತಿಳಿಯಲಿ."

— ಮೈಸೂರು ಪತ್ರಿಕೆ (೨೫–೧೦–೪೨)

[ಕನ್ನಡ ನಾಡಿನಲ್ಲಿ ಕನ್ನಡ ಸರ್ಕಾರಿ ಭಾಷೆಯಾಗಬೇಕೆಂಬುದೇ ನಮ್ಮ ಅಭಿಮತ. ಹೋದ ಸಂಚಿಕೆಯನ್ನು ನೋಡಿ. —ಸಂ.]

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

| |
|---|
| ವಾರ್ಷಿಕ ಚಂದಾ: ರೂ. ೧-೮-೦ |
| ಪರಿಷತ್ತಿನ ಸದಸ್ಯರಿಗೆ ಉಚಿತ |
| ಅಂಚೆ ವೆಚ್ಚ ಬೇರೆ: ಆಣೆ ೧॥ |
| ಬಿಡಿ ಪತ್ರಿಕೆ: ೬ ಕಾಸು |




ಸಂಪಾದಕ:
ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್.

| |
|---|
| ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮–೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ. |

ಸಂಪುಟ ೫

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ

ಬೆಂಗಳೂರು: ಶುಕ್ರವಾರ, ನವೆಂಬರ್ ೬, ೧೯೪೨

ಸಂಚಿಕೆ ೩

## ಗೀತೆಯೂ ನಿರ್ಭೀತಿಯೂ

(ಮೂಲ ಲೇಖಕರು– ಗಾಂಧೀಜೀ. ೧೯೩೦)

ಎಲ್ಲಾ ಸಾಧ್ಯವಾದ ದೃಷ್ಟಿಸ್ಥಾನಗಳಿಂದಲೂ ಅರ್ಥಮಾಡಿಕೊಳ್ಳಲು ಯತ್ನಿಸಿ, ಹೀಗೆ ಗೀತೆಯನ್ನು ಕುರಿತು ಸದಾ ಧ್ಯಾನಿಸುತ್ತಿದ್ದರೆ, ನಾವು ಅದರೊಡನೆ ಒಂದಾಗಬೇಕು. ನನಗಾದರೋ, ನಾನು ತೊಂದರೆಗಳಿಗೆ ಒಳಗಾದಾಗಲ್ಲೆಲ್ಲಾ ನನ್ನ ತಾಯಿ ಗೀತೆಯ ಬಳಿಗೆ ಓಡುತ್ತೇನೆ; ಇದುವರೆಗೆ ಎಂದೂ ಆಕೆ ನನಗೆ ಸಮಾಧಾನ ಕೊಡಲು ತಪ್ಪಿಲ್ಲ. ನಾನು ಗೀತೆಯನ್ನು ದಿನದಿನಕ್ಕೆ ಹೇಗೆ ಅರ್ಥ ಮಾಡಿಕೊಳ್ಳುವೆನೆಂಬ ದಾರಿ ತಿಳಿಯುವುದಾದರೆ, ಗೀತೆಯಿಂದ ಸಮಾಧಾನ ಪಡೆಯುತ್ತಿರುವವರು ಹೆಚ್ಚಿನ ಸಹಾಯ ಪಡೆಯಬಹುದು, ತೀರ ಹೊಸದಾದುದು ಏನಾದರೂ ಕಾಣಬಹುದು.

ಗೀತೆಯ ಹನ್ನೆರಡನೆಯ ಅಧ್ಯಾಯ ಭಕ್ತಿಯೋಗವನ್ನು– ಭಕ್ತಿಯ ಮೂಲಕ ಪರಮಾತ್ಮನ ಸಾಕ್ಷಾತ್ಕಾರವನ್ನು–ತಿಳಿಸುತ್ತದೆ. ಮಾಡಬೇಕಾದ ಪಂಚಯಜ್ಞಗಳಲ್ಲಿ ಒಂದೆಂದು ಈ ಅಧ್ಯಾಯವನ್ನು ಹೃದ್ಗತವಮಾಡಿ, ಅದನ್ನು ಕುರಿತು ಧ್ಯಾನಿಸಬೇಕೆಂದು, ಮದುವೆಯ ಸಮಯದಲ್ಲಿ ದಂಪತಿಗಳಿಗೆ ಹೇಳುತ್ತೇವೆ. ಭಕ್ತಿಯಿಂದ ಹೊರತಾಗಿ ಕರ್ಮ ಜ್ಞಾನಗಳು ಕಾವಿಲ್ಲದೆ ಶುಷ್ಕವಾಗಿರುತ್ತವೆ; ಅವೇ ಸಂಕಲೆಗಳೂ ಆದಾವು ...

ಇತರ ಆರ್ಯಗುಣಗಳ ಬೆಳೆವಣಿಗೆಗೆ ನಿರ್ಭೀತಿ ಮುಖ್ಯ. ನಿರ್ಭೀತಿಯಿಲ್ಲದೆ ಸತ್ಯವನ್ನು ಅರಸುವುದಾಗಲಿ ಪ್ರೀತಿಯನ್ನು ಪಾಲಿಸುವುದಾಗಲಿ ಹೇಗೆ? ಪ್ರಿಯತಮನೆನ್ನುವಂತೆ "ಹರಿಯ ಮಾರ್ಗ ಧೀರರ ಮಾರ್ಗ, ಹೇಡಿಗಳದಲ್ಲ." ಇಲ್ಲಿ ಹರಿ ಎಂದರೆ ಸತ್ಯ; ಧೀರರೆಂದರೆ ಕೇವಲ ಹೇಡಿಗಳು ಮೆರೆಸುವ ಕತ್ತಿ, ಬಂದೂಕ, ಮತ್ತಿತ್ತರ ವಿಷಯಾಸ್ತ್ರಶಸ್ತ್ರಗಳನ್ನು ಪಡೆದವರಲ್ಲ, ನಿರ್ಭೀತಿಯಿಂದ ಸಜ್ಜಿತರಾದವರು.

ನಿರ್ಭೀತಿಯೆಂಬುದು ಕಾಯಿಲೆ ಬರುತ್ತದೆ, ದೇಹಹಿಂಸೆಯಾಗುತ್ತದೆ, ಸಾವು ಬರುತ್ತದೆ, ಆಸ್ತಿ ಹೋಗುತ್ತದೆ, ಆಪ್ತರನ್ನೂ ಇಷ್ಟರನ್ನೂ ಕಳೆದುಕೊಳ್ಳುತ್ತೇವೆ, ಹೆಸರು ಹಾಳಾಗುತ್ತದೆ, ಅಪಚಾರವಾಗುತ್ತದೆ ಎಂಬ ಇದೇ ರೀತಿಯ ಬಾಹ್ಯಭೀತಿಗಳಿಂದ ಬಿಡುಗಡೆ ಎಂಬ ಅರ್ಥವ್ಯಾಪ್ತಿಯನ್ನು ಸೂಚಿಸುತ್ತದೆ. ಸಾಮಾನ್ಯವಾಗಿ, ಆದರೂ ತಪ್ಪಾಗಿ, ಎಣಿಸಿಕೊಂಡಿರುವಂತೆ ಮರಣಭಯವನ್ನು ಮೀರಿದವನು ಇತರ ಎಲ್ಲಾ ಭಯಗಳನ್ನೂ ದಾಟುವುದಿಲ್ಲ.

ನಾವು ಕೆಲವರು ಸಾವಿಗೆ ಅಂಜುವುದಿಲ್ಲ, ಆದರೆ ಜೀವನದ ಸಣ್ಣದುಃಖಗಳಿಂದ ಓಡಿಹೋಗುತ್ತೇವೆ. ಕೆಲವರು ತಾವೇ ಸಾಯಲು ಸಿದ್ಧರಿದ್ದಾರೆ, ಆದರೆ ತಮಗೆ ಪ್ರಿಯರಾದವರನ್ನು ತಮ್ಮಿಂದ ಅಗಲಿಸಿದರೆ ತಾಳಲಾರರು. ಕೆಲವು ಕೃಪಣರು ಇದೆಲ್ಲವನ್ನೂ ಸಹಿಸುವರು, ತಮ್ಮ ಜೀವವನ್ನಾದರೂ ಬಿಟ್ಟುಕೊಟ್ಟಾರಲ್ಲದೆ ತಮ್ಮ ಸ್ವತ್ತನ್ನು ಮಾತ್ರ ಬಿಡರು. ಇತರರು ತಮ್ಮ ಕಾಲ್ಪನಿಕ ಮರ್ಯಾದೆಯನ್ನು ಎತ್ತಿಹಿಡಿಯುವುದಕ್ಕಾಗಿ ಎಷ್ಟು ಕುಕಾರ್ಯಗಳನ್ನಾದರೂ ಮಾಡುವರು. ಕೆಲವರು, ಲೋಕದ ನಿಂದೆಯನ್ನು ಪಡೆದೇವೆಂಬ ಹೆದರಿಕೆ ಮಾತ್ರದಿಂದಲೇ ತಮ್ಮೆದುರಿಗೆ ಸ್ಪಷ್ಟವಾಗಿ ಬಿದ್ದಿರುವ ನೇರವಾದ, ಇಕ್ಕಟ್ಟಾದ ಮಾರ್ಗದಿಂದ ಆಚೆ ತಿರುಗುವರು.

ಸತ್ಯಾನ್ವೇಷಿ ಈ ಎಲ್ಲಾ ಭೀತಿಗಳನ್ನೂ ಜಯಿಸಬೇಕು. ಸತ್ಯದ ಅನ್ವೇಷಣೆಯಲ್ಲಿ ಹರಿಶ್ಚಂದ್ರ ಮಾಡಿದಂತೆಯೇ ತಾನು ತನ್ನ ಸರ್ವಸ್ವವನ್ನೂ ಅರ್ಪಿಸಲು ಸಿದ್ಧನಾಗಿರತಕ್ಕದ್ದು. ಹರಿಶ್ಚಂದ್ರನ ಆಖ್ಯಾನ ಬರಿಯ ಉಪಮಾನಕಥೆಯಿರಬಹುದು; ಆದರೆ ಪ್ರತಿಯೊಬ್ಬ ಅನ್ವೇಷಕನೂ ತನ್ನ ಸ್ವಾನುಭವಕ್ಕಾಗಿ ಅದರ ಸತ್ಯಕ್ಕೆ ಸಾಕ್ಷಿಯಾಗುವನು; ಅದರಿಂದಲೇ ಆ ಕಥೆ ಬೇರಾವ ಚಾರಿತ್ರಿಕ ಘಟನೆಗಿಂತಲೂ ಅನಂತಪಾಲು ಅಮೂಲ್ಯವಾದುದು, ಅದರಿಂದಲೇ ನಾವು ಅದರ ನೀತಿಯನ್ನು ಕುರಿತು ಚಿಂತನೆ ಮಾಡುವುದು ಮೇಲು.

ಪರಿಪೂರ್ಣ ನಿರ್ಭೀತಿಯನ್ನು ಪಡೆಯುವುದು ಪರಮವನ್ನು ಸಾಕ್ಷಾತ್ಕರಿಸಿಕೊಂಡವನಿಂದ ಮಾತ್ರ ಸಾಧ್ಯ; ಏಕೆಂದರೆ ಮಾಯೆಗಳಿಂದ ಮುಕ್ತಿಹೊಂದುವುದರ ತುತ್ತತುದಿ ಅದರಲ್ಲಿ ಧ್ವನಿತವಾಗಿದೆ. ಆದರೆ ದೃಢವಾದ ಸದಾ ಪ್ರಯತ್ನದಿಂದಲೂ, ಆತ್ಮವಿಶ್ವಾಸವನ್ನು ಹೆಚ್ಚಿಸಿಕೊಳ್ಳುವುದರಿಂದಲೂ ಈ ಗುರಿಯ ಕಡೆಗೆ ಸದಾ ಮುಂದುವರಿಯಬಹುದು. ನಾನು ಮೊತ್ತಮೊದಲೇ ಸ್ಥಾಪಿಸಿರುವಂತೆ, ನಾವು ಬಾಹ್ಯಭೀತಿಗಳನ್ನು ಬಿಡಬೇಕು.

ಅಂತಶ್ಶತ್ರುಗಳ ವಿಷಯದಲ್ಲಾದರೋ ನಾವು ಅವುಗಳಿಗೆ ಹೆದರಿ ನಡೆಯಬೇಕು. ಕಾಮ, ಕ್ರೋಧ ಅಂಥವಕ್ಕೆ ನಾವು ಹೆದರುವುದು ಸರಿ. ಪಾಳಯದೊಳಗಿನ ಈ ದ್ರೋಹಿಗಳನ್ನು ನಾವು ಜಯಿಸಿದೊಡನೆ, ಬಾಹ್ಯಭೀತಿಗಳು ತಮ್ಮಷ್ಟಕ್ಕೆ ತಾವೇ ನಿಲ್ಲುವುವು. ಎಲ್ಲ ಭೀತಿಗಳೂ ದೇಹ ಕೇಂದ್ರವಾಗಿ ಸುತ್ತಲೂ ಸುತ್ತುವುವು; ಅದರಿಂದಲೇ ದೇಹದ ಆಸಕ್ತಿ ಕಳೆದುಕೊಂಡ ಒಡನೆ ಅವು ಮಾಯವಾಗುವುವು.

ಹೀಗೆ, ಎಲ್ಲ ಭಯವೂ ನಮ್ಮ ದೃಷ್ಟಿಯ ನಿರಾಧಾರವಾದ ನೆಯ್ಗೆಯೆಂದು ಕಾಣುವೆವು. ಸಂಪತ್ತು, ಮಡದಿ ಮಕ್ಕಳು, ದೇಹ ಇವುಗಳ ಆಸಕ್ತಿಯನ್ನು ನಾವು ಒದರಿಬಿಟ್ಟಾಗ ಭೀತಿಗೆ ನಮ್ಮ ಹೃದಯದಲ್ಲಿ ಎಡೆಯಿಲ್ಲ. ಸಂಪತ್ತೂ, ಮಡದಿ ಮಕ್ಕಳೂ, ದೇಹವೂ ಅಲ್ಲಿ ಹಾಗೆಯೇ ಇರುವುವು; ಅವುಗಳ ಬಗೆಗೆ ನಮ್ಮ ಮನೋಭಾವವನ್ನು ಮಾರ್ಪಡಿಸಬೇಕಷ್ಟೆ. ಇವೆಲ್ಲಾ ನಮ್ಮವಲ್ಲ, ದೇವರವು. ಈ ಲೋಕದಲ್ಲಿ ಯಾವುದೂ ನಮ್ಮದಲ್ಲ. ಸ್ವತಃ ನಾವು ಕೂಡ ಅವನವರು. ಹಾಗಾದರೆ, ಏಕೆ ನಾವು ಭಯಕ್ಕೆ ಎಡೆಗೊಡಬೇಕು?

ಉಪನಿಷತ್ತು ಅದರಿಂದಲೇ, "ಅನುಭೋಗಿಸುವಾಗಲೇ ವಸ್ತುಗಳಲ್ಲಿ ಆಸಕ್ತಿಯನ್ನು ವರ್ಜಿಸು" ಎಂದು ನಿರ್ದೇಶಿಸುತ್ತದೆ. ಹಾಗೆಂದರೆ, ನಾವು ಅವುಗಳಲ್ಲಿ ಒಡೆಯರಂತೆ ಅನುರಕ್ತರಾಗಬಾರದು; ಕೇವಲ ಧರ್ಮದರ್ಶಿಗಳಂತಿರಬೇಕು. ಯಾರ ಪರವಾಗಿ ನಾವು ಅವುಗಳನ್ನು ಗ್ರಹಿಸಿದ್ದೇವೆಯೋ ಆತ, ಎಲ್ಲಾ ಆಗಂತುಕರನ್ನೂ ಎದುರಿಸಿ ರಕ್ಷಿಸುವುದಕ್ಕೆ ಅಗತ್ಯವಾದ ಬಲವನ್ನೂ ಆಯುಧಗಳನ್ನೂ ನಮಗೆ ಕೊಡುವನು. ಹೀಗೆ ನಾವು ಒಡೆಯರಾಗಿರುವುದು ಬಿಟ್ಟು, ನಮ್ಮ ಕಾಲ ಕೆಳಗಿನ ಕೇವಲ ದೂಳಿಗಿಂತಲೂ ವಿನೀತರಾಗಿ, ಆಳುಗಳ ಮಟ್ಟಕ್ಕೆ ನಮ್ಮನ್ನು ಇಳಿಸಿಕೊಂಡಾಗ ಎಲ್ಲಾ ಭೀತಿಗಳೂ ಮಂಜಿನಂತೆ ಉರುಳಿ ಹೋಗುವುವು; ನಾವು ಅವಿನಾಶಿಯಾದ ಶಾಂತಿಯನ್ನು ಪಡೆಯುವೆವು, ಸತ್ಯನಾರಾಯಣನನ್ನು ಸಾಕ್ಷಾತ್ತಾಗಿ ಕಾಣುವೆವು.

(ಅನುವಾದಕ: ರಾಜರತ್ನಂ)

# ಕನ್ನಡ ನುಡಿ

**ಶುಕ್ರವಾರ, ನವೆಂಬರ್ ೬, ೧೯೪೩**

## ಪೂರ್ವದೇಶಗಳ ಸಾಹಿತ್ಯದ ವ್ಯಾಸಂಗ

ಲಂಡನ್ನಿನ ಈಸ್ಟ್ ಇಂಡಿಯಾ ಅಸೋಸಿಯೇಷನ್ ಮತ್ತು ರಾಯಲ್ ಎಂಪೈರ್ ಸೊಸೈಟಿಗಳ ಆಶ್ರಯದಲ್ಲಿ ಈಚೆಗೆ ನಡೆದ ಸಭೆಯಲ್ಲಿ ಭಾರತ ಸಚಿವರಾದ ಕರ್ನಲ್ ಎಮರಿಯವರು ಮಾತ ನಾಡುತ್ತ ಪಾಶ್ಚಾತ್ಯರು ಪೂರ್ವರಾಷ್ಟ್ರಗಳ ಸಾಹಿತ್ಯದ ವ್ಯಾಸಂಗಕ್ಕೆ ಇನ್ನೂ ಹೆಚ್ಚಿನ ಗಮನವನ್ನು ಕೊಡಬೇಕೆಂದು ಒತ್ತಿಹೇಳಿದರು: "ವಾಣಿಜ್ಯ ದೃಷ್ಟಿಯಿಂದ ಮತ್ತು ಅದಕ್ಕೂ ಹೆಚ್ಚು ಮುಖ್ಯವಾದ ಅಂತರ್‍ರಾಷ್ಟ್ರೀಯ ಸಂಪರ್ಕ ಒಡಂಬಡಿಕೆಗಳ ದೃಷ್ಟಿಯಿಂದ ಈ ವ್ಯಾಸಂಗ ಬಹು ಆಗತ್ಯ. ಈಗಿನ ಯುದ್ಧ ಮುಗಿದ ಮೇಲೆ, ೧೯ನೆಯ ಶತಮಾನದ ಭೌತದೃಷ್ಟಿಕೋನವನ್ನು ಬಿಟ್ಟು, ಉದಾರ ಭಾವನೆಯಿಂದ ಈ ಪೂರ್ವರಾಷ್ಟ್ರ ಸಾಹಿತ್ಯಗಳ ವ್ಯಾಸಂಗ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸುತ್ತೇವೆ ಎಂದು ನಂಬಿದ್ದೇನೆ."

ಲಾರ್ಡ್ ಹೈಲಿಯವರು, ಈ ವ್ಯಾಸಂಗಕ್ಕೆ ಇನ್ನೂ ವಿಶಾಲ ವಾದ ತಳಪಾಯವನ್ನು ಹಾಕುವ ಕಾಲ ಬಂದಿದೆಯೆಂದು ತಮ್ಮ ಭಾಷಣದಲ್ಲಿ ಹೇಳಿದರು. "ನಾವು ಗ್ರೀಕ್, ಲ್ಯಾಟಿನ್ ಭಾಷಾ ಸಾಹಿತ್ಯಗಳನ್ನು ಕಲಿಯಲು ಗೊತ್ತುಮಾಡಿರುವ ಹೊತ್ತಿನಲ್ಲಿ ಸ್ವಲ್ಪ ಭಾಗವನ್ನು ಪೂರ್ವರಾಷ್ಟ್ರಗಳ ಸಾಹಿತ್ಯದ ಓದಿಗೂ ಕೊಟ್ಟರೆ ಭಾರತದೊಂದಿಗೆ ಬ್ರಿಟಿಷರ ಸಂಬಂಧ ಉತ್ತಮಗೊಳ್ಳುತ್ತದೆ. ಹಾಗೆಯೆ ಬರ್ಮ ಸಿಂಹಳದ್ವೀಪಗಳೊಂದಿಗೂ ನಮ್ಮ ರಾಜಕೀಯ ಸಂಬಂಧ ಮಾರ್ಪಡುತ್ತದೆ. ರಾಜಕೀಯ ಕಟ್ಟುಗಳು ಸಡಿಲ ವಾಗುತ್ತ ಸಂಸ್ಕೃತಿಯ ಕೊಂಡಿಗಳು ಬಲಗೊಳ್ಳುವಂತಾಗು ವುದಕ್ಕೂ ಈ ಬಗೆಯ ವ್ಯಾಸಂಗ ಅತ್ಯಗತ್ಯ, ಅನಿವಾರ್ಯ. ಈ ಮಾತು ಚೀನಾ ದೇಶದೊಂದಿಗೆ ನಮ್ಮ ಸಂಬಂಧ ಉತ್ತಮಪಡು ವುದಕ್ಕೂ ಅನ್ವಯಿಸುತ್ತದೆ."

ಲಂಡನ್ನಿನಲ್ಲಿ ಭಾರತೀಯ ಭಾಷೆಗಳನ್ನು ಕಲಿಯಲು ಅವಕಾಶ ಈಗ ಇದೆ. ಅಲ್ಲಿ ಕನ್ನಡಕ್ಕೂ ವಿದ್ಯಾಶಾಲೆಯಲ್ಲಿ ಒಂದು ಸ್ಥಾನವಿದೆ. ಇದು ಇನ್ನೂ ಹೆಚ್ಚಬೇಕು; ಆಳವಾಗಬೇಕು. ಮುಂದೆ ಇಡಿಯ ಭಾರತ ಸ್ವತಂತ್ರವಾಗಿ, ಒಡೆದುಹೋಗಿರುವ ಕರ್ನಾಟಕ ಒಂದು ಪ್ರಾಂತವಾಗಿ ರಚನೆಯಾಗುವ ಕಾಲ ಬಂದಾಗ, ಶತಮಾನಗಳಿಂದ ಹಿರಿಯ ಸಾಹಿತ್ಯ ಸಂಸ್ಕೃತಿಗಳಿಂದ ಬೆಳೆದು ಬಂದಿರುವ ನಮ್ಮ ಕನ್ನಡ ನಾಡೂ ತನ್ನ ಅಳಿಲುಸೇವೆ ಸಲ್ಲಿಸಿ ಪ್ರಪಂಚದ ವಿವಿಧ ರಾಷ್ಟ್ರಗಳ ನಂಟಿಗೂ ಒಡಂಬಡಿಕೆಗೂ ನೆರವಾಗುವುದರಲ್ಲಿ ಸಂಶಯವಿಲ್ಲ.

## ಕಂಬನಿ

ಪರಿಷತ್ತಿನ ಸದಸ್ಯರಾಗಿದ್ದು ಅನೇಕ ಕನ್ನಡ ಚಟುವಟಿಕೆ ಗಳಲ್ಲಿಯೂ ವಿದ್ಯಾಸಂಸ್ಥೆಗಳಲ್ಲಿಯೂ-ಸಹಕರಿಸುತ್ತಿದ್ದ ರಾಜಧರ್ಮ ಪ್ರಸಕ್ತ **ಶ್ರೀ. ಶಂಕರನಾರಾಯಣರಾಯರವರು** ಕಳೆದ ತಿಂಗಳು ಸ್ವರ್ಗಸ್ಥರಾದರು.

ದಿವಂಗತರು ಪರಿಷತ್ತಿನಲ್ಲಿ ಆಗಿಂದಾಗ್ಗೆ ನಡೆಯುವ ಸಾಹಿತ್ಯ ಪರೀಕ್ಷೆಗಳು, ಗಮಕಗೋಷ್ಠಿ ಮುಂತಾದ ಚಟುವಟಿಕೆಗಳಲ್ಲಿ ಆಸಕ್ತಿ ತೋರಿಸಿ, ಸಭೆಗಳಲ್ಲಿ ಪ್ರಧಾನ ಪಾತ್ರವನ್ನು ವಹಿಸಿ ಉಪಕಾರ ಮಾಡುತ್ತ ಬಂದವರು.

ಸಂಸ್ಥಾನದ ಅಗ್ರಗಣ್ಯರಾದ ನ್ಯಾಯವಾದಿಗಳಾಗಿದ್ದು ಪ್ರಜಾ ಪ್ರತಿನಿಧಿ ಸಭೆ, ನ್ಯಾಯವಿಧಾಯಕ ಸಭೆ, ದೇಶೀಯ ಶಿಕ್ಷಣ ಸಮಿತಿ ಮುಂತಾದ ಸಾರ್ವಜನಿಕ ಸಂಸ್ಥೆಗಳ ಕಾರ್ಯಕಲಾಪಗಳಲ್ಲಿ ಸಹಕರಿಸಿ ದೇಶಸೇವೆ ಮಾಡಿ ಜನಕ್ಕೆ ಪ್ರಿಯರಾದರು. ಇವರು ತಮ್ಮ ನ್ಯಾಯಶಾಸ್ತ್ರ ನೈಪುಣ್ಯದಿಂದ ಸರ್ಕಾರದವರ ಮತ್ತು ಶ್ರೀಮನ್ಮಹಾರಾಜರವರ ಪ್ರೇಮಕ್ಕೆ ಪಾತ್ರರಾಗಿ 'ರಾಜಧರ್ಮ ಪ್ರಸಕ್ತ' ಎಂಬ ಪ್ರಶಸ್ತಿಯನ್ನು ಸಂಪಾದಿಸಿದರು.

ಕಳೆದ ೨೦ ವರ್ಷಗಳಿಂದಲೂ ಮೈಸೂರು ಸ್ಕೌಟ್ ಚಳವಳಿ ಯಲ್ಲಿ ಭಾಗವಹಿಸಿ, ಆ ಚಳವಳಿ ಸಂಸ್ಥಾನದಲ್ಲೆಲ್ಲ ಯಶಸ್ವಿಯಾಗಿ ಹರಡಲು ಸಹಾಯಮಾಡಿ, ೧೯೪೦ರಲ್ಲಿ ಲಾರ್ಡ್ ಬೇಡನ್ ಪೊವೆಲ್ ಅವರಿಂದ 'ಸಿಲ್ವರ್ ವುಲ್ಫ್' ಎಂಬ ಲಾಂಛನವನ್ನು ಪ್ರಶಸ್ತಿಯಾಗಿ ಪಡೆದರು.

ದಿವಂಗತರ ದೀರ್ಘಕಾಲದ ಸಾರ್ವಜನಿಕ ಸೇವೆ ಜನಗಳಿಗೆ ಮೇಲ್ಪಂಕ್ತಿಯಾಗಿದೆ. ದಿವಂಗತರ ಆತ್ಮಕ್ಕೆ ಸದ್ಗತಿ ದೊರೆಯಲಿ!

* * *

ಈ ದುಃಖದ ಮೇಲೆ ಮತ್ತೊಂದು ದುಃಖವಾಗಿ, ಇನ್ನೊಬ್ಬ ಕನ್ನಡ ಮಹನೀಯರಾದ **ಪಂಡಿತ ತಾರಾನಾಥರು** ಕಾಲವಾದ ರೆಂದು ತಿಳಿಸಲು ನಮಗೆ ವ್ಯಥೆಯಾಗುತ್ತದೆ. ಪಂಡಿತ ತಾರಾನಾಥರು ತಮ್ಮ ಬಹುಮುಖವಾದ ಪಾಂಡಿತ್ಯದಿಂದ ಕನ್ನಡಿಗರನ್ನು ಆಕರ್ಷಿಸಿದ್ದರು. ಕನ್ನಡ, ಸಂಸ್ಕೃತ, ಇಂಗ್ಲಿಷ್, ಪರ್ಷಿಯನ್ ಮುಂತಾದ ಹಲವು ಭಾರತೀಯ ಮತ್ತು ಪಾಶ್ಚಾತ್ಯ ಭಾಷೆ ಸಾಹಿತ್ಯಗಳಲ್ಲಿ ಅವರಿಗೆ ಆಳವಾದ ಪಾಂಡಿತ್ಯವಿತ್ತು. ಅವರು ಪ್ರಸಿದ್ಧ ವಾಗ್ಮಿಗಳು, ಸಂಗೀತ ವಿದ್ವಾಂಸರು. ಕನ್ನಡದಲ್ಲಿ ವಿದ್ವತ್ಪೂರ್ಣವಾದ 'ಧರ್ಮಸಂಭವ' ಮುಂತಾದ ಗ್ರಂಥಗಳನ್ನೂ, 'ಪ್ರೇಮ' ಪತ್ರಿಕೆಯ ಸಂಪಾದಕರಾಗಿ ವಿಚಾರಪ್ರಚೋದಕವಾದ ಲೇಖನಗಳನ್ನೂ ಬರೆದರು.

ಆಯುರ್ವೇದದಲ್ಲಿ ಅವರಿಗೆ ತುಂಬಾ ಆಸಕ್ತಿ. ಸ್ವತಃ ಹಿರಿಯ ಆಯುರ್ವೇದ ಪಂಡಿತರು. ಪ್ರೇಮಾಯತನ ಆಶ್ರಮ ವನ್ನು ಸ್ಥಾಪಿಸಿ ಸಾವಿರಾರು ಜನರಿಗೆ ಆರೋಗ್ಯ ಲಾಭವನ್ನು ದೊರಕಿಸಿ ಕೊಟ್ಟು ಉಪಕಾರ ಮಾಡಿದರು.

ಅವರ ಸಾರ್ವಜನಿಕ ಸೇವೆಯ ಗುರುತಾಗಿ ತುಂಗಭದ್ರೆಯ ಪ್ರೇಮಾಯತನ ಆಶ್ರಮವೂ ಪ್ರೇಮ ವಿದ್ಯಾಪೀಠವೂ ನೆಲೆ ಗೊಂಡಿವೆ. ಅವರ ಮಿತ್ರರು ಶಿಷ್ಯರು ಈ ಸಂಸ್ಥೆಗಳನ್ನು ಬೆಳಸು ವುದೇ ಮೃತರ ಆತ್ಮಕ್ಕೆ ಅತ್ಯಂತ ಪ್ರಿಯವಾದುದೆಂದು ಧಾರಾಳ ವಾಗಿ ಹೇಳಬಹುದು. ಜ್ಞಾನಪ್ರಸಾರಕ್ಕಾಗಿ ಹುಟ್ಟಿದ ಈ ಸಂಸ್ಥೆ ಗಳು ಅಭಿವೃದ್ಧಿಗೆ ಬಂದು ನಾಡಿನಲ್ಲಿ ಪಂಡಿತ ತಾರಾನಾಥರ ಹೆಸರು ಚಿರಸ್ಮರಣೀಯವಾಗುವಂತಾಗಲೆಂದು ನಾವು ಭಗವಂತ ನಲ್ಲಿ ಪ್ರಾರ್ಥಿಸುತ್ತೇವೆ. ದಿವಂಗತರ ಆತ್ಮಕ್ಕೆ ಸದ್ಗತಿ ದೊರೆಯಲಿ!

## ತಾತಯ್ಯನವರ ಸ್ಮಾರಕ ಬಹುಮಾನ

### ಮೈಸೂರು ವಿಶ್ವವಿದ್ಯಾನಿಲಯ ನಿಧಿ

ಮೈಸೂರು ಸಂಸ್ಥಾನದ ಏಳಿಗೆಗೆ ಬಹುಮಟ್ಟಿಗೆ ದುಡಿದ, ವೃದ್ಧ ಪಿತಾಮಹರೆಂದು ಅಕ್ಕರೆಯಿಂದ ಜನ ಕರೆಯುತ್ತಿದ್ದ, ದಿವಂಗತ ಶ್ರೀ. ಎಂ. ವೆಂಕಟಕೃಷ್ಣಯ್ಯನವರ ಹೆಸರಿನಲ್ಲಿ ಒಬ್ಬ ಮಹನೀಯರು ಮೈಸೂರು ವಿಶ್ವವಿದ್ಯಾನಿಲಯಕ್ಕೆ ೧,೦೦೦ ರೂ.ಗಳನ್ನು ದಾನಮಾಡಿ ಇದರ ಮೇಲಿನ ಬಡ್ಡಿಯಿಂದ ಈಗ ಬಿ. ಎ. ಪರೀಕ್ಷೆಯಲ್ಲಿ **ರಾಜನೀತಿ** ಶಾಸ್ತ್ರಭಾಗವನ್ನು ಓದಿ ಪ್ರಥಮಸ್ಥಾನ ಪಡೆದವರಿಗೆ ಬಹುಮಾನ ಕೊಡಲಾಗುವುದು. ಮುಂದೆ **ಪತ್ರಿಕೋದ್ಯಮವನ್ನು** ವಿಶ್ವವಿದ್ಯಾ ನಿಲಯದಲ್ಲಿ ಪಾಠ ವಿಷಯವಾಗಿ ಏರ್ಪಡಿಸಿದ ಮೇಲೆ ಈ ವಿಷಯದಲ್ಲಿ ಪ್ರಥಮಸ್ಥಾನ ಪಡೆದವರಿಗೆ ಬಹುಮಾನ ಕೊಡಲಾಗುವುದು.

[ಘನ ಉದ್ದೇಶದಿಂದ ದತ್ತಿಕೊಟ್ಟಿರುವ ಈ ಮಹನೀಯರನ್ನು ನಾವು ಅಭಿನಂದಿಸುತ್ತೇವೆ. ಹೀಗೆಯೆ ಔದಾರ್ಯದ ಬೆಂಬಲದಿಂದ ವಿಶ್ವವಿದ್ಯಾನಿಲಯದ ನಿಧಿ ಬೆಳೆದು ಅಲ್ಲಿಯ ಶಿಕ್ಷಣ ಬಹುಮುಖವಾಗಿ ಹರಡಲಿ! — ಸಂ.]

## ವಿಮರ್ಶೆ

### ಹೊಸ ಪದ್ಧತಿಯ ಬಸವೇಶ್ವರನ ವಚನಗಳು

ರಾವ್‌ಬಹದ್ದೂರ್ ಶ್ರೀ. ಫ.ಗು. ಹಳಕಟ್ಟಿ, ಬಿ.ಎ.,ಎಲ್‌ಎಲ್‌ಬಿ. ಅವರು ಹಲವಾರು ವರ್ಷಗಳಿಂದ ಪರಿಶೋಧನೆ ಮಾಡುತ್ತ ವೀರಶೈವ ಸಾಹಿತ್ಯ ಗ್ರಂಥಗಳನ್ನು ಪ್ರಕಟಿಸಿ ಲೋಕೋಪಕಾರ ಮಾಡುತ್ತಿರುವುದು ಕನ್ನಡಿಗರಿಗೆಲ್ಲ ತಿಳಿದಿದೆ. ಅವರು ೧೯೨೬ರಲ್ಲಿ 'ಶಿವಾನುಭವ' ತ್ರೈಮಾಸ ಪತ್ರಿಕೆಯನ್ನು ಹೊರಡಿಸಿ ಆ ಮೂಲಕ ಬಸವೇಶ್ವರ, ಮಹಾದೇವಿಯಕ್ಕ ಮುಂತಾದ ವಚನಕಾರರ ಕೃತಿಗಳನ್ನು ಬೆಳಕಿಗೆ ತಂದರು.

ಈಗ ಬಸವೇಶ್ವರನ ವಚನಗಳನ್ನು ಭಕ್ತಿ, ನೀತಿ, ಪ್ರಾರ್ಥನೆ ಮುಂತಾಗಿ ಹೊಸ ಪದ್ಧತಿಯಲ್ಲಿ ವಿಂಗಡಿಸಿ ಪ್ರಕಾಶಪಡಿಸಿದ್ದಾರೆ. ಈ ವಚನಗಳಲ್ಲಿ ವೀರಶೈವಾಚಾರಕ್ಕೆ ಸಂಬಂಧಿಸಿದ ವಿಶಿಷ್ಟಾರ್ಥವುಳ್ಳ ವಚನಗಳನ್ನು ಬೇರೆಯಾಗಿ ತೆಗೆದು, ಅಷ್ಟಾವರಣಗಳಿಗನುಸಾರವಾಗಿ ಕ್ರಮಗೊಳಿಸಿ ಪುಸ್ತಕದ ಕೊನೆಯಲ್ಲಿ ಕೊಟ್ಟಿದ್ದಾರೆ. ಈ ಹೊಸ ಪ್ರಕಟನೆಯಲ್ಲಿ ಒಟ್ಟು ೯೬೦ ವಚನಗಳಿವೆ. ಕೊನೆಯ ೧೪೫ ವಚನಗಳು ಮೇಲೆ ಹೇಳಿದಂತೆ ವೀರಶೈವಾಚಾರಕ್ಕೆ ಸಂಬಂಧಿಸಿದವು.

ಬಸವೇಶ್ವರನ ವ್ಯಕ್ತಿತ್ವವನ್ನೂ ಆತನ ವಚನಗಳ ಹಿರಿಮೆಯನ್ನೂ ಹೇಳಲು ಶ್ರೀ. ಹಳಕಟ್ಟಿಯವರ ಮಾತೇ ಸರಿ:

"ಬಸವೇಶ್ವರನ ವಚನಗಳು ಕನ್ನಡ ವಾಙ್ಮಯದಲ್ಲಿ ಉಚ್ಚಸ್ಥಾನವನ್ನು ಹೊಂದಿವೆ. ಅವು ಇನ್ನು ಮುಂದೆ ಮುಳುಗಲಾರವೆಂದು ಭಾವಿಸಿದ್ದೇವೆ. ಬಸವಣ್ಣನ ಮೋಹಕ ಭಾಷೆ, ಅವನ ವಿಚಾರಗಳ ಸವಿ, ಅವನ ಕೋಮಲಹೃದಯ ಯಾರ ಮನಸ್ಸನ್ನು ಆಕರ್ಷಿಸಲಿಕ್ಕಿಲ್ಲ? ಅವನ ವಚನಗಳಲ್ಲಿ ಬಿರುನುಡಿಗಳೆಂಬವು ದೊರೆಯಲಿಕ್ಕಿಲ್ಲ. ಅವನ ಒಳಗೂ, ಹೊರಗೂ, ಸುತ್ತಲೂ ಮೃದುತ್ವ, ಸಮತೆ, ಸಮಾಧಾನಗಳು ತುಂಬಿತುಳುಕುತ್ತವೆ. ಅವನು ತನ್ನ ವಚನಗಳಲ್ಲಿ ತಪ್ಪುದಾರಿ ಹಿಡಿದವರನ್ನು ಹಾಗೆ ವರ್ತಿಸಬೇಡಿರೆಂದು ಅಂಗಲಾಚಿ ಬೇಡಿಕೊಳ್ಳುತ್ತಾನೆ. ದುಃಖಿತರನ್ನು ಸಮಾಧಾನಪಡಿಸುತ್ತಾನೆ. ಕಷ್ಟದಲ್ಲಿದ್ದವರಿಗೆ ಧೈರ್ಯ ಹೇಳುತ್ತಾನೆ. ಅವನು ಯಾವಾಗಲೂ ಬಡವರು, ದೀನರು, ದುಃಖಿತರಲ್ಲಿರುತ್ತಾನೆ. ಇವರ ಸಲುವಾಗಿ ಅವನಲ್ಲಿರುವ ಪ್ರೇಮ, ಅವರನ್ನು ಉದ್ಧರಿಸಬೇಕೆಂಬ ಅವನ ಹಂಬಲ, ಇವು ಯಾರ ಮನಸ್ಸನ್ನಾದರೂ ಕದಡಿಸುವಂಥವಿರುತ್ತವೆ. ಅವನು ಬೋಧಿಸುತ್ತ ಬೋಧಿಸುತ್ತ ನಮ್ಮನ್ನು ಪರಮಾತ್ಮನ ಸನ್ನಿಧಿಯಲ್ಲಿಯೇ ಒಯ್ದುಬಿಡುತ್ತಾನೆ. ಅಲ್ಲಿಯ ಬೆಳಗಿನೊಳಗಿನ ಬೆಳಗಿನಲ್ಲಿ ನಮ್ಮನ್ನು ತೇಲಿಸಿಬಿಡುತ್ತಾನೆ. ಆಗ ನಮಗೆ ಪರಮಾತ್ಮನ ದರ್ಶನವೇ ಆದಂತೆ ಭಾಸವಾಗುತ್ತದೆ. ಇದು ಮಹಾನುಭಾವ ಬಸವಣ್ಣನವರ ವಚನಗಳ ರೀತಿ."

ಬಸವೇಶ್ವರನ ತತ್ವಗಳು ನಾಡಿನಲ್ಲಿ ಎಲ್ಲ ಕಡೆಗೂ ಪ್ರಸಾರ ಹೊಂದಲೆಂದು ನಾವು ಹಾರೈಸುತ್ತೇವೆ. ಮಾನ್ಯ ಶ್ರೀ. ಹಳಕಟ್ಟಿಯವರು ದೀರ್ಘಕಾಲ ಸಾಹಿತ್ಯಸೇವೆ ಮಾಡುತ್ತಿರುವಂತೆ ಭಗವಂತನು ಅನುಗ್ರಹಿಸಲೆಂದು ಬೇಡುತ್ತೇವೆ.

**ಭಾಗ್ಯಲಕ್ಷ್ಮಿ:** (ಕಿರು ಕಾದಂಬರಿ) ಬರೆದವರು: ಶ್ರೀ. ಎಂ. ವಿ. ಸೀತಾರಾಮಯ್ಯ, ಎಂ.ಎ., ಕಿರೀಟ ಆಕಾರದ ಅಷ್ಟಪತ್ರ; ೨+೧೦೪ ಪುಟಗಳು. ಬೆಲೆ. ೧೨ ಆಣೆ.

ಮೋಸಹೋಗಿ ಕಪ್ಪು ಹೆಣ್ಣನ್ನು ಮದುವೆಯಾದ ಬಡ ತರುಣನೊಬ್ಬನು ಜುಗುಪ್ಸೆಯಿಂದ ಬಹಳ ಕಾಲದವರೆಗೆ ಹೆಂಡತಿಯನ್ನು ಕಡೆಗಣಿಸಿರುತ್ತಾನೆ. ಕೆಲವು ಕಾಲದ ಮೇಲೆ ಹೆಂಡತಿಯೆ ಅವನ ಮನೆಗೆ ಬರುತ್ತಾಳೆ. ಅವಳು ಬಂದ ಮೇಲೆ ಅವನ ಬಡತನ ಹಿಂಗಿ ಅವನು ಕ್ರಮೇಣ ಭಾಗ್ಯವಂತನಾಗುತ್ತಾನೆ. ಬಹುಶಃ ಈ ಕಾರಣದಿಂದಲೊ ಏನೊ ಒಲ್ಲದ ಹೆಂಡತಿಯ ಮೇಲೆ ಅವನಿಗೆ ಕನಿಕರ ಹುಟ್ಟಿ ಅದು ಒಲುಮೆಯಾಗಿ ತಿರುಗಿ ಅವಳ ಕಪ್ಪೆ ಅವನಿಗೆ ಒಪ್ಪಾಗುತ್ತದೆ. ಕೊನೆಗೆ ಹೆಂಡತಿಯನ್ನು ಸ್ವೀಕರಿಸುತ್ತಾನೆ.

ಇದೇ ಈ ಕಾದಂಬರಿಯ ವಸ್ತು. ಈ ಕತೆಗೆ ಅವಲಂಬನ ಹಿಂದೆ ಎಂದೊ ನಡೆಯಿತೆಂದು ಕೇಳಿದ ಒಂದು ಸಂಗತಿ. ಈ ಸಂಗತಿಯ ತಡಿಕೆಯ ಮೇಲೆ ನಾನಾ ಪಾತ್ರಘಟನೆ ಸನ್ನಿವೇಶಗಳನ್ನು ಅಳವಡಿಸಿ ಶ್ರೀ. ಸೀತಾರಾಮಯ್ಯನವರು ಈ ಕಾದಂಬರಿಯನ್ನು ಬರೆದಿದಾರೆ.

ಕತೆ ಸ್ವಾರಸ್ಯವಾಗಿದೆ. ಸರಳವಾಗಿದೆ. ಒಂದು ಸಮಸ್ಯೆ, ಅದಕ್ಕೆ ನ್ಯಾಯವಾದ ಒಂದು ಪರಿಹಾರ, ಇದರ ಫಲವಾಗಿ ತೇಲುವ ನೀತಿ— ಈ ಕತೆಯ ಮುಖ್ಯ ಲಕ್ಷಣಗಳೆನ್ನಬಹುದು. ಇಂಥ ಸಮಸ್ಯೆಗಳೂ ಪರಿಹಾರಗಳೂ ಸಾಮಾನ್ಯವಾಗಿ ಸಂಸಾರಗಳಲ್ಲಿ ಕಂಡುಬರತಕ್ಕವೆ. ಆದರೆ ಇದರಿಂದ ಮೈಗೊಳ್ಳುವ ತತ್ವ, ನಿಲ್ಲುವ ನೀತಿ ಜನಕ್ಕೆ ಒಪ್ಪಾಗುವಂತೆ, ಮನಸ್ಸಿನ ಮೇಲೆ ಒಂದು ಪರಿಣಾಮವನ್ನು ಉಂಟುಮಾಡುವಂತೆ ನಿರೂಪಿಸುವುದಕ್ಕೆ ಜಾಣ್ಮೆ ಬೇಕು. ಅಬ್ಬರ ಆಡಂಬರ ಚಮತ್ಕಾರಗಳಿಗೆ ಹೋಗದೆ ಈ ಕೆಲಸವನ್ನು ಶ್ರೀ. ಸೀತಾರಾಮಯ್ಯನವರು ಯಶಸ್ವಿಯಾಗಿಯೆ ನಿರ್ವಹಿಸಿದಾರೆನ್ನಬೇಕು. ಆದರೆ ನೀತಿ ನಿರೂಪಣೆಗಾಗಿಯೆ ಕೆಲವು ಸನ್ನಿವೇಶಗಳನ್ನು ಎಳೆದು ತಂದು ಹಾಕಿರುವುದೂ, ನಾಯಕನಿಂದ ಕೊನೆಯಲ್ಲಿ ಉಪನ್ಯಾಸ ಕೊಡಿಸುವುದೂ ಈ ಕಾದಂಬರಿಗೆ ತಲೆಭಾರವಾಗಿರುವಂತೆ ಕಾಣುತ್ತದೆ. ಅವು ಇಲ್ಲದಿದ್ದರೆ ಕತೆಗೆ ಹೆಚ್ಚು ಸಹಜತೆ ಬಂದು, ಅದರ ಕಳೆ ಇನ್ನೂ ಏರುತ್ತಿತ್ತೆಂದು ನಮ್ಮ ಭಾವನೆ.

**— ಭಾ. ಪ್ರಿ.**

## ಪರಿಷತ್ತಿನ ಸುದ್ದಿ

### ಪರಿಷತ್ತಿಗೆ ಅಧ್ಯಕ್ಷರ ಭೇಟಿ

ಪರಿಷತ್ತಿನ ಅಧ್ಯಕ್ಷರಾದ ಒಂಟಮುರಿಯ ಶ್ರೀಮಂತ ಬಸವ ಪ್ರಭು ರಾಜಾಲಖಮನಗೌಡಾ ಸರದೇಶಾಯಿ, ಓ. ಬಿ. ಇ. ಅವರು ತಾರೀಖು ೩-೧೧-೫೨ನೆಯ ಮಂಗಳವಾರ ಬೆಳಗ್ಗೆ ೯-೩೦ ಗಂಟೆಗೆ ಶ್ರೀ ಕೃಷ್ಣರಾಜ ಪರಿಷನ್ಮಂದಿರಕ್ಕೆ ಭೇಟಿಯನ್ನು ದಯಪಾಲಿಸಿದರು. ಪರಿಷತ್ತಿನ ಕಾರ್ಯಾಲಯವನ್ನೂ ಅಚ್ಚುಕೂಟವನ್ನೂ ಸಂದರ್ಶಿಸಿ ಸಂಸ್ಥೆಯ ಯೋಗಕ್ಷೇಮವನ್ನು ವಿಚಾರಿಸಿಕೊಂಡರು.

ಶ್ರೀಮಂತ ಬಸವಪ್ರಭುಗಳನ್ನು ಪರಿಷತ್ತಿನ ಉಪಾಧ್ಯಕ್ಷರೂ ಕಾರ್ಯಸಮಿತಿಯ ಮತ್ತು ಮೈಸೂರು ಪ್ರಾಂತಸಮಿತಿಯ ಸ್ಥಳೀಯ ಸದಸ್ಯರೂ ರಾಜಸೇವಾಸಕ್ತ ಶ್ರೀ. ಬೆಳ್ಳಾವೆ ವೆಂಕಟನಾರಾಯಣಪ್ಪನವರೂ ಸ್ವಾಗತಿಸಿದರು. ಉಪಾಹಾರಾನಂತರ ಶ್ರೀಮಂತ ಬಸವ ಪ್ರಭುಗಳನ್ನು ಬೀಳ್ಕೊಡಲಾಯಿತು.

### ಅಭಿನಂದನ ಸಭೆ

ರಾಜಸೇವಾ ಪ್ರಸಕ್ತ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರನ್ನೂ, ಮೋತಮದ್-ಉಲ್-ಮುಲ್ಕ್ ಶ್ರೀ. ಎಂ. ಜಿ. ಮೇಖ್ರಿ ಅವರನ್ನೂ ಗೌರವಿಸುವುದಕ್ಕಾಗಿ **೧೧-೧೧-೫೨ನೆಯ ಬುಧವಾರ ಸಂಜೆ ೬-೩೦ ಗಂಟೆಗೆ** ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಅಭಿನಂದನ ಸಭೆ ಸೇರುತ್ತದೆ.

ರಾಜಸೇವಾಸಕ್ತ ಶ್ರೀ. ಬೆಳ್ಳಾವೆ ವೆಂಕಟನಾರಾಯಣಪ್ಪನವರು ಅಧ್ಯಕ್ಷತೆ ವಹಿಸಲು ದಯಮಾಡಿ ಒಪ್ಪಿರುತ್ತಾರೆ.

### ಮಹಿಳಾ ಶಾಖೆ

**ಉಪನ್ಯಾಸ**

(೧) ತಾ॥ ೧೨-೧೧-೫೨ನೆಯ ಗುರುವಾರ ಸಂಜೆ ೬ ಗಂಟೆಗೆ ಪರಿಷನ್ಮಂದಿರದಲ್ಲಿ ರಾಜಸೇವಾಸಕ್ತ ಶ್ರೀ. ಬಿ. ಎಂ. ಶ್ರೀಕಂಠಯ್ಯನವರು ಅಜಂತದ ಚಿತ್ರಕಲೆಯ ವಿಷಯವಾಗಿ ದೀಪಚಿತ್ರ ಸಹಿತ ಉಪನ್ಯಾಸ ಮಾಡುತ್ತಾರೆ.

**ಮೇಲಾಟಗಳು**

(೨) ಮಹಿಳಾ ಶಾಖೆಯ ಈ ವರ್ಷದ ಸ್ಪರ್ಧೆಗಳಿಗೆ ಅಪೇಕ್ಷಾ ಪತ್ರಗಳನ್ನು ಪಡೆಯುವ ದಿನವನ್ನು ತಾರೀಖು ೨೦-೧೧-೫೨ರವರೆಗೆ ಮುಂದುವರಿಸಿದೆ.

# ಕನ್ನಡ ಸುದ್ದಿ

## ಮೈಸೂರು ಸಂಸ್ಥಾನದ ಅಕ್ಷರಪ್ರಚಾರ ಸಮಿತಿ, ಮೈಸೂರು

ಮೈಸೂರು ಸಂಸ್ಥಾನದ ಅರ್ಥಸಚಿವರಾದ ರಾಜಮಂತ್ರಪ್ರವೀಣ ಶ್ರೀ. ಕೆ. ವಿ. ಅನಂತರಾಮನ್ ಅವರು ನವರಾತ್ರಿಯ ಕಾಲದಲ್ಲಿ ಅಕ್ಷರಪ್ರಚಾರ ಸಮಿತಿಯ ಕಚೇರಿಗೆ ಭೇಟಿ ಕೊಟ್ಟರು. ಅವರನ್ನು ಸಮಿತಿಯ ಅಧ್ಯಕ್ಷರು ಸ್ವಾಗತಿಸಿದರು. ಅಕ್ಷರಪ್ರಚಾರದ ಮುನ್ನಡೆಯ ವಿವರಗಳನ್ನು ಅವರಲ್ಲಿ ಅರಿಕೆ ಮಾಡಿಕೊಳ ಲಾಯಿತು. ಅಕ್ಷರಪ್ರಚಾರ ಕಾರ್ಯವನ್ನು ಗಿರಣಿ ಕಾರ್ಖಾನೆಗಳಲ್ಲಿಯ ಕೆಲಸಗಾರರಲ್ಲಿ ಹರಡಬೇಕೆಂದೂ ಅಕ್ಷರಸ್ಥರ ಸಂಖ್ಯೆಯನ್ನು ಹೆಚ್ಚಿಸಿ ಅದನ್ನು ಸ್ಥಿರಪಡಿಸುವ ಕಾರ್ಯ ನಡೆಯಬೇಕೆಂದೂ ಸಚಿವರು ಸಲಹೆ ಕೊಟ್ಟರು.

## ಅಕ್ಷರ ಪ್ರಚಾರ ಸಮಿತಿ, ಬೆಂಗಳೂರು ನಗರ

ಮೇಲ್ಕಂಡ ಸಮಿತಿಯ ಆಶ್ರಯದಲ್ಲಿ ಬೆಂಗಳೂರು ನಗರದಲ್ಲಿಯ ಅಕ್ಷರ ಪ್ರಚಾರ ಕೇಂದ್ರಗಳಲ್ಲಿ ಕೆಲಸಮಾಡುವ ಉಪಾಧ್ಯಾಯರುಗಳ ಸಭೆ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ತಾರೀಖು ೩೦-೧೦-೪೨ನೆಯ ಶುಕ್ರವಾರ ನಡೆಯಿತು. ಶ್ರೀ. ಬಿ. ವೆಂಕೋಬರಾವ್, ಬಿ.ಎ. ಅವರು ಅಧ್ಯಕ್ಷತೆ ವಹಿಸಿದ್ದರು. ಸಮಿತಿಯ ಕಾರ್ಯದರ್ಶಿಗಳಾದ ಶ್ರೀಮತಿ ರತ್ನಾಬಾಯಿಯವರು ಸಭೆಯ ಉದ್ದೇಶವನ್ನು ತಿಳಿಸಿ ಉಪಾಧ್ಯಾಯರಿಂದ ಹೆಚ್ಚಿನ ಸಹಕಾರವನ್ನು ಬೇಡಿದರು. ಅನಂತರ ಪ್ರಚಾರ ಕಾರ್ಯದ ಬಗ್ಗೆ ವಿಚಾರ ವಿನಿಮಯ ಮಾಡಲಾಯಿತು.

ಬೆಂಗಳೂರಿನಲ್ಲಿ ಇದುವರೆಗೆ ಒಟ್ಟು ೩೬ ಕೇಂದ್ರಗಳಲ್ಲಿ ಅಕ್ಷರ ಪ್ರಚಾರದ ತರಗತಿಗಳು ನಡೆಯುತ್ತಿವೆ.

**ಶಿವಮೊಗ್ಗ : ಕರ್ನಾಟಕ ಸಂಘ**

ಶ್ರೀ. ಹಸೂಡಿ ವೆಂಕಟಶಾಸ್ತ್ರಿಗಳು ಉದಾರವಾಗಿ ಕೊಟ್ಟ ೨೦ ಸಾವಿರ ರೂ. ಗಳಿಂದ ಕಟ್ಟಿಸಲಾದ ನೂತನ ಕರ್ನಾಟಕ ಸಂಘ ಭವನದಲ್ಲಿ ಕರ್ನಾಟಕ ಸಂಘದ ಕಚೇರಿಯ ಉದ್ಘಾಟನ ಸಮಾರಂಭ ವಿಜಯದಶಮಿಯ ದಿವಸ ನೆರವೇರಿತು. ಶ್ರೀಗಳಾದ ವಿಷ್ಣುಭಟ್ಟ, ಬಿ. ಆರ್. ಪುಟ್ಟನಂಜಪ್ಪ, ಟಿ. ಜಿ. ನಾರಾಯಣಯ್ಯಂಗಾರ್ ಮತ್ತು ಎ. ಅನಂತಯ್ಯ ಇವರು ಭಾಷಣ ಮಾಡಿ ಶಾಸ್ತ್ರಿಗಳವರ ಔದಾರ್ಯವನ್ನು ಹೊಗಳಿದರು.

## ಆದವಾನಿಯಲ್ಲಿ ಕನ್ನಡ ಚಳವಳಿ

ಬಳ್ಳಾರಿ ಜಿಲ್ಲಾ ಆದವಾನಿಯಲ್ಲಿ ಈ ಸಲ ನಾಡಹಬ್ಬ ಆಚರಿಸಲ್ಪಟ್ಟಿತು. ಈ ಸಲದ ಹಬ್ಬಕ್ಕೆ ಈ ನಗರಕ್ಕೆ ಚಿರಪರಿಚಿತರೂ ಉಜ್ವಲ ಕನ್ನಡ ಪ್ರೇಮಿಗಳೂ ಆದ ಕೀರ್ತನಕೇಸರಿ ವೇ|| ಬಿ. ಶಿವಮೂರ್ತಿಶಾಸ್ತ್ರಿಗಳು ದಯಮಾಡಿಸಿ ಇಲ್ಲಿನ ಶ್ರೀ ವೀರಭದ್ರ ದೇವಾಲಯದಲ್ಲಿ ಅಶ್ವೀಜ ಶು|| ಪಾಡ್ಯಮಿಯಿಂದ ತಮ್ಮ ಸ್ಫೂರ್ತಿದಾಯಕವಾದ ಕೀರ್ತನೆಗಳನ್ನು ಮಾಡಿದರು. ೨೪-೧೦-೪೨ನೆಯ ದಿನ ಇಲ್ಲಿಯ ಕನ್ನಡ ಪ್ರಾಥಮಿಕ ಶಾಲೆಯಲ್ಲಿ ಶ್ರೀಮಾನ್ ಯಲ್ಲೇ ಮಲ್ಲೇಶಪ್ಪನವರ ಅಧ್ಯಕ್ಷತೆಯಲ್ಲಿ 'ಕನ್ನಡ ಮಕ್ಕಳು' ಎಂಬ ವಿಚಾರವಾಗಿಯೂ, ೨೬-೧೦-೪೨ನೆಯ ದಿನ ಶ್ರೀಮಾನ್ ಮಲ್ಲಿಕಾರ್ಜುನರವರ ಅಧ್ಯಕ್ಷತೆಯಲ್ಲಿ ಶ್ರೀ ಬಸವೇಶ್ವರ ದೇವಾಲಯದಲ್ಲಿ 'ವೀರಶೈವ ಧರ್ಮ' ಎಂಬ ವಿಚಾರವಾಗಿಯೂ ಸ್ವಾರಸ್ಯವಾದ ಭಾಷಣಗಳನ್ನು ಕೊಟ್ಟರು.

ಆದವಾನಿಯಲ್ಲಿ ಸ್ಥಾಪಿತವಾಗಿರುವ ಕನ್ನಡ ಪ್ರಾಥಮಿಕ ಶಾಲೆ ಮೂರು ವರ್ಷಗಳ ಹಿಂದೆ ಶ್ರೀ. ಶಾಸ್ತ್ರಿಗಳು ಇಲ್ಲಿಗೆ ಬಂದಾಗ ಮಾಡಿದ ಚಳವಳಿಯ ಫಲವೇ ಆದುದರಿಂದ ಈ ಸಲ ಅವರ ಕನ್ನಡ ಪ್ರಚಾರಕ್ಕೆ ಇಲ್ಲಿ ಒಳ್ಳೆಯ ಬೆಂಬಲ ದೊರೆತಂತಾಯಿತು.

೨೩-೧೦-೪೨ನೆಯ ದಿನ ಮುನಿಸಿಪಲ್ ಹೈಸ್ಕೂಲು ಭವನದಲ್ಲಿ ಕನ್ನಡ ಗೆಳೆಯರ ಗುಂಪಿನವರು ಶ್ರೀ. ಬಿ. ಶಿವಮೂರ್ತಿಶಾಸ್ತ್ರಿಗಳಿಗೆ ಮಾನಪತ್ರವನ್ನು ಅರ್ಪಿಸಿದರು. ಇಲ್ಲಿಯ ಸಾರ್ವಜನಿಕರಲ್ಲಿ ಮುಂದಾಳುಗಳಾದ ಶ್ರೀಮಾನ್ ವೈ. ಗಾದಿಲಿಂಗನಗೌಡರು ಸಭಾಧ್ಯಕ್ಷತೆಯನ್ನು ವಹಿಸಿದ್ದರು. ಹಲವರು ಶಾಸ್ತ್ರಿಗಳ ಗುಣಕಥನ ರೂಪವಾದ ಭಾಷಣಗಳನ್ನು ಮಾಡಿದರು.

ಕೀರ್ತನಕೇಸರಿ ಶ್ರೀ. ಬಿ. ಶಿವಮೂರ್ತಿಶಾಸ್ತ್ರಿಗಳೂ ಡಾಕ್ಟರ್ ಹೆಚ್. ಎಂ. ರಾಚೋಟಯ್ಯನವರೂ ಕನ್ನಡದ ಪ್ರಚಾರಕ್ಕಾಗಿಯೂ ಪ್ರಾಚೀನ ತಾಳೇಗರಿಗಳ ಗ್ರಂಥ ಶೋಧನೆಗಾಗಿಯೂ ಕೆಲವು ಜಿಲ್ಲೆಗಳ ಕಡೆ ಸಂಚರಿಸುತ್ತಾರೆ.

ಆದವಾನಿ ವರ್ತಕ ಮಹಾಶಯರನ್ನು ಕನ್ನಡದಲ್ಲಿಯೆ ಲೆಕ್ಕ ಪತ್ರಗಳನ್ನು ಇಡಬೇಕೆಂದೂ ಕನ್ನಡ ಸ್ಕೂಲಿಗೆ ಹೆಚ್ಚು ಸಹಾಯ ಮಾಡಬೇಕೆಂದೂ ಕರ್ನಾಟಕ ಏಕೀಕರಣ ಚಳವಳಿಗೆ ಬೆಂಬಲವೀಯಬೇಕೆಂದೂ ಶ್ರೀ. ಶಾಸ್ತ್ರಿಗಳು ಪ್ರಾರ್ಥಿಸುತ್ತಿದ್ದಾರೆ.

## ಕರ್ನಾಟಕ ಸಂಗೀತ

ತಿರುವಾಂಕೂರು ಸಂಸ್ಥಾನವನ್ನು ಆಳಿದ ಶ್ರೀ ಸ್ವಾತಿತಿರುನಾಳರ ಹೆಸರಿನಲ್ಲಿ ಒಂದು ಸಂಸ್ಥೆ ಸ್ಥಾಪಿತವಾಗಿ, ವರ್ಷವರ್ಷ ಸಂಗೀತ ಸಭೆಗಳನ್ನು ಏರ್ಪಡಿಸಿ ಪ್ರಸಿದ್ಧ ಸಂಗೀತ ವಿದ್ವಾಂಸರ ಹಾಗೂ ಸಂಗೀತ ಪ್ರೇಮಿಗಳ ಸಹಕಾರ ಪಡೆದು ಕಲೆಯನ್ನು ಬೆಳಸಬೇಕೆಂಬ ಉದ್ದೇಶದಿಂದ ಮೊದಲ ಉತ್ಸವವನ್ನು ಕಳೆದ ವಾರ ಸುರು ಮಾಡಿದರು. ಉತ್ಸವವನ್ನು ಮಹಾರಾಣಿಯವರಾದ ಶ್ರೀಮತಿ ಸೇತುಪಾರ್ವತಿ ಬಾಯಿಯವರು ಪ್ರಾರಂಭಮಾಡಿ ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು: "ಸಂಗೀತ ಕಲೆಯ ಲಕ್ಷಣವ್ಯಾಪ್ತಿಗಳಿಗೆ ಮಿತಿಯಿಲ್ಲ. ಸಂಗೀತವೆಂಬ ಒಂದು ಮಾತಿನಲ್ಲೇ ಗೀತ, ವಾದ್ಯ, ನೃತ್ಯ ಭಾವಪ್ರಕಟನಗಳು ಸೇರಿಕೊಳ್ಳುತ್ತವೆ. ಸಂಗೀತದ ಸುಖ ಬುದ್ಧಿ, ಚಿತ್ತ, ವಿವೇಕ, ಆತ್ಮಜ್ಞಾನ ಕೊಡುವ ಸುಖಕ್ಕೆ ಸಮನಾದುದು.

ಶ್ರೀ ಸ್ವಾತಿ ತಿರುನಾಳರ ತುಂಬಿದ ಬಾಳು ಧರ್ಮದ ಆಳಿಕೆಯಿಂದ ಬೆಳಗಿತು. ಅವರು ಹಲವು ಜ್ಞಾನಶಾಖೆಗಳಲ್ಲಿ ಪಾಂಡಿತ್ಯಗಳಿಸಿದ್ದರಲ್ಲದೆ ಹದಿಮೂರು ಭಾಷೆಗಳಲ್ಲಿ ಬಲ್ಲಿದರಾಗಿ ಅನೇಕ ಸಂಗೀತ ಕೃತಿಗಳನ್ನು ರಚಿಸಿದರು.

ನಮ್ಮ ಸಾಹಿತ್ಯದಂತೆಯೆ ಸಂಗೀತಕ್ಕೂ ಕೆಲವು ಕಾಲ ಮಬ್ಬು ಕವಿದಿತ್ತು. ಅಗ್ಗದ ಹೊರ ಆಕರ್ಷಣೆಗಳಿಗೆ ಜನ ಮನಸೋತು ಬೆಲೆಯುಳ್ಳ ತಿರುಳನ್ನು ಅಸಡ್ಡೆಮಾಡಿದರು. ಆದರೂ ಕರ್ನಾಟಕ ಸಂಗೀತದ ಶುದ್ಧರೂಪವನ್ನೂ ಸಂಪ್ರದಾಯವನ್ನೂ ದಕ್ಷಿಣ ಭಾರತ ಕಾಪಾಡಿಕೊಂಡು ಬಂದದ್ದು ಹೆಮ್ಮೆಯ ವಿಷಯವೆ. ಹಿರಿಯ ಸಂಗೀತ ಕೃತಿ ರಚಕರಿಗೆ ಪ್ರೋತ್ಸಾಹ ಪೋಷಣೆಗಳನ್ನು ನೀಡಲು ಸಭೆಗಳು ಹುಟ್ಟಿಕೊಂಡದ್ದು ಈಚೀಚೆಗೆ. ರಾಜಾಶ್ರಯ ದೊರೆತದ್ದೂ ಅಷ್ಟೆ. ನಮ್ಮ ಸಂಗೀತದ ಶುದ್ಧರೀತಿಗಳನ್ನೂ ಸಂಪ್ರದಾಯಗಳನ್ನೂ ಪ್ರೋತ್ಸಾಹಿಸಿದಂತೆಯೇ ಶ್ರೀ ಸ್ವಾತಿ ತಿರುನಾಳರು ಹಳ್ಳಿಯ ಹಾಡುಗಳು, ಕಥಕ್ಕಳಿ, ಹಿಂದೂಸ್ಥಾನಿ ಮತ್ತು ಮರಾಠಿ ಕೃತಿಗಳಿಗೂ ಪ್ರೋತ್ಸಾಹ ಕೊಟ್ಟ ಮೇಲ್ಪಂಕ್ತಿಯನ್ನು ಅನುಸರಿಸಿ ಇಂದಿನ ಸಂಗೀತ ಸಭೆಗಳು ನಮ್ಮ ಕರ್ನಾಟಕ ಸಂಗೀತವನ್ನು ಹೊಸರೀತಿಗಳಿಂದ ಬೆಳಸಲು ಏರ್ಪಾಟುಮಾಡಬಹುದಲ್ಲವೆ? ಜನದ ಮನೋರಂಜನೆಗೆ ಗಮನಕೊಟ್ಟರೂ ನಮ್ಮ ಸಂಗೀತದ ದೇಶೀಯ ಶಿಕ್ಷಣವನ್ನು ಉಳಿಸಿಕೊಂಡು ಬರಬೇಕು. ಉತ್ತರಾದಿ ಸಂಗೀತ ಪಂಡಿತಪಾಮರ ರಂಜಕವಾಗಿರುವಂತೆ ಬೆಳೆದಿರುವುದನ್ನು ಲಕ್ಷಿಸಿ ನಮ್ಮಲ್ಲೂ ಹಾಗೆಯೇ ಸಂಗೀತ ವಿಕಾಸವಾಗುವ ಹಾಗೆ ವ್ಯವಸ್ಥೆ ಮಾಡಬೇಕು."

## ಪ್ರಾರ್ಥನೆ

(ಶ್ರೀ. ಜಿ. ಎಸ್. ಶಾಮಣ್ಣನವರು, ಬಿ.ಎಸ್‌ಸಿ., ಶ್ರೀರಂಗಪಟ್ಟಣ)

ನನ್ನ ಕಾಯವ ನೀನು
ವೀಣೆಯಾಗಿಸು ದೇವಿ
ಚೆನ್ನೆ ಶಾರದೆ ನಿನ್ನ
ಪಾಣಿಗಳಲಿಟ್ಟೋವಿ || ಪ ||

ನೂರು ಕಣ್ಣಿನ ನವಿಲ | ಚಾರು ವಾಹನವೇರಿ
ಹಾರ ಪುಸ್ತಕವಿಡಿದು | ಭೂರಿ ಕರುಣೆಯ ತೋರಿ
ಮೂರು ಲೋಕಕು ನೀನು | ಸಾರಿ ಬಿಜ್ಜೆಯ ಬೀರಿ
ಮೆರೆಯೆ ಪೊರಮಡುವಾಗ ||೧||

ಸೃಷ್ಟಿಕರ್ತನು ಎಸಗೆ | ಇಷ್ಟ ವಸ್ತುವ ಹೊರಗೆ
ದೃಷ್ಟಿ ಮುರಿದಿದನು ಸು | ಸ್ಪಷ್ಟಗೊಳಿಸುತಲೊಳಗೆ
ತುಷ್ಟಿ ಪಡೆಯುವ ಸಮಯ | ಇಷ್ಟೆ ನೀನಾ ಗಳಿಗೆ
ಮಂಜುಳ ಧ್ವನಿಗೊಡಲು ||೨||

೬೩೩—೧೯೪೨ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

## ತಿದ್ದಿದ ಕನ್ನಡ ಲಿಪಿ

ಈಗಿರುವ ಮೊಳೆಗಳನ್ನೇ ಬಳಸಿಕೊಂಡು "ಕನ್ನಡ ಬಾವುಟ"ದಲ್ಲಿ ಪ್ರಯತ್ನಿಸಿರುವಂತೆ "ನುಡಿ"ಯಲ್ಲಿ ವಾರವಾರವೂ ಸಣ್ಣಸಣ್ಣ ಕವಿತೆ ಕತೆ ಲೇಖನಗಳನ್ನು ತಿದ್ದಿದ ಲಿಪಿಯಲ್ಲಿ ಪ್ರಕಟಿಸಲಾಗುವುದು. ಅಭ್ಯಾಸವಾಗುವ ವರೆಗೆ ಇದು ವಿಕಾರವಾಗಿ ಕಾಣಬಹುದು; ಆದರೆ ತಿದ್ದುಪಾಡು ಆವಶ್ಯಕವೆಂದು ಒಪ್ಪಲಾಗಿದೆ. ನಾಡಿನ ಇತರ ಸಹೋದ್ಯೋಗಿಗಳೂ ತಮ್ಮ ತಮ್ಮ ಪತ್ರಿಕೆಗಳಲ್ಲಿ ಸ್ವಲ್ಪ ಸ್ಥಳವನ್ನು ಮೀಸಲಾಗಿಟ್ಟು ಈ ಪ್ರಯೋಗವನ್ನು ನಡಸಿ ಸಹಕಾರ ನೀಡುವರೆಂದು ನಂಬುತ್ತೇವೆ.—ಸಂ.

**ಸುಳಿವು:**

೧) ದೀರ್ಘ ಸ್ವರಕ್ಕೆ—ೀ; ತಾ – ತೀ, ಯಾ – **ಯೀ.**

೨) ಮಹಾಪ್ರಾಣಕ್ಕೆ—ಹೊಕ್ಕುಳು ಸೀಳುವುದು: ಖ – **ಕ಼.**

೩) ಒತ್ತಕ್ಷರಗಳನ್ನು ಉಚ್ಚಾರಣೆಯ ಕ್ರಮದಲ್ಲಿ ಬಿಡಿಸುವುದು; ಕ್ಷೀರ – **ಕ್ಷೀರ,** ದ್ವಿಜ – **ದ್ವಿಜ,** ತತ್ತ್ವೇಂದ್ರಿಯ – **ತತ್ತ್ವೇಂದ್ರಿಯ.**

(೩)

ಕುಲ ಕುಲ ಕುಲವೆನ್ನುತಿಹರು
ಕುಲ ಯೇವುದು ಸತ್ಯ ಸುಕವುಳ್ಳ ಜನರಿಗೆ ॥ಪ॥

ಕೆಸರೊಳು ತಾವರೆ ಪುಟ್ಟಲು ಅದ ತಂದು
ಬಿಸಜನಾಭನಿಗರ್ಪಿಸಲಿಲ್ಲವೆ?
ಹಸುವಿನ ಮಾಂಸದೊಳುತ್ಪತ್ತಿ ಕ್ಷೀರವು
ವಸುಧೆಯೊಳಗೆ ಭೂಸುರರುಣ್ಣಲಿಲ್ಲವೆ? ॥೧॥

ಮೃಗಗಳ ಮೈಯಲ್ಲಿ ಪುಟ್ಟಲು ಕಸ್ತೂರಿ
ತೆಗೆದು ಪೂಸುವರು ದ್ವಿಜರೆಲ್ಲರು
ಒಗೆಯಿಂದ ನಾರಾಯಣನಾವ ಕುಲವಯ್ಯ
ಜಗವಲ್ಲಭನಾವ ಕುಲ ಪೇಳಿರಯ್ಯ? ॥೨॥

ಆತ್ಮ ಯೇವ ಕುಲ ಜೀವ ಯೇವ ಕುಲ
ತತ್ತ್ವೇಂದ್ರಿಯಗಳ ಕುಲ ಪೇಳಿರಯ್ಯ
ಆತ ಮಹಾತ್ಮನು ನೆಲೆಯಾದಿಕೇಶವ
ಯಾತರ ಕುಲವಯ್ಯ ಆತನೊಲಿದಮೇಲೆ ॥೩॥

### ಪತ್ರವ್ಯವಹಾರ

ಸ್ವಾಮೀ,

ಇದೇ ಮಾಹೆ ಶುಕ್ರವಾರ ೨೩ನೆಯ ತಾರೀಖಿನ 'ಕನ್ನಡ ನುಡಿ'ಯಲ್ಲಿನ ತಿದ್ದಿದ ಲಿಪಿಯಲ್ಲಿ ಕೊಟ್ಟಿರತಕ್ಕ ಗದುಗಿನ ವೀರನಾರಾಯಣನಿಂದ ವಿರಚಿತವಾದ ಮಹಾಭಾರತದಲ್ಲಿನ ಮಂಗಳ ಶ್ಲೋಕವನ್ನು ಓದಿದೆನು. ಆದರೆ ಪ್ರಯೋಗಾರ್ಥವಾಗಿ ಜನರ ಪರ್ಯಾಲೋಚನೆಗೆ ಇಟ್ಟಿರುವ ಸುಧಾರಿತ ಲಿಪಿಯನ್ನೂ, 'ಕನ್ನಡ ನುಡಿ'ಯ ತಿದ್ದಿದ ಲಿಪಿಯನ್ನು ಬಳಸಿ ಬರೆದಿರತಕ್ಕ ಪದ್ಯವನ್ನೂ ಹೋಲಿಸಿದ್ದರಲ್ಲಿ, ಪ್ರಯೋಗಾರ್ಥವಾಗಿ ಇಟ್ಟಿರುವ ಸುಧಾರಿತ ಲಿಪಿಯನ್ನು ಇನ್ನೂ ಪೂರ್ಣವಾಗಿ ಆಚರಣೆಗೆ ತಂದಿಲ್ಲವೆಂದು ವ್ಯಕ್ತವಾಗುತ್ತದೆ; ಮತ್ತು ಇದಕ್ಕೆ ಪೀಠಿಕೆಯಲ್ಲಿಯೇ ಕಾರಣವು ಸಹ ಕೊಡಲ್ಪಟ್ಟಿದೆ.

ಆದರೆ ನನ್ನ ಅಭಿಪ್ರಾಯದಲ್ಲಿ ಪ್ರಯೋಗಾರ್ಥವಾಗಿ ಇಡಲ್ಪಟ್ಟಿರುವ ಲಿಪಿಯನ್ನೇ ಬಳಸಿ, ಪತ್ರಿಕೆಯಲ್ಲಿ ಪ್ರಕಟಣೆಗಳನ್ನು ಹೊರಡಿಸಿದಲ್ಲಿ, ಆದರಿಂದ ಹೆಚ್ಚು ಪರಿಣಾಮವುಂಟೆಂದು ತೋರುತ್ತದೆ.

ಸಂಯುಕ್ತಾಕ್ಷರಗಳನ್ನು ಬರೆಯುವುದು ಇನ್ನೂ ಸಹ ತೊಡಕಿನಿಂದಲೇ ಕೂಡಿದೆಯೆಂದು ನನಗೆ ತೋರುತ್ತದೆ. ಇದರ ಬದಲು, ಸಂಯುಕ್ತಾಕ್ಷರದ ಮೂಲ ಅಕ್ಷರಗಳನ್ನೇ ಜೋಡಿಸಿ ಬರೆದಲ್ಲಿ ಚಿಕ್ಕಮಕ್ಕಳಿಗೆ ಪಾಠ ಕಲಿಸುವಾಗ ಹೇಳಿಕೊಡುವುದು ಸಹ ಸುಲಭವಾಗುತ್ತದೆಂದು ನನ್ನ ಭಾವನೆ.... ಜಾತೀಯ ಸಂಯುಕ್ತಾಕ್ಷರಗಳನ್ನು ಮ॥ ರಾ॥ ಕು. ರಾ. ಗೌರೀಶ ಅವರು ೧೫–೫–೪೨ರ 'ಕನ್ನಡ ನುಡಿ'ಯಲ್ಲಿ ಸೂಚಿಸಿರುವಂತೆ ಒಂದು ಚುಕ್ಕೆಯಿಂದ ಸೂಚಿಸಬಹುದು. ಉದಾ:—ಸಜ್ಜನ = ಸಜನ.

ಹೀಗೆ ಮಾಡುವುದರಿಂದ ತಿದ್ದಿದ ಲಿಪಿಯನ್ನು ಬರೆಯುವುದಕ್ಕೆ ಕಾಲ ವಿಳಂಬವಾಗುವುದಿಲ್ಲ ಮತ್ತು ಜಾಗವೂ ಉಳಿತಾಯವಾಗುತ್ತದೆ. ನಾನು ಈ ತಿದ್ದಿದ ಲಿಪಿಯನ್ನು ಅನುಸರಿಸಿ ಕನ್ನಡ ಟೈಪ್‌ರೈಟರನ್ನು ತಯಾರುಮಾಡಿ, ಆ ಮೂಲಕ ಕನ್ನಡ ಭಾಷೆಗೆ ನನ್ನ ಅಲ್ಪ ಸೇವೆಯನ್ನು ಮಾಡಬೇಕೆಂದಿರುವುದರಿಂದ, ನನ್ನ ಈ ಸಲಹೆಗಳು ಉಪಯುಕ್ತವಾಗುತ್ತದೆಯೇ ಎಂಬುದನ್ನು ತಾವು ದಯವಿಟ್ಟು ತಿಳಿಸಿದಲ್ಲಿ, ನಾನು ತಮಗೆ ಬಹಳ ಕೃತಜ್ಞನಾಗಿರುತ್ತೇನೆ.

ಎಸ್. ಸುಬ್ಬರಾಯ,
ಕಾಮರ್ಸ್ ಲೆಕ್ಚರರ್,
ಬ್ರೈಟ್ ಇನ್‌ಸ್ಟಿಟ್ಯೂಟ್ ಆಫ್ ಕಾಮರ್ಸ್, ಮೈಸೂರು.

[ಹೆಚ್ಚು ಜನಾಭಿಪ್ರಾಯವನ್ನು ಗಮನಿಸಿ ತಿದ್ದುಪಾಟನಲ್ಲಿ ಇಟ್ಟಿರುವ ಈ ಒಂದು ಹೆಜ್ಜೆಗೆ ಜನರನ್ನು ಒಲಿಸಿಕೊಳ್ಳಲು ಪ್ರಚಾರ ಮಾಡುತ್ತಿದ್ದೇವೆ. ಇಷ್ಟು ತಿದ್ದುಪಾಟೇ ಸಾಲದೆಂಬ ಅಭಿಪ್ರಾಯ ಕೆಲವರಲ್ಲಿ ಇರುವುದು ನಿಜ. ಪರಿಷತ್ತು ಕರೆಯುವ ತಜ್ಞರ ಸಭೆ ಎಲ್ಲವನ್ನೂ ಪರಿಶೀಲಿಸಿ ಕೊನೆಯ ತೀರ್ಮಾನಕ್ಕೆ ಬರುವುದರಿಂದ ಸದ್ಯದಲ್ಲಿ ಇದಕ್ಕಿಂತ ಹೆಚ್ಚಿನ ತಿದ್ದುಪಾಟನ್ನು ಪ್ರಯೋಗದಲ್ಲಿ ತರುವುದು ಸೂಕ್ತವಲ್ಲವೆನ್ನಿಸುತ್ತದೆ. — ಸಂ.]

### ವ್ಯಕ್ತಿ ಪರಿಚಯ

## ಶ್ರೀ. ವಿ. ಕೃ. ಗೋಕಾಕ ಅವರು

(ಬರೆದವರು: ಶ್ರೀ. ಸು. ರಂ. ಎಕ್ಕುಂಡಿಯವರು, ಸಾಂಗಲಿ)

ಒಂದು ಸಲ 'ಶ್ರೀ' ಅವರು ನಮ್ಮ ವಿಲಿಂಗ್ಡನ್ ವಿದ್ಯಾಲಯಕ್ಕೆ ಬಂದಾಗ ಗೋಕಾಕರವರ ವಿಷಯವಾಗಿ ಹೇಳುತ್ತಾ 'ಅವರು ನಡೆಯುವ ವಿಶ್ವಕೋಶದಂತೆ ಇದಾರೆ' (Walking Encyclopaedia) ಎಂದರು. ಈ ಮಾತು ಹದಿನಾರಾಣೆ ನಿಜ. ಚಿಕ್ಕಂದಿನಿಂದಲೂ 'ವಿನಾಯಕ'ರು ವಿನಾಯಕ ಸಿದ್ಧಿಗಾಗಿಯೇ ಹೆಣಗಿದಾರೆ. ಅಪಾರವಾದ ಸಾಹಿತ್ಯ ವಿಮರ್ಶೆಗಳ ಹೊತ್ತಗೆಗಳನ್ನು ಓದಿದಾರೆ—ಅಮೂಲ್ಯ ಜ್ಞಾನ ಪಡೆದಿದಾರೆ. ಗೀತೆಯಲ್ಲಿ ಹೇಳಿದ 'ನಹಿ ಜ್ಞಾನೇನ ಸದೃಶಂ' ಎಂಬುದು ಇವರ ಬದುಕಿನ ಮಂತ್ರವಾದಂತಿದೆ.

'ವಿನಾಯಕ'ರು ಹುಟ್ಟಿದುದು ಸವಣೂರಿನಲ್ಲಿ. ಸವಣೂರ ಚೆಲುವನ್ನು ಕಂಡವರಿಗೆ ಅವರ ಕಾವ್ಯದ, ಅವರ ಸಾಹಿತ್ಯದ, ಅವರ ಅನುಭಾವದ ಅರಿವು ಆದೀತು. ಸುಂದರವಾದ ಕೆರೆಗಳು, ಹಸುರಿನಿಂದ ಯಾವಾಗಲೂ ಮಲಮಲ ಎನ್ನುವ ಆ ಹುಲ್ಲುಗಾವಲುಗಳು, ಹಕ್ಕಿಗಳ ಗಾನದ ಒಂದು ನಾದಲೋಕದಂತಿದ್ದ ಆ ವೀಳೆ ಬಾಳೆಗಳ ತೋಟಗಳು, ಇವೆಲ್ಲ ಪ್ರಕೃತಿಯ ರಹಸ್ಯವನ್ನು ವಿನಾಯಕರಿಗೆ ಬಿಚ್ಚಿ ತೋರಿಸಿವೆ. ಇವರ ಕಲ್ಪನೆಯೂ ಅಗಾಧವಾದುದೇ. ಕಲ್ಪನೆ ಸೌಂದರ್ಯಗಳ ಸಂಗಮವಾದಾಗ ಸಾಮಾನ್ಯವಾಗಿ ಅತ್ಯುತ್ತಮ ಕೃತಿ ಲಭಿಸುತ್ತದೆ. ಈ ಬಗೆಯ ಸಾಹಿತ್ಯವನ್ನು 'ವಿನಾಯಕ'ರು ಕನ್ನಡಕ್ಕೆ ಕೊಟ್ಟಿದಾರೆ. 'ವಿನಾಯಕ'ರದು ಶುಷ್ಕ 'ಶುಕಪಾಂಡಿತ್ಯ'ವಲ್ಲ. ಆದರೆ ಓದಿದುದನ್ನು ಜೀರ್ಣಿಸಿ, ಅರಗಿಸಿ ಆ ಜ್ಞಾನದ ಮೇಲೆ ತಮ್ಮ ಜೀವನ ತತ್ವವನ್ನು ಇವರು ಕಟ್ಟುತ್ತಾರೆ. ಆಕ್ಸ್‌ಫರ್ಡಿನಲ್ಲಿ ಇವರು ಬಿ. ಎ. ಪರೀಕ್ಷೆಯಲ್ಲಿ ಮೊದಲನೆಯ ತರಗತಿಯಲ್ಲಿ ಪಾಸಾದರು. ಇವರ ಪರೀಕ್ಷಕರೂ ಕವಿ ವಿಮರ್ಶಕ ಶ್ರೇಷ್ಠರೂ ಆದ ಎಬರಕ್ರಾಂಬೀ ಎಂಬ ವಿದ್ವಾಂಸರೂ ಕೂಡ ಮೇಲೆ ಹೇಳಿದ ಮಾತನ್ನೇ ಹೇಳಿದಾರೆ. 'ಓದಿ ಅರಗಿಸಿದ ಜ್ಞಾನದ ಮೇಲೆ ಇವರು ತಮ್ಮ ಅಭಿಪ್ರಾಯ ಸಾರುತ್ತಾರೆ' ಎಂದು.

ಪೇಜಾವರ ಸದಾಶಿವರಾಯರಿಗೆ ಬರೆದ ಒಂದು ಪತ್ರದಲ್ಲಿ

'ಉತ್ತಮ ಕವಿಯಾದವನು ಉತ್ತಮ ವಿಮರ್ಶಕನೂ ಅಹುದು' ಎಂದು ಇವರು ಬರೆದಿದಾರೆ. ಆ ಮಾತಿಗೆ ಇವರೇ ಸಾಕ್ಷಿ. ಸೌಂದರ್ಯ ಸತ್ಯ ಅನುಭಾವಗಳ ದರ್ಶನವು 'ವಿನಾಯಕ'ರಿಗೆ ಸಾಕಷ್ಟು ಆಗಿದೆ. ಇಂಥ ರಸ ನಿಮಿಷಗಳು ರಸದನುಭವಗಳನ್ನು ಎದೆ ತುಂಬ ತಂದಾಗ 'ವಿನಾಯಕ'ರ ಕಾವ್ಯ ಸುಂದರವಾಗಿ ಹರಿಯುತ್ತದೆ. ಬದುಕಿನ ಚೆಲುವನ್ನು ಬದುಕಿಗೆ ಅರುಹುವುದೂ ಒಂದು ಪವಿತ್ರ ಕಾರ್ಯ. ಆ ಕಾರ್ಯಕ್ಕಾಗಿಯೇ ದೇವರು ಕವಿಗಳನ್ನು ಹುಟ್ಟಿಸುತ್ತಾನೆ. 'ಗಿಡಕ್ಕೆ ಸಹಜವಾಗಿ ಎಲೆಗಳು ಹೇಗೆ ಬರುವವೋ, ಹಾಗೆ ಕವಿಗೆ ಕಾವ್ಯ ಬರಬೇಕು' ಎಂದು ಕೀಟ್ಸ್ ಕವಿ ಹೇಳಿದಾನೆ. ಆ ಮಾತಿನ ಒರೆಗಲ್ಲಿಗೆ 'ವಿನಾಯಕ'ರ ಕೃತಿಗಳು ಸಹಜವಾಗಿ ನಿಲ್ಲಬಲ್ಲವು. ಚೆಡರ್ ಗುಹೆಗಳಲ್ಲಿಯ ಅದ್ಭುತವನ್ನು ಕಂಡು ಬರೆದ 'ಚೂರ್ಣ ಘನ ಲಿಂಗಾಂಗ', 'ಕವಿ ಜೀವನ ಸೌಂದರ್ಯ', 'ವಿಧಿ ವಿಲಾಸಿನಿ' ಮುಂತಾದ ಇವರ ಕೃತಿಗಳು ಜಗತ್ತಿನ ಉದಾತ್ತ ಸಾಹಿತ್ಯಕ್ಕೆ ಸೇರಬಲ್ಲವು. 'ವಿನಾಯಕ'ರು ವಿಮರ್ಶಕರೂ ಅಹುದು. 'ಬಾಲ ಪ್ರಪಂಚ'ದಲ್ಲಿ ಕಾರಂತರು ಮೂವರು ಅತ್ಯುತ್ತಮ ವಿಮರ್ಶಕರಲ್ಲಿ ಇವರ ಹೆಸರನ್ನೂ ಸೇರಿಸಿದಾರೆ. ಸುಂದರವಾದ ವಿಷಾದಾಂತ ಕಲೆಗಳೆಂದರೆ ಇವರಿಗೆ ಬಹಳ ಪ್ರೀತಿ. ಬದುಕಿನ ಚೆಲುವು ಶೋಕದಲ್ಲಿದೆ. "The Sweetness of life is latent in tragedy" ಎಂದು ಇವರು ಒಂದು ಸಲ ಹೇಳಿದರು.

ಅತಿ ಕಿರಿಯ ವಯಸ್ಸಿನಲ್ಲಿಯೇ ಇವರು ಪ್ರಿನ್ಸಿಪಾಲರಾಗಿದಾರೆ. ಇವರ ಇಂಗ್ಲಿಷ್ ಭಾಷಣಗಳಿಗೆ ಜನ ಅತಿಯಾಗಿ ಮೆಚ್ಚಿದಾರೆ. ಇಲ್ಲಿಯ ವಿದ್ಯಾರ್ಥಿಗಳಿಗಂತೂ ಇವರ ಭಾಷಣಗಳೆಂದರೆ ಪ್ರಾಣ. ಆದರೆ ಪ್ರಿನ್ಸಿಪಾಲರಾದಂದಿನಿಂದ ಇವರ ಸಾಹಿತ್ಯದ ಬೆಳೆ ಅಷ್ಟು ಹೆಚ್ಚಾಗಿ ಬರಲಿಲ್ಲ. ಅಂತೆಯೇ ಮಾಸ್ತಿ ಅವರು ಹೇಳಿದರಂತೆ: 'ನೀವು ಪ್ರಿನ್ಸಿಪಾಲರಾದದ್ದು ಕನ್ನಡ ಸಾಹಿತ್ಯಕ್ಕೆ ಸ್ವಲ್ಪ ಹಾನಿ' ಎಂದು. 'ವಿನಾಯಕ'ರು ಮತ್ತೆ ಕನ್ನಡಕ್ಕೆ ತುಂಬಿದೆದೆಯಿಂದ ಮರಳುವರೆಂಬ ಆಶೆಯೂ ಇದೆ. ಇಲ್ಲಿ ಸಾಹಿತ್ಯದ ಚಟುವಟಿಕೆಗಳು ನಡೆದೇ ಇವೆ. 'ವರುಣಕುಂಜ' ಕಟ್ಟಿದಾರೆ. ತರುಣ ಸಾಹಿತಿಗಳ ಕೈದೀವಿಗೆಯಾಗಿದಾರೆ.

ವಿದ್ಯಾರ್ಥಿಗಳ ಮೇಲೆ ವಿನಾಯಕರ ಮಮತೆ ಬಹಳ. ಇಲ್ಲಿ ಒಬ್ಬ ವಿದ್ಯಾರ್ಥಿ ರೈಲಿನ ಅಪಘಾತದಲ್ಲಿ ತೀರಿಹೋದರು. ಮರುದಿನ ಶೋಕಸಭೆಯಲ್ಲಿ (Condolence meeting) ಮಾತನಾಡುವಾಗ 'During the regime of my Principalship' ಎಂದುಅನ್ನುವಾಗ ಅವರ ಕುತ್ತಿಗೆ ತುಂಬಿ ಬಂದಿತ್ತು. ಕಣ್ಣಿನಿಂದ ಪಟಪಟ ಹನಿಗಳು ಉದುರಿದವು. ಅಷ್ಟು ಪ್ರೀತಿ ಅವರದು ವಿದ್ಯಾರ್ಥಿಗಳ ಮೇಲೆ.

## ಕುಮಾರವ್ಯಾಸ*

(ಶ್ರೀ. ಕೆ. ವಿ. ಪುಟ್ಟಪ್ಪನವರು, ಎಂ.ಎ.)

ಹಳೆಗನ್ನಡದ ಕವಿ ಪಂಪ– ಕಲಿತವರಿಗೆ ಕಲ್ಪವೃಕ್ಷ. ನಡುಗನ್ನಡದ ಕವಿ ನಾರಣಪ್ಪ – ಕಲಿಯದವರಿಗೂ ಕಾಮಧೇನು. ಕರ್ನಾಟಕದ ಕವಿ ಜೀವನದ ಮೇಲೆ ಪಂಪನ ಪ್ರಭಾವ ವಿಶೇಷವಾಗಿರಬಹುದು. ಆದರೆ ಜನಜೀವನದ ಹೃದಯ ವೇದಿಕೆಯಲ್ಲಿ ನಾರಣಪ್ಪನೇ ಅಗ್ರಾಸನಸ್ಥ, ಮಹಾಧ್ಯಕ್ಷ. ಅದಕ್ಕೆ ಕಾರಣ ನಾರಣಪ್ಪನ ನಡುಗನ್ನಡದ ಭಾಮಿನೀ ಗಣದ ತರಂಗಶೈಲಿಯ ಸುಲಭ ಸರಳತೆ ಮಾತ್ರವಲ್ಲ; ಪ್ರವಾಹ ಪೂರ್ಣವಾದ ಪರ್ವತ ಭಾಗೀರಥಿಯ ಅದಮ್ಯವೇಗದ ಭೀಮಗಮನ ವಿನ್ಯಾಸದಿಂದ ಮುನ್ನುಗ್ಗುವ ಆತನ ಪ್ರತಿಭೆಯೊಂದೇ ಅಲ್ಲ; ಹೆಮ್ಮೋಡದಂತೆ ದಿಗಂತದಿಂದ ಅನಿರೀಕ್ಷಿತವಾಗಿ ಮೇಲ್ವಾಯುವ ಅವನ ಕಲ್ಪನಾಶಕ್ತಿ ಕಾರ್‍ಗಾಳಿಯಂತೆ ಬೀಸಿ ಬಡಿಯುವ ಅವನ ಭಾವಾವೇಗ, ಮಿಂಚಿನ ಬಳ್ಳಿಯಂತೆ ಅಲ್ಲಲ್ಲಿ ತಳತಳಿಸುವ ಆತನ ಉಪಮಾರೂಪಕಾದಿಗಳ ರುದ್ರರಮ್ಯತೆ, ಸಿಡಿಲು ಗುಡುಗಿನ ಡಮರುಡಾಡಿಮಗಳನ್ನೇ ಹಿಡಿದು ಬಡಿದು ಕುಣಿವ ನಾದ ತಾಂಡವನಂತಹ ಆತನ ರುದ್ರ ನೃತ್ಯ ಶೈಲಿ– ಇವು ಮಾತ್ರವೇ ಸಮಸ್ತ ಕಾರಣವಲ್ಲ, ಗದುಗಿನ ಭಾರತದ ಜನಪ್ರಿಯತೆಗೆ. ಕವಿ ವಿರಾಟ್ ಕುಮಾರವ್ಯಾಸನ ಕಾವ್ಯ ಲಕ್ಷ್ಮಿಗೆ ಆಕೆಯ ನಾಡಿಯ ನಿತ್ಯ ಚಲನಗಳೇನೋ ನಿಜ, ಮೇಲೆ ಹೇಳಿದ ಗುಣಗಳೆಲ್ಲ. ಜೊತೆಗೆ ಬಹು ಮುಖ್ಯವಾಗಿ ಅವನ ಮಹಿಮೆಗೆ ಕಾರಣ – ಆತನ ಧರ್ಮದೃಷ್ಟಿ, ಆತನ ಭಗವದ್ಭಕ್ತಿ, ಆತನ ಋಷಿದರ್ಶನ, ಅವನ ಕೃತಿ ಕಲೆಗಾಗಿ ಕಲೆಯಾಗಿರದೆ ರಸರೂಪಿ ವಿಶ್ವೇಶನ ಸಾಕ್ಷಾತ್ಕಾರಕ್ಕೆ ಸೋಪಾನವೂ, ಸಾಧನವೂ ಆಗಿದೆ. ಆದ್ದರಿಂದಲೇ ಸಾಹಿತ್ಯ ವಿಮರ್ಶಕನ ದೃಷ್ಟಿಯಿಂದ ತನ್ನ ಕೃತಿಯನ್ನು ಪರಿಶೀಲಿಸುವವರ ವಿಷಯದಲ್ಲಿ ಆತನಿಗೆ ಕೊಂಚ ಜುಗುಪ್ಸೆ. ಅದಿರಲಿ, ಕಡೆಗೆ ಪದಕ್ಕೆ ಒಂದು ಖಚಿತವಾದ ಅರ್ಥವಿರಲೇಬೇಕೆಂಬ ನಿಘಂಟಿನ ನಿಯಮಕ್ಕೂ ಅವನು ನಿಷ್ಠಾವಂತನಾಗಿರುವಂತೆ ತೋರುವುದಿಲ್ಲ.

> ಪದದ ಪ್ರೌಢಿಯ, ನವರಸಂಗಳ
> ಉದಿತವನು, ಅಭಿಧಾನಭಾವವ
> ಬೆದಕಲಾಗದು ಬಲ್ಲ ಪ್ರೌಢರುಮೀಕಥಾಂತರಕೆ
> ಇದು ವಿಚಾರಿಸೆ ಬರಿಯ ತೊಳಸಿಯ
> ಉದಕದಂತಿರೆ, ಇಲ್ಲಿ ನೋಳ್ಪುದು
> ಪದುಮನಾಭನ ಮಹಿಮೆ, ಧರ್ಮವಿಚಾರಮಂತ್ರವನು

ಧರ್ಮಬೋಧೆ ಆಕರ್ಷಿಸದವರನ್ನು ಕಲಾಸೌಂದರ್ಯವಾದರೂ ಸೆಳೆದು ಸಯ್ಪಿನ ಕಡೆಗೆ ನಡೆಯಿಸಲಿ ಎಂಬುದು ಆತನ ಆಕಾಂಕ್ಷೆ:

> ಸರಸರಿಗೆ ಸಾಹಿತ್ಯರಿಗೆ ಹರಿ
> ಶರಣರಿಗೆ ಸುಜನರಿಗೆ ಶಾಂತಾ
> ತ್ಮರಿಗೆ ತರವಿದು ವಶ್ಯಮಾತ್ರದಮೋಘರಸಘುಟಿಕೆ
> ದುರುಳರಿಗೆ ದೂಷಕರಿಗತಿಮೊಗ
> ದಿರುಹುವರಿಗಜ್ಞರಿಗೆ ಚಿತ್ತಾ
> ಕರುಷಣವು ಕವಿತಾ ವಿಲಾಸದ ಚಮತ್ಕಾರ ||'

ನಾರಣಪ್ಪನಿಗೆ ಭಾರತವೆಂದರೆ ಭಗವಂತನ ಲೀಲೆ. ಆತನ ಲೀಲೆಯ ಸ್ಮರಣೆ, ಆತನ ಲೀಲೆಯ ಧ್ಯಾನ, ಆತನ ಲೀಲೆಯ ವರ್ಣನ ಮತ್ತು ವಾಚನ– ಈ ಎಲ್ಲ ಸಾಧನಗಳಿಂದ ಎಂದರೆ, ಹೃದಯದ ಮೇಲೆ ಹಾದು ಹೋಗುವ ಮಹದ್ಭಾವಗಳ ಪವಿತ್ರ ಪದಸ್ಪರ್ಶನದಿಂದ ಪ್ರಾಪ್ತವಾಗುವ ಜೀವನದ ಸಂಸ್ಕಾರವೇ ತಪಸ್ಸಾಧನೆಯಾಗಿ ಆತ್ಮಬೋಧೆಗೆ ಹಾದಿಯಾಗುತ್ತದೆ.

### ವೀರಶೈವ ವೆಲ್ಟನ್‌ಶಾಂಗದ ಬಗ್ಗೆ ಇಂಗ್ಲೆಂಡಿನಲ್ಲಿ ಪ್ರಶಂಸೆ

ಲಿಂಗವಂತ ಸಮಾಜದ ಸುಧಾರಣ ಸಂಘದ ಗೌರವ ಕಾರ್ಯದರ್ಶಿಗಳಾದ ಶ್ರೀ. ಪರುತಪ್ಪ ಗದಿಗೆಪ್ಪಾ ಮಿರ್ಜಿ ಅವರು ಹೀಗೆ ಬರೆಯುತ್ತಾರೆ:

ಇಂಗ್ಲೆಂಡಿನ ಸುಪ್ರಸಿದ್ಧ ತತ್ತ್ವಜ್ಞಾನಿಗಳಾದ ರೆವರಂಡ್ ಆರ್. ಈ. ಡೇವ್ಹಿಸ್, ಯುಪಿಂಗ್ಹ್ಯಾಮ್ ರಟ್ಲಂಡ ಅವರು ಧಾರವಾಡದ ನವಕಲ್ಯಾಣ ಮಠದ ಶ್ರೀ ಕುಮಾರಸ್ವಾಮಿಗಳು ಬರೆದ **ವೀರಶೈವ ವೆಲ್ಟನ್ ಶಾಂಗ್** ಎಂಬ ಗ್ರಂಥದ ವಿಷಯವಾಗಿ ಹೀಗೆ ಅಭಿಪ್ರಾಯ ಪಡುತ್ತಾರೆ: "ನಾನು ಈ ಪುಟ್ಟ ಪುಸ್ತಕವನ್ನು ಒಳ್ಳೇ ಅಸಕ್ತಿಯಿಂದ ಮತ್ತು ಕುತೂಹಲದಿಂದ ಓದಿದೆನು ಮತ್ತು ಇದನ್ನು ಇಂಗ್ಲೆಂಡಿನಲ್ಲಿ ಪ್ರಕಟಗೊಳಿಸಬೇಕೆಂದೆಣಿಸಿ ಇದರ ಯೋಗ್ಯತೆಯನ್ನರಿಯಲು ನನಗಿಂತಲೂ ಹೆಚ್ಚು ಬಲ್ಲಿದರಾದವರಿಗೆ ಓದಲು ಕೊಟ್ಟೆನು. ಅವರಾದರೂ ಇದನ್ನು ಒಳ್ಳೇ ಅಭಿರುಚಿಯಿಂದ ಓದಿದರು. ಈ ಪುಸ್ತಕ ಸ್ಪಷ್ಟ ಹಾಗು ಮನಂಬುಗುವ ರೀತಿಯಲ್ಲಿ ಬರೆಯಲ್ಪಟ್ಟಿರುವುದರಿಂದ ನನಗೆ ಇದರಿಂದ ತುಂಬಾ ಸಹಾಯವಾಗಿದೆ."

## ಸಾದರ ಸ್ವೀಕಾರ

**ವಚನಧರ್ಮಸಾರ.** ಬರೆದವರು: ಶ್ರೀ. ಎಂ. ಆರ್. ಶ್ರೀನಿವಾಸ ಮೂರ್ತಿಗಳು, ಬಿ.ಎ., ಮೈಸೂರು ವಿಶ್ವವಿದ್ಯಾನಿಲಯದ ಪ್ರಕಟನೆ. ಬೆಲೆ ೧೨ ಆ.

**ಹೊಸ ಪದ್ಧತಿಯ ಬಸವೇಶ್ವರನ ವಚನಗಳು.** ಸಂಪಾದಕರು ಮತ್ತು ಪ್ರಕಾಶಕರು: ರಾವ್ ಬಹದ್ದೂರ್ ಶ್ರೀ ಫ. ಗು. ಹಳಕಟ್ಟಿಯವರು, ಬಿ.ಎ., ಎಲ್‌ಎಲ್.ಬಿ. ಬೆಲೆ ೧ ರೂ. ೮ ಆ.

**ಕಾರಡಗಿ ಮಹಾಲ ದೇಶಪಾಂಡೆಯವರ ಸಂಕ್ಷಿಪ್ತ ಇತಿಹಾಸ.** ಬರೆದವರು: ಶ್ರೀ. ಗೋವಿಂದರಾವ್ ದೇಶಪಾಂಡೆ ಸವಣೂರು ಅವರು, ಧಾರವಾಡ. ಕ್ರೌನ್ ಅಷ್ಟಪತ್ರ. ಪುಟಗಳು ೧೪೭. (ಸಚಿತ್ರ) ಬೆಲೆ ೧ ರೂ.

* ಶ್ರೀಮಾನ್ ಕೆ. ವಿ. ಪುಟ್ಟಪ್ಪನವರು ಆಕಾಶವಾಣಿಯಲ್ಲಿ ತಾ|| ೨೦–೯–೪೨ ರಲ್ಲಿ ಕುಮಾರವ್ಯಾಸೋತ್ಸವ ಸಮಾರಂಭದಲ್ಲಿ ಮಾಡಿದ ಭಾಷಣದಿಂದ.

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧೨
ಬಿಡಿ ಪತ್ರಿಕೆ: ೬ ಕಾಸು



ಸಂಪಾದಕ:
ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೪
ಬೆಂಗಳೂರು: ಶುಕ್ರವಾರ, ನವೆಂಬರ್ ೧೩, ೧೯೪೨

## ಹೊಸಗನ್ನಡದ ಆರಂಭಕಾಲ*

(ಸಂಗ್ರಹಕಾರರು: ಶ್ರೀ. ಎಚ್. ಜಿ. ಕಟ್ಟಿಯವರು)

ಕನ್ನಡ ನುಡಿಯ ಆರಂಭದ ಕಾಲವನ್ನಾಗಲಿ, ಹೊಸಗನ್ನಡದ ಕಾಲವನ್ನಾಗಲಿ, ಇಂಥ ದಿವಸ, ಇಷ್ಟು ಗಂಟೆಗೆ ಎಂದು ಹೇಳುವುದು ಸಾಧ್ಯವಿಲ್ಲವಾದರೂ ಈಗ ನಾವು ಯಾವುದಕ್ಕೆ ಹೊಸಗನ್ನಡ ಎಂದು ತಿಳಿಯುತ್ತಲಿರುವೆವೋ ಆ ತೆರದ ಕನ್ನಡ ಆರಂಭವಾದ ಕಾಲದ ವಿಚಾರವನ್ನು ಸ್ಥೂಲಮಾನದಿಂದಾದರೂ ಹೇಳಬಹುದು.

ಒಂಬತ್ತನೆಯ ಶತಮಾನದಲ್ಲಿ ಆಗಿ ಹೋದ ನೃಪತುಂಗನು 'ಪೊಸಗನ್ನಡ' ಎಂಬ ಪದವನ್ನು ಉಪಯೋಗಿಸಿದುದು ಕಂಡುಬರುತ್ತದೆ. ಅನಂತರ ೧೨ನೆಯ ಶತಮಾನದಲ್ಲಿಯ ನಯಸೇನನು 'ಪೊಸಗನ್ನಡ'ದಲ್ಲಿ ತಾನು ಕಾವ್ಯವನ್ನು ಬರೆದೆನೆಂದು ಹೇಳಿಕೊಂಡಿದ್ದಾನೆ. ಹೀಗೆ ಬಹುತರ ಇನ್ನುಳಿದ ಹೆಸರಾದ ಕವಿಗಳು ಕೂಡ ತಾವು ಹೊಸಗನ್ನಡದಲ್ಲಿಯೂ ಹೊಸದೇಸಿಯಲ್ಲಿಯೂ ಬರೆದಿರುವೆವೆಂದು ಹೇಳಿಕೊಂಡಿದ್ದಾರೆ. ಹೀಗೆ ನಮ್ಮ ಕನ್ನಡ ನುಡಿ ಕವಿಗಳಿಂದ ಹೊಸಹೊಸದಾಗಿ ಬೆಳಗಿದರೂ ಕೂಡ ಜನತೆಗೆ ಹೊಸದೆಂಬುದು ಯಾಕೆ ಸಾಕಾಗದಿರಬೇಕು? ಈ ೨೦ನೆಯ ಶತಮಾನದಲ್ಲಿ ಕೂಡ 'ನಾನು ಹೊಸಗನ್ನಡದಲ್ಲಿ ಬರೆದೆ' ಎಂದು ಹೇಳಿಕೊಳ್ಳುವ ಪ್ರಸಂಗವು ಲೇಖಕರಿಗೆ ಬರುತ್ತಲಿದೆ! ಹಾಗಾದರೆ ಹೊಸಗನ್ನಡ ಎಂದರೇನು?

ಪೊಸಗನ್ನಡ - ಪೊಸತುಕನ್ನಡ, ಅಂದರೆ ಮನೋಹರವಾದ ಕನ್ನಡ ಎಂದು ಅರ್ಥವಿದೆ. ಕನ್ನಡ ನುಡಿಯೇನೋ ಹಳೆಯದೇ ಆದರೂ ಕೂಡ ಅದನ್ನು ಹೇಳುವ ರೀತಿ ಹೊಸದಾಗಿರಬೇಕು. ಅದು ನಮ್ಮೆಲ್ಲರ ಮನಸ್ಸಿಗೆ ಒಪ್ಪಬೇಕು. ಹೆಚ್ಚು ಬೆಲೆಯುಳ್ಳ ಒಂದು ಅಂಗಿಯನ್ನು ಹೊಲಿಸಿ ಗಂಟಿನಲ್ಲಿಟ್ಟು ಹಬ್ಬ ಹುಣ್ಣಿಮೆಗಳಲ್ಲಿ ಮಾತ್ರ ತೆಗೆದು 'ಹೊಸ ಅಂಗಿ' ಎಂದು ನಾವು ಹಾಕಿಕೊಳ್ಳುವುದಿಲ್ಲವೇ ಹಾಗೆಯೇ ಹೊಸಗನ್ನಡ ಮನೋಹರವಾಗುವ ಬಗೆ. ಹಳಗನ್ನಡ - ಪಳಗನ್ನಡ ಅಂದರೆ ಪಳಮಾತು, ಬಹುಕಾಲ ಬಳಕೆಯಲ್ಲಿ ಇದ್ದ ಮಾತು ಎಂದು ಅರ್ಥ. ಹೀಗೆ ಹಳಗನ್ನಡವೆಂದರೆ ಬಹುಕಾಲದಿಂದಲೂ ಬಳಕೆಯಲ್ಲಿ ಇದ್ದುದೆಂತಲೂ, ಹೊಸಗನ್ನಡವೆಂದರೆ ಹೊಸತಾಗಿ ಬಳಕೆಯಲ್ಲಿ ಬಂದು ಮನೋಹರವಾಗಿ ತೋರುವಂತಹದೆಂತಲೂ ಹಿಂದಿನ ಕವಿಗಳು ಭಾವಿಸಿದಂತೆ ಕಂಡುಬರುತ್ತಿದೆ. ಇಂದಿನ ಕವಿಗಳಲ್ಲಿ ಹಿರಿಯರಾದ ಶ್ರೀ. ಬಿ. ಎಂ. ಶ್ರೀಕಂಠಯ್ಯನವರ ಹಾಗೂ ಶ್ರೀಮಾನ್ ಮುಳಿಯ ತಿಮ್ಮಪ್ಪಯ್ಯನವರ ಕೆಲವು ಕೃತಿಗಳು ಹಳಗನ್ನಡದಲ್ಲಿವೆ ಅಂದರೆ ಬಹುಕಾಲದಿಂದಲೂ ಬಂದ ಭಾಷೆಯಲ್ಲಿವೆ ಎಂದರ್ಥ.

ಮೆ. ರಾಯಿಸ್ ಮತ್ತು ಕಿಟೆಲ್ ಮೊದಲಾದ ಕೆಲವು ಮಹನೀಯರು ಹನ್ನೆರಡನೆಯ ಶತಮಾನದ ಸುಮಾರಿಗೆ ಹಳಗನ್ನಡದ ಅವತಾರ ಮುಗಿದುಹೋಯಿತೆಂದು ತಿಳಿಯುತ್ತಾರೆ. ಕಿಟೆಲ್ ಅವರು ಶಿವಶರಣರ ವಚನ ಹಾಗೂ ರಗಳೆಗಳು, ಕವಿಗಳ ಷಟ್ಪದಿಗಳು, ದಾಸರ ಕೀರ್ತನೆಗಳು ಹೊಸಗನ್ನಡಕ್ಕೆ ಹಾದಿಮಾಡಿಕೊಟ್ಟವೆಂದು ಹೇಳುವರು. ರಾಯಿಸ್ ಅವರು ಯಕ್ಷಗಾನದ ಆರಂಭವೆ ಹೊಸಗನ್ನಡದ ಆರಂಭವೆಂದು ತಿಳಿಯುವರು. ಇವರ ಮತದಂತೆಯೇ ಸಾಗಿದೆವೆಂದು ತಿಳಿಯುವಾ. ದಾಸರು ಹಾಡಿ ನೂರಾರು ವರ್ಷಗಳಾದ ಮೇಲೆ, ಯಕ್ಷಗಾನಗಳು ಬಳಕೆಯಲ್ಲಿ ಬಂದು ಅದೆಷ್ಟೋ ಕಾಲವಾದ ಮೇಲೆ ಸು. ೧೮೯೩ರಲ್ಲಿ ನಂದಳಿಕೆ ಲಕ್ಷ್ಮೀನಾರಾಯಣಪ್ಪನವರು 'ರಾಮಾಶ್ವಮೇಧ'ವನ್ನು ಬರೆದರು. ಅದು ಹೊಸಗನ್ನಡವೋ ಹಳಗನ್ನಡವೋ ನಿರ್ಧರಿಸುವುದು ತುಂಬ ಕಷ್ಟವಾಗುವುದು. ಯಾಕೆಂದರೆ ಅದರಲ್ಲಿ ಉಪಯೋಗಿಸಿದ ನುಡಿಗಳು ಹಳೆಯವಾದರೂ ರೀತಿ ಹೊಸದಿದೆ. ಅದೊಂದು ಕನ್ನಡದಲ್ಲಿ ಮೇಲಾದ ಕಾವ್ಯ.

ಇಂದು ಕನ್ನಡ ಎಂದಿನಿಂದ ಆರಂಭವಾಯಿತು? ಇದಕ್ಕೆ ಉತ್ತರ ಹೇಳುವದು ಸುಲಭವಿದೆಯೇ? ಓದದೆಯು ಪರಿಣತಮತಿಗಳ್ ಆದ ಕನ್ನಡಗರ ಮಾತು, ಬರಹ ಹಾಡುಗಳು ಯಾವಾಗಲೂ ಮನೋಹರವೆ ಅಹುದು. ಆದರೂ ಕೂಡ 'ಪದ್ಯ ವಧ್ಯಂ ಗದ್ಯಂ ಹೃದ್ಯಂ' ಎಂಬ ವಿಚಾರ ನಮ್ಮ ನಾಡಿನಲ್ಲಿ ಎಂದಿನಿಂದ ಬೆಳೆಯಹತ್ತಿತೊ, ಭರದಿಂದ ಬೆಳೆಯತೊಡಗಿತೊ ಅಂದಿನಿಂದ ಹೊಸಗನ್ನಡ ಕಾಲ ಆರಂಭವಾಯಿತು. ಎಂದು ತಿಳಿಯಬೇಕು. ಹಾಗಾದರೆ ಅದು ಎಂದಿನಿಂದ?

೧೮೨೩ನೆಯ ವರ್ಷ ಮೈಸೂರಿನಲ್ಲಿ ಕೆಂಪುನಾರಾಯಣ ಎಂಬವರು 'ಮುದ್ರಾಮಂಜೂಷ'ವನ್ನು ಗದ್ಯಪ್ರಧಾನವಾಗಿ ಬರೆದರು. ಆಗಿನ ದೊರೆಗಳಾದ ಮುಮ್ಮಡಿ ಕೃಷ್ಣರಾಜರು 'ಶಾಕುಂತಲ', 'ಮಾಲವಿಕಾಗ್ನಿಮಿತ್ರ' ಮೊದಲಾದ ಕೆಲವು ಹೊತ್ತಿಗೆಗಳನ್ನು ಗದ್ಯದಲ್ಲಿಯೆ ಬರೆಯಿಸಿದರು. ಅವು ಈಗ ನಮಗೆ ಹಳಗನ್ನಡದಂತೆ ಕಾಣುತ್ತಲಿವೆ! ಆದರೆ ಆಗಿನ ಕಾಲದಲ್ಲಿ ಪದ್ಯವನ್ನೇ ಓದಿಓದಿ ಪಳಗಿದ ಬಾಯಿಗೆ ಈ ಗದ್ಯವೇ ಹೊಸದಾಯಿತು. ಇದೇ ನನ್ನ ದೃಷ್ಟಿಯಿಂದ ಹೊಸಗನ್ನಡದ ಆರಂಭದ ಕಾಲ..

೧೮೨೦ನೆಯ ವರ್ಷದಲ್ಲಿ ಮಿಶನರಿಗಳು ಕನ್ನಡದಲ್ಲಿ ಪರಿವರ್ತಿಸಿದ ಬೈಬಲ್ಲನ್ನು ಅಚ್ಚುಹಾಕಿಸಿದರು. ೧೮೩೮ರಲ್ಲಿ ಕೃಷ್ಣಮಾಚಾರಿಯವರು ಹೊಸಗನ್ನಡ ವ್ಯಾಕರಣವನ್ನು ಬರೆದರು. ಈ ಕಾಲದಿಂದ ಮುಂದೆ ಹತ್ತಿಪ್ಪತ್ತು ವರ್ಷಗಳ ವರೆಗೆ ಗದ್ಯ ಪ್ರಧಾನವಾದ ಹಲವು ಪುಸ್ತಕಗಳು ಬಯಲಿಗೆ ಬಂದವು. ೧೮೬೫ರಲ್ಲಿ ಧಾರವಾಡದಲ್ಲಿ ಒಂದೂ ಕನ್ನಡ ಶಾಲೆಯಿರಲಿಲ್ಲ. ಇದನ್ನು ಕೇಳಿ ಕನ್ನಡಿಗರಿಗೆ ಸೋಜಿಗವಾಗಬಹುದು. ಆದರೆ ನಿಜವಾಗಿಯೂ ಆಗ ಒಂದೂ ಕನ್ನಡ ಶಾಲೆಯಿರಲಿಲ್ಲ. ಮುಂದೆ ಒಂದೆರಡು ವರ್ಷಗಳಲ್ಲಿ ಕನ್ನಡ ಶಾಲೆಗಳೂ, ಮುದ್ರಣಾಲಯಗಳೂ, ವೃತ್ತಪತ್ರಿಕೆಗಳೂ ಮೈದೋರಿದವು. ಈಗಿನ ಪ್ರಾಥಮಿಕ ಶಿಕ್ಷಣ ಮಾಸಪತ್ರಿಕೆ ಆಗ 'ಮಠಪತ್ರಿಕೆ' ಎಂಬ ಹೆಸರಿನಲ್ಲಿ ಹೊರಡುತ್ತಲಿದ್ದಿತು. ಯಾವಾಗ ಕನ್ನಡ ಟ್ರೈನಿಂಗ್ ಕಾಲೇಜು ಧಾರವಾಡದಲ್ಲಿ ಆರಂಭವಾಯಿತೋ ಆಗ ಈ ಉತ್ತರ ಕರ್ನಾಟಕದಲ್ಲಿ ಹೊಸಗನ್ನಡ ತಲೆಎತ್ತಿತೆಂದು ತಿಳಿಯಬಹುದು.

ಬಂಗಾಲದಲ್ಲಿ ಬಂಕಿಮಚಂದ್ರರು, ಗುಜರಾಥದಲ್ಲಿ ಗೋವರ್ಧನರಾಯರು, ಮಹಾರಾಷ್ಟ್ರದಲ್ಲಿ ಆಪಟೆಯವರು ಗದ್ಯ ವಾಙ್ಮಯವನ್ನು ಪ್ರತಿಭಾಯುಕ್ತವಾಗಿ ಹೊರಸೂಸಿದರು. ಕನ್ನಡದಲ್ಲಿಯೂ ಲೇಖಕರು ಅವರ ಸಮಕಾಲೀನತೆಯಲ್ಲಿಯೇ ಇರಲಿಲ್ಲವೆಂತಲ್ಲ. ಇದ್ದರೂ ಅವರಿಗೆ

(೨೨ನೆಯ ಪುಟಕ್ಕೆ)

* ಧಾರವಾಡ ಗಂಡುಮಕ್ಕಳ ಟ್ರೇನಿಂಗ್ ಕಾಲೇಜದ ವಿದ್ಯಾರ್ಥಿ ಶಿಕ್ಷಕರ ವಾದವಿವಾದ ಕೂಟದಲ್ಲಿ ಪ್ರೊ. ಎಸ್. ಎಸ್. ಮಾಳವಾಡ ಅವರು ೮-೮-೧೯೪೨ನೆಯ ದಿವಸ ಕೊಟ್ಟ ಭಾಷಣದ ಮುಖ್ಯಾಂಶಗಳಿವು.

# ಕನ್ನಡ ನುಡಿ

**ಶುಕ್ರವಾರ, ನವೆಂಬರ್ ೧೪, ೧೯೪೭**

## ವಯಸ್ಕರಿಗೊಂದು ವಾರಪತ್ರಿಕೆ

ಮೈಸೂರು ಅಕ್ಷರ ಪ್ರಚಾರ ಸಮಿತಿಯವರು ಅಕ್ಷರ ಕಲಿತ ವಯಸ್ಕರಿಗಾಗಿ ಒಂದು ವಾರಪತ್ರಿಕೆಯನ್ನು ಪ್ರಾರಂಭ ಮಾಡಿ, ಮೊದಲನೆಯ ಸಂಚಿಕೆಯನ್ನು ದೀಪಾವಳಿಯ ದಿನ (೭-೧೧-೪೭) ಹೊರಡಿಸಿದ್ದಾರೆ. ಮೊದಲನೆಯ ಸಂಚಿಕೆಯಲ್ಲಿ ಶ್ರೀಮನ್ಮಹಾರಾಜರವರ ಸಂದೇಶವೂ ದೀಪಾವಳಿಯ ಕತೆಯೂ ಸುದ್ದಿಗಳೂ ಪ್ರಕಟವಾಗಿವೆ. ಈ ಪತ್ರಿಕೆಯ ಉದ್ದೇಶ, ಸಂಪಾದಕರ ಮಾತಿನಲ್ಲಿ, "ಇದರಿಂದ ಹೊಸದಾಗಿ ಅಕ್ಷರ ಕಲಿತವರಿಗೆ ಪತ್ರಿಕೆಯನ್ನು ಓದುವ ಅಭ್ಯಾಸವಾಗಬೇಕು; ಪ್ರಪಂಚದ ಸುದ್ದಿಗಳು ಅವರಿಗೆ ತಿಳಿಯಬೇಕು. ಮುಂದಕ್ಕೂ ಅವರು ತಾವೇ ಇತರ ಪತ್ರಿಕೆಗಳನ್ನು ಓದಬೇಕು. ತಾವು ಕಲಿತ ವಿದ್ಯೆಯನ್ನು ಬೆಳಕಿನ ಮೂಲಕ ಹೆಚ್ಚಿಸಿಕೊಳ್ಳಬೇಕು."

ಕಲಿತ ವಿದ್ಯೆ ವಯಸ್ಕರಲ್ಲಿ ನೆಲಸಿ ಅವರು ಅದನ್ನು ಹೆಚ್ಚಿಸಿಕೊಳ್ಳಬೇಕೆಂಬ ದೊಡ್ಡ ಗುರಿಯಿಂದ ಸಮಿತಿ ಹೊರಡಿಸುತ್ತಿರುವ ಸಣ್ಣ ಪುಸ್ತಕಗಳ ಜೊತೆಗೆ ಈ ವಾರಪತ್ರಿಕೆ ಹೊರಡಿಸಲು ನಿಶ್ಚಯಿಸಿ ಅದನ್ನು ಕಾರ್ಯರೂಪಕ್ಕೆ ತಂದದ್ದಕ್ಕಾಗಿ ನಾವು ಸಮಿತಿಯ ಅಧಿಕಾರಿ ವರ್ಗದವರನ್ನು ಅಭಿನಂದಿಸುತ್ತೇವೆ. 'ಬೆಳಕು' ಜಯಪ್ರದವಾಗಿ ನಡೆಯಲೆಂದು ಆಳುವ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರು ಶ್ರೀ ಜಯಚಾಮರಾಜ ಒಡೆಯರವರು ಸಂದೇಶವನ್ನು ಕೃಪೆ ಮಾಡಿರುತ್ತಾರೆ:

> **"ಮೈಸೂರು ಸಂಸ್ಥಾನದ ಅಕ್ಷರಪ್ರಚಾರ ಸಮಿತಿ ನಡಸುತ್ತಿರುವ ಕಾರ್ಯಕಲಾಪಗಳನ್ನು ಆಳುವ ಮಹಾಸ್ವಾಮಿಯವರು ಮೆಚ್ಚಿರುವರು. ಅವುಗಳನ್ನು ಮಹಾಸ್ವಾಮಿಯವರು ಬಹಳ ಕುತೂಹಲದಿಂದ ನೋಡುತ್ತಿರುವರು. ಸಂಸ್ಥಾನದಲ್ಲೆಲ್ಲಾ ನಡಸುತ್ತಿರುವ ಅಕ್ಷರಪ್ರಚಾರ ಕಾರ್ಯದಿಂಬ ತುಂಬ ಆಶಾದಾಯಕವಾದ ಫಲವಾಗಿದೆ ಎಂಬುದು ಮಹಾಸ್ವಾಮಿಯವರಿಗೆ ಸಂತೋಷವನ್ನುಂಟುಮಾಡಿದೆ. ಸಮಿತಿ ಪ್ರಕಟಿಸಬೇಕೆಂದಿರುವ 'ಬೆಳಕು' ಎಂಬ ವಾರಪತ್ರಿಕೆ, ಜಯಪ್ರದವಾಗಿ ನಡೆಯಲೆಂದು ಮಹಾಸ್ವಾಮಿಯವರು ಕೋರುತ್ತಾರೆ."**

'ಬೆಳಕು' ಪತ್ರಿಕೆಯ ಉದ್ದೇಶ ದೊಡ್ಡದು. ನಮ್ಮ ದೇಶ ಎಲ್ಲ ಮುಖದಿಂದ ಏಳಿಗೆ ಹೊಂದಬೇಕಾದರೆ ಜನರಲ್ಲಿ ವಿದ್ಯೆ ಹರಡಿ, ಜ್ಞಾನದ ಮಟ್ಟ ಹೆಚ್ಚುವಂತೆ ಏರ್ಪಾಟು ಮಾಡಬೇಕು. ಅಕ್ಷರ ಕಲಿತ ವಯಸ್ಕರಿಗೆ ಮೀಸಲಾಗಿ ಒಂದು ಪತ್ರಿಕೆ ಇದ್ದರೆ ಈ ಏರ್ಪಾಟು ವಿಚಕ್ಷಣೆಯಿಂದ ನಡೆಯಲು ಅವಕಾಶವಾಗುತ್ತದೆ. ಈ ಏರ್ಪಾಟಿಗೆ ಸರ್ಕಾರವೂ ಸ್ಥಳೀಯ ಸಂಸ್ಥೆಗಳೂ ಮಹಾಜನರೂ ತಕ್ಕ ಪ್ರೋತ್ಸಾಹ ಕೊಡುವರೆಂದು ನಂಬಿದ್ದೇವೆ. 'ಬೆಳಕು' ವಯಸ್ಕರ ಲೋಕಾನುಭವದ ಕೈಪಿಡಿಯಾಗಲಿ. ಸಾಹಿತ್ಯ, ವಿಜ್ಞಾನ ಮುಂತಾದ ಭಾಗಗಳಲ್ಲಿ ಲೇಖನ ಬರೆದುಕೊಡುತ್ತ ಬರಹಗಾರರ ತಂಡ ಬೆಳಕನ್ನು ಸದಾ ಬೆಳಗಿಸುತ್ತಿರಲಿ.

## ಪರಿಷತ್ತಿನಲ್ಲಿ ಅಭಿನಂದನ ಸಭೆ

೧೧-೧೧-೧೯೪೭ನೆಯ ಬುಧವಾರ ಸಂಜೆ ೬-೩೦ ಗಂಟೆಗೆ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ, ಪರಿಷತ್ತಿನ ಸದಸ್ಯರಾದ ರಾಜಸೇವಾಪ್ರಸಕ್ತ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರನ್ನೂ ಮೋತಮದ್ ಉಲ್-ಮುಲ್ಕ್ ಶ್ರೀ. ಎಂ. ಜಿ. ಮೇಖ್ರಿಯವರನ್ನೂ ಅವರಿಗೆ ದೊರೆತ ಪ್ರಶಸ್ತಿಗಾಗಿ ಗೌರವಿಸಲು ಅಭಿನಂದನ ಸಭೆ ನಡೆಯಿತು. ರಾಜಸೇವಾಸಕ್ತ ಶ್ರೀ. ಬೆಳ್ಳಾವೆ ವೆಂಕಟನಾರಾಯಣಪ್ಪನವರು ಅಧ್ಯಕ್ಷತೆ ವಹಿಸಿದ್ದರು. ಅನೇಕ ಮಹಿಳೆಯರೂ ಮಹನೀಯರೂ ಸಭೆಗೆ ದಯಮಾಡಿಸಿದ್ದರು.

ಶ್ರೀ. ಮೋಟಗಾನಹಳ್ಳಿ ಸುಬ್ರಹ್ಮಣ್ಯ ಶಾಸ್ತ್ರಿಗಳಿಂದ ಪ್ರಾರ್ಥನೆಯಾದ ಮೇಲೆ ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀ. ಬಿ. ಎಂ. ಶ್ರೀಕಂಠಯ್ಯನವರು ಸಭೆಗೆ ಬಂದಿದ್ದ ಎಲ್ಲರಿಗೂ ಸ್ವಾಗತಕೋರಿ ಭಾಷಣಮಾಡಿ, ಪರಿಷತ್ತಿಗೆ ಹಿಂದೆ ನಾನಾಬಗೆಯಲ್ಲಿ ಸೇವೆಮಾಡಿ ಈಗ ದುಡಿಯುತ್ತಿರುವವರಿಗೆಲ್ಲಾ ಮಾರ್ಗದರ್ಶಕರಾಗಿರುವ ರಾಜಸೇವಾಸಕ್ತ ಶ್ರೀ. ಬೆಳ್ಳಾವೆ ವೆಂಕಟನಾರಾಯಣಪ್ಪನವರು ಈ ಸಮಾರಂಭಕ್ಕೆ ಅಧ್ಯಕ್ಷರಾಗಲು ದಯಮಾಡಿ ಒಪ್ಪಿದುದಕ್ಕಾಗಿ ಅವರನ್ನು ವಂದಿಸಿ, ಮುಖ್ಯ ಅತಿಥಿಗಳಿಬ್ಬರ ಗುಣಗಾನ ಮಾಡಿದರು. ಶ್ರೀ. ಮೇಖ್ರಿಯವರ ಕನ್ನಡ ಪ್ರೇಮವನ್ನು ಕೊಂಡಾಡಿದರು. ಶ್ರೀ. ಮಾಸ್ತಿಯವರು ಹಲವು ಬಗೆಯಲ್ಲಿ ಪರಿಷತ್ತಿನ ಕೆಲಸಗಳಲ್ಲಿ ನೆರವಾಗಿ, ಶ್ರೇಷ್ಠ ಸಾಹಿತಿಗಳಾಗಿ ಇಡಿಯ ನಾಡಿಗೇ ಪ್ರಿಯರಾಗಿದ್ದಾರೆಂದು ಹೇಳಿ ಅವರ ಸಾಹಿತ್ಯ ಸೇವೆಯ ವಿವಿಧತೆಯನ್ನೂ ಅವರು ರಚಿಸಿದ ಕೃತಿಗಳ ಸೊಬಗನ್ನೂ ವಿವರಿಸಿದರು.

ಅನಂತರ ವೈಣಿಕ ವಿದ್ವಾನ್ ಶ್ರೀ. ಎಲ್. ರಾಜಾರಾಯರ ಸುಶ್ರಾವ್ಯವಾದ ವೀಣಾವಾದನ ನಡೆಯಿತು. ಶ್ರೀ. ರಾಜಾರಾಯರು ತಾವು ಹೊಸದಾಗಿ ಸ್ವರ ಜೋಡಣೆ ಮಾಡಿರುವ ಶ್ರೀ ಪುರಂದರದಾಸರ ಕೆಲವುಕೃತಿಗಳನ್ನು ನುಡಿಸಿ ಸಭಾಸದರನ್ನು ಆನಂದಗೊಳಿಸಿದರು. ಅವರಿಗೆ ನೆರವಾಗಿ ಶ್ರೀ. ರಾಮಚಂದ್ರರಾಯರ ಪಿಟೀಲು ವಾದನವೂ ನಡೆಯಿತು.

ಬಳಿಕ ಸ್ಥಳಪರಸ್ಥಳಗಳ ಪ್ರತಿನಿಧಿಗಳಾಗಿ ಶ್ರೀ.ಗಳಾದ ಸಿ. ಕೆ. ವೆಂಕಟರಾಮಯ್ಯನವರು, ಕಲ್ಕತ್ತೆಯ ಅ. ನಾರಾಯಣಸ್ವಾಮಿ ಅಯ್ಯರ್ ಅವರು, ಟಿ. ಎಂ. ಅಮೀರ್ ಅವರು, ಜಮಖಂಡಿಯ ಆರ್. ಪಿ. ಕುಲಕರ್ಣಿಯವರು, ಬಿ. ಪುಟ್ಟಯ್ಯನವರು, ಕೆ. ಆಂಬ್ರೋಸ್ ಆನಂದ ಅವರು ಮತ್ತು ಧಾರವಾಡದ ದ. ರಾ. ಬೇಂದ್ರೆಯವರು ಅಭಿನಂದನ ಭಾಷಣಗಳನ್ನು ಮಾಡಿ ಮುಖ್ಯ ಅತಿಥಿಗಳ ನಯವಿನಯಾದಿ ಸದ್ಗುಣಗಳನ್ನೂ ನಾಡಸೇವೆಯನ್ನೂ ಪ್ರಶಂಸೆ ಮಾಡಿದರು.

ಈ ಭಾಷಣಕಾರರ ಭಾಷಣಗಳಲ್ಲಿ ಮುಖ್ಯವಾಗಿ ಒತ್ತಿ ಹೇಳಲಾದ ಎರಡು ಅಂಶಗಳು ಇವು: ಮೊದಲನೆಯದಾಗಿ ಪರಿಷತ್ತಿನ ಸದಸ್ಯರಾದ ಇಬ್ಬರು ಅತಿಥಿಗಳಲ್ಲಿ ಒಬ್ಬರು ಹಿಂದೂಗಳು, ಇನ್ನೊಬ್ಬರು ಮುಸಲ್ಮಾನವರು; ಇವರಿಬ್ಬರೂ ಆಯಾ ಧರ್ಮದ ಅತ್ಯುತ್ತಮ ಲಕ್ಷಣಗಳ ಪ್ರತಿನಿಧಿಗಳು; ಅವರ ಪರಸ್ಪರ ಪ್ರೇಮ ವಿಶ್ವಾಸ, ಇಡಿಯ ಹಿಂದೂ ಮುಸ್ಲಿಂ ಸಮಾಜದಲ್ಲಿ ಪ್ರಭಾವಶಾಲಿಯಾಗಿ ಒಕ್ಕಟ್ಟನ್ನೂ ಸೌಹಾರ್ದವನ್ನೂ ಸಾಧಿಸಲಿ. ಇಂಥವರ ಆದರ್ಶ ನಾಡಿನ ಮುಂದಿನ ಶ್ರೇಯಸ್ಸಿಗೆ ಬಹಳ ಸಹಾಯ ಮಾಡುವುದೆನ್ನುವುದರಲ್ಲಿ ಸಂದೇಹವಿಲ್ಲ.

ಎರಡನೆಯದಾಗಿ, ಶ್ರೀ. ಮೇಖ್ರಿಯವರು ಹುಟ್ಟಿನಲ್ಲಿ ಮುಸಲ್ಮಾನರಾದರೂ ಕನ್ನಡ ಕುಲದವರೇ. ಕನ್ನಡದಲ್ಲಿ ಅವರಿಗಿರುವ ಅಭಿಮಾನ ಸಹಜವಾದುದು. ಉತ್ತರ ಕರ್ನಾಟಕದಲ್ಲಿ ಹಲವು ಮುಸಲ್ಮಾನರು ಸ್ವಂತವಾಗಿ ಲಾವಣಿಗಳನ್ನು ಕಟ್ಟಿ ಜನಪದ ಸಾಹಿತ್ಯಕ್ಕೆ ಸೇವೆ ಮಾಡಿದ್ದಾರೆ. ಕನ್ನಡ ತಾಯ ಮಕ್ಕಳಾದ ಮುಸಲ್ಮಾನ ಬಂಧುಗಳಿಗೆ ದೊರೆತ ಬಿರುದಿಗಾಗಿ ಕನ್ನಡಿಗರೆಲ್ಲರೂ ಹರ್ಷಪಡುತ್ತಾರೆ.

ಶ್ರೀ.ಗಳಾದ ಮೇಖ್ರಿಯವರೂ ಮಾಸ್ತಿಯವರೂ ಮಾತನಾಡಿ ತಮ್ಮ ವಿನಯ ಸೌಜನ್ಯ ಕೃತಜ್ಞತೆಗಳಿಗೆ ಉಕ್ತಿ ಕೊಟ್ಟರು. ಶ್ರೀ. ಮೇಖ್ರಿಯವರು ತಮ್ಮ ಸವಿ ಮಾತಿನ ಕೊನೆಗೆ "ನನ್ನ ಕೈಯ್ಯಲ್ಲಾದ ಮಟ್ಟಿಗೆ ಕನ್ನಡಕ್ಕೆ ಸೇವೆ ಮಾಡಲು ಬುದ್ಧಿಯನ್ನೂ ಶಕ್ತಿಯನ್ನೂ ಕೊಡಲೆಂದು ದೇವರನ್ನು ನಾನು ಪ್ರಾರ್ಥಿಸುತ್ತೇನೆ." ಎಂದು ಜೇನು ಸೇರಿಸಿದರು.

ಮಾಸ್ತಿಯವರು ತಮ್ಮ ಮಾತಿನಲ್ಲಿ ರಾಜಸೇವೆಯನ್ನೂ ರಾಜ್ಯಸೇವೆಯನ್ನೂ ಸಮವಾಗಿ ಕಂಡು ದುಡಿಯುತ್ತಿರುವವರ ಬಗ್ಗೆ

ಮೆಚ್ಚಿಕೆಯ ಮಾತು ಅವರ ಸೇವೆಗೆ ಇನ್ನಷ್ಟು ಪ್ರೋತ್ಸಾಹವನ್ನು ಕೊಟ್ಟಂತಾಗಿದೆಯೆಂದೂ, ತಮ್ಮಲ್ಲೂ ಮೇಖ್ರಿಯವರಲ್ಲೂ ಇದ್ದಿರಬಹುದಾದ ಸ್ವಲ್ಪ ಗುಣವನ್ನು ಅಪಾರವೆಂದು ಕಂಡು ಗೌರವಿಸಿದ್ದು ಸೋದರರ ಪ್ರೀತಿಯ ಅಳತೆಯೆಂದೂ ಹೇಳಿ, ಮಹಾ ಜನರು ಕನ್ನಡದ ಸೇವೆಗೆ ಇನ್ನೂ ಹೆಚ್ಚಾದ ಪ್ರೋತ್ಸಾಹವನ್ನು ನೀಡಬೇಕೆಂಬುದಾಗಿ ಪ್ರಾರ್ಥಿಸಿದರು.

ಅಧ್ಯಕ್ಷರು ತಮ್ಮ ಭಾಷಣದಲ್ಲಿ ಹಿಂದೂ ಮುಸ್ಲಿಂ ಮೈತ್ರಿಯನ್ನು ಒತ್ತಿಹೇಳಿ, ಆ ಎರಡು ಪಂಗಡದ ಸತ್ಕುಲಪ್ರಸೂತರಾದ ಇಬ್ಬರು ಮಹನೀಯರನ್ನು ಗೌರವಿಸುವುದು ಈ ಮೈತ್ರಿಗೆ ಶುಭ ಸೂಚಕವಾಗಿದೆಯೆಂದೂ ಹೇಳಿದರು.

ಕಾರ್ಯದರ್ಶಿಗಳಾದ ಶ್ರೀ. ಕ. ವೆಂ. ರಾಘವಾಚಾರ್ಯರಿಂದ ಎಲ್ಲರಿಗೂ ವಂದನಾರ್ಪಣೆಯಾಗಿ ಸಭೆ ಮುಗಿಯಿತು.

### ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ

## ಪಂಡಿತ ತಾರಾನಾಥರ ನಿಧನದ ಬಗ್ಗೆ ದುಃಖ ಸೂಚನೆ

ಕರ್ನಾಟಕದ ಅದ್ವಿತೀಯ ವ್ಯಕ್ತಿಗಳಾದ ಪಂಡಿತ ತಾರಾನಾಥರ ನಿಧನಕ್ಕಾಗಿ ಸಂತಾಪವನ್ನು ಸೂಚಿಸಲು ತಾರೀಖು ೨-೧೧-೪೭ನೆಯ ಸಂಜೆ ೬-೩೦ ಗಂಟೆಗೆ ಶ್ರೀ ಚಾಮರಾಜ ಮಂದಿರದಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘದ ಪರವಾಗಿ ಸಭೆಯನ್ನೇರ್ಪಡಿಸಲಾಗಿದ್ದಿತು. ಶ್ರೀಮಾನ್ ಆಲೂರ ವೆಂಕಟರಾಯರು ಅಧ್ಯಕ್ಷತೆ ವಹಿಸಿದ್ದರು.

ಪ್ರೊ. ಆರ್. ವಿ. ಜಾಗಿರದಾರರು ಪ್ರಾಸ್ತಾವಿಕವಾಗಿ ಮಾತನಾಡುತ್ತ ದಿವಂಗತರಾದ ಪಂಡಿತ ತಾರಾನಾಥರ ಬಗ್ಗೆ ಈ ಕೆಳಗಿನಂತೆ ಹೇಳಿದರು: "ಪಂಡಿತ ತಾರಾನಾಥರು ಸಾಧಾರಣ ವ್ಯಕ್ತಿ ಅಲ್ಲ, ಆವರು ಒಂದು ಅದ್ಭುತ ಶಕ್ತಿ, ಅವರು ಅಸಾಧಾರಣ ತೇಜಸ್ವಿಯಾಗಿದ್ದರು. ಅವರ ವಿಚಾರ ವೈಖರಿ ಯಾರನ್ನೂ ಭ್ರಮೆಗೊಳಿಸುವಂತಹದಾಗಿದ್ದಿತು. ನಿರ್ವೀರ್ಯರಾದ ತರುಣರಲ್ಲಿ ತಮ್ಮ ಚಿರ್ಯೆ-ಮಾತುಗಳಿಂದ ಚೈತನ್ಯ ಉತ್ಸಾಹಗಳನ್ನು ತುಂಬಿ ಅವರನ್ನು ಕಾರ್ಯೋನ್ಮುಖರನ್ನಾಗಿ ಮಾಡುವ ಶಕ್ತಿ ಅವರಲ್ಲಿದ್ದಿತು. ಅವರ ಅನುಭವ ಸಂಪತ್ತು ಅಪಾರವಾಗಿದ್ದಿತು.

ಅವರು ಉಚ್ಚತರಗತಿಯ ವಾಗ್ಮಿಗಳು, ವೇದಾಂತಿಗಳು, ಸಾಹಿತಿಕರು, ಪತ್ರಿಕೋದ್ಯಮಿಗಳು, ನಟರು, ರಸಜ್ಞರು, ಆಯುರ್ವಿದ್ಯೆಯಲ್ಲಿ ಪರಿಣತರು, ಪರೋಪಕಾರಿಗಳು, ಸಮಾಜ ಸುಧಾರಕರು, ಜಗವನ್ನೆಲ್ಲ ಸಮಷ್ಟಿಯಾಗಿ ನೋಡಬಲ್ಲವರು. ಇಂತಹ ಅದ್ಭುತ ವ್ಯಕ್ತಿ ನಮ್ಮ ಕಣ್ಮರೆಯಾದುದು ನಮ್ಮ ನಾಡಿನ ದುರ್ದೈವವೇ ಸರಿ" ಎಂದು ಹೇಳಿ ಇಂದಿನ ಸಭೆಯ ಅಧ್ಯಕ್ಷತೆಯನ್ನು ಕರ್ನಾಟಕದ ಕುಲಪುರೋಹಿತರಾದ ಶ್ರೀ. ಆಲೂರ ವೆಂಕಟರಾಯರು ವಹಿಸಬೇಕೆಂದು ಬಿನ್ನವಿಸಿದರು. ಕಾರ್ಯದರ್ಶಿಗಳಾದ ಶ್ರೀಮಾನ್ ಶಂ. ಬಾ. ಜೋಶಿಯವರು ಅನುಮೋದಿಸಿದನಂತರ ಶ್ರೀಮಾನ್ ಆಲೂರವರು ಅಧ್ಯಕ್ಷಪೀಠವನ್ನಲಂಕರಿಸಿ, ಶ್ರೀ. ತಾರಾನಾಥರ ಬಗ್ಗೆ ಈ ಕೆಳಗಿನಂತೆ ಹೇಳಿದರು :

"ನನಗೆ ತಾರಾನಾಥರ ಪರಿಚಯವಾದ ಸಂದರ್ಭಗಳೆಲ್ಲ ನನ್ನ ಮನದಲ್ಲಿ ಅಚ್ಚಳಿಯದೆ ನಿಂತಿವೆ. ಪಂಡಿತ ತಾರಾನಾಥರು ಅತ್ಯಂತ ಮೇಧಾವಿಗಳು, ಯಾವದೇ ವಿಷಯವಾಗಲಿ, ಅದರ ರಹಸ್ಯವನ್ನರಸುವದೇ ಆವರ ಗುಣವಾಗಿದ್ದಿತು. ವಿವೇಕಾನಂದರಂತೆ ಅವರು ಒಂದು ಮಹಾವ್ಯಕ್ತಿ. ಅವರಿಗೆ ಹೊರಗಣಿಂದ ದೊರೆಯಬೇಕಾದ ಕೀರ್ತಿ ಲಭಿಸದಿದ್ದುದು ಕನ್ನಡಿಗರಾದ ನಮ್ಮ ತಪ್ಪಿನಿಂದ. ಬೇರೆ ಪ್ರಾಂತದಲ್ಲಿ ಅವರು ಜನಿಸಿದ್ದರೆ, ಅವರಿಗೆ ಎಷ್ಟೋ ಮನ್ನಣೆ ದೊರೆಯುತ್ತಿದ್ದಿತು. ಅವರು ಕೈಕೊಳ್ಳುವ ಕಾರ್ಯಗಳಿಗೆಲ್ಲ ಪರೋಪಕಾರವೇ ತಳಹದಿಯಾಗಿದ್ದಿತು. ಅಸ್ಪೃಶ್ಯತೆ, ಖಾದಿ ಮುಂತಾದ ವಿಷಯಗಳ ಬಗ್ಗೆ ಗಾಂಧಿಯವರಿಂದ ನೂತನವಾದ ರೀತಿಯಲ್ಲಿ ವಿವೇಚನ ಮಾಡುತ್ತಿದ್ದರು ಎಂದು ಹೇಳಿದರೆ ಜನರು ಅಚ್ಚರಿಗೊಳ್ಳಬಹುದು. ಆದರೆ ಇದು ನಿಜ. ಅವರು ಅಂತಹ ವಿನೂತನರೂ ಕುಶಾಗ್ರಮತಿಗಳೂ ಆಗಿದ್ದರು. ತಮ್ಮ ಬುದ್ಧಿಸಂಪತ್ತಿನಿಂದ ಅವರು ಅಪಾರವಾದ ಹಣವನ್ನು ಗಳಿಸಬಹುದಾಗಿತ್ತು. ಆದರೆ ಅವರು ನಾಡಿನ ಸೇವೆಗಾಗಿ ಮೀಸಲಿರಿಸಿದರು. ನಮ್ಮ ನಾಡಿನಲ್ಲಿ ಆಯುರ್ವೇದವನ್ನು ಪುರಸ್ಕರಿಸುವಲ್ಲಿ ಇವರು ಮೊದಲಿಗರು. ಈ ಕಾರ್ಯವನ್ನು ಅವರು ಪರೋಪಕಾರಕ್ಕಾಗಿಯೇ ಕೈಗೊಂಡಿದ್ದರು. ಅವರು ಅದ್ಭುತ ಮೇಧಾವಿಗಳೆಂಬಲ್ಲಿ ಸಂಶಯವಿಲ್ಲ. ಅವರ ಒಂದೊಂದು ಮಾತೂ ಒಂದು ಕಾಂತಿಯಾಗಿ ಇದ್ದಿತು. ಇಂತಹ ವ್ಯಕ್ತಿ ಕರ್ನಾಟಕದಲ್ಲಿ ಜನಿಸಿದುದು ಕನ್ನಡಿಗರಿಗೊಂದು ಹೆಮ್ಮೆ; ಆದರೆ ಕನ್ನಡಿಗರು ಅವರ ಚೈತನ್ಯದ ಸರಿಯಾದ ಉಪಯೋಗವನ್ನು ಮಾಡಿಕೊಳ್ಳದಿದ್ದುದು ದುರ್ದೈವದ ಸಂಗತಿ" ಎಂದು ಹೇಳಿ ಶ್ರೀಮಾನ್ ದ. ರಾ. ಬೇಂದ್ರೆಯವರನ್ನೂ ಡಾ. ಗೋಪಾಲಕೃಷ್ಣರಾಯರನ್ನೂ ಮಾತನಾಡಲು ಬಿನ್ನವಿಸಿದರು.

ಶ್ರೀಮಾನ್ ಬೇಂದ್ರೆಯವರು ದಿವಂಗತರ ಜೀವನದ ತಿರುಳನ್ನೆ ಜನಕ್ಕೆ ಅರುಹಿದರು. ಪಂಡಿತ ತಾರಾನಾಥರು ಕಣ್ಮರೆಯಾದುದರಿಂದ ನಮ್ಮನ್ನೆದುರಿಸಿರುವ ಪ್ರಶ್ನೆ ಇದು — ಇವರು ಒಂದು ವ್ಯಕ್ತಿಯೊ ಶಕ್ತಿಯೊ? ವ್ಯಕ್ತಿಯಾಗಿದ್ದಲ್ಲಿ ಅವರ ನಿಧನಕ್ಕಾಗಿ ನಾವು ಶೋಕಿಸಬಹುದು. ಆಧರೆ ಇವರು ಒಂದು ಶಕ್ತಿ. ಆ ಶಕ್ತಿ ತನ್ನ ಕಾರ್ಯವನ್ನು ಪೂರೈಸಿದುದರಿಂದಲೇ ಆ ಶಕ್ತಿಯ ರೂಪ ಅದ ವ್ಯಕ್ತಿ ಮಾಯವಾಯಿತೆನ್ನಬಹುದು. ವ್ಯಕ್ತಿ ಶಕ್ತಿಗಳ ಕಾರ್ಯಮಾಪನಗಳು ತೀರ ಭಿನ್ನವಾಗಿವೆ. ಶ್ರೀ. ತಾರಾನಾಥರ ಮರಣದಿಂಧ ಆ ಶಕ್ತಿಯ ರೂಪು ಮಾಯವಾಗಿರಬಹುದು. ಆದರೆ ಆ ಶಕ್ತಿ ನಶಿಸಿಲ್ಲ. ಅದು ಜೀವಂತವಿದೆ. ಶಕ್ತಿ ದೃಗ್ಗೋಚರವಾದುದಲ್ಲ. ವಿದ್ಯುಚ್ಛಕ್ತಿಯಂತೆ ಅವರ ಶಕ್ತಿ ಪ್ರವಹಿಸಿ ನಮ್ಮೆಲ್ಲರನ್ನು ಸಚೇತನರನ್ನಾಗಿ ಮಾಡಿದೆ. ಶ್ರೀ. ತಾರಾನಾಥರ ಜೀವಿತದ ಧ್ಯೇಯವನ್ನು ತಿಳಿಯುವದು ಕಠಿಣವಾಗಿದೆ. ಇಂತಹದೇ ಅವರ ಕಾರ್ಯಕ್ಷೇತ್ರ ಎಂದು ಹೇಳಲು ಬರುವಂತಿಲ್ಲ. ಅವರ ಕಾರ್ಯದಲ್ಲಿ ಒಂದು ವಿಶೇಷತೆ ಇದ್ದಿತು. ಅವರು ಸಾಧಕರು ಎಂದು ಹೇಳಬಹುದು. ನಿಮ್ಮ ಜೀವಿತದ ಧ್ಯೇಯವೇನೆಂದು ಕೇಳಿದಾಗ್ಗೆ ಹಠಯೋಗದ ಬಗ್ಗೆ ಇರುವ ತಪ್ಪುತಿಳುವಳಿಕೆಯನ್ನು ದೂರ ಮಾಡುವುದು ತಮ್ಮ ಕಾರ್ಯಗಳಲ್ಲೊಂದಾಗಿದೆ ಎಂದು ಹೇಳಿದ್ದು ನನ್ನ ನೆನಪಿನಲ್ಲಿದೆ. ಅದೇನೆ ಇರಲಿ ಅವರು ಸಾಧಕರೆಂಬಲ್ಲಿ ಸಂದೇಹವಿಲ್ಲ. ಅಪಜಯಗಳೇ ಜಯಸ್ತಂಭಗಳೆಂದು ನಂಬಿ ಜೀವನದಲ್ಲಿ ಅವರು ಮುಂದೆ ಸಾಗುತ್ತಿದ್ದರು. ಅವರು ವಿಲಕ್ಷಣ ಕಾಂತಿಯುಳ್ಳವರಾಗಿದ್ದರು. ಅವರ ಒಂದೊಂದು ಮಾತೂ ಒಂದು ಗಾದೆ ಅಗುವ ಶಕ್ತಿ ಅವರಲ್ಲಿದ್ದಿತು. ಶ್ರೀ. ತಾರಾನಾಥರ ಅದ್ಭುತ ಶಕ್ತಿ ಯಾರನ್ನೂ ಬೆರಗುಗೊಳಿಸುವದಾಗಿತ್ತು. ಇಂತಹರು ಕಣ್ಮರೆಯಾದುದು ನಮ್ಮೆಲ್ಲರ ದುರ್ದೈವ. ಅವರ ಓಲೆ ಉಕ್ತಿಗಳನ್ನಾದರೂ ಕಲೆಹಾಕುವದರಿಂದ ನಮ್ಮ ನಾಡಿಗೆ ಅದೆಷ್ಟೊ ಹಿತ ಎಂದು ಹೇಳಿದರು.

ಶ್ರೀ ತಾರಾನಾಥರ ಶಿಷ್ಯರಲ್ಲೊಬ್ಬರಾದ ಡಾ॥ ಗೋಪಾಲಕೃಷ್ಣರಾಯರು "ಪಂಡಿತ ತಾರಾನಾಥರು ತಮ್ಮ ಜೀವಿತವನ್ನೆ ನಾಡಿಗಾಗಿ ಧಾರೆ ಎರೆದಿದ್ದರು. ಇದರಿಂದಾದ ಹೃದ್ರೋಗದಿಂದಲೇ ಅವರು ಮಡಿದರು" ಎಂದು ಹೇಳಿ ಪ್ರೇಮ ವಿದ್ಯಾಪೀಠದ ಹುಟ್ಟು ಬೆಳವಣಿಗೆಗಳನ್ನೂ ಅಲ್ಲಿ ತಮಗೆ ಶ್ರೀ. ತಾರಾನಾಥರ ಸಂಗಡ ದೊರೆತ ಅನುಭವಗಳನ್ನೂ ತಿಳಿಸಿದರು. ತಾರಾನಾಥರ ಅಗಾಧ ಶಕ್ತಿಯನ್ನು ಬಣ್ಣಿಸುತ್ತ, ಗಾಂಧಿಜಿಯವರು ತಮ್ಮ ಪ್ರಕೃತಿಗೋಸುಗ ನಂದಿಬೆಟ್ಟದಲ್ಲಿ ವಾಸಿಸಿದಾಗ್ಗೆ ಗಾಂಧಿಜಿ – ತಾರಾನಾಥರ ಬೆಟ್ಟಿಯ ರಹಸ್ಯಮಯವಾದ ವಿವರಗಳನ್ನು ಹೇಳಿದರು. ಇಂತಹ ಮಹಾವ್ಯಕ್ತಿಯ ಸದುಪಯೋಗವನ್ನು ಕನ್ನಡಿಗರು ಮಾಡಿಕೊಳ್ಳದಿದ್ದುದು ದುರ್ದೈವ; ಇನ್ನಾದರೂ ಕನ್ನಡಿಗರು ಬುದ್ಧಿ ಕಲಿಯಲಿ ಎಂದು ಹೇಳಿದರು.

ಅಧ್ಯಕ್ಷರು ಕೆಳಗಿನ ದುಃಖಸೂಚಕ ಗೊತ್ತುವಳಿಯನ್ನು ಓದಿ ಹೇಳಿದರು. "ಕರ್ನಾಟಕದ ಅದ್ವಿತೀಯ ವ್ಯಕ್ತಿಗಳೊಬ್ಬರೂ ಅಸಾಮಾನ್ಯವಕ್ತಾರರೂ ವಿದ್ವಾಂಸರೂ ಆಯುರ್ವೇದದ ಪುರಸ್ಕರ್ತರೂ ಸಮಾಜ ಸುಧಾರಣೆಯ ಮುಖಂಡರೂ ಆದ ಪಂಡಿತ ತಾರಾನಾಥರ ಅಕಾಲಮರಣಕ್ಕಾಗಿ ಈ ಸಭೆ ತನ್ನ ದುಃಖಪ್ರದರ್ಶನವನ್ನು ಮಾಡುತ್ತದೆ. ಈ ನಿರ್ಣಯವನ್ನು ಆವರ ಕುಟುಂಬಕ್ಕೆ ತಿಳಿಸಲು ಅಧ್ಯಕ್ಷರಿಗೆ ಅಧಿಕಾರವನ್ನು ಕೊಡುತ್ತದೆ." ಎಲ್ಲರೂ ಎದ್ದುನಿಂತು ದುಃಖವನ್ನು ಸೂಚಿಸಿದ ಮೇಲೆ ಸಭೆ ಕೊನೆಗೊಂಡಿತು.

# ಪರಿಷತ್ತಿನ ಸುದ್ದಿ

## ೨೭ನೆಯ ವಾರ್ಷಿಕಾಧಿವೇಶನ

**ಪರಿಷತ್ತಿನ ಸದಸ್ಯರ ೨೭ನೆಯ ವಾರ್ಷಿಕಾಧಿವೇಶನ ಇದೇ ಡಿಸೆಂಬರು ತಿಂಗಳು ೨೦ನೆಯ ತಾರೀಖು ಭಾನುವಾರ ಬೆಳಗ್ಗೆ ೯ ಗಂಟೆಗೆ ಬೆಂಗಳೂರಿನಲ್ಲಿ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ನಡೆಯುತ್ತದೆ.**

### ಸಾಹಿತ್ಯ ಪರೀಕ್ಷೆಗಳು

**ಇದೇ ಡಿಸೆಂಬರ್ ತಿಂಗಳು ೨ನೆಯ ವಾರದಲ್ಲಿ ನಡೆಯುವಂತೆ ಗೊತ್ತಾಗಿದ್ದ ಕನ್ನಡ ಸಾಹಿತ್ಯ ಪರೀಕ್ಷೆಗಳನ್ನು ಮುಂದುವರಿಸಬೇಕೆಂದು ಕೆಲವು ಕೇಂದ್ರಗಳ ವ್ಯವಸ್ಥಾಪಕರುಗಳು ಅಭಿಪ್ರಾಯಪಟ್ಟಿರುತ್ತಾರೆ. ಅದರಂತೆ ಪರೀಕ್ಷೆಗಳು ಡಿಸೆಂಬರ್ ತಿಂಗಳಲ್ಲಿ ನಡೆಯದೆ ೧೯೪೮ರ ಜನವರಿ ತಿಂಗಳ ಮೂರನೆಯ ವಾರದಲ್ಲಿ ನಡೆಯುವಂತೆ ಗೊತ್ತುಪಡಿಸಿದೆ. ನಿರ್ದಿಷ್ಟವಾದ ದಿನಗಳನ್ನು ಮುಂದೆ ಪ್ರಕಟಿಸಲಾಗುವುದು.**

**ಪರೀಕ್ಷೆಯ ಅರಿಕೆಯೋಲೆಗಳನ್ನೂ ತೆರದ ಹಣವನ್ನೂ ಡಿಸೆಂಬರು ೧೫ ರೊಳಗಾಗಿ ಪರಿಷತ್ತಿನ ಕಚೇರಿಗೆ ತಲಪುವಂತೆ ಕಳಿಸಬೇಕು.**

## ತಿದ್ದಿದ ಕನ್ನಡ ಲಿಪಿ

**ಸೂಚನೆ:**

೧) ದೀರ್ಘ ಸ್ವರಕ್ಕೆ—ೕ; ನಾ – **ನೕ**, ಯಾ – **ಯೕ.**

೨) ಮಹಾಪ್ರಾಣಕ್ಕೆ—ಹೊಕ್ಕುಳು ಸೀಳುವುದು: ಖ – **ಕ಼.**

೩) ಒತ್ತಕ್ಷರಗಳನ್ನು ಉಚ್ಚಾರಣೆಯ ಕ್ರಮದಲ್ಲಿ ಬಿಡಿಸುವುದು; ಸ್ತ್ರೀ–**ಸ್‌ತ್‌ರೀ,** ಪ್ರಾಣ – **ಪ್‌ರೕಣ,** ಸ್ವಯ–**ಸ್‌ವಯ,** ಬ್ರಹ್ಮ – **ಬ್‌ರಮ್‌ಹ,** ಜ್ಞಾನ – **ಜ್‌ಞೕನ.**

(೪)

ವನವೆಲ್‌ಲ ನೀವೆ. ವನದೊಳಗಣ ದೇವತರುವೆಲ್‌ಲ ನೀವೆ. ತರುವಿನೊಳಗೕಡುವ ಕ಼ಗಮೃಗವೆಲ್‌ಲ ನೀವೆ. ಚೆನ್‌ನಮಲ್‌ಲಿಕೕರ್‌ಜುನ ಸರ್‌ವಭರಿತನೕಗಿ ಎನಗೆ ಮುಕ಼ದೋರ.

ಪುರುಷನ ಮುಂದೆ ಮೕಯ ಸ್‌ತ್‌ರೀ ಎಂಬ ಅಭಿಮೕನವೕಗಿ ಕೕಡಿತ್‌ತು ನೋಡೕ! ಸ್‌ತ್‌ರೀಯ ಮುಂದೆ ಮೕಯೆ ಪುರುಷನೆಂಬ ಅಭಿಮೕನವೕಗಿ ಕೕಡಿತ್‌ತು ನೋಡೕ! ಲೋಕವೆಂಬ ಮೕಯೆಗೆ ಶರಣಚೕರಿತ್‌ರ ಮರುಳೕಗಿ* ತೋರುವುದು ನೋಡೕ! ಚೆನ್‌ನಮಲ್‌ಲಿಕೕರ್‌ಜುನನೊಲಿದ ಶರಣಂಗೆ ಮೕಯೆ ಇಲ್‌ಲ, ಮರಹಿಲ್‌ಲ, ಅಭಿಮೕನವೂ ಇಲ್‌ಲ.

ಸೕವಿಲ್‌ಲದ, ಕೇಡಿಲ್‌ಲದ, ರೂಹಿಲ್‌ಲದ ಚೆಲುವಂಗೕನೊಲಿದೆನವ್‌ವ. ಎಡೆಯಿಲ್‌ಲದ ಕಡೆಯಿಲ್‌ಲದ ತೆರಹಿಲ್‌ಲದ ಕುರುಹಿಲ್‌ಲದ ಚೆಲುವಂಗೕನೊಲಿದೆ ಎಲೆ ಅವ್‌ವೕ, ನೀನು ಕೇಳೕ ತೕಯೆ. ಭಯವಿಲ್‌ಲದ ನಿರ್‌ಭಯ ಚೆಲುವಂಗೊಲಿದೆ. ಇದು ಕೕರಣ ಚೆನ್‌ನಮಲ್‌ಲಿಕೕರ್‌ಜುನ ಚೆಲುವ ಗಂಡನೆನಗೆ. ಈ ಸೕವ ಕೆಡುವ ಗಂಡರನೊಯ್‌ದು ಒಲೆಯೊಳಗಿಕ್‌ಕು.

ತನು ನಿಮ್‌ಮ ರೂಪೕದ ಬಳಿಕ ನೕನೕರಿಗೆ ಮೕಡುವೆ? ಮನ ನಿಮ್‌ಮ ರೂಪೕದ ಬಳಿಕ ನೕನೕರ ನೆನೆವೆ? ಪ್‌ರೕಣ ನಿಮ್‌ಮ ರೂಪೕದ ಬಳಿಕ, ನೕನೕರನೕರೕಧಿಸುವೆ? ಅರಿವು ನಿಮ್‌ಮಲ್‌ಲಿ ಸ್‌ವಯವೕದ ಬಳಿಕ, ನೕನೕರನರಿವೆ? ಚೆನ್‌ನಮಲ್‌ಲಿಕೕರ್‌ಜುನೕ, ನಿಮ್‌ಮಲ್‌ಲಿ ನೀವೕಗಿ ನಿಮ್‌ಮಿಂದ ಮರೆದೆನಯ್‌ಯೕ.

ಬಂಜೆ ಬೇನೆಯನರಿಯಳು. ಬಲತೕಯಿ ಮುದ್‌ದ ಬಲ್‌ಲಳೆ? ನೊಂದ ನೋವ ನೋಯದವರೆತ್‌ತ ಬಲ್‌ಲರು? ಚೆನ್‌ನಮಲ್‌ಲಿಕೕರ್‌ಜುನ, ನೀನಿರಿದಲಗು ಒಡಲಲ್‌ಲಿ ಮುರಿದು ಹೊರಳುವಳ ನೀವೆತ್‌ತ ಬಲ್‌ಲಿರಿ ಎಲೆ ತೕಯಿಗಳಿರೕ?

ಆಕೕರವಲ್‌ಲದ ನಿರೕಕೕರದ ಲಿಂಗವ ಕೈಯಲ್‌ಲಿ ಹಿಡಿದು, ಕೊರಳಲ್‌ಲಿ ಕಟ್‌ಟಿದೆವೆಂದೆಂಬರು ನರಕಿ ಜೀವಿಗಳು. ಹರಿ ಬ್‌ರಮ್‌ಹರು ವೇದಶೕಸ್‌ತ್‌ರಂಗಳರಸಿ ಕೕಣದ ಲಿಂಗ, ಭಕ್‌ತಿಗೆ ಫಲಪದಂಗಳಲ್‌ಲದೆ ಲಿಂಗವಿಲ್‌ಲ. ಕರ್‌ಮಕ್‌ಕೆ ನರಕವಲ್‌ಲದೆ, ಲಿಂಗವಿಲ್‌ಲ. ವೈರೕಗ್‌ಯಕ್‌ಕೆ ಮುಕ್‌ತಿಯಲ್‌ಲದೆ, ಲಿಂಗವಿಲ್‌ಲ. ಜ್‌ಞೕನಕ್‌ಕೆ ಪರಿಭ್‌ರಮಣವಲ್‌ಲದೆ, ಲಿಂಗವಿಲ್‌ಲ. ಇದುಕೕರಣ ಅದ್‌ವೈತದಿಂದ ತನ್‌ನ ತೕನರಿದು ತೕನೕದರೆ ಚೆನ್‌ನಮಲ್‌ಲಿಕೕರ್‌ಜುನ ಲಿಂಗ ತೕನೆ ಬೇರಿಲ್‌ಲ.

## ಹೊಸಗನ್ನಡದ ಆರಂಭಕಾಲ

(೧೯ನೆಯ ಪುಟದಿಂದ)

ತಕ್ಕ ಅನುಕೂಲತೆಗಳಿರಲಿಲ್ಲ. ಆದರೂ ಕೂಡ ೧೮೭೦ರಿಂದಲೂ ಪ್ರಾಥಮಿಕ ಶಿಕ್ಷಕರೂ ಈ ಶಿಕ್ಷಕರ ಶಿಕ್ಷಕರೂ ಪರಿಶ್ರಮಪಟ್ಟು ಮಕ್ಕಳಿಗೆ ಬೇಕಾಗುವ ಪಠ್ಯಪುಸ್ತಕಗಳನ್ನು ಒದಗಿಸಿಕೊಂಡರು. ೧೮೨೦ರ ಸುಮಾರಿಗೆ ಕಂಡುಬಂದ ನಿಜವಾದ ಹೊಸಗನ್ನಡ ಬೀಜ ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗದಲ್ಲಿ ಮೊಳೆದು ಸಸಿಯಾದಂತಾಗಿತ್ತು. ಆ ಕಾಲದಲ್ಲಿ ಡೆಪ್ಯುಟಿ ಚೆನ್ನಬಸವಪ್ಪನವರೂ, 'ಕಾದಂಬರಿ'ಯನ್ನು ಕನ್ನಡಕ್ಕಿಳಿಸಿದ ತುರಮರಿ ಗಂಗಾಧರಪ್ಪನವರೂ, ಬೀಳಗಿ ರುದ್ರಪ್ಪನವರೂ ಕನ್ನಡದ ಹುಲಿಗಳಾಗಿದ್ದರು. ಇವರೆಲ್ಲರೂ ಕನ್ನಡಿಗರ ಜಾಗೃತಿಗಾಗಿ ಹೋರಾಡಬೇಕಾಯಿತು. ಕಿತ್ತೂರ ಶಾಂತವೀರಪ್ಪನವರು, ಮುಳಬಾಗಲರು, ಗಳಗನಾಥರು ಕನ್ನಡಿಗರನ್ನು ಎಚ್ಚರಿಸಿದರು. ೧೮೯೦ರಲ್ಲಿ ವಿದ್ಯಾರ್ಧಕ ಸಂಘ ಜನ್ಮ ತಾಳಿತು. ಶಾಂತಕವಿಗಳು ಕನ್ನಡ ದಾಸಯ್ಯಗಳಾದರು. ೧೯೦೮ರೊಳಗಾಗಿ ಬಿ. ವೆಂಕಟಾಚಾರ್ಯರ ಹಾಗೂ ಗಳಗನಾಥರ ಅನೇಕ ಕಥಾಕುಸುಮಗಳು ಅರಳಿದುವು. ಕ್ರಮಿಕ ಪುಸ್ತಕಗಳ ತಿದ್ದುಪಡೆಯಾಯಿತು. ಕೆರೂರು ವಾಸುದೇವಾಚಾರ್ಯರ 'ಇಂದಿರಾ' ಕಾದಂಬರಿಯೂ ಬಯಲಿಗೆ ಬಂದಿತು. ಹೀಗೆ ಮಕ್ಕಳಿಗೂ ಜನಸಾಮಾನ್ಯರಿಗೂ ಬೇಕಾಗುವ ಸಾಹಿತ್ಯ ೧೯೨೦ರ ವರೆಗೂ ಬೆಳೆಯುತ್ತಲೇ ಬಂತು.

೧೯೨೦ರಲ್ಲಿ ನಮ್ಮ ದೇಶದ ರಾಷ್ಟ್ರೀಯ ಸಂಸ್ಥೆಯಾದ ಕಾಂಗ್ರೆಸ್ ಕರ್ನಾಟಕಕ್ಕೊಂದು ಭಾಷಾನುಗುಣವಾದ ಪ್ರಾಂತವನ್ನು ಏರ್ಪಡಿಸಿತು. ಅಂದಿನಿಂದ ನಮ್ಮ ನುಡಿ ಬೆಳವಣಿಗೆಗೆ ಹೆಚ್ಚು ಅನುಕೂಲವಾಗಿದೆ. ಈ ಸುಮಾರಿಗೆ ಧಾರವಾಡದಲ್ಲಿ ಕರ್ನಾಟಕ ಕಾಲೇಜು ಆರಂಭವಾಗಿತ್ತು. ಮೈಸೂರು ವಿಶ್ವವಿದ್ಯಾಲಯವೂ ರೂಪುಗೊಂಡಿತ್ತು. ಶ್ರೀಕಂಠಯ್ಯನವರ 'ಇಂಗ್ಲಿಷ್ ಗೀತೆ'ಗಳೂ ಮಾಸ್ತಿಯವರ ಸಣ್ಣಕತೆಗಳೂ ಬಯಲಿಗೆ ಬರಹತ್ತಿದವು. ಹೊಸಗನ್ನಡದ ಧ್ವಜ ಹಾರಹತ್ತಿತು.

ಗದ್ಯಪ್ರಧಾನವಾದ ಮನೋಹರವಾದ ಇಂದಿನ ನಮ್ಮ ಹೊಸಗನ್ನಡ ಜನಸಾಮಾನ್ಯರ ಮಾತುಗಳಿಗೂ ಅವುಗಳ ರೀತಿಗಳಿಗೂ ಅನುಗುಣವಾಗಿ ಮೈದೋರುತ್ತಲಿದೆ. ಈ ಹೊಸಗನ್ನಡ ಇನ್ನಿಷ್ಟು ತಿಳಿಗನ್ನಡವಾಗಲಿ, ಹೂಗನ್ನಡವಾಗಲಿ.

## ಕನ್ನಡ ಸುದ್ದಿ

**ಮಂಡ್ಯ: ಅಕ್ಷರ ಪ್ರಚಾರ**

ಗುತ್ತಲ ಸಕ್ಕರೆ ವಸತಿಯಲ್ಲಿ ಸಕ್ಕರೆ ಕಾರ್ಖಾನೆಯ ಕೆಲಸಗಾರರಿಗಾಗಿ ಒಂದು ಅಕ್ಷರ ಪ್ರಚಾರದ ತರಗತಿಯನ್ನು ೪-೧೧-೪೨ನೆಯ ಬುಧವಾರ ಸಂಜೆ ಪ್ರಾರಂಭಗೊಳಿಸಲಾಯಿತು. ಸಕ್ಕರೆಯ ಕಾರ್ಖಾನೆಯ ಜನರಲ್ ಮ್ಯಾನೇಜರವರಾದ ಶ್ರೀ. ಪಿ. ಆರ್. ಬಾಲಕೃಷ್ಣನ್ ಅವರು ತರಗತಿಯ ಪ್ರಾರಂಭೋತ್ಸವವನ್ನು ನೆರವೇರಿಸಿದರು. ಮೈಸೂರು ಅಕ್ಷರ ಪ್ರಚಾರ ಸಮಿತಿಯ ವ್ಯವಸ್ಥಾಪಕ ಶ್ರೀ. ಎಸ್.ವಿ. ಶ್ರೀನಿವಾಸರಾಯರು ಅಕ್ಷರ ಪ್ರಚಾರದ ಆವಶ್ಯಕತೆಯನ್ನು ವಿವರಿಸಿ ಮಾತನಾಡಿದರು.

ಕೆಲಸಗಾರರ ಸಂಘದ ಅಧ್ಯಕ್ಷರಾದ ಶ್ರೀ. ಮಾದಯ್ಯನವರು ತರಗತಿಯ ವ್ಯವಸ್ಥೆಯ ಮೇಲ್ವಿಚಾರಣೆಯಲ್ಲಿದ್ದು ಉಪಕಾರ ಮಾಡುತ್ತಿದ್ದಾರೆ.



೬೩೭—೧೯೪೨ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

## ಕನ್ನಡ ವಿದ್ಯಾಶಾಲೆಗಳಲ್ಲಿ ಕನ್ನಡದ ಬಳಕೆ

(ಶ್ರೀ. ಜಿ. ಎನ್. ಜೋಶಿಯವರು, ಆರ್ಯ ವಿದ್ಯಾಶಾಲೆ, ಬೆಂಗಳೂರು)

ಕನ್ನಡದಲ್ಲಿಯೇ ಪಾಠಗಳನ್ನು ಬೋಧಿಸುವ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳಲ್ಲಿ ಕಡ್ಡಾಯವಾಗಿ ಕನ್ನಡ ಭಾಷೆಯನ್ನು ಉಪಯೋಗಿಸಲು ಸಾಧ್ಯವೇ? ಯೋಚಿಸಿ ನೋಡಿದರೆ, ಪ್ರಯತ್ನದಿಂದ ಇದು ಅಸಾಧ್ಯವಾಗಿ ಕಾಣಬರುವುದಿಲ್ಲ. ವಿದ್ಯಾಶಾಲೆಗಳ ಆಡಳಿತಗಾರರೂ ಬೋಧಕರೂ ಅಚ್ಚ ಕನ್ನಡಿಗರಾಗಿದ್ದು, ಕನ್ನಡ ಭಾಷೆಯ ಬೆಳವಣಿಗೆಯಲ್ಲಿ ಆದರವುಳ್ಳವರಾಗಿದ್ದರೆ ಆಗ ಮಾತ್ರ ಅದು ಸಾಧ್ಯ.

ಈ ಕನ್ನಡ ಅಭಿಮಾನ ವಿದ್ಯಾಶಾಲೆಗಳಿಗೆ ಸಂಬಂಧಪಟ್ಟ ಎಲ್ಲರಲ್ಲಿಯೂ ಮೊದಲುಂಟಾಗಬೇಕು. ಅವಶ್ಯಕತೆ ಇದ್ದಲ್ಲೆಲ್ಲಾ ಕನ್ನಡವನ್ನೇ ಹೆಚ್ಚಾಗಿ ಉಪಯೋಗಿಸಬೇಕು ಎಂಬ ಅಧಿಕಾರಯುತವಾದ ಕಡ್ಡಾಯವೂ ಇರಬೇಕು. ಸಾಧಾರಣವಾಗಿ ಈಗ ಸರ್ಕಾರದ ಮತ್ತು ಖಾಸಗಿಯ ಮಾಧ್ಯಮಿಕ ಶಾಲೆಗಳಲ್ಲಿನ ಮುಖ್ಯೋಪಾಧ್ಯಾಯರುಗಳು ಈಗಿನ ಕಾಲದಲ್ಲಿ, ವಿಶ್ವವಿದ್ಯಾನಿಲಯದ ಶಿಕ್ಷಣವನ್ನು ಪಡೆದ ಬಿ.ಎ., ಎಂ.ಎ. ಪದವೀಧರರೇ ಆಗಿರುತ್ತಾರೆ. ಅಲ್ಲದೆ, ಮತ್ತೆ ಕೆಲವರು ಶಿಕ್ಷಣ ವಿಧಾನವನ್ನು ವ್ಯಾಸಂಗ ಮಾಡಿ, ಬಿ.ಟಿ. ಪ್ರಶಸ್ತಿಯನ್ನೂ ಹೊಂದಿರುತ್ತಾರೆ. ಇವರು ಅನೇಕ ವರುಷಗಳ ಕಾಲ ತಮ್ಮ ಶಿಕ್ಷಣವನ್ನು ಇಂಗ್ಲಿಷ್ ಭಾಷೆಯ ಮೂಲಕ ಪಡೆದು, ವಿದ್ಯಾಶಾಲೆಗಳ ಅಧಿಕಾರಿಗಳಾಗಿ ಬಂದೊಡನೆಯೇ, ಅವರು ಆಡುವ ನುಡಿ, ಬರೆಯುವ ಬರೆವಣಿಗೆ ಸಾಮಾನ್ಯವಾಗಿ ಎಲ್ಲವೂ ಇಂಗ್ಲಿಷಿನಲ್ಲಿಯೇ ನಡೆಯುವುದು. ಇದು ಹೀಗಾಗಕೂಡದೆಂದು ಇವರಿಗೆ ತಿಳಿಸುವವರಾದರೂ ಯಾರು? ಈ ತಿಳಿವಳಿಕೆ ಕೊಡತಕ್ಕವರೊಬ್ಬರು ಇಲ್ಲದ್ದರಿಂದಲೇ ಕನ್ನಡ ಭಾಷೆಯ ಅಭಿವೃದ್ಧಿಗೆ ಕುಂದಕವುಂಟಾಗಿದೆ. ಶಾಲೆಯ ಆಡಳಿತ ವ್ಯವಹಾರಗಳಲ್ಲಿ ತಾವಾಗಿಯೆ ಕನ್ನಡವನ್ನು ಬಳಸಬೇಕೆಂಬ ಅಭಿಮಾನ ಅವರಲ್ಲಿ ಉಂಟಾಗುವುದು ಅಸಾಧ್ಯ. ಆದುದರಿಂದ ಸರಕಾರೀ ಪಾಠಶಾಲೆಗಳಲ್ಲಿ ಅಧಿಕಾರಿಗಳ ಕಟ್ಟಪ್ಪಣೆ ಇರಬೇಕು. ಖಾಸಗಿ ಶಾಲೆಗಳಲ್ಲಿ ಆಡಳಿತಗಾರರ ಕಟ್ಟಪ್ಪಣೆ ಇರಬೇಕು. ಎಲ್ಲಾ ಪತ್ರವ್ಯವಹಾರದಲ್ಲಿಯೂ ಕನ್ನಡ ಭಾಷೆಯನ್ನೇ ಉಪಯೋಗಿಸಬೇಕೆಂಬ ನಿಯಮವಿರಬೇಕು. ನಿಯಮಕ್ಕಿಂತಲೂ ಹೆಚ್ಚಾಗಿ ಅಧಿಕಾರಿಗಳೂ, ಆಡಳಿತಗಾರರೂ ಕನ್ನಡದ ಅಭಿಮಾನಿಗಳಾಗಿದ್ದು ಅವರೂ ಸಹ ಕನ್ನಡವನ್ನೇ ಹೆಚ್ಚಾಗಿ ಬಳಸತಕ್ಕವರಾಗಿರಬೇಕು.

ಮೊದಲು, ಪ್ರತಿಯೊಂದು ವಿದ್ಯಾಶಾಲೆಯ ಮುಂಭಾಗದಲ್ಲಿ ದೊಡ್ಡ ದೊಡ್ಡ ಅಕ್ಷರಗಳಲ್ಲಿ ಆಯಾ ಶಾಲೆಗಳ ಹೆಸರುಗಳನ್ನು ಕನ್ನಡದಲ್ಲಿ ಬರಸಬೇಕು. ಇದು ಅತ್ಯಗತ್ಯವಾಗಿ ನಡೆಯಬೇಕಾದ ಮುಖ್ಯ ಕೆಲಸವಾಗಿದೆ. ಅಕ್ಷರಗಳೊಂದೇ ಅಲ್ಲದೆ ಭಾಷೆಯೂ ಕನ್ನಡವೇ ಆಗಿರಬೇಕು.

ಬೋಧಕರು ನಿತ್ಯವೂ ಹಾಜರಿ ಸಹಿ ಮಾಡುವ ಪುಸ್ತಕದಲ್ಲಿ ಆಯಾ ಶಾಲೆಗಳ ಎಲ್ಲಾ ಉಪಾಧ್ಯಾಯರುಗಳ ಹೆಸರುಗಳನ್ನು ಕನ್ನಡದಲ್ಲಿಯೇ ಬರೆಯುವದಲ್ಲದೆ, ಅವರೂ ಸಹ ಕನ್ನಡದಲ್ಲಿಯೇ ಸಹಿ ಮಾಡುವುದನ್ನು ಅಭ್ಯಾಸ ಮಾಡಬೇಕು. ವಿದ್ಯಾರ್ಥಿಗಳ ಹಾಜರಿ ಪುಸ್ತಕಗಳಲ್ಲಿಯೂ, ಅಂಕದ ಪಟ್ಟಿಯ ಪುಸ್ತಕದಲ್ಲಿಯೂ ವಿದ್ಯಾರ್ಥಿಗಳ ಹೆಸರುಗಳನ್ನು ಅಕಾರಾದಿಯಾಗಿ ಕ್ರಮವಾಗಿ ಕನ್ನಡ ಲಿಪಿಯಲ್ಲಲ್ಲದೆ ಮತ್ತಿನ್ನಾವ ಲಿಪಿಯಲ್ಲಿಯೂ ಬರಿಯಲೇ ಕೂಡದು. ಹಾಜರಿ ತೆಗೆದುಕೊಳ್ಳುವಾಗ, ವಿದ್ಯಾರ್ಥಿಯ ಹೆಸರನ್ನು ಕೂಗಿದ್ದಾಗ್ಗೆ, ಅವನು, 'ಇದ್ದೇನೆ, ಬಂದಿದ್ದೇನೆ,' ಎಂದು ಹೇಳುವುದನ್ನು ಕೆಲವು ದಿನಗಳು ಅಭ್ಯಾಸ ಮಾಡಿಸಬೇಕು. ಅಭ್ಯಾಸ ಬಲದಿಂದ 'ಪ್ರೆಸೆಂಟ್ ಸಾರ್' (Present Sir,) ಎಂದು ಕೂಗಿದರೆ ಪುನಃ ವಿದ್ಯಾರ್ಥಿಯು ಎಚ್ಚರಗೊಂಡು, ಕನ್ನಡದಲ್ಲಿಯೇ ಉತ್ತರವನ್ನು ಕೊಡುವ ತನಕ ಅವನ ಹೆಸರನ್ನು ಎರಡು ಸಲವೋ ಮೂರು ಸಲವೋ ಕೂಗಿದರೂ ಕೂಗಬಹುದು. ಹೀಗೆ ಮಾಡುವುದರಿಂದ ಪುನಃ ವಿದ್ಯಾರ್ಥಿ ತನ್ನ ಹಿಂದಿನ ದುರಭ್ಯಾಸಕ್ಕೆ ಶರಣು ಹೋಗುವುದಿಲ್ಲ. ಇತರ ಬಾಲಕರಿಗೆ ಇದು ಸ್ವಲ್ಪ ವಿನೋದವಾಗಿ ಕಂಡುಬಂದರೂ, ಕಾಲಕ್ರಮದಲ್ಲಿ ಪರಿಣಾಮ ಬಹಳ ತೃಪ್ತಿಕರವಾಗಿರುವುದು. ವ್ಯಾಯಾಮ ಮಾಡಿಸುವಾಗಲೂ, ಆಟಗಳನ್ನು ಆಡಿಸುವಾಗಲೂ, ಬಾಲಚಮೂ ತರಗತಿಗಳನ್ನು ನಡಸುವಾಗಲೂ ಇದೇ ಪದ್ಧತಿಯನ್ನು ಅನುಸರಿಸುವುದು ಒಳ್ಳೆಯದು.

ತರಗತಿಗಳಲ್ಲಿ ಗೋಡೆಗಳ ಮೇಲೆ ನೇತು ಹಾಕಿರುವ ಪಾಠಗಳ ಕಾರ್ಯಕ್ರಮದ ಪಟ್ಟಿ, ಪಾಠಗಳ ವೇಳಾಪಟ್ಟಿಗಳೂ ಕನ್ನಡ ಬರವಣಿಗೆಯಲ್ಲಿಯೇ ಇರತಕ್ಕದ್ದು. ವಿದ್ಯಾರ್ಥಿ ಅವುಗಳನ್ನು ಸುಲಭವಾಗಿ ಓದಿಕೊಂಡು ಬರೆದುಕೊಳ್ಳಲು ಅನುಕೂಲವಾಗುವುದು. ವಿದ್ಯಾರ್ಥಿ ಸಕಾಲಕ್ಕೆ ಬರದೆ, ತಡವಾಗಿ ಬಂದಾಗ 'ಒಳಗೆ ಬರಲೇ? ಒಳಕ್ಕೆ ಬರಲು ದಯವಿಟ್ಟು ಅವಕಾಶ ಕೊಡುವಿರಾ?' ಎಂದು ಕೇಳುವವರೆಗೂ, ಅವನ ಕಡೆಗೆ ಬೋಧಕರು ಗಮನ ಕೊಡದೆ ಇರುವುದು ಮೇಲು. ತನ್ನ ತಪ್ಪನ್ನು ತಿಳಿದುಕೊಂಡು ಅವನು ಕನ್ನಡದಲ್ಲಿಯೇ ಮಾತನಾಡಿ ಅಪ್ಪಣೆ ಬೇಡಿದರೆ ಆಗ 'ಆಗಬಹುದು' ಎಂದು ಹೇಳಿ ಅವನನ್ನು ತರಗತಿಗೆ ಸೇರಿಸಬಹುದು. ಇಂತಹ ಪ್ರಯೋಗಗಳು ಮೊದಮೊದಲು ಹಾಸ್ಯಾಸ್ಪದವಾಗಿ ಕಾಣಬರಬಹುದು. ಇದನ್ನು ಕಂಡ ವಿದ್ಯಾರ್ಥಿಗಳೂ ನಗಬಹುದು. ಆದರೆ, ಬೋಧಕರು ತಮ್ಮ ಗುರಿಯನ್ನು ಸಾಧಿಸಲು ಸ್ವಲ್ಪ ಸಹನೆಯನ್ನು ತೋರಿಸಬೇಕು. ಸಾಧ್ಯವಾದಲ್ಲೆಲ್ಲಾ ಹುಡುಗರಿಗೆ ಕನ್ನಡದಲ್ಲಿ ಅಭಿಮಾನ ಹುಟ್ಟುವಂತೆ ಕೆಲವು ಮಾತುಗಳನ್ನು ಹೇಳಬೇಕು. ಮುಖ್ಯವಾಗಿ, ಮುಖ್ಯೋಪಾಧ್ಯಾಯರುಗಳು ಕನ್ನಡ ನುಡಿಯ ಏಳಿಗೆಯ ಇಂತಹ ಕಾರ್ಯಗಳಿಗೆ ತಕ್ಕ ಅವಕಾಶವನ್ನೂ ಪ್ರೋತ್ಸಾಹವನ್ನೂ ಅಗತ್ಯವಾಗಿ ಕೊಡಬೇಕು.

ಕೆಲವು ಸಮಯಗಳಲ್ಲಿ ಪಾಠಗಳು ನಡೆಯುತ್ತಿರುವ ಸಮಯಗಳಲ್ಲಿ ಮುಖ್ಯೋಪಾಧ್ಯಾಯರು ತರಗತಿಗಳಿಗೆ ಬಂದು ಬೋಧಕರೊಡನೆ ಸಂಭಾಷಣೆ ನಡಸುವರು. ಅಂತಹ ಸಂದರ್ಭಗಳಲ್ಲಿ, ಅದರಲ್ಲಿಯೂ ವಿದ್ಯಾರ್ಥಿಗಳ ಎದುರಿನಲ್ಲಿ ಕನ್ನಡದಲ್ಲಿ ಮಾತನಾಡುವುದನ್ನು ಅಭ್ಯಾಸ ಮಾಡಬೇಕು. ಒಬ್ಬರು ಕನ್ನಡ, ಮತ್ತೊಬ್ಬರು ಅರ್ಧ ಇಂಗ್ಲಿಷ್ ಅರ್ಧ ಕನ್ನಡದಲ್ಲಿ ಮಾತನಾಡುತ್ತಿದ್ದರೆ, ಅಲ್ಲಿಯೇ ಕುಳಿತು ಕಿವಿಗೊಟ್ಟು ಕೇಳುತ್ತಿರುವ ಬಾಲಕರು ನಗದೆ ಎಂದಿಗೂ ಸುಮ್ಮನಿರುವುದಿಲ್ಲ. ಸಾಮಾನ್ಯವಾಗಿ ಎಸ್.ಎಸ್.ಎಲ್.ಸಿ. ಅಥವಾ ಇಂಟರ್‌ಮೀಡಿಯೇಟ್ ಪರೀಕ್ಷೆಯಲ್ಲಿ ತೇರ್ಗಡೆಯಾದ ಬೋಧಕನು ಇಂಗ್ಲಿಷಿನಲ್ಲಿ ಚೆನ್ನಾಗಿ ಒಂದೇ ಸಮನಾಗಿ ಹತ್ತು ವಾಕ್ಯಗಳನ್ನು ಆಡುವುದು ತುಸ ಕಠಿಣವೇ. ಆಗ ಅವನು ಅರ್ಧ ಇಂಗ್ಲಿಷ್ ಅರ್ಧ ಕನ್ನಡ ಪದಗಳನ್ನು ಉಪಯೋಗಿಸಿಯೇ ಮಾತನಾಡುವನು. ಮುಖ್ಯೋಪಾಧ್ಯಾಯರೂ ತಾವು ಹೇಳುತ್ತಿರುವ ವಿಷಯವು ಸರಿಯಾಗಿ ಅರ್ಥವಾಗಲೆಂದು ಅದೇ ಶೈಲಿಯಲ್ಲಿಯೇ ತಮ್ಮ ಸಂಭಾಷಣೆಯನ್ನು ಮುಂದುವರಿಸುವರು. ಈ ನಡವಳಿಕೆಯಿಂದ ಎರಡು ಭಾಷೆಗಳಿಗೂ ಹಾನಿ. ಸಂಭಾಷಣೆ ನಡಸುತ್ತಿರುವ ಉಭಯತ್ರರಿಗೂ ತಕ್ಕುದಲ್ಲ.

ಒಂದು ಶಾಲೆಯ ಆಡಳಿತದಲ್ಲಿ ನೂರಾರು ಬಾಬಿನ ಪತ್ರ ವ್ಯವಹಾರಗಳು ನಡೆಯುವುವು. ಕೆಲವು ಜಿಲ್ಲಾ ವಿದ್ಯಾಧಿಕಾರಿಗಳ ಕಚೇರಿಯೊಂದಿಗೆ ನಡೆಯುವುವು. ಮತ್ತೆ ಕೆಲವು ವಿದ್ಯಾರ್ಥಿಗಳು, ಹಿರಿಯರು, ತಂದೆತಾಯಿಗಳು ಮತ್ತು ಬೋಧಕರು ಮುಂತಾದವರೊಂದಿಗೆ ನಡೆಯುವುವು. ಇಂತಹ ಸಂದರ್ಭಗಳಲ್ಲಿ ಪತ್ರದ ವಿಷಯಗಳನ್ನು ಕನ್ನಡದಲ್ಲಿಯೇ ಬರೆದರೆ ಮೇಲಲ್ಲವೇ? ಓದಿಕೊಂಡು ಅರ್ಥ ಮಾಡಿಕೊಳ್ಳಲೂ ಸುಲಭ; ಬರೆಯುವುದೂ ಸುಲಭ. ಬೋಧಕರೂ ಸಹ ತಾವು ರಜಾ ಪಡೆಯಬೇಕಾದ ಸಮಯಗಳಲ್ಲಿ ತಮ್ಮ ರಜಾ ಅರ್ಜಿಗಳನ್ನು ಕನ್ನಡದಲ್ಲಿಯೇ ಬರೆದರೆ ತಮ್ಮ ಅಭಿಪ್ರಾಯಗಳನ್ನೆ (ಅಂದರೆ ರಜಾ ಪಡೆಯಲು

ಇರುವ ಕಾರಣಗಳನ್ನು) ಸ್ಪಷ್ಟವಾಗಿ ತಿಳಿಸಬಹುದು. ಹೀಗೇಕೆ ಮಾಡುವುದಿಲ್ಲವೋ ನಾ ಕಾಣೆ? ಕಡೆಗೆ ಕನ್ನಡ ಭಾಷೆಯನ್ನು ಬೋಧಿಸುವ ಪಂಡಿತರೂ ಸಹ ತಮ್ಮ ಅರ್ಜಿಗಳನ್ನು ಇಂಗ್ಲಿಷಿನಲ್ಲಿಯೇ ಬರೆಯುತ್ತಾರೆ. ಅದೇತಕ್ಕೆ ಇಂತಹ ವ್ಯಾಮೋಹ! ಪ್ರಬಂಧ ರಚನೆಯ ಪಾಠದ ಕಾಲದಲ್ಲಿ ವಿದ್ಯಾರ್ಥಿಗಳಿಗೆ ಕನ್ನಡದಲ್ಲಿ ರಜಾ ಅರ್ಜಿಗಳನ್ನು ಬರೆಯುವುದನ್ನು ಕಲಿಸುವುದು ಬಹಳ ಆವಶ್ಯಕ. ಅವರು ಇಂಗ್ಲಿಷಿನಲ್ಲಿ ಬರೆದಿರುವ ಕೆಲವು ಕಾಗದಗಳನ್ನು ಓದಿ ನೋಡಿದರೆ, ಅವು ಬರಿಯ ಕೆಲವು ಪದಗಳೇ ಆಗಿದ್ದು, ಒಂದು ವಾಕ್ಯವೂ ಇರುವುದಿಲ್ಲ. ಕಾಗುಣಿತದ ತಪ್ಪುಗಳೋ ಅಸಂಖ್ಯಾತ!

ಶಾಲೆಗಳಲ್ಲಿ ಮುಖ್ಯೋಪಾಧ್ಯಾಯರು ಬೋಧಕರಿಗೂ, ವಿದ್ಯಾರ್ಥಿಗಳಿಗೂ ಬರವಣಿಗೆಯ ಮೂಲಕ ತಿಳಿಸಬೇಕಾದ ಹಲವು ಸಂಗತಿಗಳಿರುವುವು. ಇಂತಹವೊಂದನ್ನೂ ಕನ್ನಡದಲ್ಲಿ ಬರೆದ ಮಹನೀಯರೊಬ್ಬರನ್ನೂ ನಾನು ಕಾಣೆ. ಪ್ರತಿಯೊಂದು ವಿಷಯವೂ ಇಂಗ್ಲಿಷ್‌ನಲ್ಲಿಯೇ ಬರೆಯಲ್ಪಡುವುದು. ಕೆಲವು ಸಮಯಗಳಲ್ಲಿ ಮುಖ್ಯೋಪಾಧ್ಯಾಯರೇ ಬರೆಯುವರು. ಕೆಲವು ವೇಳೆಗಳಲ್ಲಿ ಗುಮಾಸ್ತರ ಬರವಣಿಗೆಗೆ ಮುಖ್ಯೋಪಾಧ್ಯಾಯರು ಸಹಿ ಹಾಕಿರುವರು. ಇಂತಹ ಸೂಚನೆಗಳನ್ನು (ತಿಳಿಸಬೇಕಾದ ಅಂಶಗಳನ್ನು) ಒಳಗೊಂಡ ಪುಸ್ತಕವನ್ನು ಶಾಲೆಯ ಜವಾನನೋ ಯಾವನಾದರೂ ಒಬ್ಬ ವಿದ್ಯಾರ್ಥಿಯೋ ತರಗತಿಗಳಿಗೆ ತೆಗೆದುಕೊಂಡು ಬರುವನು. ಆ ಸೂಚನೆಯನ್ನು ಮೊದಲು ಬೋಧಕನು ನಿಧಾನವಾಗಿ ಓದಿಕೊಂಡು ಅನಂತರ, ಅದನ್ನು ವಿದ್ಯಾರ್ಥಿಗಳಿಗೆ ಓದಿ ಹೇಳುವನು. ಅದರ ಅರ್ಥ ಅವರಿಗೆ ಜಾಗ್ರತೆಯಾಗಿ ತಿಳಿಯುವುದು ಅಸಾಧ್ಯ. ಸರಿ, ಕೂಡಲೆ ಗಲಾಟೆಗೆ ಆರಂಭವಾಗುವುದು. ಆಗ ಆ ಸೂಚನೆಯನ್ನು ತನಗೆ ತೋರಿದ ರೀತಿಯಲ್ಲಿ ಬೋಧಕನು ಕನ್ನಡಕ್ಕೆ ತರ್ಜುಮೆ ಮಾಡಿ ಅದರ ಅರ್ಥವನ್ನು ಅವರಿಗೆ ತಿಳಿಸುವನು. ಇಷ್ಟು ಪ್ರಕರಣ ಒಂದು ಸೂಚನೆ ಬಂದರೆ. ಅದೇ ಅಂಶವನ್ನು ಕನ್ನಡದಲ್ಲಿಯೇ ಬರೆದಿದ್ದರೆ ಎಷ್ಟು ಲಾಭವಾಗುತ್ತಿತ್ತು? ವಿದ್ಯಾರ್ಥಿಗಳ ಕೂಗಾಟಕ್ಕೆ ಅವಕಾಶವಿರುತ್ತಿರಲಿಲ್ಲ. ತರ್ಜುಮೆ ಮಾಡುವ ಕಷ್ಟವಿರುತ್ತಿರಲಿಲ್ಲ. ಅನಾವಶ್ಯಕವಾದ ಕಾಲಹರಣೆಯೂ ಆಗುತ್ತಿರಲಿಲ್ಲ. ಇಂಗ್ಲಿಷಿನಲ್ಲಿ ಬರೆದುದರಿಂದ ಯಾವ ಕಾರ್ಯಸಾಧನೆಯೂ ಆಗಲಿಲ್ಲ.

ಇದೇ ಮಾದರಿಯನ್ನು ಅನುಸರಿಸಿ ಇತರ ಬೋಧಕರೂ, ಆಟ ಪಾಠಗಳ ಕಾರ್ಯದರ್ಶಿಗಳೂ, ಪುಸ್ತಕ ಭಂಡಾರದ ಮೇಲ್ವಿಚಾರಕರೂ, ಕನ್ನಡ ಸಂಘ ಉತ್ಸವಾದಿಗಳ ವ್ಯವಸ್ಥಾಪಕರೂ, ಬಾಲಚಮೂ ಸಹೋದರರೂ ತಮ ತಮಗೆ ಸೂಬಂಧಪಟ್ಟ ಕಾರ್ಯಕ್ರಮಗಳನ್ನು ವಿದ್ಯಾರ್ಥಿಗಳಿಗೆ ತಿಳಿಸುವ ಸಲುವಾಗಿ ಇಂಗ್ಲಿಷಿನಲ್ಲಿಯೇ ಸೂಚನೆಗಳನ್ನು ಬರೆಯುವರು. ಹೀಗೆ ಪರಭಾಷೆಯನ್ನುಪಯೋಗಿಸಿ ಕೆಲವರು ಎಷ್ಟೋ ಸಲ ಅಪಹಾಸ್ಯಕ್ಕೂ ಈಡಾಗಿರುವರು. ಚರ್ಚಾಕೂಟಗಳಲ್ಲಿ ಕೆಲವು ಬೋಧಕರು ತಮ್ಮ ಭಾಷಣಗಳನ್ನು ಇಂಗ್ಲಿಷಿನಲ್ಲಿ ಆರಂಭ ಮಾಡಿ, ಕಡೆಗೆ ಕನ್ನಡದಲ್ಲಿ ಮುಗಿಸಿದ್ದಾರೆ. ವಿದ್ಯಾಶಾಲೆಗಳಲ್ಲಿ ಹೀಗಿದೆ ಪರಿಸ್ಥಿತಿ. ಇಂಗ್ಲಿಷ್ ಭಾಷೆಯ ಹಾವಳಿ!

ಪುಸ್ತಕ ಭಂಡಾರದ ಪಾಠಗಳ ಸಮಯಗಳಲ್ಲಿ ವಿದ್ಯಾರ್ಥಿಗಳಿಗೆ ಇಂಗ್ಲಿಷ್ ಪುಸ್ತಕಗಳನ್ನು ಕೊಡುವ ವಾಡಿಕೆ ಇದೆ. ತಮ್ಮ ಪಠ್ಯ ಪುಸ್ತಕಗಳನ್ನೇ ಓದಿ ಅರ್ಥ ಮಾಡಿಕೊಳ್ಳಲು ಚೈತನ್ಯವಿಲ್ಲದೆ ಇರುವವರಿಗೆ ಇತರ ಇಂಗ್ಲಿಷ್ ಪುಸ್ತಕಗಳಿಂದಾದರೂ ಆಗುವ ಪ್ರಯೋಜನವೇನು? ಕನ್ನಡವನ್ನೇ ಸರಿಯಾಗಿ ಸ್ಪಷ್ಟವಾಗಿ ಓದಲು ಬಾರದೆ ಇರುವವನು ಇಂಗ್ಲಿಷ್ ಪುಸ್ತಕವನ್ನು ತೆಗೆದುಕೊಂಡು ಏನು ತಾನೆ ಮಾಡಿಯಾನು? ಅಲ್ಲಿ ಇಲ್ಲಿ ಕಾಣಬರುವ ಕೆಲವು ಬೊಂಬೆಗಳನ್ನು ನೋಡಿ ಪಾಠಾನಂತರ ಪುಸ್ತಕವನ್ನು ಹಿಂತಿರುಗಿ ಕೊಟ್ಟು ಹೋಗುವನು. ಇದರಿಂದ ಆದ ಪ್ರಯೋಜನವೇನು? ಮಕ್ಕಳ ತಿಳಿವಳಿಕೆ ಹೆಚ್ಚಿಸಲು ತಿಳಿಗನ್ನಡದಲ್ಲಿ ಬರೆದ ಮಹನೀಯರುಗಳ ಜೀವನ ಚರಿತ್ರೆ, ಶಾಸ್ತ್ರಪುಸ್ತಕಗಳು, ಮುಂತಾದುವನ್ನು ಕೊಟ್ಟರೆ ವಿದ್ಯಾರ್ಥಿಗಳು ಎಷ್ಟೋ ಆದರದಿಂದ ಓದುವರು. ಅವರಲ್ಲಿ ಓದುವ ಅಭಿರುಚಿಯೂ ಹೆಚ್ಚುವುದು. ಶಾಲೆಯ ಪುಸ್ತಕ ಭಂಡಾರ ಕಾರ್ಯದ ಏರ್ಪಾಟೂ ಸಾರ್ಥಕವಾಗುವುದು.

ವ್ಯಾಯಾಮ (ಕವಾಯತು) ಶಿಕ್ಷಣ ಕಾಲದಲ್ಲಿ ಆಜ್ಞೆಗಳನ್ನು ಇಂಗ್ಲಿಷಿನಲ್ಲಿ ಕೊಡುವ ರೂಢಿ ಇದೆ. 'ಬಲಕ್ಕೆ ತಿರುಗಿ' (Right Turn) ಎಂದು ಇಂಗ್ಲಿಷಿನಲ್ಲಿ ಆಜ್ಞೆ ಇತ್ತರೆ, ಅರ್ಧಕ್ಕೆ ಹೆಚ್ಚಾಗಿ ತಮಗೆ ಇಷ್ಟ ಬಂದ ದಿಕ್ಕಿಗೆ ತಿರುಗಿರುವರು. ಆಜ್ಞೆಯನ್ನು ಅರ್ಥ ಮಾಡಿಕೊಂಡು, ಎಚ್ಚರದಿಂದ ಕೆಲಸ ಮಾಡುವವರು ಅತಿ ವಿರಳ. ಇದಕ್ಕೆ ಭಾಷಾ ಜ್ಞಾನವಿಲ್ಲದುದೇ ಕಾರಣ. ಆದುದರಿಂದ ಆದಷ್ಟು ಜಾಗ್ರತೆಯಾಗಿ ಕನ್ನಡದಲ್ಲಿ ವ್ಯಾಯಾಮ ಶಿಕ್ಷಣದ ಕೈಪಿಡಿಯೊಂದು ತಯಾರಾಗಬೇಕಾದ ಆವಶ್ಯಕತೆ ಇದೆ. ಆಜ್ಞೆಗಳೆಲ್ಲಾ ಕನ್ನಡ ಪದಗಳಿಂದಲೇ ಜೋಡಣೆಯಾಗಿದ್ದರೆ ಮೇಲು.

ಇವುಗಳನ್ನೆಲ್ಲ ಆಗ ಮಾಡಿಸಲು ಯಾರು ಸೊಂಟ ಕಟ್ಟಿ ನಿಲ್ಲುವರು? ಎಲ್ಲರಲ್ಲಿಯೂ ಕನ್ನಡದ ಅಭಿಮಾನ ಮೂಡಿ ಬರಬೇಕಾದರೆ ಎಷ್ಟು ಪ್ರಚಾರ ಕಾರ್ಯ ನಡೆಯಬೇಕು? ಪ್ರಸಿದ್ಧ ಕನ್ನಡ ಸಾಹಿತಿಗಳು ನಮ್ಮ ನಾಡಿನಲ್ಲಿರುವ ಅನೇಕ ವಿದ್ಯಾಶಾಲೆಗಳಿಗೆ ದಯಮಾಡಿಸಿ ಕನ್ನಡದ ವಿಷಯದಲ್ಲಿ ಬೋಧಕರಿಗೂ ವಿದ್ಯಾರ್ಥಿಗಳಿಗೂ ಅಭಿಮಾನ ಹುಟ್ಟುವಂತೆ ಮಾಡಬೇಕು. ಈ ಪ್ರಚಾರ ಕಾರ್ಯಕ್ಕಾಗಿಯೇ ಕೆಲವರು ಸೊಂಟ ಕಟ್ಟಿ ನಿಲ್ಲಬೇಕು. ಅವರದೇ ಒಂದು ಸಂಸ್ಥೆಯಾಗಬೇಕು. ದೇಶದಲ್ಲೆಲ್ಲಾ ಸಂಚಾರ ಮಾಡಿ, 'ಕನ್ನಡದಲ್ಲಿಯೇ ಮಾತನಾಡಿ, ಕನ್ನಡದಲ್ಲಿಯೇ ಬರೆಯಿರಿ' ಎಂದು ಪ್ರಚಾರ ನಡಸಬೇಕು. ಈ ಕಾರ್ಯಕ್ಕೆ ಘನ ಸರಕಾರದವರೂ ಕನ್ನಡ ಸಾಹಿತ್ಯ ಪರಿಷತ್ತಿನವರೂ ತಕ್ಕ ಬೆಂಬಲವನ್ನು ಕೊಡಬೇಕು. ಮುಖ್ಯವಾಗಿ ಶಾಲೆಗಳ ಬೋಧಕರು (ಮುಖ್ಯೋಪಾಧ್ಯಾಯರು ಮೊದಲುಗೊಂಡು) ಈ ವಿಚಾರದಲ್ಲಿ ಹೆಚ್ಚು ಶ್ರದ್ಧೆ ವಹಿಸಬೇಕು. ಇದಿಷ್ಟೂ ನಡೆದರೆ ಆಗ ಈ ಕಾರ್ಯ ಸರಿಯಾಗಿ ಆರಂಭವಾದಂತೆ ಆಗುವುದು.

ಮೇಲೆ ತಿಳಿಸಿರುವಂತಹ ಅನೇಕ ಅವಿವೇಕಗಳು ತಿದ್ದಿ ಸುಧಾರಣೆಯಾಗಿ ಕನ್ನಡಕ್ಕೆ ಬಿಡುಗಡೆ ದೊರೆಯುವುದು. ಎಷ್ಟು ಪಾಠಗಳನ್ನು ಕನ್ನಡದಲ್ಲಿ ಬೋಧಿಸಿದರೇನು ಫಲ? ಎಲ್ಲೆಲ್ಲೂ ಕನ್ನಡದ ವಾತಾವರಣವನ್ನು ತುಂಬಬೇಕು. ಪ್ರತಿಯೊಂದು ಸನ್ನಿವೇಶದಲ್ಲಿಯೂ ಕನ್ನಡವೇ ಪ್ರಧಾನ ಭಾಷೆಯಾದರೆ, ಆಗ ಕನ್ನಡದ ಏಳಿಗೆ ತಾನಾಗಿ ಆಗುವುದು.

## ಸಾದರ ಸ್ವೀಕಾರ

**ಅಂತರಗಂಗೆ:** ಕೋಲಾರ ನಗರದ ಗವರ್ನಮೆಂಟ್ ಹೈಸ್ಕೂಲಿನ ವರ್ಷಕ್ಕೆ ಎರಡು ಬಾರಿ ಹೊರಡುವ ಪತ್ರಿಕೆ. ಸಂಪುಟ ೨, ಸಂಚಿಕೆ ೧. ವಾರ್ಷಿಕ ಚಂದಾ: ಸಂಸ್ಥೆಗಳಿಗೆ ೧ ರೂ. ವ್ಯಕ್ತಿಗಳಿಗೆ ಎಂಟಾಣೆ ಮಾತ್ರ.

ಈ ಪತ್ರಿಕೆಯಲ್ಲಿ ಕನ್ನಡ, ಇಂಗ್ಲಿಷ್, ಹಿಂದಿ ಮತ್ತು ಉರ್ದು ಭಾಷೆಗಳಲ್ಲಿ ಶಾಲೆಯ ವಿದ್ಯಾರ್ಥಿಗಳು ಬರೆದ ಪುಟ್ಟ ಸ್ವಾರಸ್ಯವಾದ ಕತೆ, ಕವಿತೆ ಪ್ರಬಂಧಗಳಿವೆ. ಶಾಲೆಯ ವಿದ್ಯಾರ್ಥಿಗಳ ಲೇಖನ ಶಕ್ತಿ ಕುದುರಲು ಈ ಪತ್ರಿಕೆಯಿಂದ ಬೇಕಾದಷ್ಟು ಸಹಾಯವಾಗಲಿ ಎಂದು ಹಾರೈಸುತ್ತೇವೆ.

**ತ್ರೈಮಾಸಿಕ 'ವಾಗ್ಭೂಷಣ':** ಕರ್ನಾಟಕ ವಿದ್ಯಾವರ್ಧಕ ಸಂಘದ ಮುಖಪತ್ರವಾಗಿ ಈಸಲದ ನವರಾತ್ರಿಯಿಂದ ತ್ರೈಮಾಸ ಪತ್ರಿಕೆಯಾಗಿ ಪ್ರಾರಂಭವಾಗಿದೆ. ಈ ಪತ್ರಿಕೆ "ಈಗ್ಗೆ ನಾಲ್ವತ್ತೈದು ವರ್ಷಗಳ ಪೂರ್ವದಲ್ಲೇ ಭವಕ್ಕವತರಿಸಿ, ಮಾಸ ಪತ್ರಿಕೆಯ ರೂಪದಿಂದ ಅಖಂಡ ಮೂವತ್ತಾರು ವರ್ಷ ಕಾಲ ನುಡಿ ಸೇವೆಗೈದು, ಕನ್ನಡದ ಕೀರ್ತಿಕೇತನವಾಗಿ ಮೆರೆದುದನ್ನು ಮರೆಯಲಾಗದು." ಸಂಘದ ಸ್ವರ್ಣಮಹೋತ್ಸವ ಸಂದರ್ಭದಲ್ಲಿ ನಿಂತುಹೋಗಿದ್ದ ಪತ್ರಿಕೆಯನ್ನು ಮರಳಿ ಹೊರಡಿಸುವ ನಿಶ್ಚಯವಾಗಿತ್ತು. ಆ ನಿಶ್ಚಯ ಈಗ ಕಾರ್ಯರೂಪಕ್ಕೆ ತಿರುಗಿರುವುದಕ್ಕಾಗಿ ಕನ್ನಡಿಗರು ಸಂತೋಷಪಡುತ್ತಾರೆ.

ಕನ್ನಡ ನುಡಿಯ ಹಾಗೂ ಸಂಸ್ಕೃತಿಯ ಸಂವರ್ಧನಕ್ಕೆ ದೊಡ್ಡ ಧ್ಯೇಯದಿಂದ ದುಡಿಯುವ ಪತ್ರಿಕೆಗಳು ಎಷ್ಟಾದರೂ ಸಾಲವು. 'ವಾಗ್ಭೂಷಣ' ಪತ್ರಿಕೆ ಚಿರಕಾಲ ಬಾಳಲಿ.

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧॥
ಬಿಡಿ ಪತ್ರಿಕೆ: ೬ ಕಾಸು




ಸಂಪಾದಕ:
ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿ ಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಬೆಂಗಳೂರು: ಶುಕ್ರವಾರ, ನವೆಂಬರ್ ೨೦, ೧೯೪೨

ಸಂಚಿಕೆ ೫

## ವನಿತಾ ಸದನದ ಐದನೆಯ ವಾರ್ಷಿಕೋತ್ಸವ

ತಾರೀಖು ೧೫-೧೧-೧೯೪೨ನೆಯ ಭಾನುವಾರ ಮೈಸೂರಿನ ಶ್ರೀ ವನಿತಾಸದನದ ಐದನೆಯ ವಾರ್ಷಿಕೋತ್ಸವ ಸಮಯದಲ್ಲಿ ಅಧ್ಯಕ್ಷತೆ ವಹಿಸಿದ್ದ ರಾಜಕಾರ್ಯಪ್ರಸಕ್ತ ದಿವಾನ್ ಬಹದ್ದೂರ್ **ಶ್ರೀ. ಕೆ. ರಾಮಸ್ವಾಮಿಯವರ ಅಧ್ಯಕ್ಷ ಭಾಷಣದ** ಕೆಲವು ಭಾಗಗಳಿವು:

ಭಾಷಣದ ಮೊದಲಲ್ಲಿ ಶ್ರೀ. ರಾಮಸ್ವಾಮಿಯವರು ಮೈಸೂರು ಸಂಸ್ಥಾನದಲ್ಲಿ ಮಹಿಳೆಯರ ಏಳಿಗೆಗಾಗಿ ಮೈಸೂರು ರಾಜಮನೆತನದವರು ತೋರಿಸುತ್ತಿರುವ ಆಸಕ್ತಿಯನ್ನೂ, ನೀಡುತ್ತಿರುವ ಕೃಪಾಶ್ರಯವನ್ನೂ ಕೃತಜ್ಞತೆಯಿಂದ ನೆನೆದು, ಭಾರತೀಯ ಮಹಿಳಾ ಚಳವಳಿಯ ಸ್ವರೂಪವನ್ನು ವಿಮರ್ಶೆ ಮಾಡಿದರು.

"ಭಾರತದ ಮಹಿಳಾ ಚಳವಳಿಯನ್ನು ಪಾಶ್ಚಾತ್ಯದೇಶಗಳಲ್ಲಿಯ ಚಳವಳಿಯೊಂದಿಗೆ ಹೋಲಿಸುವುದು ಸುಲಭವಾದ ಕೆಲಸವಲ್ಲ. ಹೋಲಿಸಿದರೆ ಹೊಲಬುದಪ್ಪೀತು. ಏಕೆಂದರೆ, ನಮ್ಮ ದೇಶದ ಮಹಿಳೆಯರ ಸ್ಥಾನಮಾನಗಳಿಗೆ ಪಾಶ್ಚಾತ್ಯ ದೇಶಗಳ ಹೆಂಗಸರ ಸ್ಥಾನಮಾನಗಳಿಗಿರುವಂತಹ ತಳಪಾಯವಿಲ್ಲ. ಭಿನ್ನವಾದ, ನಮ್ಮ ನಾಡಿಗೇ ವಿಶೇಷವೆಂದು ಹೇಳಬಹುದಾದ ತಳಪಾಯವದು. ಹಿಂದೂಗಳಲ್ಲಿ ಇರುವ ಕೂಡೊಕ್ಕಲ ಪದ್ಧತಿ, ವಿಧವಾ ಸಂಪ್ರದಾಯ ಮತ್ತು ಮುಸಲ್ಮಾನರಲ್ಲಿರುವ 'ಪರ್ದಾ' ಪದ್ಧತಿ– ಇವು ಈ ವಿಷಯವನ್ನು ಸ್ಪಷ್ಟಪಡಿಸುವ ನಿದರ್ಶನಗಳು. ಅಲ್ಲದೆ, ಹೆಣ್ಣಿನ ಬಿಡುಗಡೆಗೆ ಅತ್ಯಗತ್ಯವಾದ ಗುಣವೆಂದರೆ ಗಂಡನಿಗೆ ನಿಷ್ಠೆಯಿಂದಿದ್ದು ಬದುಕು ಸಾಗಿಸುವುದು ಎಂಬ ಅಂಶವನ್ನು ಸಾರುವ ಪೌರಾಣಿಕ ಹಿನ್ನೆಲೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ನಮ್ಮ ಹೆಂಗಸರ ಸ್ಥಿತಿ-ಗತಿಯನ್ನು ನಾವು ಪರ್ಯಾಲೋಚಿಸಬೇಕು. ಆದರೆ ಪಾಶ್ಚಾತ್ಯ ದೇಶಗಳಲ್ಲಿ ಹೆಣ್ಣು ಗಂಡಿಗೆ ವಿಧೇಯವಾಗಿರಬೇಕೆಂಬ ಕಟ್ಟುಪಾಡೇನೂ ಇಲ್ಲ. ಅಲ್ಲಿ ಮಹಿಳೆ ಪುರುಷನನ್ನು ಗಂಡುತನದಿಂದ ವಿರೋಧಿಸಿ ತನ್ನ ಹಕ್ಕುಬಾಧ್ಯತೆಗಳನ್ನೂ ಸ್ವಾತಂತ್ರ್ಯ ಸಮಾನತೆಗಳನ್ನೂ ಸ್ಥಾಪಿಸಲು ತೊಡಗುತ್ತಾಳೆ. ಗಂಡಸಿನಂತೆಯೆ ಹೆಂಗಸೂ ಹೊಗೆಬತ್ತಿ ಸೇದುವುದು, ಉಡುಪು ತೊಡುವುದು, ಕ್ರಾಪು ಬಿಡಿಸಿಕೊಳ್ಳುವುದು ಮುಂತಾದ ನಡವಳಿ ಈ ಭಿನ್ನದೃಷ್ಟಿಗೆ ಉದಾಹರಣೆ. ಹೆಂಗಸಿನಲ್ಲಿ ಇಂಥ ಮನೋಧರ್ಮ ಮೊಳೆತರೆ, ಅದರಲ್ಲೂ ಭರತಖಂಡದ ಸ್ತ್ರೀಯರೇನಾದರೂ ಇಂಥ ಮನೋಧರ್ಮಕ್ಕೆ ಒಲಿದರೆ, ಆಕೆಯ ವ್ಯಕ್ತಿತ್ವದ ಬೆಳವಣಿಗೆಗೆ ಬಹಳ ಅಡ್ಡಿಯಾಗುವುದೆಂಬ ಮಾತನ್ನು ನೀವು ಒಪ್ಪುವಿರೆಂದು ನಾನು ನಂಬಿದ್ದೇನೆ. ಈ ಸಂದರ್ಭದಲ್ಲಿ, ಕೆಲವು ಕಾಲದ ಹಿಂದೆ ಸರ್ ಸರ್ವೆಪಲ್ಲಿ ರಾಧಾಕೃಷ್ಣನ್ ಅವರು ಹೇಳಿದ "ಮಹಿಳೆ ಪುರುಷನಿಗೆ ಸ್ಫೂರ್ತಿಕೊಡಬಲ್ಲವಳಾಗಬೇಕೇ ಹೊರತು ಪುರುಷನಂತೆ ತಾನೂ ಇರಬೇಕೆಂಬ ಅನುಕರಣಕ್ಕೆ ಸೋಲಬಾರದು" ಎಂಬ ಹಿತೋಕ್ತಿಯನ್ನು ತಮ್ಮ ಗಮನಕ್ಕೆ ತರಲು ಬಯಸುತ್ತೇನೆ. ಆದರೆ ಅದೇ ಪಾಶ್ಚಾತ್ಯ ದೇಶಗಳ ಸ್ತ್ರೀಯರನೇಕರು "ತಮ್ಮ ಸಾರಭೂತವಾದ ವ್ಯಕ್ತಿತ್ವ ಇಂಥ ಅನುಕರಣ ಶೀಲದಿಂದ ವಿಕಾಸಗೊಳ್ಳಲಿಲ್ಲ; ಉಸಿರುಗಟ್ಟಿ, ಬೆಳವಣಿಗೆ ಕುಂಟಿದಂತಾಯಿತು" ಎಂದು ಭ್ರಾಂತಿ ತಿಳಿದು, "ತಾವು ಕಳೆದುಕೊಂಡಿದ್ದ ಗೃಹಗಳನ್ನು ಮತ್ತೆ ಗೆಲ್ಲಲು" ಹಿಂತಿರುಗುತ್ತಿದ್ದಾರೆಂಬ ಶುಭ ಚಿಹ್ನೆ ಕಂಡು ಬರುತ್ತಿದೆ. ಅವರ ಮನಸ್ಸಿನ ಹೊಲಬು ತಪ್ಪಿದ ಹೊಳೆ ಸರಿಯಾದ ಪಾತ್ರಕ್ಕೆ ತಿರುಗುತ್ತಿದೆ. ಅದರಲ್ಲೂ ಸ್ಕಾಂಡಿನೇವಿಯದ ದೇಶಗಳಲ್ಲಿ ಮಹಿಳೆಯರಲ್ಲಿ ಈ ಹಿತವಾದ ಮಾರ್ಪಾಟು ಕಂಡುಬರುತ್ತಿದೆ. ಪುರುಷನೊಂದಿಗೆ ಸಮಾನತೆಯ ಹಕ್ಕುಬಾಧ್ಯತೆಗಳನ್ನು ಪಡೆಯುವ ಒತ್ತಾಯ ಭಾವನೆಯ ಜೊತೆಗೆ, ಮಹಿಳೆಯ ಸ್ಥಾನ ಮುಖ್ಯವಾಗಿ ಮನೆಯಲ್ಲಿ ಎಂಬ ವಿಶ್ವಾಸವೂ, ತಾಯ್ತನವೇ ಹೆಣ್ಣಿನ ವ್ಯಕ್ತಿತ್ವ ವಿಕಾಸದ ಕೊನೆಯ ಹಂತ ಎಂಬ ಭಾವನೆಯೂ ಬೇರೂರುತ್ತಿದೆ. "ಅಡುಗೆಮನೆ, ಮಕ್ಕಳು, ದೇವಾಲಯಗಳು"– ಇವನ್ನು ನಂಬಿಕೊಂಡು ತೃಪ್ತಿಪಡಿ ಎಂದು ಜರ್ಮನಿಯ ಮಹಿಳೆಯರಿಗೆ ಬೋಧಿಸಲಾಯಿತು. ಮನೆಯೇ ಹೆಂಗಸಿನ ಸ್ಥಾನವೆಂದು ಹೇಳಿದ ಮಾತ್ರದಿಂದ, ಅವರ ಬದುಕೆಲ್ಲ ಅಡುಗೆ ಮನೆಯ ನಾಲ್ಕು ಗೋಡೆಗಳ ಒಳಗೇ ಸಾಗಬೇಕೆಂದು ನಾನು ಅಭಿಪ್ರಾಯಪಡುವುದಿಲ್ಲ. ನಾಡಿನ ದಿನದಿನದ ಸಂಗತಿಗಳಲ್ಲಿ ಆಕೆ ಬಾಯಿಹಾಕಿ ಮಂತ್ರಾಲೋಚನೆ ಹೇಳುವುದೂ, ತನ್ನ ಗಂಡನೊಂದಿಗೆ ಸರಿಸಮಾನತೆಯಿಂದ ಬದುಕು ಸಾಗಿಸುವುದೂ ಆಕೆಯ ಹಕ್ಕು. ಇದನ್ನು ಯಾರೂ ವಿರೋಧಿಸುವಂತಿಲ್ಲ. ಇಂದಿನ ತಲೆಮೊರೆಯ ಅನೇಕ ಜಂಜಡಗಳಿಗೆ, ಹೆಣ್ಣಿನ ವ್ಯಕ್ತಿತ್ವಕ್ಕೆ ಸಮಾಜದ ಪುನರ್‌ರಚನೆಯಲ್ಲಿ ತನ್ನ ಪಾಲಿನ ಕರ್ತವ್ಯವನ್ನು ನಿರ್ವಹಿಸುವ ಅವಕಾಶವಿಲ್ಲದಿರುವುದೇ ಕಾರಣವೆಂದು ನನ್ನ ಮತ. ಕೈಗಾರಿಕೆಗಳು ತೀವ್ರಗತಿಯಿಂದ ಹೆಚ್ಚಿ ಅಗ್ಗದ ಕೂಲಿಗೆ ಹೆಣ್ಣಾಳುಗಳನ್ನು ನೇಮಿಸಿಕೊಳ್ಳುವ ಪ್ರಮೇಯವೊದಗಿ, ಕುಟುಂಬವೆಂಬ ವ್ಯವಸ್ಥೆ ಶಿಥಿಲವಾಗುವುದಕ್ಕೆ ಕಾರಣವಾಗಿದೆ. ನಾಡಿನ ಶಾಸನ ರಚನೆಯಲ್ಲಿ ಗಂಡಿನ ಕೈವಾಡವೇ ಹೆಚ್ಚಾಗಿದೆ; ಈ ವಿಚಾರವಾಗಿ ಹೆಣ್ಣು ಸೊಲ್ಲೆತ್ತುವಂತೆಯೇ ಇಲ್ಲ ಎಂದು ಹೆಂಗಸರು ದೂರುತ್ತಿದ್ದಾರೆ. "ಪ್ರಕೃತಿ ಮಾತೆ ಹೆಣ್ಣಿಗೆ ಎಷ್ಟೊಂದು ಶಕ್ತಿಯನ್ನು ಧಾರೆಯೆರೆದಿದ್ದಾಳೆ! ಆದರೆ ಶಾಸನವೊ ಅವಳನ್ನು ಅಬಲೆಯನ್ನಾಗಿ ಮಾಡಿದೆ" ಎಂದು ತಮಾಷೆಗೇ ಡಾ॥ ಜಾನ್ಸನ್ ಅವರು ಹೇಳಿದರೂ ಅವರ ಹೇಳಿಕೆ ಎಷ್ಟು ಸತ್ಯವಾದುದು! ಈ ಸಮಾರಂಭದಲ್ಲಿ ನಾನು ಒತ್ತಿ ಹೇಳಬೇಕಾದುದೇನೆಂದರೆ, ಸಮಾನವಾದ ಹಕ್ಕುಬಾಧ್ಯತೆಗಳಿಗೆ ಹೂಡುವ ಕಾಳಗದ ನಡುವೆ, ನೀವೇ ಕುಟುಂಬವೆಂಬ ಸಮಾಜ ವ್ಯವಸ್ಥೆಯ ಕೇಂದ್ರವೆಂದೂ, ಕುಟುಂಬದಲ್ಲಿ ಹೆಂಡತಿಯಾಗಿ ತಾಯಾಗಿ ಇಮ್ಮೊಗದ ಪಾತ್ರವನ್ನು ನಿರ್ವಹಿಸುತ್ತ ಮನೆಯನ್ನು ಬೆಳಗಬೇಕಾದವರು ನೀವೆಂದೂ ಏರ್ಪಟ್ಟಿರುವ ಸನಾತನವಾದ ಆದರ್ಶವನ್ನು ಮರೆಯದಿರಬೇಕು. ದಿನದ ಕಷ್ಟದ ಕಾಯಕವನ್ನು ಮುಗಿಸಿಕೊಂಡು ಮನೆಗೆ ಹಿಂತಿರುಗುವ ಪುರುಷನಿಗೆ ತನ್ನ ಸುಖದುಃಖಗಳಲ್ಲಿ ಚಿರಭಾಗಿನಿಯಾಗಿ ಸದಾ ಸಹಾನುಭೂತಿಯಿಂದಿರುವ ಸತಿಯ ಆದರದ ಸ್ವಾಗತಕ್ಕಿಂತಲೂ ಹೆಚ್ಚಿನ ಹರ್ಷಕೊಡಬಲ್ಲ ರಸಮಯ ದೃಶ್ಯ ಬೇರೆ ಇದೆಯೆ?

(೨೮ನೆಯ ಪುಟಕ್ಕೆ)

# ಕನ್ನಡ ನುಡಿ

**ಶುಕ್ರವಾರ, ನವೆಂಬರ್ ೨೦, ೧೯೪೨**

## ಶಾಸನಸಭೆಯಲ್ಲಿ ಕನ್ನಡದ ಬಳಕೆ

ಮೈಸೂರು ವಿಶ್ವವಿದ್ಯಾನಿಲಯದ ತ್ರೈಮಾಸ ಪತ್ರಿಕೆಯಾದ 'ಪ್ರಬುದ್ಧ ಕರ್ಣಾಟಕ'ದ ದೀಪಾವಳಿ ಸಂಚಿಕೆಯಲ್ಲಿ ಕಳೆದ ಜೂನ್ ತಿಂಗಳು ಬೆಂಗಳೂರಿನಲ್ಲಿ ನಡೆದ ಪ್ರಜಾಪ್ರತಿನಿಧಿ ಸಭೆಯ ಆಯವ್ಯಯಾಧಿವೇಶನದಲ್ಲಿ 'ಭಾಷೇತರ ವಿಷಯಗಳನ್ನು ಕಾಲೇಜುಗಳಲ್ಲಿ ಕನ್ನಡದಲ್ಲಿಯೆ ಬೋಧಿಸುವ ವಿಚಾರ'ವನ್ನು ಕುರಿತು ವಿಪುಲವಾಗಿ ನಡೆದ ಚರ್ಚೆಯ ಅಧಿಕೃತ ವರದಿಯನ್ನು ಪ್ರಕಟಮಾಡಿದ್ದಾರೆ. ಮೈಸೂರಿಗೆ ಮಾತ್ರವಲ್ಲದೆ, ಇಡಿಯ ಕನ್ನಡ ನಾಡಿಗೇ ಮುಖ್ಯವಾದ ಭಾಷಾಶಿಕ್ಷಣ ಪ್ರಶ್ನೆಗೆ ಸಂಬಂಧಿಸಿರುವುದರಿಂದ ಮಹಾಜನರು ಆ ವರದಿಯನ್ನು ಮನಸ್ಸಿಟ್ಟು ಓದಬೇಕೆಂದು ಪ್ರಾರ್ಥಿಸುತ್ತೇವೆ. ಸದಸ್ಯರ ಕನ್ನಡದ ಅಭಿಮಾನವೂ ಅದರ ಏಳಿಗೆಯಲ್ಲಿ ಅವರಿಗಿರುವ ಗಾಢವಾದ ಆಸಕ್ತಿ ಶ್ರದ್ಧೆಗಳೂ ವರದಿಯಿಂದ ಚೆನ್ನಾಗಿ ವ್ಯಕ್ತವಾಗುತ್ತವೆ. ಅಲ್ಲದೆ ಸಭೆಯ ನಡವಳಿಕೆಗಳ ವರದಿಗಾರಿಕೆಯ ಮುನ್ನಡೆಯನ್ನೂ ಅದು ತೋರಿಸುವುದಾಗಿದೆ. ಮೇಲುಮಟ್ಟದ ಚರ್ಚಾಸಂಪ್ರದಾಯ, ಅದಕ್ಕೆ ತಕ್ಕಂತೆ ನಮ್ಮ ತಾಯ್ನುಡಿಯ ಪರಿಣಾಮಕಾರಿಯಾದ ಉಪಯೋಗ ಇವುಗಳಿಂದ ಆ ವರದಿ ಒಳ್ಳೆಯ ಸಾಹಿತ್ಯವಾಗಿ ಪರಿಣಮಿಸಿದೆ ಮತ್ತು ಕನ್ನಡದ ಯೋಗಕ್ಷೇಮದ ಬಗ್ಗೆ ಪ್ರಜಾಪ್ರತಿನಿಧಿ ಸಭೆಯ ಮಾನ್ಯ ಸದಸ್ಯರಲ್ಲಿ ಇರುವ ಪ್ರಗತಿಪರವಾದ ಮನೋಭಾವವೂ ಆ ವರದಿಯಿಂದ ಚೆನ್ನಾಗಿ ಪ್ರತಿಬಿಂಬವಾಗುತ್ತದೆ.

ಈ ಸಲ ಮೈಸೂರಿನಲ್ಲಿ ನಡೆದ ಸಭೆಯ ದಸರಾ ಅಧಿವೇಶನದಲ್ಲಿಯೂ ಸದಸ್ಯರು ಕನ್ನಡಕ್ಕಾಗಿ ಇನ್ನಷ್ಟು ಗಮನವನ್ನು ಕೊಟ್ಟರು. ಅದು ಕನ್ನಡದ ಮುನ್ನಡೆಯ ದೃಷ್ಟಿಯಿಂದ ಬಹಳ ಮುಖ್ಯವಾದ ವಿಷಯ. ಕನ್ನಡ ಈಗ ಪ್ರಜಾಪ್ರತಿನಿಧಿಸಭೆಯ ಚರ್ಚೆ ಭಾಷಣಾದಿ ನಡವಳಿಕೆಗಳ ಭಾಷೆಯಾಗಿದೆ. ಹಿಂದೂಗಳೂ, ಮುಸ್ಲಿಮರೂ, ಕ್ರೈಸ್ತರೂ ಕನ್ನಡದಲ್ಲೇ ಮಾತನಾಡುತ್ತಾರೆ. ಆದರೆ ಸಭೆಯಲ್ಲಿ ಆಡಿದ ಕನ್ನಡ ಮಾತು ವರದಿಯಲ್ಲಿ ಮಾತ್ರ ಯಥಾವತ್ತಾಗಿ ಬರಲು ಇದುವರೆಗೆ ಅವಕಾಶವಿರಲಿಲ್ಲ. ಕನ್ನಡ ಶೀಘ್ರಲಿಪಿಯ ಉಪಯೋಗವೂ ಅಷ್ಟಾಗಿ ಇರದೆ, ಉತ್ತಮಪುರುಷದಲ್ಲಿ ಆಡಿದ ಕನ್ನಡ ಮಾತು ಇಂಗ್ಲಿಷಿಗೆ ತಿರುಗಿ, ಅಲ್ಲಿಂದ ಕನ್ನಡಕ್ಕೆ ಪ್ರಥಮಪುರುಷವಾಗಿ ಇಳಿದು ವರದಿಯಾಗುತ್ತಿತ್ತು. ಹೀಗಾಗಿ ಸಭೆಯಲ್ಲಿ ಸದಸ್ಯರು ವ್ಯಕ್ತಪಡಿಸಿದ ಅಂಶಗಳೆಲ್ಲ ಸರಿಯಾದ ಸರಣಿಯಲ್ಲಿ ಮತ್ತು ಅರ್ಥದಲ್ಲಿ ಪೂರ್ಣವಾಗಿ ವರದಿಯಾಗದೆ ಅಪಾರ್ಥಕ್ಕೆ ಅವಕಾಶವಾಗುತ್ತಿತ್ತು. ಇದನ್ನು ನೇರ್ಪಡಿಸಬೇಕೆಂದು ಸದಸ್ಯರ ಕಡೆಯಿಂದ ಸರ್ಕಾರಕ್ಕೆ ಅರಿಕೆ ಹೋಯಿತು. ಈ ಸಂದರ್ಭದಲ್ಲಿ ಶ್ರೀ.ಗಳಾದ ಗುರುನಾಥ ಕೃಷ್ಣ ನಾಡಿಗ ಅವರು, ಭೂಪಾಳಂ ಚಂದ್ರಶೇಖರಯ್ಯನವರು, ಎಫ್. ಸಿ. ದೇವರಾಜ ಅರಸಿನವರು, ಕೆ. ನಂಜುಂಡರಾಯರು ಪ್ರಮುಖಪಾತ್ರ ವಹಿಸಿ, ಈಗ ಸಭೆಯಲ್ಲಿ ವರದಿ ಮಾಡುತ್ತಿರುವ ಕನ್ನಡ ಶೀಘ್ರಲಿಪಿಕಾರ ಸಿಬ್ಬಂದಿಯ ಕಾರ್ಯವನ್ನು ಮುಕ್ತಕಂಠದಿಂದ ಹೊಗಳಿ, ಸಭೆಗೆ ಕನ್ನಡ ಶೀಘ್ರಲಿಪಿಕಾರರನ್ನು ಹೆಚ್ಚಿನ ಸಂಖ್ಯೆಯಲ್ಲಿ ಒದಗಿಸಿಕೊಳ್ಳಬೇಕೆಂದೂ, ಕನ್ನಡ ಶೀಘ್ರಲಿಪಿಕಾರರ ಸಂಬಳ ದರ್ಜೆಗಳನ್ನು ಇಂಗ್ಲಿಷ್ ಶೀಘ್ರಲಿಪಿಕಾರರ ಸಂಬಳ ದರ್ಜೆಗಳ ಮಟ್ಟಕ್ಕೆ ಏರಿಸಬೇಕೆಂದೂ ಸಲಹೆಕೊಟ್ಟರು.

ಸದಸ್ಯರ ಕಡೆಯಿಂದ ಈ ರೀತಿಯ ಸುಧಾರಣೆಗಾಗಿ ಸದಸ್ಯರು ಮಾಡಿದ ಅರಿಕೆಗಳಿಗೆ ಉತ್ತರವಾಗಿ ಮಾತನಾಡಿದ ದಿವಾನ್–ಅಧ್ಯಕ್ಷರ ಮಾತಿನಲ್ಲಿ ಸವಿಮಾರ್ದನಿ ಕೇಳಿಸಿದ್ದು ಆಶಾಜನಕವಾಗಿದೆ. "ಈ ವಿಚಾರದಲ್ಲಿ ಯಾವ ರೀತಿ ಏರ್ಪಾಟು ಮಾಡಬೇಕೆಂಬುದನ್ನು ಕುರಿತು ನಾವೂ ನಮ್ಮ ಮಿತ್ರರಾದ ಶ್ರೀ. ಡಿ. ಎಚ್. ಚಂದ್ರಶೇಖರಯ್ಯನವರೂ ಯೋಚನೆಮಾಡಿ ಒಂದು ಏರ್ಪಾಟಿಗೆ ಬಂದಿದ್ದೇವೆ. ಅವರು ಡೆಲ್ಲಿ ಮುಂತಾದ ಸ್ಥಳಗಳಿಗೆ ಹೋಗಿ ಅಲ್ಲಿಯ ಶಾಸನ ಸಭೆಗಳ ನಡವಳಿಕೆಗಳು ಯಾವ ರೀತಿಯಲ್ಲಿ ವರದಿಯಾಗುತ್ತವೆ ಎಂಬುದನ್ನು ತಿಳಿದುಕೊಂಡು ಬಂದಿರುತ್ತಾರೆ. . . . ಪ್ರಜಾಪ್ರತಿನಿಧಿ ಸಭೆಯ ಸದಸ್ಯರ ಭಾಷಣಗಳನ್ನು ಅಕ್ಷರಶಃ ವರದಿಮಾಡುತ್ತಿಲ್ಲವೆಂದೂ ಈಗ ಅನುಸರಿಸುತ್ತಿರುವ ರೀತಿ ಸರಿಯಾಗಿಲ್ಲವೆಂದೂ ಸದಸ್ಯರು ಮಾತನಾಡಿದಂತೆಯೆ ವರದಿ ಮಾಡಬೇಕೆಂದೂ ಕೆಲವರು ಹೇಳಿದರು. ಈಗ ಹಾಗೆಯೇ ಏರ್ಪಾಟು ಮಾಡಿದೆ. ಸದಸ್ಯರು ಇಂಗ್ಲಿಷಿನಲ್ಲಿ ಮಾತನಾಡಿದರೆ ಇಂಗ್ಲಿಷಿನಲ್ಲಿ, ಕನ್ನಡದಲ್ಲಿ ಮಾತನಾಡಿದರೆ ಕನ್ನಡದಲ್ಲಿ ವರದಿಮಾಡಲಾಗುವುದು. ಭಾಷಣಗಳು ತರ್ಜುಮೆಯಾಗಿ ಕೊನೆಗೆ ವ್ಯತ್ಯಾಸ ಹೊಂದಲು ಈಗ ಅವಕಾಶವಿಲ್ಲ . . . ಶ್ರೀ. ಡಿ. ಎಚ್. ಚಂದ್ರಶೇಖರಯ್ಯನವರು ಈ ಸಲದ ಸಭೆಯ ನಡವಳಿಕೆಗಳು ಜಾಗ್ರತೆಯಾಗಿ ಸದಸ್ಯರ ಕೈಸೇರುವಂತೆ ಒಂದು ನಿರ್ದಿಷ್ಟವಾದ ಕಾರ್ಯಕ್ರಮವನ್ನು ಗೊತ್ತುಮಾಡಿದ್ದಾರೆ. ಅದರಂತೆ ಕೆಲಸ ಮುಂದುವರಿಯುತ್ತಿದೆ. . . ಈಗ ಕನ್ನಡ ವರದಿಗಾರರ ಸಂಖ್ಯೆಯನ್ನು ಹೆಚ್ಚು ಮಾಡಲಾಗಿದೆ . . ." ಮುಂತಾಗಿ ದಿವಾನ್–ಅಧ್ಯಕ್ಷರು ಹೇಳಿ, ಕನ್ನಡ ವರದಿಗಾರರ ಸಂಬಳವನ್ನು ಹೆಚ್ಚಿಸುವ ಬಗ್ಗೆ ಸಹಾನುಭೂತಿಯನ್ನು ವ್ಯಕ್ತಪಡಿಸಿದರಲ್ಲದೆ, ಪ್ರಜಾಪ್ರತಿನಿಧಿ ಸಭೆಯಲ್ಲಿ ನಡವಳಿಕೆಗಳು ಕನ್ನಡದಲ್ಲೇ ನಡೆಯಬೇಕೆಂದು ಬಹುಕಾಲದಿಂದ ಬಂದಿರುವ ಸಂಪ್ರದಾಯವನ್ನು ನಡಸಿಕೊಂಡು ಬರುವುದು ಸೂಕ್ತವೆಂದು ಅಭಿಪ್ರಾಯಪಟ್ಟರು.

ದಿವಾನ್–ಅಧ್ಯಕ್ಷರ ಮಾತಿನಿಂದ, ಪ್ರಜಾಪ್ರತಿನಿಧಿ ಸಭೆಯಲ್ಲಿ ಕನ್ನಡದ ಸ್ಥಾನ ಭದ್ರವಾಗುವ ಶುಭಸೂಚನೆ ಕಂಡುಬಂದಿದೆ. ಈಗಾಗಲೇ ಹಲವು ಸದಸ್ಯರು ಕನ್ನಡವನ್ನೇ ಬಳಸುತ್ತಿರುವ ನ್ಯಾಯವಿಧಾಯಕ ಸಭೆಯಲ್ಲೂ ಕನ್ನಡ ದೃಢವಾಗಿ ಬೇರುಬಿಡಬೇಕಾಗಿದೆ.

ಪ್ರಜಾಪ್ರತಿನಿಧಿ ಸಭೆ, ನ್ಯಾಯವಿಧಾಯಕ ಸಭೆಗಳಲ್ಲಿ ಕನ್ನಡದ ಬಳಕೆ ಹೆಚ್ಚಾದಂತೆಲ್ಲ ಭಾಷೆಯ ಬೆಳವಣಿಗೆಗೆ ಸಹಾಯವಾಗುವುದು. ಭಾಷೆ ಪಳಗಿ ರಾಜಕಾರ್ಯಕ್ಕೆ ಒದಗುವುದು. ಈ ಸುಧಾರಣೆ ಆದಷ್ಟುಬೇಗ ಕೈಗೂಡಲು ನಡಸುವ ಪ್ರಯತ್ನಗಳಿಗೆಲ್ಲ ಸರ್ಕಾರದ ಸಹಾನುಭೂತಿ ಇರುವುದೆಂದು ನಾವು ದೃಢವಾಗಿ ನಂಬಿದ್ದೇವೆ. ಶಾಸನ ಸಭಾಧ್ಯಕ್ಷರಾದ ಶ್ರೀ. ಡಿ. ಎಚ್. ಚಂದ್ರಶೇಖರಯ್ಯನವರು ಈ ವಿಚಾರವಾಗಿ ಹಗಲಿರುಳೂ ಆಲೋಚನೆ ಮಾಡಿ, ಸರ್ಕಾರಕ್ಕೆ ತಕ್ಕ ಸಲಹೆಗಳನ್ನು ಕೊಡುತ್ತಿದ್ದಾರೆಂದು ಕೇಳುತ್ತೇವೆ. ಅವರ ಕನ್ನಡ ಅಭಿಮಾನ ಹೀಗೆ ಫಲಬಿಡುತ್ತಿರುವುದಕ್ಕಾಗಿ ನಾವು ಅವರಿಗೆ ಕೃತಜ್ಞರಾಗಿರಬೇಕಾಗಿದೆ. ಅವರ ಆಲೋಚನೆಗಳೆಲ್ಲ ಈಡೇರಿ ಕನ್ನಡ ಪ್ರಭುತ್ವದ ವಾಣಿಯಾಗಲಿ!

## ಶಿಕ್ಷಣದ ಆದರ್ಶಗಳು

ಮೈಸೂರಿನಲ್ಲಿ ೧೫-೧೧-೪೨ನೆಯ ಭಾನುವಾರ ವನಿತಾಸದನದ ೫ನೆಯ ವಾರ್ಷಿಕೋತ್ಸವದಲ್ಲಿ ಅಧ್ಯಕ್ಷತೆ ವಹಿಸಿ ರಾಜಕಾರ್ಯಪ್ರಸಕ್ತ ದಿವಾನ್ ಬಹದ್ದೂರ್ ಕೆ. ರಾಮಸ್ವಾಮಿಯವರು ಮಾಡಿದ ವಿಚಾರಪೂರ್ಣವಾದ ಭಾಷಣದ ಸಾರಾಂಶವನ್ನು ಬೇರೆಕಡೆ ಕೊಟ್ಟಿದೆ. ಅವರ ಅಭಿಪ್ರಾಯಗಳ ಕಡೆಗೆ ನಮ್ಮ ವಾಚಕರು, ಮುಖ್ಯವಾಗಿ ನಮ್ಮ ಸೋದರಿಯರು ಗಮನಕೊಡುವರೆಂದು ನಂಬಿದ್ದೇವೆ. ನಮ್ಮ ಗಂಡುಮಕ್ಕಳಿಗೆ ಕೊಡುತ್ತಿರುವ ಶಿಕ್ಷಣದಂತೆಯೆ ಹೆಣ್ಣುಮಕ್ಕಳಿಗೆ ಕೊಡುತ್ತಿರುವ ಶಿಕ್ಷಣವೂ ದೋಷದಿಂದ ಕೂಡಿದುದೆಂದು ಶಿಕ್ಷಣತಜ್ಞರು ಅಭಿಪ್ರಾಯಪಡುತ್ತಾರೆ. ಮಹಿಳೆಯರು "ಕುಟುಂಬವೆಂಬ ಸಮಾಜ ವ್ಯವಸ್ಥೆಯ ಕೇಂದ್ರವೆಂದೂ ಕುಟುಂಬದಲ್ಲಿ ಹೆಂಡತಿಯಾಗಿ ತಾಯಾಗಿ ಇಮ್ಮೊಗದ ಪಾತ್ರವನ್ನು ನಿರ್ವಹಿಸುತ್ತ ಮನೆಯನ್ನು ಬೆಳಗಬೇಕಾದವರೆಂದೂ ಏರ್ಪಟ್ಟಿರುವ ಸನಾತನವಾದ ಆದರ್ಶಕ್ಕೆ" ತಕ್ಕಂತೆ ನಮ್ಮ ದೇಶದಲ್ಲಿ ಮಹಿಳೆಯರಿಗೆ ಕೊಡುವ ವಿದ್ಯೆಯನ್ನು ಸುಧಾರಿಸಬೇಕೆಂಬುದು ಶ್ರೀ.

ರಾಮುಸ್ವಾಮಿಯವರ ಅಭಿಪ್ರಾಯ. ನಮ್ಮ ಸೋದರಿಯರಲ್ಲಿ ವಿಜ್ಞಾನದ ತಿಳಿವಳಿಕೆ ಹರಡಬೇಕು; ಅವರ ಅಜ್ಞಾನವೂ ಅನಕ್ಷರಸ್ಥಿತಿಯೂ ತೊಲಗಬೇಕು; ಹೆರಿಗೆ ಮತ್ತು ಶಿಶುಪೋಷಣೆಗೆ ಸಂಬಂಧಿಸಿದ ಪೂರ್ಣವಾದ ಅನುಭವ ಹರಡಿ, ಹುಟ್ಟಿದ ಮಕ್ಕಳು ಆರೋಗ್ಯವಾಗಿ ದೇಶಕ್ಕೆ ಭೂಷಣವಾಗಿರಬೇಕು ಎಂಬುದು ಶ್ರೀ. ರಾಮಸ್ವಾಮಿಯವರ ಆಶೆ. ಈ ತೆರನ ಅಭಿಪ್ರಾಯವನ್ನೂ ಆಶೆಯನ್ನೂ ಜಗತ್ತಿನಲ್ಲಿ ಎಲ್ಲೆಲ್ಲೂ ವಿದ್ವಾಂಸರು ವ್ಯಕ್ತಪಡಿಸುತ್ತಿದ್ದಾರೆ. ಉದಾಹರಣೆಗಾಗಿ ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದ ಶಿಕ್ಷಣ ಇಲಾಖೆಯ ಮುಖ್ಯಾಧಿಕಾರಿಗಳಾದ ಶ್ರೀ. ಎಂ. ಎಲ್. ಜಾಕ್ಸ್ ಅವರು ಈಚೆಗೆ ಕೊಟ್ಟಿರುವ ಅಭಿಪ್ರಾಯವನ್ನು ಇಲ್ಲಿ ಎತ್ತಿಕೊಡಬಹುದು. "ಯುದ್ಧಾನಂತರ ಶಿಕ್ಷಣ ಕ್ಷೇತ್ರದಲ್ಲಿ ಮೊದಲು ವ್ಯಾಪಿಸಿ ಸುಧಾರಣೆಯನ್ನು ಪ್ರಚೋದಿಸಬೇಕಾದ ತತ್ತ್ವವೆಂದರೆ ಪರಿಪೂರ್ಣತೆ (Wholeness). ಪರಿಪೂರ್ಣವಾದ ಯುದ್ಧೋದ್ಯಮದಂತೆ ಪರಿಪೂರ್ಣವಾದ ಶಿಕ್ಷಣದಾನ ವ್ಯವಸ್ಥೆ ಏರ್ಪಡಬೇಕು. ಹಿಂದೆ ನಾವು ನಮ್ಮ ಮಕ್ಕಳಲ್ಲಿ ಸರ್ವಾಂಗ ಪರಿಪೂರ್ಣತೆಯುಂಟಾಗುವಂತೆ ಶಿಕ್ಷಣ ಕೊಡುವ ವ್ಯವಸ್ಥೆಯನ್ನು ಏರ್ಪಡಿಸಲಿಲ್ಲ. ಒಂದೊಂದು ಅಂಗದ ಬೆಳವಣಿಗೆಗೂ ಪ್ರತ್ಯೇಕ ಪ್ರತ್ಯೇಕವಾದ ಗಮನ ಕೊಟ್ಟೆವು. ಇದರ ಫಲವಾಗಿ ಮಕ್ಕಳಲ್ಲಿ ದೇಹ, ಬುದ್ಧಿ, ಶೀಲ ಎಂದು ಮೂರು ಭಾಗಗಳನ್ನು ವಿಂಗಡಿಸಿ, ದೇಹಕ್ಕೆ ಆಟದ ಬಯಲಲ್ಲಿ ಕಸರತ್ತು ಮಾಡಿಸಿ, ಬುದ್ಧಿಗೆ ಪಾಠಶಾಲೆಯಲ್ಲಿ ತರಪೇತುಕೊಟ್ಟು, ಶಾಲಾ ಜೀವನದ ಪರಸ್ಪರ ವಿನಿಮಯಗಳು ಅಭ್ಯಾಸವಾಗಿ ಶೀಲವನ್ನು ತಿದ್ದುವ ಕೆಲಸವಿಷ್ಟೆ ಆಗುತ್ತಿದೆ. ಇದರ ಪರಿಣಾಮವೆಂದರೆ ಮಕ್ಕಳಲ್ಲಿ ಅಳತೆ ತೂಕ ಕೆಟ್ಟ ವ್ಯಕ್ತಿತ್ವ ಮಾತ್ರ ರೂಪುಗೊಳ್ಳುತ್ತಿರುವುದು. ಆದ್ದರಿಂದ ಪಾಠವಿಷಯದ (Subject) ಕಲ್ಪನೆಯನ್ನು ಮಾರ್ಪಡಿಸಿ, ಅದರ ಸ್ಥಳದಲ್ಲಿ ಚಟುವಟಿಕೆಯನ್ನು (activity) ಸೇರಿಸಬೇಕು.

"ದೇಹದ, ಬುದ್ಧಿಯ, ರಸ ಭಾವಗಳ, ನೀತಿಯ, ಆತ್ಮದ ಸಾರಸತ್ವಗಳನ್ನು ಕಂಡುಕೊಂಡು ಅವನ್ನು ಬೆಳಸಿಕೊಳ್ಳುವ ಯೋಗ್ಯತೆ ಮಕ್ಕಳಲ್ಲಿ ಮೂಡಬೇಕು. ಆಹಾರ ವಿಜ್ಞಾನ, ಆರೋಗ್ಯ ವಿಜ್ಞಾನ, ಹಾಲು ಮತ್ತು ಊಟ, ವಿಶ್ರಾಂತಿ ಮತ್ತು ನಿದ್ರೆ, ಸ್ವಚ್ಛತೆ ಮತ್ತು ಉಡುಪು, ಕರ್ತೃತ್ವ ಶಕ್ತಿಯ ವಿಕಾಸದಲ್ಲಿ ಆಸಕ್ತಿ, ಭಾವರಸಾದಿ ಅಮೂಲ್ಯ ಕಲ್ಪನೆಗಳನ್ನು ಬೆಳಸಿಕೊಳ್ಳುವ ಶ್ರದ್ಧೆ, ಸೌಂದರ್ಯದ ಮತ್ತು ಸಮಾಜ ಸೇವೆಯ ಒಲವು, ವೃತ್ತಿ ಶಿಕ್ಷಣದ ಮಾರ್ಗದರ್ಶನ–ಇವು ಎಲ್ಲಾ ಗಂಡು ಹೆಣ್ಣು ಮಕ್ಕಳ ಶಿಕ್ಷಣದಲ್ಲಿ ಸಮಾನವಾಗಿ ಇರಬೇಕು. ಸಂಸ್ಕೃತಿಗೂ ವೃತ್ತಿಗೂ ಒಟ್ಟಿಗೇ ನೆರವಾಗಬಲ್ಲದ್ದಾಗಿರಬೇಕು, ನೆರವಾಗಲೇಬೇಕು ನಾವು ಕೊಡುವ ಶಿಕ್ಷಣ. ಕೊನೆಯದಾಗಿ, ಶಾಲೆಗಳು ಸಮಾಜಕ್ಕೂ ಸಮಾಜವು ಶಾಲೆಗಳಿಗೂ ಸೇವೆ ಸಲ್ಲಿಸುವ ಪ್ರವೃತ್ತಿ ನಾಡಿನಲ್ಲಿ ಬೆಳೆಯಬೇಕು."

ಗಂಡು ಮಕ್ಕಳ ಮತ್ತು ಹೆಣ್ಣುಮಕ್ಕಳ ವಿದ್ಯಾಭ್ಯಾಸದಲ್ಲಿ ಆಸಕ್ತರಾದ ಶಿಕ್ಷಣತಜ್ಞರು ಈ ಅಭಿಪ್ರಾಯವನ್ನು ಮನನ ಮಾಡುತ್ತಾರೆಂದು ನಂಬಿದ್ದೇವೆ.

### ಕಂಬನಿ

ಪರಿಷತ್ತಿನ ಸದಸ್ಯರೂ, ಉಜ್ವಲ ರಾಷ್ಟ್ರಭಕ್ತರೂ, ಶಿಕ್ಷಣ ತಜ್ಞರೂ, ಕನ್ನಡಕ್ಕಾಗಿ ಅರ್ಧ ಶತಮಾನಕ್ಕಿಂತ ಹೆಚ್ಚಿನ ಕಾಲ ದುಡಿದವರೂ ಆದ ಶ್ರೀ. ಜೋಶಿ ವಿನಾಯಕರಾಯರು ತಾರೀಖು ೧೦-೧೧-೪೭ನೆಯ ಮಂಗಳವಾರ ಧಾರವಾಡದಲ್ಲಿ ತಮ್ಮ ೮೬ನೆಯ ವಯಸ್ಸಿನಲ್ಲಿ ಕಾಲವಾದರೆಂದು ತಿಳಿಸಲು ನಮಗೆ ವ್ಯಥೆಯಾಗುತ್ತದೆ. ದಿವಂಗತ ವಿನಾಯಕರಾಯರ ಬಹುಮುಖವಾದ, ನಿಃಸ್ವಾರ್ಥವಾದ ನಾಡ ಸೇವೆಯನ್ನು ಕನ್ನಡಿಗರು ಮರೆಯುವಂತಿಲ್ಲ. ಕನ್ನಡ ನಾಡೂ ನುಡಿಯೂ ಪುನರುಜ್ಜೀವಗೊಳ್ಳಲು ಕೆಚ್ಚಿನಿಂದ ದುಡಿದ ಮೊದ ಮೊದಲ ಹಿರಿಯ ಮಹನೀಯರಲ್ಲಿ ಶ್ರೀ. ವಿನಾಯಕರಾಯರೂ ಒಬ್ಬರು. ಅವರ ಮರಣದಿಂದ ಕನ್ನಡ ನಾಡಿಗೆ ತುಂಬಾ ನಷ್ಟವಾಗಿದೆ. ಅವರ ಆತ್ಮಕ್ಕೆ ಸದ್ಗತಿ ದೊರೆಯಲಿ!

## ಪರಿಷತ್ತಿನ ಸುದ್ದಿ

### ಮಹಿಳಾ ಶಾಖೆ

**ಸಂಗೀತ, ಕಾವ್ಯವಾಚನ**

೨೧-೧೧-೧೯೪೭ನೆಯ ಶನಿವಾರ ಸಂಜೆ ೫-೩೦ ಗಂಟೆಗೆ ಮಹಿಳಾಶಾಖೆಯ ಆಶ್ರಯದಲ್ಲಿ ಸಂಗೀತ ಮತ್ತು ಕಾವ್ಯವಾಚನ ಕಾರ್ಯಕ್ರಮ ನಡೆಯುವುದು. ಶ್ರೀಮತಿ ಡಿ. ಚಂಪಾಬಾಯಿ, ಎಂ.ಎ. ಅವರು ಅಧ್ಯಕ್ಷತೆ ವಹಿಸುವರು.

ಶ್ರೀಮತಿ ಟಿ. ಎನ್. ಕಾಮಾಕ್ಷಿಯವರಿಂದ **ಸಂಗೀತವೂ**, ಶ್ರೀಮತಿ ಎ. ಶೇಷಮ್ಮನವರಿಂದ **ಮುಗ್ಧೆ** ಎಂಬ ಏಕಾಂಕ ನಾಟಕದ ವಾಚನವೂ ನಡೆಯುವುವು.

ಸೋದರಿಯರೆಲ್ಲ ಬರಬೇಕಾಗಿ ಬಿನ್ನಹ.

### ಅಜಂತದ ಚಿತ್ರಕಲೆ

೧೭-೧೧-೧೯೪೭ನೆಯ ಗುರುವಾರ ಸಂಜೆ ರಾಜಸೇವಾಸಕ್ತ ಶ್ರೀ. ಬಿ. ಎಂ. ಶ್ರೀಕಂಠಯ್ಯನವರು ಮಹಿಳಾ ಶಾಖೆಯ ಆಶ್ರಯದಲ್ಲಿ "ಅಜಂತದ ಚಿತ್ರಕಲೆ"ಯನ್ನು ಕುರಿತು ಸುಮಾರು ೪೦ ದೀಪಚಿತ್ರಗಳನ್ನು ತೋರಿಸಿ, ಈ ರೀತಿ ಭಾಷಣ ಮಾಡಿದರು.

ಔರಂಗಬಾದ್ ಸಮೀಪದಲ್ಲಿರುವ ಅಜಂತದ ಸಾಲು ಗವಿಗಳು ಭಾರತೀಯರ ಸಂಸ್ಕೃತಿ ಸೌಂದರ್ಯೋಪಾಸನೆಗಳಿಗೆ ಸಾಕ್ಷಿಯಾಗಿ ಇವೆ. ಇವುಗಳನ್ನು ಕೊರೆಯಿಸಿ ಬಹು ಅಂದವಾದ ಶಿಲ್ಪ, ಚಿತ್ರಗಳಿಂದ ಅಲಂಕರಿಸಿದವರು ಬೌದ್ಧರು. ಬೌದ್ಧ ಭಿಕ್ಷುಗಳು ಈ ಗವಿಗಳಲ್ಲಿ ವಾಸವಾಗಿದ್ದುಕೊಂಡು ವಿದ್ಯಾಭ್ಯಾಸ ತಪಸ್ಸು ಮಾಡುತ್ತಿದ್ದರು. ಇವುಗಳಲ್ಲಿ ನಾಲ್ಕು ಗವಿಗಳು ಚೈತ್ಯವೆಂಬ ಬೌದ್ಧರ ಗುಡಿಗಳು. ಉಳಿದ ಇಪ್ಪತ್ತೈದು ಗವಿಗಳು ಗುರುಶಿಷ್ಯರ ವಾಸ ವ್ಯಾಸಂಗಗಳಿಗೆ ಅನುಕೂಲವಾದ ವಿಹಾರವೆಂಬ ಮಂದಿರಗಳು. ಬೌದ್ಧಮತ ಖಿಲವಾದನಂತರ ಪ್ರಚಾರಕ್ಕೆ ಬಂದ ಇತರ ಮತಗಳ ಅನುಯಾಯಿಗಳ ಅನಾದರಣೆಯಿಂದ ಈ ಸುಂದರವಾದ ಗವಿಗಳು ಪಾಳುಬಿದ್ದು ಇಲ್ಲಿನ ಹಲವು ಮೂರ್ತಿಗಳು ಒಡೆದು ಹೋಗಿ ಅನೇಕ ಚಿತ್ರಗಳು ಕೆಟ್ಟು ಹೋಗಿರುವುವು. ಗವಿಗಳಲ್ಲಿ ಬಣ್ಣಗೆಡದೆ ಉಳಿದಿರುವ ಸುಲಕ್ಷಣವಾದ ಚಿತ್ರಗಳ ರೂಪುರೇಖೆ, ರಸಭಾವಗಳು ಪ್ರಪಂಚವನ್ನೇ ಬೆರಗುಗೊಳಿಸುವುವು. ಬುದ್ಧದೇವನ ಚರಿತ್ರೆ ಮತ್ತು ಜಾತಕದ ಕಥೆಗಳ ಸನ್ನಿವೇಶಗಳು ಈ ಚಿತ್ರಗಳ ಮುಖ್ಯ ವಿಷಯ. ಆಗಿನ ಜನಜೀವನವನ್ನೂ, ಪ್ರಕೃತಿಯ ನಾನಾ ಮುಖ ಸೌಂದರ್ಯವನ್ನೂ ಬಿಂಬಿಸುವ ಅನೇಕ ಚಿತ್ರಗಳೂ ಇವೆ. ಪದ್ಮಪಾಣಿ ಬೋಧಿಸತ್ವನ ಮದುವೆಯ ಮೆರವಣಿಗೆ, ಕನ್ನಡಿಯನ್ನು ನೋಡಿಕೊಂಡು ಅಲಂಕರಿಸಿಕೊಳ್ಳುತ್ತಿರುವ ಸ್ತ್ರೀ, ಅರಮನೆಯ ಬಾಗಿಲಲ್ಲಿ ಭಿಕ್ಷು ಬುದ್ಧದೇವ ಯಶೋಧರಾ ರಾಹುಲರ ಭೇಟಿ – ಅಜಂತದ ಲಾವಣ್ಯಮಯವಾದ ಈ ಚಿತ್ರಗಳು ಜಗತ್ತಿನಲ್ಲೆಲ್ಲಾ ಸುಪ್ರಸಿದ್ಧವಾಗಿವೆ.

(ವರದಿ: ಶ್ರೀಮತಿ ಬಿ. ಎಲ್. ಸುಶೀಲಮ್ಮನವರು)

## ಆಕಾಶವಾಣಿ, ಮೈಸೂರು

### ಸಾಹಿತ್ಯ ವ್ಯಾಸಂಗ ಗೋಷ್ಠಿ

ಪ್ರಾಚೀನ ಕನ್ನಡ ಸಾಹಿತ್ಯವನ್ನು ಅಭ್ಯಾಸ ಮಾಡುವವರ ಅನುಕೂಲಕ್ಕಾಗಿ 'ಆಕಾಶ ವಾಣಿ'ಯ ಮೂಲಕ ಪ್ರತಿ ಬುಧವಾರ ರಾತ್ರಿ ೮ ಗಂಟೆಗೆ ಪ್ರಾಚೀನ ಕನ್ನಡ ಕಾವ್ಯವೊಂದನ್ನು ಕುರಿತು ೧೦ ನಿಮಿಷದಿಂದ ೨೦ ನಿಮಿಷ ಕಾಲ ಪಾಠ ಹೇಳಲಾಗುವುದು.

ಈ ವ್ಯಾಸಂಗ ಗೋಷ್ಠಿಯ ಮೊದಲ ಪಾಠ ೧೮-೧೧-೧೯೪೭ನೆಯ ಬುಧವಾರದಿಂದ ಆರಂಭವಾಗಿರುವುದು. ವ್ಯಾಸಂಗಕ್ಕಾಗಿ ಸದ್ಯಕ್ಕೆ ಆರಿಸಿರುವ ಗ್ರಂಥ– ಜನ್ನಕವಿಯ ಯಶೋಧರ ಚರಿತೆ. ಅಧ್ಯಾಪಕರು: ಶ್ರೀ. ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ. ಅವರು.

## ವನಿತಾ ಸದನದ ಐದನೆಯ ವಾರ್ಷಿಕೋತ್ಸವ

೨೫ನೆಯ ಪುಟದಿಂದ

ಹೆಣ್ಣನ್ನು ತಾಯಿ ಎಂದು ಬಗೆಯುವಾಗ, ನಾಳಿನ ಪ್ರಜೆಗಳಾದ ಮಕ್ಕಳ ಶೀಲವನ್ನು ತಿದ್ದುವ ಆಕೆಯ ಪ್ರಭಾವ ಅಪಾರವಾದುದು ಎಂಬ ಭಾವನೆ ನಮಗೆ ಸಹಜವಾಗಿಯೆ ಹೊಳೆಯುವುದಲ್ಲವೆ? ವಿದ್ಯಾರ್ಜನೆ ಮಾಡಿದ ಹೆಂಗಸರಿಂದ ಮಕ್ಕಳ ಪೋಷಣೆ ಆಗುವಷ್ಟು ಯಶಸ್ವಿಯಾಗಿ ವಿದ್ಯಾವತಿಯಲ್ಲದ ಹೆಂಗಸಿನಿಂದ ಆಗುವುದಿಲ್ಲ. ಇಟಲಿ, ಜರ್ಮನಿ ಮುಂತಾದ ಏಕನಾಯಕ ಪ್ರಭುತ್ವವಿರುವ ರಾಷ್ಟ್ರಗಳಲ್ಲಿ ತಾಯಂದಿರು ತಮ್ಮ ಮಕ್ಕಳನ್ನು ಬೆಳಸಲು ಆಹಾರವಾಗಿ ಯುದ್ಧಗಳ 'ಮಹತ್ವ'ವನ್ನೂ ಸರ್ಕಾರದ 'ದೇವತ್ವ'ವನ್ನೂ ಬೋಧಿಸುವ ಉಪಾಯ ಹೂಡಿರುವರೆಂಬುದನ್ನು ಗಮನಿಸಿದ ಮೇಲಂತೂ ನಮ್ಮ ಮಹಿಳೆಯರಿಗೆ ಸರಿಯಾದ ವಿದ್ಯೆ ಎಷ್ಟು ಮುಖ್ಯವೆಂಬುದು ತಾನಾಗಿ ತಿಳಿಯುತ್ತದೆ. ಆದ್ದರಿಂದ ನೀವು ಪ್ರತಿಯೊಬ್ಬರೂ ನಿಮ್ಮ ಸೋದರಿಯರಲ್ಲಿರುವ ಅಜ್ಞಾನವನ್ನೂ ಅನಕ್ಷರಸ್ಥಿತಿಯನ್ನೂ ನಿವಾರಿಸಲು ಶಕ್ತಿ ಮೀರಿ ದುಡಿಯಬೇಕೆಂದು ಪ್ರಾರ್ಥಿಸುತ್ತೇನೆ. ನಮ್ಮ ನೆರೆನಾಡಾದ ತಿರುವಾಂಕೂರು ಸಂಸ್ಥಾನದ ವಿದ್ಯಾವತಿಯರಾದ ಮಹಿಳೆಯರು ನಿಮ್ಮಲ್ಲಿ ಈ ಕಾರ್ಯಕ್ಕಾಗಿ ಸ್ಫೂರ್ತಿ ತುಂಬಲಿ! ಮಕ್ಕಳ ಪೋಷಣೆಯನ್ನು ಸರಿಯಾಗಿ ನಿರ್ವಹಿಸಲು ನಿಮಗೆ ಸಾಧನ ಸಿದ್ಧತೆಯನ್ನು ಕೊಡುವಂತೆಯೆ ಲೋಕಾನುಭವವನ್ನು ಪಡೆದು ಪ್ರಪಂಚ ವ್ಯಾಪಾರವನ್ನು ತಿಳಿಯಲು ಕೂಡ ಜ್ಞಾನಾರ್ಜನೆ ಸಹಾಯವಾಗುತ್ತದೆ. ಇಲ್ಲಿ ನಾನು ಒಂದು ಎಚ್ಚರಿಕೆಯ ಮಾತನ್ನು ಆಡಲೆ? ನಮ್ಮ ಹೆಣ್ಣು ಮಕ್ಕಳಿಗೆ ಕೊಡುತ್ತಿರುವ ಪ್ರೌಢ ಶಿಕ್ಷಣದ ಫಲಿತಾಂಶವಾಗಿ – ಗಂಡು ಮಕ್ಕಳ ಶಿಕ್ಷಣದ ಫಲಿತಾಂಶದಂತೆಯೆ – ಅವರು ಗೊತ್ತುಗುರಿಯಿಲ್ಲದ ಪಾಡಿಗೆ ಈಡಾಗಿರುವ ಚಿತ್ರವನ್ನು ನಾವು ಸುತ್ತಮುತ್ತ ನೋಡುತ್ತಿದ್ದೇವೆ. ಆದ್ದರಿಂದ, ನಮ್ಮ ಹೆಣ್ಣು ಮಕ್ಕಳಲ್ಲಿ ಬಹು ಮಂದಿಗೆ ಸೆಕೆಂಡರಿ ಮಟ್ಟದ ಶಿಕ್ಷಣವನ್ನು ಕೊಟ್ಟು, ಅವರ ಮುಂದಿನ ಬಾಳಿಗೆ ನೆರವಾಗುವಂತೆ ವಿಶಾಲ ಸಂಸ್ಕೃತಿಯ ಸಾರವತ್ತಾದ ಗುಣಗಳನ್ನು ಅವರಿಗೆ ತಿಳಿಸಿ, ಅಲ್ಲಿಗೇ ಅವರ ವಿದ್ಯಾಭ್ಯಾಸವನ್ನು ಮುಗಿಸುವುದು ಮೇಲಲ್ಲವೆ ಎಂಬುದನ್ನು ತಾವು ಪರ್ಯಾಲೋಚಿಸಬೇಕಾಗಿದೆ. ಮುಂದೆ ಇನ್ನೂ ಹೆಚ್ಚಿಗೆ ಓದಲು ಉಪಪತ್ತಿ ಇದ್ದವರು, ಇಲ್ಲವೆ ಉಪಾಧ್ಯಾಯ, ವೈದ್ಯ ಮುಂತಾದ ಯಾವುದಾದರೂ ನಿರ್ದಿಷ್ಟವಾದ ವೃತ್ತಿಯನ್ನವಲಂಬಿಸಲು ಇಷ್ಟವಿರುವವರು ಪ್ರೌಢ ಶಿಕ್ಷಣಕ್ಕೆ ಹೋಗಬಹುದು. ಇನ್ನು ಕೆಲವರು ಸಂಗೀತ, ಚಿತ್ರ ಮುಂತಾದ ಲಲಿತಕಲೆಗಳನ್ನು ಅಭ್ಯಾಸ ಮಾಡಬಹುದು. ಎಲ್ಲರಿಗೂ ಒಂದೇ ವಿದ್ಯೆಯೆಂದು ಗಂಡುಮಕ್ಕಳಿಗೆ ಕೊಡುವ ಬಹುಮುಖವಾದ ಶಿಕ್ಷಣವನ್ನೇ ಹೆಣ್ಣು ಮಕ್ಕಳಿಗೂ ಕೊಟ್ಟಲ್ಲಿ, ಗೃಹ ಜೀವನಕ್ಕೆ ಒಗ್ಗುವ ಶಿಕ್ಷಣ ಕೊಟ್ಟಂತೆ ಆಗದೆ ಘರ್ಷಣೆಯೊದಗಬಹುದು. ಆದ್ದರಿಂದ ಹೆಣ್ಣು ಮಕ್ಕಳ ವಿದ್ಯಾಭ್ಯಾಸದಲ್ಲಿ ಎರಡೂ ಬಗೆಯ ಶಿಕ್ಷಣವನ್ನು ಸಮರಸವಾಗಿ ಒಳಗೊಂಡಂತಿರುವ ಶಿಕ್ಷಣ ವ್ಯವಸ್ಥೆಯನ್ನು ಏರ್ಪಡಿಸುವ ಅಗತ್ಯ ದಿನ ದಿನಕ್ಕೂ ಹೆಚ್ಚುತ್ತಿದೆ.

ಬಳಿಕ ಭಾಷಣಕಾರರು ನಮ್ಮ ಗ್ರಾಮ ಹಾಗೂ ನಗರ ವಾಸಿಗಳಾದ ಮಹಿಳೆಯಲ್ಲಿ ವಿಜ್ಞಾನದ ತಿಳಿವಳಿಕೆ ಹರಡಬೇಕೆಂದೂ, ಹೆರಿಗೆಯ ಮತ್ತು ಶಿಶು ಪೋಷಣೆಯ ಪ್ರಶ್ನೆಗೆ ಸಂಬಂಧಿಸಿದ ಜ್ಞಾನವನ್ನೆಲ್ಲ ಆಮೂಲಾಗ್ರವಾಗಿ ಅವರು ತಿಳಿದು ಅನುಭವ ಪಡೆಯಬೇಕೆಂದೂ ಹೇಳಿ, ವನಿತಾ ಸದನದ ಕಾರ್ಯಕಲಾಪಗಳನ್ನು ಶ್ಲಾಘಿಸಿದರು. ವನಿತಾ ಸದನದ ಅಧಿಕಾರಿಗಳು ಗೃಹಕೈಗಾರಿಕೆಗಳಿಗೂ, ಹೊಲಿಗೆ ತರಗತಿಗಳಿಗೂ ಕೊಡುತ್ತಿರುವ ಗಮನ ಯೋಗ್ಯವಾಗಿದೆಯೆಂದು ಹೊಗಳಿ, ಸಂಸ್ಥೆ ಜನಾನುರಾಗಕ್ಕೆ ಪಾತ್ರವಾಗುತ್ತಿರುವುದಕ್ಕಾಗಿ ಹರ್ಷಿಸಿ, ಹೀಗೆ ಹೇಳಿದರು:

ಕನ್ನಡ ಸಾಹಿತ್ಯ ಪರಿಷತ್ತಿನ ಪರೀಕ್ಷೆಗಳಿಗಾಗಿ ಕನ್ನಡ ವ್ಯಾಸಂಗಕ್ಕೂ ಗಮಕ ಕಲೆಗೂ ಇಲ್ಲಿ ತಕ್ಕ ಪ್ರೋತ್ಸಾಹವಿರುವುದನ್ನು ಕಂಡು ಆನಂದವಾಗಿದೆ. ನಮ್ಮ ಹೆಂಗಸರು ಕನ್ನಡ ಕಾವ್ಯಗಳ ಸ್ವಾರಸ್ಯವಾದ ಭಾಗಗಳನ್ನು, ಬಿಡುವಾದಾಗ ನಿತ್ಯವೂ ಸ್ವಲ್ಪ ಹೊತ್ತು ಓದಿಕೊಂಡೊ, ಹಾಡಿಕೊಂಡೊ ಸತ್ಕಾಲಕ್ಷೇಪ ಮಾಡುವುದರಿಂದಾಗುವ ಸಂತೋಷವನ್ನೂ ಪ್ರಯೋಜನವನ್ನೂ ಇಲ್ಲಿ ಒತ್ತಿ ಹೇಳಬೇಕಾಗಿಲ್ಲವಷ್ಟೆ. ಆದರಲ್ಲಿಯೂ ನಮ್ಮ ಧರ್ಮ, ಸಾಹಿತ್ಯ, ಇತಿಹಾಸಗಳ ಸಾರವನ್ನು ಒಳಗೊಂಡಿರುವ ತಾಯಿ ನುಡಿಯ ಪ್ರೇಮವನ್ನು ಮಕ್ಕಳಲ್ಲಿ ಮೂಡಿಸುವ ಕಾರ್ಯ ತಾಯಂದಿರಿಂದಲೇ ನಡೆಯಬೇಕೆಂಬುದನ್ನು ನೀವು ನೆನಪಿನಲ್ಲಿಟ್ಟಿರುತ್ತೀರೆಂದು ನಂಬಿದ್ದೇನೆ. ವನಿತಾ ಸದನವನ್ನು ಇಷ್ಟು ಯಶಸ್ವಿಯಾಗಿ ನಡಸಿಕೊಂಡು ಬರುತ್ತಿರುವುದಕ್ಕಾಗಿ ಸದನದ ಅಧಿಕಾರಿ ವರ್ಗದವರನ್ನು ನಾನು ಅಭಿನಂದಿಸುತ್ತೇನೆ."

ಕೊನೆಯಲ್ಲಿ ಇಂಥ ಸಂಸ್ಥೆಗಳು ನಾಡಿನಲ್ಲಿ ಪ್ರತಿಯೊಂದು ಗ್ರಾಮದಲ್ಲಿಯೂ ಬೇಗ ಹುಟ್ಟುವಂತಾಗಿ ಮಹಿಳೆಯರ ಎಲ್ಲ ಬಗೆಯ ಶ್ರೇಯಸ್ಸು ಹೆಚ್ಚುವ ಕೆಲಸ ಅವುಗಳಿಂದ ನಿರಂತರವಾಗಿ ನಡೆಯಲೆಂದು ಹಾರೈಸಿದರು.

ಕಿರಿಯ ಕನ್ನಡ ಕಿಡಿಗಳು —೧

## "ಅಭಿನಯ ಕುಶಲ - "ಕೆ. ಆರ್."

(ಬರೆದವರು: ಶ್ರೀ. ಸು. ರಂ. ಎಕ್ಕುಂಡಿಯವರು, ಸಾಂಗಲಿ)

ನಡು ಬಗೆಯ ನಿಲವು. ತಿದ್ದಿ ಮಾಡಿದಂತಿದ್ದ ಮುಖ. ವಿಚಿತ್ರ ಹೊಳಪಿನ ಕಣ್ಣುಗಳು. ಚೆಲುವಾಗಿ ನಡುವೆ ಬಾಚಿದ ಕ್ರಾಪು. ಶಾಂತಿ ಸೌಮ್ಯತೆಗಳ ಎರಕದಂತಿದ್ದ ಆ ನಗೆ. ಇವು ಶ್ರೀ. ಕೆ. ಆರ್. ದೇಶಪಾಂಡೆ ಅವರ ವೈಶಿಷ್ಟ್ಯಗಳು. ಯಾರು ನೋಡಿದರೂ ಅವರೊಬ್ಬ ಪ್ರತಿಭಾವಂತ ನಟರೆಂದು ಸಹಜವಾಗಿ ಗುರುತಿಸಬಲ್ಲರು. ಆ ಪ್ರತಿಭೆ, ಆ ಆಳ, ಆ ನಾಟ್ಯ ಜೀವನದ ಒಲವುಗಳು ದೇಶಪಾಂಡೆ ಅವರಲ್ಲಿ ಚಿಕ್ಕಂದಿನಿಂದಲೂ ಬೆಳೆದು ಬಂದಿವೆ. ಬಾಗಿಲುಕೋಟೆಯ 'ವಾಸುದೇವ ಅಮೆಚ್ಯೂರ್ಸ' ಹೆಸರನ್ನು ನಾಡಿನ ಜನವೆಲ್ಲ ಕೇಳಿದಾರೆ. ದೇಶಪಾಂಡೆ ಅವರು ಅಮೆಚ್ಯೂರ್ಸಿಗೆ ತುರಾಯಿ ಇದ್ದ ಹಾಗೆ. ಇಷ್ಟೊಂದು ಚಿಕ್ಕ ವಯಸ್ಸಿನಲ್ಲಿಯೇ ಕೆ. ಆರ್. ಅಭಿನಯ ಕುಶಲರಾಗಿದ್ದಾರೆ. ಅವರ ಅಭಿನಯದ ಬಗೆಯನ್ನು ನೋಡಿದವರಿಗೆಲ್ಲ ಅವರ ಭವಿತವ್ಯ ತುಂಬ ಚೆನ್ನಾಗಿದೆಯೆಂದೂ ಗುರುತಿಸಬಲ್ಲರು. 'ನಚಿಕೇತ' ನಾಟಕವನ್ನು ಆಡಿದಾಗ 'ದೇಶಪಾಂಡೆ' ಅವರ ಕೀರ್ತಿ ನಾಡಿನಲ್ಲೆಲ್ಲ ಮೊಳಗಿತು. ಅಭಿನಯದ ಆ ಪ್ರತಿಭೆಯನ್ನು ನಮ್ಮ ಜನ ಗುರುತಿಸಿದರು. ಪ್ರಸಿದ್ಧ ನಟರೂ ಬಳ್ಳಾರಿಯ ಆಂಧ್ರ ನಾಟಕ ಪ್ರಪಿತಾಮಹರೂ ಆದ ಟಿ. ರಾಘವಾಚಾರ್ಯರು ಒಂದು ಸಲ 'ಜಯ ಕರ್ನಾಟಕ'ದಲ್ಲಿ ಬರೆಯುತ್ತಾ "ನಮ್ಮ ಜನರಲ್ಲಿ ಕಂಪನಿಯವರು ಮುಖ್ಯವಾಗಿ ಪಾತ್ರಗಳಿಗನುಗುಣವಾದ ಜನರನ್ನು ಹುಡುಕುವ ಗೋಜಿಗೆ ಹೋಗುವದಿಲ್ಲ. ಅದು ನಮ್ಮ 'ರಂಗಭೂಮಿ'ಯಲ್ಲಿಯ ದೊಡ್ಡ ಕುಂದು" ಎಂದು ಹೇಳಿದಾರೆ. ಆದರೆ ದೇಶಪಾಂಡೆ ಪಾತ್ರದ ಜೀವಾಳವನ್ನರಿತು ಕೂಡಲೇ ಅದರಲ್ಲಿ ತನ್ಮಯರಾಗಬಲ್ಲರು. ಈ 'ತನ್ಮಯತೆ' ಅವರಿಗೆ ಸಾಧಿಸಿದಷ್ಟು ಕಿರಿಯ ಅಮೆಚ್ಯೂರ್ಸರಲ್ಲಿ ಯಾರಿಗೂ ಸಾಧಿಸಿಲ್ಲವೆಂದು ನಾನು ವಿಶ್ವಾಸದಿಂದ ಹೇಳಬಲ್ಲೆ. ಅವರ ವ್ಯಕ್ತಿತ್ವದಲ್ಲೇ ಒಂದು ಮೋಡಿ, ಒಂದು ಮಾಟವಿದೆ. ಉತ್ತಮವಾದ ಶಾರೀರ. ಚೆನ್ನಾಗಿ ಗಮಕವೂ ಗೊತ್ತು. ಸಾಧಾರಣವಾಗಿ ಎಲ್ಲ ನಟರಲ್ಲಿಯೂ ಈ ಬಗೆಯ ಕಲಾರಸಿಕತೆ ಈ 'ಜೋಡಿ' ಕಂಡುಬರುವದಿಲ್ಲ. ಆದರೆ ದೇಶಪಾಂಡೆ ಅವರ ಪ್ರತಿಭೆಗನುಗುಣವಾಗಿಯೇ ಈ ಕಲಾರಸಿಕತೆ ಬೆಳೆದು ಬಂದಿದೆ. ಸ್ವತಃ ದೇಶಪಾಂಡೆ ಅವರ ತಂದೆ ಹಳೆಯ ಕಾಲದವರು. ನಾಟಕಗಳೆಂದರೆ ಸ್ವಲ್ಪ ಅಬ್ರಾಹ್ಮಣ್ಯ ಎಂದು

(೩೦ನೆಯ ಪುಟಕ್ಕೆ)

೬೪೧—೧೯೪೨ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

## ಉಚ್ಚತರ ಜೀವನ-ಮಹತ್ತರ ಜೀವ

(ಮೂಲ: ಚೀನಾದೇಶದ ಪ್ರಾಚೀನ ಮಹಾ ಆಚಾರ್ಯ 'ಮೆಂಗ್‌ಸ್ತೆ' ಅಥವಾ ಆಂಗ್ಲೀಕೃತ 'ಮೆನ್ಸಿಯಸ್'. ಕ್ರಿ.ಪೂ. ೩೭೨–೨೮೯.)

ಮೆಂಗ್‌ಸ್ತೆ ಹೇಳಿದ: "ನನಗೆ ಮೀನು ಇಷ್ಟ, ಕರಡಿಯ ಅಂಗೈಯೂ ಇಷ್ಟ; ಆದರೆ ಎರಡನ್ನೂ ಏಕಕಾಲದಲ್ಲಿ ಪಡೆಯುವುದು ನನಗೆ ಸಾಧ್ಯವಾಗದಿದ್ದರೆ, ಮೀನನ್ನು ಬಿಟ್ಟುಕೊಟ್ಟು ಕರಡಿಯ ಅಂಗೈಯನ್ನು ತಿನ್ನುವೆನು. ಬದುಕಿನಲ್ಲಿ ನನಗೆ ಪ್ರೀತಿ, ಧರ್ಮದಲ್ಲೂ ನನಗೆ ಪ್ರೀತಿ; ಎರಡನ್ನೂ ಏಕಕಾಲದಲ್ಲಿ ಪಡೆಯುವುದು ನನಗೆ ಸಾಧ್ಯವಾಗದಿದ್ದರೆ, ಧರ್ಮವನ್ನು ಉಳಿಸಿಕೊಳ್ಳುವುದಕ್ಕಾಗಿ ಬದುಕನ್ನು ಬಲಿ ಕೊಡುತ್ತೇನೆ. ನನಗೆ ಬದುಕಿನಲ್ಲಿ ಪ್ರೀತಿ, ಆದರೂ ಬದುಕಿಗಿಂತ ಪ್ರಿಯವಾದುದು ಒಂದುಂಟು ನನಗೆ; ಆದ್ದರಿಂದ ಏನೇ ಬೆಲೆಯಾದರೂ ಕೊಟ್ಟು ಜೀವ ಉಳಿಸಿಕೊಳ್ಳಲು ನಾನು ಒಲ್ಲೆ. ಹಾಗೆಯೇ ಸಾವನ್ನು ನಾನು ದ್ವೇಷಿಸುತ್ತೇನೆ, ಆದರೂ ನಾನು ಸಾವಿಗಿಂತ ಹೆಚ್ಚು ದ್ವೇಷಿಸುವುದು ಒಂದುಂಟು; ಆದ್ದರಿಂದ, ಏನೇ ಬೆಲೆಯಾದರೂ ಕೊಟ್ಟು ನಾನು ಅಪಾಯದಿಂದ ತಪ್ಪಿಸಿಕೊಳ್ಳವೊಲ್ಲೆ. ಮನುಷ್ಯನಿಗೆ ಬದುಕಿಗಿಂತ ಪ್ರಿಯವಾದುದು ಬೇರೆ ಏನೂ ಇಲ್ಲದಿದ್ದರೆ, ಅದನ್ನು ಉಳಿಸಿಕೊಳ್ಳುವುದಕ್ಕಾಗಿ ಅವನು ತಾನು ಏನುಬೇಕಾದರೂ ಮಾಡುವ ಸ್ವಾತಂತ್ರ್ಯವನ್ನು ವಹಿಸುವುದಿಲ್ಲವೇನು? ಹಾಗೆಯೇ, ಮನುಷ್ಯನಿಗೆ ಸಾವಿಗಿಂತ ದ್ವೇಷಿಸಬೇಕಾದ ವಸ್ತು ಬೇರೊಂದು ಇಲ್ಲದಿದ್ದರೆ, ತಪ್ಪಿಸಿಕೊಳ್ಳಬಹುದಾದ ಅಪಾಯಗಳಿಂದ ಅವನು ಏಕೆ ತಪ್ಪಿಸಿಕೊಳ್ಳವೊಲ್ಲ? ಹೀಗೆ, ಮನುಷ್ಯ ತನ್ನ ಬದುಕನ್ನು ಪರಿತ್ಯಜಿಸುವ ಸಮಯಗಳುಂಟು, ಮನುಷ್ಯ ಅಪಾಯದಿಂದ ದೂರ ಸರಿಯವೊಲ್ಲದ ಸಮಯಗಳುಂಟು. ಬದುಕನ್ನು ಪರಿತ್ಯಜಿಸಬಯಸುವ ಸಮಯಗಳುಂಟು, ಅಪಾಯದಿಂದ ದೂರ ಸರಿಯಬಯಸದ ಸಮಯಗಳುಂಟು ಎಂಬ ಈ ಭಾವನೆಯಿರುವುದು ಸತ್ಪುರುಷರಿಗೆ ಮಾತ್ರವಲ್ಲ. ಎಲ್ಲ ಜನರಿಗೂ ಈ ಭಾವನೆಯಿದೆ, ಆದರೆ ಮಾತ್ರ ಸತ್ಪುರುಷರು ಅದನ್ನು ಕಾಪಾಡಿಕೊಳ್ಳಲು ಸಮರ್ಥರಾಗಿದ್ದಾರೆ. ಕೆಲವು ಸಲ ಒಬ್ಬ ಮನುಷ್ಯ ಬದುಕುವುದೂ ಸಾಯುವುದೂ ಒಂದು ಹಿಡಿ ಅನ್ನ, ಒಂದು ಬಟ್ಟಲು ಸಾರಿನ ಮೇಲಿರಬಹುದು; ಆದರೆ ಹಸಿದು ಹೋಗುತ್ತಿರುವವನನ್ನು 'ಲೋ!' ಎಂದು ಕರೆದು ಅತಿ ಅವಮಾನಕರವಾದ ರೀತಿಯಲ್ಲಿ ನೀಡಿದರೆ, ಅವನು ಅದನ್ನು ತೆಗೆದುಕೊಳ್ಳಲು ಒಪ್ಪ. ಭಿಕ್ಷುಕನಿಗೆ ಒಂದು ಒದೆ ಕೊಟ್ಟು ಅದನ್ನು ನೀಡಿದರೆ, ಭಿಕ್ಷುಕ ಅದನ್ನು ತೆಗೆದುಕೊಳ್ಳವೊಲ್ಲ.

"ನನ್ನ ನೀತಿಗಳಿಗೆ ವಿರುದ್ಧವಾಗಿ ನಡೆದುದರಿಂದ ಬರುವ ಹತ್ತು ಸಾವಿರ ಬಳ್ಳಗಳ ಸಂಬಳಕ್ಕೆ ಏನು ಬೆಲೆ? ಇದರಿಂದ ನನಗೆ ಸೊಗಸಾದ ಸೌಧಗಳು ಸಿಗುವುವೆಂದು, ಹೆಂಡತಿಯ ಹಾಗೂ ಬಂಗಾರದವರ ಸೇವೆ ದೊರಕುವುದೆಂದು, ನನ್ನ ಬಡತನದಲ್ಲಿ ನನ್ನನ್ನು ಗುರುತಿಸಿದ ಸ್ನೇಹಿತರಿಗೆ ಸಹಾಯ ಮಾಡಲಾಗುವುದೆಂದು ಈ ಅಂತಸ್ತನ್ನು ನಾನು ಒಪ್ಪಿಕೊಳ್ಳಲೆ? ಮೊದಲು ಹೊಟ್ಟೆಗಿಲ್ಲದೆ ಸಾಯುವಾಗ ಕೂಡ ಈ ಸ್ಥಾನವನ್ನು ಒಪ್ಪಿಕೊಳ್ಳಲು ನಿರಾಕರಿಸಿ, ಈಗ ಸೊಗಸಾದ ಸೌಧ ಸಂಪಾದಿಸುವುದಕ್ಕಾಗಿ ನಾನು ಇದನ್ನು ಅಂಗೀಕರಿಸಿದರೆ, ಮೊದಲು ಹಸಿದು ಸಾಯುವಾಗ ಕೂಡ ಈ ಸ್ಥಾನವನ್ನು ಒಪ್ಪಿಕೊಳ್ಳಲು ನಿರಾಕರಿಸಿ, ಈಗ ಹೆಂಡತಿ ಬಂಗಾರದವರ ಸೇವೆ ಸಂಪಾದಿಸುವುದಕ್ಕಾಗಿ ನಾನು ಇದನ್ನು ಅಂಗೀಕರಿಸಿದರೆ, ಮೊದಲು ಹಸಿದು ಸಾಯುವಾಗ ಕೂಡ ನಾನು ಈ ಸ್ಥಾನವನ್ನು ಒಪ್ಪಿಕೊಳ್ಳಲು ನಿರಾಕರಿಸಿ, ನಾನು ದರಿದ್ರನಾಗಿದ್ದಾಗ ತಿಳಿದ ಸ್ನೇಹಿತರಿಗೆ ಸಹಾಯ ಮಾಡುವುದಕ್ಕೆಂದು ನಾನು ಈಗ ಇದನ್ನು ಅಂಗೀಕರಿಸಿದರೆ, ಅದು ಸಂಪೂರ್ಣವಾಗಿ ಅನಾವಶ್ಯಕವಾದುದು ಆಗುವುದಿಲ್ಲವೆ? ಇದನ್ನೇ 'ತನ್ನ ಸಹಜವಾದ ಹೃದಯವನ್ನು ಕಳೆದುಕೊಳ್ಳುವುದು' ಎನ್ನುವುದು."

ಮೆಂಗ್‌ಸ್ತೆ ಹೇಳಿದ: "ಅನುಕಂಪ ಮನುಷ್ಯನ ಹೃದಯದಲ್ಲಿದೆ, ಮನುಷ್ಯರಿಗೆ ಧರ್ಮವೆ ಮಾರ್ಗ. ತನ್ನ ದಾರಿ ತಪ್ಪಿ, ಅದನ್ನು ಅನುಸರಿಸದೆ, ತನ್ನ ಹೃದಯ ನಷ್ಟವಾಗಿ, ಅದನ್ನು ಪುನಃ ಪಡೆಯುವ ದಾರಿ ತಿಳಿಯದೆ ಇರುವವನನ್ನು ಕನಿಕರಿಸಿ. ಜನ ತಮ್ಮ ನಾಯಿಗಳೂ ಕೋಳಿ ಮರಿಗಳೂ ಕಳೆದುಹೋದಾಗ, ಹೊರಗೆ ಹೋಗಿ ಅವುಗಳನ್ನು ಹುಡುಕುತ್ತಾರೆ: ಆದರೂ ತಮ್ಮ ಹೃದಯವನ್ನು (ಅಥವಾ ಸಹಜ ಸ್ವಭಾವವನ್ನು) ಕಳೆದುಕೊಂಡವರು ಹೊರಗೆ ಹೊರಟು ಅವುಗಳನ್ನು ಹುಡುಕುವುದಿಲ್ಲ. ಆತ್ಮವ್ಯವಸಾಯದ ತತ್ತ್ವ ಈ ನಷ್ಟ ಹೃದಯದ ಅನ್ವೇಷಣೆಗಾಗಿ ನಡಸುವ ಪ್ರಯತ್ನದಲ್ಲಿ ಅಲ್ಲದೆ ಬೇರೆಯದರಲ್ಲಿಲ್ಲ.'

ಮೆಂಗ್‌ಸ್ತೆ ಹೇಳಿದ: "ಉಂಗುರಬೆರಳು ಡೊಂಕಾದವನು ಒಬ್ಬನು ಇದ್ದಾನೆ ಎನ್ನಿ. ಅದು ನೆಟ್ಟಗೆ ನೀಡಲಾಗದು. ಆದರಿಂದ ನೋವಿಲ್ಲ, ಆದರಿಂದ ಅವನಿಗೆ ಏನೂ ಅನನುಕೂಲವಿಲ್ಲ. ಆದರೂ ಆ ತನ್ನ ಬೆರಳನ್ನು ನೇರಮಾಡಬಲ್ಲವನು ಯಾರಾದರೂ ಇದ್ದರೆ, ಎಷ್ಟು ದೂರ ಹೋಗಬೇಕಾದರೂ ಕೂಡ ಅವನು ಲಕ್ಷಿಸುವುದಿಲ್ಲ. ಏಕೆಂದರೆ, ತನ್ನ ಬೆರಳು ಇತರರ ಬೆರಳುಗಳಂತೆ ಸಹಜವಾಗಿಲ್ಲ ಎಂದು ಅವನಿಗೆ ನಾಚಿಕೆ. ಸಹಜವಾಗಿರದ ಬೆರಳನ್ನು ಕಂಡು ನಾಚುವಷ್ಟು ಬುದ್ಧಿ ಮನುಷ್ಯನಿಗಿದೆ, ಆದರೆ ತನ್ನ ಹೃದಯ ಸಹಜವಾಗಿಲ್ಲದಾಗ ಆ ಹೃದಯಕ್ಕಾಗಿ ನಾಚಿಕೆಪಡುವಷ್ಟು ಬುದ್ಧಿಯಿಲ್ಲ. ಅಂಥವನಿಗೆ ಮುಖ್ಯಾಮುಖ್ಯ ವಸ್ತುಗಳ ತಾರತಮ್ಯ ಜ್ಞಾನವಿಲ್ಲ ಎನ್ನುತ್ತೇವೆ."

ಮೆಂಗ್‌ಸ್ತೆ ಹೇಳಿದ: "ಇಷ್ಟು ದೊಡ್ಡ ಬುಡವಿರುವ ಇಂಥ ಗಿಡ ಬೆಳೆದು ಬಾಳಬೇಕಾದರೆ, ಇದನ್ನು ಸರಿಯಾಗಿ ನೋಡಿಕೊಳ್ಳಬೇಕು ಎಂಬುದು ಜನರಿಗೆ ಗೊತ್ತು. ಆದರೆ ತಮ್ಮ ತಮ್ಮ ಜೀವಗಳನ್ನು ಕುರಿತಾದರೋ, ಅವುಗಳನ್ನು ಸರಿಯಾಗಿ ನೋಡಿಕೊಳ್ಳುವುದು ಹೇಗೆಂದು ಅವರು ಅರಿಯರು. ಏನಿದು, ಅವರ ಜೀವಗಳು ಅವರಿಗೆ ಒಂದು ಮರಕ್ಕಿಂತ ಕಡಮೆ ಪ್ರಿಯವಾದುದಾಗಿರಬಹುದೆ? ಇದು ಕೇವಲ ವಿಚಾರಹೀನತೆ."

ಮೆಂಗ್‌ಸ್ತೆ ಹೇಳಿದ: "ಮನುಷ್ಯ ತನ್ನ ದೇಹದಲ್ಲಿ ಪ್ರೀತಿಸದ ಅಂಗ ಒಂದಿಲ್ಲ. ತಾನು ಪ್ರೀತಿಸದ ಅಂಗ ಒಂದಾದರೂ ಇಲ್ಲದ ಕಾರಣ, ಅವನು ಪುಷ್ಟಿಕೊಟ್ಟು ಪಾಲಿಸದ ಅಂಗ ಒಂದಾದರೂ ಇಲ್ಲ. ತಾನು ಪ್ರೀತಿಸದ ಚರ್ಮದ ಒಂದು ಅಂಗುಲ ಕೂಡ ಇಲ್ಲದ ಕಾರಣ, ಅವನು ಎಚ್ಚರಿಕೆಯಿಂದ ನೋಡಿಕೊಳ್ಳದ ಚರ್ಮದ ಒಂದು ಅಂಗುಲ ಕೂಡ ಇಲ್ಲ. ವಸ್ತುವೊಂದು ಒಳ್ಳೆಯದೆ, ಕೆಟ್ಟದ್ದೆ ಎಂಬುದನ್ನು ನಿಶ್ಚಯಿಸುವ ವಿಷಯವೆಂದರೆ: ಆದರಲ್ಲಿ ಅವನಿಗಿರುವ ಆದರ, ಅಥವಾ ಅದಕ್ಕೆ ಅವನು ಕಟ್ಟುವ ಬೆಲೆ. ಈಗ ನಮ್ಮ ಪ್ರಕೃತಿಯಲ್ಲಿ ಒಂದು ಉಚ್ಚತರವಾದ ಹಾಗೂ ನೀಚತರವಾದ ಸ್ವಭಾವವುಂಟು, ಅಲ್ಪತರವಾದ ಹಾಗೂ ಮಹತ್ತರವಾದ ಆತ್ಮವುಂಟು. ಉಚ್ಚತರ ಸ್ವಭಾವಕ್ಕೆ ನಷ್ಟವಾಗುವಂತೆ ನೀಚತರ ಸ್ವಭಾವವನ್ನು ಯಾರೂ ಬೆಳಸಬಾರದು, ಮಹತ್ತರ ಆತ್ಮಕ್ಕೆ ಹಾನಿಯಾಗುವಂತೆ ಅಲ್ಪತರ ಆತ್ಮವನ್ನು ಬೆಳಸಬಾರದು. ತನ್ನ ಅಲ್ಪತರ ಆತ್ಮಕ್ಕೆ ಗಮನಕೊಡುವವನು ಅಲ್ಪಾತ್ಮನಾಗುವನು, ತನ್ನ ಮಹತ್ತರ ಆತ್ಮಕ್ಕೆ ಗಮನಕೊಡುವವನು ಮಹಾತ್ಮನಾಗುವನು. ತನ್ನ ಮುಖ್ಯ ವೃಕ್ಷಗಳನ್ನು ಉಪೇಕ್ಷಿಸಿ ಮುಳ್ಳುಗಳಿಗೂ ಕಿರುಪೊದೆಗಳಿಗೂ ಗಮನಕೊಡುವವನನ್ನು ಕೆಲಸಕ್ಕೆ ಬಾರದ ತೋಟಗಾರನೆಂದು ಗಣಿಸುವರು. ತನ್ನ ಬೆರಳನ್ನು ಜೋಪಾನವಾಗಿ ನೋಡಿಕೊಂಡು, ಭುಜದ ಮೂಳೆಗೆ ಗಾಸಿಯಾಗಲು ಅವಕಾಶ ಕೊಡುವವನು ವಿಕಲಾಂಗನಾಗುವನು. ಅನ್ನಪಾನಗಳನ್ನು ಜನ ಕಡೆಗಣಿಸಿ ನೋಡುವರು; ಏಕೆಂದರೆ ಅನ್ನ ನಮ್ಮ ಅಲ್ಪತರ ಆತ್ಮಕ್ಕೆ ಪುಷ್ಟಿಕೊಡುವುದಲ್ಲದೆ ನಮ್ಮ ಮಹತ್ತರ ಆತ್ಮಕ್ಕೆ ಏನೂ ಮಾಡದು. ಮನುಷ್ಯ ತನ್ನ ಮಹತ್ತರ ಆತ್ಮವನ್ನು ಮರೆಯದೆ ತನ್ನ ಅನ್ನಕ್ಕೆ ಗಮನಕೊಟ್ಟರೆ, ಆಗ ಅವನು ತೆಗೆದುಕೊಂಡ ಅನ್ನ ಅವನ ದೇಹದ ಯಾವೊಂದು ನಿರ್ದಿಷ್ಟ ಭಾಗಕ್ಕೆ ಪುಷ್ಟಿಕೊಡಲು ಮಾತ್ರವೇ ವ್ಯಯವಾಗುವುದಿಲ್ಲ ಎಂದು ಹೇಳಬಹುದು."

ಕುಂಗ್‌ತುತ್ಸೆ ಎಂಬವನು "ನಾವೆಲ್ಲ ಮನುಷ್ಯ ಪ್ರಾಣಿಗಳು. ಕೆಲವರು ಮಹಾಪುರುಷರಾಗಿಯೂ ಕೆಲವರು ಅಲ್ಪ ಮನುಷ್ಯರಾಗಿಯೂ ಇರುವುದೇಕೆ?" ಎಂದು ಮೆಂಗ್‌ಸ್ತೆಯನ್ನು ಕೇಳಿದ. ಮೆಂಗ್‌ಸ್ತೆ "ತಮ್ಮ ಮಹತ್ತರ ಆತ್ಮಕ್ಕೆ ಗಮನಕೊಡುವವರು ಮಹಾಪುರುಷರಾಗು

ವರು, ತಮ್ಮ ಅಲ್ಪತರ ಆತ್ಮಕ್ಕೆ ಗಮನಕೊಡುವವರು ಅಲ್ಪಪುರುಷ ರಾಗುವರು" ಎಂದು ಉತ್ತರ ಕೊಟ್ಟ. "ಆದರೆ ನಾವೆಲ್ಲರೂ ಮನುಷ್ಯ ಪ್ರಾಣಿಗಳು. ಕೆಲವರು ತಮ್ಮ ಮಹತ್ತರ ಆತ್ಮಕ್ಕೆ ಗಮನಕೊಡುವುದೂ ಕೆಲವರು ತಮ್ಮ ಅಲ್ಪತರ ಆತ್ಮಕ್ಕೆ ಗಮನಕೊಡುವುದೂ ಏಕೆ?" ಮೆಂಗ್‌ಸ್ತೆ ಹೇಳಿದ: "ಬುದ್ಧಿ ಭಾಗವಹಿಸದೆ, ನಮ್ಮ ಕಾಣುವ ಕೇಳುವ ಇಂದ್ರಿಯಗಳು ಬಾಹ್ಯವಸ್ತುಗಳಿಂದ ಭ್ರಮಿತವಾದಾಗ, ವಿಷಯಗಳು ವಿಷಯೇಂದ್ರಿಯಗಳ ಮೇಲೆ ಪ್ರಭಾವ ಬೀರಿ, ಅವುಗಳನ್ನು ದಾರಿ ತಪ್ಪಿಸಿ ಒಯ್ಯುವುವು. ಇದೆ ವಿವರಣೆ. ಮನಸ್ಸಿನ ಕಾರ್ಯ ಆಲೋಚನೆ; ಆಲೋಚಿಸುವಾಗ ಮನಸ್ಸು ನಿನಗೆ ಅಧೀನವಾಗಿರುತ್ತದೆ, ಆಲೋಚಿಸದಾಗ ನಿನ್ನ ಮನಸ್ಸು ನಷ್ಟವಾಗುತ್ತದೆ. ಆಲೋಚಿಸುವುದಕ್ಕೂ ನ್ಯಾಯಾನ್ಯಾಯಗಳನ್ನು ತಿಳಿಯುವುದಕ್ಕೂ ದೇವಲೋಕ ನಮಗೆ ನೀಡಿರುವುದು ಇದನ್ನೇ. ತನ್ನ ಮಹತ್ತರ ಆತ್ಮವನ್ನು ವ್ಯವಸಾಯ ಮಾಡುವವನು ತನ್ನ ಅಲ್ಪತರ ಆತ್ಮ ಅದನ್ನು ಅನುಸರಿಸಿ ಹಿಂಬಾಲಿಸುವದನ್ನು ಕಾಣುವನು. ಮನುಷ್ಯನು ಮಹಾಪುರುಷನಾಗುವುದು ಹೀಗೆಯೇ."

ಮೆಂಗ್‌ಸ್ತೆ ಹೇಳಿದ: "ದೈವಕೃತವಾದ ಅರ್ಹತೆಯೂ ಇದೆ, ಮನುಷ್ಯಕೃತವಾದ ಅರ್ಹತೆಯೂ ಇದೆ. ದಯೆ ಧರ್ಮವುಳ್ಳವರು, ಶ್ರದ್ಧಾಳುಗಳು, ಸದಾ ಶೀಲಪ್ರಿಯರು ದೈವಕೃತವಾದ ಅರ್ಹತೆಗೆ ಸೇರಿದವರು; ವಿವಿಧ ಅಧಿಕಾರಿಗಳ ಅಂತಸ್ತುಗಳು ಮನುಷ್ಯಕೃತ ಅರ್ಹತೆಗೆ ಸೇರಿದವು. ಪುರಾತನರು ದೈವಕೃತವಾದ ಅರ್ಹತೆಯನ್ನು ವ್ಯವಸಾಯ ಮಾಡಿ, ಮನುಷ್ಯಕೃತವಾದ ಅರ್ಹತೆಯನ್ನು ಅನಾಯಾಸವಾಗಿ ಪಡೆದರು. ಆದರೆ ಜನ, ಇಂದಾದರೋ, ಮನುಷ್ಯಕೃತ ಮರ್ಯಾದೆಯನ್ನು ಪಡೆಯುವುದಕ್ಕಾಗಿ ದೈವಕೃತ ಅರ್ಹತೆಯನ್ನು ವ್ಯವಸಾಯ ಮಾಡಿ, ಮನುಷ್ಯಕೃತ ಮರ್ಯಾದೆಗಳು ದೊರಕಿದೊಡನೆ ದೈವಕೃತ ಅರ್ಹತೆಯನ್ನು ದೊರಕಿಸಿದವನ್ನು ತೊರೆಯುತ್ತಾರೆ. ಹೀಗೆ ಅವರು ದುಃಖವಾಗುವಂತೆ ದಾರಿ ತಪ್ಪಿಹೋಗುತ್ತಾರೆಯಲ್ಲದೆ ಕಡೆಗೂ ಕ್ಷಿಪ್ರದಲ್ಲೇ ನಾಶವಾಗುವರು."

ಮೆಂಗ್‌ಸ್ತೆ ಹೇಳಿದ: "ಮರ್ಯಾದೆಯಲ್ಲಿ ತಮ್ಮನ್ನು ಮೇಲೇರಿಸಲೆಂಬ ಸರ್ವಸಾಮಾನ್ಯವಾದ ಆಸೆ ಎಲ್ಲ ಜನರಿಗುಂಟು, ಆದರೆ ತಮ್ಮೊಳಗೇ ಇನ್ನೂ ಉಚ್ಚತರವಾದುದು ಒಂದುಂಟೆಂಬುದು ಅವರಿಗೇ ತಿಳಿಯದು. ಏರಿಸಿದ ಅಂತಸ್ತು, ಮರ್ಯಾದೆ ಎಂದು ಜನ ಯಾವುದನ್ನು ಸಾಮಾನ್ಯವಾಗಿ ಗಣಿಸುವರೋ ಅದು ನಿಜವಾದ ಗೌರವವಲ್ಲ; ಏಕೆಂದರೆ ಅವನನ್ನು ಗೌರವಿಸಿದ ರಾಜನೇ ಅವನನ್ನು ಅಗೌರವಕ್ಕೆ ಎಳೆಯಲೂ ಬಲ್ಲ. ಗೀತಾ ಪುಸ್ತಕ ಎಂಬ ಗ್ರಂಥ 'ನಾನು ಕುಡಿದಿದ್ದೇನೆ, ಶೀಲ ನನ್ನಲ್ಲಿ ತುಂಬಿದೆ' ಎನ್ನುತ್ತದೆ. ಈ ಅಲಂಕಾರದ ರೀತಿಗೆ ಅರ್ಥ: ಮನುಷ್ಯನಲ್ಲಿ ದಯೆ, ಧರ್ಮ 'ತುಂಬಿದೆ'; ಹಾಗೆ ತುಂಬಿದಾಗ ನಯವಾದ ಆಹಾರದ ರುಚಿಗಳಿಗೆ ಅವನು ಲಕ್ಷ್ಯಕೊಡುವುದಿಲ್ಲ. ಮನುಷ್ಯ ಕೀರ್ತಿಯ ಕವಚ ಧರಿಸಿದಾಗ, ಜರಿಬಟ್ಟೆಗಳು ಅವನಿಗೆ ಲಕ್ಷ್ಯವಿಲ್ಲ."

ಮೆಂಗ್‌ಸ್ತೆ ಹೇಳಿದ: "ಐದು ತೆರದ ಧಾನ್ಯಗಳನ್ನು ಉತ್ತಮವಾದುವೆನ್ನುತ್ತಾರೆ. ಆದರೆ ಧಾನ್ಯ ಪಕ್ವವಾಗಿಲ್ಲದಿದ್ದರೆ, ಅವು ಮುಳ್ಳುಗಳಿಗಿಂತ ಕೀಳು. ದಯೆಯ ವಿಷಯದಲ್ಲೂ ಹೀಗೆಯೆ: ಅದು ಪರಿಣತವಾಗಬೇಕು."

ಮೆಂಗ್‌ಸ್ತೆ ಹೇಳಿದ: "ಯಿ ಎಂಬ ಪ್ರಸಿದ್ಧ ಬಿಲ್ಗಾರ ಜನರಿಗೆ ಬಾಣ ಬಿಡಲು ಕಲಿಸಿದಾಗ, ಬಿಲ್ಲಿನ ಹಗ್ಗವನ್ನು ಪೂರ್ಣ ಎಳೆಯ ಹೇಳಿದ. ಆತ್ಮವ್ಯವಸಾಯವನ್ನು ಇಚ್ಛಿಸುವವನು ಕೂಡ ತನ್ನನ್ನು ಸಂಪೂರ್ಣವಾಗಿ ಬೆಳಸಿಕೊಳ್ಳಬೇಕು. ದೊಡ್ಡ ಬಡಗಿ ಮೂಲೆಮರಗಳನ್ನೂ ಕೈವಾರಗಳನ್ನೂ (Squares and Compasses) ಉಪಯೋಗಿಸಲು ತನ್ನ ಶಿಷ್ಯನಿಗೆ ಕಲಿಸುತ್ತಾನೆ. ತನ್ನ ಆತ್ಮ ವ್ಯವಸಾಯಕ್ಕೆ ಇಚ್ಛಿಸುವವನು ಕೂಡ ತನ್ನ ನಡತೆಗೆ ಮೂಲೆಮರಗಳನ್ನೂ ಕೈವಾರವನ್ನೂ ಇಟ್ಟುಕೊಳ್ಳಬೇಕು."

(ಅನುವಾದಕ: ಜಿ. ಪಿ. ರಾಜರತ್ನಂ)

## "ಅಭಿನಯ ಕುಶಲ – "ಕೆ. ಆರ್."

(೨೫ನೆಯ ಪುಟದಿಂದ)

ತಿಳಿದುಕೊಂಡವರು. ರಂಗಭೂಮಿಯ ಮೇಲೆ 'ನಚಿಕೇತ' ನಾಟಕ ಕಂಡಾಗ ಅವರಿಗೆ ಮಗನ ಆಳ ತಿಳಿದುಬಂದಿದೆ. 'ನಚಿಕೇತ' ಆಡಿದಂದಿನಿಂದ ೩–೪ ದಿನಗಳವರೆಗೆ ಬಾಗಿಲುಕೋಟೆಯ ತುಂಬ ದೇಶಪಾಂಡೆ ಅವರ ಆ ಅಭಿನಯ ಮತ್ತು ಆ ಹಾಡುಗಾರಿಕೆ ಮಾತೇ. ರಂಗಭೂಮಿಯ ಮೇಲೆ ಈ ಪ್ರತಿಭೆಯ 'ಕಿಡಿ'ಯನ್ನು ಮೊದಲು ತೋರಿದವರು ಶ್ರೀ. ಥೆಬ್ಬಿ ಅವರು. ಥೆಬ್ಬಿ ಅವರು ಕರ್ನಾಟಕದ ಪ್ರಸಿದ್ಧ ಚಿತ್ರಶಿಲ್ಪಿಗಳು. ಗದುಗಿನ ಸಾಹಿತ್ಯೋತ್ಸವದ ಕಾಲಕ್ಕೆ ಅವರ 'ಕುಮಾರವ್ಯಾಸ'ನ ಭಾವ ಚಿತ್ರ ಎಲ್ಲರ ಮೆಚ್ಚುಗೆಗೆ ಪಾತ್ರವಾಯಿತು. ಶ್ರೀ. ಥೆಬ್ಬಿ ಕೆಲಕಾಲವೇಕೆ ಇನ್ನೂ 'ಅಮೆಚ್ಯೂರ್ಸ' ಅಧ್ಯಕ್ಷರಾಗಿದಾರೆ. ಕೆ. ಆರ್. ಚಿಕ್ಕವನಿದ್ದಾಗ ಅವರ ಮನೆಯೆದುರು ಆಟ ಆಡಲು ಹೋಗುತ್ತಿದ್ದ. ಸಲಿಗೆ ಬೆಳೆದು ಇವನ ಗಮುಕ ಅಭಿನಯ ಶಕ್ತಿಗಳನ್ನರಿತ ಶ್ರೀ. ಥೆಬ್ಬಿ ಅವರು ಅವನಿಗೆ ನಚಿಕೇತನ ಪಾತ್ರ ಕೊಟ್ಟರು. ಕೆ. ಆರ್. ಅದನ್ನು ಯಶಸ್ವಿಯಾಗಿ ನಿರ್ವಹಿಸಿದರು. ಅಂದಿನಿಂದ ಕೆ. ಆರ್. ಅನೇಕ ನಾಟಕಗಳಲ್ಲಿ ಭಾಗ ವಹಿಸಿದಾರೆ. ಚೆನ್ನಾಗಿ ಯಶಸ್ವಿಯಾಗಿ ತಮ್ಮ ಪಾತ್ರಗಳನ್ನು ನಿರ್ವಹಿಸಿದಾರೆ.

ದೇಶಪಾಂಡೆ ಹುಟ್ಟಿದುದು ಧಾರವಾಡ ಜಿಲ್ಲೆ. ಬೆಳೆದುದು ಬಿಜಾಪೂರ ಜಿಲ್ಲೆ. ಅನೇಕ ಜಿಲ್ಲೆಗಳ ನೀರು ಕುಡಿದ ದೇಶಪಾಂಡೆ ಅವರಿಗೆ ರಂಗಭೂಮಿಯ ಈ ಅಭಿನಯದ ಜಿಲ್ಲೆಯಲ್ಲಿ ಜಯಮಾಲೆ ಕಾದಿದೆ ಎಂದು ನಾನು ನಂಬಿದ್ದೇನೆ. ಚಿಕ್ಕಂದಿನಿಂದಲೂ ನಟನಾಗುವ ಆಸೆ. ಶಾಲೆಯ ಎಲ್ಲ ನಾಟಕಗಳಲ್ಲಿಯೂ ಭಾಗ ವಹಿಸುತ್ತಲೇ ಇದ್ದರು. 'ಅಭ್ಯಾಸಕ್ಕಿಂತಲೂ ಅಭಿನಯದ ಅಭಿರುಚಿಯೇ ಹೆಚ್ಚು' ಎಂದು ಒಬ್ಬ ಗುರುಗಳು ಇವರಿಗೆ 'ಸರ್ಟಿಫಿಕೇಟು' ಕೊಟ್ಟದಾರೆ. ಮೆಟ್ರಿಕ್ಯುಲೇಶನ್ ಆದ ಮೇಲೆ ವಿಲ್ಲಿಂಗ್ಡನ್ ಕಾಲೇಜಿಗೆ ಬಂದರು. Gatheringನ ಕಾಲಕ್ಕೆ ವಿ. ಕೃ. ಗೋಕಾಕರ 'ವಿಮರ್ಶಕ ವೈದ್ಯ' ಮಾಡಲಾಯಿತು. ಗೋಕಾಕ, ಮುಗಳಿ, ಡಾ. ಕುಲಕರ್ಣಿ ಮೊದಲಾದವರಲ್ಲದೆ ಮಹಾರಾಷ್ಟ್ರದ ಪ್ರಸಿದ್ಧ ಕವಿಗಳಾದ ಗಿರೀಶರೂ ಅಂದು ಬಂದಿದ್ದರು. ನಾಟಕ ಮುಗಿದ ಮೇಲೆ ಎಲ್ಲರೂ ಮೆಚ್ಚಿದುದು 'ಏಕಾಂಬರ ರಾಯ'ನ ಪಾತ್ರವನ್ನು. ಆ ಪಾತ್ರವನ್ನು ಕೆ. ಆರ್. ಅವರೇ ಅಭಿನಯಿಸಿದ್ದರು. ಗೋಕಾಕ, ಮುಗಳಿ, ಗಿರೀಶ, ಪ್ರೊ. ಕೋಗೇಕರ ಮುಂತಾದವರು ಅಂದು ಇವರನ್ನು ಬಾಯಿ ತುಂಬ ಹೊಗಳಿದರು. 'Tunes Tunes... ತೂಣುಗೊಂಡ ತಾನದಲ್ಲಿದೆ ಕಾವ್ಯದ ಜೀವಾಳ' ಎಂದು ಅನ್ನುವಾಗ ನೋಡಬೇಕು ಅವರ ಅಭಿನಯವನ್ನು. ಆ ಚಿತ್ರ ನನಗೆ ಇಂದಿಗೂ ನೆನಪಿದೆ. ಪುಲಿಗೆರೆಯಲ್ಲಿ ಜರುಗುವ ಪಂಪೋತ್ಸವದ ಕಾಲಕ್ಕೆ ಅಭಿನಯಿಸಬೇಕೆಂದು ಇವರಿಗೆ ಔತಣ ಬಂದಿತು. ಅದರಂತೆ ಹೋಗಿ ಅಭಿನಯಿಸಿದರು. ಶ್ರೀ. ಮುಳಿಯ ಅವರೂ 'ಶ್ರೀ' ಅವರೂ ಇವರ ಅಭಿನಯವನ್ನು ಬಹಳವಾಗಿ ಮೆಚ್ಚಿದರೆಂದು ನನ್ನ ಒಬ್ಬ ಗೆಳೆಯ ಹೇಳಿದ. ಇವರ 'ಅಭಿನಯ' ಪ್ರತಿಭೆ ದೊಡ್ಡದು. ವಯಸ್ಸೋ ತುಂಬಾ ಕಿರಿದು. 'ಚಿರಂಜೀವಿ' ಕಲಾಪಟದಲ್ಲಿ 'ಮಾರ್ಕಂಡೇಯ'ನ ಪಾತ್ರ ಅಭಿನಯಿಸುವ ಭಾಗ್ಯ ಕೆಲವೊಂದು ಕಾರಣಗಳಿಂದ ಬಾರದೇ ಹೋಯಿತು. ನಾಡಿಗೆಲ್ಲ ಒಂದು 'ರಾಷ್ಟ್ರೀಯ ರಂಗಭೂಮಿ' (National Theatre) ಆದಾಗ ಕೆ. ಆರ್. ಅವರಂತಹ ಪ್ರತಿಭಾವಂತ ನಟರ ಬೆಲೆ ಗೊತ್ತಾಗುತ್ತದೆ. ಹರಿದು ಹಂಚಿಹೋದ ನಾಡಿನಲ್ಲಿ ಒಂದು ಮೂಲೆಯ ದೀಪ ಮತ್ತೊಂದೆಡೆಗೆ ಮಿನುಗುವದು ಸಾಧ್ಯವೇ? ನಮ್ಮ ಜನ ಇಂತಹವರನ್ನು ಚೆನ್ನಾಗಿ ಅರಿತುಕೊಳ್ಳಬೇಕು. ಅವರು ಚೆನ್ನಾಗಿ ಹಾಡಬಲ್ಲರು. ಸಾಹಿತ್ಯದಲ್ಲಿಯೂ ಕೈ ಹಾಕಿದಾರೆ. 'ರಂಗಭೂಮಿ'ಯ ವಿಷಯವಾಗಿ ಒಂದು ಹೊತ್ತಗೆ ಬರೆಯುವ ಆಸೆಯೂ ಇದೆ. 'ರಂಗಭೂಮಿ' ನಮ್ಮ ನಾಡನ್ನು ಕಟ್ಟುವ ಮಹಾ ಸಾಧನಗಳಲ್ಲಿ ಮುಖ್ಯವಾದುದು ಒಂದು ಎಂದು ಇವರು ಅಂದಿದಾರೆ.

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧೨
ಬಿಡಿ ಪತ್ರಿಕೆ: ೬ ಕಾಸು




ಸಂಪಾದಕ:
ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈ ಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿ ಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೬
ಬೆಂಗಳೂರು: ಶುಕ್ರವಾರ, ನವೆಂಬರ್ ೨೩, ೧೯೪೨


## ತಿದ್ದಿದ ಕನ್ನಡ ಲಿಪಿ

ಸುಳಿವು

೧) ದೀರ್ಘ ಸ್ವರಕ್ಕೆ—ೀ; ಮಾ – **ಮೀ, ರಾ – ರೀ.**

೨) ಮಹಾಪ್ರಾಣಕ್ಕೆ—ಹೊಕ್ಕುಳು ಸೀಳುವುದು: ಘ – ಗ಼.

೩) ಒತ್ತಕ್ಷರಗಳನ್ನು ಉಚ್ಚಾರಣೆಯ ಕ್ರಮದಲ್ಲಿ ಬಿಡಿಸುವುದು:—ತ್ರಿದಶೇಂದ್ರ – **ತ್‌ರಿದಶೇಂದ್‌ರ,** ದೀಕ್ಷಾ–**ದೀಕ್‌ಷಾ,** ತೃಷ್ಣಾಚ್ಛೇದಮಂ – **ತೃಷ್‌ಣಾಚ್‌ಛೇದಮಂ.**

೫

ತ್‌ರಿದಶೇಂದ್‌ರಮೌಳಿ ಮಣಿ ಶೋ
ಣ ದೀಪ್‌ತಿಗಳ್ ಪುದಿದು ಪೊಳೆವಲಕ್‌ತಕ ರಸದಿಂ
ಪುದಿದಂತೊಪ್‌ಪಿರ್‌ಪರ್‌ಹತ್
ಪದಂಗಳೆಮಗೀಗೆ ತಡೆಯದರ್‌ಹತ್‌ಪದಮಂ

ಅಮರೇಂದ್‌ರೋನ್‌ನತಿ ಖೇಚರೇಂದ್‌ರ ವಿಭವಂ
ಭೋಗೀಂದ್‌ರಭೋಗಂ ಮಹೇಂ
ದ್‌ರ ಮಹೈಶ್‌ವರ್‌ಯಮಿವೆಲ್‌ಲಮಧ್‌ರುವಮಿವಂ
ಬೇಟ್‌ಪಂತು ಬೆಳ್‌ಳಲ್‌ಲೆನು
ತ್‌ತಮ ದೀಕ್‌ಷಾವಿಧಿಯುಂ ಸಮಾಧಿ ಮರಣಂ
ಕರ್‌ಮಕ್‌ಷಯಂ ಬೋಧಿಲಾ
ಭಮಮೋಘಂ ದೊರೆಕೊಳ್‌ವುದಕ್‌ಕೆಮಗೆ
ಮುಕ್‌ತಿಶ್‌ರೀ ಮನೋವಲ್‌ಲಭಾ

—ಪಂಪ

ಅಭಿಮಾನ ಸ್‌ಥಿರಭಾವಮಂ ನಮಗೆ
ಮಾಟ್‌ಕತ್‌ಯುದ್‌ಗಮೋನ್‌ನತಂ
ಶುಭ ಸೌಭಾಗ್‌ಯಮನಂಗಜಂ ಭುಜಬಳಾವಷ್‌ಟಂಭಮಂ
ಚಕ್‌ರವ
ರ್‌ತಿ ಭುಜಾದರ್‌ಪವಿಲೋಪಿ ಬಾಹುಬಲಿ
ತೃಷ್‌ಣಾಚ್‌ಛೇದಮಂ ಮುಕ್‌ತರಾ
ಜ್‌ಯಭರಂ ಮುಕ್‌ತಿಯನಾಪ್‌ತ ನಿರ್‌ವೃತಿಪದಂ
ಶ್‌ರೀ ಗೊಮ್‌ಮಟೇಶಂ ಜಿನಂ

—ಬೊಪ್‌ಪಣ

ಪತ್ರ ವ್ಯವಹಾರ

## ಸಲಹೆಗಳು

೧

೧೯೩೬ರಲ್ಲಿ ಪರಿಷತ್ತು ನಡೆಸಿದ ಅಕ್ಷರ ಸಂಸ್ಕರಣ ಸಮ್ಮೇಳನ ಒಪ್ಪಿದ ಸುಧಾರಣೆಗನುಸಾರವಾಗಿ ವರ್ಣಮಾಲೆಯನ್ನು ಸದ್ಯದಲ್ಲಿ ಪಾಠಶಾಲೆಗಳಲ್ಲಿ **ಪಾಠಾಂತರವಾಗಿ** ರೂಢಿಗೆ ತರುವಂತೆ ಮೂರು ಕನ್ನಡ ಸರಕಾರಗಳವರನ್ನು ಕೇಳಿಕೊಂಡು ಮಂಜೂರುಮಾಡಿಸಿದರೆ ಸಾಕಾಗಿರುತ್ತದೆ.

೧. ಸಜಾತೀಯ ಒತ್ತಕ್ಷರಗಳು ಬರುವ ಮಾತುಗಳಲ್ಲಿ ಒತ್ತಿಗೆ ಬದಲಾಗಿ, ಪಕ್ಕದಲ್ಲಿ ಒಂದು ಓರೆಯಾದ ಗೆರೆ ಇದ್ದರೆ ಬರೆಯುವವರಿಗೆ ಬಹು ಸುಲಭ.

೨. ಎತ್ವ ಐತ್ವ ಒತ್ವಗಳ ಗುರುತುಗಳನ್ನು ತೆಲುಗಿನಲ್ಲಿರುವಂತೆ ಕನ್ನಡದಲ್ಲಿಯೂ ಮಾಡಿಕೊಳ್ಳುವುದು ಸೌಕರ್ಯ.

೩. ಕನ್ನಡ ಟೈಪ್‌ರೈಟರಿಗೆ ಕ್ಯಾಪಿಟಲ್ ಲೆಟರ್ ಬೇಕಾಗಿಲ್ಲವಾದ್ದರಿಂದ, ಇಂಗ್ಲಿಷಿನ ಟೈಪ್‌ರೈಟರಿನಲ್ಲಿ ಕ್ಯಾಪಿಟಲ್ ಲೆಟರ್ಸ್ ಇರುವಲ್ಲಿಗೆ ಕನ್ನಡದ ಯಾವ ಲಿಪಿಗಳು ಬೇಕೋ ಅವನ್ನು ಜೋಡಿಸಿಕೊಳ್ಳಬಹುದಾಗಿರುವದರಿಂದ ಕನ್ನಡ ಲಿಪಿಗಳಿಗೆ ಸರಿಹೋಗಬಹುದಾಗಿರುತ್ತದೆ; ಪ್ರಯೋಗ ಮಾಡಿ ನೋಡಬಹುದು.

**ನರಸಿಂಹ ಪುರಾಣಿಕ್,** ತಿಪಟೂರು

೨

'ಮಹಾಪ್ರಾಣಕ್ಕೆ ಹೊಕ್ಕುಳು ಸೀಳುವುದು' ಎಂಬ ಎರಡನೆಯ ಸುಳಿವಿನ ವಿಚಾರದಲ್ಲಿ ನನ್ನದೊಂದು ಸೂಚನೆ.

ಕ, ಗ, ತ ಈ ಅಕ್ಷರಗಳಿಗೆ 'ಹೊಕ್ಕುಳು' ಇಲ್ಲ. ಇವಕ್ಕೆ ಕೆಳಗಡೆ ಗೆರೆ ಎಳೆದು ಕ಼, ಗ಼, ತ಼ ಎಂದು ಬರೆದರೆ ಗೆರೆಗೂ ಅಕ್ಷರಕ್ಕೂ ಸಂಬಂಧವಿಲ್ಲದೆ, ಬರವಣಿಗೆಯಲ್ಲಿಯೂ ಮುದ್ರಣದಲ್ಲಿಯೂ ಅಕ್ಷರಗಳ ಅಂದ ಕೆಟ್ಟುಹೋಗುತ್ತದೆ. ಆದುದರಿಂದ ಕ, ಗ, ತ ಗಳಿಗೆ ಬದಲಾಗಿ ಖ, ಪ, ಢ ಎಂಬ ಅಕ್ಷರಗಳನ್ನು ರೂಢಿಗೆ ತಂದು, ಹೊಕ್ಕುಳು ಸೀಳಿ ಮಹಾಪ್ರಾಣಗಳನ್ನು ಮಾಡಿಕೊಳ್ಳಬಹುದು.

ಹೆಚ್. ಎಸ್. ಕೋನೇರಿರಾವ್, ಬೆಂಗಳೂರು

[ತಿದ್ದಿದ ಲಿಪಿಯ ವಿಚಾರವಾಗಿ ಸ್ಥಳ ಪರಸ್ಥಳಗಳ ಮಹನೀಯರು ಆಲೋಚನೆ ಮಾಡುತ್ತ ತಮ್ಮ ಅಭಿಪ್ರಾಯಗಳನ್ನು ತಿಳಿಸುತ್ತಿರುವುದಕ್ಕಾಗಿ ನಮಗೆ ಬಹಳ ಸಂತೋಷವಾಗಿದೆ. ತೆಲುಗಿನಿಂದ ಕೆಲವು ಸ್ವರಚಿಹ್ನೆಗಳನ್ನು ತೆಗೆದುಕೊಳ್ಳುವ ವಿಚಾರವೂ ಸಾಧ್ಯವಾದ ಮಟ್ಟಿಗೆ ಲಿಪಿಯಲ್ಲಿ ಏಕರೂಪತೆಯನ್ನು ಇಟ್ಟುಕೊಳ್ಳುವ ವಿಚಾರವೂ ಹಿಂದೆ ಪರ್ಯಾಲೋಚನೆಯಲ್ಲಿತ್ತು. ಈಗ ತಾತ್ಕಾಲಿಕವಾಗಿ ಎಷ್ಟು ಕಿರಿಯದಲ್ಲಿ ಸರಳವಾಗಿ ಸುಧಾರಣೆ ನಡೆಯಬಹುದೊ ಅಷ್ಟನ್ನು ಮಾತ್ರ ಪ್ರಯೋಗಕ್ಕೆ ತರುತ್ತಿದೆ. ಮುಂದೆ ತಜ್ಞರು ತಿದ್ದುಪಾಟನ್ನು ವಿವರವಾಗಿ ಪರಿಶೀಲನೆ ಮಾಡಿ ತಕ್ಕ ತೀರ್ಮಾನಕ್ಕೆ ಬರುತ್ತಾರಾದ್ದರಿಂದ ತೀರ್ಮಾನಕ್ಕೆ ಕಾಯುವುದು ಸೂಕ್ತವೆಂದು ತೋರುತ್ತದೆ.—ಸಂ.]

# ಕನ್ನಡ ನುಡಿ

**ಶುಕ್ರವಾರ, ನವೆಂಬರ್ ೨೭, ೧೯೪೨**

## ಅಕ್ಬರ್ ಚಕ್ರವರ್ತಿ

ನಾನೂರು ವರ್ಷಗಳ ಹಿಂದೆ ಹುಟ್ಟಿ, ಸಮಾನವಾದೊಂದು ಧರ್ಮದ ಮೂಲಕ ತನ್ನ ಪ್ರಜೆಗಳಲ್ಲಿ ಸಂಸ್ಕೃತಿಯ ಒಕ್ಕಟ್ಟನ್ನು ಸಾಧಿಸುವ ಮಹತ್ತರವಾದ ದೃಷ್ಟಿಯಿಂದ ಐವತ್ತು ವರ್ಷಗಳ ಕಾಲ ರಾಜ್ಯಭಾರ ಮಾಡಿ ಬಹುಮಟ್ಟಿಗೆ ಯಶಸ್ಸು ಪಡೆದು, ಪೂರ್ವ ದೇಶಗಳಿಗೆ ಮಾತ್ರವಲ್ಲದೆ, ಪಶ್ಚಿಮ ದೇಶಗಳಿಗೂ ತನ್ನ ಕೀರ್ತಿಯನ್ನು ಹರಡಿದ ಅಕ್ಬರ್ ಚಕ್ರವರ್ತಿಯ ನಾನೂರನೆಯ ವರ್ಧಂತ್ಯುತ್ಸವ ಈ ವರ್ಷ ನಮ್ಮ ದೇಶದಲ್ಲಿ ಹಲವು ಕಡೆಗಳಲ್ಲಿ ನಡೆಯಿತು. ೨೩–೧೧–೪೨ನೆಯ ಮಂಗಳವಾರ ಲಂಡನ್ನಿನಲ್ಲಿ ಬ್ರಿಟಿಷ್ ಕೌನ್ಸಿಲ್, ರಾಯಲ್ ಏಷ್ಯಾಟಿಕ್ ಸೊಸೈಟಿ, ಈಸ್ಟ್ ಇಂಡಿಯಾ ಅಸೋಸಿಯೇಷನ್ ಮತ್ತು ಇಂಡಿಯಾ ಸೊಸೈಟಿಗಳ ಆಶ್ರಯದಲ್ಲಿ ಉತ್ಸವ ನಡೆದು ಅಕ್ಬರನ ಗುಣಗಾನವಾಯಿತು. ಭಾರತ ಸಚಿವರಾದ ಶ್ರೀ. ಎಲ್. ಎಸ್. ಎಮರಿಯವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು:

“ಏಷ್ಯದಲ್ಲಾಗಲಿ ಯೂರೋಪಿನಲ್ಲಾಗಲಿ ಆಗ ಗದ್ದುಗೆಯಲ್ಲಿದ್ದ ಯಾವ ರಾಜನಲ್ಲೂ ಇರದ ಆಡಳಿತ ಕೌಶಲ, ಕಲಾ ಸಾಹಿತ್ಯ ಪ್ರೇಮ, ಗಾಢವಾದ ಧರ್ಮದೃಷ್ಟಿ ಮತ್ತು ಧರ್ಮಸಹಿಷ್ಣುತೆ ಅಕ್ಬರ್ ಚಕ್ರವರ್ತಿಯಲ್ಲಿತ್ತು. ೧೬ನೆಯ ಶತಮಾನದಷ್ಟು ಹಿಂದೆಯೆ ಇಂಥ ಹಿರಿಯ ಗುಣಗಳಿಂದ ಕೂಡಿದ್ದ ಆ ಮಹಾಜೀವಿಯ ಸತ್ಪ್ರೇರಣೆಗಳ ಪ್ರಭಾವದಿಂದ ಸಾಹಿತ್ಯ, ವರ್ಣಕಲೆ, ಸಂಗೀತ, ಶಿಲ್ಪ ಎಲ್ಲವೂ ಹೊಸ ಬೆಳವಣಿಗೆಯನ್ನು ಪಡೆದುವು. ಆದ್ದರಿಂದಲೇ ಹಿಂದುವಾಗಲಿ ಮುಸ್ಲಿಮನಾಗಲಿ ಆತನ ಆಳಿಕೆಯನ್ನು ಇಂದು ಹೆಮ್ಮೆಯಿಂದ ನೆನೆಯಬಹುದಾಗಿದೆ. ಈ ಮೇಲೆ ಹೇಳಿದ ಸುಗುಣಗಳ ಜೊತೆಗೆ ಉದಾರವಾದ ಧರ್ಮದ ಒಂದು ಕಟ್ಟುಪಾಟನ್ನು ಪ್ರಜೆಗಳು ಅನುಸರಿಸಲೆಂದು ತಳೆದ ಧರ್ಮದೀಕ್ಷೆಯಿಂದ ಜಗತ್ತಿನ ಮಹಾಪುರುಷರ ಸಾಲಿನಲ್ಲಿ ಅಕ್ಬರ್ ಒಬ್ಬನಾಗಿ ಬೆಳಗಿದ. ಆತನು ಬದುಕಿದ್ದ ಕಾಲ ರಾಜ್ಯಾಧಿಕಾರವೆಂದರೆ ನಿರಂಕುಶ ಪ್ರಭುತ್ವವೆಂಬ ಕಲ್ಪನೆ ಜೋರಾಗಿದ್ದ ಕಾಲ. ಯೂರೋಪಿನಲ್ಲಿ ಇಂಗ್ಲೆಂಡಿನಲ್ಲಾಗಲಿ ಇತರ ರಾಜ್ಯಗಳಲ್ಲಾಗಲಿ ಆಯಾ ದೇಶದ ದೊರೆಗೂ ಪೋಪ್ ಗುರುವಿಗೂ ಧರ್ಮಕ್ಷೇತ್ರದಲ್ಲಿ ಘರ್ಷಣೆ ನಡೆಯುತ್ತಿದ್ದ ಕಾಲ. ಆದರೆ ತನ್ನ ಪ್ರಜೆಗಳಿಗೆ ಸರಿಯಾದ ಧರ್ಮದ ಪಾಠ ಕಲಿಸಲು ತಾನೇ ತಕ್ಕ ಪ್ರಭುವೆಂದು ಅಕ್ಬರ್ ಬಗೆದು ಧೈರ್ಯದಿಂದ ವರ್ತಿಸಿ ಪ್ರಜೆಗಳನ್ನು ಒಲಿಸಿಕೊಂಡ. ಇಂದಿನ ಭಾರತದ ಮುಂದಿನ ಮಂಗಳಕ್ಕೆ ಅಕ್ಬರನ ನೆನಪು ಬೆಲೆಯುಳ್ಳದ್ದು. ಅಕ್ಬರನಂತೆ ಭಾರತ ಪ್ರೇಮವನ್ನು ಇತರ ಎಲ್ಲಕ್ಕಿಂತ ಮೊದಲು ಮೈಗೂಡಿಸಿಕೊಂಡು ಭಾರತೀಯ ನಾಯಕರು ದೇಶಸೇವೆ ಮಾಡಬಲ್ಲವರಾಗುವರೆಂದು ಹಾರೈಸೋಣ.”

ನವಾನಗರದ ಮಹಾರಾಜರಾದ ಜಾಂ ಸಾಹೇಬರೂ, ಇಂಗ್ಲೆಂಡಿನ ಪ್ರಸಿದ್ಧ ಕವಿಗಳಾದ ಲಾರೆನ್ಸ್ ಬಿನಿಯನ್ ಅವರೂ, ಭಾರತದ ಹೈ ಕಮಿಷನರಾದ ಸರ್ ಅಜೀಜುಲ್ ಹಖ್ ಅವರೂ ಮಾತನಾಡಿ ಅಕ್ಬರನ ಕಲಾ ಪ್ರೇಮ, ಸಹಿಷ್ಣುತೆ ಮುಖ್ಯವಾಗಿ ಹಿಂದೂಗಳನ್ನೂ ಮುಸ್ಲಿಮರನ್ನೂ ಒಕ್ಕಟ್ಟಿನಲ್ಲಿರುವಂತೆ ಆತ ಕೈಗೊಂಡ ಪ್ರಯತ್ನ ಮುಂತಾದುವನ್ನು ವಿವರಿಸಿದರು. ಶ್ರೀ. ಲಾರೆನ್ಸ್ ಬಿನಿಯನ್ ಅವರು ಟೆನಿಸನ್ ಮಹಾಕವಿ ಬರೆದ ‘ಅಕ್ಬರನ ಕನಸು’ ಎಂಬ ಕವಿತೆಯನ್ನು ನೆನೆದು ಅಕ್ಬರನ ಸೌಂದರ್ಯ ಪ್ರೇಮ ರಕ್ತಗತವಾಗಿತ್ತೆಂದೂ ಆತನು ಸಾಧಿಸಿದ ಕೆಲಸ ಬಹಳ ದೊಡ್ಡದೂ ಚಿರಸ್ಥಾಯಿಯೂ ಆದುದೆಂದೂ ಹೇಳಿದರು.

ಇಂದು ಭರತಖಂಡ ನಾನಾ ಬಗೆಯ ಸಂಕಟಗಳಿಗೆ ತುತ್ತಾಗಿದೆ. ಆ ಸಂಕಟಗಳಿಂದ ನಾಡನ್ನು ಪಾರುಮಾಡಿ, ಉದ್ಧರಿಸಬೇಕೆಂದು ನಾಯಕರು ತಮ ತಮಗೆ ತೋರಿದ ಉಪಾಯಗಳನ್ನು ಯೋಚಿಸುತ್ತಿರುವರು. ಹಿಂದೆ ಒಬ್ಬ ಅಶೋಕ, ಒಬ್ಬ ಅಕ್ಬರ್ ನಾಡನ್ನು ಮುಂದಕ್ಕೆ ತರಲು ಮಾನವ ಕಾರುಣ್ಯ ಭಾವನೆಯಿಂದ ಕೂಡಿದ ತಮ್ಮ ವಿಶಾಲವಾದ ಧರ್ಮದೃಷ್ಟಿಯೇ ತಕ್ಕ ಸಾಧನವೆಂದು ಕಂಡುಕೊಂಡು ದುಡಿದರು. ಇಂದಿಗೂ ಅವರ ಆದರ್ಶ ನಮ್ಮ ಮುಂದಿದೆ. ಮುಖ್ಯವಾಗಿ ಪ್ರಜೆಗಳಲ್ಲಿ ಪರಸ್ಪರ ಸಹನೆ ಮೈತ್ರಿ ಒಕ್ಕಟ್ಟು ಬೆಳೆದು ಪುದುವಾಳುವ ಬುದ್ಧಿ ಮೂಡಿದಲ್ಲಿ ನಾಡಿನ ಇತರ ಸಮಸ್ಯೆಗಳ ಪರಿಹಾರಕ್ಕೆ ಹಿತವಾದ ಆವರಣವೇರ್ಪಡುವುದೆಂಬುದರಲ್ಲಿ ಸಂದೇಹವಿಲ್ಲ. ಈ ಸಹನೆ ಮೈತ್ರಿ ಒಕ್ಕಟ್ಟುಗಳನ್ನು ಸಾಧಿಸಲು ಇಂದು ನಡೆಯುತ್ತಿರುವ ಹಲವರ ಪ್ರಯತ್ನಗಳಿಗೆ ಎಡರುಗಳಿಲ್ಲದಂತಾಗಿ ಎಲ್ಲ ಬಗೆಯ ನೆರವು ದೊರೆಯಲಿ. ಇದಕ್ಕಾಗಿ ಜನರಲ್ಲಿ ತಕ್ಕ ಸಾಹಿತ್ಯ ಪ್ರಚಾರವಾಗಬೇಕು. ಸಂಸ್ಕೃತಿಯ ಈ ಮುಖ್ಯ ಪ್ರಶ್ನೆಯ ವಿಚಾರವಾಗಿ, ಭಾರತದ ವಿವಿಧ ಧರ್ಮಗಳ ಪ್ರತಿನಿಧಿಗಳಾದ ಶ್ರೀ. ಎ. ಜೆ. ಅಪ್ಪಾಸಾಮಿ, ಸರ್ ಅಬ್ದುಲ್ ಖಾದಿರ್, ಶ್ರೀ. ಆರ್. ಪಿ. ಮಸಾನಿ, ಸರ್ ಸರ್ವೆಪಲ್ಲಿ ರಾಧಾಕೃಷ್ಣನ್ ಮತ್ತು ಸರ್ ಜೋಗೇಂದ್ರ ಸಿಂಗ್ ಅವರ ಲೇಖನಗಳನ್ನೊಳಗೊಂಡು, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್ಸಿನವರಿಂದ ಪ್ರಕಟವಾಗಿರುವ, ‘ಸಂಸ್ಕೃತಿಯ ಸಮಸ್ಯೆ’ (The Cultural Problem) ಎಂಬ ಕಿರಿಯ ಪ್ರಕಟನೆಯಂಥ ಸಾಹಿತ್ಯ ಭಾರತದ ಎಲ್ಲಾ ಭಾಷೆಗಳಲ್ಲೂ ಪ್ರಕಟನವಾಗುವುದು ಒಳ್ಳೆಯದು. ಜನ ಜೀವನದಲ್ಲಿ ಸಾಮರಸ್ಯವನ್ನು ಸಾಧಿಸಲು ಇಂಥ ಸಾಹಿತ್ಯವನ್ನು ಬರೆಯಲೂ ಬರಸಲೂ ಜನ ಮುಂದೆ ಬಂದು ಪುಣ್ಯ ಕಟ್ಟಿಕೊಳ್ಳಲಿ!

## ಜೀವನ ನಾಟಕದ ಆರಂಭೋತ್ಸವ

ಧಾರವಾಡದ ರೀಗಲ್ ಟಾಕೀಜದ ಒಡೆಯರಾದ ಶ್ರೀಮಾನ್ ಎಸ್. ಸಿ. ಪಾಟೀಲರು ತಾ. ೧೪–೧೧–೧೯೪೨ನೆಯ ದಿನ ‘ಜೀವನ ನಾಟಕ’ ಚಿತ್ರದ ಆರಂಭೋತ್ಸವವನ್ನು ಒಳ್ಳೆಯ ವಿಜೃಂಭಣೆಯಿಂದ ನಡಸಿದರು. ಚಿತ್ರದ ನಿರ್ಮಾತೃಗಳಾದ ಶ್ರೀ. ಗುಬ್ಬಿ ವೀರಣ್ಣನವರೂ ಸಂವಾದ ಲೇಖಕರಾದ ಶ್ರೀ. ಅ. ನ. ಕೃಷ್ಣರಾಯರೂ ಅಂದು ಮುಖ್ಯ ಅತಿಥಿಗಳಾಗಿ ಭಾಷಣ ಮಾಡಿದರು. ಪ್ರೊ. ಜಾಗಿರದಾರರು ಸಭಾಧ್ಯಕ್ಷರಾಗಿದ್ದರು. ಈ ಕನ್ನಡ ಸಾಮಾಜಿಕ ಚಿತ್ರವನ್ನು ನೋಡುವ ಉತ್ಕಟೇಚ್ಛೆಯಿಂದ ಅಸಂಖ್ಯ ಜನ ಸೇರಿದ್ದರು. ಪ್ರೊ. ಜಾಗಿರದಾರರು ಜೀವನ ನಾಟಕ ಚಿತ್ರವನ್ನು ಕೇವಲ ಕನ್ನಡ ನಾಟಕವೆಂಬ ಕಾರಣಕ್ಕಾಗಿ ಹೊಗಳಬೇಕಾಗಿಲ್ಲವೆಂದೂ ಹೊಗಳಿಕೆಗೆ ಯೋಗ್ಯವಾದ ಗುಣಗಳಿವೆ ಎಂದೂ ಹೇಳಿದರು. ಹಾಗೂ ಗುಬ್ಬಿ ವೀರಣ್ಣನವರ ಸಾಹಸವನ್ನೂ ಅವರ ಸೇವೆಯನ್ನೂ ವಿವರಿಸಿದರು.

ಅನಂತರ ಗುಬ್ಬಿ ವೀರಣ್ಣನವರು ಮಾತನಾಡಲು ಎದ್ದು ನಿಂತಾಗ ಪ್ರಚಂಡ ಕರತಾಡನದ ಉತ್ಸಾಹ ತೋರಿಬಂದಿತು. ವೀರಣ್ಣನವರು ತಮ್ಮ ನಾಟಕ ಕಂಪೆನಿ ಹಾಗೂ ಚಲನ ಚಿತ್ರ ಕಂಪೆನಿಗಳ ಮಾರ್ಮಿಕವಾದ ಅನುಭವವನ್ನು ವಿವರಿಸಿ, ಈ ಕ್ಷೇತ್ರದಲ್ಲಿ ಕನ್ನಡಿಗರ ತೊಂದರೆಗಳನ್ನು ವಿವೇಚಿಸಿದರು. ಕನ್ನಡಿಗರ ಸಹಕಾರ ಪ್ರೋತ್ಸಾಹಗಳನ್ನು ಕೋರಿ ಮುಂದೆ ‘ಮಹಾತ್ಮಾ ಬಸವೇಶ್ವರ’ ಚಿತ್ರಪಟವನ್ನು ತೆಗೆಯಬೇಕೆಂಬ ತಮ್ಮ ಆಶೆಯನ್ನು ಸೂಚಿಸಿದರು.

ಆ ಮೇಲೆ ಶ್ರೀ. ಕೃಷ್ಣರಾಯರು ‘ಜೀವನ’ ನಾಟಕದ ನಿರ್ಮಾಣಕ್ಕಾಗಿ ತಾವು ಎದುರಿಸಬೇಕಾಗಿದ್ದ ಅನನುಕೂಲಗಳನ್ನು ಸೂಚಿಸಿ

'ಜೀವನ' ನಾಟಕದಲ್ಲಿ ಕನ್ನಡಿಗರ ಕೋಡು ಮೂಡಿದೆಯೆಂದರು. ಅದಕ್ಕೆ ಕಾರಣಗಳನ್ನು ಸೂಚಿಸುತ್ತ ಸ್ವತಂತ್ರವಾದ ಹಾಗೂ ಇಂಪಾದ ಹಾಡುಗಳು, ಹಾಸ್ಯ ಶಿರೋಮಣಿ ವೀರಣ್ಣನವರ ಗಂಭೀರ ಪಾತ್ರ ನಟನೆಯ ಕೌಶಲ, ವೃಂದಾವನದಂತಹ ದೃಶ್ಯಗಳು ಇವುಗಳನ್ನು ಎತ್ತಿ ಹೇಳಿದರು.

ಕೊನೆಗೆ ಪ್ರೊ. ಮಾಳವಾಡರು ಚಲನ ಚಿತ್ರ ಪ್ರಪಂಚದಲ್ಲಿ ವೀರಣ್ಣನವರ ಪ್ರಗತಿಯನ್ನು ಸೂಚಿಸಿ 'ಜೀವನ ನಾಟಕ' ಅಭಿನಂದನಗೆ ಅರ್ಹವಾಗಿದೆಯೆಂದು ಹೇಳಿ, ಇನ್ನಿಷ್ಟು ಸರಿಯಾದ ಅವಕಾಶ ದೊರೆತರೆ ಕನ್ನಡಿಗರು ಇತರ ಪ್ರಾಂತದ ಶ್ರೇಷ್ಠ ಚಿತ್ರಪಟಗಳೊಡನೆ ಯಶಸ್ವಿಯಾಗಿ ಸ್ಪರ್ಧೆ ನಡಸಬಲ್ಲರೆಂಬ ಆಶೆಯನ್ನು ವ್ಯಕ್ತಗೊಳಿಸಿ ಅತಿಥಿಗಳೆಲ್ಲರ ಆಭಾರ ಮನ್ನಿಸಿದರು. ಚಿತ್ರಪಟ ಕನ್ನಡಿಗರಿಗೆ ಅಭಿಮಾನವನ್ನೂ ಸಂತೋಷವನ್ನೂ ಉಂಟುಮಾಡಿತು. ಇದೇ ತಾರೀಖಿಗೆ ಹುಬ್ಬಳ್ಳಿ ಬೆಳಗಾಂವಿಗಳಲ್ಲಿಯೂ ಈ ಚಿತ್ರಪಟ ಆರಂಭ ವಾಯಿತು. ಹುಬ್ಬಳ್ಳಿಯಲ್ಲಿ ಶ್ರೀಮಾನ್ ಟಿ. ಕೆ. ತುಕೋಳರು ಆರಂಭೋತ್ಸವ ನಡಸಿದರು.

— ಮಾ.

## ಪುಸ್ತಕಾವಲೋಕನ

**ಕಾಮನ ಸೋಲು**: (ಹನ್ನೆರಡು ಸಣ್ಣ ಕತೆಗಳ ಸಂಗ್ರಹ). ಬರೆದವರು: ಶ್ರೀ. ಅ. ನ. ಕೃಷ್ಣರಾಯರು. ಕಿರೀಟ ಆಕಾರದ ಅಷ್ಟಪತ್ರ. ೮+೧೩೪ ಪುಟಗಳು. ಬೆಲೆ ೧ ರೂಪಾಯಿ.

ಶ್ರೀ.ಗಳಾದ ಅ. ನ. ಕೃಷ್ಣರಾಯರ ಮತ್ತು ಮ. ನ. ಮೂರ್ತಿ ಯವರ ಸಂಪಾದಕತ್ವದಲ್ಲಿ ಹೊಸದಾಗಿ ಹೊರಟಿರುವ **ವಸಂತ ಗ್ರಂಥಮಾಲೆ**ಯ ಮೊದಲನೆಯ ಪುಸ್ತಕವೇ ಈ 'ಕಾಮನ ಸೋಲು.'

> "ಇಂದು ಕನ್ನಡಿಗರಿಗೆ ಎರಡು ಬಗೆಯ ಸಾಹಿತ್ಯ ಬೇಕು. ಮನಸ್ಸನ್ನು ಆನಂದಗೊಳಿಸಿ ಅರಳಿಸುವ ಸುಂದರ ಸರಸ ಸಾಹಿತ್ಯ. ಮನಸ್ಸನ್ನು ಎಚ್ಚರ ಗೊಳಿಸಿ ಮೇಲಕ್ಕೆತ್ತುವ ಜ್ಞಾನ ಸಾಹಿತ್ಯ. ಸಾಹಿತ್ಯದಿಂದ **ವಿಹಾರವೂ** ಆಗಬೇಕು; ವಿಕಾಸವೂ ಆಗಬೇಕು. ಇಂತಹ ಸಾಹಿತ್ಯವನ್ನು ವಸಂತ ಗ್ರಂಥಮಾಲೆ ಕನ್ನಡಿಗರಿಗೆ ಒದಗಿಸಲು ಇಚ್ಛಿಸುತ್ತದೆ."

—ಎಂದು ಪ್ರಕಾಶಕರು ಮುನ್ನುಡಿಯಲ್ಲಿ ತಿಳಿಸಿದಾರೆ. ವಸಂತ ಗ್ರಂಥಮಾಲೆ ಈ ದೃಷ್ಟಿಯಿಂದ ನಾನಾ ಬಗೆಯ ಗ್ರಂಥಗಳನ್ನು ಪ್ರಕಟಿಸುವ ಉದ್ಯಮದಲ್ಲಿ ತೊಡಗಿರುವುದು ಸಂತೋಷದ ಸಂಗತಿ.

ಮೇಲೆ ತಿಳಿಸಿರುವಂತೆ ಮಾಲೆಯ ಮೊದಲನೆಯ ಪುಸ್ತಕ ವಾದ '**ಕಾಮನ ಸೋಲು**' ಹನ್ನೆರಡು ಸಣ್ಣ ಕತೆಗಳನ್ನು ಒಳ ಗೊಂಡಿದೆ. ಇವುಗಳಲ್ಲಿ **ಸ್ವರ್ಗಸುಖ, ರೆವರೆಂಡ್ ಡಾ. ರಂಗಸ್, ಸ್ಮರಣ** ಮತ್ತು **ರುದ್ರಪ್ಪ** ಒಂದು ಗುಂಪು; **ಗಂಗವ್ವನ ಆಶೆ, ಸಾಹಿತ್ಯ ಸಾರ್ವಭೌಮ** ಮತ್ತು **ಕಾಮನ ಸೋಲು** ಇನ್ನೊಂದು ಗುಂಪು: **ಯಾರ ಅನ್ನ ಯಾರ ಕಯ್ಯಲ್ಲಿ, ಆ ನನ್ನ ತಂಗಿ, ಬೆಲೆ ಕಟ್ಟುವವರು ಯಾರು** ಮತ್ತು **ಆಚಾರ್‍ರ ಮದುವೆ** ಮತ್ತೊಂದು ಗುಂಪು. ಈ ಗುಂಪುಗಳ ರೀತ್ಯಾ ಕತೆಗಳನ್ನು ಮೇಲು, ಸಾಮಾನ್ಯ ಮತ್ತು ಬೀಳು ಎಂದು ವಿಂಗಡಿಸಬಹುದಾಗಿದೆ.

**ಸ್ವರ್ಗ ಸುಖ** ಒಂದು ಹೊಸ ಮಾದರಿಯ ಕತೆ. ಎಣೆ ಯಿಲ್ಲದ ಸುಖಾನುಭವವನ್ನು ಸ್ವರ್ಗಸುಖ ಎನ್ನುವುದು ವಾಡಿಕೆಯ ಮಾತು. ಆದರೆ ನಿಜವಾಗಿ ಸ್ವರ್ಗಕ್ಕೆ ಹೋಗಿ ಪಾಡುಪಟ್ಟು ಪರಾರಿಯಾಗುವ ವ್ಯಕ್ತಿಯ ಒಂದು ಅನುಭವ ಚಿತ್ರ ಈ ಕತೆಯಲ್ಲಿ ಬಂದಿದೆ. ಇದು ಒಳ್ಳೆಯ ಕತೆಯಾಗಿರುವುದರ ಜೊತೆಗೆ ಸೊಗಸಾದ ವ್ಯಂಗ್ಯಚಿತ್ರವೂ ಆಗಿದೆ. ಊಹೆ ಇಲ್ಲಿ ಚಮತ್ಕಾರವಾದ ಕೆಲಸ ವನ್ನೆ ಮಾಡಿದೆ ಎನ್ನಬೇಕು. **ರೆವರೆಂಡ್ ಡಾ. ರಂಗಸ್** ಉತ್ತಮ ವಾದ ಒಂದು ಕತೆ. ಹೊಲೆಯರ ಹೈದ ರಂಗ ರೆವರೆಂಡ್ ಡಾ. ರಂಗಸ್ ಆಗಿ ಪ್ರಸಿದ್ಧಿಗೆ ಬರುವುದಕ್ಕೆ ಸನಾತನ ಧರ್ಮಪರಾಯಣ ರಾದ ಶ್ಯಾಮಾಶಾಸ್ತ್ರಿಗಳು ಹೇಗೆ ಪರೋಕ್ಷವಾಗಿ ಕಾರಣರಾಗು ತ್ತಾರೆ ಎಂಬುದು ಈ ಕತೆಯಲ್ಲಿ ಹೃದಯಂಗಮವಾಗಿ ಚಿತ್ರಿತ ವಾಗಿದೆ. **ಸ್ಮರಣ** ಎಂಬುದು ಎಂದೋ ಕಳೆದುಕೊಂಡ ಮೋಹದ ಬೊಮ್ಮಗಳ ರೂಪವನ್ನು ಭಿಕ್ಷುಕಿಯೊಬ್ಬಳಲ್ಲಿ ಕಂಡು ಭ್ರಾಂತಿ ಪಡುವ ಮುದುಕಿಯ ಕರುಣಾವ್ಯಂಜಕ ಕತೆ. ಮಾನಸಿಕ ಪ್ರಪಂಚದ ನೂರು ವಿಚಿತ್ರ ವಿಭ್ರಾಂತಿಗಳನ್ನು ಈ ಕತೆ ಪರಿಣಾಮ ಕಾರಿಯಾಗಿ ಚಿತ್ರಿಸುತ್ತದೆ. **ರುದ್ರಪ್ಪ** ಬಾಳ ಬೇಗುದಿಗೆ ಸಿಕ್ಕಿ ಬೆಂದ ಒಬ್ಬಾತನ ಕತೆ. ಅವನ ಬಾಳಿನಲ್ಲಿ ನೋವು ನಲವುಗಳು ಆಡುವ ಆಟ, ಅವುಗಳ ಕಹಿಸಿಹಿ ಮತ್ತು ಪರಿಣಾಮ ಎಂಥವೆಂಬುದನ್ನು ಈ ಕತೆಯಲ್ಲಿ ಕಾಣಬಹುದು. ಕತೆಗಾರಿಕೆಯಲ್ಲಿ, ರೀತಿಯಲ್ಲಿ ಕೌಶಲ ವೇನೂ ಇಲ್ಲದಿದ್ದರೂ ರುದ್ರಪ್ಪನ ವಿಷಯದಲ್ಲಿ ಸಹಾನುಭೂತಿ, ಅವನ ಸ್ಥಿತಿಗೆ ಮರುಕ ಹುಟ್ಟಿ ಪರಿಣಾಮದಲ್ಲಿ ಕತೆ ಮನಸ್ಸಿಗೆ ಹಿಡಿ ಯುತ್ತದೆ. ಆದರೆ ಕತೆಗೆ ಆ ಹೆಸರು ಒಪ್ಪುವಂತೆ ಕಾಣುವುದಿಲ್ಲ.

ಇನ್ನು ಸಾಮಾನ್ಯ ವರ್ಗದ ಕತೆಗಳಲ್ಲಿ ಕೆಲವು ಕಡೆ ಸ್ವಾರಸ್ಯದ ಸುಳಿವು, ಮಿಂಚಿನ ಹೊಳವು ಇದೆ. ಆದರೆ ಜಾಜ್ವಲ್ಯವಾಗಿ ನಿಂತು ಹೊಳೆಯುವ ತಾರೆಗಳಾವವೂ ಕಂಡುಬರುವುದಿಲ್ಲ. ಒಂದು ಚಿತ್ರ, ಒಂದು ಸನ್ನಿವೇಶ, ಒಂದು ಚಮತ್ಕಾರ, ಒಂದು ರೀತಿ ಅಲ್ಲಲ್ಲೆ ಮನಸ್ಸನ್ನು ಮುಟ್ಟಬಹುದು. ಆದರೆ ಯಾವುವೂ ಹೃದಯ ವನ್ನು ಕಲಕುವಂಥವಲ್ಲ; ಪ್ರಭಾವಕಾರಿಯಾಗಿ ನಿಲ್ಲುವಂಥವಲ್ಲ.

**ಯಾರ ಅನ್ನ ಯಾರ ಕಯ್ಯಲ್ಲಿ** ಬರಿಯ ಒಂದು ಚಿತ್ರ. ಈ ಕತೆ ಓದುಗರ ಮನಸ್ಸಿನ ಮೇಲೆ ಯಾವ ಒಂದು ಪರಿಣಾಮ ವನ್ನು ಉಂಟುಮಾಡಬೇಕೆಂದು ಕತೆಗಾರರು ಬಯಸಿದಾರೊ ಆ ಪರಿಣಾಮ ಆಗುವುದಿಲ್ಲ. ಕತೆ ಓದಿದ ಮೇಲೆ ಏನೋ ಬೇಕು ಅನ್ನಿಸುತ್ತದೆ. ಇದಕ್ಕೆ ಕಾರಣ ಕಥನಕ್ರಿಯೆಗೆ ಊನ ಬಂದಿರು ವುದೇ. ಕಥನ ರೀತಿ ಚೆನ್ನಾಗಿದೆ, ನಡೆ ಚೆನ್ನಾಗಿದೆ. ಆದರೆ ಇದೆಲ್ಲಾ ಮುಕ್ಕಾಲು ದಾರಿ ನಡೆದು ಎಲ್ಲೋ ನಿಂತು ಕುಸಿದಂತಿದೆ. ಇದಕ್ಕೆ ಕತೆಯ ಜೀವ ಇದ್ದರೂ ಕತೆಯ ಕಸುವು ಇಲ್ಲ; ಮೈ ಇಲ್ಲ; ಬೆಳವಣಿಗೆ ಇಲ್ಲ; ಊಹೆಯ-ಸ್ವಲ್ಪ ಸನ್ನಾಹವಿದ್ದಿದ್ದರೆ ಇದು ಹದ ವುಳ್ಳ ಕತೆಯಾಗುತ್ತಿತ್ತು ಎಂದು ಹೇಳಬಹುದು. **ಆಚಾರ್‍ರ ಮದುವೆ** ಒಂದು ಅವಹೇಳನದ ಪ್ರಸಂಗ. ಆಚಾರ್‍ರ ವ್ಯಕ್ತಿತ್ವ ವನ್ನು ವ್ಯಂಗ್ಯವಾಗಿ ಚಿತ್ರಿಸುವುದರಿಂದ ಯಾರಿಗೂ ನಷ್ಟವಿಲ್ಲ. ಆದರೆ ಆತ ನೆಮ್ಮಿರುವ ಧರ್ಮ, ಪೂಜಿಸುವ ದೈವ, ಧರಿಸುವ ಜಾತಿಲಾಂಛನ ಇವುಗಳನ್ನು ಹೀಯಾಳಿಸುವುದು ಯುಕ್ತವಲ್ಲ. ಅಡಿಗಡಿಗೆ ಹಾಳು ಹನುಮಂತರಾಯನ ಗುಡಿ ಎನ್ನುವುದೇನು? ಹನುಮಂತರಾಯನಿಗೆ ಸತ್ತ ಹಾವುಗಳ ಮಾಲೆ ಹಾಕಿಸುವುದೇನು? ಆಚಾರ್‍ರ ಅಂಗಾರ ಅಕ್ಷತೆಗಳು ಅಜ್ಞಾನದ ಸಂಕೇತ ಎನ್ನುವು ದೇನು? ಆ ಕೋತಿ ಮುಖದ ದೇವರಿಗೆ ದಯಬರಲಿಲ್ಲ ಎಂದು ಹಳಿಯುವುದೇನು?—ಇದು ಒಳ್ಳೆಯ ಬರವಣಿಗೆಯಲ್ಲ. ದೈವ ಧರ್ಮ ಶ್ರದ್ಧೆ ಭಕ್ತಿ ಆಚಾರ ವಿಚಾರಗಳ ಈ ಭರ್ತ್ಸನೆ ಅವಿವೇಚ ನೆಯ ಫಲ ಎಂದು ತೋರುತ್ತದೆ. ಕತೆಗಾರರ ಮಾತಿನಲ್ಲೇ ಹೇಳುವುದಾದರೆ, "ದೋಷ ಧರ್ಮದ್ದಲ್ಲ, ಧರ್ಮದ ಅಪಾರ್ಥ ಮಾಡುವ ಕೆಲವು ಜನರದು" (ಪು. ೧೧೫) ಎಂದು ಹೇಳಿದರೆ ಸಾಕಾಗಿದೆ.

ಪುಸ್ತಕದಲ್ಲಿ ಕೆಲವು ತಪ್ಪುಗಳಿವೆ. 'ರುದ್ರಪ್ಪ' ಕತೆಯಲ್ಲಿ ಒಂದು ವಾಕ್ಯಬರುತ್ತದೆ: ಕಾವ್ಯಗಳಲ್ಲಿ ವಿದೂಷಕನನ್ನು ಸೃಷ್ಟಿ ಮಾಡಿ ಹಾಸ್ಯರಸ ಪ್ರತಿಪಾದನೆ ಮಾಡಿದೆವೆಂದು ಭುಜ ಚಪ್ಪರಿಸಿ ಕೊಳ್ಳುತ್ತಿದ್ದ ಕಾಳಿದಾಸ, ಭವಭೂತಿ, ಶ್ರೀಹರ್ಷಾದಿ ಕವಿಗಳು . . . ." (ಪು. ೩೯). ಭವಭೂತಿ ಕರುಣ ರಸಕ್ಕೆ ಪ್ರಸಿದ್ಧನೆಂಬುದು ಎಲ್ಲರಿಗೂ ತಿಳಿದಿರುವ ವಿಚಾರ. ಹಾಸ್ಯರಸದ ಮಾತನ್ನೆ ತನಿ ಯಾಗಿ ಎತ್ತಿ ಆಡುವಾಗ ಹೆಸರಿಸಬಹುದಾದ ಇತರ ಕವಿಗಳು ಇದಾರಲ್ಲವೆ? ಆದ್ದರಿಂದ ಇಂಥ ಹೇಳಿಕೆಗಳನ್ನು ಮಾಡು ವಾಗ ಜಾಗರೂಕತೆ ಇದ್ದರೆ ಒಳ್ಳೆಯದಲ್ಲವೆ? ಇನ್ನು ಇದರ ಜೊತೆಗೆ ಅನ್ಯಾದೃಶ್ಯ, ಅಸ್ತಿಪಂಜರ, ತಮ್ಮ ಸ್ವಗ್ರಾಮ, ವನದ ವನಜ್ಯೋತ್ಸ್ನೆ ಇವೇ ಮುಂತಾದ ವ್ಯಾಕರಣಕ್ಕೂ ಭಾಷಾ ಮರ್ಯಾದೆಗೂ ವಿರುದ್ಧವಾದ ಪ್ರಯೋಗಗಳೂ ಇವೆ. ಅಲ್ಲದೆ

ಅನೇಕ ಕಡೆ ಬರುವ ವರ್ಣನೆಗಳು ಆಡಂಬರವಾಗಿ, ಕೃತಕವಾಗಿ ಕಾಣುತ್ತವೆ. (ಉದಾ: ಪು. ೫೭). ಅಲ್ಲಲ್ಲಿ ಕೆಲವು ಅಚ್ಚಿನ ತಪ್ಪುಗಳೂ ಉಳಿದುಕೊಂಡಿವೆ.

ಪುಸ್ತಕ ಮುದ್ದಾಗಿ ಅಚ್ಚಾಗಿದೆ: ಒಳ್ಳೆಯ ಕಾಗದ; ಹೊರ ಹೊದಿಕೆ ರಮ್ಯವಾಗಿದೆ; ಮನಸ್ಸಿಗೆ, ಕಣ್ಣಿಗೆ ಹಿತವಾಗಿದೆ. ಈ ಕಾಲದಲ್ಲಿ ಇಷ್ಟು ಅಂದವಾಗಿ ಪುಸ್ತಕ ಪ್ರಕಟಿಸುವುದು ಸಾಹಸದ ಕೆಲಸವೇ ಸರಿ. ವಸಂತ ಗ್ರಂಥಮಾಲೆ ನಾಲ್ಕು ಕಾಲ ನಿಲ್ಲುವಂಥ ಗ್ರಂಥಗಳನ್ನು ಪ್ರಕಟಿಸಿ ಧನ್ಯವಾಗಲಿ; ಮಾಲೆಗೆ ಜನರ ಬೆಂಬಲ ಒದಗಿಬರಲಿ—ಎಂದು ಹಾರಯಿಕೆ.

—ಭಾ. ಪ್ರಿ.

## ಪರಿಷತ್ತಿನ ಸುದ್ದಿ

### ಮಹಿಳಾ ಶಾಖೆ

**ನಾಟಕ ವಾಚನ**

ತಾ. ೨೧–೧೧–೧೯೫೩ನೆಯ ಶನಿವಾರ ಸಂಜೆ ಶ್ರೀಮತಿ ಎ. ಶೇಷಮ್ಮನವರು ತಾವು ರಚಿಸಿರುವ 'ಮುಗ್ಧೆ' ಎಂಬ ಏಕಾಂಕ ನಾಟಕವನ್ನು ಓದಿದರು. ಶ್ರೀಮತಿ ಚಂಪಾಬಾಯಿ, ಎಂ.ಎ. ಅವರು ಅಧ್ಯಕ್ಷತೆ ವಹಿಸಿದ್ದರು. ಅಧ್ಯಕ್ಷರು ಶ್ರೀಮತಿ ಶೇಷಮ್ಮನವರ ಹಸನು ಬಾಳುವೆಯನ್ನು ಕೊಂಡಾಡಿ, ಕನ್ನಡ ಲಾವಣಿ ನಾಟಕ ರಚನೆಗಳಲ್ಲಿ ಪಳಗಿರುವ ಅವರ ಕೈಯ ನಯ 'ಮುಗ್ಧೆ'ಯ ಪಾತ್ರನಿರೂಪಣೆಯಲ್ಲಿ ಚೆನ್ನಾಗಿ ಕಾಣುವುದೆಂದು ತಿಳಿಸಿದರು.

ಹುಟ್ಟು – ಸಾವು, ಸುಖ – ದುಃಖ ದ್ವಂದ್ವಗಳು ಹವ್ವಳ ಪ್ರಥಮಾಪರಾಧದಿಂದ ನರಜನ್ಮದ ಬೆನ್ನಹತ್ತಿದವೆಂದು ಬೈಬಲಿನ ಆದಿಕಾಂಡದಲ್ಲಿ ವಿವರವಾಗಿರುವ ವಿಷಯ 'ಮುಗ್ಧೆ' ನಾಟಕದ ವಸ್ತು.

ಸೃಷ್ಟಿಕರ್ತನು ತನ್ನ ಲೀಲೆಗೆಂದು ತನ್ನ ರೂಪವನ್ನು ಹೋಲುವ ಮಣ್ಣಿನ ಆಕಾರವನ್ನು ಮಾಡಿ ಅದಕ್ಕೆ ಜೀವಕಳೆ ಕೊಟ್ಟು ಆದಮ ಎಂಬ ಮನುಷ್ಯನನ್ನು ನಿರ್ಮಿಸಿದನು. ಒಂಟಿ ಬಾಳು ಬೇಸರವೆಂದು ದೇವನು ಆದಮನ ಪಕ್ಕೆಲಬೊಂದನ್ನು ತೆಗೆದು ಅದರಿಂದ ಹವ್ವಾ ಎಂಬ ಸರ್ವ ಲಕ್ಷಣ ಸಂಪನ್ನೆಯಾದ ಹೆಣ್ಣನ್ನು ತಿದ್ದಿದನು. ಭೂಮಂಡಲದಲ್ಲಿ ಈ ನೂತನ ದಂಪತಿಗಳ ವಾಸಕ್ಕಾಗಿ 'ಇಡನ್' ನಂದನವನ ಸಜ್ಜಾಯಿತು. ಇವರ ನಿತ್ಯ ಸುಖವನ್ನು ನೋಡಿ ಜಗದೀಶ್ವರನ ಸಂತೋಷ ಇನ್ನೂ ವೃದ್ಧಿಯಾಯಿತು. ತನ್ನ ಅಹಂಕಾರಕ್ಕಾಗಿ ನರಕವನ್ನನುಭವಿಸುತ್ತಿದ್ದ ಲೂಸಿಫರ್ ದೇವದಾಸನಿಗೆ ಇದು ಸಹಿಸಲಿಲ್ಲ. ಹೇಗಾದರೂ ದೇವನ ಸಮ್ಮಾನಕ್ಕೆ ಊನ ತರಬೇಕೆಂದು ಇವನ ಹೊಂಚು. ಇದಕ್ಕೆ ಇವನು ಬಹಳ ಕಷ್ಟಪಡಬೇಕಾಗಲಿಲ್ಲ. ಹರೆಯದ ಹವ್ವಳನ್ನು ಮಾತಿನ ಮಾಲೆಗಳಿಂದ ವಂಚಿಸಿ ಇದನ್ನು ಸಾಧಿಸುತ್ತಾನೆ. ಈ ಎಳೆಯಳ ಪತಿ ಆದಮ ಜಡ; ಯಾವಾಗಲೂ ನಿದ್ರೆ ಮಾಡುತ್ತಿದ್ದನು. ತಂದೆ ಜಗದೀಶ ಸೃಷ್ಟಿಕಾರ್ಯದಲ್ಲಿ ಮಗ್ನನಾಗಿ ಬಿಡುವಾದಾಗ ಮಾತ್ರ ಇಡನ್ನಿಗೆ ಬರುತ್ತಿದ್ದನು. ಹವ್ವಳಿಗೆ ಸ್ವಲ್ಪ ಬೇಸರ, ಚಿತ್ತ ಬಹಳ ಚಂಚಲ. ತಿನ್ನಕೂಡದೆಂದು ದೇವರು ಆಜ್ಞೆಮಾಡಿದ ಜ್ಞಾನವೃಕ್ಷದ ಫಲವನ್ನು ತಿನ್ನಬೇಕೆಂದು ಇವಳಿಗೆ ಆಸೆ. ಆದರೆ ಅದನ್ನು ಮುಟ್ಟಲು ಧೈರ್ಯವಿಲ್ಲ. ಲೂಸಿಫರ್ ಸರ್ಪವೇಷಧಾರಿಯಾಗಿ ನಂದನ ವನಕ್ಕೆ ಒಂದು ವಾವೆಯಲ್ಲಿ ಹವ್ವಳಿಗೆ ತಾನು ಅಣ್ಣನಾಗಬೇಕೆಂದು ಈಕೆಗೆ ಹೇಳಿ ಇಲ್ಲದ ಸಲ್ಲದ ವಿಶ್ವಾಸವನ್ನು ತೋರಿ ಇವಳೊಡನೆ ಸ್ನೇಹ ಬೆಳಸುವನು. ಲೂಸಿಫರ್ ಕೇಡಿ; ಅವನ ಸಹವಾಸ ಬೇಡವೆಂದು ವನದ ಹಂಸಮಯೂರಗಳು ಹವ್ವಳನ್ನು ಎಚ್ಚರಿಸುವರು. ಆದರೆ ಹವ್ವಳು ಲೂಸಿಫರಿನ ಬೆಡಗು ಬಿನ್ನಾಣಗಳಿಗೆ ಮೋಸ ಹೋಗಿ ಅವನ ಸುಳ್ಳುಪೊಳ್ಳು ಮಾತುಗಳನ್ನು ನಂಬಿ ಜ್ಞಾನವೃಕ್ಷದ ಹಣ್ಣನ್ನು ತಿಂದೇ ಬಿಡುವಳು. ಮುಗ್ಧೆ ಮತಿವಂತೆಯಾಗುವಳು. ಇದರ ಹಿಂದೆಯೇ ಅವಳಿಗೆ ತಂದೆಯ ಕಟ್ಟಾಜ್ಞೆ ಮೀರಿದ ಪಾಪಕ್ಕೆ ಪಶ್ಚಾತಾಪ. ಈ ಪಾಪಕ್ಕಾಗಿ ಇನ್ನು ಮುಂದೆ ಒದಗುವ ಕಷ್ಟ ಪರಂಪರೆಗಳಿಗೆ ಬಹಳ ವ್ಯಥೆಪಡುವಳು. ಲೂಸಿಫರ್ ತನ್ನ ಕಾರ್ಯಸಾಧನೆಯಾಯಿತೆಂದು ಹಿಗ್ಗುವನು. ಇಲ್ಲಿಗೆ ನಾಟಕ ಮುಕ್ತಾಯವಾಗುವುದು.

**ನಾಟ್ಯ, ಉಪನ್ಯಾಸ**

ತಾ|| ೨೯–೧೧–೫೩ನೆಯ ಭಾನುವಾರ ಸಂಜೆ ೫–೩೦ಕ್ಕೆ ಶ್ರೀ. ಯು. ಎಸ್. ಕೃಷ್ಣರಾವ್ ಮತ್ತು ಅವರ ಶಿಷ್ಯ ಮಂಡಲಿಯವರಿಂದ **ಭರತನಾಟ್ಯ ಪ್ರದರ್ಶನ** ಮತ್ತು **ಉಪನ್ಯಾಸ** ನಡೆಯುತ್ತವೆ.

ಶ್ರೀಮತಿ ಎಚ್. ವಿ. ಸೀತಮ್ಮನವರು ಅಧ್ಯಕ್ಷತೆ ವಹಿಸುತ್ತಾರೆ.

**ಗಾಯನ ಸ್ಪರ್ಧೆಗಳು**

೨೯–೧೧–೫೩ನೆಯ ಭಾನುವಾರ ಬೆಳಗ್ಗೆ ೯ ಗಂಟೆಗೆ **ಗಾಯನ ಸ್ಪರ್ಧೆಗಳು** ನಡೆಯುತ್ತವೆ.

ಶ್ರೀಮತಿ ಎಸ್. ವೆಂಗಡಮ್ಮನವರು, ಮಿಸೆಸ್ ಟಿ. ಜಿ. ರಾಮಯ್ಯರ್ ಅವರು, ಸಂಗೀತ ವಿದುಷಿ ಶ್ರೀಮತಿ ಜಿ. ಚೆನ್ನಮ್ಮನವರು ಪರೀಕ್ಷಕರುಗಳಾಗಿರಲು ದಯಮಾಡಿ ಒಪ್ಪಿರುತ್ತಾರೆ.

ಸ್ಪರ್ಧಿಗಳೆಲ್ಲರೂ ದಯಮಾಡಿಸಬೇಕಾಗಿ ಪ್ರಾರ್ಥನೆ.

## ಕನ್ನಡ ಸುದ್ದಿ

### ದಿವಂಗತ ವಿನಾಯಕ ಬಾಬಾಜಿ ಜೋಶಿ ಅವರು

**ಸಂತಾಪಸೂಚಕ ಸಭೆ**

ಶ್ರೀ. ವಿನಾಯಕ ಬಾಬಾಜಿ ಜೋಶಿಯವರ ನಿಧನದ ಬಗ್ಗೆ ದುಃಖವನ್ನು ಪ್ರದರ್ಶಿಸಲು ಶ್ರೀ. ಚಾಮರಾಜ ಮಂದಿರದಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘದ ಪರವಾಗಿ ೧೫–೧೧–೫೩ನೆಯ ದಿನ ಸಭೆ ಕೂಡಿದ್ದಿತು. ಶ್ರೀ. ಆಲೂರ ವೆಂಕಟರಾಯರು ಅಧ್ಯಕ್ಷತೆ ವಹಿಸಿದ್ದರು.

ಶ್ರೀ. ಆಲೂರ ಅವರು ಪ್ರಾಸ್ತಾವಿಕವಾಗಿ ಮಾತನಾಡುತ್ತ, ದಿವಂಗತರಾದ ವಿನಾಯಕರಾಯರ ಕಾರ್ಯ ತತ್ಪರತೆ, ಸಮಯನಿಷ್ಠೆ, ಉಜ್ವಲ ರಾಷ್ಟ್ರಾಭಿಮಾನ ಇವುಗಳನ್ನು ಹೊಗಳಿ ದುಃಖ ಸೂಚನೆಯ ಗೊತ್ತುವಳಿಯನ್ನು ಸಭೆಯ ಮುಂದೆ ಇರಿಸಿದರು.

ಶ್ರೀಮಾನ್ ಹನುಮಂತರಾವ್ ದೇಶಪಾಂಡೆಯವರು ಗೊತ್ತುವಳಿಯನ್ನು ಅನುಮೋದಿಸುತ್ತ, ದಿವಂಗತ ವಿನಾಯಕರಾಯರ ಜ್ಞಾನ ಪಿಪಾಸೆಯನ್ನು ಹೊಗಳಿ ಅವರ ಸ್ಮಾರಕವೆಂದು ಧಾರವಾಡದಲ್ಲಿ ಉತ್ತಮ ತರಗತಿಯ ಒಂದು ವಾಚನಾಲಯ ಸ್ಥಾಪಿಸುವದು ವಿಹಿತವೆಂದು ಅಭಿಪ್ರಾಯಪಟ್ಟರು.

ಶ್ರೀಮಾನ್ ದ. ರಾ. ಬೇಂದ್ರೆಯವರು ದಿವಂಗತರು ಕಾಲಾಧೀನರಾಗುವ ೮–೧೦ ಧಿನಗಳ ಹಿಂದೆ ನಾನು ಅವರನ್ನು ಕಂಡಾಗ್ಗೆ ಅವರು ಹೇಳಿದುದು ಇದು: 'ಮರ್ಹಾಟರು ಕನ್ನಡದಿಂದ ಬೇರೆ ಅಲ್ಲ. ಕರ್ನಾಟಕ ಮತ್ತು ಮಹಾರಾಷ್ಟ್ರಗಳಲ್ಲಿ ನೆಲಸಿರುವ ಜನರು ಒಂದು ಕುಲದವರು ಎಂದು ನನಗೆ ಹೊಳೆಯುತ್ತಿದೆ. ಇದಕ್ಕಾಗಿ ಈ ಎರಡು ಭಾಗಗಳವರ ಕುಲಾಚಾರ ಸಂಪ್ರದಾಯಗಳನ್ನು ವಿವರಗಳನ್ನು ಕಲೆಹಾಕಿದ್ದೇನೆ. ಅವುಗಳನ್ನು ಹೊಂದಿಸುವದು ಉಳಿದಿದೆ. ಇದಾದರೆ, ಈ ಎರಡು ಜನಗಳಲ್ಲಿ ಒಂದೇ ಭಾವ ನೆಲಸುವದು.' ಕಡೆಯ ಬೆಟ್ಟಿಯಲ್ಲಿ ಈ ಮಾತನ್ನು ಹೇಳುವಾಗ 'ಕರ್ನಾಟಕದ ಸಲುವಾಗಿ ತಾವು ಮಾಡಬೇಕಾದುದು ಇನ್ನೂ ಇದೆ ಎಂದು ಅವರು ಯೋಚಿಸುತ್ತಿದ್ದರು' ಎಂದು ನನಗೆ ಅನ್ನಿಸಿತು. ಇಂತಹ ವ್ಯಕ್ತಿ ಕಣ್ಮರೆಯಾದುದು ದುರ್ದೈವವೇ ಎಂದು ಹೇಳಿ ಶಾಂತಿಯನ್ನು ಕೋರಿದರು.

ಕರ್ನಾಟಕ ಇತಿಹಾಸ ಮಂಡಲದ ಪರವಾಗಿ ಶ್ರೀ. ಎನ್. ಎಸ್. ಕಮಲಾಪೂರ ಅವರು ದುಃಖಸೂಚಕ ಗೊತ್ತುವಳಿಗೆ ಮಂಡಲದ ಅನುಮತಿಯನ್ನು ತಿಳಿಸಿದರು.

ಅಧ್ಯಕ್ಷರು ಸಮಾರೋಪಣ ಮಾಡಿದ ನಂತರ ಅಧ್ಯಕ್ಷರೂ ಸಭಿಕರೂ ಎದ್ದು ನಿಂತು ದುಃಖವನ್ನು ಸೂಚಿಸಿದ ಮೇಲೆ ಸಭೆ ಕೊನೆಗೊಂಡಿತು.

೬೪೬—೧೯೫೩ ಮುದ್ರಣಕಾರರು:- ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

## ಅನುಕೂಲ ದಾಂಪತ್ಯ

(ಬರೆದವರು: ಶ್ರೀ. ಡಿ. ಆರ್. ರಾಮಯ್ಯ, ಬಿ.ಎ., ಬೆಂಗಳೂರು)

೧

ಸ್ತ್ರೀಪುರುಷರ ಪರಸ್ಪರ ಪ್ರೇಮ ಸ್ವಭಾವಸಿದ್ಧವಾದುದು. ಒಂದಲ್ಲ ಇನ್ನೊಂದು ರೀತಿಯಲ್ಲಿ ಹೆಣ್ಣು ಗಂಡುಗಳು ತಮ್ಮ ತಮ್ಮ ಪ್ರೇಮ ವನ್ನು ಪರಸ್ಪರ ವ್ಯಕ್ತಪಡಿಸಿಕೊಳ್ಳುವುದನ್ನು ನಾವು ಕಾಣಬಹುದು. ಹೀಗಿದ್ದರೂ ದಾಂಪತ್ಯ ಎಂಬ ಒಂದು ಪವಿತ್ರ ಮಾರ್ಗ ಮನುಷ್ಯರಿಗೆ ಸಲ್ಲತಕ್ಕುದಾಗಿದೆಯೇ ವಿನಾ ಇನ್ನಿತರ ಪ್ರಾಣಿಗಳಿಗೆ ಅದು ಸಲ್ಲತಕ್ಕು ದಲ್ಲ. ಆದರೆ ಇಷ್ಟು ಹೇಳಬಹುದು:

ಪಶು ಪಕ್ಷಿ, ಕ್ರಿಮಿ ಕೀಟಗಳಲ್ಲಿಯೂ ಸಹ ಉತ್ತಮ ವರ್ಗಕ್ಕೆ ಸೇರಿದ ಪ್ರಾಣಿಗಳಲ್ಲಿ ಎಂದರೆ, ಸಿಂಹ, ಗರುಡ ಇಂಥವುಗಳಲ್ಲಿ ತಕ್ಕ ಮಟ್ಟಿಗೆ ದಾಂಪತ್ಯದ ಒಂದು ಸುಳಿವು ಕಾಣುತ್ತದೆ. ಎಂದರೆ, ಒಂದು ಹೆಣ್ಣನ್ನು ಒಂದು ಗಂಡೂ, ಒಂದು ಗಂಡನ್ನು ಒಂದು ಹೆಣ್ಣೂ ಅವು ಆಶ್ರಯಿಸಿರುತ್ತವೆ. ಅನ್ಯರ ಸಂಪರ್ಕವೆಂದರೆ ಅವು ಸಹಿಸಲಾರವು. ಕೀಳು ದರ್ಜೆಯ ಪ್ರಾಣಿಗಳಲ್ಲಿ ಮಾತ್ರ ದಾಂಪತ್ಯದ ಗಂಧವೇ ಇರುವುದಿಲ್ಲ. ಅವು ಸರ್ವ ಸ್ವಾತಂತ್ರ್ಯದಿಂದ ಬಾಳನ್ನು ನೀಗುತ್ತವೆ. ಅಂತು ಯಾವ ಪ್ರಾಣಿಯೇ ಆಗಲಿ ಪ್ರೇಮದ ನೆರಳಿನಲ್ಲಿ ಆತ್ಮ ತೃಪ್ತಿಯ ಮತ್ತು ವಂಶಾಭಿವೃದ್ಧಿಯ ಮಹತ್ಕಾರ್ಯವನ್ನು ನೆರವೇರಿಸಿ ಕೊಳ್ಳುತ್ತದೆ.

ಒಟ್ಟಿನಲ್ಲಿ ಪ್ರೇಮವಿಲ್ಲದೆ ದಾಂಪತ್ಯವಿಲ್ಲ!

ಹಾಗೆಂದಮೇಲೆ ದಾಂಪತ್ಯ ಎಂಬ ಪವಿತ್ರ ಮಾರ್ಗದಲ್ಲಿ ಕಾಲಿಟ್ಟ ಮನುಷ್ಯನು ಪ್ರೇಮವನ್ನು ಬಿಟ್ಟು ಬದುಕುವುದು ಕಷ್ಟ. ಆದರೆ, ಪ್ರೇಮ ಯಾರಲ್ಲಿರಬೇಕು? ಗಂಡಸಿನಲ್ಲಿರಬೇಕೆ ಅಥವಾ ಹೆಂಗಸಿನಲ್ಲಿರ ಬೇಕೆ? ಇದೀಗ ಕಠಿಣವಾದ ಪ್ರಶ್ನೆ. ಈ ಪ್ರಶ್ನೆಗೆ ಸಮಾಜದಲ್ಲಿ ಬೇರೆಬೇರೆ ಉತ್ತರಗಳನ್ನು ಕೊಡುವವರಿದ್ದಾರೆ. ಆದರೆ ಸರಿಯಾದ ಉತ್ತರ ಒಂದೇ ಒಂದು. ಅದು ನಮ್ಮಲ್ಲಿಯೇ ಇದೆ. ಅದರ ಸಲುವಾಗಿ ಗುಡಿಗೋಪುರಗಳನ್ನು ಸುತ್ತಬೇಕಾಗಿಲ್ಲ. ನ್ಯಾಯ ಶಾಸ್ತ್ರ ಗಳ ಹಾಳೆಗಳನ್ನು ಮಗುಚಬೇಕಾಗಿಯೂ ಇಲ್ಲ. ಪ್ರೇಮ ಉಭಯ ಪ್ರಧಾನವಾದುದು. ಅದಕ್ಕೆ ಮೇಲು ಕೀಳು ಎಂಬುದಿಲ್ಲ; ಲಿಂಗ ಭೇದವಿಲ್ಲ; ಜಾತಿ ಭೇದವಿಲ್ಲ; ಅಥವಾ ಕಾಲ ಭೇದವಾಗಲಿ ರೂಪ ಭೇದ ವಾಗಲಿ ಯಾವುದೂ ಇಲ್ಲ. ಎಲ್ಲಿ ಪ್ರೇಮವೆಂಬ ದಿವ್ಯ ಜ್ಯೋತಿಯನ್ನು ದಂಪತಿಗಳು ಒಮ್ಮನಸ್ಸಿನಿಂದಲೂ, ಸಮಾನ ಧರ್ಮದಿಂದಲೂ ಹಿಡಿದು ನಡೆಯುವುದಿಲ್ಲವೋ ಅಲ್ಲಿ ದಾಂಪತ್ಯ ಜೀವನ ಸುಗಮವಾಗಿರಲಾರದು. ಅನುಕೂಲ ದಾಂಪತ್ಯಕ್ಕೆ ಮೊದಲನೆಯ ಮಂತ್ರವೇ ಪ್ರೇಮ! ಪ್ರೇಮ ವಿರುವ ದಾಂಪತ್ಯದ ಮುಂದೆ ಯಾವ ಕುತಂತ್ರವೂ ಸುಳಿಯಲಾರದು.

ಮನದೊಳು ಮನ ನೆನಹಿನೊಳು ನೆನಹು ಮತ್ತೆ
ತನು ತನುವಿನೊಳೊಡವೆರಸಿ
ಅನುಗೊಳೆ ಪಾಲು ನೀರುಗಳಂತಿನಿಯನು
ಮಿನಿಯಳುಮೇಕಮೆನಿಪುದು ||

ಎಂದು ಸಂಚಿಯ ಹೊನ್ನಮ್ಮನು ಹೇಳಿರುವ ಸಾಂಗತ್ಯ ಸತ್ಯವಾದುದು.

ಇಷ್ಟಾದರೂ ಕೆಲವು ಸಮಾಜಗಳಲ್ಲಿ ಜನಗಳು ದಾಂಪತ್ಯ ಜೀವನದಲ್ಲಿ ಸುಖವನ್ನು ಕಾಣದೆ ವಿಮುಖರಾಗಿ ನರಳುತ್ತಿರುವುದು ಕಂಡುಬರುತ್ತದೆ. ಇದಕ್ಕೆ ಕಾರಣವೇನು? ಪ್ರೇಮವೆಂಬುದಂತೂ ಅವರಲ್ಲಿಲ್ಲ. ಕಳೆದುಹೋದ ಪ್ರೇಮವನ್ನು ಮರಳಿ ಗಳಿಸಲು ಅವರು ಯತ್ನಿಸುವುದುಂಟು. ಇದಕ್ಕಾಗಿ ತೀರ್ಥ ಯಾತ್ರೆಗಳು, ಮಂತ್ರ ಯಂತ್ರಗಳು, ಔಷಧೋಪಚಾರಗಳು ಮುಂತಾದ ಬಾಹ್ಯ ವ್ಯಾಪಾರ ಗಳಲ್ಲಿ ತನುಮನಧನಗಳನ್ನು ಅದ್ದಿ ಬಿದ್ದು ಹೊರಳುವುದುಂಟು. ತಮ್ಮ ಪ್ರೇಮ ಏತಕ್ಕೆ ನಾಶವಾಯಿತೆಂಬುದನ್ನು ತಮ್ಮಲ್ಲಿ ತಾವು ಯೋಚಿಸದೆ ಹೀಗೆ ಪರಾಶ್ರಯ ಪರಯುಕ್ತಿ ಪರಸಾಧನ ಚಮತ್ಕಾರಗಳಿಗೆ ಸೆರಗೊಡ್ಡಿ ಬೇಡುವುದರಲ್ಲಿ ಫಲವಿಲ್ಲ. ಸ್ತ್ರೀಪುರುಷರು ತಮ್ಮ ತಪ್ಪನ್ನು ತಾವು ತಿಳಿಯಬೇಕು. ಅದರಲ್ಲಿಯೂ ಪುರುಷನು ಸತ್ಯಾಂಶವನ್ನು ಗ್ರಹಿಸಬೇಕು.

೨

ಗಂಡಸು ತಾನು ಮೇಲೆಂದೂ ತನ್ನ ಹೆಂಗಸು ಕೀಳೆಂದೂ ಭಾವಿಸುವುದೇ ದಾಂಪತ್ಯದ ಜೀವನ ವೃಕ್ಷ ಮುರಿದು ಬೀಳಲು ಮೂಲ ಕಾರಣ. ಪ್ರೇಮವೆಂಬ ಬೇರಿಗೆ ಗೆದ್ದಲು ಹಿಡಿಯುವುದಕ್ಕೆ ಅದೇ ಮೂಲಸಾಧನ. ಬಿರುಗಾಳಿಯ ಹೊಡೆತಕ್ಕೂ, ಪ್ರವಾಹದ ಸೆಳೆತಕ್ಕೂ ಮುರಿದು ಬೀಳದ ವೃಕ್ಷ ಬೇರು ಸತ್ತಮೇಲೆ ಒಂದು ಸೊಳ್ಳೆಯ ಉಸಿರಿಗೆ ಅಳುಕಿ ನೆಲಕ್ಕೆ ಉರುಳುವುದರಲ್ಲಿ ಆಶ್ಚರ್ಯವೇನಿದೆ! ದಾಂಪತ್ಯ ಜೀವನದಲ್ಲಿ ಸ್ತ್ರೀ ಪುರುಷರು ಸಮಾನರೆಂಬ ಭಾವನೆ ಮೊದಲು ಬೆಳೆಯ ಬೇಕು. "ಸತಿಗೆ ಪತಿ ದೈವಂ" ಎಂದು ಸಾರಿದ ನಮ್ಮ ಆರ್ಯಮಹರ್ಷಿ ಗಳೇ "ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ" ಎಂದೂ ಹೇಳಿದ್ದಾರೆ. ಇವೆರಡರ ಅಂತರಾರ್ಥವನ್ನು ಜನರು ಗ್ರಹಿಸ ಬೇಕು.

ಆದರೆ ಗಂಡಸು ಸಾಮಾನ್ಯವಾಗಿ ತನಗೆ ಅನುಕೂಲವಾಗಿರುವ ಮೊದಲನೆಯ ಋಷಿ ವಾಕ್ಯವನ್ನು ಒಪ್ಪಿ ಎರಡನೆಯದನ್ನು ಗಮನಿಸು ವುದಿಲ್ಲ. ತನ್ನ ಸತಿಗೆ ತಾನು ದೇವರು ಎಂಬ ಭಾವನೆಯೇನೋ ಸರಿ. ಆದರೆ ಆಕೆ ತಾನು ಹೇಳಿದಂತೆ ಕೇಳಬೇಕಾದ ದಾಸಿ ಎನ್ನಲು ಸಾಧ್ಯವೆ? ಆಕೆ ದಾಸಿಯಾದ ಪಕ್ಷಕ್ಕೆ ತಾನು ದಾಸನಾಗಬೇಡವೆ? ಬೀಜದಿಂದ ವೃಕ್ಷವೋ ವೃಕ್ಷದಿಂದ ಬೀಜವೋ ಹೇಳುವುದು ಹೇಗೆ? ತಾನು ದೇವರು, ತನ್ನ ಹೆಂಡತಿ ದೇವತೆಯಲ್ಲ ಎಂಬುದನ್ನು ನಂಬು ವುದು ಹೇಗೆ?

ಪುರುಷನು ಸ್ತ್ರೀಯನ್ನು ಕೀಳು ಭಾವನೆಯಿಂದ ಕಾಣಲು ಕಾರಣ ವಿಲ್ಲ. ಆಹಾರ ವಿಹಾರಗಳಲ್ಲಾಗಲಿ, ವಿದ್ಯಾವಿನಯಾದಿ ಸುಗುಣ ಗಳಲ್ಲಾಗಲಿ, ಅಂಗಸೌಷ್ಠವದಲ್ಲಾಗಲಿ, ಭಕ್ತಿ ಭರವಸೆಗಳಲ್ಲಾಗಲಿ, ಶಕ್ತಿ ಸಾಹಸಗಳಲ್ಲಾಗಲಿ ಪುರುಷನಿಗೆ ಸ್ತ್ರೀ ಸಮಾನಳೆಂಬುದಕ್ಕೆ ಚರಿತ್ರೆ ಗಳಲ್ಲಿಯೂ, ಇತಿಹಾಸಗಳಲ್ಲಿಯೂ, ನಿತ್ಯಜೀವನದಲ್ಲಿಯೂ ಅನೇಕ ಉದಾಹರಣೆಗಳಿವೆ. ಗಂಡಸು ತನಗೆ ಬೇಕಾದ ಹಾಗೆ ತನ್ನದೇ ಒಂದು ಪ್ರಪಂಚವನ್ನು ಸೃಷ್ಟಿಸಿಕೊಂಡು ಹೆಂಗಸನ್ನು ಮನೆಯ ನಾಲ್ಕು ಗೋಡೆಗಳ ನಡುವೆ ಪಂಜರದ ಶುಕದಂತೆ ಕಾಪಾಡುವುದು ತರವಲ್ಲ. "ಕಾರ್ಯೇಷು ದಾಸೀ, ಕರಣೇಷು ಮಂತ್ರೀ, ರೂಪೇ ಚ ಲಕ್ಷ್ಮೀ, ಕ್ಷಮಯಾ ಧರಿತ್ರೀ, ಭೋಜ್ಯೇಷು ಮಾತಾ, ಭೋಗೇಷು ವೇಶ್ಯಾ" ಎಂದು ಆರು ಗುಣಗಳನ್ನು ಸ್ತ್ರೀಯಲ್ಲಿ ಅಪೇಕ್ಷಿಸುವ ಗಂಡಸು ಅಂಥ ಸ್ತ್ರೀಯ ಅಭಿವೃದ್ಧಿಗೆ ಸಂಬಂಧಪಟ್ಟ ವಿಷಯಗಳಲ್ಲಿ ಉಪೇಕ್ಷೆಯಿಂದ ವರ್ತಿಸುವುದು ಧರ್ಮವಲ್ಲ.

೩

ಕೆಡುವ ಕಡೆ ಗಂಡಸಾಗಲಿ ಹೆಂಗಸಾಗಲಿ ಕೆಡಲೇ ಬೇಕು. ಹೀಗಿರುವಲ್ಲಿ ಗಂಡಸು ಬದುಕಿ ಹೆಂಗಸು ಮಾತ್ರ ಕೆಡುವ ಸಂದರ್ಭಗಳು ಯಾವುವೂ ಇಲ್ಲ. ಅಥವಾ ಗಂಡಸಿಗೆ ಬೇಕಾದ ಸುಖ ಸಂತೋಷಗಳು ಹೆಂಗಸಿಗೆ ಬೇಕಿಲ್ಲವೆಂದು ಹೇಳುವುದಾದರೂ ಸರಿಯಲ್ಲ. ಐಹಿಕ ಸುಖಸಾಧನೆಯಲ್ಲಾಗಲಿ ಆಮುಷ್ಮಿಕ ತತ್ವಪರಿಶೋಧನೆಯಲ್ಲಾಗಲಿ ಸ್ತ್ರೀ ಪುರುಷರಿಗೆ ಭೇದವಿಲ್ಲ.

ಹೆಂಗಸು ಅಬಲೆಯೆಂದೂ ಆಕೆಯನ್ನು ಕಷ್ಟದಿಂದ ಉಳಿಸ ಬೇಕಾದರೆ ಯಾವಾಗಲೂ ಗಂಡಸಿನ ಅಧೀನದಲ್ಲಿಯೇ ಇಡಬೇಕೆಂದೂ ಹಲವರು ವಾದಿಸಬಹುದು. ಆದರೆ ಅದೇ ಅಂಶವನ್ನೇ ಗಂಡಸಿಗೆ ಅನ್ವಯಿಸುವುದಾದರೆ, ಗಂಡಸು ಪ್ರಬಲನೆಂದೂ ಆತನನ್ನು ಸರಿಯಾದ ದಾರಿಯಲ್ಲಿ ನಡಸಬೇಕಾದರೆ ಯಾವಾಗಲೂ ಸ್ತ್ರೀಯ ರಕ್ಷಣೆಯಲ್ಲಿಯೇ ಇಡಬೇಕೆಂದೂ ವಾದಿಸಬಹುದಲ್ಲವೆ? ಸ್ತ್ರೀಪುರುಷರ ಸಮಸ್ಯೆಗಳು ಕೇವಲ ವಾದವಿವಾದಗಳಿಂದ ಪರಿಹಾರವಾಗುವವುಗಳಲ್ಲ. ಪ್ರಕೃತಿ ನಿಯಮಗಳನ್ನು ತಿಳಿದು ಚಿತ್ತಶುದ್ಧಿಯಿಂದಲೂ, ಮನೋವಿಕಾಸ ದಿಂದಲೂ ನಡೆಯಬೇಕು. ಒಟ್ಟಿನಲ್ಲಿ ಧರ್ಮಸೂಕ್ಷ್ಮವನ್ನು ಅರಿತು ನಡೆಯಬೇಕು. ಆಗ ಅನುಕೂಲ ದಾಂಪತ್ಯದ ಸವಿ ಸತಿಪತಿಗಳಿಗೆ ಲಭಿಸುತ್ತದೆ.

ಇನ್ನು ದಾಂಪತ್ಯಾನುಕೂಲಕ್ಕೆ ಸ್ತ್ರೀಯರಿಂದ ಸಲ್ಲಬೇಕಾದ ಕೆಲವು ಅಂಶಗಳನ್ನು ಇಲ್ಲಿ ತಿಳಿಸಬೇಕಾಗಿದೆ. "ಗೃಹಿಣೀ ಗೃಹಮುಚ್ಯತೇ" ಎಂದು ನಮ್ಮ ಹಿರಿಯರು ಹೇಳಿದ್ದಾರೆ. ಸ್ತ್ರೀಯರಿಗೆ ಪುರುಷನು ಸಮಾಜದಲ್ಲಿ ಸಮಾನ ಸ್ಥಾನವನ್ನು ಕೊಡದಿದ್ದರೆ ದಾಂಪತ್ಯ ಜೀವನ ಅನುಕೂಲವಾಗಿರಲಾರದೆಂದು ಹೇಳಿದಂತೆಯೆ, ಸ್ತ್ರೀಯರು ಪುರುಷರಿಗೆ ಗೃಹಕಾರ್ಯನಿರ್ವಾಹದಲ್ಲಿ ಸಮಾನ ಸ್ಥಾನವನ್ನು ಕೊಡದೆ ಇದ್ದಾಗಲೂ ದಾಂಪತ್ಯ ಜೀವನ ಅನುಕೂಲವಾಗಿರಲಾರದು. ಹಾಗೆಂದರೇನು? ತನ್ನ ಗಂಡನಿಗೆ ಅಡಿಗೆ ಕೆಲಸದಲ್ಲಿಯೂ ಕಸ ಗುಡಿಸುವ ಕೆಲಸದಲ್ಲಿಯೂ ಒಂದು ಸಮಾನಸ್ಥಾನ ಕೊಡಬೇಕೆಂದಲ್ಲ. ಸ್ತ್ರೀಯರು ಸಾಮಾನ್ಯವಾಗಿ ಮನೆಕೆಲಸಗಳನ್ನು ನಡಸುವುದರಲ್ಲಿಯೂ, ಮನೆಗೆ ಬಂದ ಅತಿಥಿ ಅಭ್ಯಾಗತರನ್ನು ಆದರಿಸುವುದರಲ್ಲಿಯೂ ತಮ್ಮದೇ ಒಂದು ಸ್ವಾರ್ಥ ಮನೋಭಾವದಿಂದ ವರ್ತಿಸುವುದುಂಟು. "ಗಂಡಸಿಗೇಕೆ ಗೌರಿ ದುಃಖ" ಎಂದು ಹೇಳಿ ಮನೆಕೆಲಸಗಳಲ್ಲಿ ರೀತಿ ನೀತಿಯಿಲ್ಲದೆ, ಹೊತ್ತುಗೊತ್ತಿಲ್ಲದೆ ಕಾಲಹರಣ ಮಾಡುವುದುಂಟು; ಅಥವಾ ಅತಿಥಿ ಅಭ್ಯಾಗತರನ್ನೂ ನೆಂಟರಿಷ್ಟರನ್ನೂ ಆದರಿಸುವುದರಲ್ಲಿ ತನ್ನ ಕಡೆಯವರೆಂದೂ, ಗಂಡನ ಕಡೆಯವರೆಂದೂ ತಾರತಮ್ಯದಿಂದ ನಯಭಯಗಳಿಲ್ಲದೆ ವರ್ತಿಸುವುದುಂಟು.

ಆದುದರಿಂದ ಸ್ತ್ರೀಯರು ಗೃಹಕಾರ್ಯನಿರ್ವಾಹದಲ್ಲಿ ಗಂಡಸಿನ ಅನುವರಿತು ನಡೆಯಬೇಕು.

ಕೊನೆಯದಾಗಿ ಒಂದು ಮಾತು. ಅನುಕೂಲ ದಾಂಪತ್ಯಕ್ಕೆ ಸಾಧಕವಾದ ಮತ್ತೊಂದು ಮುಖ್ಯ ಅಂಶವಿದೆ. ಅದನ್ನು ಅರಿಯದವರಿಲ್ಲ. ಅದಕ್ಕೆ ಸಿಕ್ಕಿ ನರಳದವರೂ ಇಲ್ಲ. ಅದು ಯಾವುದು? ಹೆಂಗಸಿನ ಸಂಶಯ, ಗಂಡಸಿನ ಕೋಪ! ಬಡವರಾಗಲಿ, ಬಲ್ಲಿದರಾಗಲಿ, ವಿದ್ಯಾವಂತರಾಗಲಿ, ವಿದ್ಯಾವಿಹೀನರಾಗಲಿ, ಚಿಕ್ಕವರಾಗಲಿ, ದೊಡ್ಡವರಾಗಲಿ, ರಾಜನಾಗಲಿ, ಪ್ರಜೆಯಾಗಲಿ ಹೆಂಗಸಿನಲ್ಲಿ ಸಂಶಯವಿರುವವರೆಗೆ, ಗಂಡಸಿನಲ್ಲಿ ಕೋಪವಿರುವವರೆಗೆ ದಾಂಪತ್ಯ ಜೀವನ ಅನುಕೂಲವಾಗಿರಲಾರದು. ಹೆಂಗಸು ತನ್ನ ಗಂಡನಲ್ಲಿ ಸಂಶಯವನ್ನು ಬಿಟ್ಟು ನಡೆಯುವುದು ಸುಲಭವಲ್ಲ. ಆದರೆ ಸಂಶಯವನ್ನು ಬಿಟ್ಟಲ್ಲದೆ ಆಕೆಗೆ ಸುಖವಿಲ್ಲ. ಅದರಂತೆ ಗಂಡಸು ತನ್ನ ಹೆಂಡತಿಯಲ್ಲಿ ಕೋಪವನ್ನು ಬಿಟ್ಟು ನಡೆಯುವುದೂ ಸುಲಭವಲ್ಲ. ಆದರೆ ಕೋಪವನ್ನು ಬಿಟ್ಟಲ್ಲದೆ ಆತನಿಗೆ ಸುಖವಿಲ್ಲ.

ಆದುದರಿಂದ ಸತಿಪತಿಗಳಲ್ಲಿ ಪರಸ್ಪರ ಪ್ರೇಮವೂ, ಸಮಾನ ಧರ್ಮವೂ, ನಿಸ್ಸಂಶಯವಾದ ಮತ್ತು ದುರಾಗ್ರಹರಹಿತವಾದ ಭಕ್ತಿ ಭರವಸೆಗಳೂ ಇದ್ದಪಕ್ಷದಲ್ಲಿ ದಾಂಪತ್ಯ ಜೀವನ ಅನುಕೂಲವಾಗುವುದಲ್ಲದೆ, ಆನಂದ ಸಾಗರವಾಗಿಯೂ ಪರಿಣಮಿಸುತ್ತದೆ.

## ಸಾದರ ಸ್ವೀಕಾರ

೧. **ಕುಡಿ** (ನಾಲ್ಕು ಕತೆಗಳ ಸಂಗ್ರಹ): ಹುಬ್ಬಳ್ಳಿಯ ಕನ್ನಡ ಬಾಲ ಸಾಹಿತ್ಯ ಮಂಡಲದ ಎರಡನೆಯ ಪುಷ್ಪ. ಶ್ರೀ.ಗಳಾದ ಸೊರಟೂರು ರಾಮಚಂದ್ರ, ರಾ. ಕೃ. ಕಲಬುರ್ಗಿ (ಕೃಷ್ಣತನಯ), ರಾ. ಪ. ಶಿರೋಳ, ರಾ. ನ. ಬಾಗಲ – ಇವರ ಕತೆಗಳಿಂದ ಕೂಡಿದ ಈ ಪುಸ್ತಕವನ್ನು 'ಶ್ರೀ'ಯವರು ಹರಸಿ ಮುನ್ನುಡಿ ಬರೆದಿದ್ದಾರೆ. ಬೆಲೆ ಮೂರಾಣೆ.

೨. **Kannada Short-hand Primer**—by Mr. K. Seetharama Rao, Principal, Bright Institute of Commerce, Mysore. ಇದು ಪಿಟ್ಮನ್ ಪದ್ಧತಿಗನುಗುಣವಾಗಿ ಬರೆಯಲಾದ ಕನ್ನಡ ಶೀಘ್ರಲಿಪಿಯ ಪುಸ್ತಕ. ಶಿಕ್ಷಣ ಖಾತೆಯವರು ಪಠ್ಯಪುಸ್ತಕಗಳಲ್ಲೊಂದಾಗಿ ಇದನ್ನು ನೇಮಿಸಿದ್ದಾರೆ. ಸುಂದರವಾಗಿ ಅಚ್ಚಾಗಿದೆ. ಬೆಲೆ—?

ಶ್ರೀ.ಗಳಾದ ದೇವರಾಯರ, ಅನಂತ ಸುಬ್ಬರಾಯರ ಪುಸ್ತಕಗಳನ್ನು ಅನೇಕರು ಉಪಯೋಗ ಮಾಡುತ್ತಿದ್ದಾರೆ. ಈಗ ಶ್ರೀ. ಸೀತಾರಾಮರಾಯರ ಪುಸ್ತಕ ಹೊರಬಿದ್ದಿದೆ. ಈ ಮಹನೀಯರುಗಳು ಅನುಸರಿಸಿದ ಪದ್ಧತಿಗಳು ಬೇರೆ ಬೇರೆಯಾದರೂ ಗುರಿ ಕನ್ನಡ ಶೀಘ್ರಲಿಪಿಯ ಮುನ್ನಡೆ. ಸರ್ಕಾರದವರೂ ಮಹಾಜನರೂ ಇಂಥ ಪುಸ್ತಕಗಳಿಗೆ ಪ್ರೋತ್ಸಾಹ ಕೊಟ್ಟು ಕನ್ನಡ ಭಾಷಣಾದಿ ಕಾರ್ಯಕ್ರಮಗಳ ವರದಿಗಾರಿಕೆಯ ಮುನ್ನಡೆಗೆ ನೆರವಾಗುವರೆಂದು ಹಾರೈಸುತ್ತೇವೆ. ಇಂಥ ಪದ್ಧತಿಯಲ್ಲಿ ಬರೆದ ಪುಸ್ತಕವೇ ಮೇಲೆಂಬ ಹಟ ತೋರುವವರು ಯಾರೂ ಇಲ್ಲವಾದ್ದರಿಂದ, ಬೇರೆ ಬೇರೆ ಪದ್ಧತಿಗಳನ್ನು ಪ್ರಯೋಗ ಮಾಡಿ ನೋಡಿ, ಈ ವಿಭಾಗದಲ್ಲಿ ದುಡಿಯುವ ವಿದ್ವಾಂಸರೆಲ್ಲ ಒಮ್ಮೆ ಸೇರಿ ವಿಚಾರ ಮಾಡಿ ಮುಂದೆ ಕನ್ನಡ ನುಡಿಯ ಜಾಯಮಾನಕ್ಕೆ ಚೆನ್ನಾಗಿ ಹೊಂದುವ ಒಂದು ಪದ್ಧತಿಯನ್ನು ಯೋಜಿಸಬಹುದಾಗಿದೆ.

**ಬಿಸ್ಲಾಡಿ ಚೆಲ್ವಿ** (ಏಕಾಂಕ ನಾಟಕಗಳು): ಬರೆದವರು: ಶ್ರೀ. ಅಜ್ಜಂಪುರ ಶೇಷಗಿರಿರಾಯರು. ಪ್ರಕಾಶಕರು: ಮಿತ್ರಸಂಘ, ಬೆಂಗಳೂರು. ಮಿತ್ರಸಂಘದ ಸಾಹಿತ್ಯಮಾಲೆಯ ಮೊದಲನೆಯ ಪುಸ್ತಕ. ಕ್ರೌನ್ ಅಷ್ಟಪತ್ರ ೫೬ ಪುಟಗಳು. ಬೆಲೆ ಆರಾಣೆ.

**ಮರಳಿ ಮಣ್ಣಿಗೆ**: ಬರೆದವರು: ಶ್ರೀ. ಶಿವರಾಮ ಕಾರಂತರು, ಪುತ್ತೂರು ಪ್ರಕಾಶಕರು: ಮನೋಹರ ಗ್ರಂಥ ಪ್ರಕಾಶನ ಸಮಿತಿ, ಧಾರವಾಡ. ಕ್ರೌನ್ ಅಷ್ಟಪತ್ರ ೬೦೮ ಪುಟಗಳು. ಬೆಲೆ ೩ ರೂ. ೮ ಆಣೆ.

## ಅರಿಕೆ

(೧)

ಹಗಲು ದೇವಿಯೆ ನೀನು – ಹಗಲು ದೀವಿಗೆ ತಂದೆ
ಜಗದ ಜ್ಯೋತಿಯ ಕಳಸ ಬೆಳಗಲೆಂದು
ಮುಚ್ಚೇಕೆ? ಮರೆಯೇಕೆ? – ನಚ್ಚಿನಲಿ ನಲಿಯೆಯೇಕೆ?
ತುಚ್ಛದೃಷ್ಟಿಯನೇಕೆ ಬೀರುತಿರುವೆ?

(೨)

ಕತ್ತಲೆಯ ಕುಪ್ಪಿಯೊಳು – ಮುತ್ತಾಗಿ ಹೊರಬಿದ್ದು
ಮತ್ತೆ ಕತ್ತಲೆಯತ್ತ ಸಾಗಿರುವರೆ!
ಬೆಳಕಿನೊಳು ಬಾಳುವೆಯ – ಬೆಳಗಿಕೊಳ್ಳದೆ ಬೇರೆ
ಕಲಿಯ ಕಾಳಿಯ ಬಾಯ್ಗೆ ಬಲಿಗಳಾಗಿಹರೆ!

(೩)

ಮಿತಿಯು ಅತಿಯಾಗಿರಲು – ಗತಿಯು ಕೇಡಾಗಿಹುದು
ಅತಿ ದುಃಖ ನೀನೇಕೆ ಪಡುತಲಿರುವೆ
ಕೆಟ್ಟಕಾರ್ಯಗಳೆಲ್ಲ – ಪೆಟ್ಟುಮುಟ್ಟದ ಮೇಲೆ
ಕಟ್ಟನೊಳು ಬರುವಿಕೆಯ ನೀ ನೋಡುವೆ

— ವಲ್ಲಭ ಜೋಶಿ ಕಾತರಕಿ

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧೨
ಬಿಡಿ ಪತ್ರಿಕೆ: ೬ ಕಾಸು




ಸಂಪಾದಕ:
ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈ ಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೭

ಬೆಂಗಳೂರು: ಶುಕ್ರವಾರ, ಡಿಸೆಂಬರ್ ೪, ೧೯೪೨

## ಮಾಸ್ಕೊ ಆರ್ಟ್ ಥಿಯೇಟರ್

(ಡಾ॥ ನಿಕೊಲಾಸ್ ರೋಯರಿಕ್)

[ರಷ್ಯಾದಲ್ಲಿ ಕಲೆಯ ಮತ್ತು ಸಾಹಿತ್ಯದ ಪುನರುಜ್ಜೀವನ ಕಾರ್ಯ ಹೋದ ಶತಮಾನದ ಕಡೆಯ ಭಾಗದಲ್ಲಿ ಚುರುಕಾಯಿತು. ಆ ಸಂಬಂಧದಲ್ಲಿ ಸಾಹಿತ್ಯ ನಿರ್ಮಾಣಕಾರರ ಜೊತೆಗೆ ನಾಟಕ ಮಂಡಲಿಗಳೂ ಅತಿಶಯವಾಗಿ ದುಡಿದು ಜನಜೀವನವನ್ನು ಉತ್ತಮಪಡಿಸುವುದಕ್ಕೆ ಬಹುವಾಗಿ ಕೆಲಸ ಮಾಡಿದವು. ನಾಟಕ ಪ್ರದರ್ಶನದ ಒಂದು ಹೊಸ ರೀತಿ ಅದುವರೆಗೆ ಬೇರೆಲ್ಲಿಯೂ ನಡೆಯದಿದ್ದ ಕೆಲಸವನ್ನು ಸಾಧಿಸಿತು. ೧೮೯೮ರಲ್ಲಿ ಸ್ಥಾಪಿತವಾದ ಮಾಸ್ಕೊ ಆರ್ಟ್ ಥಿಯೇಟರ್ ಎಂಬ ಸಂಸ್ಥೆಯೂ ಮೆಯರ್‌ಹೋಲ್ಡ್ ಎಂಬಾತನ ನಾಯಕತ್ವದಲ್ಲಿ ನಡೆದ ನಾಟಕ ಮಂಡಲಿಯೂ ಒಂದೊಂದು ಸಂಪ್ರದಾಯಕ್ಕೆ ಪ್ರತಿನಿಧಿಯಾದವು.

ಪ್ಹೇರ್ ಘೈಂಟ್ (Peer Gynt) ನಾಟಕ ಇಬ್ಸೆನ್ ಕವಿ ೧೮೬೭ರಲ್ಲಿ ತನ್ನ ೪೦ನೆಯ ವರ್ಷದಲ್ಲಿ ಬರೆದ ನಾಟಕ. ಆ ಮುಂಚೆ ಆತನು ಬ್ರ್ಯಾಂಡ್ ಎಂಬ ಇನ್ನೊಂದು ಇಂತಹ ಪದ್ಯ ನಾಟಕವನ್ನು ಬರೆದು ಕೀರ್ತಿಪಡೆದಿದ್ದನು. ಬ್ರ್ಯಾಂಡಿಗೆ ಪೂರ್ತಿ ವಿಸದೃಶವಾದ ಆವರಣ, ವ್ಯಕ್ತಿತ್ವ, ಸ್ವಭಾವ ಲಕ್ಷಣ, ಕಾರ್ಯ ಪ್ರಪಂಚ, ದೃಷ್ಟಿರೀತಿ ಉಳ್ಳದ್ದೂ ಸ್ವೇಚ್ಛೆಯಾಗಿ ಕಲ್ಪಿತವಾಗಿ ಬಗೆ ಬಗೆಯ ವಿಲಾಸದಿಂದ ಕೂಡಿದುದೂ— ಮತ್ತು, ಆತನೇ ಹೇಳುವಂತೆ, — ಎಲ್ಲ ಕಟ್ಟುಗಳನ್ನೂ ಅಲಕ್ಷ್ಯಮಾಡಿ ತನ್ನ ವಿನೋದಕ್ಕಾಗಿ ಬರೆದ ಕಲ್ಪನಾ ಚಿತ್ರವನ್ನೂ ವ್ಯಕ್ತಿ ವಿಕಾಸ ಚಿತ್ರವನ್ನೂ ಇಲ್ಲಿ ಕಾಣಬಹುದು. "ಇವರಲ್ಲಿ ಕೆಲವಂಶಗಳಲ್ಲಿ ನನ್ನ ಮತ್ತು ನನ್ನ ತಾಯಿ ತಂದೆಗಳ ಲಘುಚಿತ್ರಗಳನ್ನು ಕಾಣಬಹುದು; ಮೂಲ ಕಥೆಗೆ ನಮ್ಮ ಜನದಲ್ಲಿ ಬಳಕೆಯಾಗಿದ್ದ ಕೆಲವು ಕಥೆಗಳ ಆಧಾರವಿದೆ. ಪ್ಹೇರ್ ಎಂಬವನು ಒಂದೆರಡು ಶತಮಾನಗಳ ಹಿಂದೆ ಇದ್ದು, ಪುರಾಣ ಪುರುಷನಂತೆ ಪ್ರಖ್ಯಾತನಾದ ಒಬ್ಬ ಮನುಷ್ಯ ವ್ಯಕ್ತಿ. ಆತನ ಹೆಸರನ್ನು ಉಪಯೋಗಿಸಿಕೊಂಡು ಕಲ್ಪನಾಪರಂಪರೆಯನ್ನು ಆತನ ತಲೆಗೆ ಕಟ್ಟಿದ್ದೇನೆ. ಕೇವಲ ವಿಡಂಬನವನ್ನಾಗಲಿ ಸಂಕೇತಗಳನ್ನಾಗಲಿ ಒಂದು ತತ್ವದ ಆಧಿಪತ್ಯವನ್ನಾಗಲಿ ಮಾತ್ರ ಇಲ್ಲಿ ಕಾಣ ಬಯಸುವವರು ನಾಟಕವನ್ನು ಸಂಪೂರ್ಣವಾಗಿ ಗ್ರಹಿಸಲಾರರು. ಇದನ್ನು ಒಂದು ಸಾಹಿತ್ಯ ಕೃತಿಯಂತೆ ಮಾತ್ರ ಒಟ್ಟಿನಲ್ಲಿ ನೋಡುವುದು ಮೇಲು" ಎಂದು ಆತನು ಒಂದು ಸಲ ಹೇಳಿದರು.

ಆಷೆ – ಪ್ಹೇರನ ತಾಯಿ. ಸಾಲ್ವೆಗ್ – ಪ್ರೀತಿಯ ಪರಿಶುದ್ಧಿಯಿಂದಲೂ ಕ್ಷಮೆಯಿಂದಲೂ ದಿವ್ಯತೆಯಿಂದಲೂ ಪ್ಹೇರನನ್ನು ಉದ್ಧಾರ ಮಾಡಿದ ಸಾಧ್ವಿ. ಅನಿತ್ರ – ವ್ಯಾಪಾರಕ್ಕಾಗಿ ಹಡಗಿನಲ್ಲಿ ಸಂಚರಿಸುತ್ತ ಅರಬ್ ದೇಶಗಳ ಕಡೆ ಸುತ್ತುತ್ತಿದ್ದಾಗ ಬಿರುಗಾಳಿ ಬೀಸಿ ಹಡಗು ಒಡೆಯಲು ಪ್ಹೇರನು ಒಂದು ಮರಳು ಕಾಡಿನಲ್ಲಿ ಇರಬೇಕಾಯಿತು. ಆಗ ಆತನು ದಿವ್ಯದರ್ಶಿಯಂತೆ ವೇಷ ಕಟ್ಟಿದ್ದನು. ಆ ಸಮಯದಲ್ಲಿ ಆತನು ಕಂಡ ಒಬ್ಬ ಅರಬ್ಬಿ ಚೆಲುವೆ ಅನಿತ್ರ.]

ಮಾಸ್ಕೊ ಆರ್ಟ್ ಥಿಯೇಟರ್ ಎಂಬ ಹೆಸರು ರಷ್ಯಾದಲ್ಲಿ ಎಲ್ಲೆಲ್ಲಿಯೂ ಪೂರ್ತಿ ತನ್ನದೇ ಆದ ಒಂದು ವಿಶೇಷ ಬಗೆಯ ಆವರಣ ಮತ್ತು ಸ್ವರೂಪ ಲಕ್ಷಣ ಉಳ್ಳದ್ದಾಗಿ ಕೇಳಿ ಬರುತ್ತದೆ. ಅದರ ಹೆಸರನ್ನು ಹಗುರವಾಗಿ ಉಚ್ಚರಿಸುವವರಿಲ್ಲ. ದೊಡ್ಡ ಪಟ್ಟಣಗಳಿಗೇ ಅಲ್ಲ; ಅತಿ ಸಣ್ಣ ಹಳ್ಳಿಗಳಿಗೂ ಆ ಹೆಸರು ಪರಿಚಿತವಾಗಿದೆ. ಆ ಸಂಬಂಧದಲ್ಲಿ ಎಲ್ಲರಿಗೂ ಸಹಜವಾದ ಮತ್ತು ಗಾಢವಾದ ಗೌರವ ಉಂಟು. ಆ ನಾಟಕ ಶಾಲೆಗೆ ಹೋದಿರೆನ್ನಿ: ಅಲ್ಲಿನ ಪ್ರೇಕ್ಷಕರು ನಿಶ್ಶಬ್ದವಾಗಿ ಒಂದು ಹದವರಿತು ಕುಳಿತಿರುವರು. ಯಾವ ಅಲಂಕಾರವೂ ಮಿರುಗು ಅಥವಾ ಹೊಳಪು ಬಣ್ಣದ್ದು ಅಲ್ಲಿಲ್ಲ; ಆ ಬೆಳಕು ಕಣ್ಣನ್ನು ಕುಕ್ಕದು. ಯಾವುದೋ ಗಂಭೀರವಾದ, ಯಾವುದೋ ಒಂದು ನಿಜವಾದ ಕಲೆಯಲ್ಲಿ ಭಾಗಿಗಳಾಗಿದ್ದೇವೆಂದು ಮನಸ್ಸಿಗೆ ತನ್ನಷ್ಟಕ್ಕೇ ಅನ್ನಿಸುತ್ತದೆ. ಈ ಆವರಣ ಇಂಥದು ಎಂದು ಯಾರೂ ವಿಶೇಷ ಪ್ರಯತ್ನಗಳಿಂದಾಗಲಿ ಪ್ರಕಟನೆಗಳಿಂದಾಗಲಿ ಸಾರಿರುವುದಿಲ್ಲ. ಶ್ರದ್ಧೆ ಶ್ರಮಗಳಿಂದಲೇ ಇವೆಲ್ಲ ಏರ್ಪಟ್ಟವು.

ಒಂದು ಸಂದರ್ಭದಲ್ಲಿ ಯಾರೊ ಹೇಳಿದರು: – ರಂಗದ ಹಿಂದಿನಿಂದ – ನಾಟಕದ ಐವತ್ತನೆಯ ಪೂರ್ವಾಭ್ಯಾಸ ಮುಗಿದ ಮೇಲೆ ಅದನ್ನು ಯಾವ ರೀತಿ ಪ್ರದರ್ಶಿಸಿ ತೋರಿಸಬೇಕೆಂಬ ವಿಷಯದಲ್ಲಿ ಸಂಪೂರ್ಣ ಬದಲಾವಣೆಗಳನ್ನು ಮಾಡಿದರು ಎಂದು. ಅದನ್ನು ಕೇಳಿ ಯಾರಿಗೂ ಆಶ್ಚರ್ಯವಾಗಲಿಲ್ಲ. ಇಷ್ಟು ಸಲ ಅಭ್ಯಾಸ ನಡೆದ ಮೇಲೆ ಯೂರೋಪಿನ ರಂಗಭೂಮಿಯಲ್ಲಿ ಹೀಗೆ ನಾಟಕದಲ್ಲಿ ಪೂರ್ತಿ ಮಾರ್ಪಾಡು ಆಗುವುದು ಅವಿವೇಕವೆಂದು ಎಣಿಕೆಯಾದೀತು. ಸಾಧಾರಣ ಒಂದು ನಾಟಕ ಶಾಲೆಯಲ್ಲಿ ನಾಟಕಕ್ಕೆ ಪೂರ್ವಭಾವಿಯಾಗಿ ಇಷ್ಟು ಅಭ್ಯಾಸಗಳು ನಡೆಯುವುದೇ ಅಪರೂಪ. ಮಾಸ್ಕೊ ಆರ್ಟ್ ಥಿಯೇಟರಲ್ಲಿ ಇದೇನೂ ಹೊಸತಲ್ಲ, ಸಾಮಾನ್ಯ. ಏಕೆಂದರೆ ಪ್ರತಿ ಅಭ್ಯಾಸದಲ್ಲಿಯೂ ನಾಟಕದ ಪ್ರತ್ಯಕ್ಷರದ ರೂಪಣ ಚೆನ್ನಾಗುತ್ತದೆ; ಅಷ್ಟೇ ಅಲ್ಲ, ಪ್ರತಿ ಅಭ್ಯಾಸವೂ ಒಂದು ಹೊಸ ಸೃಷ್ಟಿ ಸಾಧನೆಯಾಗುತ್ತದೆ. ಹೀಗೆ ಪ್ರದರ್ಶನ ಕಲೆಯ ನಿರ್ಮಾಣಶಕ್ತಿ ಆ ಮೂಲಕ ಸಂತತವಾಗಿ ಹೆಚ್ಚುತ್ತದೆ. ಈ ಸಂಗತಿಯನ್ನರಿತರೆ, ಮಾಸ್ಕೊ ಆರ್ಟ್ ಥಿಯೇಟರ ವಿಶೇಷ ಲಕ್ಷಣವನ್ನು ತಿಳಿದುಕೊಳ್ಳಲು ಒಂದು ಸೂಚಿಕೆ ದೊರೆತಂತಾಗುವುದು.

ಅಲ್ಲಿನ ಕಾರ್ಯರೀತಿಯನ್ನು ನಾನು ಆಪ್ತವಾಗಿ ತಿಳಿದುದೆಂದರೆ ೧೯೧೨ರಲ್ಲಿ. ಆ ವರ್ಷ ಆ ಸಂಸ್ಥೆಯ ಮುಖ್ಯಸ್ಥರು ನನ್ನಲ್ಲಿಗೆ ಬಂದರು. ಯಾವ ನಾಟಕ ಪ್ರದರ್ಶನ ಕಾರ್ಯದಲ್ಲಿ ತಮ್ಮೊಡನೆ ನಾನು ಸಹಕರಿಸಬಲ್ಲೆನೆಂದು ಕೇಳಿದರು. ಶಕ್ಯವಾದ ಎರಡನ್ನು ಕುರಿತು ಮೊದಲು ಪರ್ಯಾಲೋಚನೆ ನಡೆಯಿತು. ಒಂದು ಮೇಟರ್ಲಿಂಕ್ ಕವಿಯ 'ಪ್ರಿನ್ಸೆಸ್ ಮಲೇನ್' ಎಂಬುದು. ಎರಡನೆಯದು ಇಬ್ಸೆನ್ ರಚಿಸಿದ 'ಪ್ಹೇರ್ ಘೈಂಟ್' ಎಂಬ ವಿಶ್ವವ್ಯಾಪಕವಾದ ನಾರ್ವೆ ನಾಟಕ. ಈ ಎರಡರಲ್ಲಿ ಯಾವುದನ್ನು ಆರಿಸಿಕೊಳ್ಳುವುದು ಎಂಬುದು ನನಗೆ ಕಷ್ಟದ ಕೆಲಸವೇ ಆಯಿತು. ಮೇಟರ್ಲಿಂಕ್ ಕೃತಿಯಲ್ಲಿ ಚಿತ್ರಸಂಪನ್ನವಾದ ಅದರ ಮೇಲ್ಮೈಯ್ಯೂ ಆಳವಾದ ಒಳ ಅರ್ಥವೂ ನನ್ನ ಮನಸ್ಸಿಗೆ ಮೆಚ್ಚಿಕೆ ತರುತ್ತಿದ್ದವು. ಆದರೆ ಇಬ್ಸೆನ್ ಸೃಷ್ಟಿಗಳಲ್ಲಿನ ಅಖಿಲ ಮಾನವ ವಾಣಿಗಳು ಕೂಡ ನನಗೆ ಹತ್ತಿರದವೇ ಆಗಿದ್ದವು. ಆದ್ದರಿಂದ ಇಬ್ಸೆನಿನ ಕೃತಿಯನ್ನು ಆರಿಸಿಕೊಂಡೆ.

ಮಾಸ್ಕೊ ಆರ್ಟ್ ಥಿಯೇಟರ್ ಒಂದು ಕೆಲಸಕ್ಕೆ ಕೈ ಹಚ್ಚಿತೆಂದರೆ ಪ್ರದರ್ಶನದ ವಸ್ತುಭಾಗದ ಯೋಜನೆಯನ್ನು ಮಾಡುವ ಬಹು ಮುಂಚೆಯೇ ವಿಷಯವನ್ನು ಸಂಪೂರ್ಣವಾಗಿ ಅದರ ಒಳಹೊಕ್ಕು ವ್ಯಾಸಂಗ ನಡೆಯುತ್ತದೆ. ಪುಸ್ತಕ ಭಂಡಾರಗಳಲ್ಲಿ ಮಾತ್ರವಲ್ಲ; ಯಾವುದಾದರು ಒಂದು ಪ್ರದೇಶದ, ಭೌಗೋಲಿಕ ಅಥವಾ ಚಾರಿತ್ರಕ ಆವರಣದ ತಿಳಿವು ಅಗತ್ಯವೆಂದು ಕಂಡದ್ದಾದರೆ ನಟರೂ ರೂಪಕ ಸೂತ್ರಧಾರರೂ ಅಲ್ಲಿಗೆ ಹೋಗಿ ಆ ವಿಷಯವನ್ನು ಕುರಿತು ಅಲ್ಲಿಯೆ

(೪೧ನೆಯ ಪುಟಕ್ಕೆ)

* ಸುಪ್ರಸಿದ್ಧ ನರ್ತನಕಾರರಾದ ಶ್ರೀ. ಉದಯ ಶಂಕರ್ ಅವರ ಸಂಸ್ಥೆಯಿಂದ ಪ್ರಕಟವಾಗುವ U.S.I.C. 'Centre News' ಎಂಬ ಪತ್ರಿಕೆಯ ಅಕ್ಟೋಬರ್ ೧೫ರಲ್ಲಿ ಬಂದಿರುವ ಲೇಖನದ ಅನುವಾದ.

# ಕನ್ನಡ ನುಡಿ

**ಶುಕ್ರವಾರ, ಡಿಸೆಂಬರ್ ೪, ೧೯೪೨**

## ಸೆನೆಟ್ ಸಭೆಯಲ್ಲಿ ಕನ್ನಡ

ಮೈಸೂರು ವಿಶ್ವವಿದ್ಯಾನಿಲಯದ ಸೆನೆಟ್ ಸಭೆ ೨೪-೧೧-೪೨ನೆಯ ಮಂಗಳವಾರ ಸೆಂಟ್ರಲ್ ಕಾಲೇಜಿನಲ್ಲಿ ನಡೆದಾಗ ಅಲ್ಲಿ ಕನ್ನಡದ ಯೋಗಕ್ಷೇಮವನ್ನು ಕುರಿತ ವಿಚಾರ, ನಿರ್ಣಯ ಆದುವು.

ವಿಶ್ವವಿದ್ಯಾನಿಲಯದ ೧೯೪೧-೪೨ರ ಕಾರ್ಯಕಲಾಪಗಳ ವರದಿಯನ್ನು ಅಂಗೀಕಾರಕ್ಕಾಗಿ ಸಭೆಯ ಮುಂದೆ ಇಡಲಾಯಿತು. ವರದಿಯಲ್ಲಿ ವಿಶ್ವವಿದ್ಯಾನಿಲಯದ ಶಾಲೆ ಕಾಲೇಜುಗಳಲ್ಲಿ ವಿದ್ಯಾರ್ಥಿ ಸಂಖ್ಯೆ ಸ್ಥಾಪನೆಯ ಕಾಲದಲ್ಲಿ ೫೯೩ ಇದ್ದುದು ಈಗ ೫೯೯೩ಕ್ಕೆ ಏರಿರುವುದು, ನಾನಾ ಇಲಾಖೆಗಳ ಪ್ರಗತಿ, ಅಧ್ಯಾಪಕರುಗಳ ಸಂಶೋಧನೆಯ ಹಾಗೂ ಗ್ರಂಥ ರಚನೆಯ ಚಟುವಟಿಕೆಗಳು, ರಜತ ಮಹೋತ್ಸವಾಚರಣೆ ಮುಂತಾದುವನ್ನು ಪ್ರಸ್ತಾವಿಸಿದೆ.

ವಿಶ್ವವಿದ್ಯಾನಿಲಯದ ಬಹುಮುಖವಾದ ಈ ಪ್ರಗತಿಗಾಗಿ ಅಧಿಕಾರಿ ವರ್ಗದವರನ್ನು ಅಭಿನಂದಿಸಬೇಕಾಗಿದೆ.

ಕನ್ನಡದ ಮುನ್ನಡೆಯ ದೃಷ್ಟಿಯಿಂದ ವರದಿಯಲ್ಲಿನ ಒಂದು ವಾಕ್ಯವನ್ನು ನಮ್ಮ ವಾಚಕರು ಗಮನಿಸುವುದು ಆವಶ್ಯಕವೆಂದು ಇಲ್ಲಿ ಎತ್ತಿ ಕೊಟ್ಟಿದೆ:

"ಸೆನೆಟ್ ಸಭೆಯ ಮೊದಲ ಅಧಿವೇಶನವನ್ನು ಪ್ರಾರಂಭಗೊಳಿಸಿದ ಸಂದರ್ಭದಲ್ಲಿ ಆಳಿದ ಮಹಾಸ್ವಾಮಿಯವರಾದ ಶ್ರೀ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಕನ್ನಡ ಸಾಹಿತ್ಯಕ್ಕೆ ಕೊಡಬೇಕಾದ ವಿಶೇಷ ರೀತಿಯ ಪ್ರೋತ್ಸಾಹದ **ಹಾರಯಿಕೆ ಈಗ ಸಿದ್ಧಿಯಾಗಿದೆ.** ವಿಶ್ವವಿದ್ಯಾನಿಲಯದ ಗ್ರಂಥ ಪ್ರಕಟ ಶಾಖೆ ಉಪಯುಕ್ತವಾದ ಸಂಶೋಧನೆಯ ಫಲವಾಗಿ ಗ್ರಂಥಗಳನ್ನು ಸಾರ್ವಜನಿಕರಲ್ಲಿ ಪ್ರಸಾರ ಮಾಡಿದೆ. ಈ ಗ್ರಂಥಗಳು ಆಯಾ ಗ್ರಂಥಕರ್ತರ ಪಾಂಡಿತ್ಯವನ್ನು ಪ್ರಕಟವಾಗಿ ಸಾರಿ ಹೊಗಳುತ್ತಿವೆ. ಸಾಹಿತ್ಯ, ವಿಜ್ಞಾನ, ಇತಿಹಾಸ ಮುಂತಾಗಿ ವಿವಿಧ ಜ್ಞಾನದ ಭಾಗಗಳಲ್ಲೆಲ್ಲ ಗ್ರಂಥರಚನೆಯಾಗಿದೆ. ಮುಂದಿನ ವರ್ಷಗಳಲ್ಲಿ ಈ ಗ್ರಂಥ ಪ್ರಕಟನ ಶಾಖೆಯ ಪ್ರಯೋಜನ ಇನ್ನೂ ಹೆಚ್ಚುವುದೆಂದು ಹಾರಯಿಸಿದೆ.

ಕನ್ನಡ ಗ್ರಂಥ ಪ್ರಕಟನ ಶಾಖೆಯಿಂದ ಇದುವರೆಗೆ ತಕ್ಕ ಮಟ್ಟಿಗೆ ಸೇವೆ ನಡೆದಿದೆ ನಿಜ. ಇದನ್ನು ಎಲ್ಲರೂ ಸಂತೋಷದಿಂದ ಒಪ್ಪಿಕೊಳ್ಳುತ್ತಾರೆ. ಆದರೆ ಇಷ್ಟರಿಂದಲೇ ಕನ್ನಡದ ಹೆಬ್ಬಯಕೆ ಸಿದ್ಧಿಸಿತೆಂದು ಹೇಳಲು ಆಗುವುದಿಲ್ಲ. ಸೆನೆಟ್ ಸಭಾ ಸದಸ್ಯರು ಹಲವರು ವರದಿಯ ಈ ಭಾಗವನ್ನು ಕುರಿತು ಮಾಡಿದ ಭಾಷಣಗಳಿಂದಲೇ ಇದುವರೆಗಿನ ಪ್ರಗತಿ ಸಾಲದೆಂಬುದೂ, ಏರಬೇಕಾದ ಸಿದ್ಧಿಯ ಸೋಪಾನದ ಮೆಟ್ಟಲುಗಳು ಇನ್ನೂ ಇವೆಯೆಂಬುದೂ ಸ್ಪಷ್ಟವಾಯಿತು. ಕನ್ನಡದ ಸ್ಥಾನಮಾನ ಇನ್ನೂ ಉತ್ತಮಪಡಬೇಕೆಂದು ಈ ಮಹನೀಯರೆಲ್ಲ ಒತ್ತಿ ಹೇಳಿದರು.

ಈ ಸಲ ಸೆನೆಟ್ಟಿನಲ್ಲಿ ಇಂಗ್ಲಿಷಿಗೆ ಸರಿಗಟ್ಟಿ ಕನ್ನಡವೂ ಸಭಾಸದರ ಭಾಷಣದಲ್ಲಿ ಕೇಳಿಸಿದ್ದು ಹೆಮ್ಮೆಯ ಮಾತು.

ಶ್ರೀ.ಗಳಾದ ಬಿ. ಆರ್. ಪುಟ್ಟನಂಜಪ್ಪನವರು, ಭೀಮಪ್ಪ ನಾಯಕರು, ಸುಬ್ಬಯ್ಯ ಚೆಟ್ಟರು, ಎಸ್. ಸಿ. ಮಲ್ಲಯ್ಯನವರು, ಎಂ. ಮಾದಯ್ಯನವರು, ಶ್ರೀಮತಿ ಸುನಂದಮ್ಮನವರು ಕನ್ನಡದಲ್ಲಿ ಮಾತನಾಡಿ, ಕನ್ನಡವನ್ನು ಇನ್ನೂ ಬೆಳಸಬೇಕೆಂದೂ, ಕನ್ನಡವೇ ವಿಶ್ವವಿದ್ಯಾನಿಲಯದ ಬೋಧಕ ಭಾಷೆಯೂ, ಕಾರ್ಯಭಾಷೆಯೂ ಆಗಬೇಕೆಂದೂ, ಕನ್ನಡದ ಜ್ಞಾನ ಹೆಚ್ಚುವುದರಿಂದಲೇ ಜನದ ಬದುಕು ಎಲ್ಲ ಬಗೆಯಿಂದಲೂ ಹಸನಾಗುವುದೆಂದೂ ಮನದಟ್ಟಾಗುವಂತೆ ಹೇಳಿದರು.

ಶ್ರೀ. ಜಿ. ಎಸ್. ಎನ್. ಷರೀಫರು, ಮೈಸೂರಿನ ಮುಖ್ಯಭಾಷೆಗಳಲ್ಲಿ ಒಂದಾದ ಉರ್ದುವಿಗೆ ಇನ್ನೂ ಹೆಚ್ಚಿನ ಗಮನ ಕೊಡಬೇಕೆಂದರಾದರೂ ಕನ್ನಡದ ಮುನ್ನಡೆಯನ್ನು ತಡೆದು ಉರ್ದುವನ್ನು ಬೆಳಸಬೇಕೆಂಬುದು ಅವರ ಉದ್ದೇಶವಲ್ಲ. ಇಂಗ್ಲಿಷಿನ ಪ್ರಾಮುಖ್ಯವೆಲ್ಲಿ ಕಡಮೆಯಾಗಿ, ಜೀವನೋಪಾಯಕ್ಕೆ ಕೆಲಸಗಳು ಸಿಕ್ಕದೆ ಕಷ್ಟವಾಗುವುದೋ ಎಂಬ ಅಳುಕು ಅವರ ಮಾತಿನಿಂದ ವ್ಯಕ್ತವಾಯಿತು. ಈ ಅಳುಕು ಹೋಗಬೇಕು. ಈಗತಾನೇ ಇಂಗ್ಲಿಷ್ ಪದವೀಧರರೆಲ್ಲಾ ಇಲ್ಲಾಗಲಿ ಹೊರಗಾಗಲಿ ಉದ್ಯೋಗವನ್ನು ಪಡೆಯುತ್ತಿದ್ದಾರೆಯೆ? ದೇಶಭಾಷೆಯ ಪ್ರಾಮುಖ್ಯವನ್ನು ಜ್ಞಾನದೃಷ್ಟಿಯಿಂದ ನೋಡಬೇಕೇ ಹೊರತು ಕೇವಲ ಆರ್ಥಿಕದೃಷ್ಟಿಯಿಂದ ನೋಡಬಾರದೆಂದು ನಾವು ಹೇಳಬಯಸುತ್ತೇವೆ. ಕನ್ನಡದಲ್ಲಿ ಪೂರ್ಣವಿದ್ಯಾವಂತನಾಗುವುದೆಂದರೆ ಇಂಗ್ಲಿಷನ್ನು ಕಡೆಗಣಿಸಬೇಕೆಂದು ಹೇಳಿದಂತಾಗುವುದಿಲ್ಲ. ಕನ್ನಡಿಗರ ಮುಕ್ತಿ ಕನ್ನಡದ ಮೂಲಕವೇ ಎಂಬ ಸೂತ್ರವನ್ನು ಯಾವ ಸಂಕುಚಿತಾರ್ಥದಲ್ಲಿಯೂ ಬಳಸುತ್ತಿಲ್ಲ. ಕನ್ನಡಿಗರ ಒಕ್ಕಟ್ಟು, ಏಳಿಗೆ, ಅಭಿಮಾನ ಇವು ಗುರಿ. ನಾಡಿನಲ್ಲಿ ಪ್ರತಿಯೊಬ್ಬ ಪ್ರಜೆಯೂ ಇಂಗ್ಲಿಷನ್ನು ಕಲಿಯಬೇಕಾದ ಆವಶ್ಯಕತೆ ಬೀಳುವುದಿಲ್ಲ. ಇಂಗ್ಲಿಷನ್ನು ಕಲಿಯಬೇಕಾದವರು ಸಾವಿರಗಟ್ಟಲೆಯಾದರೆ ಕನ್ನಡವನ್ನು ಕಲಿಯಬೇಕಾದವರು ಲಕ್ಷಗಟ್ಟಲೆ, ಕೋಟಿಗಟ್ಟಲೆ. ಇಂಗ್ಲಿಷಿನ ಜ್ಞಾನ ಕನ್ನಡಕ್ಕೆ ಪೂರಕವಾಗುವಂತಹದೆ ಹೊರತು ಕನ್ನಡ ಇಲ್ಲದಿದ್ದ ಕಡೆ ಇಂಗ್ಲಿಷು ಒಂದೇ ಬೆಳಗಲಾರದು, ಮಾರ್ಗದರ್ಶನ ನೀಡಲಾರದು. ನಮ್ಮ ಜನಕ್ಕೆ ಇಂಗ್ಲಿಷೂ ಬೇಕು. ಆದರೆ ಅದಕ್ಕಿಂತ ಎಷ್ಟೋಪಾಲು ಹೆಚ್ಚಾಗಿ ಕನ್ನಡ ಬೇಕು. ಆದ್ದರಿಂದ ಮೈಸೂರು ವಿಶ್ವವಿದ್ಯಾನಿಲಯ ಆದಷ್ಟು ಬೇಗ ಜನಕ್ಕೆ ಕನ್ನಡದಲ್ಲೇ ಎಲ್ಲ ಮುಖದ ಜ್ಞಾನವನ್ನು ಬೀರುವ ಕನ್ನಡದ ವಿಶ್ವವಿದ್ಯಾನಿಲಯವಾಗಬೇಕೆಂಬುದೇ ನಮ್ಮ ಹಾರಯಿಕೆಯಾಗಿದೆ.

ಸೆನೆಟ್ಟಿನಲ್ಲಿ ಕನ್ನಡದ ಮುನ್ನಡೆಗಾಗಿ ಶ್ರೀ. ಟಿ. ತಾರೇಗೌಡರಿಂದ ಎರಡು ನಿರ್ಣಯಗಳು ಸೂಚಿತವಾಗಿದ್ದುವು:

ಒಂದು, 'ಕನ್ನಡ ಶಾಖೆಯಲ್ಲಿದ್ದ ಮೂವರು ಕನ್ನಡ ಲೆಕ್ಚರರುಗಳ ಸ್ಥಾನಗಳನ್ನು ಇಂಗ್ಲಿಷ್ ತಮಿಳು ಮತ್ತು ತೆಲುಗು ಶಾಖೆಗಳಿಗೆ ಕೊಟ್ಟುಬಿಟ್ಟುದ್ದುದನ್ನು ಮತ್ತೆ ಕನ್ನಡ ಶಾಖೆಗೇ ಸೇರಿಸಬೇಕೆಂದು ವಿಶ್ವವಿದ್ಯಾನಿಲಯ ಕೌನ್ಸಿಲಿಗೆ ಶಿಫಾರಸು ಮಾಡಬೇಕು.'

ಇನ್ನೊಂದು, 'ಕನ್ನಡ ಶಾಖೆಗೆ ಇನ್ನೊಬ್ಬರು ಪ್ರೊಫೆಸರು ಇಬ್ಬರು ಅಸಿಸ್ಟೆಂಟ್ ಪ್ರೊಫೆಸರುಗಳನ್ನು ನೇಮಿಸಿಕೊಳ್ಳುವ ಅವಕಾಶ ಮಾಡಬೇಕೆಂದು ವಿಶ್ವವಿದ್ಯಾನಿಲಯ ಕೌನ್ಸಿಲಿಗೆ ಶಿಫಾರಸು ಮಾಡಬೇಕು.'

ಈ ಎರಡು ನಿರ್ಣಯಗಳನ್ನು ಕುರಿತು ಚರ್ಚೆ ನಡೆದ ಸಂದರ್ಭದಲ್ಲಿ ಅಧಿಕಾರಿಗಳೂ ಸಭಾಸದರೂ ಪರಿಷತ್ತು ಈ ಬಗ್ಗೆ ವಿದ್ಯಾ ಮಂತ್ರಿಗಳಲ್ಲಿಯೂ ವಿಶ್ವವಿದ್ಯಾನಿಲಯದ ಸ್ಥಾನಪತಿಗಳಲ್ಲಿಯೂ ನಿಯೋಗ ಹೋಗಿದ್ದುದನ್ನು ನೆನೆದರು. ಮೊದಲನೆಯ ನಿರ್ಣಯದ ಆಶಯವನ್ನು ನಡಸಿಕೊಡುವ ಬಗ್ಗೆ ಸ್ಥಾನಪತಿಗಳು ಭರವಸೆಕೊಟ್ಟ ಮೇಲೆ ಸೂಚಕರು ಆ ನಿರ್ಣಯವನ್ನು ಹಿಂದಕ್ಕೆ ತೆಗೆದುಕೊಂಡರು. ಎರಡನೆಯ ನಿರ್ಣಯಕ್ಕೆ ಸಭೆ ಒಪ್ಪಿಗೆ ಕೊಟ್ಟಿತು.

ಭರವಸೆಗಳನ್ನು ಕೇಳಿ ಅಷ್ಟಕ್ಕೆ ತೃಪ್ತಿಪಟ್ಟುಕೊಂಡಿರುವ ಹಾಗಿಲ್ಲ. ನಿರ್ಣಯಗಳನ್ನು ಮಾಡಿ ತೆಪ್ಪಗೆ ಕೂಡುವಂತಿಲ್ಲ. ವಿಶ್ವವಿದ್ಯಾನಿಲಯ ಹುಟ್ಟಿ ಇಪ್ಪತ್ತೈದು ವರ್ಷಗಳಾಗಿ ಹೋದುವು. ಈಗೀಗ ಕನ್ನಡಕ್ಕೆ ಪ್ರಾಶಸ್ತ್ಯ ಬರುತ್ತಿದೆ. ಪ್ರಜಾಭಿಪ್ರಾಯ ಬಲಗೊಂಡು ಅಧಿಕಾರಿಗಳ ಈ ಆಶ್ವಾಸನ ಕಾರ್ಯಮುಖವಾಗಿ ಫಲಿಸಬೇಕು. ಕನ್ನಡ ಬಲವಾದಲ್ಲದೆ ಜನ ವಿದ್ಯಾವಂತರಾಗಿ ನಾಡನ್ನು ಮೇಲಕ್ಕೆತ್ತುವಂತಿಲ್ಲ.

## ಪ್ರಾಂತ ಸಮಿತಿಗಳು

ಪರಿಷತ್ತಿನ ಚಟುವಟಿಕೆಗಳನ್ನು ಇಡಿಯ ಕನ್ನಡ ನಾಡಿನಲ್ಲಿ ಹರಡುವ ಉದ್ದೇಶದಿಂದ ಪರಿಷತ್ತಿನ ಅಂಗರಚನೆಯಲ್ಲಿ ಕನ್ನಡ ನಾಡನ್ನು ಮೈಸೂರು, ಉತ್ತರ ಕರ್ನಾಟಕ, ಮಂಗಳೂರು-ಕೊಡಗು, ಹೈದರಾಬಾದು ಎಂದು ನಾಲ್ಕು ಪ್ರಾಂತಗಳಾಗಿ ವಿಭಾಗಿಸಿಕೊಂಡು, ಈಗ ಕೆಲಸ ನಡೆಯುತ್ತಿದೆಯಷ್ಟೆ. ಈ ನಾಲ್ಕು ಪ್ರಾಂತ ಸಮಿತಿಗಳಿಂದ ತಕ್ಕಷ್ಟು ಕೆಲಸ ನಡೆಯುತ್ತಿರುವುದು ಮಹಾಜನರ ಗಮನಕ್ಕೆ ಬಂದಿದೆ. ಕನ್ನಡದ ಕೆಲಸ ಹೆಚ್ಚುತ್ತಿರುವುದರಿಂದ, ಕಾರ್ಯಕ್ಷೇತ್ರವನ್ನು ನಾಡಿನ ಪ್ರತಿಯೊಂದು ಜಿಲ್ಲೆಗೂ ವಿಸ್ತರಿಸಿ, ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಕೆಲಸ ನಡಸುವ ವಿಚಾರವನ್ನು ಪರಿಷತ್ತು ಯೋಚಿಸುತ್ತಿದೆ. ಸದಸ್ಯರೂ ಹಲವರು ಈ ಬಗ್ಗೆ ಯೋಚಿಸಿ ಜಿಲ್ಲಾ ಸಮಿತಿಗಳನ್ನು ಸ್ಥಾಪಿಸಬೇಕೆನ್ನುವ ಅಭಿಪ್ರಾಯ ಉಳ್ಳವರಾಗಿದ್ದಾರೆ.

ಬದುಕಿನ ಎಲ್ಲ ವ್ಯಾಪಾರಗಳಿಗೂ ಕನ್ನಡ ಒದಗಬೇಕೆಂಬುದು ಪರಿಷತ್ತಿನ ಹೆಬ್ಬಯಕೆಯಾಗಿರುವುದರಿಂದ, ಪ್ರತಿಯೊಂದು ಜಿಲ್ಲೆಯಲ್ಲಿಯೂ ಸ್ಥಳೀಯ ಪರಿಷತ್ತುಗಳಂತೆ ಸಮಿತಿಗಳು ಏರ್ಪಟ್ಟು, ಅಕ್ಷರ ಪ್ರಚಾರ, ಸಾಹಿತ್ಯ ಪರೀಕ್ಷೆಗಳು, ಗಮಕ ಶಿಕ್ಷಣ, ಓಲೆಗ್ರಂಥ ಸಂಗ್ರಹಣ, ಸಂಘಪ್ರಸಾರಣ ಮುಂತಾದ ಪರಿಷತ್ತಿನ ಏರ್ಪಾಟುಗಳನ್ನು ಜನತೆಯಲ್ಲಿ ಹರಡುವ ಸರಿಯಾದ ವ್ಯವಸ್ಥೆಯಾಗಬೇಕಾಗಿದೆ. ಒಂದು ದೊಡ್ಡ, ಇಲ್ಲ, ಎರಡುಮೂರು ಸಣ್ಣ ಜಿಲ್ಲೆಗಳನ್ನು ಒಂದು ಪ್ರಾಂತವಾಗಿಟ್ಟುಕೊಂಡು, ಆ ನಿಟ್ಟಿಗೆ ಒಂದು ಕೇಂದ್ರಸ್ಥಳ ವನ್ನಿಟ್ಟು, ಕಾರ್ಯಸಮಿತಿಗೂ ಈ ಸ್ಥಳೀಯ ಸಮಿತಿಗಳಿಗೂ ಸಂಬಂಧವನ್ನು ಕಲ್ಪಿಸಿ ಕರ್ನಾಟಕದ ಮೇಲೆಲ್ಲಾ ಪರಿಷತ್ತು ನಿರಂತರವಾಗಿ ಕಾರ್ಯಯೋಜನೆ ಮಾಡುವುದಕ್ಕೆ ಈಗ ಕಾಲ ಹದವಾಗಿದೆಯೆಂದು ಭಾವಿಸುತ್ತೇವೆ. ಬರುವ ವಾರ್ಷಿಕಾಧಿವೇಶನದಲ್ಲಿ ಈ ದಿಕ್ಕಿನಲ್ಲಿ ಒಂದು ವ್ಯವಹಾರ್ಯವಾದ ಯೋಜನೆಯನ್ನು ಸಿದ್ಧಪಡಿಸುವ ಪ್ರಯತ್ನ ನಡೆಯುವುದೆಂದು ನಿರೀಕ್ಷಿಸುತ್ತೇವೆ.

## ಕನ್ನಡ 'ರನ್ನ' ಪರೀಕ್ಷೆ

ಜನರಲ್ಲಿ ಕನ್ನಡ ಸಾಹಿತ್ಯದ ಜ್ಞಾನವನ್ನು ಹರಡುವ ಉದ್ದೇಶದಿಂದ ಪರಿಷತ್ತು ಮೂರು ವರ್ಷಗಳಿಂದ 'ಕಾವ', 'ಜಾಣ' ಪರೀಕ್ಷೆಗಳನ್ನು ನಡಸಿಕೊಂಡು ಬರುತ್ತಿದೆಯಷ್ಟೆ. ನಾಡಿನಲ್ಲೆಲ್ಲ ಈ ಪರೀಕ್ಷೆಗಳಿಗೆ ಜನರ ಬೆಂಬಲ ಹೆಚ್ಚುತ್ತಿದೆಯೆಂದು ಧಾರಾಳವಾಗಿ ಹೇಳಬಹುದು. ಸದ್ಯಕ್ಕೆ 'ಜಾಣ' ಪರೀಕ್ಷೆಯೆ ಪ್ರೌಢ ಪರೀಕ್ಷೆಯಾಗಿದೆ. ಇನ್ನೂ ಹೆಚ್ಚಿನ ಮಟ್ಟದ ಕನ್ನಡ ವ್ಯಾಸಂಗಕ್ಕೆ ಅವಕಾಶವಾಗುವಂತೆ 'ರನ್ನ' ಪರೀಕ್ಷೆಯನ್ನು ಏರ್ಪಡಿಸುವ ಯೋಚನೆ ಪರಿಷತ್ತಿಗಿರುವುದು ಮಹಾಜನರಿಗೆ ತಿಳಿದ ವಿಷಯವಾಗಿದೆ. 'ಜಾಣ' ಪರೀಕ್ಷೆಯಲ್ಲಿ ತೇರ್ಗಡೆಹೊಂದಿರುವ ನೂರಾರು ವಿದ್ಯಾರ್ಥಿಗಳು ಇನ್ನೂ ಹೆಚ್ಚಿನ ಕನ್ನಡ ವ್ಯಾಸಂಗವನ್ನು ಮಾಡುವ ಬಯಕೆಯಿಂದ 'ರನ್ನ' ಪರೀಕ್ಷೆಯ ಏರ್ಪಾಟನ್ನು ಸ್ವಾಗತಿಸುತ್ತಿದ್ದಾರೆ. ಆದ್ದರಿಂದ ಮುಂದಿನ ವರ್ಷದಿಂದಲಾದರೂ ಆರು ತಿಂಗಳು ಇಲ್ಲವೆ ಒಂದು ವರ್ಷದ ಪಾಠಕ್ರಮವನ್ನು ಗೊತ್ತುಮಾಡಿ ಜನರಲ್ಲಿ ಇನ್ನೂ ಹೆಚ್ಚಿನ ಕನ್ನಡದ ಜ್ಞಾನವನ್ನು ಹರಡುವಂತೆ 'ರನ್ನ' ಪರೀಕ್ಷಾ ವರ್ಗಗಳನ್ನು ತೆರೆಯಲು ಸಾಧ್ಯವಾದೀತೆಂದು ಪರಿಷತ್ತು ನಂಬಿಕೊಂಡಿದೆ.

## ಪರಿಷತ್ತಿನ ಪುಸ್ತಕಮಾಲೆ

ಇದು ಪ್ರಜಾಪ್ರಾಬಲ್ಯದ ಕಾಲ. ತಿಳಿವಳಿಕೆಯ ಮಟ್ಟ ಜನರಲ್ಲಿ ಹೆಚ್ಚಿದಲ್ಲದೆ ಸ್ವಂತ ಕೆಲಸಗಳಾಗಲಿ ರಾಷ್ಟ್ರದ ಕೆಲಸಗಳಾಗಲಿ ಹಸನಾಗಿ ನಡೆಯುವುದಿಲ್ಲ. ಪ್ರಪಂಚದ ಇತರ ಪ್ರಜಾಪ್ರಭುತ್ವದ ರಾಷ್ಟ್ರಗಳೊಂದಿಗೆ ಹೋಲಿಸಿದರೆ, ನಮ್ಮ ಜನ ಈ ವಿಷಯದಲ್ಲಿ ಎಷ್ಟು ಹಿಂದೆ ಬಿದ್ದಿದ್ದಾರೆಂದು ಕಾಣಬಹುದು.

ನಮ್ಮ ದೇಶದಲ್ಲಿ ಈಚೆಗೆ ವಯಸ್ಕರಲ್ಲಿ ಅಕ್ಷರ ಪ್ರಚಾರವಾಗುತ್ತಿದೆ. ಸರ್ಕಾರಿ ಮತ್ತು ಖಾಸಗಿ ವಿದ್ಯಾಸಂಸ್ಥೆಗಳು ವಿದ್ಯಾವಂತರ ಸಂಖ್ಯೆಯನ್ನು ಹೆಚ್ಚಿಸುತ್ತಿವೆ. ಪತ್ರಿಕೆಗಳೂ ಹೆಚ್ಚಿ ಜನರಲ್ಲಿ ಓದುವ ಅಭಿರುಚಿ ಹೆಚ್ಚುತ್ತಿದೆ. ಪ್ರಪಂಚದ ವಿದ್ಯಮಾನಗಳು ಜನರಲ್ಲಿ ತಿಳಿವಳಿಕೆಯ ಹಸಿವನ್ನು ಕೆರಳಿಸಿವೆ. ಈ ಪರಿಸ್ಥಿತಿಗೆ ತಕ್ಕಂತೆ ಗ್ರಂಥರಚನೆಯಾಗಬೇಕಾದ್ದು ಉಚಿತವೇ ಆಗಿದೆ.

ಸಾಹಿತ್ಯವೇ ಅಲ್ಲದೆ, ವಿಜ್ಞಾನ, ಸಮಾಜಶಾಸ್ತ್ರ, ಅರ್ಥಶಾಸ್ತ್ರ ಮುಂತಾದ ಜ್ಞಾನ ಭಾಗಗಳಲ್ಲಿ ಕಡಮೆ ಬೆಲೆಯ ಪುಸ್ತಕಗಳನ್ನು ಪ್ರಕಟಿಸಿ ಜನರಲ್ಲಿ ಪ್ರಪಂಚ ಜ್ಞಾನವನ್ನು ಹರಡುವುದು ಪರಿಷತ್ತಿನ ಮುಖ್ಯವಾದ ಗುರಿಗಳಲ್ಲಿ ಒಂದಾಗಿದೆ. ಈಗ ಪರಿಷತ್ತಿಗೆ ತಕ್ಕ ಅನಕೂಲಗಳಿಂದ ಕೂಡಿದ ಅಚ್ಚುಕೂಟವೂ ಒದಗಿದೆ. ಈಗಾಗಲೆ ಗ್ರಂಥರಚನೆಯ ವ್ಯವಸಾಯ ಒಂದು ಹದಕ್ಕೆ ಬಂದು, ಇಂಥ ಏರ್ಪಾಟಿಗೆ ಸಹಕಾರನೀಡಬಲ್ಲ ಬರಹಗಾರರ ತಂಡವೂ ನಮ್ಮ ನಾಡಿನಲ್ಲಿ ಹೆಚ್ಚುತ್ತಿದೆ. ಮುಂದಿನ ವರ್ಷದಿಂದ 'ಪುಸ್ತಕಮಾಲೆ'ಯೊಂದನ್ನು ಹೊರಡಿಸಲು ಸಾಧ್ಯವಾದೀತೆಂದು ಪರಿಷತ್ತು ನಂಬಿದೆ. ಇದಕ್ಕೆ ಉದಾರಿಗಳಾದ ಧನಿಕರ ಮತ್ತು ವಿದ್ವಾಂಸರ ನೆರವನ್ನು ಬೇಡುತ್ತೇವೆ.

## ವಿಶ್ವವಿದ್ಯಾನಿಲಯದಲ್ಲಿ ಪತ್ರಿಕೋದ್ಯಮ ಶಿಕ್ಷಣ

ಈಚೆಗೆ ಬೆಂಗಳೂರಿನಲ್ಲಿ ನಡೆದ ಮೈಸೂರು ವಿಶ್ವವಿದ್ಯಾನಿಲಯದ ಸೆನೆಟ್ ಸಭೆಯಲ್ಲಿ, ವಿಶ್ವವಿದ್ಯಾನಿಲಯದಲ್ಲಿ ಪತ್ರಿಕೋದ್ಯಮವನ್ನು ಒಂದು ಪಾಠ ವಿಷಯವಾಗಿ (Post Secondary Course) ಗೊತ್ತು ಮಾಡಬೇಕೆಂದು ಶ್ರೀ. ಬಿ. ಪುಟ್ಟಯ್ಯನವರು ಸೂಚಿಸಿದ ನಿರ್ಣಯಕ್ಕೆ ಬಹುಮತ ದೊರೆತು ನಿರ್ಣಯದ ಅಂಗೀಕಾರವಾಯಿತು.

ನಮ್ಮ ದೇಶದಲ್ಲಿ ಪತ್ರಿಕೋದ್ಯಮ ಈಗೀಗ ತಲೆ ಎತ್ತುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿಯೋ; ಅದು ಸಾಲದೆಂದರೆ ಇಂಟರ್‌ಮೀಡಿಯೆಟ್ ಪರೀಕ್ಷೆಯಲ್ಲಿಯೋ ತೇರ್ಗಡೆ ಹೊಂದಿದವರಿಗೆ. ಪತ್ರಿಕೋದ್ಯಮದ ಶಿಕ್ಷಣ ಕೊಡುವ ವ್ಯವಸ್ಥೆ ಬೇಗ ಏರ್ಪಟ್ಟರೆ, ಜ್ಞಾನಪ್ರಸಾರಕ್ಕೆ ಬಹು ಮುಖ್ಯ ಸಾಧನವಾದ ನಮ್ಮ ಪತ್ರಿಕೆಗಳ ಅಭಿವೃದ್ಧಿಗೆ ಬಹಳಮಟ್ಟಿನ ಅವಕಾಶ ಪ್ರೋತ್ಸಾಹ ಉಂಟಾಗುವುದರಲ್ಲಿ ಸಂಶಯವಿಲ್ಲ. ಈ ಶಿಕ್ಷಣ ಕನ್ನಡದಲ್ಲಿಯೇ ನಡೆದರೆ ಇನ್ನೂ ಉತ್ತಮ.

## ಮಹಿಳಾ ಸದನ, ಮೈಸೂರು

೨೭–೧೧–೫೩ನೆಯ ಶುಕ್ರವಾರ ಸಂಜೆ ೬ ಗಂಟೆಗೆ ಸರಿಯಾಗಿ ಮಹಿಳಾ ಸದನದಲ್ಲಿ ಒಂದು ಸಾಮಾನ್ಯ ಸಭೆಯನ್ನು ಏರ್ಪಡಿಸಲಾಗಿತ್ತು. ಪ್ರಾರಂಭದಲ್ಲಿ ಶ್ರೀ. ಗಮಕಿ ಶ್ರೀಕಂಠಯ್ಯನವರು ಕುಮಾರವ್ಯಾಸನ ವಿಷಯವಾಗಿ ಕೆಲವು ಪದ್ಯಗಳನ್ನು ಸುಶ್ರಾವ್ಯವಾಗಿ ಓದಿದರು. ಅನಂತರ ಇವರ ಶಿಷ್ಯೆಯರಾದ ಶ್ರೀಮತಿಗಳಾದ ಕಮಲಮ್ಮ, ಲಕ್ಷ್ಮೀನರಸಮ್ಮ ಮತ್ತು ಸೀತಮ್ಮ ಇವರುಗಳು ಕುಮಾರವ್ಯಾಸ ಭಾರತದ ಕೆಲವು ಪದ್ಯಗಳನ್ನು ಓದಿ ಸಭಿಕರನ್ನು ಆನಂದಗೊಳಿಸಿದರು.

ಬಳಿಕ ಶ್ರೀ. ಜಿ. ಆರ್. ರಂಗಸ್ವಾಮಿಯವರು ಉಪನ್ಯಾಸಕರಾದ ಶ್ರೀ. ಕೆ. ವೆಂಕಟರಾಮಪ್ಪನವರನ್ನು ಸಭಿಕರಿಗೆ ಪರಿಚಯ ಮಾಡಿಕೊಡುತ್ತ, "ಇವರು ಬಹು ಹಾಸ್ಯಮಯ ವಾಗ್ಮಿಗಳೆಂದು ಪ್ರಸಿದ್ಧರಾಗಿದ್ದಾರೆ. ಅವರು ಪಂಡಿತರಾದರೂ ಸಾಮಾನ್ಯ ಜನರಿಗೆ ತಿಳಿಯುವಂತೆ ಕನ್ನಡ ಸಾಹಿತ್ಯದ ವಿಷಯವಾಗಿ ಒಂದು ಸಣ್ಣ ಪುಸ್ತಕವನ್ನು ಬರೆದು ಉಪಕಾರ ಮಾಡಿದ್ದಾರೆ. ಬಹು ಸೌಜನ್ಯ ಸ್ವಭಾವದವರಾಗಿ ಬಾಲಕರಿಗೆಲ್ಲ ಬಹಳ ಬೇಕಾದವರಾಗಿದ್ದಾರೆ" ಎಂದು ಹೇಳಿದರು.

ಅನಂತರ ಶ್ರೀ. ವೆಂಕಟರಾಮಪ್ಪನವರು ಕುಮಾರವ್ಯಾಸನ ಕಾಲ, ಜೀವನ, ಅವನ ಕಾವ್ಯದ ವೈಶಿಷ್ಟ್ಯ ಮುಂತಾದವುಗಳನ್ನು ತಿಳಿಸಿ, ಉತ್ತರನ ವಿಷಯವಾಗಿ ಕವಿ ಚಿತ್ರಿಸಿರುವ ಭಾಗವನ್ನು ವಿವರಿಸಿ, ಸಭಿಕರನ್ನು ಸಂತೋಷಗೊಳಿಸಿದರು. ವಂದನಾರ್ಪಣೆಯೊಡನೆ ಸಭೆ ಮುಕ್ತಾಯವಾಯಿತು.

## ತಿದ್ದಿದ ಕನ್ನಡ ಲಿಪಿ

**ಸುಳಿವು**

೧) ದೀರ್ಘ ಸ್ವರಕ್ಕೆ—ೀ; ಪಾ – **ಪೀ**, ಯಾ – **ಯೀ**.

೨) ಮಹಾಪ್ರಾಣಕ್ಕೆ—ಹೊಕ್ಕುಳು ಸೀಳುವುದು : ಖ – **ಕ**.

೩) ಒತ್ತಕ್ಷರಗಳನ್ನು ಉಚ್ಚಾರಣೆಯ ಕ್ರಮದಲ್ಲಿ ಬಿಡಿಸುವುದು :—ಪುಟ್ಟುತ್ತುರುಳ್ವ–**ಪುಟ್‌ಟುತ್‌ತುರುಳ್‌ವ**, ಪ್ರಯಾಸ–**ಪ್‌ರಯೀಸ**, ರಸವತ್ಕವಿತೆ– **ರಸವತ್‌ಕವಿತೆ.**

ಕೇಳಲೊಡಂ ಕಿವಿ ಸವಿಯೊಳ
ಗೇಳದೊಡಂ ತನ್‌ಮನಂ ಮುಳುಂಗದೊಡಂ ಸೌ
ಕ್ಯಯೀಲಂಬಿಯೆನಿಪ ಚಿತ್‌ತಂ
ಲೀಲೆಯೊಳವಗೇಹಮಿರದೊಡಂ ಸತ್‌ಕೃತಿಯೇ
—**ಹರಿಹರ**

ಧರೆಯೊಳ್ ಮೇಣ್ ಪುಟ್‌ಟಿ ಪುಟ್‌ಟುತ್‌ತುರುಳ್‌ವ
ನರರ ಮೇಲುರ್‌ಬಿ ಕಬ್‌ಬಂಗಳಂ ಬಿ
ತ್‌ತರಿಸುತ್‌ತುಂ ಸಪ್‌ರಯೀಸಂ ಕೆಲಕೆಲರಕಟೀ
ಕಬ್‌ಬಿಗರ್ ಕೆಟ್‌ಟು ಪೋದರ್
ಹರಿದೇವಂ ದೇವದೇವೋತ್‌ತಮನ ಶರಣರಂ ಪೇಡಿ
ಕೈವಲ್‌ಯ ಲಕ್‌ಷ್‌ಮೀ
ವರನೇದಂ ಮತ್‌ತವಂಗತ್‌ಯಧಿಕ ಶಿವಕವೀಂಧ್‌ರಂಗದೇರ್
ಸಾಟಿಯಪ್‌ಪರ್

ರಸೆಯೊಳ್ ರಸವತ್‌ಕವಿತೆಯ
ನುಸಿರಲ್ ಪಡೆದಸಮನಯನನಂ ಪೊಗಳದೆ ಮೀ
ನಿಸರಂ ಸುರರಂ ಪೊಗಳ್‌ವುದು
ಕಸವರಮಂ ಕಳೆದು ಕಸವನೀಂತವೊಲಕ್‌ಕುಂ

ಆರೀರೀರರ್ ಶೀಸ್‌ತ್‌ರ
ಶ್‌ರೀರೋಹಣ ಗಿರಿಯನಲ್‌ಲಿ ನವಕವಿತೀ ಚಿಂ
ತೀರತ್‌ನಂ ದೊರೆಗುಮೆ ಮೀ
ರೀರಿಯ ಕೃಪೆಯಿಲ್‌ಲದಂಗೆ ಧರಣೀತಳದೊಳ್
—**ಷಡಕ್ಷರಿ**

## ಪರಿಷತ್ತಿನ ಸುದ್ದಿ

### ಕಾರ್ಯಸಮಿತಿಯ ಸಭೆ

೬–೧೨–೧೯೪೨ನೆಯ ಭಾನುವಾರ ಬೆಳಗ್ಗೆ ೯ ಗಂಟೆಗೆ ಕಾರ್ಯಸಮಿತಿ ಬೆಂಗಳೂರಿನಲ್ಲಿ ಸಭೆ ಸೇರುತ್ತದೆ.

### ಕನ್ನಡ ಸಾಹಿತ್ಯ ಪರೀಕ್ಷೆಗಳು

ಜನವರಿ ತಿಂಗಳಲ್ಲಿ ನಡೆಯಲಿರುವ ಸಾಹಿತ್ಯ ಪರೀಕ್ಷೆಗಳಿಗೆ ಕೂಡಬಯಸುವವರು ಡಿಸೆಂಬರ್ ೧೫ರೊಳಗೆ ತಮ್ಮ ಅರಿಕೆಯೋಲೆಗಳನ್ನು ಕಳಿಸಬೇಕು.

### ಪ್ರಶಸ್ತಿ ಪತ್ರಿಕೆಗಳ ವಿನಿಯೋಗ

ಕಳೆದ ಜೂನ್ ತಿಂಗಳಲ್ಲಿ ಸಾಹಿತ್ಯ ಪರೀಕ್ಷೆಗಳಲ್ಲೂ ಈ ವರ್ಷದ ಗಮಕ ಪರೀಕ್ಷೆಯಲ್ಲೂ ತೇರ್ಗಡೆಯಾದ ಬೆಂಗಳೂರಿನ ವಿದ್ಯಾರ್ಥಿಗಳಿಗೆ ೬–೧೨–೪೨ನೆಯ ಭಾನುವಾರ ಸಂಜೆ ೬ ಗಂಟೆಗೆ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಪ್ರಶಸ್ತಿ ಪತ್ರಿಕೆಗಳನ್ನು ಕೊಡಲಾಗುವುದು.

### ಮಹಿಳಾ ಶಾಖೆ

ಪರಿಷತ್ತಿನ ಮಹಿಳಾ ಶಾಖೆಯ ಆಶ್ರಯದಲ್ಲಿ **ಗಾಯನ ಸ್ಪರ್ಧೆ** ೨೯–೧೧–೪೨ನೆಯ ಭಾನುವಾರ ಬೆಳಗ್ಗೆ ಶ್ರೀಕೃಷ್ಣರಾಜ ಪರಿಷನ್ಮಂದಿರದಲ್ಲಿ ನಡೆಯಿತು. ಸುಮಾರು ಇಪ್ಪತ್ತು ಮಂದಿ ಹೆಣ್ಣುಮಕ್ಕಳು ಸ್ಪರ್ಧೆಯಲ್ಲಿ ಭಾಗವಹಿಸಿದ್ದರು. ಫಲಿತಾಂಶ ಕೆಳಗಿನಂತೆ ಇರುವುದು.

ಮೊದಲನೆಯ ಬಹುಮಾನ: ಶ್ರೀಮತಿ ಸಬೀರಾ ಬೇಗಂ. ಎರಡನೆಯ ಬಹುಮಾನ: ಶ್ರೀಮತಿ ಎಂ. ಕೌಸಲ್ಯ. ಮೂರನೆಯ ಬಹುಮಾನ: ಶ್ರೀಮತಿಗಳಾದ ನಾಗರತ್ನ ಮತ್ತು ವಿ. ಶಾಂತಾ.

**ಭರತನಾಟ್ಯ ಪ್ರದರ್ಶನ, ಉಪನ್ಯಾಸ**

ತಾ॥ ೩೦–೧೧–೪೨ನೆಯ ಭಾನುವಾರ ಸಂಜೆ ಶ್ರೀ. ಎಚ್. ವಿ. ಸೀತಮ್ಮನವರ ಅಧ್ಯಕ್ಷತೆಯಲ್ಲಿ ಭರತನಾಟ್ಯ ಪ್ರದರ್ಶನ, ಉಪನ್ಯಾಸ ನಡೆದವು.

ಮಾನ್ಯ ಉಪನ್ಯಾಸಕರಾದ ಶ್ರೀ. ಯು. ಎಸ್. ಕೃಷ್ಣರಾಯರು ತಮ್ಮ ಭಾಷಣದಲ್ಲಿ ಈ ರೀತಿ ತಿಳಿಸಿದರು.

"ನೃತ್ಯ ಬಹಳ ಉಲ್ಲಾಸದಾಯಕವಾದ ಲಲಿತ ಕಲೆ. ಈಗ ಇದಕ್ಕೆ ಜನಾದರಣೆ ತಪ್ಪಿರುವುದು ಬಹಳ ಶೋಚನೀಯವಾಗಿದೆ. ಭಾರತೀಯ ನೃತ್ಯ ಪದ್ಧತಿಯಲ್ಲಿ ಉತ್ತರ ಹಿಂದೂಸ್ಥಾನದ ಕಥಕ್, ಮಣಿಪುರದ ಮಣಿಪುರಿ, ತಮಿಳುನಾಡಿನ ಭರತ ನಾಟ್ಯ, ಕೇರಳದ ಕಥಕ್ಕಳಿ ಈ ನಾಲ್ಕು ವಿಭಾಗಗಳು ಹೆಸರಾದವು. ಇವುಗಳಲ್ಲಿ ಭರತ ನಾಟ್ಯ ರಸಿಕರ ಹೃದಯವನ್ನು ಸೂರೆಗೊಂಡಿರುವುದು. ಗಂಭೀರವಾದ ತಾಂಡವ, ಲಲಿತವಾದ ಲಾಸ್ಯ ಇದರ ಎರಡು ಕವಲುಗಳು. ಅಭಿನಯವೇ ಇದರ ಜೀವಾಳ. ಮುದ್ರೆಗಳಿಂದಲೂ ತಲೆ, ಹುಬ್ಬು, ಕಣ್ಣುಗಳ ಚಲನೆಗಳಿಂದಲೂ ಮನಸ್ಸಿನ ಇಂಗಿತವನ್ನು ಸಹೃದಯರಿಗೆ ಸ್ಪಷ್ಟವಾಗಿ ತಿಳಿಸುವುದು ಈ ನೃತ್ಯದ ವೈಶಿಷ್ಟ್ಯ. ಕಥಕ್ಕಳಿಯಲ್ಲಿ ನೃತ್ಯ ರಭಸವಾಗಿ ಸಾಗುತ್ತದೆ. ಇದನ್ನು ಲಕ್ಷಣವಾಗಿ ನರ್ತಿಸುವುದು ಕಷ್ಟ ಸಾಧ್ಯ. ಯಾವ ವಿಧದ ನರ್ತನ ಮಾಡಿದರೂ ಕಲಾವಿದನು ತನ್ನ ಪಾತ್ರದಲ್ಲಿ ತನ್ಮಯನಾದರೆ ಮಾತ್ರ ಅದು ಶೋಭಿಸುವುದು. ಇಲ್ಲದಿದ್ದರೆ ಅವನ ಶ್ರಮ ವ್ಯರ್ಥವಾಗುತ್ತದೆ."

ಉಪನ್ಯಾಸವಾದನಂತರ ಕುಮಾರಿ ಲಲಿತ, ಶ್ರೀಮತಿ ಚಂದ್ರಭಾಗಾ ದೇವಿಯವರು, ಶ್ರೀ. ಯು. ಎಸ್. ಕೃಷ್ಣರಾಯರು ಮನೋಹರವಾಗಿ ನರ್ತನ ಮಾಡಿ, ಕಿಕ್ಕಿರಿದು ನೆರೆದಿದ್ದ ಸಭಿಕರನ್ನು ಆನಂದಪರವಶರನ್ನಾಗಿ ಮಾಡಿದರು.

## ಕನ್ನಡ ಸುದ್ದಿ

### ಕರ್ನಾಟಕ ಸೇವಾ ಸಮಾಜ, ಹೈದರಾಬಾದು

(ವರದಿ: ಶ್ರೀ. ಎನ್. ಎನ್. ಕಠಾವಿಯವರು, ಕಾರ್ಯದರ್ಶಿ)

ಕರ್ನಾಟಕ ಸೇವಾ ಸಮಾಜದ ಆರನೆಯ ವಾರ್ಷಿಕೋತ್ಸವ ಶ್ರೀ. ಸಿ. ರಂಗಾಚಾರ್ಯ, ಎಂ.ಎ., ಎಲ್‌ಎಲ್.ಬಿ. ಅವರ ಅಧ್ಯಕ್ಷತೆಯಲ್ಲಿ ಬಹು ವಿಜೃಂಭಣೆಯಿಂದ ನೆರವೇರಿತು.

೧೮–೧೧–೪೨ನೆಯ ದಿನ ಪ್ರೊ. ಡಿ. ಕೆ. ಭೀಮಸೇನರಾವ್, ಎಂ.ಎ. ಅವರು 'ಕವಿ ಲಕ್ಷ್ಮೀಶ' ಎಂಬ ವಿಷಯದ ಮೇಲೂ, ಕನ್ನಡಕಂದ ಕಾವ್ಯಾನಂದರು 'ಶರಣ ಸಾಹಿತ್ಯ' ಎಂಬ ವಿಷಯದ ಮೇಲೂ ರಸವತ್ತಾದ ಭಾಷಣಗಳನ್ನು ಮಾಡಿದರು. ಅಂದೇ ಕುಮಾರಿ ಕೆ. ಅಂಬೂ ಅವರ ಕಲಾಪೂರಿತವಾದ ನೃತ್ಯ ರಾತ್ರಿ ೯ ಘಂಟೆಗೆ ನಡೆಯಿತು.

೧೯–೧೨–೪೨ರ ದಿನ ಮೈಸೂರು ಆಸ್ಥಾನ ಮಹಾವಿದ್ವಾನ್ ಪಂಡಿತರತ್ನಂ ಕಾನಕಾನಹಳ್ಳಿ ನಾರಾಯಣ ಶಾಸ್ತ್ರಿಗಳು 'ಗೀತಾ ಗಾಂಭೀರ್ಯ' ಎಂಬ ವಿಷಯದ ಮೇಲೆ ವಿದ್ವತ್ಪೂರ್ಣವಾದ ಭಾಷಣ ಮಾಡಿದರು.

ಅದೇ ರಾತ್ರಿ ಪ್ರೊ॥ ಎನ್. ಕೆ. ಕುಲಕರ್ಣಿಯವರ 'ಇಲೆಕ್‌ಶನ್' ಎಂಬ ನಾಟಕವನ್ನು ಅಭಿನಯಿಸಲಾಯಿತು.

**ಬೆಂಗಳೂರು : ಸೆಂಟ್ರಲ್ ಕಾಲೇಜು ಕರ್ಣಾಟಕ ಸಂಘ**

ಮೇಲ್ಕಂಡ ಸಂಘದ ಆಶ್ರಯದಲ್ಲಿ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ೧–೧೨–೪೨ನೆಯ ಮಂಗಳವಾರ ೫-೩೦ ಘಂಟೆಗೆ "ಪೋಲಿಕಿಟ್ಟಿಯ ಪ್ರಥಮ ಪರಿಚಯ" ಎಂಬ ವಿಷಯವನ್ನು ಕುರಿತು ಶ್ರೀ. ಜಿ. ಪಿ. ರಾಜರತ್ನಂ, ಎಂ.ಎ. ಅವರಿಂದ ಉಪನ್ಯಾಸ ನಡೆಯಿತು.

೬೫೦—೧೯೪೨ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

## ಮಾಸ್ಕೊ ಆರ್ಟ್ ಥಿಯೇಟರ್

(೩೭ನೆಯ ಪುಟದಿಂದ)

ಹತ್ತಿರದಿಂದ ನೋಡಿ ವ್ಯಾಸಂಗ ಮಾಡಿಬರಬೇಕೆಂದು ಏರ್ಪಾಡಾಗುತ್ತದೆ. 'ಪ್ಹೀರ್ ಘೈಂಟ್' ಸಂಬಂಧದಲ್ಲಿಯೂ ಹೀಗೆಯೆ ನಡೆಯಬೇಕೆಂದಾಯಿತು. ಈ ನಾಟಕವನ್ನಾಡಬೇಕೆಂದು ತೀರ್ಮಾನಿಸಿದಾಗ ಅವರು ನನ್ನನ್ನು ಕೇಳಿದ ಮೊದಲ ಪ್ರಶ್ನೆ, ನಾನು ನಾರ್ವೆ ನೋಡಿದ್ದೇನೆಯೆ ಎಂದು. ನಾನು ನೋಡಿಲ್ಲವೆಂದೆ. ಹಾಗಾದರೆ, ಅಲ್ಲಿಗೆ ಹೋಗಬೇಕು ; ಅಲ್ಲಿನ ಸ್ಥಿತಿಯನ್ನೆಲ್ಲಾ ಪರಿಶೀಲಿಸಬೇಕು ಎಂದರು ಅವರು. ನಾನದಕ್ಕೆ ಒಪ್ಪಲಿಲ್ಲ. ಒತ್ತಾಯಪಡಿಸಿದರು. ಯಾವ ಸ್ಥಳಕಲ್ಪನೆ ಅನುಕೂಲ ಏರ್ಪಾಡುಗಳು ಆ ಪ್ರವಾಸಕ್ಕೆ ಬೇಕಾದರೂ ತಾವು ಒದಗಿಸಿಕೊಡುವೆವೆಂದರು. ನಾನು ಹೇಳಿದೆ: ಹಿನ್ನೆಲೆ ಚಿತ್ರಗಳನ್ನೂ ದೃಶ್ಯಗಳನ್ನೂ ಕಲ್ಪನೆಯಿಂದಲೇ ಮೊದಲು ನಿರ್ಮಾಣ ಮಾಡಿಕೊಳ್ಳುವುದು ನನ್ನ ಪದ್ಧತಿ ; ಆಮೇಲೆ ಬೇಕಾದರೆ ನಾರ್ವೆಗೆ ಹೋಗಬಹುದು ; ವಸ್ತುವಿನ ಹೃದಯವನ್ನು ಹಿಡಿದು, ಅದಕ್ಕೆ ಒಪ್ಪುವ ಹಿನ್ನೆಲೆಯ ಚಿತ್ರಗಳನ್ನು ಕಲ್ಪನೆಗೆ ಹೊಳೆದಂತೆ ನಿರ್ಮಾಣ ಮಾಡುವುದು ಅಗತ್ಯ; ಆದುದರಿಂದ ಗ್ರಂಥಕರ್ತನ ಅಥವಾ ಕೃತಿಕಾರನ ನಿರ್ಮಿತಿಯ ಆಳದಲ್ಲಿ ಅಡಗಿರುವ ಒಳ ಸತ್ವಗಳನ್ನು ಮೊದಲು ಕಂಡುಕೊಳ್ಳಬೇಕೆಂಬುದೇ ನನ್ನ ಉದ್ದೇಶ ; ಆಯಾಪ್ರದೇಶದ ವಸ್ತುಸತ್ಯದೊಡನೆ ಸೇರಿಕೊಂಡು ಇದರ ಜೀವಸತ್ಯ ಕೆಡಬಾರದು, ಎಂದೆ. ಕಡೆಗೆ ನನ್ನ ದೃಷ್ಟಿ ಅವರಿಗೊಪ್ಪಿತು. ಆದರೆ ಎಲ್ಲ ಮುಖ್ಯ ನಟರನ್ನೂ ಕರೆದು ನಾರ್ವೆ, ಸ್ವೀಡನ್ ದೇಶಗಳನ್ನು ಬೇಸಗೆಯ ರಜದಲ್ಲಿ ನೋಡಿಕೊಂಡು ಬರಬೇಕೆಂದು ಕಳಿಸಿದರು. ನಾಟಕಕ್ಕೆ ಸ್ಫೂರ್ತಿ ಕೊಟ್ಟ ಪ್ರದೇಶದಲ್ಲಿಯೇ ನಾಟಕದಲ್ಲಿ ಕಾಣುವ ಪರಿಸ್ಥಿತಿಯನ್ನೆಲ್ಲ ತಿಳಿದುಕೊಂಡು ಬರಲು ಅವರಿಗೆ ಅಪ್ಪಣೆಯಾಯಿತು. ಸುಗ್ಗಿಯ ಹೊತ್ತಿಗೆ ನಾನು ನಾಟಕಕ್ಕಾಗಿ ಮಾಡಿದ್ದ ಸ್ಥೂಲ ಚಿತ್ರಗಳನ್ನು ಕುರಿತು ಚರ್ಚಿಸಿದಾಗ ನನ್ನ ದೃಷ್ಟಿರೀತಿಯೇ ಸರಿಯೆಂದು ನಿರ್ಣಯವಾಯಿತು ; ನಾರ್ವೆಯಿಂದ ಹಿಂತಿರುಗಿದವರು ನಾನು ಕಲ್ಪಿಸಿದ್ದ ನಾರ್ವೆಯೇ ಹೆಚ್ಚು ಸತ್ಯವಾದುದೆಂದು ಒಪ್ಪಿದರು.

ಈ ನಾಟಕ ಪ್ರದರ್ಶನದಲ್ಲಿ, ಹದಿನೈದು ದೃಶ್ಯಗಳುಳ್ಳ ಒಟ್ಟು ಆ ನಾಟಕವನ್ನೆಲ್ಲ–ಬಹುತರ ಅದೇ ಮೊದಲ ಸಾರಿ–ಪ್ರದರ್ಶಿಸಬೇಕೆಂದು ವ್ಯವಸ್ಥೆಯಾಗಿತ್ತು. ಒಂದೇ ಒಂದು ಹಿನ್ನೆಲೆಯ ಚಿತ್ರವನ್ನಾಗಲಿ ಪುನರಾವರ್ತನೆ ಮಾಡಕೂಡದೆಂದು ನಿಶ್ಚಯಿಸಿತ್ತು. ವೇಷಕ್ಕೆ ತಕ್ಕ ಮುನ್ನೂರು ಬಗೆಯ ಉಡುಪುಗಳನ್ನು ನಕ್ಷೆಮಾಡಬೇಕಾಯಿತು. ಪ್ರತಿ ಅಂಕಕ್ಕೂ ಪೂರ್ತಿ ಪ್ರತ್ಯೇಕವಾದ ಸನ್ನಿವೇಶವನ್ನು ಒದಗಿಸಿ ನಾಟಕದ ವಿವಿಧತೆಯನ್ನು ಪೋಷಿಸತಕ್ಕದ್ದೆಂದು ತೀರ್ಮಾನ ಮಾಡಿತ್ತು. ಬಹುವೇಳೆ ಇಂತಹ ವಿವರಾಂಶಗಳಿಗೆ ಅತಿಯಾಗಿ ಗಮನ ಕೊಡುವ ಕಾರಣದಿಂದ ಮಾಸ್ಕೊ ಆರ್ಟ್ ಥಿಯೇಟರ್ ಮೇಲೆ ಅದರ ರೂಪಣವಿಧಾನ ಅತಿವಾಸ್ತವಿಕವಾದುದೆಂಬ ಆಕ್ಷೇಪಣೆ ಹೊತ್ತಿದೆ. ಆದರೆ ಈ ಬಗೆಯ ವಸ್ತುರೂಪಣ ಹಿಂದಿನ ಶತಮಾನದಲ್ಲಿ ರೂಢಿಯಲ್ಲಿದ್ದ ಬಾಹ್ಯಲಕ್ಷಣಗಳ ನಿರೂಪಣವಲ್ಲ. ಮೇಟರ್ಲಿಂಕ್ ನಾಟಕಗಳೂ ವಾಸ್ತವಿಕವಾದವೇ. ಆದರೆ ಯಾರೇ ಆಗಲಿ, ಆತನ ವಸ್ತುದೃಷ್ಟಿ ಅಗ್ಗವಾದುದೆಂದು ಆಕ್ಷೇಪಣೆ ಮಾಡಲಾರರು. ಮಾಸ್ಕೊ ಆರ್ಟ್ ಥಿಯೇಟರ್ ವಿಷಯದಲ್ಲಿಯೂ ಇದೇ ಸತ್ಯ. ಅಲ್ಲಿ ಪ್ರದರ್ಶನಗಳು ವಸ್ತುನಿಷ್ಠವಾದಂತೆ ಕಂಡರೂ ಕೇವಲ ಪ್ರತಿಕೃತಿಗಳಲ್ಲ, ಅವು ನೈಜವಾದವು. ಯಕ್ಷ ಕಿನ್ನರರ ಅತಿ ಚೆಲುವಾದ ಕಥೆಗಳು ಬದುಕಿನಂತೆಯೇ ನಿಜವಾಗಿರುವುದೆಂದು ಒಪ್ಪುವುದಿಲ್ಲವೆ? ಇಂಥ ರಮ್ಯ ಕಥೆಯನ್ನೇ ಮಾಸ್ಕೊ ನಟರು ರೂಪಿಸುವುದು. [1] ಜ಼ಾರ್ ಫ್ಯೊಡೋರ್ (Tzar Feodor), [2] ಜೂಲಿಯಸ್ ಸೀಜ಼ರ್, [2] ಹ್ಯಾಮ್ಲೆಟ್ ಮುಂತಾದ ಸುಂದರ ಚಿತ್ರರೂಪಕ ಪ್ರದರ್ಶನಗಳಲ್ಲಿ ಮಾತ್ರವೇ ಅಲ್ಲ ; ರಷ್ಯನ್ ಜೀವನವನ್ನು ಪ್ರತಿಬಿಂಬಿಸುವ ನಾಟಕಗಳಲ್ಲಿಯೂ ಎಂದರೆ, ಹೊರಗೆ ಮಾತ್ರ ಕಾಣುವ ಒಂದು ಹತ್ತಿರ ಸಂಬಂಧವನ್ನು ತೋರಿಸುವುದಕ್ಕಿಂತ ಹೆಚ್ಚಾಗಿ ಬದುಕಿನ ನಿಜವಾದ ದುರಂತತೆಗಳನ್ನು ಕಾಣಿಸುವ ಪ್ರಸಂಗಗಳಲ್ಲಿಯೂ ಈ ಅಂಶ ಮನದಟ್ಟಾಗುವುದು.

ಹೀಗೆ ಕೆಲಸ ಮೊದಲಾಯಿತು. ಇಬ್ಸೆನ್ ನಾಟಕಕ್ಕೆ ಸಹಜವಾದ ವಿವರಾಂಶಗಳನ್ನೂ ರಚನೆಯನ್ನೂ ಕುರಿತ ಚರ್ಚೆಗಳಲ್ಲಿ ಹಲವು ಸಂಜೆಗಳು ಕಳೆದವು. ಮಂಡಲಿಗೆ ಸಂಬಂಧಿಸಿದ ವ್ಯಕ್ತಿಗಳಲ್ಲಿ ಪ್ರತಿಯೊಬ್ಬರ ವಿಶೇಷ ಲಕ್ಷಣವೂ ಈ ಚರ್ಚೆಗಳಲ್ಲಿ ಹೊರಬಿದ್ದಿತು. ಸ್ಟಾನಿಸ್ಲಾವ್‌ಸ್ಕಿ ಅವರ ಸಂದೇಹ ಭೂಯಿಷ್ಠವಾದ ಹಾಸ್ಯ, ನೆಮಿರೋವಿಚ್-ಡಾನ್ಚೆಂಕೊ ಅವರ ಮಿತಭಾಷೆ ಅಥವಾ ಮೌನ, ನಿರ್ದೇಶಕ–ನಟರಾದ ಮಾರ್‍ಯೋಫ್ ಅವರ ಕಕೇಷಿಯನ್ ನೇತ್ರರ ಚುರುಕು–ಎಲ್ಲ ಕಾಣಿಸಿದುವು. ಈ ನಕ್ಷೆಗಳಿಗೆ ರೂಪುಕೊಡಲು ಯಾವ ಯಾವ ಚಿತ್ರಕಾರರ ಸಹಾಯ ಬೇಕೆಂದು ನನ್ನನ್ನು ಕೇಳಿದರು. ಅತಿ ನಿಪುಣರಾದ ಚಿತ್ರಗಾರರ ನೆರವನ್ನು ಒದಗಿಸಬಲ್ಲರೆಂದು ತಿಳಿದಿದ್ದ ನಾನು, ಅವರಲ್ಲಿ ಶ್ರೇಷ್ಠರಾದ ಹಲವರ ಹೆಸರನ್ನು ಸೂಚಿಸಿ ಅವರಲ್ಲಿ ತಮಗೆ ಶಕ್ಯ ತೋರಿದವರನ್ನು ಕೊಡಬಹುದೆಂದು ಕೇಳಿದೆ. 'ಒಬ್ಬರು ಏಕೆ, ಬೇಕಾದರೆ ಎಲ್ಲರನ್ನೂ ಜೊತೆಗೆ ತೆಗೆದುಕೊಳ್ಳಿ' ಎಂದು ಉತ್ತರ ಬಂದಿತು. 'ಕೆಲಸ ಹಂಚೋಣ ; ಪ್ರತಿ ಕಲೆಗಾರನೂ ತಾನು ಮೆಚ್ಚುವಂತಹದನ್ನು, ತನ್ನ ಯೋಗ್ಯತೆ ಸ್ವಭಾವಗಳಿಗೆ ಹತ್ತಿರವಿದೆಯೆಂದು ತಿಳಿಯುವುದನ್ನು ತೆಗೆದುಕೊಳ್ಳಲಿ' ಎಂದರು. ಸರಿ ; ಐವರು ಉತ್ತಮ ಸಹಾಯಕರು ದೊರೆತರು. ಅವರಲ್ಲಿ ಒಬ್ಬೊಬ್ಬರಿಗೂ ಮೇಲ್ತರದ ಒಂದೊಂದು ಚೆಲುವಾದ ಶಿಲ್ಪಶಾಲೆ ಸಿಕ್ಕಿತು; ಆತನ ಕೆಲಸ ಅತ್ಯುತ್ತಮವಾಗಿ ಮುಗಿಯುವುದಕ್ಕೆ ಸಾಕಾಗುವಷ್ಟೆಲ್ಲ ಸಮಯದ ಅವಧಿ ಸಿಕ್ಕಿತು. ಕೆಲಸಕ್ಕೆ ಸಂಬಂಧಿಸಿದಂತೆ ಏನಾದರೂ ಸಂದೇಹ ಉಂಟಾದರೆ ನನಗೆ ಹೇಳಿಕಳಿಸಿ ಕರಸುತ್ತಿದ್ದರು. ಪೆಟ್ರೊಗ್ರಾಡಿಂದ ಅಲ್ಲಿಗೆ ಹೋಗಿ ಅವರೊಡನೆ ಚರ್ಚಿಸಿ ಯಾವ ತಪ್ಪುಗಳೂ ಆಗದಂತೆ ವ್ಯವಸ್ಥೆಗೊಳಿಸುವುದು ಹೀಗೆ ಶಕ್ಯವಾಯಿತು. ಅವರನ್ನು ನಾನೂ ನನ್ನನ್ನು ಅವರೂ ಅರಿತುಕೊಂಡು ಕೆಲಸ ನಡೆಯುವುದಾಯಿತು.

ಹಿನ್ನೆಲೆಗಳೆಲ್ಲ ಸಿದ್ಧವಾದಾಗ ದೃಶ್ಯಗಳಿಗೆ ಅವು ಒಪ್ಪುವುವೊ ಇಲ್ಲವೊ ಎಂಬ ಪರೀಕ್ಷೆ ನಡೆಯಿತು. ಪ್ರದರ್ಶನ ಬಹು ನಿಡಿದಾಗುವ ಕಾರಣದಿಂದ ನಾಲ್ಕು ಪೂರ್ತಿ ದೃಶ್ಯಗಳನ್ನು ಕತ್ತರಿಸಬೇಕೆಂದು ಹೇಳಿದರು. ಈ ವಿಷಯದಲ್ಲಿ ಯಾವ ಭಿನ್ನಾಭಿಪ್ರಾಯವೂ ಉಂಟಾಯಿತೆನ್ನಬೇಡಿ. ನಾಟಕವನ್ನು ಆ ಮಟ್ಟಿಗೆ ಸಂಕ್ಷೇಪಿಸಿದರೂ ಅದೂ ಒಂದು ಸೃಷ್ಟಿ ಕೃತಿಯೇ ಆಯಿತು: ಕೇವಲ ಕಾಗದದ ಯೋಜನೆಯಲ್ಲ, ಭಾವವನ್ನು ಸಾಂಗವಾಗಿ ರೂಪುಗೊಳಿಸಿದಂತೆ ಕಾರ್ಯ ನಡೆಯಿತಾದ್ದರಿಂದ ಚೆನ್ನಾಯಿತು. ಪರಸ್ಪರ ಒಪ್ಪಿಕೊಂಡು ಬಹುಕಾಲ ಹಿಡಿಯಬಹುದೆನ್ನುವ ಎಲ್ಲವನ್ನೂ, ಭಾರವಾದೀತೆಂಬುದೆಲ್ಲವನ್ನೂ ತೆಗೆದು ಹಾಕಿಬಿಟ್ಟೆವು.

ನಟರ ಮತ್ತು ಇತರ ವರ್ಗಗಳ ಸಂಬಂಧದಲ್ಲಿಯೂ ಇದೇ ಕ್ರಮ ನಡೆಯಿತು. ಬಹುಕಾಲ ಹಿಡಿದ ಮತ್ತು ವಿವರ ವಿವರವಾದ ಚರ್ಚೆಗಳಾದ ತರುವಾಯವೇ ನಟರನ್ನು ಆಯಾ ಪಾತ್ರ ನಿರ್ವಣಕ್ಕೆ ಆರಿಸಿತು. ಐವತ್ತು ಅಭ್ಯಾಸಗಳು ಮುಗಿಯುವವರೆಗೂ ಯಾರಿಗೂ ಅಭ್ಯಾಸ ಸಂಪೂರ್ಣವಾಯಿತೆಂಬ ಅನುಭವ ಉಂಟಾಗಲಿಲ್ಲ. ನಾವು ಗ್ರೀಗ್[3] ಸಂಗೀತವನ್ನೇ ಉಪಯೋಗಿಸಿಕೊಂಡೆವು. ಮಾಸ್ಕೊ ಆರ್ಟ್ ಥಿಯೇಟರ್ ಗಾನಮೇಳದ ನಿರ್ದೇಶಕನೂ, ಗಾನನಿರ್ಮಾಣಕಾರನೂ ಕೂಡಿ ಗ್ರೀಗ್ ಅವರ ಸಂಗೀತ ಕೃತಿಯನ್ನು ನಮ್ಮ ನಾಟಕಕ್ಕೆ ಸೊಗಸಾಗಿ ಹೊಂದಿಸಿದರು. ಆಷೆಯ ಮೃತಿಯ ದೃಶ್ಯಕ್ಕೆ ಕಡಲ ಗಾನವನ್ನು ಹೊಂದಿಸುವುದು ಬಹು ಕಾಲ ಹಿಡಿಯಿತು. ಯಾವ ಖಚಿತವಾದ ಸ್ಥಳಗಳಲ್ಲಿ ಯಾವ ಯಾವ ಸಾಧನಶಕ್ತಿಗಳನ್ನು ಕೂಡಿಸಿಡಬೇಕು, ಕಡಲ ಅಂತರಾಳದ ಗಾನದೊಡನೆ ನಾದ ಶಕ್ತಿಯ ಪರಮಾವಧಿ

[1] ಇದು ರಷ್ಯಾದೇಶದ ಕೌಂಟ್ ಅಲೆಕ್ಸಿ ಟಾಲ್‌ಸ್ಟಾಯ್ ೧೮೬೮ರಲ್ಲಿ ಬರೆದ ಒಂದು ನಾಟಕ. [2] ಇಂಗ್ಲೆಂಡಿನ ಷೇಕ್ಸ್‌ಪಿಯರ್ ಬರೆದ ನಾಟಕಗಳು.

[3] ಇ. ಎಚ್. ಗ್ರೀಗ್ (೧೮೪೩–೧೯೦೭)–ಪ್ಹೀರ್ ಘೈಂಟ್ ನಾಟಕದ ಒಟ್ಟು ಕಥೆಯನ್ನು ಗಾನವಾಗಿ ರಚಿಸಿದ ನಾರ್ವೆ ದೇಶದ ಸಂಗೀತ ಕೃತಿಕಾರ

ಇಂಪನ್ನು ಉಪಯೋಗಿಸಿಕೊಳ್ಳಬೇಕು ಎಂಬುದೆಲ್ಲ ಇತ್ಯರ್ಥವಾಯಿತು. ಈ ಸಂಗತಿ ತಿಳಿದರೆ ಅಷ್ಟು ಮಂದಿ ಮಹಿಳೆಯರ ಕಣ್ಣಲ್ಲಿ ನೀರು ತುಳುಕಿದುದು ಏಕೆಂದು ಅರ್ಥವಾಗುವುದು. ಯಕ್ಷಿಣಿ (Trolls) ಗುಹೆಯಲ್ಲಿನ ಸಂಗೀತ, ಸಾಲ್ವೆಗ್ ದೃಶ್ಯ, ಅನಿತ್ರಾ ನರ್ತನ, ಇವೆಲ್ಲ ಆ ದೃಶ್ಯದಲ್ಲಿ ಪರಿಚಿತವಾದುವಾದರೂ ಮಹಾಜನಕ್ಕೆ ಪೂರ್ತಿ ಹೊಸ ಸಂಗೀತದಂತೆ ಆ ಗ್ರೀಗ್ ಸಂಗೀತ ಕೇಳಿಸಿತು; ಏಕೆಂದರೆ ಅದಕ್ಕೆ ಒಂದು ಹೊಸ ಲಕ್ಷಣವನ್ನೇ ಕೊಟ್ಟಂತಾಗಿತ್ತು ; ಆದಕ್ಕೆ ನಿಜವಾದ ಒಂದು ಹೊಸ ಜೀವಕಳೆಯಿತ್ತು..

ಹಲವು ಕಲೆಗಳು ಸೇರಿ ಆದ ಇಷ್ಟು ತೊಡಕಿನ ಕೆಲಸ ಶ್ರಮವಿಲ್ಲದೆ ಆಯಿತೆಂದಾಗಲಿ ಯಾವಾಗಲೂ ಶಾಂತವಾಗಿಯೇ ಹರ್ಷಪೂರ್ಣವಾಗಿಯೇ ಇತ್ತೆಂದಾಗಲಿ ಯಾರೂ ಬಗೆಯಲಾರರು : ನರ್ತನದಲ್ಲಿ ಹೊಸದಾಗಿ ಕೆಲವು ಹೆಜ್ಜೆ ಹಾಕಬೇಕಾಗಿ ಬರಲು ಅನಿತ್ರಾ ಕಣ್ಣಲ್ಲಿ ಕೆಲವು ಸಲ ನೀರು ಬಂದ ನೆನಪಿದೆ ನನಗೆ; ಮಾಡುತ್ತಿದ್ದುದನ್ನು ಬದಲಾಯಿಸುವುದಾಗಲಿ ಹೊಸ ಭಾವವ್ಯಂಜನ ರೀತಿಗಳನ್ನು ಹುಡುಕುವುದಾಗಲಿ ಆಯಾಸತರುವ ಕೆಲಸ. ಕೆಲವೇಳೆ ಮುಖ್ಯನಟರು ಕೆಲವರ ಮುಖ ಕಠಿನವಾಗುತ್ತಿದ್ದುದನ್ನೂ ನೆಮಿರೊವಿಚ್–ಡಾನ್ಚೆಂಕೊ ಅವರ ವಿಮರ್ಶೆ ಇದ್ದಕ್ಕಿದ್ದಂತೆ ಎರಗಿ ಬರುವಂತೆಯೂ ಚಚ್ಚುವಂತೆಯೂ ಇದ್ದುದನ್ನೂ ನೋಡುವಾಗ, ಅಲ್ಲಿಗೆ ಹೊರಗಿನವನಾದ ನನಗೆ, ಎಲ್ಲಿ ಎಲ್ಲ ಮುರಿದು ಬೀಳುವುದೊ ಎಂಬ ವಿಚಾರ ಹಲವೇಳೆ ಬರುತ್ತಿತ್ತು. ಮಾರನೆಯ ದಿನ ಕೆಲಸವನ್ನು ಇನ್ನು ಹೇಗೆ ಮುಂದುವರಿಸಿಯಾರು ಎನ್ನಿಸುತ್ತಿತ್ತು. ಮಾರನೆಯ ದಿನ ಬಂದಿತು ; ಪ್ರತಿಯೊಬ್ಬರೂ ಹೊಸ ಶಕ್ತಿಯಿಂದಲೂ ಹೊಸ ಭಾವಗಳೊಡನೆಯೂ ಬಂದರು ; ಹೊಸ ಸಾಧ್ಯತೆಗಳು ಕಣ್ಣಿಗೆ ಕಾಣುವಂತಾಗುತ್ತಿತ್ತು. ಕೆಲವೇಳೆ ಒಬ್ಬ ನಟನೋ ನಟಿಯೋ ನನ್ನ ಬಳಿಗೆ ಬರುವರು. "ನಿಜ ಹೇಳುತ್ತೇನೆ, ಇನ್ನು ಹೆಚ್ಚಾಗಿ ಏನನ್ನೂ ಮಾಡಲಾರೆ ನಿನ್ನೆ ಮಾಡಿದುದರಲ್ಲಿ ಯಾವುದೊ ನನ್ನ ಪಾತ್ರದ ಸಹಜ ರೂಪಣವಾಗಲಿಲ್ಲ ; ಅತಿ ಸಾಮಾನ್ಯವಾಗಿ ಕಂಡಿತು. ನಾನು ಚೀರಿದಾಗ ತೋರಿಕೆಯಂತಿದ್ದಿತೇ ಹೊರತು ಭಾವಗರ್ಭಿತವಾಗಲಿಲ್ಲ -- ಭಾವ ವ್ಯಂಜನಕ್ಕೆ ಬೇರೆ ಮಾರ್ಗವನ್ನು ಕಂಡುಕೊಳ್ಳಬೇಕು" ಎಂದು ಹೇಳುವರು. ನನಗೆ ಒಂದಂತೂ ನಿಶ್ಚಯ : ಮನಸ್ಸಿನಲ್ಲಿ ಬೇರೆ ಬಗೆಯ ವ್ಯಂಜನ ಬೇಕೆಂದು ಖಂಡಿತವಾಗಿ ತೋರಿದರೆ ಅದು ಬಂದೇ ಬರುತ್ತದೆ ಎಂಬುದು. ನೈಜವಾದ ಇಂಥ ಕೆಲಸದಲ್ಲಿ ಭಾಗವಹಿಸುವುದೇ ಒಂದು ಸಂತೋಷ. ಅದು ಸುಲಭವಲ್ಲ; ಬುದ್ಧಿಗೆ ಹೊಸ ಪ್ರಯತ್ನದ ಶ್ರಮ ಒದಗಿಸುವಂಥದು. ಒಂದು ಸಣ್ಣ ಅಂಶದಲ್ಲಿ ಕೆಲಸ ಆಗಬೇಕಿದ್ದರೆ ಕೂಡ, ಉದಾಹರಣೆಗೆ, ಬಿರುಗಾಳಿ ಮತ್ತು ನೌಕಾಭಂಗ ಪ್ರದರ್ಶನದ ಯೋಜನೆಯಲ್ಲಿ, ಏಕಾಗ್ರತೆ ಇತ್ತು. ಪ್ರತಿ ಅಂಶವೂ ಇಂತಿಂತಹ ಕ್ಷಣದಲ್ಲಿ ಹೊಂದಿಕೊಳ್ಳಬೇಕೆಂದು ವ್ಯವಸ್ಥವಾಗಿತ್ತು. ಇದರ ಫಲ : ಕಡಲ ಬೇನೆಯೇ ಉಂಟಾಗುವಷ್ಟು ವಾಸ್ತವವಾಯಿತು ಆ ದೃಶ್ಯದ ರೂಪಣ. ಇನ್ನೊಂದು ಉದಾಹರಣೆ : ನಾಟಕದಲ್ಲಿನ ಕರಾಳಮೂರ್ತಿ ಗೋಡೆಯಿಂದಲೇ ಎದ್ದು ಕಾಣುವಂತೆ ಅನೇಕ ಬಗೆಯ ಪ್ರಯತ್ನ ಮಾಡಿದೆವು. ಕಡೆಗೆ ಅದು ಪ್ಷೇರ್ ಘೈಂಟನ ಮೇಲಂಗಿಯೊಳಗಿಂದ ಸಹಜವಾಗಿ ಎದ್ದುಬರುವಂತೆ ರೂಪುಗೊಂಡಿತು. ನೌಕಾಭಂಗದ ಕ್ಷೋಭೆಯ ವಾಸ್ತವತೆ ಇದರ ಭ್ರಾಂತಿಯನ್ನು ಹೆಚ್ಚಿಸಿತು. ಹೌದು; ಈ ಸಹಕಾರ ನಿಜವಾಗಿಯೂ ಒಂದು ಸಂತೋಷ. ಸಣ್ಣ ಅಮುಖ್ಯ ಪಾತ್ರಗಳ ವೇಷವಸ್ತ್ರ ಮತ್ತು ತಲೆಗೂದಲ ಒಪ್ಪಕಟ್ಟಿಗಾಗಿ ಕೂಡ ಎಷ್ಟು ಲಕ್ಷ್ಯ ಕೊಟ್ಟತ್ತೆಂಬುದನ್ನು ವಸ್ತ್ರ ಹೊಲಿಯುವ ವೃತ್ತಿಯ ಕಲೆಗಾರರೂ ವೇಣೀ ಬಂಧನದ ವೃತ್ತಿಯವರೂ ಕಂಡಿದ್ದರಾಗುತ್ತಿತ್ತು ಎನಿಸುತ್ತದೆ.

ಅಲ್ಲಿನ ಪ್ರತಿಯೊಂದು ಸಣ್ಣ ಸಂಗತಿಯ ಸುರಚನೆಯೂ ಎಷ್ಟು ಎಚ್ಚರಿಕೆಯಿಂದಾಗುವುದೆಂಬುದನ್ನು ನೋಡಬೇಕು; ಆಗ ಗೊತ್ತಾಗುವುದು, ಮಾಸ್ಕೊ ಆರ್ಟ್ ಥಿಯೇಟರ್ ನಾಟಕ ಪ್ರದರ್ಶನದ ಮೊದಲ ದಿನ ಎಲ್ಲವೂ ಅಷ್ಟು ಸುಗಮವಾಗಿ ಹೇಗೆ ನಡೆಯುವುದು ? ಏತಕ್ಕೆ ? ಎಂದು. ಎಲ್ಲವೂ ತಮಗೆ ಸರಿಯಾದ ಸ್ಥಾನಮಾನದಲ್ಲಿ ಕಾಣುವುವು. ಆ ದಿನ ಮಾಡಲು ಯಾವುದೂ ಉಳಿದಿರದು. ಎಲ್ಲವೂ ಆ ಮುಂಚೆಯೆ ಪೂರ್ತಿಗೊಂಡಿರುವುದರಿಂದ ಪ್ರದರ್ಶನ ಪೂರ್ತಿ ಸುಲಭವಾಗುವುದು.

ಅಲ್ಲಿ ಪ್ರೇಕ್ಷಕ ವೃಂದವೇಕೆ ನಿಶ್ಶಬ್ದವಾಗಿರುವುದು, ಗಂಭೀರವಾಗಿರುವುದು, ನಾಟಕ ಪ್ರದರ್ಶನದ ಸಮಯದಲ್ಲಿ – ಎಂಬುದರ ಮರ್ಮ ಈಗ ನಿಮಗೆ ತಿಳಿದೀತು : ಪ್ರದರ್ಶನದ ಪ್ರಭಾವ ಕೇವಲ ಯಾವುದೊ ಒಂದು ನಾಟಕದ ಪ್ರಭಾವದಂತಿರುವುದಿಲ್ಲ. ಅತಿಶಯವಾದ ಒಂದು ಮನಃಶಿಕ್ಷಣದ ಪ್ರಸಂಗ ಅದು, ನಿಜವಾದ ಕಲಾನಂದದಿಂದ ತುಂಬಿರುವದು ಎಂದು ಹೊಳೆಯುವುದು. ಈ ಕಾರಣದಿಂದಲೇ ರಷ್ಯಾದೇಶದ ಪುನರುಜ್ಜೀವನದಲ್ಲಿಯೂ, ಅದರ ಭವಿಷ್ಯವನ್ನು ಕುರಿತ ಎಲ್ಲ ಪ್ರಶ್ನೆಗಳಲ್ಲಿಯೂ ಮಾಸ್ಕೊ ಆರ್ಟ್ ಥಿಯೇಟರಿನ ಸ್ಥಾನ, ಗೂಢಾರ್ಥ ಮುಖ್ಯವಾಗುವುವು. ಈ ನಾಟಕ ಸಂಸ್ಥೆಯನ್ನು ಅನುಕರಿಸಿದ ಸಂಸ್ಥೆಗಳವರು ಎಷ್ಟೋ ಮಂದಿ. ಇದೇ ಭಾವದಿಂದ ಹಲವು ಕಿರಿಯ ಪ್ರದರ್ಶನ ಸಾಹಸಗಳು ಏರ್ಪಟ್ಟದ್ದೂ ಉಂಟು. ಆದರೆ ಈ ಮಂಡಲಿಯ ನಿಜವಾದ ಸಂಪ್ರದಾಯ ಅನುಕರಣಕ್ಕೆ ಒಳಪಡುವಂಥದಲ್ಲ. ಇದು ವ್ಯಕ್ತಿವಿಶಿಷ್ಟವಾದ್ದು; ಇನ್ನೊಂದು ಸಲ ಇನ್ನೊಂದರಿಂದ ಹೀಗೆಯೇ ಈ ಬಗೆಯ ಕೆಲಸ ಆವೃತ್ತಿ ಆಗದು.

## ಮೈಸೂರು ಸಂಸ್ಥಾನದಲ್ಲಿ ಅಕ್ಷರ ಪ್ರಚಾರ

**ಸರ್ ಎಂ. ವಿಶ್ವೇಶ್ವರಯ್ಯನವರೊಂದಿಗೆ ಕಾರ್ಯದರ್ಶಿಗಳ ಭೇಟಿ**

ಸಂಸ್ಥಾನದ ಅಕ್ಷರ ಪ್ರಚಾರ ಸಮಿತಿಯ ಕಾರ್ಯದರ್ಶಿಗಳು ೨೯–೧೧–೪೨ನೆಯ ಭಾನುವಾರ ಸಂಜೆ ೫ ಗಂಟೆಗೆ ಸರ್ ಎಂ. ವಿಶ್ವೇಶ್ವರಯ್ಯನವರನ್ನು ಭೇಟಿಮಾಡಿ, ಸಂಸ್ಥಾನದ ಅಕ್ಷರ ಪ್ರಚಾರ ಕಾರ್ಯಯೋಜನೆಯನ್ನು ಅವರೊಂದಿಗೆ ಚರ್ಚಿಸಿದರು. ಪ್ರಚಾರ ಕಾರ್ಯ ಪ್ರಗತಿಯನ್ನು ಕೇಳಿ ಅವರು ಮೆಚ್ಚಿಗೆಯನ್ನು ತೋರಿಸಿದರು.

ಮಾತುಕತೆಗಳಲ್ಲಿ ಕೆಳಗೆ ಕಂಡ ಸಂಗತಿಗಳನ್ನು ಕುರಿತ ವಿಚಾರ ನಡೆಯಿತು. ಅಕ್ಷರ ಪ್ರಚಾರ ಕಾರ್ಯ ಯಶಸ್ವಿಯಾಗಿ ಮಾಡಬೇಕಾದರೆ ದೇಶದಲ್ಲೆಲ್ಲ ಒಮ್ಮುಖವಾದ ಉತ್ಸಾಹ ಹುಟ್ಟುವಂತೆ ಏರ್ಪಡಿಸಬೇಕು. ಸರ್ಕಾರದ ಎಲ್ಲ ಇಲಾಖೆಗಳ ಜನರು, ಸ್ಥಳೀಯ ಸಂಸ್ಥೆಗಳು—ಎಲ್ಲರೂ ಸೇರಿ ಹುರುಪಿನಿಂದ ಕೆಲಸ ನಡಸಬೇಕು. ಅಲ್ಲೊಂದು ಕಡೆ ಇಲ್ಲೊಂದು ಕಡೆ ತರಗತಿಗಳು ನಡೆದರೆ ಸಾಲದು. ಅಲ್ಲದೆ ಓದು ಬರಹ ಕಲಿತದ್ದರಿಂದ ಪ್ರಯೋಜನವುಂಟೆಂದು ವಯಸ್ಕರು ತಿಳಿಯುವ ಹಾಗೆ ಮಾಡಬೇಕು. ಅಕ್ಷರ ಕಲಿತವರಲ್ಲಿ ಜ್ಞಾನದ ಹಸಿವು ಹೆಚ್ಚುವಂತೆ ಮತ್ತು ಅವರು ನಾಗರಿಕ ಹಕ್ಕುಬಾಧ್ಯತೆಗಳನ್ನು ಪಡೆದು ಅವನ್ನು ಉಪಯೋಗಿಸುವ ಅರ್ಹತೆ ಪಡೆಯುವಂತೆ ವ್ಯವಸ್ಥೆ ಮಾಡಬೇಕು. ಇದಕ್ಕೆ ತಕ್ಕ ಸಾಧನೋಪಾಯಗಳನ್ನು ಯೋಚಿಸಬೇಕು.

ಮುಂದೆ ಈ ಕಾರ್ಯ ದೇಶಾದ್ಯಂತ ದೊಡ್ಡ ಯೋಜನೆಯಾಗಿ ಪರಿಣಮಿಸಲೆಂದು ಸರ್ ಎಂ. ವಿಶ್ವೇಶ್ವರಯ್ಯನವರು ಹಾರೈಸಿದರು. ಮುಂದೆ ಇದರ ಪ್ರಗತಿಯನ್ನು ಬಹಳ ಉತ್ಸುಕತೆಯಿಂದ ಎದುರು ನೋಡುತ್ತಿರುವುದಾಗಿ ತಿಳಿಸಿದರು.

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಅಣೆ ೧೨
ಬಿಡಿ ಪತ್ರಿಕೆ: ೬ ಕಾಸು



ಸಂಪಾದಕ:
ಬಿ. ಎಂ. ಶ್ರೀಕಂಠಯ್ಯ; ಎಂ.ಎ., ಬಿ.ಎಲ್.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮–೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೮

ಬೆಂಗಳೂರು: ಶುಕ್ರವಾರ, ಡಿಸೆಂಬರ್ ೧೧, ೧೯೪೨

## ತಿದ್ದಿದ ಕನ್ನಡ ಲಿಪಿ

ಸುಳಿವು

(೧) ದೀರ್ಘ ಸ್ವರಕ್ಕೆ— ೕ; ಪಾ – **ಪೕ**, ತಾ – **ತೕ**.

(೨) ಮಹಾಪ್ರಾಣಕ್ಕೆ— ಹೊಕ್ಕುಳು ಸೀಳುವುದು: ಭ – **ಭ**.

(೩) ಒತ್ತಕ್ಷರಗಳನ್ನು ಉಚ್ಚಾರಣೆಯ ಕ್ರಮದಲ್ಲಿ ಬಿಡಿಸುವುದು:— ವಿಕಲ್ಪಿಸದೆ – **ವಿಕಲ್‌ಪಿಸದೆ,** ಮುಗ್ಗಿರುವ – **ಮುಗ್‌ಗಿರುವ**

೭

ತಪ್‌ಪದೇರದು । ತಿಳಿದು ನೋಡಿ ತಪ್‌ಪದೇರದು
ತಪ್‌ಪು ನೆಪ್‌ಪುಗಳ ವಿಕಲ್‌ಪಿಸದೆಲ್‌ಲವ
ನೊಪ್‌ಪುಗೆಯ್‌ದೆನ್‌ನನೊಲಿದು ಪೕಲಿಸು ಕೃಶ್‌ಣ

ಅೕರಯ್‌ಯೆ ಮುಗ್‌ಗಿರಿವಂಧನ ತಪ್‌ಪೋ
ದೕರಿದೋರುವ ದಂಡಧೕರನ ತಪ್‌ಪೋ
ಮೇರೆಯರಿಯದೆನ್‌ನ ಮೇಲಣ ತಪ್‌ಪೋ
ನೕರೕಯಣ ನಿನ್‌ನ ನಟನೆಯ ತಪ್‌ಪೋ

ತೊಂಡು ಮೇವ ಪಸುವಿಂಡಿನ ತಪ್‌ಪೋ
ಕಂಡು ಕೕಯದ ತುರುಗೕವನ ತಪ್‌ಪೋ
ಗಂಡು ಮೀರುವೆನ್‌ನ ಗೆಯ್‌ಮೆಯ ತಪ್‌ಪೋ
ಕೊಂಡೕಳುವ ನಿನ್‌ನ ಕೂರ್‌ಮೆಯ ತಪ್‌ಪೋ

ಬೕವಿಯ ಬಳಸುವ ಪಸುಳೆಯ ತಪ್‌ಪೋ
ತೕವಂದು ತಡೆಯದ ತೕಯದು ತಪ್‌ಪೋ
ಈ ವಿಷಯಕೆ ಮುಗ್‌ಗುವೆನ್‌ನದು ತಪ್‌ಪೋ
ಅೕ ವೇಳಿಗೕಪುಗೆಯ್‌ಯದ ನಿನ್‌ನ ತಪ್‌ಪೋ

ಗುರಿಯ ತೕಕದ ಮೊನೆಗೋಲಿನ ತಪ್‌ಪೋ
ಕುರಿತೆಸೆಯದ ಬೀರಗುವರನ ತಪ್‌ಪೋ
ಬರುಗೆಯ್‌ಮೆ ಗೆಯ್‌ವೆನ್‌ನ ಭೕವದ ತಪ್‌ಪೋ
ಅರಿವುದೋರಿಸದ ನಿನ್‌ನೕಟದ ತಪ್‌ಪೋ

ಒೕಜೆಗುಂದುವ ವೀಣೆಯುಲುಹಿನ ತಪ್‌ಪೋ.
ಬೕಜಿಸುವನ ಕಯ್‌ಯ ಪವಣಿನ ತಪ್‌ಪೋ
ರೕಜ ಶ್‌ರೀ ಚಿಕದೇವರೕಯನಿಗೊಲಿದ ಶ್‌ರೀ
ರೕಜಗೋಪಾಲ ನಿರೕಕರಿಸದೆ ಪೕಳು

— ಶ್‌ರೀ ಚಿಕದೇವರೕಯ

## 'ಜೀವನ-ನಾಟಕ' ಚಲನ ಚಿತ್ರ

### ಪ್ರೊ. ಜಾಗೀರದಾರರ ಅಭಿಪ್ರಾಯ

'ಜೀವನ ನಾಟಕ'ದಲ್ಲಿ ಕನ್ನಡಿಗರ ಕಲಾಜೀವನದ ಚಿತ್ರವಿದೆ; ಮಾನವನ ಸಂಸಾರ ನಾಟಕವಿದೆ. ಇವೆರಡಕ್ಕಾಗಿಯೇ ಮನರಂಜಕವಾಗಬಹುದಾದ ಈ ಮೊದಲನೆಯ ಸಾಮಾಜಿಕ ಚಿತ್ರಪಟದಲ್ಲಿ ಕರ್ನಾಟಕದ ಎರಡು ವೈಶಿಷ್ಟ್ಯಗಳಿವೆ; ಒಂದು ಸೃಷ್ಟಿಸೌಂದರ್ಯ. ಇನ್ನೊಂದು ಸುಮಧುರ ಸಂಗೀತ. ಇದಲ್ಲದೆ ವಿನೋದ ರತ್ನಾಕರ ವೀರಣ್ಣನವರ ಹಾಸ್ಯ. ಗುಬ್ಬಿಯಂತೆ ಹತ್ತಿರದಲ್ಲಿಯೆ ಅತ್ತಿಂದಿತ್ತ ಸುಳಿಯುತ್ತಿದ್ದ ಕನ್ನಡ ಚಿತ್ರಪಟಕಲೆ ಗರುಡನಾಗಿ ಎತ್ತರದಲ್ಲಿ ಮೆರೆಯುವುದರ ಹೃದಯಂಗಮವಾದ ಕನ್ನಡತನದ ಇತಿಹಾಸವನ್ನು ತೋರಿಸಿದೆ ಈ ಚಿತ್ರಪಟ. ಹಾಸ್ಯಕ್ಕಾಗಿ ಶಾಲೆಯ ಹುಡುಗರು, ಹೆಣ್ಣುತನದ ಬಾಳಿಗಾಗಿ ಹೆಂಗಳೆಯರು, ರಂಗಭೂಮಿಯ ಇತಿಹಾಸಕ್ಕಾಗಿ ಕಲೆಗಾರರು, ಸಂಗೀತಕ್ಕಾಗಿ ಸವಿಗಾರರು, ನಟನೆಗಾಗಿ ನಾಟ್ಯವಿಲಾಸಿಗಳು – ಈ ಚಿತ್ರಪಟವನ್ನು ನೋಡಿದಷ್ಟು ಕಡಮೆ ಎಂದೇ ಹೇಳಬೇಕಾಗುವುದು. ಕೊನೆಗೆ ಕೇವಲ 'ಸ್ವದೇಶಿ' ಎಂದಿಷ್ಟೆ ಕನ್ನಡಿಗರು ಹೇಳಿಕೊಳ್ಳಬೇಕಾಗಿಲ್ಲ; ಇದುವರೆಗೆ 'ಪರದೇಶಿ'ಗಳಾಗಿ ಅಲೆಯುತ್ತಿದ್ದ ಕನ್ನಡ ಕಲೆಗಾರರನ್ನು ಮೊದಲು ಕರ್ನಾಟಕದ ಕಲಾಭೂಮಿಗೆ ತಂದ ಶ್ರೇಯಸ್ಸಿಗಾಗಿಯೂ ಹೆಮ್ಮೆಪಡಬೇಕಾಗಿದೆ.

## ಮುಂಬಯಿ ಆಕಾಶವಾಣಿಯಲ್ಲಿ ಮತ್ತೆ ಕನ್ನಡಕ್ಕೆ ಅನ್ಯಾಯ

ಶ್ರೀ. ಕೃ. ನಾ. ದೇಶಪಾಂಡೆ, ಬಿ.ಎಸ್‌ಸಿ., ಬಿ.ಟಿ., ಗೋಕಾಕ ಇವರು ಈ ರೀತಿ ಬರೆಯುತ್ತಾರೆ:

ಮುಂಬಯ ಆಕಾಶವಾಣಿಯ ಕೇಂದ್ರದಲ್ಲಿ ಶಾಲೆಯ ವಿದ್ಯಾರ್ಥಿಗಳ ಸಲುವಾಗಿ ಕಾರ್ಯಕ್ರಮವಿದ್ದದ್ದು ಎಲ್ಲರಿಗೂ ಗೊತ್ತಾದ ಮಾತಾಗಿರುತ್ತದೆ. ಆ ಕೇಂದ್ರದ ಕಾರ್ಯಕರ್ತರು ಈಚೆಗೆ 'Listeners' Corner' ಎಂಬ ವಿಭಾಗವನ್ನಿಟ್ಟು ಅದರಲ್ಲಿ ವಿದ್ಯಾರ್ಥಿಗಳಿಗೆ ನಿಬಂಧಗಳನ್ನು ಬರೆದು ಕಳುಹಿಸಲು ಅನುವು ಒದಗಿಸಿ ಕೊಟ್ಟಿರುತ್ತಾರೆ ಮತ್ತು ಈ ನಿಬಂಧಗಳಲ್ಲಿ ಬೇರೆ ಬೇರೆ ಭಾಷೆಗಳಲ್ಲಿ ಅತ್ಯುತ್ತಮವಾದವುಗಳನ್ನು ಆಕಾಶವಾಣಿಯಿಂದ ಬೀರುವರಲ್ಲದೆ ಅವುಗಳಿಗೆ ಪಾರಿತೋಷಕಗಳನ್ನೂ ಕೊಡತಕ್ಕವರಿರುತ್ತಾರೆ. ಇದರಲ್ಲಿ ಇಂಗ್ಲೀಷು, ಮರಾಠಿ, ಗುಜರಾಥಿ ಮತ್ತು ಹಿಂದಿ ಭಾಷೆಗಳಿಗಷ್ಟೇ ಸ್ಥಾನವನ್ನು ಕೊಟ್ಟು ಕನ್ನಡ ಭಾಷೆಯನ್ನು ಬಿಟ್ಟುಬಿಟ್ಟಿರುತ್ತಾರೆ. ಕರ್ನಾಟಕದೊಳಗಿನ ಎಷ್ಟೊ ಹೈಸ್ಕೂಲುಗಳಲ್ಲಿ ರೇಡಿಯೋ ಸೆಟ್ಟುಗಳಿದ್ದು ನೂರಾರು ಹುಡುಗ ಹುಡುಗಿಯರು ನಿಯಮಿತವಾಗಿ ಶಾಲೆಯ ಕಾರ್ಯಕ್ರಮಗಳನ್ನು ಕೇಳುತ್ತಿರುತ್ತಾರೆ. ಆದರೂ ಮೇಲಿನ ವಿಷಯದಲ್ಲಿ ಕರ್ನಾಟಕದೊಳಗಿನ ವಿದ್ಯಾರ್ಥಿಗಳಿಗೆ ಭಾಗವಹಿಸಲಿಕ್ಕೆ ಅನುವು ಇರುವುದಿಲ್ಲ. ಈ ಬಗ್ಗೆ ನಾನು ಮುಂಬಯಿ ಕೇಂದ್ರದ ಸ್ಟೇಶನ ಡೈರೆಕ್ಟರರಿಗೆ ಪತ್ರ ಬರೆದು ಈ ಅನ್ಯಾಯವನ್ನು ದೂರಮಾಡಲು ತಿಳಿಸಿರುತ್ತೇನೆ. ಅದರಂತೆ ಕರ್ನಾಟಕದೊಳಗಿನ ಹೈಸ್ಕೂಲ್ ಹೆಡ್‌ಮಾಸ್ತರರೂ ಬಿನ್ನವಿಸಬೇಕು.

[ಶ್ರೀ. ದೇಶಪಾಂಡೆಯವರ ಹಾರೈಕೆ ಈಡೇರಲೆಂದೂ ಇದಕ್ಕಾಗಿ ಮುಂಬಯಿ ನಗರದ ಕನ್ನಡಿಗರು ಒತ್ತಾಯ ಮಾಡಬೇಕೆಂದೂ ಪ್ರಾರ್ಥಿಸುತ್ತೇವೆ. —ಸಂ.]

### ಸೂಚನೆ

ಪರಿಷತ್ತಿನ ವಾರ್ಷಿಕಾಧಿವೇಶನ ನಿಮಿತ್ತ 'ಕನ್ನಡ ನುಡಿ' ತಾ|| ೧೮-೧೨-೪೨ನೆಯ ದಿನ ಹೊರಡುವುದಿಲ್ಲ. — ಸಂ.


# ಕನ್ನಡ ನುಡಿ

ಶುಕ್ರವಾರ, ಡಿಸೆಂಬರ್ ೧೧, ೧೯೪೨


## ನಾಡಿನಲ್ಲಿ ಬರಗಾಲ

ಬಿಜಾಪುರ, ಜಮಖಂಡಿ ಮುಂತಾದ ಕಡೆ ಬರಗಾಲ ಬಂದು ಕನ್ನಡಿಗರಿಗೆ ತೊಂದರೆಯಾಗಿದೆ. ಈ ಬಗೆಗೆ ಮೈಸೂರು ಸರ್ಕಾರ ದಿಂದ ಜೋಳದ ಒದಗಿಗಾಗಿ ಜಮಖಂಡಿಯ ದಿವಾನರೂ, ವಕೀಲ್ ಶ್ರೀ. ಆರ್. ಪಿ. ಕುಲಕರ್ಣಿಯವರೂ ಏರ್ಪಾಟು ಮಾಡಲು ಬೆಂಗಳೂರಿಗೆ ಬಂದು ಅಧಿಕಾರಿಗಳನ್ನು ಕಂಡು ಮಾತನಾಡಿಕೊಂಡು ಹೋಗಿದ್ದಾರೆಂದು ಕೇಳುತ್ತೇವೆ. ಸಾಹಿತ್ಯ ಸಂಸ್ಕೃತಿಗಳ ದೃಷ್ಟಿಯಿಂದ ಕನ್ನಡದ ಬಾಂಧವ್ಯ ಈಗಾಗಲೆ ಬಲಗೊಳ್ಳುತ್ತಿದೆ. ಆರ್ಥಿಕ ದೃಷ್ಟಿಯಿಂದ ಕೂಡ ಮೈಸೂರು ಸರ್ಕಾರದವರು ಈ ಸಂದರ್ಭದಲ್ಲಿ ಆದಷ್ಟು ಮಟ್ಟಿಗೂ ನೆರವಾಗಿ ಇಡಿಯ ಕರ್ನಾಟಕದ ನಂಟತನವನ್ನು ಬೆಳಸುತ್ತಾರೆಂದು ಹಾರೈಸುತ್ತೇವೆ.

## ರಾಷ್ಟ್ರದ ಉದ್ಧಾರ ಕಾರ್ಯದಲ್ಲಿ ವಿಶ್ವವಿದ್ಯಾನಿಲಯಗಳ ಪಾತ್ರ

ಪಾಟ್ನ, ಢಾಕಾ, ಮದರಾಸು, ಬನಾರಿಸ್ ವಿಶ್ವವಿದ್ಯಾನಿಲಯಗಳಲ್ಲಿ ಈ ವರ್ಷ ನಡೆದ ಘಟಿಕೋತ್ಸವಗಳಲ್ಲಿ ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರು, ಸರ್ ಸಿ. ವಿ. ರಾಮನ್ ಅವರು, ಸರ್ ಸರ್ವೆಪಲ್ಲಿ ರಾಧಾಕೃಷ್ಣನ್ ಅವರು ಪದವೀಧರರನ್ನು ಉದ್ದೇಶಿಸಿ ತಮ್ಮ ವಿಚಾರಪೂರ್ಣವಾದ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರು. ಅವರ ಸಾರವತ್ತಾದ ಭಾಷಣಗಳಿಂದ ಒಂದೆರಡು ವಾಕ್ಯಗಳನ್ನಿಲ್ಲಿ ಎತ್ತಿಕೊಟ್ಟಿದೆ. ಅವನ್ನು ಶಿಕ್ಷಣ ಪ್ರವೀಣರೂ ಮಹಾಜನರೂ ಮನನ ಮಾಡುವರೆಂದು ಹಾರೈಸುತ್ತೇವೆ:

**ಸರ್ ಮಿರ್ಜಾ ಇಸ್ಮಾಯಿಲ್ ಅವರು** (ಪಾಟ್ನ): ನಮ್ಮ ಭವಿಷ್ಯತ್ತಿನ ಹೊಣೆ ಹೊತ್ತಿರುವ ನಿಮಗೆ ನಾನು ಯಾವುದಾದರೂ ಸಂದೇಶವನ್ನು ಕೊಡಬಹುದಾದರೆ ಇದೇ: ಇಡಿಯ ಭರತಖಂಡದಲ್ಲಿ ನಾವು ಯಾರೂ ಯಾವ ಅರ್ಥದಲ್ಲಿಯೆ ಆಗಲಿ, ಬೇರೆಯಾಗಿ ಎಂದಿಗೂ ಇರಬಾರದು. ಏಕ ರಾಷ್ಟ್ರತ್ವಭಾವನೆಯೆ ನಮ್ಮ ಶೀಲವಾಗಿರಲಿ, ಚೈತನ್ಯವಾಗಿರಲಿ, ಅದು ವೈಭವದ ಬಾಳ್ಕೆಯನ್ನು ಪ್ರಚೋದಿಸಲಿ. ರಾಷ್ಟ್ರೀಯತೆಯ ಮಾತನ್ನಾಡಿದರೂ, ವಿಶ್ವಪ್ರಜೆತನವೇ ಶ್ರೇಷ್ಠ ಪ್ರಜೆತನ; ಅದನ್ನು ನಾವು ಸಾಧಿಸಬೇಕೆಂದು ನಮ್ಮಲ್ಲಿ ಕೆಲವರು ಹೇಳುತ್ತಾರೆ. ಆದರೆ ಕೆಲವರು ಇದಕ್ಕೆ ತೀರ ಬಿನ್ನವಾದ, ವ್ಯತಿರಿಕ್ತವಾದ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತ ಭಾರತ ಒಂದು ಜನಪದವಲ್ಲ, ಪರಸ್ಪರ ಯೋಗಕ್ಷೇಮಗಳ ಸ್ಥಾಯಿಯಾದ ಕೆಲವು ಘರ್ಷಣೆಗಳು ಇಲ್ಲಿ ಇದ್ದೇ ಇರುವುದರಿಂದ ಏಕರಾಷ್ಟ್ರತ್ವ ಕಲ್ಪನೆಗೆ ತಾವಿಲ್ಲ ಎಂಬ ಭಾವನೆಗೆ ಬೆಲೆ ಕೊಡುತ್ತಿದ್ದಾರೆ. ನನಗಾದರೋ ಭಾರತ ಒಂದು ಜನಪದ ಎಂಬುದು ಅತ್ಯಂತ ಸ್ಫೂರ್ತಿದಾಯಕವಾದ ಹಾಗೂ ಬಹು ವಿವೇಕಪೂರಿತವಾದ ಭಾವನೆ. ಈ ಭಾವನೆ ಬೆಳೆಯುತ್ತಿರುವುದನ್ನು ನಾನು ಕಾಣುತ್ತಿದ್ದೇನೆ. ನಾವು ಯಾವ ಜಾತಿ ಪಂಥಗಳಿಗೆ ಸೇರಿದ್ದರೂ ಈ ನಾಡು ನಮ್ಮೆಲ್ಲರಿಗೂ ಸೇರಿದ್ದು . . . ಯಾರು ಸ್ವದೇಶವನ್ನು ವಿವೇಕದಿಂದ ಪ್ರೀತಿಸುತ್ತಾನೋ ಅವನಲ್ಲಿ ಇಡಿಯ ಮಾನವತೆಯ ಪ್ರೇಮವೇ ಇರುವುದು. ಇಂಥ ಭಾವನೆ ನಾಡಿನಲ್ಲಿ ತುಂಬಲು ವಿಶ್ವವಿದ್ಯಾನಿಲಯಗಳು ದುಡಿಯಬೇಕು. ಜನವರ್ಗದ ಸತ್ವ ಹೆಚ್ಚಿ, ಪರಸ್ಪರ ಒಡಂಬಡಿಕೆ, ಗೌರವ, ಸಹಕಾರ, ಐಕ್ಯತೆ ಸಾಮರಸ್ಯಗಳಲ್ಲಿ ಆ ಸತ್ವ ವ್ಯಕ್ತವಾಗುವಂತೆ ತಕ್ಕ ವಾತಾವರಣವನ್ನು ಹೊಮ್ಮಿಸಿ ನೆಲೆಗೊಳಿಸಬೇಕು."

ಸರ್ ಮಿರ್ಜಾ ಅವರು ಢಾಕಾ ವಿಶ್ವವಿದ್ಯಾನಿಲಯದಲ್ಲಿ ಮಾಡಿದ ಭಾಷಣದಲ್ಲಿ ಹೀಗೆ ಹೇಳಿದರು:

"ನಮ್ಮ ಶಿಕ್ಷಣ ಸಂಸ್ಥೆಗಳು ಸ್ವಾತಂತ್ರ್ಯ, ಸತ್ಯ ಮತ್ತು ಸೇವೆಗಳಲ್ಲಿ ಗಾಢವಾದ ಹಾಗೂ ಸಜೀವವಾದ ವಿಶ್ವಾಸವನ್ನುಳ್ಳ ನಾಯಕರನ್ನು ಸೃಷ್ಟಿಸಬೇಕು. ಯುದ್ಧವೇ ಮುಂತಾದ ಕಾರಣಗಳಿಂದ ರಾಷ್ಟ್ರಗಳ ಅಳಿಯುತ್ತಿರುವ ಸತ್ವ ಮತ್ತೆ ತುಂಬಿಕೊಂಡು ಮರಳಿ ಚೇತನ ಪಡೆಯುವಂತಾಗುವುದು ಇಂಥ ಮುಂದಾಳುಗಳಿಂದಲೇ ಸಾಧ್ಯ.

ಆಧುನಿಕ ಜ್ಞಾನದ ಗೆಲವೆಂದರೆ ಮಾನವದಾಸ್ಯವನ್ನು ಹೋಗಲಾಡಿಸಿ ನಾಗರಿಕತೆಯನ್ನು ನಯವಾಗಿ ಮಾಡುವುದೇ ಆಗಿದೆ. ಆದ್ದರಿಂದ ನಮ್ಮ ದೇಶದ ಪ್ರಕೃತಿ ಸಂಪತ್ತನ್ನು ತಕ್ಕಂತೆ ಬಳಸಿಕೊಂಡು ಕೈಗಾರಿಕೆಯಲ್ಲಿ ಪ್ರಗತಿ ಹೊಂದಬೇಕು. ಇದಕ್ಕೆ ಬೇಕಾದ ಸಾಧನ ವಿಧಾನಗಳನ್ನು ನಮ್ಮ ವಿಶ್ವವಿದ್ಯಾನಿಲಯಗಳು ಯೋಜಿಸಿ ಕಾರ್ಯಮುಖವಾಗುವಂತೆ ವ್ಯವಸ್ಥೆ ಮಾಡಬೇಕು.

ನಮ್ಮ ವಿಶ್ವವಿದ್ಯಾನಿಲಯಗಳು ಮಾಡಬೇಕಾದ ಇನ್ನೊಂದು ದೊಡ್ಡ ಕೆಲಸವೆಂದರೆ ನಾಡಿನ ತರುಣರಲ್ಲಿ ಐಕ್ಯತೆಯ ಭಾವನೆಯನ್ನೂ ವಿಶಾಲವಾದ ಮನೋಭಾವವನ್ನೂ ಬೆಳಸುವುದು. ನಮ್ಮ ನಾಡಿನ ಭವಿಷ್ಯತ್ತು ಮುಂಚಿಗಿಂತ ಉತ್ತಮವಾಗಿರುವುದೆಂದು ನಾನು ದೃಢವಾಗಿ ನಂಬಿದ್ದೇನೆ. ಜಾತೀಯ ಐಕಮತ್ಯವೇ ಭಾರತದ ಅಂತಿಮ ಧ್ಯೇಯ. ಭೂಗೋಳ, ಕಾಲ, ಎಲ್ಲ ಜಾತಿಪಂಥಗಳಿಗೂ ಸಮಾನವಾದ ಅಪಾಯ ಮತ್ತು ಆಸಕ್ತಿಗಳು ಈ ಒಕ್ಕಟ್ಟನ್ನು ಸಾಧಿಸುವಂಥವೇ. ಪ್ರಾಂತದ ಇಲ್ಲವೆ ಗಡಿಯ ಸಂಬಂಧವಿಲ್ಲದೆ ಭಾರತದ ನದಿಗಳು ಉಕ್ಕಿ ಹರಿಯುತ್ತಿವೆ. ವಿಜ್ಞಾನದ ಪ್ರತಿಯೊಂದು ಮುಟ್ಟೂ ಸುದ್ದಿತಂತಿಯಿಂದ (ಟೆಲಿಫೋನ್) ಅಲೆನೋಟದ (ಟೆಲಿವಿಷನ್) ವರೆಗೆ ಗಡಿದಾಟ ಮಾನವ ವರ್ಗವನ್ನು ಒಂದು ಕುಟುಂಬವಾಗಿ ಹೆಣೆಯುತ್ತಿವೆ. ಇಂದಿನ ಇಲ್ಲವೆ ನಾಳಿನ ಜಗತ್ತಿನಲ್ಲಿ ಮಾನವನು ಪ್ರತ್ಯೇಕತೆಯ ಭಾವನೆ ತಾಳಿ ಒಂಟಿಯಾಗಿರುವಂತಿಲ್ಲ."

**ಸರ್ ಸಿ. ವಿ. ರಾಮನ್ ಅವರು** (ಮದರಾಸು): ಹಿರಿಯ ದೆನ್ನಿಸುವ ಕೈಗಾರಿಕೆಯೆ ರಾಷ್ಟ್ರದ ಮುಖ್ಯ ಕೈಗಾರಿಕೆ. ಜ್ಞಾನದ ಹುಟ್ಟು ಹರಡಿಕೆಗಳಿಗೆ ಇದು ತಕ್ಕ ಸಾಧನ. ರಾಷ್ಟ್ರದ ಹಿರಿಯ ಕೈಗಾರಿಕೆ ಸಂಸ್ಥೆಯಾದ ವಿಶ್ವವಿದ್ಯಾನಿಲಯದಲ್ಲಿ ನೀವು ವಿಕಾಸಗೊಂಡು ಬಂದಿದ್ದೀರಿ. ಆರೋಗ್ಯವಾದ, ಶಕ್ತಿಸಂಪನ್ನವಾದ ಬೌದ್ಧಿಕ ಹಾಗೂ ಶಾರೀರಕ ಚಟುವಟಿಕೆಗಳಲ್ಲಿ ಚುರುಕಾದ ಸಂತಾನವನ್ನು ಬೆಳಸುವುದಕ್ಕಿಂತ ಘನವಾದ ಕರ್ತವ್ಯ ಬೇರೆ ನಿಮಗೆ ಯಾವುದಿದೆ? ವಿಶ್ವವಿದ್ಯಾನಿಲಯದಲ್ಲಿ ವಿಜ್ಞಾನದ ಕೇವಲ ಪಾಂಡಿತ್ಯ ಪ್ರಧಾನವಾದ ಓದಿಗೆ ಮಾತ್ರ ಅವಕಾಶವಿದ್ದರೆ ಸಾಲದು. ನಾಡಿನ ಶ್ರೇಯಸ್ಸನ್ನು ಬೆಳಸಲು ಆ ಪಾಂಡಿತ್ಯವನ್ನು ಸಾಕ್ಷಾತ್ತಾಗಿ ಪ್ರಯೋಗಿಸುವ ಅವಕಾಶವನ್ನೂ ಕಲ್ಪಿಸಬೇಕು. ಆದ್ದರಿಂದ ಮೂಲವಿಜ್ಞಾನಗಳ ಸಂಶೋಧನೆಯ ಆವಶ್ಯಕತೆ ಹೆಚ್ಚಾಗಿದೆ. ವಿಜ್ಞಾನದ ತಿಳಿವಳಿಕೆಯ ಪರಿಪೂರ್ಣವಾದ ಪ್ರಯೋಗದ ಬೆಂಬಲವಿಲ್ಲದ ವೃತ್ತಿಶಿಕ್ಷಣ ಕತ್ತಲೆಯಲ್ಲಿ ಕಣ್ಣು ಕಟ್ಟಿಕೊಂಡು ನಡೆದಂತೆ! ಈ ಪರಿಸ್ಥಿತಿ ತಪ್ಪಿ, ನಾಡಿನಲ್ಲಿ ಎಲ್ಲ ಪ್ರಜೆಗಳೂ ಭೂಮಿತಾಯಿ ಕೊಡುವ ಫಲಗಳನ್ನು ಸಂಪೂರ್ಣವಾಗಿ ಅನುಭವಿಸುವ ಹಾಗೆ ಮಾಡಬೇಕಾದ್ದು ವಿಶ್ವವಿದ್ಯಾನಿಲಯಗಳವರ ಕರ್ತವ್ಯ. ಆದ್ದರಿಂದ ವೃತ್ತಿಶಿಕ್ಷಣಕ್ಕೆ ನಮ್ಮ ದೇಶದಲ್ಲಿ ವಿಜ್ಞಾನದ ತಿಳಿವಳಿಕೆಯ ಭದ್ರವಾದ ತಳಪಾಯವನ್ನು ಹಾಕೋಣ."

ಪಾಶ್ಚಾತ್ಯ ದೇಶಗಳಲ್ಲಿ ವಿದ್ಯೆ ಪಡೆದಲ್ಲದೆ ಬೃಹಸ್ಪತಿಗಳಾಗುವುದಿಲ್ಲವೆಂಬ ಮೂಢಭಕ್ತಿ ಇನ್ನು ಹೋಗಿ, ಭಾರತದಲ್ಲಿಯೇ ಪ್ರೌಢ ಜ್ಞಾನ ಸಾಧನೆಗೆ ಅವಕಾಶ ಕಲ್ಪಿಸಬೇಕೆಂದೂ ಅವರು ಎಚ್ಚರಿಸಿದರು.

**ಸರ್ ರಾಧಾಕೃಷ್ಣನ್ ಅವರು** (ಬನಾರಿಸ್): "ನಾವು ಶತಮಾನಗಳ ನಿದ್ರೆಯಿಂದ ಎಚ್ಚತ್ತು, ತಲೆ ಎತ್ತಿಕೊಂಡು ಬಾಳ ಬೇಕಾಗಿದೆ. ಇಡಿಯ ಪ್ರಪಂಚಕ್ಕೇ ಭಾರತ ತನ್ನ ಸಂದೇಶ ನೀಡ ಬೇಕಾಗಿದೆ. ಆಕೆ ಹೊತ್ತು ರಕ್ಷಿಸಿಕೊಂಡು ಬಂದಿರುವ ಆತ್ಮವಿದ್ಯೆ ರಾಷ್ಟ್ರಗಳಿಗೆ ಸಂಜೀವನದಂಥ ಔಷಧಿ. ಆತ್ಮದಲ್ಲಿ, ನೀತಿಯಲ್ಲಿ, ಭೌತ ಸೌಕರ್ಯಗಳಲ್ಲಿ ಹಿಂದೊಮ್ಮೆ ಅಷ್ಟು ಮಹಿಮೆ ಪಡೆದಿದ್ದ ನಾಡು ಇಂದು ಈ ಹೀನ ಸ್ಥಿತಿಗೆ ಬಿದ್ದಿರುವುದನ್ನು ಕಂಡು ಅನೇಕರು ದುಃಖ ಪೂರ್ಣವಾದ ಆಶ್ಚರ್ಯಕ್ಕೆ ಈಡಾಗಿದ್ದಾರೆ. ಇಂಥ ಉಚ್ಚ ಸಂಸ್ಕೃತಿ ಯನ್ನು ಕಂಡ ನಾಡು ಬಿಡುಗಡೆಯನ್ನು ಹಾರೈಸುವುದೂ ನೀತಿ ಧರ್ಮ ಪ್ರೇಮಗಳ ಪರಿಪೂರ್ಣತೆಯ ಪಾಠವನ್ನು ಪ್ರಪಂಚಕ್ಕೆ ಬೋಧಿಸಲೆಂದೇ.

ವಿದ್ಯಾಭ್ಯಾಸವೆಂದರೆ ಕೇವಲ ಬುದ್ಧಿಯ ಸಾಹಸ ಪ್ರಯತ್ನವಲ್ಲ. ಕರುಣೆಯ ವಾತಾವರಣದಲ್ಲಿ ಮಾನವನನ್ನು ಬೆಳೆಸುವ, ಅವನ ಮನೋ ಭಾವಗಳನ್ನೂ ರಸಭಾವನೆಗಳನ್ನೂ ಉತ್ತಮಪಡಿಸಿ ನಯಮಾಡುವ ಶಿಕ್ಷಣ. ಸಮಾಜದ, ನೀತಿಯ ಮತ್ತು ಬುದ್ಧಿಯ ಉತ್ತಮತೆಯನ್ನು ಸಾಧಿಸುವುದೇ ಅದರ ಗುರಿ.

ಶಿಷ್ಯನಾದವನು ದೋಷದೂರವಾದ ಕರ್ತವ್ಯಗಳನ್ನು ಶ್ರದ್ಧೆ ಯಿಂದ ನಿರ್ವಹಿಸಬೇಕು. ಎಷ್ಟೇ ಎಚ್ಚರಿಕೆಯಿಂದಿದ್ದರೂ ಮುಂದೆ ಬಾಳಿನಲ್ಲಿ ಎಡವುವ ಪ್ರಸಂಗಗಳು ಬರುವುದು ಸ್ವಾಭಾವಿಕ. ಮುಂದಾಳುತನ ಮಾರ್ಗದರ್ಶನಗಳಿಗಾಗಿ, ರಾಷ್ಟ್ರ ತನ್ನ ಸಾಮರ್ಥ್ಯ ವಿದ್ದಷ್ಟೂ ಸೃಷ್ಟಿಸುವ ಜ್ಞಾನಿಗಳೂ, ಸಂಸ್ಕೃತರೂ ನಿಷ್ಪಕ್ಷಪಾತವಾದ ಅಂತಸ್ಸಾಕ್ಷಿಗನುಸಾರವಾಗಿ ನಡೆಯುವವರೂ ಆದ ಹಿರಿಯರನ್ನು ನಾವು ಹುಡುಕುವುದಿಲ್ಲವೆ? ಶಿಷ್ಯರು ಹಿರಿಯರ ವಾಣಿಯನ್ನು ಕೇಳಬೇಕು, ಹಿರಿಯರ ಇಷ್ಟಗಳನ್ನು ಗೌರವಿಸಬೇಕು ಮತ್ತು ನೇಮಿಸಿದ ಕರ್ತವ್ಯ ಗಳನ್ನು ನಡಸಬೇಕು.

ಭಾರತಕ್ಕೆ ಇದುವರೆಗೆ ಎಷ್ಟೋ ಬಗೆಯಲ್ಲಿ ತೇಜೋವಧೆ ಯಾಗಿದೆ. ಆದರೆ ಸಾವಿನ ಕಣಿವೆಗೆ ನಮ್ಮ ನಾಡು ಈಡಾಗಲಿಲ್ಲ. ನಾಡು ಪರತಂತ್ರವಾಯಿತು; ಆದರೆ ಆತ್ಮಕ್ಕೆ ಯಾವ ಬಾಧೆಯೂ ತಟ್ಟಲಿಲ್ಲ. ಅನೇಕ ಪರೀಕ್ಷೆಗಳ ಒರೆಗಲ್ಲಿಗೆ ಸಿಕ್ಕಿ, ಹೋರಾಟಗಳಿಂದ ಶಕ್ತಿ ಪಡೆದು, ತ್ಯಾಗ ತಾಳ್ಮೆಗಳಿಂದ ಬಾಳಿ ಬಂದಿದೆ. ನಮ್ಮ ನಾಡಿನ ಶಾಶ್ವತತೆಗೆ ಆತ್ಮ ಸ್ಫೂರ್ತಿಯೇ ಕಾರಣ, ಗುಟ್ಟು.

ಭಾರತ ಎಂದಿಗೂ ರಾಷ್ಟ್ರೀಯತೆಯ ಮತ್ತು ಸಂಸ್ಕೃತಿಯ ದೃಷ್ಟಿ ಯಿಂದ ಬೇರೆಯಾಗಿರುವ ಧ್ಯೇಯದಿಂದಿಲ್ಲ. ನಮ್ಮ ದೇಶದ ಆತ್ಮೋನ್ನತಿ ಇಡಿಯ ಮಾನವತೆಯನ್ನು ಅಪ್ಪುತ್ತದೆ. ವಿವೇಕಕ್ಕೆ ಎಲ್ಲಿ ಜನ ಒಲಿಯುವರೋ, ಕತ್ತಲೆಯನ್ನು ದೂಡಿ ಬೆಳಕಿಗೆ ಮುಖ ಮಾಡುವರೋ, ಎಲ್ಲಿ ಗುಣವನ್ನು ಮೆಚ್ಚಿ, ಸಣ್ಣತನಕ್ಕೆ ಹೇಸಿ, ಅಸಭ್ಯ ತೆಗೆ ಹಗೆ ತೋರುವರೋ, ಎಲ್ಲಿ ಮನಸ್ಸು ಮೃದುವಾಗಿ ಹೃದಯ ವಿಶಾಲವಾಗಿ ಆತ್ಮ ಸ್ವಾತಂತ್ರ್ಯವಿದೆಯೋ ಅಲ್ಲಿ ನಮ್ಮ ನಾಡು ಇದೆ. ಆದ್ದರಿಂದ ಒಂದು ಭಾಗಕ್ಕೇ ಮನಕೊಡುವ ಬುದ್ಧಿಯನ್ನು ಬಿಟ್ಟು ಇಡಿಯ ಮಾನವತೆಗೇ ನಿಷ್ಠೆಯಿಂದಿರುವ ಗುಣವನ್ನು ಮೈಗೂಡಿಸಿ ಕೊಳ್ಳೋಣ."

## ಪ್ರಶಸ್ತಿ ಪತ್ರಿಕೆಗಳ ವಿನಿಯೋಗ

ಬೆಂಗಳೂರು ಕೇಂದ್ರದಿಂದ ಸಾಹಿತ್ಯ ಪರೀಕ್ಷೆಗಳಲ್ಲಿ (ಜೂನ್) ಮತ್ತು ಗಮಕ ಶಿಕ್ಷಣದಲ್ಲಿ ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ಪ್ರಶಸ್ತಿ ಪತ್ರಿಕೆಗಳನ್ನು ಹಂಚುವ ಸಮಾರಂಭ ೭-೧೧-೪೩ನೆಯ ಭಾನುವಾರ ಸಂಜೆ ೬ ಗಂಟೆಗೆ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ನಡೆಯಿತು. ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀ. ಬಿ. ಎಂ. ಶ್ರೀಕಂಠಯ್ಯನವರು ಅಧ್ಯಕ್ಷತೆ ವಹಿಸಿದ್ದರು.

ಉಪಾಹಾರಾನಂತರ ಶ್ರೀಮತಿಗಳಾದ ಸ್ವರ್ಣಾಂಬ ಮತ್ತು ಲಕ್ಷ್ಮೀದೇವಿಯವರಿಂದ ಪ್ರಾರ್ಥನೆ, ಕಾವ್ಯವಾಚನ ನಡೆಯಿತು. ಆಮೇಲೆ ಕಾರ್ಯದರ್ಶಿಗಳು ವರದಿಯನ್ನು ಒಪ್ಪಿಸಿ, ಜೂನ್ ತಿಂಗಳ ಸಾಹಿತ್ಯ ಮತ್ತು ಗಮಕ ಪರೀಕ್ಷೆಗಳು ಯಶಸ್ವಿಯಾಗಿ ನಡೆಯಲು ನೆರವಾದವರನ್ನೆಲ್ಲ ಕೃತಜ್ಞತೆಯಿಂದ ನೆನೆದರು. ಈ ಪರೀಕ್ಷೆಗಳ ಕೇಂದ್ರಗಳು ನಾಡಿನಲ್ಲೆಲ್ಲ ಹರಡಬೇಕೆಂಬುದು ಪರಿಷತ್ತಿನ ಆಶಯ ವೆಂದೂ, ಈಗಿರುವ ಕಾವ, ಜಾಣ ಪರೀಕ್ಷೆಗಳ ಜೊತೆಗೆ 'ರನ್ನ' ಪರೀಕ್ಷೆಯ ವ್ಯವಸ್ಥೆ ಮಾಡಿ, ಕನ್ನಡದಲ್ಲಿ ಹೆಚ್ಚಿನ ಮಟ್ಟದ ಜ್ಞಾನವನ್ನು ಹರಡುವ ಆಸೆ ಇದೆಯೆಂದೂ ಹೇಳಿದರು.

ಸಾಹಿತ್ಯ ಪರೀಕ್ಷೆಗಳ ಪರೀಕ್ಷಕರಲ್ಲಿ ಇಬ್ಬರಾದ ಶ್ರೀ. ತೀ. ನಂ. ಶ್ರೀಕಂಠಯ್ಯನವರು ಮತ್ತು ಶ್ರೀಮತಿ ಡಿ. ಚಂಪಾಬಾಯಿಯವರು ತಮಗೆ ಸಲ್ಲಬೇಕಾಗಿದ್ದ ಸಂಭಾವನೆಯನ್ನು ತೆಗೆದುಕೊಳ್ಳದೆ, ಪರೀಕ್ಷೆ ಗಳಲ್ಲಿ ಉತ್ತಮ ರೀತಿಯಲ್ಲಿ ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ಬಹುಮಾನ ಕೊಡಲು ಉಪಯೋಗಿಸಿಕೊಳ್ಳಬಹುದೆಂದು ತಿಳಿಸಿ ಉಪಕಾರ ಮಾಡಿದ್ದಾರೆ. ಕಳೆದ ವರ್ಷದಂತೆಯೆ ಈ ವರ್ಷವೂ ಶ್ರೀ. ಗೋಕರ್ಣ ಅವರು ತಮ್ಮ ಮಗಳ ಹೆಸರಿನಲ್ಲಿ ಒಂದು ಬಹುಮಾನ ವನ್ನು ಕೊಟ್ಟು ಉಪಕಾರ ಮಾಡಿದ್ದಾರೆ.

ಬಳಿಕ ಕಾರ್ಯಸಮಿತಿಯ ಸದಸ್ಯರೂ ಉತ್ತರ ಕರ್ನಾಟಕದಲ್ಲಿ ಕನ್ನಡಕ್ಕಾಗಿ ಬಹಳವಾಗಿ ದುಡಿಯುತ್ತಿರುವವರೂ ಆದ ಶ್ರೀ. ನಾಯಕ ವೆಂಕಟರಾಯರು ಉಪದೇಶ ಭಾಷಣ ಮಾಡಿದರು. ಅವರ ಭಾಷಣದ ಸಾರಾಂಶ ಇದು:

"ಕನ್ನಡ ನಾಡು, ನುಡಿ, ಸಂಸ್ಕೃತಿಗಳ ವಿಷಯದಲ್ಲಿ ಅಭಿಮಾನ ತಾಳಬೇಕು. ಅವುಗಳ ಮೇಲ್ಮೆಗಾಗಿ ದುಡಿಯಬೇಕು. ಹಿಂದಿನ ವೈಭವ ಮತ್ತೆ ಮೂಡಬೇಕು, ಜನ ಮುಂದುವರಿಯಬೇಕು ಎಂಬ ಸಕ್ರಿಯ ಅಭಿಮಾನವನ್ನು ತರುಣರು ಮೈಗೂಡಿಸಿಕೊಳ್ಳಬೇಕು. ಇಪ್ಪತ್ತು ವರ್ಷಗಳ ಹಿಂದೆ ಕನ್ನಡ ಬಹಳ ಹಿಂದೆ ಬಿದ್ದಿತ್ತು. ಭಾಷಣದ ಭಾಷೆ ಯಾಗಿಯೂ ಅದನ್ನು ಬಳಸುತ್ತಿರಲಿಲ್ಲ. ಉತ್ತರ ಕರ್ನಾಟಕದಲ್ಲಂತೂ ಕನ್ನಡದ ಮೇಲೆ ಪರಭಾಷೆ ಪರಸಂಸ್ಕೃತಿಗಳ ಆಘಾತ ಬಹು ತೀವ್ರ ವಾಗಿತ್ತು. ಈಚೆಗೆ ಜನರಲ್ಲಿ ಕನ್ನಡದ ಅಭಿಮಾನ ಮೂಡಿದೆ. ಕನ್ನಡ ವನ್ನು ಬೆಳೆಸುವ ಕಡೆ ಜನ ಗಮನ ಕೊಡುತ್ತಿದ್ದಾರೆ. ಈ ಗಮನ ಇನ್ನೂ ಹೆಚ್ಚಬೇಕು, ಗಾಢವಾಗಬೇಕು; ಕನ್ನಡದ ಹಾರೈಕೆಗಳು ಕನಸುಗಳು ಈಡೇರುವುದಕ್ಕಾಗಿ ಎಲ್ಲರ ಪ್ರಯತ್ನಗಳೂ ಒಮ್ಮುಖವಾಗಿ ಸೇರಬೇಕು. ಈ ವಿಷಯದಲ್ಲಿ ತರುಣರ ಹೊಣೆ ಬಹಳ ಹೆಚ್ಚಾದುದು, ತಮ್ಮ ತಾಯಿ ನುಡಿಯನ್ನು ಬೆಳಸಿ ತಮ್ಮ ಬಾಳನ್ನು ಹಿರಿದಾಗಿ ಮಾಡಿಕೊಳ್ಳುವ ಲವಲವಿಕೆ ಅವರಲ್ಲಿ ದಿನ ದಿನಕ್ಕೂ ಹೆಚ್ಚಲಿ.

ಇಂದು ಜಗತ್ತಿನ ಬೇರೆ ಬೇರೆ ಸಾಹಿತ್ಯಗಳಲ್ಲಿ ತೋರಿಕೊಂಡಿ ರುವ ಮತ್ತು ನಮ್ಮ ಅಂತಃಕರಣವನ್ನು ಮಿಡಿದು ಬದುಕನ್ನು ಹಸನು ಮಾಡುವ ಪ್ರಗತಿ ಪರಭಾವನೆಗಳನ್ನು ತರುಣರು ಮೈಗೂಡಿಸಿಕೊಂಡು ನಮ್ಮ ಸಾಹಿತ್ಯದಲ್ಲಿಯೂ ಅವು ಪ್ರಕಟವಾಗುವಂತೆ ಮಾಡುವವರಾಗ ಬೇಕು. ಪರಿಷತ್ತು ಪೋಷಿಸಿ ಬೆಳಸಿದ ವಿದ್ಯಾರ್ಥಿಗಳು ಮರಳಿ ಪರಿಷತ್ತಿಗೆ, ತನು ಮನ ಧನಗಳಲ್ಲಿ ಯಾವ ರೂಪದಿಂದಲೆ ಆಗಲಿ, ಸೇವೆ ಸಲ್ಲಿಸುವ ಬುದ್ಧಿಯನ್ನು ಬೆಳಸಿಕೊಳ್ಳುವರೆಂದು ನಂಬಿದ್ದೇನೆ.

ನೀವು ಸರಸ್ವತಿಯ ಆರಾಧಕರು. 'ಯಂ ಕಾಮಯೇತಂ ತಮುಗ್ರಂ ಕೃಣೋಮಿ, ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಂ' ಎಂದರೆ ನಾನು ಯಾರನ್ನು ಒಲಿಯುವೆನೋ ಅವನನ್ನು ಬ್ರಹ್ಮನನ್ನಾಗಿ ಮಾಡುತ್ತೇನೆ, ಋಷಿಯನ್ನಾಗಿ ಮಾಡುತ್ತೇನೆ, ಒಳ್ಳೆಯ ಮೇಧಾವಿ ಯನ್ನಾಗಿ ಮಾಡುತ್ತೇನೆ — ಎಂಬುದು ಸರಸ್ವತಿಯ ಸಂಕಲ್ಪ. ಸರಸ್ವತಿಯ ಕೃಪೆ ನಿಮಗೆ ಸಂಪೂರ್ಣವಾಗಿ ಒದಗಿ ಬಂದು ನಿಮ್ಮಿಂದ ನಾಡಿಗೆ ಒಳ್ಳೆಯದಾಗಲಿ ಎಂದು ಈ ಘಟಿಕೋತ್ಸವದಲ್ಲಿ ಪ್ರಾರ್ಥಿಸುತ್ತೇನೆ."

ಬಳಿಕ ಅಧ್ಯಕ್ಷರು "ಕನ್ನಡವನ್ನು ಬೆಳಸಿ, ಅದು ನಿಮ್ಮನ್ನು ಬೆಳಸುತ್ತದೆ" ಎಂದು ಹೇಳಿ ವಿದ್ಯಾರ್ಥಿಗಳಿಗೆ ಶ್ರೀ. ನಾಯಕ ವೆಂಕಟ ರಾಯರ ಸ್ಫೂರ್ತಿದಾಯಕವಾದ ಭಾಷಣಕ್ಕಾಗಿ ಅವರನ್ನು ವಂದಿಸಿ, ಅವರ ಉಪದೇಶವನ್ನು ವಿದ್ಯಾರ್ಥಿಗಳು ಮನನಮಾಡಬೇಕೆಂದು ಕೋರಿದರು.

## ಪರಿಷತ್ತಿನ ಸುದ್ದಿ

### ವರದಿ – ಕಾರ್ಯ ಸೂಚಿ

**ಸದಸ್ಯರಿಗೆ ಪರಿಷತ್ತಿನ ವಾರ್ಷಿಕ ವರದಿಯನ್ನೂ ವಾರ್ಷಿಕಾಧಿವೇಶನದ ಕಾರ್ಯಸೂಚಿಯನ್ನೂ ಈ ಸಂಚಿಕೆಯೊಡನೆ ಕಳಿಸಿದೆ.**

### ಕನ್ನಡ ಸಾಹಿತ್ಯ ಪರೀಕ್ಷೆಗಳು

ಜನವರಿ ತಿಂಗಳಲ್ಲಿ ನಡೆಯಲಿರುವ ಸಾಹಿತ್ಯ ಪರೀಕ್ಷೆಗಳಿಗೆ ಕೂಡಬಯಸುವವರು **ಡಿಸೆಂಬರ್ ೧೫ರೊಳಗೆ** ತಮ್ಮ ಅರಿಕೆಯೋಲೆಗಳನ್ನು ಕಳಿಸಬೇಕು.

### ಧಾರವಾಡದಲ್ಲಿ ಗಮಕ ಶಿಕ್ಷಣ

ಜನವರಿ ತಿಂಗಳಿಂದ ಧಾರವಾಡದಲ್ಲಿ ವಿದ್ಯಾವರ್ಧಕ ಸಂಘದ ಮಂದಿರದಲ್ಲಿ ಗಮಕ ತರಗತಿ ನಡೆಯುವುದು. ಗಮಕ ವಿದ್ವಾನ್ ಶ್ರೀ. ಎಸ್. ಜಿ. ಬಿಂದೂರಾಯರು ಶಿಕ್ಷಣ ಕೊಡುತ್ತಾರೆ. **ತರಗತಿಗಳಿಗೆ ಸೇರಬಯಸುವವರು** ಕ. ವಿ. ವ. ಸಂಘದ ಅಥವಾ ಉತ್ತರ ಕರ್ನಾಟಕ ಪ್ರಾಂತಸಮಿತಿಯ ಕಾರ್ಯದರ್ಶಿಗಳಿಗೆ **ಡಿಸೆಂಬರ್ ೨೫ರೊಳಗಾಗಿ ಹೆಸರು ಕೊಡಬೇಕು.**

### ಮಹಿಳಾ ಶಾಖೆ: ವಾರ್ಷಿಕೋತ್ಸವ

ಮಹಿಳಾ ಶಾಖೆಯ ವಾರ್ಷಿಕೋತ್ಸವ ೧೩–೧೨–೪೨ ನೆಯ ಭಾನುವಾರ ಸಂಜೆ ೫–೩೦ಕ್ಕೆ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಶ್ರೀಮತಿ ಟಿ. ಜಿ. ಪೊನ್ನಮ್ಮ ರಾಮಯ್ಯರ್ ಅವರ ಅಧ್ಯಕ್ಷತೆಯಲ್ಲಿ ನಡೆಯುವುದು.

ಕಾವ್ಯವಾಚನ, ವೀಣಾವಾದನ ಮುಂತಾದ ಕಾರ್ಯಕ್ರಮಗಳ ಏರ್ಪಾಡಾಗಿದೆ.

ಸೋದರಿಯರು ಉತ್ಸವಕ್ಕೆ ಬರಬೇಕಾಗಿ ಬಿನ್ನಹ.

### ಸ್ಪರ್ಧೆಗಳ ಫಲಿತಾಂಶ

ಈ ವರ್ಷ ಮಹಿಳಾಶಾಖೆ ನಡಸಿದ ಸ್ಪರ್ಧೆಗಳಲ್ಲಿ ಈ ಮಹಿಳೆಯರು ಉತ್ತೀರ್ಣರಾಗಿರುತ್ತಾರೆ:

ಏಕಾಂಕ ನಾಟಕ ಸ್ಪರ್ಧೆ: ಶ್ರೀಮತಿಗಳಾದ ಬಿ. ಎಲ್. ಅಖಿಲ, ಶಾಂತಾಬಾಯಿ, ಎಸ್. ಕೆ. ಪದ್ಮ, ಎಂ. ವಿ. ಲೀಲ.

ಸ್ವಭಾವ ಚಿತ್ರ ಸ್ಪರ್ಧೆ: ಶ್ರೀಮತಿಗಳಾದ ಬಿ. ಎಲ್. ಅಖಿಲ, ಎಚ್. ಎಸ್. ಕಾತ್ಯಾಯಿನಿ, ನೂರ್‌ಜಹಾನ್, ಕೆ. ವಿ. ರತ್ನಮ್ಮ, ಜಿ. ಸಿ. ಲೀಲಾವತಿ.

ಕವನ ರಚನಾ ಸ್ಪರ್ಧೆ: ಶ್ರೀಮತಿಗಳಾದ ರಾಮಕ್ಕ, ಕೆ. ವಿ. ರತ್ನಮ್ಮ, ಎಚ್. ಎಸ್. ಕಾತ್ಯಾಯಿನಿ.

ಹಾಡುಗಾರಿಕೆ ಸ್ಪರ್ಧೆಯ ಫಲಿತಾಂಶ ಹಿಂದಿನ ಸಂಚಿಕೆಯಲ್ಲಿ ಕೊಟ್ಟಿದೆ.

## ಕನ್ನಡ ಸುದ್ದಿ

**ಕಲಬುರ್ಗಿ: ಕನ್ನಡ ಸಾಹಿತ್ಯ ಸಂಘ**

ದಿನಾಂಕ ೪–೧೨–೪೨ಕ್ಕೆ ಪ್ರೊ. ಭೀಮಸೇನರಾವ ತವಗ, ಎಂ.ಎ., ಬಿ.ಟಿ. ಇವರ ಅಧ್ಯಕ್ಷತೆಯಲ್ಲಿ ಶ್ರೀ. ಪದ್ಮನಾಭ ಪುರಾಣಿಕ, ಎಂ.ಎಸ್‌ಸಿ. ಅವರು 'ಮರಳಿ ಮಣ್ಣಿಗೆ' ಎಂಬ ಶ್ರೀ. ಕಾರಂತರ ಗ್ರಂಥದ ಮೇಲೆ ಒಳ್ಳೆಯ ಸುರಸವಾದ ವ್ಯಾಖ್ಯಾನ ಮಾಡಿದರು. ಶ್ರೀಯುತರು ತಮ್ಮ ವ್ಯಾಖ್ಯಾನದಲ್ಲಿ, ಹಿಂದೆ ಶ್ರೀಮಂತರ ಕತೆಯನ್ನೇ ಸಾಹಿತ್ಯ ವಸ್ತುವಾಗಿ ಆರಿಸುವ ರೀತಿ ತಪ್ಪಿ, ಇಂದು ಸಾಹಿತ್ಯ ನೈಜ ಜೀವನವನ್ನು ಚಿತ್ರಿಸುತ್ತಿರುವದೆಂದೂ ಇದಕ್ಕೆ ಶ್ರೀ. ಪುಟ್ಟಪ್ಪನವರ 'ಕಾನೂರು ಸುಬ್ಬಮ್ಮ ಹೆಗ್ಗಡತಿ' ಹಾಗೂ ಶ್ರೀ. ಕಾರಂತರ 'ಮರಳಿ ಮಣ್ಣಿಗೆ' ಇವೇ ಸಾಕ್ಷಿಯೆಂದೂ ಒತ್ತಿ ಹೇಳಿದರು ಮತ್ತು ಇದೇ ಮಾತನ್ನೇ 'ಮರಳಿ ಮಣ್ಣಿಗೆ' ಎಂಬ ಗ್ರಂಥದ ಮೂರು ತಲೆಮಾರಿನ ಕತೆಯನ್ನು ವಿವರಿಸುತ್ತ ವಿಸ್ತರಿಸಿದರು.

ಅಧ್ಯಕ್ಷರಾದ ಶ್ರೀ. ತವಗರವರು ಶ್ರೀ. ಕಾರಂತರ ವ್ಯಕ್ತಿತ್ವವನ್ನು – ಇದೇ ವಿಷಯ: ಇಂದು ಸಾಹಿತ್ಯ ನೈಜ ಜೀವನದ ಪ್ರತಿಬಿಂಬವಾಗುತ್ತಿರುವದನ್ನು–ಹಳೆ ಹೊಸ ಸಾಹಿತ್ಯಗಳ ತುಲನಾತ್ಮಕ ವಿವರಣೆಯೊಂದಿಗೆ ಹೇಳಿದರು. ಬಳಿಕ ಕಾರ್ಯದರ್ಶಿಗಳಾದ ದತ್ತಾತ್ರೇಯ ಅವರಾದಿ ಅವರು ಎಲ್ಲರಿಗೂ ವಂದನೆಗಳನ್ನು ಅರ್ಪಿಸಿದ ಮೇಲೆ ಸಭಾ ವಿಸರ್ಜನೆಯಾಯಿತು.

**ಬೆಂಗಳೂರು: ನೃತ್ಯ ಪ್ರದರ್ಶನ, ಉಪನ್ಯಾಸ**

ಲಲಿತ ಕಲಾ ಶಾಲೆಯ ಸಹಾಯಾರ್ಥವಾಗಿ ಪ್ರಸಿದ್ಧ ಕಲಾವಿದರಾದ ಶ್ರೀ. ರಾಮಗೋಪಾಲ್ ಮತ್ತು ಶ್ರೀ. ಕುಂಜಕುರುಪ್ ಅವರ ನೃತ್ಯ; ಕಲಾಶಾಲೆಯ ಶ್ರೀ. ಸರೋಜ ಮತ್ತು ಶ್ರೀ. ಕುಮಾರಿ ಅವರಿಂದ ಭರತ ನಾಟ್ಯ ಪ್ರದರ್ಶನ; ಸಂಗೀತ ಭೂಷಣ ಶ್ರೀ. ಜಿ. ನಾಗರಾಜರಾಯರ ವೀಣಾವಾದನ ಮತ್ತು ಶ್ರೀ. ರಾಮಗೋಪಾಲ್ ಅವರಿಂದ ನೃತ್ಯ ಕಲೆಯ ಮೇಲೆ ಉಪನ್ಯಾಸ ಕನ್ನಡ ಸಾಹಿತ್ಯ ಪರಿಷನ್ಮಂದಿರದಲ್ಲಿ ೧೪–೧೨–೪೨ ನೆಯ ಸಂಜೆ ೬ ಕ್ಕೆ.

ಟಿಕೆಟಿನ ಮೂಲಕ ಪ್ರವೇಶ. ಪ್ರವೇಶಧನ ೧ ರೂ; ೮ ಆಣೆ.

## ಏನು ಬಂತೋ ಕಾಲ!

ಏನು ಬಂತೋ ಕಾಲ
ರುದ್ರದೇವನ ಶೂಲ
ತಿವಿಯುತಿದೆ ತುಳಿಯುತಿದೆ
ಭೂವ್ಯೋಮ ಪಾತಾಲ ೧

ಕಾಳಗದ ಡಮರುಗದ
ಆಭೀಳವಾನಾದ
ಬುವಿಯೆಲ್ಲ ಮೂಲೆಯಲಿ
ಹುಟ್ಟಿಸಿದೆ ನಿಹ್ರ್ರಾದ ೨

ಮನುಜ ಮದವನು ಕೆಣಕಿ
ದನುಜರಾಗಿಸಿ ನೂಕಿ
ಕೋಟಿ ಇರುವೆಗಳಂತೆ
ಸುಟ್ಟಹುದು ಅಡಿಬೆಂಕಿ ೩

ಅಕರಾಳ ವಿಕರಾಳ
ತೂರುತಿದೆ ಮೈ ನೀಳ
ಯಾರೇನು ಎಲ್ಲರನು
ಇರಿಯುತಿದೆ ಕರವಾಳ ೪

ಹುಳತಿಂದು ಒಳಕೊಳೆತು
ಹೊರ ಹೊಳಪಿನಲಿ ಮಲೆತು
ನಿಂತ ಹೆಮ್ಮರವೆಲ್ಲ
ಕೆಳಬೀಳುತಿವೆ ಕಲೆತು ೫

ಎಂದಿನಂತಿರೆ ಸೃಷ್ಟಿ
ಅಂದಗೆಟ್ಟಿತು ದೃಷ್ಟಿ
ಉರಿಸುತಿರೆ ನೆಲ ಜಲವ
ಗುಂಡು ಬಾಂಬಿನ ವೃಷ್ಟಿ ೬

ಸತ್ಯನ್ಯಾಯವ ಹಿಸುಕಿ
ಜರೆದ ಜಗವನು ಮುಸುಕಿ
ದಂಡಿಸುವ ಯಮಧರ್ಮ
ಹೊಸ ಶಸ್ತ್ರಗಳನಮುಕಿ ೭

ಸವಿ ಬಾಳಿನಾಸೆಯಲಿ
ಮುಕ್ತತೆಯ ಯಾಗದಲಿ
ದಮನ ರಾಕ್ಷಸ ರಕ್ತ
ಬಿದ್ದು ಹೊಗರೇರಿಸಲಿ ೮

ಬಂದುದೆಲ್ಲವು ಬರಲಿ
ಪ್ರಳಯವಾದರು ಇರಲಿ
ಹೊಸಹುಟ್ಟು ಸಾರುತಿಹ
ತಾಂಡವದ ಉಲಿಯಿರಲಿ ೯

ಸತ್ಯವನು ಮಾರ್ಕೊಂಡು
ಸಾವು ನೋವನು ಕಂಡು
ಬಾಳ್ವ ಬಂಟನೆ ಬೇಕು
ಅವನೆ ಇಂದಿನ ಗಂಡು ೧೦

— ರಸಿಕರಂಗ

೬೫೪—೧೯೪೨ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧೨
ಬಿಡಿ ಪತ್ರಿಕೆ: ೬ ಕಾಸು




ಸಂಪಾದಕ:
ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿ ಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಬೆಂಗಳೂರು: ಶುಕ್ರವಾರ, ಡಿಸೆಂಬರ್ ೨೫, ೧೯೪೨

ಸಂಚಿಕೆ ೯

ರಾಜಸೇವಾಸಕ್ತ
ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು



ಪರಿಷತ್ತಿನ ಉಪಾಧ್ಯಕ್ಷರು
(೧೯೩೮–೧೯೪೨)

ಈ ಮಹನೀಯರ ಭಾವಚಿತ್ರ ಅನಾವರಣ ಪರಿಷನ್ಮಂದಿರದಲ್ಲಿ
ತಾ॥ ೨೦-೧೨-೧೯೪೨ರಲ್ಲಿ ನಡೆಯಿತು

## ಪರಿಷತ್ತಿನ ಸದಸ್ಯರ ಇಪ್ಪತ್ತೇಳನೆಯ ವಾರ್ಷಿಕಾಧಿವೇಶನ

೨೦-೧೨-೧೯೪೨ನೆಯ ಭಾನುವಾರ ಬೆಳಗ್ಗೆ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ನಡೆದ ೨೭ನೆಯ ಸಕಲ ಸದಸ್ಯರ ವಾರ್ಷಿಕ ಅಧಿವೇಶನದಲ್ಲಿ ಈ ಕೆಳಗಿನಂತೆ ಆಯ್ಕೆಗಳು ನಡೆದುವು:

**ಅಧ್ಯಕ್ಷರು :**

ಶ್ರೀಮಂತ ಬಸವಪ್ರಭು ರಾಜಾ ಲಖಮಗೌಡ ಸರದೇಸಾಯಿ
ಓ.ಬಿ.ಇ., ಒಂಟಮುರಿ ಅವರು.

### ಕಾರ್ಯಸಮಿತಿ

**ಅಧಿಕಾರಿಗಳು :**



ರಾಜಸೇವಾಪ್ರಸಕ್ತ **ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರರು**, ಎಂ.ಎ. ಅವರು (ಉಪಾಧ್ಯಕ್ಷರು ಮತ್ತು ಕಾರ್ಯಸಮಿತಿಯ ಅಧ್ಯಕ್ಷರು).

ಶ್ರೀ. ಬಿ. ವೆಂಕೋಬರಾಯರು, ಬಿ.ಎ. ಅವರು (**ಕಾರ್ಯದರ್ಶಿಗಳು**).

ಶ್ರೀ. ಡಿ. ಸಿ. ಸುಬ್ಬರಾಯಪ್ಪ, ಬಿ.ಎ.,ಬಿ.ಎಲ್. ಅವರು (**ಕೋಶಾಧಿಕಾರಿಗಳು**).

**ಸದಸ್ಯರು :**

**ಮೈಸೂರು ಕರ್ನಾಟಕ :** ೧. ಶ್ರೀಮತಿ ಆರ್. ಕಲ್ಯಾಣಮ್ಮನವರು, ಬೆಂಗಳೂರು, ಶ್ರೀ.ಗಳಾದ ೨. ವಿ. ಸೀತಾರಾಮಯ್ಯನವರು, ಎಂ.ಎ. ಬೆಂಗಳೂರು, ೩. ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್‌ಎಲ್.ಬಿ. ಬೆಂಗಳೂರು, ೪. ಕೆ. ವಿ. ರಾಘವಾಚಾರ್ಯರು, ಎಂ.ಎ., ಬಿ.ಟಿ. ಮೈಸೂರು.

**ಉತ್ತರ ಕರ್ನಾಟಕ :** ಶ್ರೀ.ಗಳಾದ ೧. ವಿ. ಕೆ. ಗೋಕಾಕ್ ಅವರು, ಬಿ.ಎ. (ಆಕ್ಸನ್), ಸಾಂಗಲಿ, ೨. ಎಂ. ಪಿ. ವಾಲಿಯವರು, ಎಂ.ಎ. ಬೆಳಗಾಂವಿ, ೩. ರಂ. ಶ್ರೀ. ಮುಗಳಿಯವರು, ಎಂ.ಎ., ಬಿ.ಟಿ. ಸಾಂಗಲಿ, ೪. ವಿ. ಬಿ. ನಾಯಕ್ ಅವರು, ಎಂ.ಎ., ಎಲ್‌ಎಲ್.ಬಿ. ಬಿಜಾಪುರ, ೫. ಶಿ. ಶಿ. ಬಸವನಾಳರು, ಎಂ.ಎ. ಬೆಳಗಾಂವಿ.

**ಹೈದರಾಬಾದು ಕರ್ನಾಟಕ :** ಶ್ರೀ.ಗಳಾದ ೧. ವ್ಯಾಕರಣತೀರ್ಥ ಚಂದ್ರಶೇಖರಶಾಸ್ತ್ರಿಗಳು, ಯಾದಗಿರಿ.

**ಮಂಗಳೂರು ಮತ್ತು ಕೊಡಗು ಕರ್ನಾಟಕ :** ಶ್ರೀ. ೧. ಎಂ. ಎಸ್. ಅನಂತಪದ್ಮನಾಭರಾಯರು, ಮಡಕೇರಿ.

### ಪ್ರಾಂತ ಸಮಿತಿಗಳು

**ಮೈಸೂರು ಕರ್ನಾಟಕ ಪ್ರಾಂತಸಮಿತಿ**

ಶ್ರೀ.ಗಳಾದ — ೧. ಸಿ. ಕೆ. ವೆಂಕಟರಾಮಯ್ಯ, ಎಂ.ಎ., ಎಲ್‌ಎಲ್.ಬಿ. ಅವರು, ಬೆಂಗಳೂರು, ೨. ಎಂ. ಆರ್. ಶ್ರೀನಿವಾಸಮೂರ್ತಿ, ಬಿ.ಎ. ಅವರು, ಬೆಂಗಳೂರು, ೩. ಎಸ್. ವಿ. ರಂಗಣ್ಣ, ಎಂ.ಎ. ಅವರು, ಬೆಂಗಳೂರು, ೪. ಜಿ. ಪಿ. ರಾಜರತ್ನಂ, ಎಂ.ಎ. ಅವರು, ಬೆಂಗಳೂರು, ೫. ಎಸ್. ಮಂಜನಾಥ್, ಎಂ.ಎ. ಅವರು, ಬೆಂಗಳೂರು, ೬. ಶ್ರೀಮತಿ ಆರ್. ಕಲ್ಯಾಣಮ್ಮನವರು, ಬೆಂಗಳೂರು, ೭. ಜಿ. ಶಾಂತವೀರಪ್ಪನವರು, ಬಿ.ಎ., ಬೆಂಗಳೂರು, ೮. ಬೆನಗಲ್ ರಾಮರಾವ್, ಎಂ.ಎ., ಎಲ್‌ಎಲ್.ಬಿ. ಅವರು, ಬೆಂಗಳೂರು, ೯. ಬಿ. ಪುಟ್ಟಯ್ಯ, ಬಿ.ಎ. ಅವರು, ಬೆಂಗಳೂರು, ೧೦. ಶ್ರೀ ಶ್ರೀ ಮಹದೇವಸ್ವಾಮಿಗಳವರು, ಸರ್ಪಭೂಷಣಮಠ, ಬೆಂಗಳೂರು, ೧೧. ಕೆ. ಅಂಬ್ರೋಸ್ ಆನಂದ, ಬಿ.ಎ. ಅವರು, ಬೆಂಗಳೂರು, ೧೨. ಎ. ಎನ್. ಸುಬ್ಬರಾಯರವರು, ಬೆಂಗಳೂರು, ೧೩. ಸಿದ್ದವ್ವನಹಳ್ಳಿ ಕೃಷ್ಣಶರ್ಮ ಅವರು, ಚಿತ್ರದುರ್ಗ, ೧೪. ಎಂ.ಎ. ನರಸಿಂಹಾಚಾರ್ಯರವರು, ಬೆಂಗಳೂರು, ೧೫. ಎನ್. ಎಸ್. ರಾಮಚಂದ್ರಯ್ಯ, ಎಂ.ಎ. ಅವರು, ಬೆಂಗಳೂರು, ೧೬. ಎಸ್. ವಿ. ಶ್ರೀನಿವಾಸರಾವ್, ಬಿ.ಎ., ಬಿ.ಟಿ. ಅವರು, ಮೈಸೂರು, ೧೭. ಟಿ. ಎನ್. ಶ್ರೀಕಂಠಯ್ಯ, ಎಂ.ಎ. ಅವರು, ಮೈಸೂರು, ೧೮. ಜಿ. ಆರ್. ರಂಗಸ್ವಾಮಿ, ಎಂ.ಎ. ಅವರು, ಮೈಸೂರು, ೧೯. ಡಿ. ಎಲ್. ನರಸಿಂಹಾಚಾರ್, ಎಂ.ಎ. ಅವರು, ಮೈಸೂರು, ೨೦. ಬಿ. ಆರ್. ಪುಟ್ಟನಂಜಪ್ಪ, ಎಂ.ಎ., ಎಲ್‌ಎಲ್.ಬಿ. ಅವರು, ಶಿವಮೊಗ್ಗ, ೨೧. ಶ್ರೀಮತಿ ಬಿ. ಎಲ್. ಸುಶೀಲಮ್ಮ, ಎಂ.ಎಸ್‌ಸಿ, ಅವರು, ಬೆಂಗಳೂರು, ೨೨. ಬಿ. ವೆಂಕೋಬರಾವ್, ಬಿ.ಎ. ಅವರು, ಬೆಂಗಳೂರು, ೨೩. ಕೆ. ಸಂಪದ್ಗಿರಿರಾವ್, ಎಂ.ಎ. ಅವರು, ಬೆಂಗಳೂರು, ೨೪. ಎಚ್. ಚೆನ್ನಕೇಶವ ಅಯ್ಯಂಗಾರ್, ಎಂ.ಓ.ಎಲ್. ಅವರು, ಮೈಸೂರು, ೨೫. ಎಂ. ವಾಸುದೇವಮೂರ್ತಿ, ಬಿ.ಎಜಿ. ಅವರು, ಬೆಂಗಳೂರು.

**ಉತ್ತರ ಕರ್ನಾಟಕ ಪ್ರಾಂತಸಮಿತಿ**

ಶ್ರೀ.ಗಳಾದ— ೧. ಶ್ರೀ ಶ್ರೀ ಬಸವಲಿಂಗ ಸ್ವಾಮಿಗಳವರು, ನವಿಲುಗುಂದ, ೨. ದ. ರಾ. ಬೇಂದ್ರೆ, ಎಂ.ಎ. ಅವರು, ಧಾರವಾಡ, ೩. ಎಸ್. ಎಸ್. ಮಳೀಮಠ, ಬಿ.ಎ., ಎಲ್‌ಎಲ್.ಬಿ. ಅವರು, ಧಾರವಾಡ, ೪. ಬೆಟಗೇರಿ ಕೃಷ್ಣಶರ್ಮ ಅವರು, ಧಾರವಾಡ, ೫. ಸಾಲಿ ರಾಮಚಂದ್ರರಾವ್, ಬಿ.ಎ. ಅವರು, ಧಾರವಾಡ, ೬. ಡಾ॥ ಕಮಲಾಪುರ ಕಾಂತರಾಯರು, ಧಾರವಾಡ, ೭. ಎಸ್. ಎಸ್. ಮಾಳವಾಡ, ಎಂ.ಎ. ಅವರು, ಧಾರವಾಡ, ೮. ರಂಗಪ್ಪ ಭೀ. ಪೋದ್ದಾರ್, ಬಿ.ಎ. ಅವರು, ಧಾರವಾಡ, ೯. ಬೆಳಗಾಂವಿ ರಾಮಚಂದ್ರರಾವ್, ಬಿ.ಎ. ಅವರು, ಧಾರವಾಡ, ೧೦. ತಮ್ಮಣರಾವ್ ಅಮೀನಭಾವಿ ಅವರು, ಧಾರವಾಡ, ೧೧. ಡಾ॥ ಎಸ್. ಸಿ. ನಂದೀಮಠ, ಎಂ.ಎ., ಪಿಎಚ್.ಡಿ. ಅವರು, ಬೆಳಗಾಂವಿ, ೧೨. ಎಸ್. ಎಂ. ದೇಸಾಯಿ ಅವರು, ಬೆಳಗಾಂವಿ, ೧೩. ಪ್ಯಾಟಿ ಶಾಮರಾಯರವರು, ಬೆಳಗಾಂವಿ, ೧೪. ಅರವಿಂದ ಜೋಶಿ, ಬಿ.ಎ., ಬಿ.ಟಿ. ಅವರು, ಬೆಳಗಾಂವಿ, ೧೫. ಚ. ಚ. ಅಬಕಾರ ಅವರು, ಜಮಖಂಡಿ, ೧೬. ಎಂ. ಜಿ. ವಿರೂಪಾಕ್ಷನ್ ಅವರು, ಧಾರವಾಡ, ೧೭. ರಾವ್ ಬಹದ್ದೂರ್ ಪಿ. ಜಿ. ಹಳಕಟ್ಟಿ, ಬಿ.ಎ., ಎಲ್‌ಎಲ್.ಬಿ. ಅವರು, ಬಿಜಾಪುರ, ೧೮. ಮುರಿಗಯ್ಯ ಸೋಮಯ್ಯ ಜೆಂಗಿನ ಅವರು, ಬಾಗಲಕೋಟೆ, ೧೯. ಬಿ. ಎಂ. ರೇವಣಸಿದ್ದಯ್ಯನವರು, ಬಳ್ಳಾರಿ, ೨೦. ಷೇಕ್ ಅಲ್ಲಪ್ಪ, ಎಂ.ಎ. ಅವರು, ಧಾರವಾಡ.

**ಮಂಗಳೂರು - ಕೊಡಗು ಕರ್ನಾಟಕ ಪ್ರಾಂತಸಮಿತಿ**

೧. ಸಿ. ಎಂ. ರಾಮರಾಯರು. ಮಡಕೇರಿ, ೨. ಸಿ. ಎನ್. ವೆಂಕಪ್ಪಯ್ಯನವರು. ಮಡಕೇರಿ ೩. ಎಚ್. ತಿರುಮಲಾಚಾರ್ಯರು, ಮಡಕೇರಿ, ೪. ಕೆ. ಪಿ. ಅಪ್ಪಯ್ಯನವರು, ಮಡಕೇರಿ. ೫. ವಿದ್ವಾನ್ ಕಡೆಂಗೋಡ್ಲು ಶಂಕರಭಟ್ಟರವರು, ಮಂಗಳೂರು, ೬. ಬೆಳ್ಳೆ ರಾಮಚಂದ್ರರಾಯರು. ಪುತ್ತೂರು. ೭. ವಿದ್ವಾನ್ ಮುಳಿಯ ತಿಮ್ಮಪ್ಪಯ್ಯನವರು, ಮಂಗಳೂರು, ೮. ವಿದ್ವಾನ್ ಜಿ. ವಾಮನಭಟ್ಟರವರು, ಮಂಗಳೂರು, ೯. ಜಿ. ಎನ್. ಲಕ್ಷ್ಮಣಪೈ ಅವರು, ಪುತ್ತೂರು, ೧೦. ವಿದ್ವಾನ್ ಟಿ. ನಾರಾಯಣಭಟ್ಟರವರು, ಮಂಗಳೂರು.

**ಹೈದರಾಬಾದು ಕರ್ನಾಟಕ ಪ್ರಾಂತಸಮಿತಿ**

ಶ್ರೀ.ಗಳಾದ — ೧. ಶ್ರೀನಿವಾಸರಾವ್ ಕಾಗಲಕರ, ಬಿ.ಎ., ಎಲ್‌ಎಲ್.ಬಿ. ಅವರು, ಹೈದರಾಬಾದು, ೨. ಕೃಷ್ಣಾಚಾರ್ ಜೋಶಿ, ಬಿ.ಎ., ಎಲ್‌ಎಲ್.ಬಿ. ಅವರು, ಹೈದರಾಬಾದು, ೩. ಡಿ. ಕೆ. ಭೀಮಸೇನರಾವ್, ಎಂ.ಎ. ಅವರು, ಹೈದರಾಬಾದು, ೪. ಪದ್ಮನಾಭ ಪುರಾಣಿಕ, ಎಂ.ಎಸ್‌ಸಿ. ಅವರು, ಕಲಬುರ್ಗಿ, ೫. ವೈ. ಗೋಸಲರಾಯರು, ಚಿಂಚೋಳಿ, ೬. ವ್ಯಾಕರಣತೀರ್ಥ ಚಂದ್ರಶೇಖರಶಾಸ್ತ್ರಿಗಳು, ಯಾದಗಿರಿ, ೭. ವಿದ್ವಾನ್ ವೀರೇಶ್ವರಶಾಸ್ತ್ರಿಗಳು, ಯಾದಗಿರಿ, ೮. ರಾ. ಗು. ಜೋಶಿ ಅವರು, ರಾಯಿಚೂರು, ೯. ಶಿಣ್ಣೂರು ಶಿವರುದ್ರಪ್ಪನವರು, ಯಾದಗಿರಿ.

### ಬಿನ್ನಹ

ಕಳೆದ ವರ್ಷ ಫೆಬ್ರುವರಿ ತಿಂಗಳಿನಿಂದ ರಾಜಸೇವಾಸಕ್ತ ಶ್ರೀ. ಬಿ. ಎಂ. ಶ್ರೀಕಂಠಯ್ಯನವರು 'ಕನ್ನಡ ನುಡಿ'ಯ ಸಂಪಾದಕರಾಗಿದ್ದು ಅದನ್ನು ನಡಸಿಕೊಂಡು ಬಂದು ಉಪಕಾರ ಮಾಡಿದ್ದಾರೆ. ದೇಹಾಲಸ್ಯದ ಪ್ರಯುಕ್ತ ಕೆಲವು ಕಾಲ ವಿಶ್ರಾಂತಿ ಪಡೆಯಬೇಕೆಂದು ಸಂಪಾದಕತ್ವದ ಹೊಣೆಯನ್ನು ಇಳುಹಲು ಅಪೇಕ್ಷಿಸಿದ್ದಾರೆ. ಸರ್ಕಾರದ ಅನುಮತಿಯ ನಿರೀಕ್ಷೆಯಲ್ಲಿ ಈ ಹೊಣೆಯನ್ನು ವಹಿಸುವುದಾಗಿ ನಾನು ಒಪ್ಪಿಕೊಂಡಿರುತ್ತೇನೆ.

ಬೆಂಗಳೂರು
೨೫–೧೨–೧೯೪೨

ಬಿ. ವೆಂಕೋಬರಾವ್
ಕಾರ್ಯದರ್ಶಿ

# ಕನ್ನಡ ನುಡಿ

**ಶುಕ್ರವಾರ, ಡಿಸೆಂಬರ್ ೨೫, ೧೯೪೨**

## ನಮ್ಮ ಉಪಾಧ್ಯಕ್ಷರು

ಪರಿಷತ್ತಿನ ಉಪಾಧ್ಯಕ್ಷರಾಗಿದ್ದ ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್. ಅವರು ಕಳೆದ ಭಾನುವಾರದ ದಿನ ತಮ್ಮ ದೇಹಾಲಸ್ಯದ ನಿಮಿತ್ತವಾಗಿ ತಮ್ಮ ಉಪಾಧ್ಯಕ್ಷ ಸ್ಥಾನವನ್ನು ಬಿಟ್ಟು ವಿಶ್ರಾಂತಿ ಹೊಂದಿದರು. ಅವರ ದೇಹಾರೋಗ್ಯ ಈಚಿನ ಕೆಲವು ತಿಂಗಳುಗಳಿಂದ ಸರಿಯಾಗಿಲ್ಲದಿರುವುದು ವಿಷಾದಕರವಾಗಿದೆ. ಆದರ ದೆಸೆಯಿಂದ ಅವರು ಉಪಾಧ್ಯಕ್ಷ ಸ್ಥಾನವನ್ನು ಬಿಟ್ಟುಬಿಡಬೇಕಾಯಿತು. ಅದು ಅನಿರೀಕ್ಷಿತವಾಗಿಯೂ, ಅನಿವಾರ್ಯವಾಗಿಯೂ ನಡೆದುಹೋಯಿತು. 'ಶ್ರೀ'ಯವರು ಕನ್ನಡದ ಸೇವೆಗಾಗಿ ಕಂಕಣವನ್ನು ತೊಟ್ಟು, ಪ್ರೀತಿ ಭಕ್ತಿಗಳಿಂದ ಸುಮಾರು ನಲವತ್ತು ವರ್ಷಗಳ ಕಾಲ ಕನ್ನಡ ತಾಯಿಗೆ ತಮ್ಮ ತನು ಮನ ಧನಗಳನ್ನು ಒಪ್ಪಿಸಿ, ಅವಿಶ್ರಾಂತರಾಗಿ ದುಡಿದು ಧನ್ಯರಾಗಿದ್ದಾರೆ. ಕನ್ನಡ ನಾಡಿನಲ್ಲಿ - ಕನ್ನಡ ಜನದಲ್ಲಿ - ಕನ್ನಡ ನುಡಿಯಲ್ಲಿ - ಮತ್ತು ಕನ್ನಡ ನಯದಲ್ಲಿ ಅವರಿಗೆ ಅಸಾಧಾರಣವಾದ ಪ್ರೇಮ. ಅವರ ಅಸೀಮ ಪಾಂಡಿತ್ಯವಂತೂ ಕನ್ನಡಿಗರಿಗೆ ಮಾತ್ರವೇ ಅಲ್ಲದೆ ಇತರರಿಗೂ ಚಿರಪರಿಚಿತವಾಗಿದೆ. ಇಂಗ್ಲಿಷ್ ಭಾಷೆಯಲ್ಲಾಗಲಿ ಕನ್ನಡ ಭಾಷೆಯಲ್ಲಾಗಲಿ ಅವರ ವಾಗ್ಝರಿಯನ್ನೂ ತಮಿಳು ಭಾಷೆಯ ಪಾಂಡಿತ್ಯವನ್ನೂ ಮೆಚ್ಚಿ ತಲೆದೂಗದವರಿಲ್ಲ. ಅವರು ಬರೆದಿರುವ 'ಇಂಗ್ಲಿಷ್ ಗೀತಗಳು', 'ಅಶ್ವತ್ಥಾಮನ್' ಮುಂತಾದ ಕಾವ್ಯಗಳೂ ಇತರ ಗ್ರಂಥಗಳೂ ಕನ್ನಡಿಗರು ಹೆಮ್ಮೆಪಡುವಂತಿವೆ. ನಾನಾ ಪ್ರಾಂತಗಳ ಕನ್ನಡಿಗರ ಹೃದಯಗಳನ್ನೂ ಒಟ್ಟುಗೂಡಿಸಲು ಕನ್ನಡ ನಾಡಿನ ಮೂಲೆ ಮೂಲೆಗೂ ಹೋಗಿ, ದೇಹಶ್ರಮವನ್ನಾಗಲಿ ಅಥವಾ ಧನವ್ಯಯವನ್ನಾಗಲಿ ಗಮನಿಸದೆ ಅವರು ಅಮೋಘವಾದ ಪ್ರಯತ್ನಗಳನ್ನು ಕೈಕೊಂಡು ಸಂತತವಾಗಿ ಶ್ರಮಿಸಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿ ಅವರು ಈಗ್ಗೆ ಐದು ವರ್ಷಗಳಿಂದ ಮನಃಪೂರ್ವಕವಾಗಿ ದುಡಿದಿದ್ದಾರೆ; ಪರಿಷತ್ತು ಮುನ್ನಡೆಯಲ್ಲಿ ಮುಂದುವರಿಯಲು ಅದರಿಂದ ಬಹಳವಾಗಿ ಸಹಾಯವಾಗಿದೆ; ತಮ್ಮಿಂದ ಸಾಧ್ಯವಿದ್ದ ರೀತಿಗಳಲ್ಲೆಲ್ಲ ಅವರು ಪರಿಷತ್ತಿನ ಪುರೋಭಿವೃದ್ಧಿಯನ್ನು ಸಾಧಿಸಿದ್ದಾರೆ. ಪರಿಷತ್ತಿನಲ್ಲಿ ಗಮಕ ಕಲೆಯ ಪುರೋಭಿವೃದ್ಧಿ ಸಾಧನೆಗಾಗಿ ಏರ್ಪಟ್ಟಿರುವ ನಿಧಿಗೆ ೧,೦೦೦ ರೂ.ಗಳನ್ನೂ, ಪರಿಷತ್ತಿನ ಅಚ್ಚುಕೂಟಕ್ಕಾಗಿ ೬,೦೦೦ ರೂ.ಗಳನ್ನೂ ಅವರು ಕೊಡುಗೈಯಿಂದ ದಾನವಾಗಿ ಕೊಟ್ಟಿದ್ದಾರೆ. ಅವರು ಒಟ್ಟು ನಾಡಿನಲ್ಲೆಲ್ಲ ಪ್ರಸಿದ್ಧರಾದ ಭಾಷಾಭಿಮಾನಿಗಳು. ಮೈಸೂರು ವಿಶ್ವವಿದ್ಯಾನಿಲಯದ 'ಯೂನಿವರ್ಸಿಟಿ ಪ್ರೊಫೆಸರ್' ಹುದ್ದೆಯನ್ನಲಂಕರಿಸಿ ಇಂಗ್ಲಿಷ್ ಭಾಷೆಯ ಅಧ್ಯಾಪಕರಾಗಿ ಅವರು ಅಮಿತವಾದ ಕೀರ್ತಿಯನ್ನು ಗಳಿಸಿದರು; ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಗೌರವ ಪ್ರಯುಕ್ತ ಕನ್ನಡ ಭಾಷೆಯ 'ಪ್ರೊಫೆಸರ್' ಹುದ್ದೆಯನ್ನಲಂಕರಿಸಿ ವಿದ್ಯಾರ್ಥಿಗಳ ಮನಸ್ಸನ್ನು ಕುಣಿಸಿ ತಣಿಸಿದರು. ಆವರು ಅವೆರಡು ಹುದ್ದೆಗಳಿಂದ ವಿಶ್ರಾಂತರಾಗಿ ಸ್ವಲ್ಪ ಕಾಲ ಮಾತ್ರವೇ ಕಳೆದಿದೆ. ಅವರ ಜ್ಞಾನಾನುಭವಗಳೂ ಶಕ್ತಿ ಸಾಮರ್ಥ್ಯಗಳೂ ಪರಿಷತ್ತಿಗೇ ಪೂರ್ತಿಯಾಗಿ ಲಭಿಸಿಯಾವೆಂಬ ಆಶೆಯೂ ಹಾರೈಕೆಯೂ ಕನ್ನಡಿಗರ ಮನಸ್ಸಿನಲ್ಲಿ ಉಕ್ಕುತ್ತಿರುವಾಗಲೇ ಅವರು ಪರಿಷತ್ತಿನ ಉಪಾಧ್ಯಕ್ಷಸ್ಥಾನವನ್ನು ಬಿಡಬೇಕಾಯಿತು. ಅವರಿಗೆ ಆದಷ್ಟುಬೇಗ ಪೂರ್ಣಾರೋಗ್ಯವುಂಟಾಗಿ, ಅವರ ಜ್ಞಾನಾನುಭವಗಳ ಪ್ರಯೋಜನಗಳು ಪರಿಷತ್ತಿಗೆ ಯಥೇಷ್ಟವಾಗಿ ದೊರೆಯುವಂತೆಯೂ ಅವರಿಗೆ ದೀರ್ಘಾಯುಸ್ಸು ಲಭಿಸಿ ಬಹುಮುಖವಾದ ಅವರ ದೇಶ ಸೇವೆ ಭಾಷಾ ಸೇವೆಗಳು ಚಿರಕಾಲ ನಡೆಯುವಂತೆಯೂ ಭಗವಂತನು ಅನುಗ್ರಹಿಸಲೆಂದು ಪ್ರಾರ್ಥಿಸುವೆವು.

ಶ್ರೀಮಾನ್ ಬಿ.ಎಂ. ಶ್ರೀಕಂಠಯ್ಯನವರು ಉಪಾಧ್ಯಕ್ಷರಾಗಿರುವುದು ಇನ್ನು ಸಾಧ್ಯವಿಲ್ಲವೆಂದು ತಿಳಿಸಿದಾಗ ಸಭೆಯಲ್ಲಿದ್ದ ಪರಿಷತ್ತಿನ ಸದಸ್ಯರ ಮನಸ್ಸಿಗೆ ಸಖೇದಾಶ್ಚರ್ಯಗಳಿಂದ ಆತಂಕವುಂಟಾಯಿತು. ಸದಸ್ಯರ ಸರ್ವಾನುಮತದ ಪ್ರಾರ್ಥನೆಯನ್ನು ಲಾಲಿಸಿ ರಾಜಸೇವಾಪ್ರಸಕ್ತ ಶ್ರೀಮಾನ್ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರವರು ಉಪಾಧ್ಯಕ್ಷರಾಗಲು ಸಮ್ಮತಿಸಿ ಉಪಕಾರ ಮಾಡಿದರು; ಸದಸ್ಯರ ಮನಸ್ಸಿಗೆ ಸಮಾಧಾನವನ್ನೂ ಸಂತೋಷವನ್ನೂ ಉಂಟುಮಾಡಿದರು. ಶ್ರೀಮಾನ್ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರ ಯಶಸ್ಸು ಒಟ್ಟು ಕನ್ನಡ ನಾಡಿಗೇ ಹಬ್ಬಿದೆ. ಅವರ ಕಾವ್ಯಗಳೂ, ವಿಮರ್ಶೆಗಳೂ ಕನ್ನಡ ಸಾಹಿತ್ಯವನ್ನು ಬೆಳಗುತ್ತಿವೆ. ಕವಿತೆ, ನಾಟಕ, ಸಣ್ಣ ಕತೆ, ವಿಮರ್ಶೆ, ನೀಳ್ಗತೆ ಮುಂತಾದ ವಿವಿಧ ರೂಪಗಳಲ್ಲಿ ಅವರು ಸರಸ್ವತೀದೇವಿಗೆ ಪುಷ್ಪಾಂಜಲಿಯನ್ನು ಸಮರ್ಪಿಸಿದ್ದಾರೆ. ಅವರು ಮೈಸೂರು ಸಂಸ್ಥಾನದಲ್ಲಿ ದೊಡ್ಡ ಹುದ್ದೆಯನ್ನಲಂಕರಿಸಿದ್ದಾರೆ; ಅಲ್ಲದೆ, ಒಟ್ಟು ಕನ್ನಡ ನಾಡಿನಲ್ಲೆಲ್ಲ ಸುಪ್ರಸಿದ್ಧರಾಗಿ, ಕನ್ನಡಿಗರ ಪ್ರೀತಿ ಗೌರವಗಳನ್ನು ಗಳಿಸಿದ್ದಾರೆ. ಅವರ ಭಾಷಾಭಿಮಾನ ದೇಶಾಭಿಮಾನಗಳು ಅತ್ಯಂತ ಶ್ಲಾಘ್ಯವಾಗಿವೆ. ಅವರು ಉಪಾಧ್ಯಕ್ಷರಾಗಿರುವುದು ಪರಿಷತ್ತಿನ ಸುಯೋಗ. ಅವರು ಚಿರಕಾಲ ಪರಿಷತ್ತಿನ ಉಪಾಧ್ಯಕ್ಷರಾಗಿರಲೆಂದೂ, ಅವರ ನೇತೃತ್ವದಲ್ಲಿ ಪರಿಷತ್ತು ದಿನದಿನವೂ ಮುಂದುವರಿದು ಅಭ್ಯುದಯಹೊಂದಲೆಂದೂ ನಾವು ಮನಃಪೂರ್ವಕವಾಗಿ ಹಾರೈಸುತ್ತೇವೆ.

## ಬೀಳ್ಕೊಡಿಗೆ

ಕನ್ನಡದ ಕೆಲಸದಲ್ಲಿ ನನಗೆ ನೆರವಾದ ಮಾನ್ಯ ಮಿತ್ರರಿಗೆಲ್ಲ ನನ್ನ ಪ್ರೀತಿಯ ವಂದನೆಗಳು.

ಪರಿಷತ್ತಿನ ಉಪಾಧ್ಯಕ್ಷನ ಹೊಣೆಗಾರಿಕೆಯನ್ನು ಇಳುಹುತ್ತ, ಅದನ್ನು ಸರಿಯಾದ ಕೈಯಲ್ಲಿ ಬಿಟ್ಟಿರುತ್ತೇನೆಂದು ಸಂತೋಷಪಡುತ್ತೇನೆ. ಶ್ರೀ. ಮಾಸ್ತಿಯವರಿಗೆ ಜಯವಾಗಲಿ.

ಪರಿಷತ್ತಿನ ನಮ್ಮ ಆಸೆ, ನೋಟ, ಕನಸು ಬಲು ದೊಡ್ಡದು. ಕನ್ನಡದ ಸಾರ್ವಜನಿಕ ವಿದ್ಯಾಪೀಠ, ಹೊಸ ಕರ್ನಾಟಕವನ್ನು ರೂಪಿಸುತ್ತಿರುವ ಕನ್ನಡಮ್ಮನ ಗುಡಿ ಅದು. ಯಾರೊಬ್ಬನ ಸೇವೆಯೂ ಅಲ್ಲಿ ಅಳಿಲ ಸೇವೆಗಿಂತ ಹೆಚ್ಚಾಗದು. ನನ್ನಿಂದಾದಷ್ಟು ದುಡಿದೆನೋ ಇಲ್ಲವೋ ಅನ್ನುವುದು ನನ್ನ ಅಳುಕು.

ಕನ್ನಡಿಗರು ಎಚ್ಚತ್ತಿದ್ದೀರಿ. ಬೇಗ ಒಂದಾಗಿ, ಮುಂದಾಗಿ. ಕರ್ನಾಟಕ ರತ್ನಸಿಂಹಾಸನದ ದಿವ್ಯ ತೇಜಸ್ಸನ್ನು ಎಲ್ಲರೂ ಕೂಡಿ ಬೆಳಸಿ; ನಿಮ್ಮ ಹೆಮ್ಮೆಯ ಒಡವೆಯನ್ನಾಗಿ ಮಾಡಿಕೊಳ್ಳಿ. ಕನ್ನಡ ಬಾವುಟ ಒಂದಾಗಲಿ.

ನನ್ನ ಕನ್ನಡದ ಉರುಬಿನಲ್ಲಿ ಕಾವು ನೋವುಗಳಿಗೆ ಎಡೆಕೊಟ್ಟಿದ್ದೇನೆ. ಕನ್ನಡಕ್ಕಾಗಿ, ಕನ್ನಡ ನಾಡಿಗಾಗಿ. ಹಟಕ್ಕಲ್ಲ; ನಾನು ಕಂಡ

ದಿಟಕ್ಕಾಗಿ. ಮರೆತುಬಿಡಿ, ಮನ್ನಿಸಿಬಿಡಿ. 'ನೆನೆಯದಿರಿ ಹಿಂದಿನದನೆಲ್ಲ.'

ಇನ್ನು ನನ್ನ ಇನಿಯ ಕೆಳೆಯರಿಗೆ, ಹಿರಿಯರಿಗೆ. ಕನ್ನಡ ನಾಡನ್ನು ಸುತ್ತುವುದು ನನಗೊಂದು ಪವಿತ್ರ ಯಾತ್ರೆಯಾಗಿತ್ತು. ಮೈಸೂರಿನಲ್ಲಿ, ಹೊರಗೆ–ಮಡಕೇರಿ ಮೊದಲು ಬೆಳವಡಿ ಕಡೆಯಾಗಿ –ಯಾರ ಹೆಸರನ್ನು ಹೇಳಲಿ, ಯಾರ ಹೆಸರನ್ನು ಬಿಡಲಿ?–ಜೈನರಲ್ಲಿ, ವೀರಶೈವರಲ್ಲಿ, ಮಾಧ್ವರಲ್ಲಿ, ಶ್ರೀವೈಷ್ಣವರಲ್ಲಿ, ಸ್ಮಾರ್ತರಲ್ಲಿ, ಒಕ್ಕಲಿಗರಲ್ಲಿ, ಮುಸಲ್ಮಾನರಲ್ಲಿ, ಕ್ರೈಸ್ತರಲ್ಲಿ–ಗಂಡಸರು ಹೆಂಗಸರು, ಸಾಲೆಯ ಮಕ್ಕಳು – ಎಲ್ಲರೂ ನನಗೆ ಒಳ್ಳೆಯ ಮಾತು ಆಡಿದ್ದೀರಿ; ನಲುಮೆಯ ನಡತೆಯನ್ನು ನಡೆದಿದ್ದೀರಿ; ಬೆನ್ನು ತಟ್ಟಿ ಮುಂದೆ ಬಿಟ್ಟಿದ್ದೀರಿ – ಕನ್ನಡದ ಅಣುಗನೆಂದು. ಏನು ಚೆಲುವು ಕನ್ನಡ ನಾಡಿನದು, ಏನು ನಯ ಕನ್ನಡ ಮಕ್ಕಳದು! ನಿಮ್ಮ ಪ್ರೇಮವನ್ನೆಲ್ಲಾ ನನ್ನ ಹೃದಯದಲ್ಲಿ ತುಂಬಿಕೊಂಡಿದ್ದೇನೆ – ಹಿಡಿಯಲಾರದೆ ಅದು ಬಿರಿಯುತ್ತಿದೆ, ದಾಳಿಂಬೆಯ ಹಣ್ಣಿನಂತೆ! ನಾನು ಇದರಲ್ಲಿ ಧನ್ಯ.

ಒಲುಮೆಗಿಂತ ಗೆಲವಿಲ್ಲ. ಒಕ್ಕೂಟಕ್ಕಿಂತ ಬಲವಿಲ್ಲ. ಸಣ್ಣದನ್ನು ದೊಡ್ಡದು ಮಾಡದೆ, ದೊಡ್ಡದನ್ನು ಸಣ್ಣದು ಮಾಡದೆ, ತಾಳ್ಮೆ, ಶಿಸ್ತು, ಅಚ್ಚುಕಟ್ಟು, ಒಕ್ಕೂಟ, ಒಲುಮೆ ಇವು ಕಲೆತರೆ ಕನ್ನಡ ನಾಡಿನ ಮಣ್ಣು ಹೊನ್ನಾಗುವುದು; ಬಾಳು ಬಾನಾಗುವುದು.

ಧರ್ಮದ ಹೊಸಹುಟ್ಟು, ಭಾರತದ ಬಿಡುಗಡೆ, ಕರ್ನಾಟಕದ ಒಕ್ಕೂಟ, ಕನ್ನಡದಲ್ಲಿ ವಿಶ್ವಸಂಸ್ಕೃತಿ ಇವು ಎಲ್ಲೆಲ್ಲಿ ಮಿಡಿಯುತ್ತಿವೆ ಅಲ್ಲಿ ನಾನೂ ಮಿಡಿಯುತ್ತಿದ್ದೇನೆ. ನನ್ನ ಬಾಳಿಕೆಯಲ್ಲಿ ಮಿಕ್ಕಿರುವ ದುಡಿತವೂ ಇವಕ್ಕೇ.

ನಮಸ್ಕಾರ.

ಬೀಳ್ಕೊಡಿಂ, ಎನಗೆ ಜೀವಾನಂದಮಾಗಿರ್ದರೆಲ್ಲರ್
ಬೀಳ್ಕೊಡಿಂ, ನಾನ್ ಪೋಗಿ ಬರ್ಪೆನ್!'

ನಿಮ್ಮ 'ಕರುಣದ ಶಿಶು'
ಬಿ.ಎಂ. ಶ್ರೀಕಂಠಯ್ಯ

೨೧-೧೨-೪೨
ಬೆಂಗಳೂರು

## ಉಪಾಧ್ಯಕ್ಷನ ಬಿನ್ನಹ

ಹಿರಿಯರ ಬೀಳ್ಕೊಳುವೆಯ ಸವಿ ನುಡಿಯ ಅಡಿಯಲ್ಲಿ ನನ್ನ ಎರಡು ಮಾತನ್ನು ಸೇರಿಸಬೇಕೆಂದು ಅಪೇಕ್ಷೆಯಾಗುತ್ತಿದೆ. ಎಲ್ಲ ಹಿರಿಯರ ಗೆಳೆಯರ ಅಪೇಕ್ಷೆಯಂತೆ, ಸರಕಾರದ ಅನುಮತಿಯ ನಿರೀಕ್ಷೆಯಲ್ಲಿ ಈ ಕೆಲಸಕ್ಕೆ ಒಪ್ಪಿಕೊಂಡಿದೇನೆ. ರಾಜಸೇವಾಸಕ್ತ ಶ್ರೀಮಾನ್ ಶ್ರೀಕಂಠಯ್ಯನವರು ನನ್ನನ್ನು ಕುರಿತು ಹೇಳಿರುವ ಮೆಚ್ಚಿಗೆ, ಹರಕೆಯ ಮಾತಿಗೆ ಕೃತಜ್ಞನಾಗಿದೇನೆ. ಉಳಿದೆಲ್ಲ ಹಿರಿಯರೂ ಗೆಳೆಯರೂ ಇದೇ ರೀತಿ ನನ್ನನ್ನು ಒಪ್ಪಿಕೊಂಡಾರೆಂದು ಹಾರೈಸುತ್ತೇನೆ.

ಪರಿಷತ್ತಿನ ಸ್ಥಿತಿಗತಿ, ಕಾರ್ಯಕ್ರಮ ಮುಂತಾದ ವಿಷಯಗಳನ್ನು ಕುರಿತು ನಮ್ಮ ಜನರಲ್ಲಿ ನನ್ನ ಕೆಲವು ಮಾತನ್ನು ನಿವೇದಿಸಬೇಕೆಂದು ನನ್ನ ಉದ್ದೇಶ. ಹಲವು ಕಾರಣದಿಂದ ಇದನ್ನು ಈ ಸಲ ಮಾಡುವುದಾಗಲಿಲ್ಲ. ಮುಂದಿನ ಸಂಚಿಕೆಯಲ್ಲಿ ಮಾಡಲು ಸಾಧ್ಯವಾದೀತೆಂದು ನಂಬಿದೇನೆ.

ಈ ಪದವಿಯನ್ನು ನಾನು ಅಪೇಕ್ಷಿಸಿರಲಿಲ್ಲ, ನಿರೀಕ್ಷಿಸಿರಲಿಲ್ಲ. ನಾನು ಎಣಿಸದೆ ಇದ್ದ ಕೆಲವು ಕಾರಣದಿಂದ ಇದು ಇಂದು ನನ್ನನ್ನು ಸೇರಿದೆ. ಇದಕ್ಕೆ ನನ್ನನ್ನು ಹೂಡಿದ ನಮ್ಮ ಜನದ ಅನುರಾಗ ವಿಶ್ವಾಸಗಳು ಇದರ ಕೆಲಸವನ್ನು ನಡಸುವುದರಲ್ಲಿ ನನಗೆ ನೆರವಾಗಿ ನಿಲ್ಲುವುವೆಂಬ ನಂಬಿಕೆಯಲ್ಲಿ ನಾನು ಧೈರ್ಯದಿಂದಿದೇನೆ.

ಬೆಂಗಳೂರು
೨೩-೧೨-೪೨ ಮಾಸ್ತಿ ವೆಂಕಟೇಶ ಅಯ್ಯಂಗಾರ್

# ಪರಿಷತ್ತಿನ ಸುದ್ದಿ

### ಕನ್ನಡ ಸಾಹಿತ್ಯ ಪರೀಕ್ಷೆಗಳು

ಕನ್ನಡ ಸಾಹಿತ್ಯ ಪರೀಕ್ಷೆಗಳು **ಜನವರಿ ತಿಂಗಳು ೨೯, ೩೦, ೩೧ರಲ್ಲಿ** ನಡೆಯುತ್ತವೆ. ಕಾಲಪಟ್ಟಿ, ಇತ್ಯಾದಿ ವಿವರಗಳನ್ನು ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಲಾಗುವುದು.

### ಪರಿಷತ್ತಿನ ಸದಸ್ಯರಲ್ಲಿ ಬಿನ್ನಹ

ಪರಿಷತ್ತಿನ ಕಾರ್ಯಕಲಾಪಗಳು ಸುಸೂತ್ರವಾಗಿ ನಡೆಯಲು ಅನುಕೂಲವಾಗುವಂತೆ ಪರಿಷತ್ತಿನ ಸದಸ್ಯರು ದಯವಿಟ್ಟು ತಮ್ಮಿಂದ ಸಲ್ಲಬೇಕಾದ ಚಂದಾಹಣವನ್ನು ಪರಿಷತ್ತಿಗೆ ಬೇಗ ಕಳಿಸಿಕೊಟ್ಟು ಉಪಕಾರ ಮಾಡಬೇಕಾಗಿ ಪ್ರಾರ್ಥನೆ.

೧೯೪೩ನೆಯ ವರ್ಷದ ಚಂದಾಹಣವನ್ನು ೧೯೪೩ರ ಮಾರ್ಚಿ ತಿಂಗಳ ಕೊನೆಯೊಳಗೆ ಸಲ್ಲಿಸಬೇಕೆಂದೂ, 'ಕನ್ನಡ ನುಡಿ'ಯ ಅಂಚೆ ವೆಚ್ಚದ ಬಗ್ಗೆ ೧೨ ಆಣೆಯನ್ನೂ ಸದಸ್ಯತ್ವದ ಚಂದಾ ಮೊಬಲಗಿನ ಜತೆಯಲ್ಲಿ ಕಳಿಸಬೇಕೆಂದೂ ಪ್ರಾರ್ಥನೆ.

ಮಾರ್ಚಿಯ ವರೆಗೂ ತಡೆಯದೆ ಒಡನೆಯೆ ಚಂದಾ ಸಲ್ಲಿಸುವುದಾದರೆ ತುಂಬ ಅನುಕೂಲವಾಗುತ್ತದೆಂದು ಬೇರೆ ಹೇಳಬೇಕಾಗಿಲ್ಲ.

ಮಾರ್ಚಿಯೊಳಗೆ ಚಂದಾಹಣವನ್ನಾಗಲಿ, ಅಂಚೆ ವೆಚ್ಚವನ್ನಾಗಲಿ ಕಳಿಸದೆ, ತರುವಾಯ ಸಲ್ಲಿಸುವವರಿಗೆ ಹಣ ಸಲ್ಲಿಸಿದ ತಾರೀಖಿನಿಂದ ಮಾತ್ರ 'ಕನ್ನಡ ನುಡಿ'ಯನ್ನು ಕಳಿಸಿಕೊಡಲು ಸಾಧ್ಯವೇ ಹೊರತು ಹಿಂದಿನ ಸಂಚಿಕೆಗಳನ್ನು ಕಳಿಸಿಕೊಡಲು ಆಗುವುದಿಲ್ಲವೆಂಬುದನ್ನು ದಯವಿಟ್ಟು ಅರಿಯಬೇಕಾಗಿ ಪ್ರಾರ್ಥನೆ.

ಬೆಂಗಳೂರು
೨೪-೧೨-೧೯೪೨

ಬಿ. ವೆಂಕೋಬರಾವ್
ಕಾರ್ಯದರ್ಶಿ

### ಮಹಿಳಾ ಶಾಖೆಯ ವಾರ್ಷಿಕೋತ್ಸವದ ವರದಿ

೧೩-೧೨-೪೨ನೆಯ ಭಾನುವಾರ ಸಂಜೆ ಮಹಿಳಾ ಶಾಖೆಯ ವಾರ್ಷಿಕೋತ್ಸವ ಶ್ರೀ. ಟಿ. ಜಿ. ಪೊನ್ನಮ್ಮ ರಾಮಯ್ಯರ್ ಅವರ ಅಧ್ಯಕ್ಷತೆಯಲ್ಲಿ ನಡೆಯಿತು.

ಗಮಕ ವಿದುಷಿ ಶ್ರೀಮತಿ ಲಲಿತಮ್ಮನವರು 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' ಎಂಬ ಗೀತವನ್ನು ಹಾಡಿದ ಮೇಲೆ ಶ್ರೀಮತಿ ಪಂಕಜಮ್ಮ ವೆಂಕಟೇಶ ಅಯ್ಯಂಗಾರ್ ಅವರು ಎಲ್ಲರಿಗೂ ಸ್ವಾಗತವನ್ನು ನೀಡಿ, ಮಹಿಳಾ ಶಾಖೆ ಕನ್ನಡ ನಾಡಿನ ಹೆಣ್ಣುಮಕ್ಕಳ ಪ್ರತಿನಿಧಿಯಾಗಿ ನಾಡು ನುಡಿಯ ಉನ್ನತಿಗಾಗಿ ಕೆಲಸ ಮಾಡಿ ಸರ್ವಕಲಾ ವಿದ್ಯಾಪೀಠವಾಗುವ ಕಾಲ ಆದಷ್ಟು ಬೇಗನೆ ಬರಲೆಂದು ತಿಳಿಸಿ, ಸಭೆಯ ಕಾರ್ಯಕಲಾಪಗಳನ್ನು ನಡಸಿಕೊಡಬೇಕೆಂದು ಉತ್ಸವದ ಅಧ್ಯಕ್ಷರಿಗೆ ಬಿನ್ನೈಸಿಕೊಂಡರು.

ಮಾನ್ಯ ಅಧ್ಯಕ್ಷರ ಅಪ್ಪಣೆಯ ಪ್ರಕಾರ ವ್ಯವಸ್ಥಾಪಕರು ಈ ವರ್ಷದ ಮಹಿಳಾ ಶಾಖೆಯ ವರದಿಯನ್ನು ಸಭೆಯ ಮುಂದಿಟ್ಟರು. ಅನಂತರ ಶಾಖೆ ನಡಸಿದ ಮೇಲಾಟಗಳಲ್ಲಿ ಉತ್ತೀರ್ಣರಾದವರಿಗೆ ಬಹುಮಾನ ಹಂಚಲಾಯಿತು. ಸಂಗೀತ, ಕವಿತೆಗಳ ಕಂಠಪಾಠ, ನಾಟಕ ಇವು ಸಡಗರದಿಂದ ಜರುಗಿದವು. "ಒಂದು ಸಂಸ್ಥೆ ಅಭಿವೃದ್ಧಿಗೆ ಬರಬೇಕಾದರೆ ಜನಸಹಾಯ ಧನಸಹಾಯ ಅತ್ಯಗತ್ಯ. ಮುಂದಿನ ವರ್ಷ ಅನೇಕ ಮಹಿಳೆಯರು ಪರಿಷತ್ತಿನ ಸದಸ್ಯೆಯರಾಗಿ ತಮ್ಮ ಘನ ಸಹಕಾರವನ್ನು ಮಹಿಳಾ ಶಾಖೆಗೆ ಕೊಟ್ಟು ಈ ಶಾಖೆಯ ಧ್ಯೇಯಗಳು ಬೇಗ ಈಡೇರಲು ಅವರು ನೆರವಾಗಲಿ" ಎಂದು ಅಧ್ಯಕ್ಷರು ಹಾರೈಸಿದರು. ವಂದನಾರ್ಪಣೆ, ಮಂಗಳ ಆದ ತರುವಾಯ ಉತ್ಸವ ಮುಕ್ತಾಯವಾಯಿತು.

೬೬೩—೧೯೪೨ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧೨
ಬಿಡಿ ಪತ್ರಿಕೆ: ೬ ಕಾಸು



ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈ ಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ

ಬೆಂಗಳೂರು: ಶುಕ್ರವಾರ, ಜನವರಿ ೧, ೧೯೪೩

ಸಂಚಿಕೆ ೧೦

## ಪರಿಷತ್ತಿನ ಮುನ್ನಡೆ

೧

ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷಸ್ಥಾನದಲ್ಲಿ ನನ್ನನ್ನು ಕೂರಿಸಿ ನನ್ನ ಹಿರಿಯರೂ ಗೆಳೆಯರೂ ನನ್ನ ವಿಷಯದಲ್ಲಿ ವಿಶೇಷವಾದ ಅನುಗ್ರಹವನ್ನೂ ವಿಶ್ವಾಸವನ್ನೂ ತೋರಿಸಿದಾರೆ. ನಮ್ಮ ಪರಿಷತ್ತಿನ ಉಪಾಧ್ಯಕ್ಷಸ್ಥಾನ ಬಹು ಹಿರಿಯ ಪದವಿಯೆಂದು ನನ್ನ ತಿಳಿವಳಿಕೆ. ಅದು ನನಗೆ ದೊರೆತದ್ದು ನನಗೆ ಹೆಮ್ಮೆಯ ವಿಷಯ. ಇಂಥ ಸ್ಥಾನಕ್ಕೆ ತಕ್ಕಷ್ಟು ಯೋಗ್ಯತೆ ಯಾವ ಒಬ್ಬ ವ್ಯಕ್ತಿಯಲ್ಲಿ ಇರುವುದೂ ಸಾಧ್ಯವಲ್ಲ. ಅದು ನನ್ನಲ್ಲಿ ಇಲ್ಲವೆಂದು ನನ್ನ ಮನಸ್ಸಿಗೆ ಸ್ಪಷ್ಟವಾಗಿದೆ. ಈ ಕಾರಣದಿಂದ ನನಗೆ ಈಗ ಹೆಮ್ಮೆಯ ಜೊತೆಗೆ ಒಂದು ರೀತಿಯ ಸಂಕೋಚವೂ ಉಂಟಾಗಿದೆ. ಎಂದಿದ್ದರೂ ಸಹಜವಾಗಿ ಉಂಟಾಗಬಹುದಾಗಿದ್ದ ಈ ಸಂಕೋಚಕ್ಕೆ ಈಗ ಒಂದು ವಿಶೇಷ ಕಾರಣವಿದೆ. ಅದು ಈಗ ಒಂಬತ್ತು ವರ್ಷದಿಂದ ಈ ಸ್ಥಾನದಲ್ಲಿ ಇದ್ದು ಪರಿಷತ್ತಿನ ಹೆಸರಿನಲ್ಲಿ ಕನ್ನಡದ ನಾಡು ನುಡಿಗಾಗಿ ದುಡಿದ ಇಬ್ಬರು ಮಹನೀಯರ ಮತ್ತು ಉದಾರವಾದ ಹಿರಿದಾದ ಕಾರ್ಯಕ್ರಮ. ಶ್ರೀಮಾನ್ ದೇವನಹಳ್ಳಿ ವೆಂ. ಗುಂಡಪ್ಪನವರು ಪರಿಷತ್ತಿನ ಕಾರ್ಯಸೂತ್ರವನ್ನು ವಹಿಸಿದ್ದ ನಾಲ್ಕು ವರ್ಷದಲ್ಲಿ ಅದಕ್ಕೆ ಹೊಸತೊಂದು ಕಳೆಯನ್ನು ತಂದರು. ರಾಜಸೇವಾಸಕ್ತ ಶ್ರೀಮಾನ್ ಶ್ರೀಕಂಠಯ್ಯನವರು, ಅವರನಂತರ ಐದು ವರ್ಷ ದುಡಿದು ಪರಿಷತ್ತಿನ ಕಾರ್ಯವನ್ನು ವಿಸ್ತಾರಪಡಿಸಿದರು, ತೀವ್ರಗೊಳಿಸಿದರು. ಇವರ ಕೆಲಸವನ್ನು ನೋಡಿದ ನಾನು ಇವರಿಬ್ಬರನ್ನೂ ಅದರ ಸಲುವಾಗಿ ಬಹಳ ಗೌರವಿಸಿದೇನೆ. ಇವರೊಬ್ಬೊಬ್ಬರಿಗೂ ಇದ್ದ ಸಾಮರ್ಥ್ಯ ಸೌಕರ್ಯಗಳು ನನಗಿಲ್ಲವೆಂದೂ, ಅವರಿಗೆ ಇಲ್ಲದೆ ಇದ್ದ ಹಲ ಕೆಲವು ತೊಡರುಗಳು ನನಗಿರುವುವೆಂದೂ ಮನಗಂಡಿದೇನೆ. ಈ ಕಾರಣದಿಂದ "ಕಿಶೋರೀವ ಗುರುಂ ಭಾರಂ ನವೋಢುಂ ಅಹಂ ಉತ್ಸಹೇ" ಎಂದು ಈ ಸಂದರ್ಭದಲ್ಲಿ ಹೇಳುವಂತಾಗಿದೇನೆ. ಆದರೂ ಒಪ್ಪಿಕೊಂಡ ಕೆಲಸವನ್ನು ಮಾಡದೆ ಮುಂದಿಲ್ಲ. ಆದ್ದರಿಂದ ಬರುವ ವರ್ಷದಲ್ಲಿ ಪರಿಷತ್ತು ಕೈಕೊಳ್ಳಬಹುದಾದ ಕಾರ್ಯಕ್ರಮವನ್ನು ಕುರಿತು ಒಂದು ವಾರ ಯೋಚನೆ ಮಾಡಿ ನನಗೆ ತೋರಿರುವ ನಾಲ್ಕು ಮಾತನ್ನು ನಮ್ಮ ಜನರಿಗೆ ಈ ಮುಂದೆ ಒಪ್ಪಿಸಿದೇನೆ.

ನಮ್ಮ ಸಾಹಿತ್ಯ ಪರಿಷತ್ತು ಸ್ಥಾಪಿತವಾಗಿ ಈಗ ೨೭ ವರ್ಷಕ್ಕೆ ಸ್ವಲ್ಪ ಹೆಚ್ಚಾಗಿದೆ. ಕನ್ನಡದ ಸ್ಥಿತಿ ಇಂದಾದರೂ ಬಹಳವೇನೂ ತೃಪ್ತಿಕರವಾಗಿಲ್ಲ. ೧೯೧೫ರಲ್ಲಿ ಆದರ ಅವಸ್ಥೆ ಇನ್ನೂ ಕಷ್ಟವಾಗಿತ್ತು. ಆ ದುರವಸ್ಥೆಯ ತಿರುಳು ಎಂದರೆ ಕನ್ನಡಿಗರು ಬೇರೆ ಯಾವುದೋ ಭಾಷೆಗೆ ಮೊದಲಸ್ಥಾನವನ್ನು ಕೊಟ್ಟು ತಮ್ಮ ತಾಯ್ನುಡಿಗೆ ಎರಡನೆಯ ಅಥವಾ ಅದರಾಚೆಯ ಸ್ಥಾನವನ್ನು ಕೊಡುತ್ತಿದ್ದದ್ದು. ಕನ್ನಡ ದೇಶದಲ್ಲಿ ಕನ್ನಡಕ್ಕಲ್ಲದೆ ಬೇರೆ ಯಾವದೊಂದು ಭಾಷೆಗೆ ಮೊದಲನೆಯ ಸ್ಥಾನ ಇರಬೇಕೆಂದು ಹೇಳುವವರು ಈಗಲೂ ಇದಾರೆ. ಆದರೆ ಇವರ ಸಂಖ್ಯೆ ಕಡಮೆಯಾಗಿದೆ. ೧೯೧೫ರಲ್ಲಿ ಕನ್ನಡಕ್ಕೆ ಮೊದಲಸ್ಥಾನವನ್ನು ನಿರ್ದೇಶಿಸುವ ಧೀರರೇ ಇರಲಿಲ್ಲವೆನ್ನಬಹುದು. ಪರಿಷತ್ತಿನ ಮೂಲಕ ಕನ್ನಡಕ್ಕೆ ಸೇವೆ ಸಲ್ಲಿಸಿದ ಮಹನೀಯರನೇಕರು ನಮ್ಮ ತಾಯ್ನುಡಿಗೆ ತಾವೇ ಎಣಿಸದೆ ಇದ್ದ ಒಂದು ಸ್ಥಾನವನ್ನು ಗಳಿಸಿದರು. ಅವರ ಸೇವೆಯ ಫಲವಾಗಿ ಇಂದು ನಮ್ಮಲ್ಲಿ ಅನೇಕರು ಒಂದು ಮಾತನ್ನು ಒಪ್ಪುತ್ತೇವೆ: ಕನ್ನಡದ ಜನ ಉದ್ಧಾರವಾಗುವುದು ಕನ್ನಡದ ಮೂಲಕವೇ. ಉಳಿದ ಭಾಷೆಗಳು ನಮಗೆ ಬೇಕು; ಎಲ್ಲ ಕಡೆಯಿಂದಲೂ ನಮಗೆ ಭಾವ, ಜ್ಞಾನ, ಸ್ಫೂರ್ತಿ ಬರಬೇಕಾಗಿದೆ. ಆದರೆ ಯಾವ ಕಡೆಯಿಂದ ಅವು ಬಂದರೂ ಬರತಕ್ಕದ್ದು ಕನ್ನಡಕ್ಕೆ, ಕನ್ನಡದ ಜನಕ್ಕೆ. ಕನ್ನಡ ನಾಡಿನ, ಕನ್ನಡ ಜನತೆಯ ಬಾಳುವೆಗೆ ಅವು ಪೋಷಕವಾಗಿ ಬರಬೇಕು; ಕನ್ನಡದ ಕನ್ನಡತನವನ್ನು ಕಳೆಯುವುದಕ್ಕಲ್ಲ; ಆ ತನದ ಎಡೆಯಲ್ಲಿ ಬೇರೊಂದು ತನವನ್ನು ಇರಿಸುವುದಕ್ಕಲ್ಲ.

ಕನ್ನಡದ ಕನ್ನಡತನ ಉಳಿಯುವುದಕ್ಕೆ, ಬೆಳೆಯುವುದಕ್ಕೆ ಕನ್ನಡಿಗರು ಮೊದಲು ಸಾಧಿಸಬೇಕಾಗಿರುವುದು ಕನ್ನಡ ಜನತೆಯ ಏಕೀಕರಣ. ಕರ್ನಾಟಕದ ಇತಿಹಾಸದಲ್ಲಿ ಬೆರೆತು ಬಂದಿರುವ ಒಂದು ದುರ್ದೈವದ ಎಳೆಯಿಂದ ಕನ್ನಡ ನಾಡು ಹತ್ತಾರು ಭಾಗವಾಗಿ ಹತ್ತಾರು ಆಡಳಿತದಲ್ಲಿ ಸಿಕ್ಕಿ ಕನ್ನಡದ ಜನ ಒಂದು ಸಮೂಹವಾಗಿ ಕೆಲಸ ಮಾಡುವುದು ನಮ್ಮ ಪಾಲಿಗೆ ಇಲ್ಲವಾಯಿತು. ಈ ಕೊರತೆಯನ್ನು ನಿವಾರಿಸಬೇಕೆಂದೇ ಈಗ ಮೂವತ್ತು ವರ್ಷದ ಹಿಂದೆ ನಮ್ಮ ಹಿರಿಯರು ನಮ್ಮ ಈ ಪರಿಷತ್ತನ್ನು ಸ್ಥಾಪಿಸಿದರು. ಕನ್ನಡದ ಜನತೆಗೆ ಇಂಥ ಒಂದು ಸಂಘಟಕ ಸಂಸ್ಥೆ ಬೇಕೆಂದು ಆಗ ಗ್ರಹಿಸಿದವರಲ್ಲಿ ಮೈಸೂರಿನವರಿಗಿಂತ ಕನ್ನಡದ ಉಳಿದ ಪ್ರಾಂತಗಳ ಮಂದಿ ಮುಂದಿದ್ದರು. ಮೈಸೂರಿನ ಸ್ಥಿತಿಯಲ್ಲಿ ಕನ್ನಡದ ಕೊರೆ ಅದರ ಮಕ್ಕಳಿಗೆ ಅಷ್ಟಾಗಿ ತಿಳಿಯುತ್ತಿರಲಿಲ್ಲ. ಹೊರವಳಯದ ನಾಡಿನಲ್ಲಿ ಇದು ಬಹು ಕ್ರೂರವಾಗಿ ಅನುಭವಕ್ಕೆ ಬರುತ್ತಿತ್ತು. ಕರ್ನಾಟಕದ ಕುಲಪುರೋಹಿತರೆಂದು ತಕ್ಕ ಹೆಸರನ್ನು ಪಡೆದಿರುವ ಶ್ರೀ. ಆಲೂರ ವೆಂಕಟರಾಯರು, ಕನ್ನಡ ನಾಡ ಏಕೀಕರಣಕ್ಕಾಗಿ ಕಂಕಣ ಕಟ್ಟಿಕೊಂಡ ಶ್ರೀ. ಬೆನಗಲ್ ರಾಮರಾಯರು, ಆ ತಲೆಮಾರಿನ ಇಂಥ ಹಿರಿಯರ ಪ್ರತಿನಿಧಿಗಳಾಗಿ ದೇವರ ಕೃಪೆಯಿಂದ ಈಗಲೂ ನಮ್ಮೊಡನೆ ಇರುತ್ತ ಕನ್ನಡದ ಸೇವೆಯಲ್ಲಿ ತೊಡಗಿರುವ ಕಿರಿಯರನ್ನು ಹರಸಿಕೊಂಡಿದಾರೆ. ಪರಿಷತ್ತು ಒಂದು ಸಂಸ್ಥೆಯಾಗಿ ಭದ್ರವಾಗಿ ನಿಲ್ಲುವುದಕ್ಕೆ ಸುಮಾರು ಹದಿನೆಂಟು ವರ್ಷ ಹಿಡಿಯಿತು. ಹತ್ತಾರು ಕಡೆ ನಡೆದ ಸಮ್ಮೇಳನಗಳಿಂದ ಪ್ರಾಂತಪ್ರಾಂತಗಳ ಜನರು ಒಂದು ಕಡೆ ನೆರೆದು ಪರಸ್ಪರ ಭೇದಗಳನ್ನು ಮರೆಯುವುದನ್ನು, ತಾವು ಒಂದು ನಾಡ ಮಕ್ಕಳೆಂಬುದನ್ನು ಉಪಾಸಿಸುವುದನ್ನು, ಕಲಿತರು. ಪರಿಷತ್ತಿನ ಮೂಲಸ್ವರೂಪದ ಈ ಮುಖ್ಯಲಕ್ಷಣವನ್ನು ನಮ್ಮ ಜನರೆಲ್ಲ ಸದಾ ನೆನಪಿನಲ್ಲಿ ಇಡಬೇಕು. ಕನ್ನಡದ ಜನತೆಗೆ ಒಂದುಕೂಡುವ ಕೇಂದ್ರ ಸಂಸ್ಥೆಯಾಗಿ ಈಗ ಕನ್ನಡನಾಡಿನಲ್ಲಿ ಇರತಕ್ಕದ್ದು ನಮ್ಮ ಪರಿಷತ್ತು ಒಂದೇ. ಎಲ್ಲ ಪ್ರಾಂತಗಳ ಜನರೂ ಇದರ ಸ್ಥಾಪನೆಗೆ ನಡುಕಟ್ಟಿ ನಿಂತರು; ಎಲ್ಲ ಪ್ರಾಂತದವರೂ ಇದನ್ನು ಬೆಳಸಿದರು. ಮುಂದಕ್ಕಾದರೂ ಎಲ್ಲ ಪ್ರಾಂತದವರೂ ಈ ಸಂಸ್ಥೆಗಾಗಿ ಕೆಲಸಮಾಡಿ ತಮ್ಮದಾದ ಕನ್ನಡ ನಾಡಿನ ಒಂದೇ ಆದ ಮೂರ್ತರೂಪವನ್ನು ಬೆಳಗಿಸಬೇಕು.

ಮಾಸ್ತಿ ವೆಂ. ಅ.

# ಕನ್ನಡ ನುಡಿ

**ಶುಕ್ರವಾರ, ಜನವರಿ ೧, ೧೯೪೩**

## ಭಾರತೀಯ ಇತಿಹಾಸದ ಆಧಾರ ಲೇಖಗಳ ಸಭೆ

ಭಾರತೀಯ ಇತಿಹಾಸದ ಆಧಾರ ಲೇಖಗಳ ಸಂಸ್ಥೆಯ (ಇಂಡಿಯನ್ ಹಿಸ್ಟಾರಿಕಲ್ ರೆಕಾರ್ಡ್ಸ್ ಕಮಿಷನ್) ಹತ್ತೊಂಬತ್ತನೆಯ ವಾರ್ಷಿಕಾಧಿವೇಶನ ತಿರುವಾಂಕೂರು ಸಂಸ್ಥಾನದ ರಾಜಧಾನಿಯಾದ ತಿರುವನಂತಪುರದಲ್ಲಿ ೨೮-೧೨-೧೯೪೨ನೆಯ ಸೋಮವಾರ ಪ್ರಾರಂಭವಾಯಿತು. ಅಧಿವೇಶನದ ಅಧ್ಯಕ್ಷರಾಗಿ ಇಂಡಿಯಾ ಸರಕಾರದ ಶಿಕ್ಷಣ ಮಂತ್ರಿಗಳಾದ ಸರ್ ಜೋಗೇಂದ್ರಸಿಂಗ್ ಅವರು ವಿಚಾರಪೂರ್ಣವಾದ ಭಾಷಣ ಮಾಡಿದರು. ತಿರುವಾಂಕೂರು ಮಹಾರಾಜರವರು ಅಧಿವೇಶನವನ್ನು ಸಮಾರಂಭಗೊಳಿಸಿಕೊಟ್ಟು ಈ ವರ್ಷ ತಿರುವಾಂಕೂರಿನಲ್ಲಿ ಅಧಿವೇಶನ ಸೇರಿದ್ದಕ್ಕಾಗಿ ಸಂತೋಷಿಸಿ ಸ್ವಾಗತ ನೀಡಿ, ಸಂಸ್ಥೆ ಇಪ್ಪತ್ತಮೂರು ವರ್ಷಗಳಿಂದ ಸಾಧಿಸಿರುವ ಕಾರ್ಯವನ್ನು ಪ್ರಶಂಸಿಸಿದರು. ಅವರ ಭಾಷಣದಿಂದ ಒಂದೆರಡು ವಾಕ್ಯಗಳನ್ನಿಲ್ಲಿ ಕನ್ನಡಿಸಿಕೊಟ್ಟಿದೆ.

"ಇತಿಹಾಸವೆಂದರೆ, – ವಿಶಾಲವಾದ ಅರ್ಥದಲ್ಲಿ – ಐತಿಹಾಸಿಕವೆಂದು ನಿರ್ದೇಶಿಸಬಹುದಾದ ಮನಸ್ಸಿನ ನಿಸ್ಪೃಷ್ಟವಾದ ಭಾವವೊಂದನ್ನು ಮೂಡಿಸಬಲ್ಲ ಹಿಂದೆ ನಡೆದ ಹಾಗೂ ಈಚೆಗೆ ರೂಪುಗೊಳ್ಳುತ್ತಿರುವ ಘಟನೆಗಳ ಸರಣಿ. ಇತಿಹಾಸ ದೃಷ್ಟಿ ಮಾನವನ ಪ್ರತಿಯೊಂದು ಚಟುವಟಿಕೆಯ ಅಥವಾ ಆಲೋಚನೆಯ ರಂಗವನ್ನೂ ಮುತ್ತಿದೆ. ಸ್ಮಾರಕಗಳು, ಶಾಸನಗಳು, ನಾಣ್ಯಗಳು, ಸನ್ನದುಗಳು ಮುಂತಾದ ಪ್ರಾಚೀನ ಅವಶೇಷಗಳು – ಅವು ರಾಷ್ಟ್ರದ್ದಾಗಲಿ ಪ್ರಜೆಯ ಸ್ವಂತದ್ದಾಗಲಿ, ಧಾರ್ಮಿಕವಾಗಲಿ ಲೌಕಿಕವಾಗಲಿ – ಇತಿಹಾಸಕ್ಕೆ ಆಧಾರಗಳನ್ನು ಒದಗಿಸಿ, ಯುಗಾಂತರ ತಲಾಂತರಗಳ ಮೂಲಕ ಮಾನವ ಇತಿಹಾಸ ಹಾದು ಬಂದ ಪರಿಯನ್ನು ಎಳೆ ಎಳೆಯಾಗಿ ಸೇರಿಸಿ ಕಟ್ಟಲು ಅವಕಾಶ ಮಾಡಿಕೊಡುವುವು. 'ಪ್ರಪಂಚಕ್ಕೆ ತನ್ನ ಮಹಾಪುರುಷರನ್ನು ಕುರಿತ ತಿಳಿವಳಿಕೆ ಸಾಲದು; ಚರಿತ್ರೆಯೆಂದರೆ, – ಅದರ ಆದರ್ಶ ಪರಿಪೂರ್ಣತೆಯಲ್ಲಿ – ಕವಿತೆ ದರ್ಶನಗಳ ಮಿಶ್ರಣ' ಎಂಬ ಲೋಕೋಕ್ತಿಯನ್ನು ಕೇಳುತ್ತಿದ್ದೇವೆಯಷ್ಟೆ. ಇಂಥ ಉಕ್ತಿಗಳಲ್ಲಿ ಸ್ವಲ್ಪಮಟ್ಟಿನ ಸತ್ಯಾಂಶವಿದೆ, ವಿನೋದಾಂಶವೂ ಇದೆ. ನಾವು ಇತಿಹಾಸವನ್ನು ಇನ್ನೂ ಮರಳಿ ಮರಳಿ ಪರೀಕ್ಷಿಸಬೇಕಾಗಿದೆ; ಕಾಣದಿದ್ದುದನ್ನು ಕಂಡುಕೊಂಡು ಹೊಸತನ್ನು ಕಟ್ಟಬೇಕಾಗಿದೆ; ಆದ್ದರಿಂದ ಅಂಥ ಉಕ್ತಿಗಳು ಕೇಳಬರುತ್ತಲೇ ಇರುತ್ತವೆ.

ಇಂಥ ಉಕ್ತಿಗಳನ್ನು ಕಳೆಯಲೆಂದೇ ಈ ಆಧಾರ ಲೇಖಗಳ ಸಂಸ್ಥೆ ಹುಟ್ಟಿ, ೨೩ ವರ್ಷಗಳಿಂದ ದುಡಿಯುತ್ತ ಅನುಭವ ಪಡೆಯುತ್ತಿದೆ. ಈಚೆಗೆ ಅದು ತನ್ನ ಕಾರ್ಯಕಲಾಪಗಳನ್ನು ವಿಸ್ತರಿಸಿ ಸಂಶೋಧನೆಗೂ, ಪ್ರಕಟನೆಗೂ ಉಪಸಮಿತಿಯನ್ನು ಸ್ಥಾಪಿಸಿದ್ದು ಉಚಿತವಾಗಿಯೆ ಇದೆ. ಇತಿಹಾಸದ ಆಧಾರ ಲೇಖಗಳ ಕೇಂದ್ರ ಇಲಾಖೆಯೊಂದು ಸ್ಥಾಪಿತವಾಗಿ, ಅದಕ್ಕೆ ನೆರವಾಗಿ ಭಾರತದ ಪ್ರಾಂತ ಸಂಸ್ಥಾನಗಳು, ನಾಡಿನ ಬೇರೆ ಬೇರೆ ವಿಶ್ವವಿದ್ಯಾನಿಲಯಗಳು, ಜ್ಞಾನ ಪರಿಷತ್ತು, ಪಂಡಿತ ಮಂಡಲಗಳು ಪಾತ್ರವಹಿಸಬೇಕೆಂಬ ಸಲಹೆ ಕೊಟ್ಟಿರುವುದು ಸೂಕ್ತವಾಗಿಯೆ ಇದೆ" ಮುಂತಾಗಿ ಅಪ್ಪಣೆ ಕೊಡಿಸಿ, ಭರತಖಂಡದ ಐಕ್ಯತೆಯ ಗುರಿಯೂ ಕಳೆದ ಇನ್ನೂರು ವರ್ಷಗಳ ಇತಿಹಾಸದ ಹಾಗೂ ರಾಜಕೀಯದ ಬೇರೆ ಬೇರೆ ಮಜಲುಗಳಲ್ಲಿ ಈ ಐಕ್ಯತೆಯನ್ನು ತರಲು ಪ್ರಯತ್ನ ನಡೆದ ಪರಿಯೂ ಇತಿಹಾಸ ಪಂಡಿತರ ಇಂಥ ಸಂಸ್ಥೆಯ ಮುಂದಿರುವ ಕಾರ್ಯಭಾಗವನ್ನು ಸಮರ್ಥಿಸುತ್ತವೆ. ಈ ದೊಡ್ಡ ಕರ್ತವ್ಯಕ್ಕೆ ನಮ್ಮ ದೇಶದಲ್ಲಿ ಎಲ್ಲಾ ಸರಕಾರಗಳೂ ವಿಶ್ವವಿದ್ಯಾನಿಲಯಗಳೂ ಸಹಾಯ ಮಾಡಲಿ ಎಂದು ಕೋರಿ, ಇತಿಹಾಸ ರಂಗದ ಯಾವ ಕತ್ತಲೆಯ ಮೂಲೆಯನ್ನೂ ಬಿಡದೆ ಬೆಳಗುವ ಸಾಮರ್ಥ್ಯ ಈ ಸಂಸ್ಥೆಗೆ ಬರಲಿ ಎಂದು ಹಾರೈಸಿದರು.

ಅಧಿವೇಶನದ ಅಧ್ಯಕ್ಷ ಪೀಠದಿಂದ ಸರ್ ಜೋಗೇಂದ್ರಸಿಂಗ್ ಅವರು ಮಾತನಾಡುತ್ತ –

"ಪಾರ್ಲಿಮೆಂಟುಗಳೂ ಪ್ರಜಾಪ್ರತಿನಿಧಿ ಸಭೆಗಳೂ ಪ್ರಜಾಪ್ರಭುತ್ವ ಪದ್ಧತಿಯನ್ನು ಬಲಗೊಳಿಸಲು ಯತ್ನಿಸುತ್ತಿರುವ ಈ ಕಾಲದಲ್ಲಿಯೂ ಹಿಂದಿನ ಕಾಲದಿಂದ ಆದರ್ಶವಾಗಿ ಬಂದಿರುವ 'ಧರ್ಮರಾಜ್ಯ' ಕಲ್ಪನೆ ಅದೇ ಅರ್ಥಸಂಕೇತದಲ್ಲಿ ಇಂದಿಗೂ ನಮ್ಮ ಮುಂದಿದೆ. ಭೌತಶಕ್ತಿಗಿಂತ ಆತ್ಮಶಕ್ತಿ ಹೆಚ್ಚೆಂಬುದಾಗಿ ಇಂದಿಗೂ ವಿವೇಕಿಗಳೆಲ್ಲ ನಂಬಿಕೊಂಡಿದ್ದಾರೆ.

"ಭಾರತೀಯ ಇತಿಹಾಸ ಆಧಾರ ಲೇಖಗಳ ಸಂಸ್ಥೆಯ ಕೆಲಸವನ್ನು ಇಲ್ಲಿ ನಾನು ವಿವರವಾಗಿ ತಿಳಿಸಬೇಕಾಗಿಲ್ಲ. ಮಹಾ ರಾಜಕೀಯ ಚಳವಳಿಗಳ ಸ್ವರೂಪ ಸಾಧನೆಗಳು, ಸಾಮ್ರಾಜ್ಯಗಳ ರಚನೆ ವಿನಾಶಗಳು, ಮಾನವನ ಸುಕೃತಿ ದುಷ್ಕೃತಿಗಳು ಮುಂತಾದ ಅಮೂಲ್ಯವಾದ ಇತಿಹಾಸಾಧಾರಗಳನ್ನು ಕಾಲಪುರುಷನು ತನ್ನ ಅನಂತ ಯಾತ್ರೆಯಲ್ಲಿ ಸಂಗ್ರಹಿಸುತ್ತಾನೆ. ನಾವು ಅವನ್ನು ಹುಡುಕಿ ಕಾಪಾಡಿ ಮುಂದಿನ ತಲೆಮೊರೆಗಳಿಗಾಗಿ ಇತಿಹಾಸವನ್ನು ಕಟ್ಟಬೇಕಾದ್ದು ನಮ್ಮ ಮುಂದಿರುವ ದೊಡ್ಡ ಕೆಲಸ. ನಾವಾದರೂ ನಮ್ಮ ಮುಂದೆ ಬರುವವರ ಶೋಧನೆ ಅಧ್ಯಯನಕ್ಕಾಗಿ ಯಾವ ಮಹತ್ಕಾರ್ಯವನ್ನು ಮಾಡಿ ತಕ್ಕ ಆದರ್ಶಗಳನ್ನು ಬಿಟ್ಟು ಹೋಗುತ್ತಿದ್ದೇವೆ?" ಎಂದು ಮುಂತಾಗಿ ಹೇಳಿ, ಭಾರತದ ನರೇಂದ್ರ ವರ್ಗದವರು ನಾಡಿನ ಒಕ್ಕಟ್ಟನ್ನು ಉಳಿಸಿ ಬೆಳಸುವುದಕ್ಕೆ ನೆರವಾಗಬೇಕೆಂದು ಪ್ರಾರ್ಥಿಸಿದರು. ಇಂದಿನ ರಾಜಕೀಯ ಅನಿಶ್ಚಿತತೆಯನ್ನು ಪ್ರಸ್ತಾವಿಸಿ, ನರೇಂದ್ರರು ಪ್ರಜಾವರ್ಗದೊಂದಿಗೆ ಸಹವರ್ತಿಸಿ, ನಾಡಿನ ಏಳಿಗೆಯ ದೃಷ್ಟಿಯಿಂದ ಈಗ ಧೈರ್ಯಮಾಡಿ ಸಂಯುಕ್ತ ರಾಜ್ಯಾಂಗ ವ್ಯವಸ್ಥೆಯೊಂದನ್ನು ಕಾರ್ಯ ರೂಪಕ್ಕೆ ತಂದರೆ, ಭಾರತದ ಮುಂದಿನ ಮಂಗಳಕ್ಕೆ ಇಂದೇ ಬೀಜವಾಪನ ಮಾಡಿದಂತಾಗುವುದು ಎಂದು ನುಡಿದರು.

ನಮ್ಮ ನೆರೆ ಸಂಸ್ಥಾನವಾದ ತಿರುವಾಂಕೂರಿನಲ್ಲಿ ಈ ಬಾರಿಯ ಅಧಿವೇಶನ ನಡೆದುದಕ್ಕಾಗಿ ನಮಗೆ ಸಂತೋಷ. ಕಳೆದ ಅಧಿವೇಶನ ಮೈಸೂರು ಪಟ್ಟಣದಲ್ಲಿ ನಡೆದು, ಅಲ್ಲಿ ನೆರೆದಿದ್ದ ಇತಿಹಾಸ ಪಂಡಿತರೆದುರು ಕನ್ನಡ ನಾಡಿನ ಇತಿಹಾಸದ ದೊಡ್ಡ ಪ್ರಪಂಚ ತೆರೆಯಿತು. ಈಗ ಕೇರಳದ ಇತಿಹಾಸ. ಮದರಾಸಿನಲ್ಲಿ ಹಿಂದೊಮ್ಮೆ ಅಧಿವೇಶನ ನಡೆದು ತಮಿಳು ತೆಲುಗು ಭಾಗಗಳ ಇತಿಹಾಸದ ಕ್ಷೇತ್ರವೂ ಪರಿಚಯವಾಗಿದೆ.

ಭಾರತದ ಇತಿಹಾಸ ಆಧಾರ ಲೇಖಗಳ ಸಂಸ್ಥೆಯ ಮುಂದೆ ಒಟ್ಟು ನಾಡಿನ ನಿಜವಾದ ಇತಿಹಾಸವನ್ನು ಗುರುತಿಸಿಕೊಳ್ಳುವ ಬಹು ದೊಡ್ಡ ಕೆಲಸ ಇದೆ. ತಿರುವಾಂಕೂರು ಮಹಾರಾಜರವರು ಅಪ್ಪಣೆ ಕೊಡಿಸಿದಂತೆ ಇಂಡಿಯಾ ಸರಕಾರದ ನೇತೃತ್ವದಲ್ಲಿ ಒಂದು ಕೇಂದ್ರ ಸಮಿತಿ ಏರ್ಪಟ್ಟು ಅದರ ಕೆಲಸ ಭಾರತದ ಎಲ್ಲ ಪ್ರಾಂತ ಸಂಸ್ಥಾನಗಳಲ್ಲೂ ಹರಡಿ, ಒಟ್ಟು ಭರತ ಖಂಡದ ಹಿರಿಯ ಇತಿಹಾಸದ ಎಲ್ಲ ವಿವರಗಳೂ ಸಿಕ್ಕಿ ಎಳೆಗಳೆಲ್ಲಾ ಕೂಡಿಕೊಳ್ಳಲಿ ಎಂದು ಹಾರೈಸುತ್ತೇವೆ.

# ಉರ್ದು ಮುಷಾಯಿರ

ಕೆಲವು ದಿನಗಳ ಹಿಂದೆ, ಎಂದರೆ ನವೆಂಬರ್ ಕಡೆಯ ವಾರದಲ್ಲಿ ನಡೆದ ಉರ್ದು ಮುಷಾಯಿರ, ಬಹಳ ದೊಡ್ಡ ಸಮ್ಮೇಳನ. ಹಿಂದೂಸ್ಥಾನದ ಅನೇಕ ಭಾಗಗಳಿಂದ ಬರಹಗಾರರು ಬಂದಿದ್ದರು. ಇಲ್ಲಿ ಮುಷಾಯಿರದ ವಿಚಾರದಲ್ಲಿ ಒಂದು ಲೇಖನವನ್ನು ಬರೆದಿದೆ ಎಂದು ಹೇಳುವುದಕ್ಕಿಂತ ಸುಮ್ಮನೆ ಹಾಗೇ ಒಮ್ಮೆ ಮುಷಾಯಿರಾಕ್ಕೆ ಹೋಗಿದ್ದ ಕನ್ನಡಿಗನೊಬ್ಬನ ಹರಟೆಯನ್ನು ಕೊಟ್ಟಿದೆ ಎನ್ನುವುದು ಸಮಂಜಸ.

ಉರ್ದು ಭಾಷೆ ನಮಗೆ ಹತ್ತಿರದ್ದೊ ದೂರದ್ದೊ ಅದರ ಚರ್ಚೆಗೆ ನಾನು ಹೋಗುವುದಿಲ್ಲ. ಯಾವ ಭಾಷೆಯಲ್ಲಿ ಸರ್ ಮಹಮದ್ ಇಕ್ಬಾಲ್ ಅವರು

ಸಾರೇ ಜಹಾಂ ಸೇ ಅಚ್ಛಾ ಹಿಂದೂಸ್ತಾನ್ ಹಮಾರಾ
ಹಂ ಬುಲ್ಬುಲೇಂ ಹೈಂ ಇಸ್ಕೀ, ಯೇ ಗುಲಿಸ್ತಾನ್ ಹಮಾರಾ

ಎಂದು ಹಾಡಿದ್ದಾರೊ ಅದು ಉರ್ದು.

ಬೆಂಗಳೂರಿನ ಉರ್ದು ಮುಷಾಯಿರ ಮೂರು ದಿನ ನಡೆಯಿತು. ಒಂದು ದಿನ ರಾತ್ರಿ ಹನ್ನೊಂದು ಗಂಟೆಯಿಂದ ಬೆಳಗಿನ ಜಾವ ಮೂರೂವರೆ ಗಂಟೆಯ ವರೆಗೆ ನಡೆಯಿತೆಂದ ಮೇಲೆ, ಜನರು ಇದರಲ್ಲಿ ಎಷ್ಟು ಆಸಕ್ತಿ ವಹಿಸಿದ್ದರೆಂಬುದನ್ನು ಊಹಿಸಬಹುದು. ಹನ್ನೊಂದು ಗಂಟೆಗೆ ಪ್ರಾರಂಭವಾದ ಮುಷಾಯಿರಕ್ಕೆ ಎಂಟು ಗಂಟೆಯಿಂದಲೆ ಜನರು ಹೋಗಿ ತುಂಬಿದ್ದರು. ಸಮ್ಮೇಳನ ಸೇರಿದ್ದ ಪುರಭವನದಲ್ಲಿ ಎಲ್ಲಾ ಅಂತಸ್ತುಗಳೂ ಕಿಕ್ಕಿರಿದು, ಎಷ್ಟೋ ಮಂದಿ ನಿಂತಿರಬೇಕಾಗಿ ಬಂದಿತು. ಕಿಟಕಿಗಳಲ್ಲಿಯೂ ಜನರು ಸೇರಿದ್ದರು. ನೋಡುವವರಿಗೆ ಕವಿಗಳ ಪ್ರಯತ್ನ ಉರ್ದು ಭಾಷೆಯನ್ನು ಬೆಳಸಲು ಎಷ್ಟು ಸಹಕಾರಿಯಾಗಿತ್ತೊ ಸಾಮಾಜಿಕ ಉತ್ಸಾಹವೂ ಅಷ್ಟೇಮಟ್ಟಿಗೆ ಕಾರಣ, ಸಂದೇಹವಿಲ್ಲ ಎನಿಸುತ್ತಿತ್ತು.

ಬಹುಶಃ ಸೈಯದ್ ಅಖ್ತಾರ್ ಬೇಗಂ ಅವರ ಹೆಸರನ್ನು ಎತ್ತದೆ ಈ ಮುಷಾಯಿರದ ವಿಚಾರವನ್ನು ಹೇಳುವುದಕ್ಕೇ ಆಗದು. ಅವರ ಪ್ರಯತ್ನದಿಂದಲೆ ಇಷ್ಟು ದೊಡ್ಡ ಮುಷಾಯಿರ ಸೇರಿದ್ದು ಎನ್ನುತಾರೆ. ಅಧ್ಯಕ್ಷ ಪೀಠದಿಂದ ಅವರ ವಾಣಿ ಮಧುರವಾಗಿ ಕೇಳಿಸುತ್ತಿತ್ತು, ಅವರ ಮಾತಿನಲ್ಲಿ ಬಿಗಿ ಇತ್ತು, ಕಾರ್ಯಕ್ರಮವನ್ನು ತೂಗಿಸುವ ಚಾತುರ್ಯ ಅವರಲ್ಲಿ ಇತ್ತು ಎನ್ನುವುದು ತಿಳಿಯುತ್ತಿತ್ತು. ಕವಿತಾ ಸ್ಫೂರ್ತಿಯೂ ಅವರಲ್ಲಿ ಇತ್ತೆಂಬುದು ಗೊತ್ತಾಗುತ್ತಿತ್ತು.

ಕವಿಗಳ ಮತ್ತು ಕವಿತೆಗಳ ವಿಚಾರ ಹೇಳುವುದಕ್ಕೆ ಸಮ್ಮೇಳನದ ಪುಸ್ತಕ ದೊರೆತಿಲ್ಲ. ನನ್ನ ಉರ್ದು ಸ್ನೇಹಿತರು ಸಾಧಾರಣವಾಗಿ ಒಂದು ಮುಷಾಯಿರ ಆದರೆ ಅಲ್ಲಿ ಹೇಳಿದ ಕವಿತೆಗಳನ್ನೆಲ್ಲಾ ಸೇರಿಸಿ ಒಂದು 'ಗುಲ್‌ದಸ್ತ' ಅಚ್ಚು ಹಾಕಿಸುವುದುಂಟು ಎಂದು ತಿಳಿಸುತ್ತಾರೆ. 'ಗುಲ್‌ದಸ್ತ' ಎಂದರೆ ಹೂಗಳ ಗೊಂಚಲು. ಕವಿತೆಗಳೇ ಹೂಗಳು, ಪುಸ್ತಕವೇ ಅವುಗಳ ಗೊಂಚಲು.

ಮುಷಾಯಿರದ ಹಾಡುಗಾರಿಕೆಗಳನ್ನು ಕೇಳುತ್ತ ಕೇಳುತ್ತ ಮನಸ್ಸಿಗೆ ತಟ್ಟಿದ ಒಂದು ವಿಷಯವನ್ನು ಹೇಳಿಬಿಡಬೇಕೆನಿಸುತ್ತದೆ. ಅದನ್ನು ಕನ್ನಡಿಗನ ಹೆಮ್ಮೆಯೆಂದಾದರೂ ಕರೆದುಕೊಳ್ಳಬಹುದು, ಕನ್ನಡಿಗನ ಕೊರಗು ಎಂದಾದರೂ ಕರೆದುಕೊಳ್ಳಬಹುದು. ಕನ್ನಡ ಕವಿತೆಯ ಮಟ್ಟ ಉರ್ದು ಕವಿತೆಯ ಮಟ್ಟಕ್ಕಿಂತ ಏನೂ ಕಡಮೆಯಿಲ್ಲ, ಹತ್ತಾರು ಕನ್ನಡ ಬರಹಗಾರರ ಕವಿತಾ ವಾಚನವನ್ನು ಒಂದು ಕಡೆ ಹೀಗೆ ಏರ್ಪಡಿಸಿದರೆ ಓದುಗಾರಿಕೆಯು ಸ್ಫೂರ್ತಿಯಲ್ಲಿಯೇ ಆಗಲಿ, ವೈವಿಧ್ಯದಲ್ಲಿಯೇ ಆಗಲಿ ಏನೂ ಕಡಮೆಯಿರದು, ಇದ್ದರೆ ಇನ್ನೂ ಮೇಲಾಗಿಯೇ ಇರಬಹುದು ಎನಿಸುತ್ತಿತ್ತು. ಇನ್ನೊಂದು ಕಡೆ ಓದುವವರ ಮತ್ತು ಕೇಳುವವರ ಸಮ್ಮೇಳನದಿಂದ ಉರ್ದುವಿಗೆ ಕಟ್ಟಿದ ಕಳೆ ಕನ್ನಡಕ್ಕೆ ಎಂದಾದರೂ ಕಟ್ಟೀತೇ ಎನ್ನಿಸುತ್ತಿತ್ತು.

ಕವಿಗಳು ತಮ್ಮ ಹೆಸರನ್ನು ಕರೆದ ಕೂಡಲೆ ಬಂದು ಓದುವುದಕ್ಕೆಂದು ಮುಂದೆ ಹಾಕಿದ್ದ ಕುರ್ಚಿಯ ಮೇಲೆ ಕುಳಿತು ಸಾವಕಾಶವಾಗಿ ತಮ್ಮ ಕವಿತೆಯನ್ನು ಆರಂಭಿಸುತ್ತಿದ್ದರು. ಕೆಲವರು ನಿಂತುಕೊಂಡೂ ಹೇಳುತ್ತಿದ್ದರು. ಇವರ ಸುತ್ತಲೂ ನೆರೆದಿದ್ದ ಕೆಲವು ಮಂದಿ ಸ್ವಾರಸ್ಯವಾದ ಕೆಲವು ಸಾಲುಗಳನ್ನು ಆಗಾಗ ಬಿಡಿಸಿ ಹೇಳುತ್ತಿದ್ದರು. ಮಗ್ಗುಲಲ್ಲಿದ್ದವರು ತಮ್ಮ ಹೆಸರಿಗೆ ಮನ್ನಣೆಯನ್ನು ತೋರಿದರೆಂದರೆ ಕವಿಗಳು ಬಗ್ಗಿ ಬಗ್ಗಿ ಒಮ್ಮೊಮ್ಮೆ ಹತ್ತು ಹನ್ನೆರಡು ಸಲಾಮು ಮಾಡುತ್ತಿದ್ದರು. ಕೆಲ ಕೆಲವು ಸ್ವಾರಸ್ಯವಾದ ಮಾತುಗಳು ಕವಿಯ ಬಾಯಿಂದ ಹೊರಟ ಕೂಡಲೆ ಸಂದಣಿಗೆ ಸಂದಣಿಯೇ ತಮ್ಮ ಹೃದಯಗಳು ಒಂದುಗೂಡಿದವೋ ಎಂಬ ತೆರದಲ್ಲಿ ಉದ್ಗಾರಗಳನ್ನು ಹೊರಗೆಡುವುತ್ತಿದ್ದುವು. ಕನ್ನಡದ ಸಮ್ಮೇಳನಗಳಲ್ಲಿ ಅಂಥ ಕನ್ನಡ ಕವಿತೆ ಹೇಳಿದ್ದ ಪಕ್ಷದಲ್ಲಿ ಸಭೆ ಮೌನವಾಗಿದ್ದಿರಬಹುದೆಂದು ಕಾಣುತ್ತಿದ್ದ ಒಂದಲ್ಲ ಎರಡಲ್ಲ ನೂರಾರು ಸಂದರ್ಭಗಳಲ್ಲಿ ಮುಷಾಯಿರದ ಸಭಿಕರು ಕವಿಗಳಿಗೆ ಹೀಗೆ ಪ್ರೋತ್ಸಾಹ ಕೊಡುತ್ತಿದ್ದುದು ವಿಶೇಷವೇ ಆಗಿ ಕಂಡಿತು.

'ಗುಲ್‌ದಸ್ತ' ಇಲ್ಲದಿದ್ದರೂ ಕೆಲವು ಕವಿಗಳ ಹೆಸರನ್ನು ಇಲ್ಲಿ ಹೇಳಬಹುದು. ಜ಼ೋಷ್ ಅವರು ಅಲಹಾಬಾದಿನವರು. ಕ್ರಾಂತಿಯ ಕವಿ ಎಂದು ಇವರನ್ನು ಕರೆಯುತ್ತಾರೆ. ಉರ್ದು ವಿಮರ್ಶಕರು ಇವರು ಬರಿಯ ಕ್ರಾಂತಿಯ ಮಾತುಗಳನ್ನೇ ಆಡಿ ಜನರ ಮನಸ್ಸನ್ನು ಹಿಡಿದಿರುವವರಲ್ಲ, ದೊಡ್ಡ ಸಾಹಿತಿಗಳು, ಗುರು, ದೇವರು, ಸಗ್ಗ, ಸೌಂದರ್ಯಗಳ ಮಾತನ್ನೆಲ್ಲಾ ಎತ್ತಿ ಮುಗಿಲು ಮುಟ್ಟಿಸಬಲ್ಲವರು ಎಂದು ಹೇಳುತ್ತಾರೆ. ಜಿಗರ್ ಮುರಾದಬಾದಿನವರು. ಹಿಂದೂಸ್ಥಾನದ ಮೂಲೆ ಮೂಲೆಗಳಲ್ಲಿ ಇವರ ಹೆಸರು ಹಬ್ಬಿದೆ ಎನ್ನುತ್ತಾರೆ. ಇವರ ಕವಿತೆಯಲ್ಲಿ ಜ಼ೋಷ್ ಅವರ ಗುಡುಗು ಕೇಳಿಸದಿದ್ದರೂ ಒಂದು ಪ್ರಶಾಂತ ಪ್ರವಾಹ ಹರಿಯುತ್ತಿತ್ತು. ಸೀಮಾಬ್ ಅಕ್ಬರಾಬಾದಿನವರು. ಇವರ ಭಾಷೆ ಮತ್ತು ಕವಿತೆಯಲ್ಲಿ ಒಂದು ನಯ, ನುಣುಪು, ಗಾಂಭೀರ್ಯ, ಹೊಳಪು ಇದೆ ಎಂದು ವಿಮರ್ಶಕರ ಅಭಿಪ್ರಾಯ. ಸಾಗರ್ ನಿಜ಼ಾಮಿ ಇವರ ವಾಣಿಯ ವೈಖರಿಯನ್ನು ಬಹು ಜನ ಮೆಚ್ಚಿದ್ದಾರೆ. ಮೌಲಾನಾ ಅಖ್ತರ್ ಇವರು ಯಾವ ವಿಷಯದ ಮೇಲಾದರೊ ಕವಿತೆ ಕಟ್ಟಬಲ್ಲವರು, ಯಾವ ವಿಷಯವಾದರು ಇವರ ಕೈಯಲ್ಲಿ ಒಂದು ತಾತ್ವಿಕವಾದ ಬೆಳಕನ್ನು ಹೊಂದಿ ಸೊಗಸುತ್ತದೆ. ದೆಹ್ಕಾನಿ ಹೈದರಾಬಾದಿಯವರ ಬಗೆ ಒಂದು ವಿಶೇಷ ರೀತಿಯದು. ಇವರ ಕವಿತೆಗಳು ಸಾಧಾರಣವಾಗಿ ದಕ್ಷಿಣ ಹಿಂದುಸ್ತಾನದ ಹಳ್ಳಿ ಹಳ್ಳಿಯಲ್ಲಿ ಜನರಲ್ಲಿ ಬಳಕೆಯಾಗಿರುವ ಭಾಷೆಯಲ್ಲಿರುತ್ತವೆ. ಇವರನ್ನು 'ಹಳ್ಳಿಯ ಹಾಡಿನ ಕವಿ' ಎಂದು ಕರೆಯಬಹುದೇನೊ? ಸಂಪೂರ್ಣವಾಗಿ ಹಿಡಿಯದಿದ್ದರೆ 'ಗ್ರಾಮ್ಯ'ವೆಂದು ಬೇಸರವಾಗಬಹುದು. ತೂಕ ಮಾಡಿ ನೋಡಿದವರು ಇವರ ಕವನಗಳು ಬಹಳ ಜನಪ್ರಿಯವಾಗಿವೆ ಎನ್ನುತ್ತಾರೆ. ಬೆಂಗಳೂರಿನ ಗೆಳೆಯರು ತಮ್ಮ ಪ್ರೀತಿಯ ಹಾರತುರಾಯಿಗಳನ್ನು ಇವರಿಗೇ ಒಪ್ಪಿಸಿದರು. ಆಜ಼ಾಸ್ ಸಡೀಖಿ, ಉಮೀದ್ ಲಖ್ನವೀ ಇವರೂ ಪ್ರಥಮ ಶ್ರೇಣಿಯಲ್ಲಿ ಎಣಿಕೆಯಾಗಿದ್ದಾರೆ. ಇನ್ನೂ ಅನೇಕ ಕವಿಗಳಿದ್ದರು. ನನ್ನ ಸ್ನೇಹಿತರೊಬ್ಬರು ಹೇಳಿದಂತೆ ಸೈಯದ್ ಅಖ್ತಾರ್ ಬೇಗಂ ಅವರು ಎಲ್ಲಾ ಓದುಗಾರರಿಗೂ ಒಂದು ಸಮವಾದ ಅವಕಾಶವನ್ನು ಕಲ್ಪಿಸಿ ಕೊಡಲೆತ್ನಿಸಿದುದು ಶ್ಲಾಘ್ಯವಾದುದು.

ಮುಷಾಯಿರಾದಲ್ಲಿ 'ತರಹೀ' 'ಗೈರ್ ತರಹೀ' ಎರಡು ಬಗೆಗಳ ಮಿಶ್ರಣವೂ ಇತ್ತು. ಯಾವುದಾದರೂ ಒಂದು ಪದ್ಯದ ಸಾಲನ್ನು ಮೇಲ್ಪಂಕ್ತಿಯಾಗಿಟ್ಟುಕೊಂಡು ಅದರಂತೆಯೇ ಹಾಗೇ ಪ್ರಾಸವಿಟ್ಟು ಎಲ್ಲರೂ ತಮ್ಮ ತಮ್ಮ ಪದ್ಯಗಳನ್ನು ಬರೆದು ಓದುವುದು 'ತರಹೀ' ಮುಷಾಯಿರವಂತೆ. ಒಬ್ಬೊಬ್ಬರೂ ಬೇರೆ ಬೇರೆ ಬಗೆಯಲ್ಲಿ ಬರೆದ ತಮ್ಮ ತಮ್ಮ ಸ್ವತಂತ್ರ ಪದ್ಯಗಳನ್ನು ಓದುವುದು 'ಗೈರ್ ತರಹೀ' ಮುಷಾಯಿರ. ಹೆಸರುವಾಸಿಯಾದ ಕವಿಗಳಿಗೆ ಅವರವರ ಪದ್ಯಗಳನ್ನೇ ಓದುವುದಕ್ಕೆ ಬಿಡುವುದು ಸಹಜ. ಈ ಮುಷಾಯಿರಾದಲ್ಲಿಯೂ ಹಾಗೇ ನಡೆಯಿತು. 'ತರಹೀ' ಮುಷಾಯಿರದಲ್ಲಿ ಕವಿತೆಗಿಂತಲೂ ಪದ್ಯ ರಚನೆಗೇ ಹೆಚ್ಚು ಪ್ರಾಶಸ್ತ್ಯವಲ್ಲವೇ ಎನ್ನಿಸಬಹುದು. ಆದರೆ ಮಾದರಿಯ ಮೇಲೆ ಬರೆದ ಪದ್ಯವಾದರೂ ಬರಹಗಾರನು ಸರಿಯಾಗಿ ಬರೆದರೆ ಅದರಲ್ಲಿ ಸೊಗಸನ್ನು ತುಂಬಬಹುದು. ಮುಷಾಯಿರದಲ್ಲಿ ಸಭಿಕರು ಇಂತಹ ಅನೇಕ ಪದ್ಯಗಳ ಸವಿಯನ್ನು ಅನುಭವಿಸುತ್ತಿದ್ದುದು ಕಂಡುಬಂದಿತು.

ಎಂ. ವಾಸುದೇವಮೂರ್ತಿ.

## ಬೆಂಗಳೂರು ನಗರದಲ್ಲಿ ಅಕ್ಷರ ಪ್ರಚಾರ ಕಾರ್ಯ

ನವೆಂಬರು ತಿಂಗಳ ಆದಿಯಲ್ಲಿ ೩೬ ಕೇಂದ್ರಗಳು ಕೆಲಸ ಮಾಡುತ್ತಿದ್ದುವು. ಹಿಂದಿನಿಂದ ನಡೆದುಕೊಂಡು ಬಂದಿದ್ದ ಆರು ಕೇಂದ್ರಗಳಲ್ಲಿ ಪರೀಕ್ಷೆ ನಡೆದು ಅವುಗಳನ್ನು ನಿಲ್ಲಿಸಲಾಯಿತು. ಡಿಸೆಂಬರು ತಿಂಗಳಲ್ಲಿ ಮೂರು ಕೇಂದ್ರಗಳಲ್ಲಿ ಎರಡನೆಯ (Post Literacy) ಪರೀಕ್ಷೆಯೂ, ಏಳು ಕೇಂದ್ರಗಳಲ್ಲಿ ಮೊದಲನೆಯ (Primary) ಪರೀಕ್ಷೆಯೂ ನಡೆದವು. ದೇಶದಲ್ಲಿ ಉಂಟಾದ ಅಶಾಂತಿ ವಾತಾವರಣದಿಂದ ಬಿನ್ನಿಮಿಲ್ಲಿಗೆ ಸಂಬಂಧಪಟ್ಟ ಬಿನ್ನಿಪೇಟೆಯಲ್ಲಿ ಎರಡು ತರಗತಿಗಳೂ, ಸೆಂಟ್ರಲ್ ಜೈಲಿನಲ್ಲಿ ನಡೆಯುತ್ತಿದ್ದ ನಾಲ್ಕು ತರಗತಿಗಳೂ, ಪಾರ್ವತಿಪುರದಲ್ಲಿದ್ದ ಒಂದು ತರಗತಿಯೂ ಸ್ವಲ್ಪಕಾಲದಮಟ್ಟಿಗೆ ನಿಲ್ಲಿಸಬೇಕಾಯಿತು. ಜೈಲಿನಲ್ಲಿ ಇಷ್ಟರಲ್ಲಿಯೆ ಪುನಃ ತರಗತಿಗಳನ್ನು ನಡಸಲು ಏರ್ಪಾಡು ನಡೆಯುತ್ತಿದೆ. ಬಿನ್ನಿಪೇಟೆಯಲ್ಲಿ ಕಾರ್ಖಾನೆಯ ಅಧಿಕಾರಿಗಳೆ ವಯಸ್ಕರ ಎರಡು ತರಗತಿಗಳನ್ನು ನಮ್ಮ ಪದ್ಧತಿಯ ಮೇರೆಯೇ ನಡಸುತ್ತಿದ್ದಾರೆ. ಪಾರ್ವತಿಪುರದಲ್ಲಿ ಈಗ ಹೆಂಗಸರಿಗಾಗಿ ಒಂದು ತರಗತಿ ನಡೆಯುತ್ತಿದೆ.

ಈ ನಗರದಲ್ಲಿರತಕ್ಕ ಕಾರ್ಖಾನೆಗಳ ಕೂಲಿಕಾರರ ಮಧ್ಯದಲ್ಲಿ ತರಗತಿಗಳನ್ನು ತೆರೆಯಲು ಏರ್ಪಾಡು ನಡೆಯುತ್ತಿದೆ. ಈ ವಿಷಯದಲ್ಲಿ ಲೇಬರ್ ಕಮೀಷನರವರು ತುಂಬಾ ಸಹಾಯವನ್ನು ನೀಡುತ್ತಿದ್ದಾರೆ. ಸಮಿತಿಯು ಕೈಕೊಂಡಿರುವ ಕಾರ್ಯ ಸ್ತುತ್ಯವಾದದ್ದೆಂದೂ ಅದಕ್ಕೆ ಪ್ರೋತ್ಸಾಹವನ್ನು ಕೊಡುವುದು ಎಲ್ಲರ ಕರ್ತವ್ಯವೆಂದೂ ತಿಳಿಸಿ ಪ್ರತಿಯೊಂದು ಕಾರ್ಖಾನೆಯಲ್ಲೂ ಕನಿಷ್ಟಪಕ್ಷ ಗಂಡಸರಿಗೊಂದು ಹೆಂಗಸರಿಗೊಂದು ಈರೀತಿ ಎರಡು ಕೇಂದ್ರಗಳನ್ನಾದರೂ ತೆರೆಯಲು ಏರ್ಪಾಡು ಮಾಡಬೇಕೆಂದು ಕಾರ್ಖಾನೆಯ ಮಾಲೀಕರನ್ನು ಕೋರಿದ್ದಾರೆ. ಅದೇ ಮೇರೆಗೆ ಈಗಾಗಲೆ ಕೆಲವು ಮಾಲೀಕರು ಸಹಾಯಮಾಡಲು ವಾಗ್ದಾನಮಾಡಿರುತ್ತಾರೆ. ಇಷ್ಟರಲ್ಲಿಯೇ ಹತ್ತು ಕೇಂದ್ರಗಳಾದರೂ ಸ್ಥಾಪನೆಯಾಗಬಹುದೆಂಬ ನಿರೀಕ್ಷಣೆ ಇದೆ. ಲೇಬರ್ ಡಿಪಾರ್ಟ್‌ಮೆಂಟಿನವರು ಕೂಲಿಕಾರರ ಅನುಕೂಲಕ್ಕಾಗಿ ಹೊಸದಾಗಿ ಏರ್ಪಡಿಸಿರುವ ಎರಡು ಕೇಂದ್ರಗಳಲ್ಲಿ (Welfare centres) ತರಗತಿಗಳು ಪ್ರಾರಂಭವಾಗಿರುತ್ತವೆ.

ರಾಜಾಮುಹಲ್ ಗುಟ್ಟಹಳ್ಳಿಯ ಸುತ್ತುಮುತ್ತಲೂ ಕೂಲಿಕಾರರ ಗುಡಿಸಲು ಇವೆ. ಅವುಗಳ ಮಧ್ಯೆ ಈ ತಿಂಗಳಲ್ಲಿ ೫ ಕೇಂದ್ರಗಳನ್ನು ತೆರೆಯಲಾಯಿತು. ಹೆಂಗಸರಿಗಾಗಿ ಗಾಂಧಿ ನಗರದಲ್ಲಿ ಒಂದು ಕೇಂದ್ರವನ್ನು ಈ ವಾರ ಸ್ಥಾಪಿಸಲಾಗುವುದು. ಬಳೇಪೇಟೆಯಲ್ಲಿರುವ ಶ್ರೀನಿವಾಸ ಮಂದಿರದಲ್ಲಿ ಒಂದು ಹೆಂಗಸರಿಗಾಗಿ ತರಗತಿಯನ್ನು ತೆರೆಯಲು ಮಂದಿರದ ಸಮಿತಿಯ ಅಧ್ಯಕ್ಷರವರು ಪ್ರಯತ್ನಿಸುತ್ತಿದ್ದಾರೆ.

ಹಿಂದೆಯೆ ತಿಳಿಸಿದ್ದಂತೆ ಕೇಂದ್ರಗಳಲ್ಲಿ ಆಗಾಗ್ಗೆ ಓದುವವರ ಮನಸ್ಸಿಗೆ ಉತ್ಸಾಹ ಹುಟ್ಟಿಸುವದಕ್ಕೂ ಸುತ್ತಮುತ್ತಣ ಜನಗಳಿಗೆ ಸಮಿತಿಯ ಕೆಲಸದಲ್ಲಿ ಆಸಕ್ತಿ ಉಂಟುಮಾಡುವುದಕ್ಕೂ ವಾರಕ್ಕೆ ಒಂದಾವರ್ತಿ ಪ್ರತಿಯೊಂದು ಕೇಂದ್ರದಲ್ಲಿಯೂ ಭಾರತ ವಾಚನ, ಹರಿಕಥೆ ಮುಂತಾದ ಕಾರ್ಯಕ್ರಮವನ್ನು ಏರ್ಪಡಿಸಲಾಗಿದೆ. ಅದರಂತೆ ಹೋದ ಭಾನುವಾರ ಗವೀಪುರ ಗುಟ್ಟಹಳ್ಳಿಯ ಕೇಂದ್ರದಲ್ಲಿ ಹರಿಕಥೆ ಏರ್ಪಡಿಸಲಾಗಿತ್ತು. ಸುತ್ತಲೂ ವಾಸಮಾಡುತ್ತಿದ್ದ ಜನಗಳೆಲ್ಲರೂ ಬಂದು ಕೇಳಿ ಸಂತೋಷಪಟ್ಟರು. ಅಲ್ಲಿಯ ವಿದ್ಯಾರ್ಥಿಗಳು ಒಂದು ಸಣ್ಣ ನಾಟಕವನ್ನು ಅಭ್ಯಾಸಮಾಡಿ ಆಡುವದಕ್ಕೆ ಮುಂದೆ ಬಂದಿರುತ್ತಾರೆ.

ಈ ರೀತಿಯಲ್ಲಿ ನಗರದ ಅಕ್ಷರಪ್ರಚಾರ ಕಾರ್ಯ ಸಮರ್ಪಕವಾಗಿ ಮುಂದುವರಿಯುತ್ತಿದೆ. ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರುವವರಿಗೆಲ್ಲ ಈ ತಿಂಗಳಲ್ಲಿ ಯೋಗ್ಯತಾಪತ್ರಗಳನ್ನು ಕೊಡುವ ಏರ್ಪಾಡು ಮಾಡಲಾಗುವದು.

## ಪರಿಷತ್ತಿನ ಸುದ್ದಿ

**ದಿವಂಗತ ಇ. ಎ. ಭಾಸ್ಕರರಾಯರ ಜ್ಞಾಪಕ ಸ್ಪರ್ಧೆ – ೧೯೫೩**

೧೯೫೩ರ ಸ್ಪರ್ಧೆಗೆ ಒಟ್ಟು ೧೦ ಪ್ರಬಂಧಗಳು ಬಂದಿದ್ದುವು ಮೈಸೂರು ಮಹಾರಾಜರವರ ಕಾಲೇಜಿನ ಶ್ರೀ. ಜಿ. ವರದರಾಜಾರಾವ್ ಬಿ.ಎ. (ಆನರ್ಸ್) ಅವರ ಪ್ರಬಂಧಕ್ಕೆ ಬಹುಮಾನ ದೊರೆತಿದೆ. ಪ್ರಬಂಧ ವಿಷಯ: ಶ್ರೀ. ಪುರಂದರದಾಸರ ಕೀರ್ತನೆಗಳು.

### ಸಾಹಿತ್ಯ ಪರೀಕ್ಷೆಗಳು

**ಕೇಂದ್ರಗಳು:** ಬೆಂಗಳೂರು, ಮೈಸೂರು, ಬೆಳಗಾಂವಿ, ಹುಬ್ಬಳ್ಳಿ, ಧಾರವಾಡ, ಬಿಜಾಪುರ, ಬನಹಟ್ಟಿ, ಸಿರಸಿ, ಗುಲ್ಬರ್ಗ, ಯಾದಗಿರಿ, ಕೊಪ್ಪಳ, ರಾಯಿಚೂರು, ಚಿಂಚೋಳಿ, ಹೈದರಾಬಾದು, ಕುಕನೂರ.

### ಪರೀಕ್ಷೆಗಳ ಕಾಲಪಟ್ಟಿ

(ಪ್ರತಿದಿನವೂ ಬೆಳಗ್ಗೆ ೯ರಿಂದ ೧೨ ಗಂಟೆಯವರೆಗೆ)

**೨೯–೧–೧೯೫೪ನೆಯ ಶುಕ್ರವಾರ**

| | | ಅಂಕ |
|---|---|---|
| **ಜಾಣ ಪರೀಕ್ಷೆ:** | ಸಾಹಿತ್ಯ (ನಾಟಕ, ಕಾವ್ಯ, ಗದ್ಯ) | ೧೫೦ |
| **ಕಾವ ಪರೀಕ್ಷೆ:** | ಸಾಹಿತ್ಯ (ನಾಟಕ, ಕಾವ್ಯ, ಗದ್ಯ) | ೧೨೫ |

**೩೦–೧–೧೯೫೪ನೆಯ ಶನಿವಾರ**

| | | |
|---|---|---|
| **ಜಾಣ ಪರೀಕ್ಷೆ:** | ವ್ಯಾಕರಣ, ಭಾಷಾ ಚರಿತ್ರೆ, ಸಾಹಿತ್ಯ ಚರಿತ್ರೆ ಮತ್ತು ವಿಮರ್ಶೆ | ೭೫ |
| **ಕಾವ ಪರೀಕ್ಷೆ:** | ವ್ಯಾಕರಣ ಮತ್ತು ಸಂಸ್ಕೃತಿ | ೭೫ |

**೩೧–೧–೧೯೫೪ನೆಯ ಭಾನುವಾರ**

| | | |
|---|---|---|
| **ಜಾಣ ಪರೀಕ್ಷೆ:** | ಸಂಸ್ಕೃತಿ ಮತ್ತು ಚರಿತ್ರೆ | ೭೫ |

ಅಣುಗ ಪರೀಕ್ಷೆಯ ದಿನ ಕಾಲ ಮುಂತಾದ ವಿವರಗಳನ್ನು ಆಯಾ ಕೇಂದ್ರಗಳ ವ್ಯವಸ್ಥಾಪಕರು ವಿದ್ಯಾರ್ಥಿಗಳಿಗೆ ತಿಳಿಸುತ್ತಾರೆ.

ಬೆಂಗಳೂರು
೨೯–೧೨–೧೯೫೩

ಬಿ. ವೆಂಕೋಬರಾವ್
ಕಾರ್ಯದರ್ಶಿ

## ಸಹಾಯಾರ್ಥ ಸಂಗೀತ ಕಚೇರಿ

### ಗಾಯನ ಸಮಾಜ, ಬೆಂಗಳೂರು

ಬೆಂಗಳೂರು ಗಾಯನ ಸಮಾಜದ ಕಟ್ಟಡದ ಸಹಾಯಾರ್ಥವಾಗಿ ಬೆಂಗಳೂರಿನ ಸರ್ ಪುಟ್ಟಣ್ಣಶೆಟ್ಟರ ನಗರಭವನದಲ್ಲಿ **೧೦–೧–೫೪ನೆಯ ಭಾನುವಾರ** ಸಂಜೆ ೫ರಿಂದ ೮–೩೦ರ ವರೆಗೆ ಕೋಕಿಲಗಾನ ಇಶೈವಾಣಿ ಶ್ರೀಮತಿ ಎಂ. ಎಸ್. ಸುಬ್ಬಲಕ್ಷ್ಮಿಯವರ ಸಂಗೀತ ಕಚೇರಿ ನಡೆಯುವುದು. ಇವರಿಗೆ ನೆರವಾಗಿ ತಂಜಾವೂರಿನ ಶ್ರೀ. ಟಿ. ಡಿ. ಶಂಕರ ಅಯ್ಯರ್ ಅವರ ಪಿಟೀಲು ವಾದನವೂ ಮಾಸ್ಟರ್ ಮೂರ್ತಿಯವರ ಮೃದಂಗ ವಾದನವೂ ನಡೆಯುವುವು. ಪ್ರವೇಶ ಧನ: ರೂ. ೧೦, ೫, ೩, ೨, ೧. ಸಂಗೀತಾಭಿಮಾನಿಗಳೆಲ್ಲರೂ ಉದಾರ ಪ್ರೋತ್ಸಾಹ ನೀಡಿ ಬೆಂಗಳೂರಿನಂಥ ದೊಡ್ಡ ನಗರದಲ್ಲಿ ತಕ್ಕ ಸಂಗೀತ ಮಂದಿರದ ಏರ್ಪಾಟಿಗೆ ಸಹಾಯಮಾಡುವರೆಂದು ನಂಬಿದೆ.

### ಮೈಸೂರು: ಆಕಾಶವಾಣಿ

**ಕಾವ್ಯ ವಾಚನ:** ಕೆಲವು ದಿನಗಳ ಹಿಂದೆ ಶ್ರೀಮತಿ ಶಕುಂತಲಾಬಾಯಿ ಪಾಂಡುರಂಗರಾಯರು ಶ್ರೀನಿವಾಸರ ಅರುಣ ಎಂಬ ಕವನ ಸಂಗ್ರಹದಲ್ಲಿರುವ ಅಭಿಮನ್ಯು ಎಂಬ ಕವಿತೆಯನ್ನು ಮೈಸೂರು ಆಕಾಶವಾಣಿಯ ಮೂಲಕ ಪಠಿಸಿದರು.

೭೬೫—೧೯೫೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

## ದಿವಂಗತ ನಂಗಪುರಂ ವೆಂಕಟೇಶ ಅಯ್ಯಂಗಾರರ ಭಾವಚಿತ್ರದ ಅನಾವರಣ

೧೯–೧೨–೧೯೪೨ನೆಯ ಶನಿವಾರ ಸಂಜೆ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಪರಿಷತ್ತಿನ ಸ್ಥಾಪಕರಲ್ಲೊಬ್ಬರಾಗಿದ್ದು, ಕಾರ್ಯದರ್ಶಿಗಳಾಗಿಯೊ ಕೋಶಾಧಿಕಾರಿಗಳಾಗಿಯೊ ಅನೇಕ ವರ್ಷಗಳ ಕಾಲ ಸೇವೆ ಸಲ್ಲಿಸಿ, ಗ್ರಂಥರಚನೆ ಮಾಡಿ ಸಾಹಿತ್ಯ ಪ್ರಪಂಚದಲ್ಲೂ ಪ್ರಸಿದ್ಧರಾಗಿದ್ದ ದಿವಂಗತ ಶ್ರೀ. ನಂಗಪುರಂ ವೆಂಕಟೇಶ ಅಯ್ಯಂಗಾರರ ಭಾವಚಿತ್ರದ ಅನಾವರಣ ರಾಜಸೇವಾಸಕ್ತ ಶ್ರೀ. ಬೆಳ್ಳಾವೆ ವೆಂಕಟನಾರಾಯಣಪ್ಪನವರ ಅಧ್ಯಕ್ಷತೆಯಲ್ಲಿ ನಡೆಯಿತು.

ಶ್ರೀ. ವೆಂಕಟನಾರಾಯಣಪ್ಪನವರು ತಮ್ಮ ಭಾಷಣದಲ್ಲಿ ದಿವಂಗತರು ತಮಗೆ ವಿದ್ಯಾಗುರುಗಳಾಗಿದ್ದರೆಂದೂ, ಅನೇಕ ವರ್ಷಗಳ ಕಾಲ ಅವರೊಂದಿಗೆ ಕೆಲಸಮಾಡುವ ಭಾಗ್ಯ ತಮಗೆ ಒದಗಿತ್ತೆಂದೂ, ಸರ್ ಎಂ. ವಿಶ್ವೇಶ್ವರಯ್ಯನವರ ದಿವಾನ್‌ಗಿರಿಯ ಕಾಲದಲ್ಲಿ ದಿವಾನರ ಪ್ರೇರಣೆ ಒತ್ತಾಯಗಳಿಂದ ಜನಸಾಮಾನ್ಯರಲ್ಲಿ ವಿಜ್ಞಾನ ವಿಷಯಗಳನ್ನು ಪ್ರಸಾರ ಮಾಡಲು ವರ್ಷಕಾಲ ವಿಜ್ಞಾನ ಮಾಸ ಪತ್ರಿಕೆ ನಡಸಿ, ಆಮೇಲೆ ವಿಜ್ಞಾನ ಪ್ರಚಾರ ಭಾಷಣಗಳನ್ನು ಮಾಡಲು ತೊಡಗಿದ್ದು, ಆದರೆ ಇವಾವುದಕ್ಕೂ ತಕ್ಕ ಪ್ರೋತ್ಸಾಹಬರಬೇಕಾದ ಕಡೆಗಳಿಂದ ಬರದೆ ಆಶಾಭಂಗವಾದದ್ದು, ಆಮೇಲೆ೧೯೧೮ರಲ್ಲಿ ದಿವಾನಗಿರಿಯಿಂದ ಸರ್ ಎಂ. ವಿಶ್ವೇಶ್ವರಯ್ಯನವರು ನಿವೃತ್ತರಾದಮೇಲೆ ಈ ಚಟುವಟಿಕೆಗಳನ್ನು ನಡಸಲು ಸಾಧ್ಯವೇ ಆಗದೆ ನಿಂತದ್ದು, – ಮುಂತಾದ ವಿಷಯಗಳನ್ನು ಮನಮುಟ್ಟುವಂತೆ ಪ್ರಸಂಗೋಚಿತವಾದ ನಿದರ್ಶನಗಳೊಂದಿಗೆ ವಿವರಿಸಿದರು.

“ ಶ್ರೀ. ವೆಂಕಟೇಶ ಅಯ್ಯಂಗಾರರ ಭಾಷಾಪ್ರೇಮ ಅತಿಶಯವಾದುದು. ಅವರು ಕೈಗೊಂಡ ಪ್ರಯತ್ನಗಳು ವಿಫಲವಾದರೂ ಅವರು ಕರ್ತವ್ಯ ವಿಮುಖರಾಗದೆ ಗ್ರಂಥವಾಲೋಕನ ಗ್ರಂಥ ರಚನೆಗಳಲ್ಲಿ ತೊಡಗಿ, ‘ಜ್ಯೋತಿರ್ವಿನೋದಿನಿ’ ಎಂಬ ವಿಜ್ಞಾನ ಗ್ರಂಥವನ್ನೂ ರಾಮಕೃಷ್ಣಪರಮಹಂಸರ ವಚನಾಮೃತ, ವಿವೇಕಾನಂದರ ಪತ್ರಗಳು ಮುಂತಾದ ಧರ್ಮ ಸಾಹಿತ್ಯ ಕೃತಿಗಳನ್ನೂ ಬರೆದು ಸಾಹಿತ್ಯದ ಸಂಪತ್ತನ್ನು ಬೆಳಸಿದರು. ಅವರಿಗೆ ತತ್ವಜ್ಞಾನ ಆಸಕ್ತಿ, ವೈರಾಗ್ಯದ ಕಡೆ ಒಲವು. ಜನಸೇವೆಯಲ್ಲಿ ಶ್ರದ್ಧೆ. ಬರಹದಲ್ಲಿ ಜನರನ್ನು ಹೊಡೆದೆಬ್ಬಿಸುವ ಶೈಲಿ. ಶ್ರೀಯುತರು ಮಿತಭಾಷಿಗಳು. ಆಡಂಬರ ಇಲ್ಲ. ಸತ್ಯವಿದ್ದೆಡೆ ಸ್ನೇಹ. ಬಾಳಿನಲ್ಲಿ ಆಡಂಬರಕ್ಕೆ ಎಡೆಯಿಲ್ಲ. ಪರಿಷತ್ತಿಗೆ ಅವರು ಸಲ್ಲಿಸಿರುವ ಸೇವೆ ಅಪಾರವಾದುದು. ಅವರು ದುಡಿದು ಎಲ್ಲರಿಗೂ ಆದರ್ಶಪುರುಷರಾಗಿದ್ದಾರೆ. ಅವರ ಭಾವಚಿತ್ರ ಕನ್ನಡ ಜನಕ್ಕೆ ಸ್ಫೂರ್ತಿಯಾಗಿದೆ.” ಎಂದು ಅಧ್ಯಕ್ಷರು ಹೇಳಿ ಶ್ರೀ. ವೆಂಕಟೇಶ ಅಯ್ಯಂಗಾರರ ಭಾವಚಿತ್ರವನ್ನು ಅನಾವರಣ ಮಾಡಿದರು.

ಬಳಿಕ ಶ್ರೀ. ಕೋಲಾರ ಸಂಪದ್ಗಿರಿರಾಯರು ದಿವಂಗತರ ಗುಣಗಾನಮಾಡಿ, ಪರಿಷತ್ತು ದೇಶೀಯ ವಿದ್ಯಾಶಾಲೆ, ಅಮೆಚೂರು ನಾಟಕ ಸಂಘ, ರಾಮಕೃಷ್ಣ ಮಠ ಮುಂತಾದ ಸಂಸ್ಥೆಗಳ ಸದಸ್ಯರಾಗಿದ್ದು ಸಲ್ಲಿಸಿದ ಸೇವೆಯನ್ನು ವರ್ಣಿಸಿದರು. ಅವರ ವ್ಯಕ್ತಿತ್ವ ಚಿಕ್ಕವರೆನ್ನದೆ ದೊಡ್ಡವರೆನ್ನದೆ ಎಲ್ಲರನ್ನೂ ಆಕರ್ಷಿಸುತ್ತಿತ್ತು. ಹಳಬರಾದರೂ ಯೌವನದ ಕೆಚ್ಚೂ ಕಾವೂ, ನಿರ್ಭಯ ನಿಸ್ಸಂಕೋಚ ಭಾವಗಳೂ ಅವರ ನಡೆನುಡಿಗಳಲ್ಲಿ ಪ್ರಜ್ವಲಿಸುತ್ತಿದ್ದುವು. ಶುದ್ಧ ಖಾದಿ ವೇಷ; ಸರಳಜೀವನ; ಸ್ವಭಾವದಲ್ಲಿ ಸ್ವತಂತ್ರ ವೃತ್ತಿ. ಹಾಗೆಯೆ ವಿಚಾರ ಸ್ವಾತಂತ್ರ್ಯಕ್ಕೆ ಎತ್ತಿದ ಕೈ. ಸಾರ್ವಜನಿಕ ಸೇವೆ ಮಾಡುವವರಿಗೆ ಇವರು ಬದುಕಿ ತೋರಿಸಿದ ರೀತಿ ಆದರ್ಶವಾದುದು.

ಬಳಿಕ ಶ್ರೀ. ಎಂ. ಎ. ನರಸಿಂಹಾಚಾರ್ಯರು ಮಾತನಾಡುತ್ತ, ದಿವಂಗತರ ಬಹುಮುಖವಾದ ಸಮಾಜಸೇವೆಯನ್ನು ಕೊಂಡಾಡಿದರು. “ಸಾಹಿತ್ಯ, ವಿಜ್ಞಾನ, ಸಹಕಾರ, ಕಡೆಗೆ ಶರೀರ ವ್ಯಾಯಾಮ – ಎಲ್ಲ ಸಂಸ್ಥೆಗಳಲ್ಲೂ ಶ್ರದ್ಧೆಯಿಂದ ‘ಅನಾಸಕ್ತಿ’ಯಿಂದ ಅವರು ದುಡಿದರು. ಸೇವೆಗೆ ಕೈಹಾಕಿದ ಸಂಸ್ಥೆಯಲ್ಲಿ ಅವರು ಗಳಿಸುವ ಜನಪ್ರಿಯತೆಗೆ ಸಾಕ್ಷಿಯಾಗಿ, ಅವರು ಬೆಂಗಳೂರು ಸಿಟಿ ಕೋ-ಆಪರೇಟಿವ್ ಬ್ಯಾಂಕಿನಲ್ಲಿ ಒಂದೇ ಸಮನೆ ೨೦ ವರ್ಷಗಳ ಕಾಲ ಆಯ್ಕೆಯಾಗಿ ಕಾರ್ಯನಿರ್ವಾಹಕ ಸಮಿತಿಯಲ್ಲಿರುತ್ತಿದ್ದುದನ್ನು ಜ್ಞಾಪಿಸಿಕೊಳ್ಳಬಹುದು. ಚಾಮರಾಜಪೇಟೆಯ ರಾಮೇಶ್ವರ ದೇವಸ್ಥಾನದಲ್ಲಿ ಪ್ರಾರಂಭವಾದ ಎಳೆಯ ಮಕ್ಕಳ ಸಣ್ಣ ಪಾಠಶಾಲೆಗೂ ಗಮನಕೊಟ್ಟು ಮಕ್ಕಳ ಯೋಗಕ್ಷೇಮ ನೋಡಿಕೊಳ್ಳುತ್ತಿದ್ದರು.” ಎಂದು ಮುಂತಾಗಿ ಹೇಳಿ, ಶ್ರೀಯುತರು ಬರೆದಿರುವ ಒಂದೆರಡು ಗ್ರಂಥಗಳಿಂದ ಕೆಲವು ಭಾಗಗಳನ್ನು ಓದಿ ತೋರಿಸಿ ಕಡೆಗೆ “ಈ ಮಹಾ ಜೀವಕ್ಕೆ ಅಂತ್ಯ ಕಾಲದಲ್ಲಿ ಬಂದ ದುಃಖ ಪರಂಪರೆಯನ್ನು ವಿವರಿಸಿ, ಆ ಸ್ಥಿರಮನಸ್ಸೂ ವಜ್ರಕಾಯವೂ ಚಿಂತೆಯಿಂದ ಕರಗಿಹೋದ ವಿಚಾರವನ್ನು ನೆನೆದು, ಪರಿಷತ್ತನ್ನು ಕಟ್ಟಿದ ಮೊದಲಿಗರಾದ ತ್ರಿಮೂರ್ತಿಗಳಲ್ಲಿ ಇವರೊಬ್ಬರು (ಶ್ರೀ. ಕರ್ಪೂರ ಶ್ರೀನಿವಾಸರಾಯರು, ಶ್ರೀ. ಬೆಳ್ಳಾವೆ ವೆಂಕಟನಾರಾಯಣಪ್ಪನವರು ಉಳಿದಇಬ್ಬರು) ಎಂದು ಹೇಳಿದರು.

ದಿವಂಗತರ ಗೌರವಾರ್ಥವಾಗಿ ಸಭೆ ಎರಡು ನಿಮಿಷಗಳ ಕಾಲ ಎದ್ದುನಿಂತು ಮೌನ ತಾಳಿತು.

ಆಮೇಲೆ ರಾಜಸೇವಾಸಕ್ತ ಶ್ರೀ. ಬಿ. ಎಂ. ಶ್ರೀಕಂಠಯ್ಯನವರು ದಿವಂಗತರಲ್ಲಿ ತಮಗಿದ್ದ ಗೌರವವನ್ನು ವ್ಯಕ್ತಪಡಿಸಿದರು. ಅಧ್ಯಕ್ಷರಾದ ಶ್ರೀ. ವೆಂಕಟನಾರಾಯಣಪ್ಪನವರಿಗೂ ಭಾವಚಿತ್ರವನ್ನು ಪರಿಷತ್ತಿಗೆ ದಾನಮಾಡಿದ ಶ್ರೀ. ಮಾಸ್ತಿಯವರಿಗೂ ವಂದನ ಸಮರ್ಪಣೆ ಆಗಿ ಸಭೆ ಮುಗಿಯಿತು.

## ಶ್ರೀಮಾನ್ ಡಿ. ವಿ. ಗುಂಡಪ್ಪನವರ ಮತ್ತು ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರ ಭಾವಚಿತ್ರಗಳ ಅನಾವರಣ

೨೦–೧೨–೧೯೪೨ನೆಯ ಭಾನುವಾರ ಸಂಜೆ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರುಗಳಾಗಿದ್ದು ಅಮೋಘವಾಗಿ ಸೇವೆ ಸಲ್ಲಿಸಿರುವ ಶ್ರೀ. ಡಿ. ವಿ. ಗುಂಡಪ್ಪನವರ ಮತ್ತು ರಾಜಸೇವಾಸಕ್ತ ಶ್ರೀ. ಬಿ. ಎಂ. ಶ್ರೀಕಂಠಯ್ಯನವರ ಭಾವಚಿತ್ರಗಳ ಅನಾವರಣ ಮಹೋತ್ಸವ ಮದರಾಸಿನ ಪ್ರಸಿದ್ಧ ಮುಂದಾಳುಗಳಾದ ಸರ್ ಪಿ. ಎಸ್. ಶಿವಸ್ವಾಮಿ ಅಯ್ಯರ್, ಕೆ.ಸಿ.ಎಸ್.ಐ. ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಶ್ರೀ. ಡಿ. ವಿ. ಗುಂಡಪ್ಪನವರ ಭಾವಚಿತ್ರವನ್ನು ರಾಜಸೇವಾಪ್ರಸಕ್ತ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರರೂ, ‘ಶ್ರೀ’ಯವರ ಭಾವಚಿತ್ರವನ್ನು ಬೆಂಗಳೂರಿನ ವಕೀಲರಾದ ಶ್ರೀ, ಎಸ್. ಶ್ರೀಕಂಠಯ್ಯನವರೂ ಪರಿಷತ್ತಿಗೆ ದಾನಮಾಡಿದ್ದಾರೆ. ಉತ್ಸವಕ್ಕೆ ಅನೇಕ ಅಭಿಮಾನಿಗಳು ದಯಮಾಡಿಸಿದ್ದರು.

ಉಪಾಧ್ಯಕ್ಷರಾದ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರರು ಅಧ್ಯಕ್ಷರನ್ನೂ ಸಭೆಗೆ ಬಂದಿದ್ದ ಮಹನೀಯರನ್ನೂ ಸ್ವಾಗತಿಸಿ ಮಾತನಾಡಿ, ಪ್ರಾತಃಕಾಲ ನಡೆದ ಪರಿಷತ್ತಿನ ಸಕಲ ಸದಸ್ಯರ ವಾರ್ಷಿಕ ಅಧಿವೇಶನದಲ್ಲಿ ಶ್ರೀ. ಶ್ರೀಕಂಠಯ್ಯನವರು ಅನಾರೋಗ್ಯ ನಿಮಿತ್ತ ತಮ್ಮನ್ನು ಬಿಟ್ಟುಕೊಡಬೇಕೆಂದು ಪ್ರಾರ್ಥಿಸಿ ಉಪಾಧ್ಯಕ್ಷಸ್ಥಾನದಿಂದ ನಿವೃತ್ತರಾದರೆಂದೂ, ಆ ಸ್ಥಾನದ ಹೊಣೆಯನ್ನು ತಾವು ಹೊರಬೇಕಾಗಿ ಬಂದಿದೆಯೆಂದೂ ಹೇಳಿ, ನಾಲ್ಕೈದು ವರ್ಷಗಳ ಕಾಲ ಪರಿಷತ್ತಿನ ಉಪಾಧ್ಯಕ್ಷರಾಗಿದ್ದುಕೊಂಡು ಕನ್ನಡ ನಾಡು ನುಡಿಗಳಿಗೆ ಅಪಾರವಾದ

ಸೇವೆ ಸಲ್ಲಿಸಿ ಮೇಲ್ಪಂಕ್ತಿ ಹಾಕಿರುವ ಇಬ್ಬರು ಮಹನೀಯರ ಭಾವ ಚಿತ್ರಗಳು ಪರಿಷತ್ತಿನಲ್ಲಿರುವುದು ಆವಶ್ಯಕವೆಂದೂ, ಮುಂದೆಯೂ ನಮಗೆ ಈ ಮಹನೀಯರಿಬ್ಬರ ನೆರವು ಅತ್ಯಾವಶ್ಯಕವಾಗಿದೆಯೆಂದೂ ನುಡಿದರು.

ಸರ್ ಪಿ. ಎಸ್. ಶಿವಸ್ವಾಮಿ ಅಯ್ಯರವರು ಈ ಉತ್ಸವದಲ್ಲಿ ಭಾಗವಹಿಸಲು ದಯಮಾಡಿ ಒಪ್ಪಿರುವುದು ನಮ್ಮ ಸುಯೋಗವೆಂದು ಹೇಳಿ ಅವರಿಗೂ ನೆರೆದಿದ್ದ ಸಭಾ ಸದರಿಗೂ ಮತ್ತೊಮ್ಮೆ ಸ್ವಾಗತವನ್ನು ಕೋರಿದರು.

ಸರ್ ಪಿ. ಎಸ್. ಶಿವಸ್ವಾಮಿ ಅಯ್ಯರವರು ಭಾವಚಿತ್ರಗಳನ್ನು ಅನಾವರಣ ಮಾಡುತ್ತಾ ಹೀಗೆ ಹೇಳಿದರು:

ಶ್ರೀಮಾನ್ ಡಿ. ವಿ. ಗುಂಡಪ್ಪನವರು ಮತ್ತು ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ಕನ್ನಡ ಸಾಹಿತ್ಯಕ್ಕೆ ಅಪಾರವಾಗಿ ಸೇವೆ ಸಲ್ಲಿಸಿ ಪ್ರಸಿದ್ಧರಾಗಿರುವರು. ಇಂಥ ಮಹನೀಯರನ್ನು ಗೌರವಿಸಲು ಏರ್ಪಡಿಸಿರುವ ಉತ್ಸವದಲ್ಲಿ ಭಾಗವಹಿಸಲು ನನಗೆ ಅವಕಾಶ ಕೊಟ್ಟಿರುವುದಕ್ಕಾಗಿ ನನ್ನ ಹೃತ್ಪೂರ್ವಕವಾದ ವಂದನೆಗಳು.

ಶ್ರೀ. ಶ್ರೀಕಂಠಯ್ಯನವರು ಇಂಗ್ಲಿಷ್ ಪ್ರೊಫೆಸರು. ಕನ್ನಡದಲ್ಲಿ ವಿದ್ವಾಂಸರು. ಅಧ್ಯಾಪಕರಾಗಿ ಎಲ್ಲರ ಗೌರವಕ್ಕೆ ಪಾತ್ರರು. ತಮ್ಮ ಸಾಹಿತ್ಯ ಸೇವೆಯ ಜೊತೆಗೆ ಕನ್ನಡ ಸಾಹಿತ್ಯ ಪರಿಷತ್ತಿಗೆ ಒಂದು ಅಚ್ಚುಕೂಟವನ್ನು ಏರ್ಪಡಿಸಲು ಆರು ಸಾವಿರ ರೂಪಾಯಿಗಳನ್ನು ದಾನ ಮಾಡಿರುವುದು ಎಲ್ಲರ ಮೆಚ್ಚಿಗೆಯನ್ನು ಪಡೆದಿದೆ.

ಶ್ರೀ. ಡಿ. ವಿ. ಗುಂಡಪ್ಪನವರ ಪರಿಚಯ ನನಗೆ ಇನ್ನೂ ಹೆಚ್ಚಾಗಿದೆ. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಮಾತ್ರವಲ್ಲದೆ ನ್ಯಾಯವಿಧಾಯಕ ಸಭೆ, ಪತ್ರಿಕಾರಂಗಗಳಲ್ಲೂ ದುಡಿದಿದ್ದಾರೆ. ಇವರ ಸ್ವತಂತ್ರ ಅಭಿಪ್ರಾಯವೂ ಸಾರ್ವಜನಿಕ ಕ್ಷೇಮಾಭಿಲಾಷೆಯೂ ಎಲ್ಲರಿಗೂ ಮಾನ್ಯವಾಗಿದೆ. ಇವರ ಬಹುಮುಖವಾದ ಸೇವೆಯನ್ನು ಈ ರೀತಿ ಗೌರವಿಸುವುದು ಯೋಗ್ಯವಾಗಿದೆ.

ಶ್ರೀ. ಶ್ರೀಕಂಠಯ್ಯನವರು ಕನ್ನಡ ಭಾಷೆಯ 'ಪ್ಯೂರಿಸ್ಟು' ಎಂದು ಕೇಳಿದ್ದೆ. ಅವರನ್ನು ನಾನೇ ಒಮ್ಮೆ ಹೌದೇ ಎಂದು ಪ್ರಶ್ನಿಸಿದೆ. ಇದು ತಮ್ಮ ಮೇಲೆ ಒಂದು ದೊಡ್ಡ ಆಪಾದನೆಯೆಂದೂ, ತಾವು ಸಂಸ್ಕೃತ, ತೆಲುಗು, ತಮಿಳು ಭಾಷೆಗಳನ್ನೂ ಓದಿಕೊಂಡಿರುವುದಾಗಿಯೂ ತಿಳಿಸಿದರು. ಭಾಷಾಪ್ರೇಮಿಗಳನ್ನು 'ಪ್ಯೂರಿಸ್ಟ್' ಎಂದು ಕರೆದರೆ ತಪ್ಪೇನಿಲ್ಲ. ಪರಭಾಷೆಗಳ ಸಂಪರ್ಕ ಸ್ವಭಾಷೆಯ ಜಾಯಮಾನಕ್ಕೆ ಹಾನಿ ತರದಂತಿದ್ದು, ಅದನ್ನು ಬೆಳಸುವುದಕ್ಕೆ ಸಾಧಕವಾಗಿದ್ದರಾಯಿತು. ಇಂಗ್ಲಿಷ್ ಭಾಷೆ ಪ್ರಪಂಚದಲ್ಲಿ ಹರಡುವುದಕ್ಕೆ ಅದು ಇತರ ಭಾಷೆಗಳಿಂದ ಎಷ್ಟೊಂದು ಶಬ್ದಗಳನ್ನು ತೆಗೆದುಕೊಂಡಿದೆ! ಸಂಸ್ಕೃತ ಭಾಷೆಗೆ ನಾವೆಲ್ಲ ಋಣಿಗಳು. ಅದನ್ನು ನಾವು ಮರೆಯುವಂತಿಲ್ಲ.

ಎಂದು ಹೇಳಿ, ಕನ್ನಡದ ಹಿರಿಯ ಸಾಹಿತಿಗಳಿಬ್ಬರ ಭಾವಚಿತ್ರಗಳು ಈ ಮಂದಿರದಲ್ಲಿ ಕನ್ನಡ ಸೇವೆಗೆ ಅಪಾರ ಸೇವೆ ಸಲ್ಲಿಸಿದ ಮಹನೀಯರ ಚಿತ್ರಗಳೊಂದಿಗೆ ಇರುವುದು ಉಚಿತವಾಗಿದೆಯೆಂದು ಅಪ್ಪಣೆ ಕೊಡಿಸಿದರು.

ಬಳಿಕ ಶ್ರೀ.ಗಳಾದ ಎಸ್. ಜಿ. ಶಾಸ್ತ್ರಿಗಳೂ, ವಿ. ಕೃ. ಗೋಕಾಕ್ ಅವರೂ, ಎಸ್. ಶ್ರೀಕಂಠಯ್ಯನವರೂ ಮಾತನಾಡಿ, ಇಬ್ಬರು ಮಾನ್ಯ ಸಾಹಿತಿಗಳ ಗುಣಗಾನ ಮಾಡಿ, ಅವರ ಭಾವಚಿತ್ರಗಳು ಪರಿಷನ್ಮಂದಿರವನ್ನು ಅಲಂಕರಿಸುವ ವಿಚಾರದಲ್ಲಿ ಕನ್ನಡಿಗರಿಗೆ ಇರುವ ಸಂತೋಷವನ್ನು ಸೂಚಿಸಿದರು.

ಕೊನೆಯಲ್ಲಿ ಶ್ರೀ. ಕೆ. ವಿ. ರಾಘವಾಚಾರ್ಯರು ಅಧ್ಯಕ್ಷರನ್ನೂ ಭಾವಚಿತ್ರಗಳನ್ನು ಪರಿಷತ್ತಿಗೆ ದಾನಮಾಡಿರುವ ಮಹನೀಯರನ್ನೂ ವಂದಿಸಿದ ಮೇಲೆ ಉತ್ಸವ ಮುಗಿಯಿತು.

## ಕನ್ನಡ ಸುದ್ದಿ

**ಪ್ರಿನ್ಸಿಪಲ್ ವಿ. ಕೃ. ಗೋಕಾಕ್ ಬಿ.ಎ., (ಆಕ್ಸನ್), ಅವರ**
**ಮತ್ತು**
**ಪ್ರೊ. ರಂ ಶ್ರೀ. ಮುಗಳಿ, ಎಂ.ಎ., ಬಿ.ಟಿ. ಅವರ**

### ಬೆಂಗಳೂರಿನ ಕಾರ್ಯಕ್ರಮ

೨೧–೧೨–೪೨ನೆಯ ಸಂಜೆ ಕೋಟೆ ಹೈಸ್ಕೂಲಿನ ಉಪಾಧ್ಯಾಯರ ಸಂಘದಲ್ಲಿ 'ಸುಖ' ಎಂಬುದರ ಮೇಲೆ ಪ್ರಿ. ಗೋಕಾಕರು ಇಂಗ್ಲಿಷಿನಲ್ಲಿ ಮಾತನಾಡಿದರು. ಅದೇ ಸಂಜೆ ಮಾನ್ಯ ಅತಿಥಿಗಳಿಬ್ಬರೂ ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದಲ್ಲಿ ಕಾರ್ಯಕ್ರಮ ನಡಸಿಕೊಟ್ಟರು.

೨೨–೧೨–೪೨ನೆಯ ಸಂಜೆ ಕೋಟೆ ಹೈಸ್ಕೂಲಿನಲ್ಲಿ 'ಆಧುನಿಕ ಕನ್ನಡ ಸಾಹಿತ್ಯ' ಎಂಬುದರ ಮೇಲೆ ಪ್ರೊ. ಮುಗಳಿಯವರು ಮಾತನಾಡಿದರು.

ಅದೇ ಸಂಜೆ ಸೆಂಟ್ರಲ್ ಕಾಲೇಜಿನ ಇಂಗ್ಲಿಷ್ ಸಂಘದವರು ಪ್ರಿ. ಗೋಕಾಕರನ್ನು ಆಹ್ವಾನಿಸಿದ್ದರು. ಅತಿಥಿಗಳು 'ಭಾರತೀಯರೂ ಇಂಗ್ಲಿಷ್ ಕವಿತಾ ವ್ಯಾಸಂಗವೂ' ಎಂಬುದನ್ನು ಕುರಿತು ಮಾತನಾಡಿದರು.

೨೪–೧೨–೪೨ನೆಯ ಸಂಜೆ ಅತಿಥಿಗಳಿಬ್ಬರೂ ಮಹಾರಾಣೀ ಕಾಲೇಜಿನ ಕರ್ಣಾಟಕ ಸಂಘದ ವಾರ್ಷಿಕೋತ್ಸವದಲ್ಲಿ ಭಾಗವಹಿಸಿದ್ದರು. ಶ್ರೀ. ಮುಗಳಿಯವರ ಕಾವ್ಯಗಾಯನವೂ ಶ್ರೀ. ಗೋಕಾಕರ ಉಪನ್ಯಾಸವೂ ನಡೆಯಿತು.

ಅದೇ ಸಂಜೆ ಶ್ರೀ. ಮುಗಳಿಯವರು ಇಂಟರ್‌ಮೀಡಿಯೆಟ್ ಕಾಲೇಜ್ ಅಸೋಸಿಯೇಷನ್ನಿನಲ್ಲಿ ಭಾಷಣ ಮಾಡಿದರು.

### ಸೆಂಟ್ರಲ್ ಕಾಲೇಜು ಕರ್ಣಾಟಕ ಸಂಘ, ಬೆಂಗಳೂರು

ಸಂಘದಲ್ಲಿ ನಡೆದ **ಗೀತಾ ಜಯಂತಿ ಉತ್ಸವ** ಮತ್ತು ಭಾಷಣ ನರ್ತನಗಳ ವಿವರ:

೮–೧೨–೪೨ ಶ್ರೀ ಕೃಷ್ಣ ಮತ್ತು ಗೀತೆ–ಶ್ರೀ. ವಿ. ಸೀತಾರಾಮಯ್ಯನವರು, ಎಂ.ಎ. ೯–೧೨–೪೨ 'ದುಗ್ಧಂ ಗೀತಾಮೃತಂ ಮಹತ್'–ಶ್ರೀ. ಎಂ. ಎ. ಕೃಷ್ಣಸ್ವಾಮಿ, ಎಂ.ಎ. ಅವರು. ೧೦–೧೨–೪೨ 'ತಸ್ಯ ಪ್ರಜ್ಞಾ ಪ್ರತಿಷ್ಠಿತಾ'–ಶ್ರೀ. ಎಸ್. ರಾಮಚಂದ್ರರಾವ್, ಎಂ.ಎ. ಅವರು. ೧೧–೧೨–೪೨ 'ನ ಹಿ ಜ್ಞಾನೇನ ಸದೃಶಂ'–ಶ್ರೀ. ಡಿ. ಎಸ್. ಸುಬ್ಬರಾಮಯ್ಯ, ಎಂ.ಎಸ್‌ಸಿ. ಅವರು. ೨೧–೧೨–೪೨ 'ಕಾವ್ಯವಾಚನ'–ಶ್ರೀ. ಪ್ರೊ. ರಂ. ಶ್ರೀ. ಮುಗಳಿ, ಎಂ.ಎ., ಬಿ.ಟಿ. ಅವರು, ಸಾಂಗ್ಲಿ; 'ಸೌಂದರ್ಯ ದರ್ಶನ'–ಶ್ರೀ. ಪ್ರಿ. ವಿ. ಕೃ. ಗೋಕಾಕ್, ಬಿ.ಎ. (ಆಕ್ಸನ್), ಅವರು, ಸಾಂಗ್ಲಿ; ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರರ ಅಧ್ಯಕ್ಷತೆಯಲ್ಲಿ. ೨೪–೧೨–೪೨ 'ನೃತ್ಯಕಲೆ' ವಿಷಯವಾಗಿ ಶ್ರೀ. ಯು. ಎಸ್. ಕೃಷ್ಣರಾಯರ ಉಪನ್ಯಾಸ. ಅವರ ಶಿಷ್ಯರಾದ ಕುಮಾರಿ ಅಕ್ಕಮಹದೇವಿ ಮತ್ತು ಶ್ರೀ. ದಿವಾಕರ ಅವರಿಂದ ನರ್ತನ ನಡೆಯಿತು.

### ಲಾ ಕಾಲೇಜು ಕರ್ನಾಟಕ ಸಂಘ, ಬೆಳಗಾಂವಿ

ಲಾ ಕಾಲೇಜು ಕರ್ನಾಟಕ ಸಂಘದ ಈ ವರುಷದ ಮೊದಲ ಹಬ್ಬ ದಿನಾಂಕ ೧೨–೧೨–೪೨ನೆಯ ದಿನ ಧಾರವಾಡದ ಸುಪ್ರಸಿದ್ಧ ಸಾಹಿತ್ಯ ಸಂಶೋಧಕರಾದ ಶ್ರೀ. ಶಂ. ಬಾ. ಜೋಶಿ ಅವರಿಂದ ನಡೆಯಿತು. ಹಿರಿಯ ಅಧ್ಯಾಪಕರಾದ ಶ್ರೀ. ಮಜಲಿ ದತ್ತರಾಯರು ಅಧ್ಯಕ್ಷಸ್ಥಾನವನ್ನಲಂಕರಿಸಿದ್ದರು. ಶ್ರೀ. ಜೋಶಿ ಅವರು 'ಭಾಷೆಯೂ, ಸಂಸ್ಕೃತಿಯೂ' ಎಂಬ ವಿಷಯವಾಗಿ "ಮನುಷ್ಯನನ್ನು ಭಾಷೆ ರೂಪಿಸುತ್ತದೆ. ಭಾಷೆ ಆಯಾ ಕಾಲದ ಲೋಕರೀತಿ, ಮನೋಭಾವಗಳ ಪ್ರತಿಬಿಂಬ. ಭಾಷೋನ್ನತಿ ದೇಶೋನ್ನತಿಯ ನಿದರ್ಶನ. ನಮ್ಮ ಭಾಷೆಗೆ ಪೋಷಕವಾಗುವಷ್ಟು ಮಾತ್ರ ಅನ್ಯಭಾಷಾ ಪ್ರಾವೀಣ್ಯ ಇರಬೇಕು. ಭಾಷೆಗೂ, ಸಂಸ್ಕೃತಿಗೂ ದೇಹಾತ್ಮರ ನಿಕಟ ಸಂಬಂಧ. ಮಾತಿನಲ್ಲಿ ಸಂಸ್ಕೃತಿ ಪ್ರಾರಂಭವಾಗಿ, ಸಂಸ್ಕೃತಿಯ ಪರಮಾವಧಿಯಲ್ಲಿ ಮಾತು ಮಾಯವಾಗಿ ಭಾವ ಮಾತ್ರ ಉಳಿಯುತ್ತದೆ. ಕನ್ನಡದಲ್ಲಿ ಉಚಿತ ಶಬ್ದಗಳ ಕೊರತೆಯಿಲ್ಲ, ನಮ್ಮತನದ ಅರಿವು, ಆಳವಾದ ಪರಿಶ್ರಮ ಮಾತ್ರ ಬೇಕು. ನಮ್ಮ ಕೈಯಲ್ಲಿ ಕನ್ನಡ ಭಾಷೆ ಹಿಗ್ಗಲಿ!" ಎಂದು ಮುಂತಾಗಿ ವಿದ್ವತ್ಪೂರ್ಣವಾದ ಭಾಷಣ ಮಾಡಿ, ಸಂಘವನ್ನು ಆಶೀರ್ವದಿಸಿದರು.

ದಿನಾಂಕ ೧೮ನೆಯ ದಿನ ಶ್ರೀ. ಅ. ನ. ಕೃಷ್ಣರಾಯರು ಆಮಂತ್ರಿತರಾಗಿ ಆಗಮಿಸಿದ್ದರು. ಮಾನ್ಯ ಅತಿಥಿಗಳು 'ನಗೆ'ಯ ಬಗ್ಗೆ ಪ್ರಾಚಾರ್ಯ ಕೇಳಕರರ ಅಧ್ಯಕ್ಷತೆಯಲ್ಲಿ ಹೃದಯಂಗಮವಾಗಿ ಮಾತನಾಡಿದರು. ಅಂದು ರಾತ್ರಿ 'ವಿವಿಧ ವಿನೋದಾವಳಿ' ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಶ್ರೀ. ಮೈ. ಶ್ರೀ. ಮಾಧವರಾವ ಅವರ ಪರಿಶ್ರಮದ ಫಲವಾಗಿ ಅಭಿನಯಿಸಲಾದ ಪ್ರೊ. ನಾ. ಕಸ್ತೂರಿ ಅವರ 'ಗಗ್ಗಯ್ಯನ ಗಡಿಬಿಡಿ' ನಾಟಕಕ್ಕೆ ದಯಮಾಡಿಸಿದ ಶ್ರೀ. ಅ. ನ. ಕೃಷ್ಣರಾಯರು ಸಂಘದ ಸದಸ್ಯರ ನಾಟ್ಯ ಕಲೆಯನ್ನು ಶ್ಲಾಘಿಸಿದರು.

**ಪ್ರತಿ ಶುಕ್ರವಾರ ಹೊರಡುತ್ತದೆ**

**Reg. No. M. 3975**

| |
|---|
| ವಾರ್ಷಿಕ ಚಂದಾ: ರೂ. ೧-೮-೦ |
| **ಪರಿಷತ್ತಿನ ಸದಸ್ಯರಿಗೆ ಉಚಿತ** |
| ಅಂಚೆ ವೆಚ್ಚ ಬೇರೆ: ಆಣೆ ೧೨ |
| ಬಿಡಿ ಪತ್ರಿಕೆ: ೬ ಕಾಸು |




ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

| |
|---|
| ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ. |

ಸಂಪುಟ ೫

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ

ಬೆಂಗಳೂರು: ಶುಕ್ರವಾರ, ಜನವರಿ ೮, ೧೯೪೩

ಸಂಚಿಕೆ ೧೧

## ಪರಿಷತ್ತಿನ ಮುನ್ನಡೆ

೨

ಹೀಗೆ ನಮ್ಮ ಜನಜೀವನದ ಈ ಕೇಂದ್ರವನ್ನು ಬೆಳಗಲು ಮೊದಲು ಆಗಬೇಕಾಗಿರುವ ಕಾರ್ಯ ಎಂದರೆ ಕನ್ನಡ ನಾಡಿನ ಎಲ್ಲ ಪ್ರಾಂತಗಳಿಂದ ಸಾಕಾದಷ್ಟು ಜನ ಅದರ ಸದಸ್ಯರಾಗತಕ್ಕದ್ದು. ತಕ್ಕಮಟ್ಟಿಗೆ ಒಂದು ಹದದಲ್ಲಿರುವ ನಾಡಿನಲ್ಲಾದರೂ ಇಂಥ ಸಂಸ್ಥೆಗೆ ಎಲ್ಲಾ ಪ್ರಾಂತದಿಂದಲೂ ಪ್ರತಿನಿಧಿಗಳು ಇರಬೇಕು. ಕನ್ನಡದ ಸ್ಥಿತಿಯಲ್ಲಿ ಈ ಆವಶ್ಯಕತೆ ಮತ್ತಷ್ಟು ಹೆಚ್ಚು. ವಿಸ್ತಾರದಲ್ಲಿ ಅಷ್ಟೇನೂ ಹಿರಿದಲ್ಲವಾದರೂ ನಮ್ಮ ನಾಡು ಹದದಲ್ಲಿ ಬಹುತೆರನಾಗಿದೆ. ಒಂದೊಂದು ಭಾಗದ ಪರಿಸ್ಥಿತಿ ಒಂದೊಂದು ರೀತಿ. ಒಂದೊಂದು ಪ್ರಾಂತದ ಸಮಸ್ಯೆಯೂ ಬೇರೆ ಬೇರೆ. ಕೇಂದ್ರದ ಒಂದು ಸಂಸ್ಥೆ ಒಂದೊಂದು ಪ್ರಾಂತವನ್ನು ಕುರಿತ ವಿವರಗಳನ್ನು ಅಲ್ಲಿಯ ಜನರಿಂದ ಅರಿಯಬಹುದು ಹೊರತು ಬೇರೆಯ ದಾರಿಯನ್ನು ಕಾಣದು. ಈಗ ನಮ್ಮ ಪರಿಷತ್ತಿನ ಸದಸ್ಯರಾಗಿರುವವರ ಪಟ್ಟಿಯನ್ನು ನೋಡಿದರೆ, ಯಾವ ಪ್ರಾಂತದಿಂದಲೂ ಸಾಕಾದಷ್ಟು ಜನ ಬಂದಿರುವರೆಂದು ಹೇಳುವಂತಿಲ್ಲ. ಕೆಲವು ಪ್ರಾಂತಗಳಿಂದಂತೂ ಸದಸ್ಯರು ಬಂದೇ ಇಲ್ಲ; ಅಥವಾ ಅತ್ಯಲ್ಪ ಸಂಖ್ಯೆಯಲ್ಲಿ ಬಂದಿದಾರೆ. ಇದು ನಮಗೆ ಹಿತವೂ ಅಲ್ಲ, ಕ್ಷೇಮವೂ ಅಲ್ಲ. ಎಲ್ಲ ಪ್ರಾಂತಗಳಲ್ಲಿಯೂ ನಾವು ಸದಸ್ಯರ ಸಂಖ್ಯೆಯನ್ನು ಹೆಚ್ಚಿಸಿಕೊಳ್ಳಬೇಕು. ಅದರಲ್ಲಿಯೂ ಮುಖ್ಯವಾಗಿ ದಕ್ಷಿಣ ಕನ್ನಡ, ಉತ್ತರ ಕನ್ನಡ, ಉತ್ತರ ಕರ್ಣಾಟಕದ ಸಂಸ್ಥಾನಗಳು, ಬೊಂಬಾಯಿ, ಕಲ್ಕತ್ತ, ಮದರಾಸು, ತಂಜಾವೂರು, ಇನ್ನೂ ಇತರ ಕಡೆಗಳಲ್ಲಿ ನೆಲಸಿರುವ ಕನ್ನಡಿಗರ ಸಮುದಾಯಗಳು ಈ ಭಾಗಗಳಿಂದ ಸದಸ್ಯ ಸಂಪತ್ತನ್ನು ಬೆಳಸಿಕೊಳ್ಳಬೇಕಾಗಿದೆ. ಆದಕಾರಣ ಈ ಪ್ರಾಂತಗಳ ಈ ನಗರಗಳ ಈ ಸಮುದಾಯಗಳ ಮುಖಂಡರಲ್ಲಿ ನಾನು ಒಂದು ಪ್ರಾರ್ಥನೆಯನ್ನು ಮಾಡುತ್ತೇನೆ: ಅವರು ಕನ್ನಡಿಗರ ಒಟ್ಟು ಬೆಳವಣಿಗೆಯ ದೃಷ್ಟಿಯಿಂದ, ತಮ್ಮ ಸುತ್ತಣ ಕನ್ನಡ ಪ್ರಜೆಯ ಹಿತದ ದೃಷ್ಟಿಯಿಂದ ಈ ಕೇಂದ್ರ ಸಂಸ್ಥೆಗೆ ಬೇಗನೆ ಸದಸ್ಯರಾಗಿ ಸೇರಬೇಕು. ತಮ್ಮ ಪ್ರಾಂತ ನಗರ ಅಥವಾ ಸಮುದಾಯದ ಪರಿಸ್ಥಿತಿಯೇನು, ಅದನ್ನು ಸರಿಪಡಿಸುವುದು ಹೇಗೆ, ಆ ಬಗ್ಗೆ ಯಾವ ಕಾರ್ಯಕ್ರಮವನ್ನು ಕೈಕೊಳ್ಳಬೇಕು ಎಂದು ಮುಂತಾದ ವಿಷಯಗಳಲ್ಲಿ ಪರಿಷತ್ತಿಗೆ ತಮ್ಮ ಅನುಭವ ಶಕ್ತಿ ಸಾಮರ್ಥ್ಯಗಳ ಪ್ರಯೋಜನವನ್ನು ಒದಗಿಸಿ ಅಂಥ ಕಾರ್ಯಕ್ರಮವನ್ನು ಒಟ್ಟು ಕನ್ನಡದ ಜನತೆಯ ಹೆಸರಿನಲ್ಲಿ ಆರಂಭಿಸುವಂತೆ ಮಾಡಬೇಕು.

ಇಂಥ ಕೆಲಸ ಏನಿದೆ ಎಂದು ತಿಳಿದು ಪರಿಷತ್ತೇ ಇದನ್ನು ಮಾಡಬಹುದಲ್ಲ ಎಂದು ಯಾರಾದರೂ ಹೇಳುವ ಸಂಭವ ಉಂಟು. ಇಂಥ ಮಾತಿನಲ್ಲಿ ಪರಿಷತ್ತು ಎಂದರೆ ಅದರ ಸದಸ್ಯ ಸಮುದಾಯವಲ್ಲದೆ ಬೇರೆ ಯಾವುದೋ ಒಂದು ವಸ್ತು; ಅದು ಈ ಕೆಲಸ ಆ ಕೆಲಸವನ್ನು ಜನಕ್ಕಾಗಿ ಮಾಡಬೇಕು: ಎಂಬ ಭಾವ ಅಡಗಿರುತ್ತದೆ. ಪರಿಷತ್ತು ಎನ್ನುವುದು ಸದಸ್ಯರ ಸಮುದಾಯ. ಎಲ್ಲ ಪ್ರಾಂತಗಳ ಸದಸ್ಯರು ಸಾಕಾದಷ್ಟು ಜನ ಸೇರಿದರೆ ಪರಿಷತ್ತು ಆಡುವ ಮಾತು ಕನ್ನಡ ನಾಡಿನ ಎಲ್ಲ ಜನರ ಮಾತಾಗುತ್ತದೆ. ಸದಸ್ಯರ ಸಂಖ್ಯೆ ಕಡಮೆಯಾಗಿದ್ದರೆ, ಯಾವುದಾದರೂ ಒಂದು ಪ್ರಾಂತದಿಂದ ಸದಸ್ಯರು ಇಲ್ಲದಿದ್ದರೆ, ಅಥವಾ ಅಲ್ಪಸಂಖ್ಯಾಕರಾಗಿದ್ದರೆ ಪರಿಷತ್ತು ಅಷ್ಟುಮಟ್ಟಿಗೆ ಶಕ್ತಿಹೀನವಾಗುತ್ತದೆ. ಮಂಗಳೂರು ಕಾರವಾರದ ಜಿಲ್ಲೆಗಳಿಂದ ಸದಸ್ಯರು ಬಂದಿರುವ ಪರಿಷತ್ತು ಆ ಪ್ರಾಂತಗಳ ಬಗ್ಗೆ ಸರಕಾರಗಳಲ್ಲಿ ಏನಾದರೊಂದು ಪ್ರಾರ್ಥನೆ ಮಾಡಬಹುದು. ಸಂಸ್ಥಾನಗಳ ಪ್ರಜೆಗಳು ಸದಸ್ಯರಾಗಿದ್ದರೆ ಆ ಸಂಸ್ಥಾನಗಳ ರಾಜರಲ್ಲಿ ನಾವು ಕುಂದು ಕೊರತೆಗಳನ್ನು ತಿಳಿಸಬಹುದು. ಹಾಗಿಲ್ಲದೆ ಪರಿಷತ್ತು ಇಂಥ ಮಾತನ್ನೆತ್ತಿದರೆ ಹೊರಗಿನವರು ಬಂದು ಸಮಾಧಾನವಾಗಿರುವ ನಮ್ಮ ಜನದಲ್ಲಿ ಗಲಭೆ ಎಬ್ಬಿಸುತ್ತಿದಾರೆ ಎಂದು ಅವರು ಭಾವಿಸಬಹುದು. ನಮ್ಮ ಜನ ರಾಜ್ಯಗಳನ್ನು ಆಳಿದ ಕಾಲದಲ್ಲಿ, ಊರುಗಳನ್ನು ನಡಸಿದ ಕಾಲದಲ್ಲಿ, ದೇವಾಲಯ, ಮಠ, ಸತ್ರಗಳನ್ನು ಸಲಹಿದ ಕಾಲದಲ್ಲಿ ಇಂಥ ಮಾತನ್ನು ನಾವು ಹೇಳಿಕೊಡಬೇಕಾಗಿರಲಿಲ್ಲ. ನೂರಾರು ವರ್ಷದಿಂದ ಹೊರಗಿನ ಜನರು ನಮ್ಮನ್ನು ಆಳುತ್ತ, ನಮ್ಮಲ್ಲಿ ನಾಡು ನಮ್ಮದು, ಆಡಳಿತ ನಮ್ಮದು ಎಂಬ ಭಾವನೆ ಅಳಿದು ನಾವು ತೆರುವುದನ್ನು ತೆತ್ತರೆ ಸರಕಾರ ತನ್ನ ಕೆಲಸವನ್ನು ಮಾಡಬೇಕು ಎನ್ನುವ ಮನೋಭಾವ ಬೇರೂರಿದೆ. ಇದರಿಂದ ಗ್ರಾಮಗಳು ಕೆಟ್ಟವು, ನಾಡುಗಳು ಕೆಟ್ಟವು. ಚೈತ್ಯ, ಆಲಯ, ಮಠ, ಸತ್ರಗಳು ಕೆಟ್ಟವು. ಈ ದುಸ್ಥಿತಿಯಿಂದ ಪಾರಾಗೋಣ ಎಂದು ಒಂದು ಸಂಸ್ಥೆಯನ್ನು ಮಾಡಿಕೊಂಡರೆ ಅದೇ ಮನೋಭಾವ ಅದರ ವಿಷಯದಲ್ಲಿಯೂ ತಲೆದೋರುತ್ತದೆ. ಒಂದು ಪ್ರಾಂತದ ಜನ ಒಂದು ಮಾತನ್ನು ಹೇಳಿದರೆ ಅದಕ್ಕೆ ತೂಕ ಸಾಲದೆ ಮಾತ್ರ ಹೋಗುತ್ತದೆ. ಹೊರಗಿನ ಪ್ರಾಂತದ ಜನರು ಆ ಮಾತನ್ನು ಹೇಳಿದರೆ ಅದು ಗೊಂದಲಗಾರರ ಹಾವಳಿ ಎನಿಸುತ್ತದೆ. ಪ್ರಾಂತದ ಒಳಗಿನವರು ಪ್ರಾಂತದ ಹೊರಗಿನವರು ಜೊತೆಯಾಗಿ ಹೇಳುವ ಮಾತು ತೂಕದ ಮಾತಾಗಿ ಫಲಕಾರಿಯಾಗುತ್ತದೆ. ಈ ತತ್ತ್ವವನ್ನು ಗ್ರಹಿಸಿ ಸಾಧ್ಯವಾದಷ್ಟು ಜನ ಪರಿಷತ್ತಿಗೆ ಸದಸ್ಯರಾಗುವಂತೆ ಮಾಡತಕ್ಕದ್ದು ಪ್ರಾಜ್ಞರ ಮತ್ತು ದೇಶಪ್ರೇಮಿಗಳ ಕರ್ತವ್ಯ.

ಪ್ರಾಂತಗಳ ದೃಷ್ಟಿಯಿಂದ ಮಾತ್ರವಲ್ಲದೆ ಇನ್ನೆರಡು ದೃಷ್ಟಿಯಿಂದ ಪರಿಷತ್ತಿನ ಸದಸ್ಯ ಸಮುದಾಯ ಬೆಳೆಯಬೇಕಾಗಿದೆ. ಕನ್ನಡ ಸಾಹಿತ್ಯ ಪರಿಷತ್ತು ಕನ್ನಡದಲ್ಲಿ ಪುಸ್ತಕ ಬರೆಯುವರಿಗಾಗಿ ಅಥವಾ ಕನ್ನಡ ಭಾಷೆಯನ್ನು ಆಡುವವರಿಗಾಗಿ ಬಲ್ಲವರಿಗಾಗಿ ಮಾತ್ರವೆ ಆಗಿರುವ ಸಂಸ್ಥೆಯಲ್ಲ. ಪರಿಷತ್ತಿಗೆ ಸದಸ್ಯರಾಗಿ ಎಂದು ಕರೆದರೆ ನಾವು ಬಂದು ಅಲ್ಲಿ ಮಾಡುವುದೇನು, ನಮಗೆ ಕನ್ನಡ ಬರುವುದಿಲ್ಲ ಎಂದು ಹೇಳುವವರು ಅನೇಕರು. ಇವರು ಮನೆಯಲ್ಲಿ ಆಡುವುದು ಕನ್ನಡ; ಹೊರಗಡೆ ಬಳಸುವುದು ಕನ್ನಡ. ಕನ್ನಡ ಸಾಹಿತ್ಯ ಪರಿಷತ್ತು ಇಂಥವರೆಲ್ಲರಿಗೂ ಸಂಬಂಧಪಟ್ಟ ಸಂಸ್ಥೆ. ಇದನ್ನೇ ನಾವು ಮನಗಾಣಬೇಕಾಗಿದೆ. ಜೊತೆಗೆ ಇನ್ನೊಂದು ಮುಖ್ಯವಾದ ಮಾತು ಇದೆ. ಕನ್ನಡ ಎನ್ನುವುದು ಒಂದು ನುಡಿಯ ಹೆಸರು ಮಾತ್ರವಲ್ಲ. ಒಂದು ನಾಡಿನ ಹೆಸರೂ ಹೌದು. ಪ್ರಾಯಶಃ ನಾಡ ಹೆಸರು ನುಡಿಗೆ ಬಂದಿದೆ. ಆದುದರಿಂದ ಕನ್ನಡಿಗನೆಂದರೆ ಕನ್ನಡವನ್ನು ತಾಯಿನುಡಿಯಾಗಿ ಉಳ್ಳವನೆಂದು ಅರ್ಥಮಾಡುವುದಕ್ಕಿಂತ ಕನ್ನಡ

(೫ನೆಯ ಪುಟಕ್ಕೆ)

# ಕನ್ನಡ ನುಡಿ

**ಶುಕ್ರವಾರ, ಜನವರಿ ೮, ೧೯೪೩**

## ಶ್ರೀ ಜಯಕರ್ ಅವರ ಭಾಷಣ

ಇಂದೂರಲ್ಲಿ ನಡೆದ ೧೮ನೆಯ ಅಖಿಲ ಭಾರತ ಶಿಕ್ಷಣ ಸಮ್ಮೇಳನದ ಅಧ್ಯಕ್ಷರಾಗಿ ರೈಟ್ ಆನರಬಲ್ ಶ್ರೀ. ಎಂ.ಆರ್. ಜಯಕರ್ ಅವರು ಕಳೆದ ಡಿಸೆಂಬರ್ ೨೭ನೆಯ ತಾರೀಖು ಅಮೋಘವಾದ ಭಾಷಣವೊಂದನ್ನು ಮಾಡಿದರು. ಅವರು ಹೇಳಿದ ಮಾತಿನ ಮುಖ್ಯಾಂಶವನ್ನು ಸ್ಥೂಲವಾಗಿ ಹೀಗೆ ಸಂಗ್ರಹಿಸಬಹುದು:

ಯುದ್ಧಕಾಲವೆಂಬ ಕಾರಣದಿಂದ ನಾಡಿನ ವಿದ್ಯಾಭ್ಯಾಸದ ಕಡೆ ಗಮನ ಕೊಡದೆ ಇರಬಾರದು; ಅದಕ್ಕಾಗಿ ಮಾಡುತ್ತಿದ್ದ ವೆಚ್ಚವನ್ನು ಅನಗತ್ಯ ಎಂಬ ನೆವ ಹೇಳಿ ಕಡಮೆ ಮಾಡಕೂಡದು; ಅದು ಕ್ಷೇಮಕರವಲ್ಲ; ವಿವೇಕವಂತು ಖಂಡಿತ ಅಲ್ಲ. ಉತ್ತಮ ವ್ಯಕ್ತಿಗಳನ್ನು ಎಂದರೆ ಮೇಲ್ತರದ ಪ್ರಜೆಗಳನ್ನೂ ನಾಯಕರನ್ನೂ ತಯಾರಿಸುವುದು,– ಆ ಮೂಲಕ ಮಾನವ ಸಮಾಜದ ಹಿತಸಾಧನೆ ಮಾಡುವುದು ವಿದ್ಯಾಭ್ಯಾಸದ ಗುರಿ. ಅಂಥ ವಿದ್ಯೆ ದೇಶದ ಸಂಪ್ರದಾಯಗಳಿಗೂ ಸಂಸ್ಕೃತಿ ಸ್ಥಿತಿಗತಿಗಳಿಗೂ ಆವರಣ ವಿಶೇಷಗಳಿಗೂ ಹೊಂದಬೇಕು; ಅದು ರೂಪುಗೊಳಿಸುವ ಗುಣವೂ ಸ್ವಭಾವವೂ ಸ್ವತಂತ್ರ ಮತ್ತು ಸರ್ವಹಿತದೃಷ್ಟಿಯುಳ್ಳ ವ್ಯಕ್ತಿಗಳದಾಗಬೇಕು. ನಮ್ಮ ವಿದ್ಯಾರ್ಥಿಗಳಿಗೆ ಸೆಕಂಡರಿ ತರಗತಿಗಳಲ್ಲೆಲ್ಲ ಪೂರ್ತಿಯಾಗಿಯೂ ವಿಶ್ವವಿದ್ಯಾನಿಲಯದಲ್ಲಿ ಕೂಡ ಶಕ್ಯವಾದಷ್ಟೆಲ್ಲವೂ ತಾಯ್ನುಡಿ*ಯಲ್ಲಿಯೇ ವ್ಯಾಸಂಗಾನುಕೂಲ ಕಲ್ಪಿತವಾಗಬೇಕು. ಶೀಲ ಮತ್ತು ಯೋಗ್ಯತಾ ಶಿಕ್ಷಣದ ಜೊತೆಗೆ ಅವಕ್ಕೆ ಅಂಗವಾಗಿ ಸೈನಿಕ ಶಿಕ್ಷಣ ದೊರೆಯುವ ಏರ್ಪಾಡಾಗುವುದೂ ಅಗತ್ಯ.

ಅವರು ತಮ್ಮ ವಾದವನ್ನು ಹೀಗೆ ಮಂಡಿಸಿದರು:

ಯುದ್ಧವೆಂಬ ನೆವದಿಂದ ವಿದ್ಯಾಭ್ಯಾಸದ ವಿಸ್ತರಣಕ್ಕೂ ಅದರ ಸಂಸ್ಕರಣ ಸಂಯೋಜನೆಗಳಿಗೂ ಗಮನಹರಿಸದಿರುವುದು ದೇಶಹಿತಕ್ಕೆ ವಿರೋಧವಾದದ್ದು. ಇಂತಹ ಸಮಯದಲ್ಲಿಯೇ ವಿಶೇಷವಾಗಿ ಜನದ ಮನಸ್ಸು ಧರ್ಮ ಸಂಸ್ಕೃತಿಗಳ ವಿಷಯದಲ್ಲಿ ಆಳವಾಗಿ ಸೂಕ್ಷ್ಮವಾಗಿ ಆವೇಗಗೊಳ್ಳುವುದು; ಉತ್ಸುಕವಾಗುವುದು; ಅವುಗಳ ದುಷ್ಫಲ ಕಣ್ಣಿಗೆ ಕಟ್ಟಿದಂತೆ ಕಾಣುತ್ತಿರುವುದರಿಂದ ಬಹುದಿನದ ಅನ್ಯಾಯ ಅಸಮತೆಗಳನ್ನು ಕುರಿತು ತೀವ್ರವಾಗಿ ಚಿಂತಿಸುತ್ತ ನಿವಾರಣೋಪಾಯಗಳ ಕಡೆಗೂ ಒಲಿಯುವುದು. ಯುದ್ಧ ಮುಗಿದ ಮೇಲೆ ತಕ್ಷಣದ ಬೇರೆ ಕಾರ್ಯಗಳು ತಮ್ಮ ಕಡೆಗೆ ಜನ ಮನವನ್ನು ಸೆಳೆಯುವುವು. ಸಾವಧಾನವಾಗಿ ವಿದ್ಯಾ ವಿಷಯವನ್ನು ಕುರಿತು ಪರಿಶೀಲಿಸುವ ಅವಕಾಶವಾಗಲಿ ಚಿತ್ತಸ್ವಾಸ್ಥ್ಯವಾಗಲಿ ಆಗ ಇರುವುದಿಲ್ಲ. ಎಲ್ಲರ ಧ್ಯೇಯವಾಗಿ ಸ್ವಾತಂತ್ರ್ಯ, ಸತ್ಯ, ಸೌಂದರ್ಯ, ಜನತೆಯ ಐಕಮತ್ಯ, ಶಾಂತಿ ಮುಂತಾದುವನ್ನು ಕುರಿತು ಆಸ್ಥೆಯುಂಟಾಗುವಂತಹ ಮತ್ತು ಅವನ್ನು ಬಾಳ ಸಾಧನವನ್ನಾಗಿ ಮಾಡಿಕೊಳ್ಳುವ ಉತ್ಸಾಹ ಹುಟ್ಟಿಸುವಂತಹ ವಿದ್ಯಾ ವ್ಯವಸ್ಥೆಯನ್ನು ಮುಂಚೆಯೇ ರಚಿಸಿಕೊಂಡಿರುವುದು ಒಳ್ಳೆಯದು. ಯುದ್ಧ ಮುಗಿದ ಕೂಡಲೆ ಈ ಯೋಜನೆಗಳನ್ನು ಕಾರ್ಯಕ್ಕೆ ತಿರುಗಿಸುವ ಪ್ರಯತ್ನ ಆಗ ಸುಲಭವಾಗುತ್ತದೆ. ಇಂಗ್ಲಂಡಿನಲ್ಲಿ ಹಿಂದಿನ ಯುದ್ಧಕಾಲದಲ್ಲಿಯೇ ಈ ಬಗೆಯ ಪ್ರಯತ್ನ ನಡೆಯುತ್ತಿತ್ತು. ಇಂದು ಕೂಡ ಶ್ರೀ. ಆರ್.ಎ. ಬಟ್ಲರ್ ಮುಂತಾದವರ ನಾಯಕತ್ವದಲ್ಲಿ ವಿದ್ಯಾಭ್ಯಾಸ ಪುನರ್ವ್ಯವಸ್ಥೆಯ ವಿಚಾರ ಒಂದು ವ್ರತದೀಕ್ಷೆಯಂತೆ ಮುಂದುಯುತ್ತಿದೆ. ಯುದ್ಧಕಾಲವೆಂದು ಅಲ್ಲಿನ ಜನನಾಯಕರು ಕಯ್ ಬಾಯ್ ಕಟ್ಟಿಕೊಂಡು ಜಡರಾಗಿ ಕುಳಿತಿಲ್ಲ. ನಮ್ಮಂತೆಯೇ ಇರುವ ಚೀನಾದಂತಹ ಬಡದೇಶದಲ್ಲಿ ಕೂಡ ನಾಡಿನ ಸಾರ್ವಜನಿಕ ವರಮಾನದಲ್ಲಿ ಕೇಂದ್ರ ಭಾಗದಿಂದ ೧೫% ಭಾಗವನ್ನೂ ಪ್ರಾಂತ ಭಾಗದಿಂದ ೩೦% ಭಾಗವನ್ನೂ ವಿದ್ಯಾಪ್ರಚಾರಕ್ಕಾಗಿಯೇ ಮೀಸಲಿಡುತ್ತಿರುವ ಸಂಗತಿ ನಮ್ಮ ದೇಶಕ್ಕೆ ಮಾರ್ಗದರ್ಶಿಯಾಗಬೇಕು. ಏಕೆಂದರೆ ಹೊಸ ಪ್ರಪಂಚ ಸೃಷ್ಟಿಯಾಗುತ್ತದೆ. ಅದರ ಕ್ಷೇಮ ಲಾಭ ಸುಭಿಕ್ಷಗಳನ್ನು ಯೋಚಿಸಿ, ರೂಪಿಸಿ, ಸಾಧಿಸಬೇಕಾದ ವ್ಯಕ್ತಿಗಳು ಈಗಿಂದ ಸಿದ್ಧವಾಗಬೇಕಾಗಿದೆ. ಅದಿಲ್ಲದೆ ಪ್ರಪಂಚಕ್ಕೆ ಮುನ್ನಡೆ, ಬಿಡುಗಡೆ ಎರಡೂ ಶಕ್ಯವಿಲ್ಲ. ನಮ್ಮ ದೇಶದಲ್ಲಿ ಒಳ್ಳೆಯ ಕಾಲದಲ್ಲಿಯೇ ವಿದ್ಯಾಭ್ಯಾಸಕ್ಕಾಗಿ ಮಾಡುವ ವೆಚ್ಚ ಕಡಲಲ್ಲಿ ಒಂದು ಹನಿಯಂತೆ. ಈಗ ಅದು ಮತ್ತೂ ಕಡಮೆಯಾಗಿದೆ. ವಿದ್ಯಾಮಂದಿರ, ವಿದ್ಯಾಸಂಸ್ಥೆಗಳ ಮೇಲೆ ಅನೇಕ ಬಗೆಯ ನಿರ್ಬಂಧಗಳೂ ಅನನುಕೂಲಗಳೂ ಹೊತ್ತಿವೆ. ವಿದ್ಯಾರ್ಥಿಗಳ ಮನಸ್ಸಿನ ಮೇಲೆ ಭಾರಗಳು ಅದುಮುವಂತೆ ಕುಳಿತಿವೆ, ಇದು ಹಿತಕರವಲ್ಲ. ಮಿತವ್ಯಯ ತತ್ವ ಎಲ್ಲಿಯೇ ಆಗಲಿ ಎಂದೇ ಆಗಲಿ ಸಲ್ಲದು,– ವಿದ್ಯಾಭ್ಯಾಸ ಸಂಬಂಧದಲ್ಲಿ; ಅನಕ್ಷರತೆ ಅವಿದ್ಯೆ ತುಂಬಿರುವ ಭರತಖಂಡದಲ್ಲಂತೂ ಸರ್ವಥಾ ಸಲ್ಲದು ಎನ್ನುತ್ತ ನಮ್ಮ ನಾಡಿನ ಶಿಕ್ಷಣದ ಗುರಿ ಪೂರ್ತಿ ರಾಷ್ಟ್ರೀಯವಾಗಬೇಕು ಎಂದು ಅಪ್ಪಣೆ ಕೊಡಿಸಿದರು.

ಆಮೇಲೆ; ರಾಷ್ಟ್ರೀಯವೆಂದರೆ ತಮ್ಮ ಅಭಿಪ್ರಾಯದಲ್ಲಿ ಏನು ಎಂಬುದನ್ನು ವಿವರಿಸಿದರು. ಆಕಾಂಕ್ಷೆ ಉದ್ದೇಶಗಳಲ್ಲಿಯೇ ಹೊರತು ರೀತಿಯಲ್ಲಿ ಮತ್ತು ಸಂಕುಚಿತಾರ್ಥದಲ್ಲಿ ರಾಷ್ಟ್ರೀಯ ಎಂಬ ಪದವನ್ನು ಅರ್ಥಮಾಡುವುದು ಸರಿಯಲ್ಲವೆಂದು ಒತ್ತಿ ಹೇಳಿದರು.

ಒಟ್ಟು ಜನಾಂಗದಲ್ಲಿ ಎಲ್ಲ ಮೆಟ್ಟಲಿನ ಪ್ರತಿ ಗಂಡಸಿನ, ಹೆಂಗಸಿನ, ಮಗುವಿನ ಬದುಕಿನ ಅಗತ್ಯಗಳನ್ನೂ ಮನಸ್ಸಿನಲ್ಲಿಟ್ಟುಕೊಂಡು ಅವರ ಮೂರ್ತಿತ್ವ ಚೆನ್ನಾಗಿ ತಿದ್ದಿ ಬರುವಂತೆಯೂ ಅವರೆಲ್ಲ ಮುಂದೆ ತುಂಬು ಬಾಳನ್ನು ಬದುಕುವಂತೆಯೂ ಬೋಧಿಸುವ ವ್ಯವಸ್ಥೆ ಅಗತ್ಯ. ಆದ್ದರಿಂದ ವಿದ್ಯಾಭ್ಯಾಸದ ಪ್ರಯೋಜನ ಎಲ್ಲ ವರ್ಗಗಳವರಿಗೂ ಯಾವ ಅಡ್ಡಿ ನಿಷೇಧಗಳೂ ಇಲ್ಲದಂತೆ ಸಮವಾಗಿ ದೊರಕಬೇಕು. ಎಲ್ಲಕ್ಕೂ ಎಲ್ಲರಿಗೂ ಅವಕಾಶ ಮತ್ತು ಸಿದ್ಧತೆ ಸಂಪೂರ್ಣವಾಗಿ ಸಿಕ್ಕುವ ಏರ್ಪಾಡಾಗಬೇಕು.

ಜನ ವರ್ಗದಲ್ಲಿ ಎಲ್ಲ ಬಗೆಯವರ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಸ್ಥಿತಿಯನ್ನೂ ಅರಿತು ಅವಕ್ಕೆ ತಕ್ಕಂತೆ ಶಿಕ್ಷಣದ ಗುರಿ, ಕಾರ್ಯಪ್ರಕಾರ, ಆದರ್ಶರಚನೆ, ಸೌಕರ್ಯಗಳು ಉಂಟಾಗಬೇಕು. ಯಾವ ಬಗೆಯ ಸಾಮಾಜಿಕ ಆದರ್ಶಗಳನ್ನು ಇಟ್ಟುಕೊಂಡು ಈ ಶಿಕ್ಷಣ ಕಾರ್ಯ ವ್ಯವಸ್ಥೆಯಾಗಬೇಕು ಎಂಬ ಅಂಶವನ್ನು ಸರಕಾರದವರೂ ಜನನಾಯಕರೂ ಸಹಕರಿಸಿ ಗೊತ್ತು ಮಾಡಬೇಕು.

ಈ ಕ್ರಮದ ಫಲವಾಗಿ ಒಂದು ಹೊಸ ನಾಯಕ ವರ್ಗ ಏರ್ಪಡುವುದೇ ಗುರಿಯನ್ನಾಗಿಟ್ಟುಕೊಳ್ಳುವುದು ಆವಶ್ಯಕ. ಏಕೆಂದರೆ ಯುದ್ಧಾನಂತರ ಹೊಸ ಸಮಸ್ಯೆಗಳು ಹುಟ್ಟುವುವು; ಹೊಸ ಸಂಸ್ಥೆ ಕಾರ್ಯರೀತಿಗಳು ಉಂಟಾಗುವುವು. ಅವನ್ನು ನಡಸುವ ಮತ್ತು ಅವುಗಳಿಂದ ಲೋಕಕ್ಕೆ ಪರಮಾವಧಿ ಹಿತ ತರುವ ಯೋಗ್ಯತೆಯೂ ಉದಾರ ಬುದ್ಧಿಯೂ ಅವರಲ್ಲಿಲ್ಲದಿದ್ದರೆ ಉಳಿದ ಏನಿದ್ದರೂ ವ್ಯರ್ಥವಾದೀತು. ಹೊಸ ಕಾಲ, ಹೊಸ ಜನ: ಲೋಕಕಲ್ಯಾಣ ಆ ಹೊಸ ಕಾಲದ ಯುವಕರ ಕೈಯಲ್ಲಿದೆ; ಅವರ ಆದರ್ಶ ಯೋಗ್ಯತೆಗಳಲ್ಲಿ ಮೂಡುತ್ತದೆ; ಇವುಗಳ ರೂಪಣ ಅವರಿಗೆ ಶಿಕ್ಷಣ ಕೊಡುವವರ ಮೇಲೆ ಹೊಂದಿಕೊಂಡಿದೆ. ನಾಳೆಯ ಬಾಳಿಗೆ ತಳಹದಿ ಇಂದಿನ ವಿದ್ಯಾ ವಿಚಕ್ಷಣೆ.

ಅಲ್ಲದೆ, ಒಂದು ವ್ಯಕ್ತಿ, ಕೋಮು ಅಥವಾ ಪಂಗಡದ, ಒಂದು ಬಣ್ಣ, ಬುಡಕಟ್ಟಿನ ಮಾತ್ರದವರ ಪ್ರಯೋಜನ ಪ್ರತಿಷ್ಠೆಗಳನ್ನು ಉಳಿಸುವುದು, ಬಲಿಸುವುದು, ಮೇಲ್ಗೊಳಿಸುವುದು ವಿದ್ಯೆಯ ಗುರಿ ಅಲ್ಲ. ಹಾಗೆ ನಡೆಯುತ್ತಿದ್ದ ಕಾಲ ಮುಗಿದುಹೋಯಿತು. ಒಂದು ವರ್ಗದ ಲಾಭ ಲೋಭಗಳಿಗಾಗಿ ಇನ್ನೊಂದರೊಡನೆ ಸ್ಪರ್ಧೆ, ಹೋರಾಟ ಮಾಡುವ ಚಿತ್ತವೃತ್ತಿಯನ್ನಾಗಲಿ, ತಂತ್ರ ವಿಧಾನಗಳನ್ನಾಗಲಿ ಬೆಳಸುವುದೂ ಅಲ್ಲ. ಯಾರಿಗೆ ವಿರೋಧವಾಗಿಯೂ

* ಪ್ರಾಥಮಿಕ ಮಟ್ಟದಲ್ಲಿ ತಾಯ್ನುಡಿ, ಆಮೇಲೆಲ್ಲ ಪ್ರಾಂತ ಭಾಷೆ ಎಂದು ತಿದ್ದಿಕೊಳ್ಳಬಹುದೆಂದು ನಾವು ಸೂಚಿಸುತ್ತೇವೆ. ಸಂ.

ವಿವೇಚನೆ ಮಾಡದೆ ಸಾಮೂಹಿಕವಾಗಿ ಸಕಲರ ಸಮಸ್ತ ಹಿತ ಸಾಧನೆಗಾಗಿ ಎಲ್ಲರೂ ಸಹಕರಿಸುವ ಮನೋವೃತ್ತಿಯೂ ಕಾರ್ಯ ರೀತಿಗಳೂ ಶಿಕ್ಷಣ ಪದ್ಧತಿಯಿಂದ ಪ್ರೇರಿತವಾಗಬೇಕು; ಪೋಷಿತ ವಾಗಬೇಕು.

ಒಟ್ಟಿನಲ್ಲಿ ಭರತಖಂಡದಲ್ಲಿ ಬಹು ಕಾಲದಿಂದಲೂ ಬಂದಿರುವ ಆರ್ಷೇಯ ಸಂಪ್ರದಾಯದಲ್ಲಿಯೂ ಕಾವ್ಯ ಮತ್ತು ವ್ಯವಹಾರಗಳ ಲ್ಲಿಯೂ ಪ್ರತಿ ಫಲಿಸಿರುವ ತತ್ವವನ್ನು ಅರಿತವರಿಗೆ ಆ ಸಂಪ್ರದಾಯ ದಲ್ಲಿ ಸಹನೆ, ಸಹಕಾರ, ಸ್ವಾತಂತ್ರ್ಯಗಳಿಗೇ ಬೆಲೆ ಇರುವ ಸಂಗತಿ ಗೊತ್ತಾಗುತ್ತದೆ: ನಮ್ಮ ವಿದ್ಯಾ ವ್ಯವಸ್ಥೆಯಿಂದ ನಮಗೂ ನಮ್ಮ ಮಕ್ಕಳಿಗೂ ಈ ಸಂಪತ್ತಿ ಉಳಿದು ಬೆಳೆಯುವ ಭಾಗ್ಯ ನಿಲ್ಲ ಬೇಕಾದ್ದು ಸಹಜ. ವ್ಯಕ್ತಿಗಳ ಸರ್ವತೋಮುಖವಾದ ಬೆಳ ವಣಿಗೆಯೇ ಅದರ ಗುರಿ; ಯೋಚನೆಯ ಮತ್ತು ನಂಬಿಕೆಯ ಸ್ವಾತಂತ್ರ್ಯ; ಧ್ಯಾನ ಮತ್ತು ಪೂಜೆಯ ಸ್ವಾತಂತ್ರ್ಯ; ಆತ್ಮ ವಿಕಸನ ಮತ್ತು ಆತ್ಮಾಭಿವ್ಯಂಜನ ಸ್ವಾತಂತ್ರ್ಯ–ಇವೇ ಆ ಗುರಿಯ ಲಕ್ಷಣಗಳು; ಅಂಗಗಳು. ಯಾವ ಆಚಾರ, ಸ್ಮೃತಿ, ಕಾವ್ಯ, ವ್ಯಕ್ತಿ, ಸಂಸ್ಥೆ ಇದಕ್ಕೆ ವಿರೋಧ ನಿಂತರೂ, ಯಾವ ಆಡಳಿತ ವರ್ಗದವರೂ ಸಮಾಜದ ಮತ್ತು ಮತದ ಮುಂದಾಳು ಗಳೂ ಅಡ್ಡ ನಿಂತರೂ, ತಮ್ಮ ಅತಿವಾದ ಮತ್ತು ನಿರಂಕುಶತೆಯಿಂದ ಇದನ್ನು ಅಡಗಿಸಲು ಪ್ರಯತ್ನಿಸಿದರೂ ಅವನ್ನು ಪ್ರತಿಭಟಿಸುವ ಚೈತನ್ಯವೂ ಪ್ರೀತಿಯಿಂದ ಕೂಡಿದ ಉದಾರ ಲೋಕಹಿತ ಬುದ್ಧಿಯೂ ನಮ್ಮ ಶಿಕ್ಷಣಕ್ರಮದಿಂದ ಉಂಟಾಗುವಂತಿರಬೇಕು.

ನಾಳಿನ ಆಡಳಿತಗಾರನಿಗೆ ನವನೂತನ ಆವರಣವೊಂದು ಹುಟ್ಟಿ ನಿಲ್ಲುವುದು ಖಂಡಿತ; ಹೊಸದಕ್ಕೆ ಹೊಂದಿಕೊಂಡು ಅದನ್ನು ನಡಸುವ ಪ್ರತ್ಯುತ್ಪನ್ನಮತಿ ಆತನನ್ನೂ ಆತನ ಜನವನ್ನೂ ಕಾಪಾಡು ವುದು. ಆದ್ದರಿಂದ ಆತನಲ್ಲಿ ಶಾಂತವಾಗಿ ಉದ್ವೇಗವಿಲ್ಲದೆ ಯೋಚಿಸುವ ಮತ್ತು ತೀರ್ಮಾನ ಕೊಡುವ ಶಕ್ತಿಯೂ, ನಿಷ್ಪಕ್ಷಪಾತ ದೃಷ್ಟಿಯೂ, ಪ್ರಜ್ಞಾವಂತಿಕೆಯೂ, ಸಹಜ ನಾಯ ಕತ್ವವೂ ಸಿದ್ಧಿಸುವಂತೆ ಬೋಧನ ಮತ್ತು ಶಿಕ್ಷಣ ಕಾರ್ಯ ಒದಗ ಬೇಕಾದೀತು.

ಕಡೆಗೆ, ಇಂದು ನಮ್ಮ ದೇಶದಲ್ಲಿನ ನಾನಾ ಬಗೆಯ ಒಡಕು ಅನೈಕಮತ್ಯಗಳು ಹೋಗಬೇಕಾಗಿವೆ. ಕೋಮುವಾರು ನಡತೆ, ಅಹಂಕಾರ, ಪ್ರತಿಷ್ಠೆ, ಸಂಕುಚಿತ ಬುದ್ಧಿ, ಕುಲ ಅಧಿಕಾರಾದಿಗಳ ಮದ–ಇವು ಹೋಗಿ ದೇಶದ ಸಮಷ್ಟಿ ಜೀವನದ ಕಡೆಗೆ ಒಲಿಯು ವಂತಹ ವಿಶಾಲ ಭಾವನೆ ಎಲ್ಲರಲ್ಲಿಯೂ ಬೆಳೆಯಬೇಕು–ಈ ಹೊಸ ಶಿಕ್ಷಣದ ಪ್ರಭಾವದಿಂದ. ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಕೆಲವು ರೂಪಾಯಿ ಸರಕಾರಿ ಸಂಬಳ ದುಡಿಯುವ ವಿದ್ಯೆಗಾಗಿ ರಚಿಸಿದ ವಿದ್ಯಾಕ್ರಮದಿಂದ ಪ್ರಯೋಜನವೇನಿಲ್ಲ. ಒಂದು ಮಾತಿನಲ್ಲಿ ಹೇಳಬೇಕೆಂದರೆ–ಪ್ರತಿ ವ್ಯಕ್ತಿಗೂ ಪರಮಾವಧಿ ಬೆಳವಣಿಗೆ ದೊರೆತು ಅದರಿಂದ ಕಾರ್ಯಕಾರಿಯಾದ ಸಹಕಾರಪೂರ್ಣ ವಾದ ಒಂದು ಸಮಾಜಜೀವನಪದ್ಧತಿ ಹುಟ್ಟಿ ರೂಪುಗೊಳ್ಳುವಂತೆ ಆಗುವುದರ ಜೊತೆಗೆ, ಪ್ರತಿಯೊಬ್ಬನ ದೇಹಪುಷ್ಟಿ, ಬುದ್ಧಿಪೋಷಣೆ, ಸಂಸ್ಕಾರ, ಧಾರ್ಮಿಕ ನೈತಿಕ ಪ್ರಜ್ಞೆ, ಆರ್ಥಿಕ ಸ್ವಸಂಪೂರ್ಣತೆ, ಮತ್ತು ರಾಷ್ಟ್ರದ ಸಂಘಟನೆ ಇವು ನಾವು ವಿರಚಿಸುವ ಬೋಧನ ಕ್ರಮಗಳಿಂದಲೂ ವಿದ್ಯೆಯ ಆದರ್ಶಗಳಿಂದಲೂ ಸಾಧಿತವಾಗುವಂತೆ ಯೋಜನೆಗಳನ್ನು ಕೈಕೊಳ್ಳಬೇಕು.

ಶ್ರೀ. ಜಯಕರರು ನಾಡಿನ ಸನ್ಮಾನ್ಯ ನಾಯಕರು, ಹಿರಿಯರು; ಮೇಧಾವಿಗಳು; ಉಪಾಧ್ಯಾಯ ವೃತ್ತಿಯಲ್ಲಿ ಅನುಭವ ಪಡೆದವರು; ನ್ಯಾಯಶಾಖೆಯ ಅತ್ಯುನ್ನತ ಸಂಸ್ಥೆಗಳಲ್ಲಿ ಕೆಲಸ ಮಾಡಿಯೂ ನಾಡ ಜೀವನದ ಅತ್ಯುನ್ನತ ಮಂತ್ರ ತಂತ್ರಗಳಲ್ಲಿ ಬೆರೆದೂ ನುರಿತ ವರು; ಅಧಿಕಾರ ಮಾಡಿದವರು; ಸಂತತ ದೇಶಹಿತ ಚಿಂತನದಲ್ಲಿ ತೊಡಗಿರುವವರು; ಸಮುಚಿತ್ತವುಳ್ಳವರು. ಅಂತಹವರ ಮಾತು ಎಲ್ಲರ ವಿಚಾರವನ್ನೂ ಅರಳಿಸತಕ್ಕದ್ದಾಗಿದೆ.

## ಪರಿಷತ್ತಿಗೆ ಶ್ರೀಮಂತರೊಬ್ಬರ ಆಶ್ರಯ

ಬೆಂಗಳೂರಿನ ಪ್ರಮುಖ ವಾಣಿಜ್ಯ ಮುಂದಾಳುಗಳಲ್ಲಿ ಒಬ್ಬರೂ ಮೈಸೂರು ವಾಣಿಜ್ಯ ಸಂಘದ ಹಿಂದಿನ ಅಧ್ಯಕ್ಷರೂ ರಾಮಕೃಷ್ಣ ವಿದ್ಯಾರ್ಥಿ ನಿಲಯ, ದೀನ ಸೇವಾ ಸಂಘ ಮುಂತಾದ ಹಲವು ಸಂಸ್ಥೆಗಳಿಗೆ ಆಶ್ರಯದಾತರೂ, ಅನೇಕ ಬಗೆಯಲ್ಲಿ ಬಿಡು ಗೈಯಿಂದ ವಿದ್ಯಾಪ್ರಚಾರ, ಆರೋಗ್ಯ ರಕ್ಷಣೆ ಮುಂತಾದ ಹಲವು ಏರ್ಪಾಟುಗಳಿಗೆ ದ್ರವ್ಯ ಸಹಾಯ ಮಾಡಿರುವವರೂ ಆದ **ಶ್ರೀ. ದೇವರಾವ್ ಶಿವರಾಮ್ ಅವರು ಪರಿಷತ್ತಿಗೆ ೫೦೦ ರೂಪಾಯಿ ಗಳನ್ನು ಸಲ್ಲಿಸಿ ಪ್ರದಾತೃ ವರ್ಗದ ಸದಸ್ಯರಾಗಿದ್ದಾರೆಂದು** ತಿಳಿಸಲು ಬಹಳ ಸಂತೋಷವಾಗುತ್ತದೆ. ಹೀಗೆಯೆ ಕರ್ನಾಟಕದ ಶ್ರೀಮಂತ ಮಹನೀಯರು ಪರಿಷತ್ತಿಗೆ ಸಹಾಯಮಾಡಿ ಕನ್ನಡದ ಕೆಲಸಕ್ಕೆ ತಮ್ಮ ಆಶ್ರಯ ಪ್ರೋತ್ಸಾಹಗಳನ್ನು ನೀಡುತ್ತಾರೆಂದು ಹಾರೈಸುತ್ತೇವೆ.

### ಪರಿಷತ್ತಿನ ಮುನ್ನಡೆ

(೫೭ನೆಯ ಪುಟದಿಂದ)

ನಾಡಿನ ವಾಸಿ ಎಂದು ಅರ್ಥ ಮಾಡುವುದು ಸಾಧುವಾದದ್ದು, ನ್ಯಾಯ ವಾದದ್ದು. ಈ ಮಾತನ್ನು ಈ ಹಿಂದೆ ನಾನು ಅನೇಕ ಸಂದರ್ಭದಲ್ಲಿ ಹೇಳಿದೇನೆ. ಮನೆಯಲ್ಲಿ ಕನ್ನಡ ಆಡುವವರು ಅಚ್ಚಕನ್ನಡಿಗರೆಂದೂ, ಹಾಗಲ್ಲದೆ ಕನ್ನಡವನ್ನು ಬಳಸುವವರು ಅಚ್ಚವಲ್ಲದ ಕನ್ನಡಿಗರೆಂದೂ ಧ್ವನಿ ಬರುವ ಮಾತನ್ನು ಮಿತ್ರರು ಆಡಿದಾಗ ನಾನು ಅಡ್ಡಿ ಮಾಡಿ ದೇನೆ. ಕನ್ನಡಿಗರಲ್ಲಿ ಕನ್ನಡ ಕನ್ನಡಿಗರು, ತಮಿಳು ಕನ್ನಡಿಗರು, ತೆಲುಗು ಕನ್ನಡಿಗರು, ಮರಾಠಿ ಕನ್ನಡಿಗರು, ತುಳು ಕನ್ನಡಿಗರು, ಉರ್ದು ಕನ್ನಡಿ ಗರು ಇದಾರೆ. ಇವರೆಲ್ಲರೂ ಒಂದೇ ತೂಕದ ಒಂದೇ ಬಣ್ಣದ ಕನ್ನಡಿಗರು. ಯಾರಾದರೂ ಇದಕ್ಕೆ ಪ್ರತಿಯಾಗಿ ನಡೆದುಕೊಂಡಿದ್ದರೆ ಅದಕ್ಕೆ ಕಾರಣ ಅವರ ತಪ್ಪು ಎಣಿಕೆ; ಇತರರು ಅವರಲ್ಲಿ ಹುಟ್ಟ ಹಾಕಿರುವ ಭೇದ ಬುದ್ಧಿ. ಈಗಾಗಲೆ ಕನ್ನಡದ ಸಾಹಿತ್ಯ ಚರಿತ್ರೆಯಲ್ಲಿ ಇದು ಸ್ಪಷ್ಟವಾಗಿದೆ. ಪರಿಷತ್ತಿನ ಸದಸ್ಯ ಮಾಲೆಯಲ್ಲಿ ಎಲ್ಲ ಮಾತೃ ಭಾಷೆಗಳ ಮಹನೀಯರು ಸೇರಿಯೂ ಇದ್ದಾರೆ. ಕನ್ನಡದ ಎಲ್ಲೆ ಯೊಳಗೆ ಸೇರಿರುವ ಎಲ್ಲ ಮಂದಿಯೂ ಕನ್ನಡ ಸಾಹಿತ್ಯ ಪರಿಷತ್ತಿಗೆ ಸದಸ್ಯರಾಗಬೇಕಾದ ಜನರು, ಸದಸ್ಯರಾಗಲು ಅಧಿಕಾರ ಉಳ್ಳ ಜನರು ಎನ್ನುವುದೇ ನಮ್ಮ ಜನರಲ್ಲಿ ಹರಡಬೇಕಾಗಿರುವ ಮುಖ್ಯವಾದ ಭಾವನೆ. ನನಗೆ ಕನ್ನಡ ಬರುವುದಿಲ್ಲ ಎಂದು ಕನ್ನಡಿಗನು ಹೇಳಿದರೆ ಅದಕ್ಕೆ ಉತ್ತರ ಅವನಿಗೆ ನಿಜವಾಗಿ ಕನ್ನಡ ಬರುತ್ತದೆ; ಬರುವುದು ಎಂದರೆ ಬೇರೆ ಯಾವುದೋ ಒಂದು ಸ್ಥಿತಿ ಎಂದು ತಿಳಿದು ಅವನು ತನಗೆ ಬರುವುದಿಲ್ಲ ಎಂದು ಅಂದುಕೊಂಡಿದಾನೆ ಎನ್ನುವುದು. ಕನ್ನಡ ನಾಡಿನಲ್ಲಿ ಜನದ ಒಟ್ಟು ಬೆಳವಣಿಗೆಗೆ ಕನ್ನಡ ಒಂದೇ ಸಹಜ ವಾದ ಸಾಧನ. ಈ ನಾಡನ್ನು ತನ್ನದೆನ್ನುವ ಯಾವನಾದರೂ ಈ ನುಡಿಗಾಗಿ ದುಡಿಯಬೇಕು. ಕನ್ನಡಿಗರೆಲ್ಲ ಒಟ್ಟುಗೂಡಿ ನಡೆಯಬಹು ದಾದ ಈ ಸಂಸ್ಥೆಯಲ್ಲಿ ಮಮತೆ ಇಡಬೇಕು.

**ಮಾಸ್ತಿ ವೆಂ. ಅ.**

### ಮಂಗಳೂರು–ಕೊಡಗು ಪ್ರಾಂತಸಮಿತಿ

೩೦–೧೨–೪೨ನೆಯ ಬುಧವಾರ ಮಡಕೇರಿಯಲ್ಲಿ ಪ್ರಾಂತ ಸಮಿತಿಯ ಆಶ್ರಯದಲ್ಲಿ ಸಾಹಿತ್ಯಗೋಷ್ಠಿ ಜರುಗಿತು. ಶ್ರೀ ಶ್ರೀ ವೀರ ರಾಜೇಂದ್ರ ಸ್ವಾಮಿಗಳವರು ಅಗ್ರಾಸನವನ್ನು ವಹಿಸಿದ್ದರು. ಪ್ರಾರಂಭ ದಲ್ಲಿ ಶ್ರೀ. ಅನಂತಪದ್ಮನಾಭರಾಯರು ಭಾರತ ವಾಚನ ಮಾಡಿದರು. ಅನಂತರ ಹುಬ್ಬಳ್ಳಿಯ ಶ್ರೀ. ಸಿದ್ಧವೀರದೇವರು ಹರಿಹರನ ಸಾಹಿತ್ಯ ವನ್ನು ಕುರಿತು ಉಪನ್ಯಾಸ ಮಾಡುತ್ತಾ 'ಬಸವರಾಜದೇವರ ರಗಳೆ' ಯಿಂದ ಕೆಲವು ಭಾಗಗಳನ್ನು ಓದಿ ವಿವರಿಸಿದರು. ಕೊನೆಯಲ್ಲಿ ಅಧ್ಯಕ್ಷರು ಹರಿಹರನ ಹಿರಿಮೆಯನ್ನು ವಿವರಿಸಿ, ಅಕ್ಕಮಹಾದೇವಿಯ ವಚನಗಳನ್ನೂ ವೀರಶೈವ ಧರ್ಮದ ಒಳಗುಟ್ಟನ್ನೂ ವರ್ಣಿಸಿ, ಲೋಕ ಕಲ್ಯಾಣಕ್ಕಾಗಿ ಹರಿಹರನ ಸಾಹಿತ್ಯದಂತಹ ಉತ್ತಮ ಸಾಹಿತ್ಯ ಇನ್ನೂ ಹುಟ್ಟಬೇಕೆಂದು ಹೇಳಿದರು.

# ಭಂಡಾರಕರ ಪ್ರಾಚ್ಯವಿದ್ಯಾ ಸಂಶೋಧನ ಮಂದಿರ

## ಬೆಳ್ಳಿ ಹಬ್ಬದ ಉತ್ಸವ

(ಸ್ವಂತ ಪ್ರತಿನಿಧಿಗಳಿಂದ) ಪುಣೆ ೫-೧-೪೩

ಪುಣೆಯಲ್ಲಿಯ ಭಂಡಾರಕರ ಪ್ರಾಚ್ಯವಿದ್ಯಾ ಸಂಶೋಧನ ಮಂದಿರದ ಬೆಳ್ಳಿ ಹಬ್ಬದ ಉತ್ಸವ ಸಮಾರಂಭ ಅತ್ಯಂತ ವಿಜೃಂಭಣೆಯಿಂದ ನಿನ್ನೆ ಬೆಳಗ್ಗೆ ೮-೩೦ ಗಂಟೆಗೆ ಸರಿಯಾಗಿ ಪ್ರಾರಂಭವಾಯಿತು. ಮಹಾರಾಷ್ಟ್ರದ ಅತ್ಯಂತ ವಯೋವೃದ್ಧ ಪಂಡಿತ ಪ್ರಾಧ್ಯಾಪಕರೆಂದು ಖ್ಯಾತಿವೆತ್ತ ಪ್ರಿ. ರಾಜವಾಡೆಯವರ ಹಸ್ತದಿಂದ 'ವಟವೃಕ್ಷ'ವನ್ನು ಹಚ್ಚುವ ಸಮಾರಂಭ ಜರುಗಿತು. ಸಭಾ ಮಂಟಪದಲ್ಲಿ ವೈದಿಕ ಬ್ರಾಹ್ಮಣರ ವೇದಪಠನ ನಡೆಯಿತು. ಮಧ್ಯಾಹ್ನ ಅನೌಪಚಾರಿಕರಾಗಿ ಪ್ರತಿನಿಧಿಗಳ ವಿಚಾರ ವಿನಿಮಯ ನಡೆಯಿತು. ಇಳಿಹೊತ್ತಿನಲ್ಲಿ ಇಲ್ಲಿಯ ಡೆಕ್ಕನ್ ಕಾಲೇಜದ ಸಂಚಾಲಕರು ಪ್ರತಿನಿಧಿಗಳನ್ನೆಲ್ಲ ತಮ್ಮಲ್ಲಿಗೆ ಬರಮಾಡಿಕೊಂಡು ಅಲ್ಲಿ ನಡೆದಿರುವ ಸಂಶೋಧನ ಕಾರ್ಯದ ಅರಿಕೆಯನ್ನೂ ಮಾಡಿ ಕೊಟ್ಟರು. ಅನಂತರ ಅಲ್ಲಿ ಪ್ರತಿನಿಧಿಗಳಿಗೆ ಅಲ್ಪೋಪಹಾರ ವಾಗಿ ಎಲ್ಲರೂ ಮರಳಿ ಭಂಡಾರಕರ ಸಂಸ್ಥೆಗೆ ಬಂದರು.

### ಮುಖ್ಯ ಸಮಾರಂಭ

ಸಂಜೆಯ ೬ ಗಂಟೆಗೆ ಸರಿಯಾಗಿ ಉತ್ಸವದ ಮುಖ್ಯ ಕಾರ್ಯಕ್ರಮ ಆರಂಭವಾಯಿತು. ಆರಂಭದಲ್ಲಿ ಶ್ರೀ. ನರಸಿಂಹ ಚಿಂತಾಮಣ ಕೇಳಕರರು ಭೋರದ ರಾಜಾಸಾಹೇಬರನ್ನು ಅಧ್ಯಕ್ಷಸ್ಥಾನಕ್ಕೆ ಸೂಚಿಸುತ್ತ ಸಮಯೋಚಿತವಾಗಿ ಕೆಲವು ಗೌರವ ಸೂಚಕವಾದ ಮಾತುಗಳನ್ನಾಡಿ ಭೋರ ಮತ್ತು ಔಂಧ ಅರಸು ಮನೆತನಗಳು ಭಾರತೀಯ ಸಂಸ್ಕೃತಿಯ ಹೆಗ್ಗುರುತುಗಳೆಂಬ ಅಂಶವನ್ನು ಸೂಚಿಸಿದರು. ಆಮೇಲೆ ಶ್ರೀಮಂತ ರಾಜಾಸಾಹೇಬ ಔಂಧ ಅವರು ಭಾಂಡಾರಕರ ಸಂಸ್ಥೆಯ ಹುಟ್ಟು, ಬೆಳವಣಿಗೆ, ಅದರ ಕಾರ್ಯ ಮೊದಲಾದವುಗಳನ್ನು ಕುರಿತು ಪೂರ್ಣ ಅರಿಕೆಯನ್ನೊಳಗೊಂಡ ಉಪನ್ಯಾಸವನ್ನು ಓದಿದರು. ಆ ಮೇಲೆ ಶ್ರೀಮಂತ ಭೋರದ ರಾಜಾಸಾಹೇಬರು ತಮ್ಮ ಭಾಷಣದಲ್ಲಿ ಈ ಸಂಸ್ಥೆಗೂ ತಮಗೂ ಉಂಟಾದ ಬಾಂಧವ್ಯದ ಉಲ್ಲೇಖವನ್ನು ಮಾಡಿ ಸಮಾರಂಭದ ಮುಖ್ಯ ಅತಿಥಿಗಳಾಗಿ ಬಂದಿದ್ದ ಸರ್ ರಾಧಾಕೃಷ್ಣನ್ ಅವರ ಪಾಂಡಿತ್ಯ, ಪ್ರತಿಭೆ, ವಿದ್ವತ್ತೆಗಳನ್ನು ಕುರಿತು ಗೌರವಯುಕ್ತ ಭಾಷಣ ಮಾಡಿದರು. ಬಳಿಕ ಸಂಸ್ಥೆಯ ಕಾರ್ಯದರ್ಶಿಗಳಾದ ಡಾ. ದಾಂಡೇಕರರು ಸರ್ ರಾಧಾಕೃಷ್ಣನ್‌ರೆ ಮೊದಲಾದ ಕೆಲ ಜನ ಪಂಡಿತರಿಗೆ ಈ ಸಂಸ್ಥೆಯ ಗೌರವ ಸದಸ್ಯತ್ವದ ಸನ್ಮಾನವನ್ನು ದಯಪಾಲಿಸುವ ಗೊತ್ತುವಳಿಯನ್ನು ಓದಿದರು. ಅನಂತರ ಬೇರೆ ಬೇರೆ ಸಂಸ್ಥೆಗಳ ವತಿಯಿಂದ ನಿಮಂತ್ರಿತರಾಗಿ ಬಂದಿದ್ದ ಪ್ರತಿನಿಧಿಗಳು ತಮ್ಮ ತಮ್ಮ ಸಂಸ್ಥೆಗಳ ಪರವಾಗಿ ಯಶಶ್ಚಿಂತನದ ಸಂದೇಶಗಳನ್ನು ಓದಿದರು. ಮದ್ರಾಸು ವಿಶ್ವವಿದ್ಯಾನಿಲಯದ ವತಿಯಿಂದ ಡಾ. ಕುಂದಣರಾಜಾ ಅವರು, ಮುಂಬಯಿ ವಿಶ್ವವಿದ್ಯಾನಿಲಯದ ವತಿಯಿಂದ ಪ್ರಿ. ಕರಮರಕರರು, ಭಾರತೀಯ ಸಾಹಿತ್ಯ ಮಂದಿರದ ಹಾಗೂ ಗುಜರಾತಿ ಸಾಹಿತ್ಯ ಪರಿಷತ್ತಿನ ಪರವಾಗಿ ಡಾ. ಪಾಟೀಲ ಅವರು, ಪೋಲಂಡದ ವಿಶ್ವವಿದ್ಯಾನಿಲಯದ ವತಿಯಿಂದ ಡಾ. ಸ್ಟರ್ನಬಾಕ್ ಅವರು, ಕನ್ನಡ ಸಾಹಿತ್ಯ ಪರಿಷತ್ತಿನ ವತಿಯಿಂದ ಪ್ರೊ. ನಾಯಕ ವೆಂಕಟರಾಯರು, ಲಾಹೋರದ ವಿಶ್ವೇಶ್ವರಾನಂದ ಸಂಸ್ಥೆಯ ವತಿಯಿಂದ ಪ್ರೊ. ಅವುಲಕರು, ತಿರುಪತಿಯ ಪ್ರಾಚ್ಯ ವಿದ್ಯಾ ಸಂಶೋಧನದ ವತಿಯಿಂದ ಒರ್ವರು, ಸಂದೇಶಗಳನ್ನು ಓದಿದರು.

ಪರಿಷತ್ತಿನ ಉಪಾಧ್ಯಕ್ಷರು ಉತ್ಸವ ಯಶಸ್ವಿಯಾಗಿ ನಡೆಯಲೆಂದು ಹಾರೈಸಿ ತಂತಿಯನ್ನು ಕಳಿಸಿದ್ದರು.

### ರಾಧಾಕೃಷ್ಣನ್ ಅವರ ಭಾಷಣ

ಸರ್ ರಾಧಾಕೃಷ್ಣನ್ ಅವರು ತಮ್ಮ ಅಸ್ಖಲಿತ ಹಾಗೂ ಓಜಸ್ವಿಯಾದ ವಾಗ್ವೈಖರಿಯಲ್ಲಿ ಭಾರತೀಯ ಸಂಸ್ಕೃತಿಯ ಮೇಲ್ಮೆಯನ್ನು ಕುರಿತು ಸ್ಫೂರ್ತಿಪ್ರದವಾದ ಉಪನ್ಯಾಸವನ್ನು ಮಾಡಿದರು. ಪ್ರಚಲಿತ ಮಹಾಯುದ್ಧದ ದುರಂತ ದೃಶ್ಯವನ್ನು ಕುರಿತು ಮಾತನಾಡುತ್ತ, ಜಗತ್ತು ಇಂದು ನಿಜವಾದ ವಿಶ್ವಬಂಧುತ್ವಕ್ಕಾಗಿ ತವಕಿಸುತ್ತಿದೆ. ಸ್ವಾರ್ಥಾಂಧರಾದ ಕೆಲ ಜನರು ತಮ್ಮ ಸದ್ಯದ ಹಕ್ಕುಗಳು ಅಬಾಧಿತವಾಗಿ ಉಳಿಯಬೇಕೆಂದು ಧಡಪಡಿಸುತ್ತಿರುವರು. ಮಾನವನು ಕೇವಲ ರಾಜಕೀಯ ಪ್ರಾಣಿಯೂ ಅಲ್ಲ; ರಾಸಾಯನಿಕ ಸಮ್ಮಿಶ್ರಣವೂ ಅಲ್ಲ; ಆದರೆ ಮಾನವನು ಆಧಿಭೌತಿಕ ಹಾಗೂ ಆಧ್ಯಾತ್ಮಿಕ ಶಕ್ತಿಗಳ ಸುಂದರ ಸಮ್ಮಿಲನ. ಈ ಮಾತನ್ನು ಮರೆತು ಬುದ್ಧಿವಾದಿಗಳು "ಈಶ್ವರೋಽಹಂ ಅಹಂ ಭೋಗೀ ಸಿದ್ಧೋಽಹಂ ಬಲವಾನ್ ಸುಖೀ" ಎಂಬುದಾಗಿ ಅಜ್ಞಾನಾಂಧಃಕಾರದಲ್ಲಿ ಮುಳುಮುಳುಗಿ ಏಳುತ್ತಿರುವದರಿಂದಲೇ ಇಂದಿನ ದುರಂತ ಸನ್ನಿವೇಶಗಳ ಉದಯವಾಗಿದೆ. ಮಿತ್ರಪಕ್ಷದ ವಿಜಯವಾಗಬೇಕೆಂದು ನಮ್ಮೆಲ್ಲರ ಮನೀಷೆಯಾಗಿದೆ; ಮತ್ತು ಮಿತ್ರಪಕ್ಷದ ವಿಜಯವೂ ಆಗುವದು ಯಾವಾಗ? ಮಿತ್ರಪಕ್ಷದವರು ಭಾರತೀಯ ಸಂಸ್ಕೃತಿಯ ಶ್ರೇಷ್ಠತೆಯನ್ನು ಒಪ್ಪಿಕೊಂಡು ಅದಕ್ಕೆ ಮೊರೆ ಹೊಕ್ಕಾಗ; ಮತ್ತು ಅದರ ಸಹಕಾರವನ್ನು ದೊರಕಿಸಿದಾಗ. "ಸಭ್ಯತೆ – ಸಂಸ್ಕೃತಿಗಳ ಸಂರಕ್ಷಣೆಗಾಗಿ ಸದ್ಯದ ಸಂಗ್ರಾಮ ನಡೆದಿದೆ; ಇಂತಹ ಸಂದರ್ಭದಲ್ಲಿ ನೀನು ಯಾಕೆ ಸಂಗ್ರಾಮದಲ್ಲಿ ಧುಮುಕುವದಿಲ್ಲ" ಎಂದು ಹೋದ ಮಹಾಯುದ್ಧದ ಕಾಲಕ್ಕೆ ಒರ್ವನು ಆಕ್ಸ್‌ಫೋರ್ಡದ ಪ್ರಾಧ್ಯಾಪಕರೊಬ್ಬರನ್ನು ಕೇಳಿದನಂತೆ. ಅವನು "ಯಾವ ಸಂಸ್ಕೃತಿ– ಸಭ್ಯತೆಗಳಿಗೆ ಅವರು ಹೋರಾಡುತ್ತಿರುವರೋ ಅದೇ ಮೂರ್ತಿಮಂತ ಸಂಸ್ಕೃತಿ ನಾನಿರುವೆನು"ಎಂದು ಉತ್ತರ ಕೊಟ್ಟನಂತೆ! ಸರ್ ರಾಧಾಕೃಷ್ಣನ್ ಅವರು ನವಯುಗಕ್ಕನುಗುಣವಾದ ನವಸ್ಮೃತಿಯ ಅವಶ್ಯಕತೆಯನ್ನು ಪ್ರತಿಪಾದಿಸಿ, ಸತ್ಯದ ಸಾಮರ್ಥ್ಯ ಅಜಿಂಕ್ಯವಾಗಿದೆಯೆಂದೂ ಮರಣವನ್ನು ಕೂಡ ಅದು ಜಯಿಸಿದೆಯೆಂದೂ ಗಂಭೀರವಾಗಿ ಮಾತನಾಡಿ ತಮ್ಮ ಭಾಷಣವನ್ನು ಮುಗಿಸಿದರು.

ಆ ಮೇಲೆ ಭೋರದ ರಾಜಾಸಾಹೇಬರ ಹಸ್ತದಿಂದ ಮುಖ್ಯ ಅತಿಥಿಗಳಿಗೆ ಹಾರಸಮರ್ಪಣೆಯಾಗಿ ಶ್ರೀ. ಬಿ. ಎಸ್. ಕಾಮತರು ಎಲ್ಲ ಪ್ರತಿನಿಧಿಗಳಿಗೂ ಮುಖ್ಯ ಅತಿಥಿಗಳಿಗೂ ವಂದನೆಗಳನ್ನು ಸಮರ್ಪಿಸಿದರು.

# ಕನ್ನಡ ಸುದ್ದಿ

## ಅಖಿಲ ಭಾರತ ವಯಸ್ಕರ ಶಿಕ್ಷಣ ಸಮ್ಮೇಳನ, ಇಂದೂರು

ಇಂದೂರಿನಲ್ಲಿ ಕಳೆದ ತಿಂಗಳು ೨೭ರಿಂದ ೩೧ರ ವರೆಗೆ ನಡೆದ ಅಖಿಲ ಭಾರತ ಶಿಕ್ಷಣ ಸಮ್ಮೇಳನದ ಜತೆಯಲ್ಲಿಯೇ ಅಖಿಲ ಭಾರತ ವಯಸ್ಕರ ಶಿಕ್ಷಣ ಸಮ್ಮೇಳನವೂ ಜರುಗಿತು. ಅದಕ್ಕೆ ಅಲಹಾಬಾದು ವಿಶ್ವವಿದ್ಯಾಲಯದ ಮುಖ್ಯಾಧಿಕಾರಿಗಳಾದ ಪಂಡಿತ ಅಮರನಾಥ ಝಾ ಅವರು ಅಧ್ಯಕ್ಷರಾಗಿದ್ದರು.

ಈ ಸಮ್ಮೇಳನಕ್ಕೆ ಮೈಸೂರಿನಿಂದ ಶ್ರೀ. ಎಸ್. ವಿ. ಶ್ರೀನಿವಾಸರಾಯರವರು ಪ್ರತಿನಿಧಿಯಾಗಿ ಹೋಗಿ ಕಾರ್ಯಕ್ರಮದಲ್ಲಿ ಭಾಗವಹಿಸಿದರು. ವಯಸ್ಕರ ಶಿಕ್ಷಣಕ್ಕೆ ಸಂಬಂಧಪಟ್ಟ ಅನೇಕ ಉಪಯುಕ್ತ ವಿಷಯಗಳು ಚರ್ಚಿಸಲ್ಪಟ್ಟವು.

### ಭಾರತ ಸಮಿತಿಗೆ ಆಯ್ಕೆ

ಈ ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿಯ ಅಧ್ಯಕ್ಷರಾದ ರಾಜಸೇವಾಸಕ್ತ ಶ್ರೀ. ಬಿ. ಎಂ. ಶ್ರೀಕಂಠಯ್ಯನವರು ಕೇಂದ್ರ ಸಂಸ್ಥೆಯ ಕೌನ್ಸಿಲ್ ಮತ್ತು ಕಾರ್ಯಸಮಿತಿಗೂ, ಶ್ರೀ. ಶ್ರೀನಿವಾಸರಾಯರು ಕೌನ್ಸಿಲ್ಲಿಗೂ ಆರಿಸಲ್ಪಟ್ಟರು.

### ಬೆಂಗಳೂರು: ನಗರದ ಅಕ್ಷರಪ್ರಚಾರ ಸಮಿತಿ

ಬೆಂಗಳೂರಿನಲ್ಲಿ ಮೇಲ್ಕಂಡ ಸಮಿತಿಯ ಆಶ್ರಯದಲ್ಲಿ ನಡೆಯುತ್ತಿರುವ ವಯಸ್ಕರ ಶಿಕ್ಷಣ ಶಾಲೆಗೆ ಸೇರಿ ವಿದ್ಯಾರ್ಜನೆ ಮಾಡಿದವರಿಗೆ ಪ್ರಶಸ್ತಿಗಳನ್ನು ಹಂಚುವ ಸಮಾರಂಭ ೧೦-೧-೧೯೪೩ನೆಯ ಭಾನುವಾರ ಸಂಜೆ ೬ ಗಂಟೆಗೆ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ನಡೆಯುವುದು. ರಾಜಸೇವಾಸಕ್ತ ಶ್ರೀ. ಬಿ. ಎಂ. ಶ್ರೀಕಂಠಯ್ಯನವರು ಅಧ್ಯಕ್ಷತೆ ವಹಿಸಲು ದಯಮಾಡಿ ಒಪ್ಪಿರುತ್ತಾರೆ.

೬೭೧—೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

## ನಾನು ಕಂಡ 'ಶ್ರೀ'ಯವರು

ಆಗ ನಾನು ಹೈಸ್ಕೂಲಿನಲ್ಲಿ ಓದುತ್ತಿದ್ದೆ. ಬೇಸಗೆ ರಜದಲ್ಲಿ ನಮ್ಮೂರಿಗೆ ಹೋಗಿದ್ದೆ. ಒಂದು ಸಂಜೆ ತಿರುಗಾಡಿಕೊಂಡು ಬರುತ್ತಿದ್ದಾಗ ನಮ್ಮೂರಿನ ಸಭಾ ಮಂದಿರದಲ್ಲಿ ಜನ ಸೇರಿದ್ದುದು ಕಂಡು ಬಂದಿತು. ನಾನೂ ಸಭಾಮಂದಿರದೊಳಕ್ಕೆ ನುಗ್ಗಿದೆ. ಅಲ್ಲಿ ಆಗುತ್ತಿದ್ದುದು 'ಅಶ್ವತ್ಥಾಮನ್' ನಾಟಕದ ವಾಚನ. ಅಂದೇ ನಾನು 'ಶ್ರೀ'ಯವರ ಹೆಸರನ್ನು ಕೇಳಿದುದು.

ಆಗ ನನಗೆ ಕನ್ನಡವೆಂದರೆ ಅಷ್ಟಕ್ಕಷ್ಟೆ. ಮನೆಯಲ್ಲಿ ಮಾತಾಡುವುದು ಹರುಕು ಮುರುಕು ತಮಿಳು; ಹೈಸ್ಕೂಲಿನಲ್ಲಿ ದ್ವಿತೀಯ ಭಾಷೆ ಸಂಸ್ಕೃತ; ಮಾಧ್ಯಮ ಇಂಗ್ಲೀಷು; ಮಾಧ್ಯಮಿಕ ಶಾಲೆಯಲ್ಲಿ 'ನಳಚರಿತ್ರೆ'ಯನ್ನೊ ರಾಮಾಯಣವನ್ನೊ ಓದಿದುದೇ ಕೊನೆ ಕನ್ನಡದಲ್ಲಿ. ಇನ್ನು ಕನ್ನಡಕ್ಕೆ ಸ್ಥಾನವೆಲ್ಲಿ? ಕನ್ನಡದ ಚೆಲುವು, ಸೊಬಗು, ತಿಳಿದೀತಾದರೂ ಹೇಗೆ? ಕನ್ನಡ ನಾಡಿನ, ನುಡಿಯ ವಿಷಯದಲ್ಲಿ ಅಭಿಮಾನ ಬೆಳೆಯುವುದಾದರೂ ಎಂತು? ಆದರೆ ನನ್ನ ಈ ಮನೋಭಾವದ ಕೊನೆ ಅಂದೇ ಆಯಿತು. ಆ ನಾಟಕದಲ್ಲಿ ಅಶ್ವತ್ಥಾಮನ ಬಾಯಲ್ಲಿ ಒಂದು ಮಾತು ಬಂತು:

"ಓವೊ, ಕನ್ನಡ ನಾಡೇ,
ಮುನ್ನೀರ್ ಮೊಱಿಂಗು ಕರೆನಾಡೇ,
ಮಲೆನಾಡೆ, ಪೊನಲ್‌ನಾಡೆ, ಬಯಲ ಪೊನ್‌ನಾಡೇ."

ಈ ಅಳಲು ನನ್ನ ಮನದಲ್ಲಿ ಏನೋ ಒಂದು ಭಾವನೆಯನ್ನು ಕೆರಳಿಸಿತು. ನಾಟಕದಲ್ಲಿ ಉದ್ದಕ್ಕೂ ಅದೇ ಭಾವದ ಮಿಡಿತ, ಅದೇ ದುಗುಡದ ಕೊರೆತ. ವಾಚನ ಮುಗಿದು ಮನೆಗೆ ಮರಳಿದಾಗ ನನ್ನ ತಲೆಯ ತುಂಬ ಬರಿ ಕನ್ನಡ ನಾಡೇ, ಅಶ್ವತ್ಥಾಮನ ಕೋಯಿಲಿನ ನೀರವ ಸನ್ನಿವೇಶವೇ.

ಹಾಗಾದರೆ ಕನ್ನಡ ನಾಡೆಂಬುದಿದೆಯೆ? ಕನ್ನಡ ಮಾತಾಡುವವರು ಅಲ್ಲಷ್ಟು ಇಲ್ಲಷ್ಟು ಇದ್ದಾರಲ್ಲ? ಇವರೆಲ್ಲ ಒಂದೆ? ನನ್ನಂಥ ತಮಿಳು ಮಾತಾಡುವವರ ಗತಿ? ನಾನು ಮಾತಾಡುವುದು ತಮಿಳೆ? — ಚೆಂದಗೆಟ್ಟ ತಮಿಳಲ್ಲವೆ? ನನ್ನಲ್ಲಿ ತಮಿಳುತನವಾದರೂ ಏನಿದೆ? ಈ ಭಾವನೆಗಳು ನನ್ನ ತಲೆಯಲ್ಲಿ ತಾಕಲಾಡಿದುವು.

ಸ್ವಲ್ಪ ದಿನಗಳ ಮೇಲೆ ಪತ್ರಿಕೆಯಲ್ಲಿ ಯಾವುದೋ ಒಂದು ಕರ್ನಾಟಕ ಸಂಘದ ಪ್ರಾರಂಭ ಭಾಷಣದ ಸುದ್ದಿ ಬಂದಿತ್ತು. ಮಾತಾಡಿದ್ದವರು 'ಶ್ರೀ'ಯವರು. ಆಶೆಯಿಂದ ಅದನ್ನು ಓದಿದೆ. ಸುದ್ದಿ ಇದ್ದುದು ಬರಿಯ ಒಂದು 'ತುಣುಕು' ಮಾತ್ರ. ಆದರೆ ಅದರಲ್ಲಿದ್ದುದು 'ಅಶ್ವತ್ಥಾಮನ್'ನಲ್ಲಿ ಕಂಡುಬಂದ ನಾಡಿನ ಒಲುಮೆಯೇ, ಆ ನಿಡು ಬಯಕೆಯೇ. ಆಗ ನಾನು ಕಂಡುಕೊಂಡೆ, 'ಅಶ್ವತ್ಥಾಮನ್' ನಾಟಕದಲ್ಲಿ ನಾಡಿನ ಒಲುಮೆ ಹಾಡಾಗಿ ಹರಿಯುವುದು ಅದರ ಹಿಂದಿರುವ 'ಶ್ರೀ'ಯವರ ಹೃದಯದಿಂದ ಎಂದು. ಪಂಪ ಮಹಾಕವಿ ತನ್ನ ಹಿರಿಗಬ್ಬವಾದ 'ವಿಕ್ರಮಾರ್ಜುನ ವಿಜಯ'ದಲ್ಲಿ ತನ್ನ ನಾಡಾದ ಬನವಾಸಿಯ ಹಿರಿಮೆಯನ್ನು, ಸೊಬಗನ್ನು ಅರ್ಜುನನ ಬಾಯಲ್ಲಿ ಹಾಡಿಸಿ, ಹೊಗಳಿಸಿ, ತನ್ನ ಹೃದಯದ ಕಾವನ್ನು ಇಳಿಸಿಕೊಂಡಿದ್ದಾನೆ. ಅಂತೆಯೆ 'ಶ್ರೀ'ಯವರ ನಾಡಪ್ರೇಮ ಅಶ್ವತ್ಥಾಮನ ಬಾಯಲ್ಲಿ, ಬೇಡರ ಬಾಯಲ್ಲಿ ಅಳಲಹೊಳೆಯಾಗಿ ಹರಿದಿದೆ. ಈ ನಾಟಕ ನನ್ನ ಮನದಲ್ಲಿ ನನಗೆ ಗೊತ್ತಿಲ್ಲದೆಯೆ ಒಂದು ಮಾರ್ಪಾಟನ್ನು ಉಂಟುಮಾಡಿತು. ಅಂದು ಅದು ನನಗೆ ತಿಳಿಯಲಿಲ್ಲ; ಇಂದು ಅದು ನನಗೆ ತಿಳಿಯುತ್ತಿದೆ. ಮಹಾಕಾವ್ಯ ಮಾಡಬೇಕಾದುದು ಇದಕ್ಕಿಂತ ಹೆಚ್ಚಾದುದೇನಿದೆ?

ಅಂದು ನನ್ನ ಹೃದಯದಲ್ಲಿ ಕನ್ನಡದ ಕಮಲವನ್ನು ಅರಳಿಸಿದವರು 'ಶ್ರೀ'ಯವರು. ಅಂದಿನಿಂದ ಇಂದಿನ ವರೆಗೂ ಅದು ಬಾಡದೆ ಇದೆ. ಅಂದು 'ಶ್ರೀ'ಯವರ ವಿಷಯದಲ್ಲಿ ನನ್ನ ಮನದಲ್ಲಿ ಮೂಡಿದ ಗೌರವ ಇಂದೂ ಅಚ್ಚಳಿಯದೆ ಇದೆ.

ಕನ್ನಡ ನಾಡಿನಲ್ಲಿ ಎಲ್ಲಿ ಕನ್ನಡದ ಬಾವುಟ ಮೆರೆಯಲಿ, ಅಲ್ಲಿ 'ಶ್ರೀ'ಯವರು; ಎಲ್ಲಿ ಒಂದು ಕರ್ನಾಟಕ ಸಂಘ ಪ್ರಾರಂಭವಾಗಲಿ, ಅಲ್ಲಿ 'ಶ್ರೀ'ಯವರು; ಯಾವ ಕರ್ನಾಟಕ ಸಂಘದ ಚರಿತ್ರೆಯ ಹಾಳೆಗಳನ್ನು ಮಗುಚಿ ಹಾಕಲಿ, ಅಲ್ಲಿ 'ಶ್ರೀ'ಯವರ ಹೆಸರು; ಎಲ್ಲಿ ಒಬ್ಬ ಹೊಸ ಕವಿ ತನ್ನ ತೊದಲು ನುಡಿ ಉಲಿಯಲಿ, ಅವನ ಮೊದಲ ನುಡಿ 'ಶ್ರೀ'ಯವರಿಗೆ ಭಕ್ತಿಯ ಕಾಣಿಕೆ, ಅವನಿಗೆ 'ಶ್ರೀ'ಯವರ ತುಂಬು ಹರಕೆ. ಕನ್ನಡಕ್ಕೂ 'ಶ್ರೀ'ಯವರಿಗೂ ಯಾವಾಗಲೂ ನಂಟು, ಗಂಟು.

ಹಾಗಾದರೆ 'ಶ್ರೀ'ಯವರು ಯಾರು? ಕನ್ನಡದ ಕುಲವೇಕೆ 'ಶ್ರೀ'ಯವರಿಗೆ ಗೌರವವನ್ನು ಸಲ್ಲಿಸುತ್ತಿದೆ? ಇದಕ್ಕೆ ಉತ್ತರವನ್ನು ಹೇಳಬೇಕೆ? ಇವರನ್ನು ಯಾವ ದೃಷ್ಟಿಯಿಂದ ನೋಡಬೇಕು? ವಿಶ್ವವಿದ್ಯಾನಿಲಯದಲ್ಲಿ ಪ್ರಧಾನಾಧ್ಯಾಪಕರಾಗಿದ್ದರೆಂದೆ? ಪರಿಷತ್ತಿನ ಉಪಾಧ್ಯಕ್ಷರಾಗಿದ್ದರೆಂದೆ? ಪಂಡಿತರೆಂದೆ? ಕವಿಯೆಂದೆ? ನಾಡನ್ನು ಸುತ್ತಿದವರೆಂದೆ? ಇವುಗಳ ಜತೆಗೆ ಇವರಲ್ಲಿ ಕೆಲವು ಗುಣಗಳಿವೆ. ಇವರ ಕನ್ನಡದ ಸೆಲೆ ಕನ್ನಡದ ಕಲಿಗಳನ್ನು ಸೆಳೆಯಿತು; ಇವರ ಕನ್ನಡ ಕೆಚ್ಚು ಅವರನ್ನು ಒಟ್ಟುಗೂಡಿಸಿತು; ಇವರ ಸೌಜನ್ಯ ಅವರು 'ಶ್ರೀ'ಯವರನ್ನು ಅಗಲದಂತೆ ಬೆಸೆಯಿತು— "ಸಹನಾವವತು; ಸಹನೌ ಭುನಕ್ತು; ಸಹವೀರ್ಯಮ್ ಕರವಾವಹೈ; ತೇಜಸ್ವಿನಾವಧೀತಮಸ್ತು; ಮಾ ವಿದ್ವಿಷಾವಹೈ" ಎಂಬ ಉಪನಿಷದ್ವಾಕ್ಯದಂತೆ.

ಕನ್ನಡ ನಾಡು ತನ್ನ ಹಿಂದಿನ ವೈಭವವನ್ನು ಮರೆತಿತ್ತು. ಅದರ ಬಾವುಟದ ತುದಿ ಹರಿದು ಹೈದರಾಬಾದು, ಮದರಾಸು, ಬೊಂಬಾಯಿ ಇವುಗಳಲ್ಲಿ ಸೇರಿ ಕನ್ನಡದ ಕನಸು ಚೂರಾಯಿತು. ಆಗ ನಾಡು ಒಂದು, ನುಡಿ ಒಂದು ಎಂಬ ಭಾವನೆಯನ್ನು ಜನರ ಮನದಲ್ಲಿ ಮರುಕೊಳಿಸಿದವರು ಆಲೂರು ವೆಂಕಟರಾಯರೇ ಮುಂತಾದ ಹಿರಿಯರು. ಇವರಿಂದ ನಿದ್ದೆಯಲ್ಲಿದ್ದ ನಾಡು ಎಚ್ಚತ್ತಿತ್ತು. ಆದರೆ ನಿದ್ದೆಯ ಜೊಂಪು ಇನ್ನೂ ಹೋಗಿರಲಿಲ್ಲ. ಎಚ್ಚತ್ತ ಜನ ತನ್ನ ಹಳೆಯ ರೀತಿಯನ್ನೆ ಅನುಸರಿಸಿತ್ತು; ಹೊಸ ಹಾದಿಯನ್ನು ತುಳಿಯುವ ಕೆಚ್ಚು ಅದಕ್ಕಿನ್ನೂ ಬಂದಿರಲಿಲ್ಲ. ಅಂಥ ಸಮಯದಲ್ಲಿ 'ಶ್ರೀ'ಯವರು ಧೈರ್ಯದಿಂದ ಹೊಸ ಹಾದಿಯಲ್ಲಿ ಹೆಜ್ಜೆಯಿಟ್ಟರು. ಇವರಿಟ್ಟ ಹೊಸ ಹೆಜ್ಜೆಯ ಫಲವೇ ಇವರ 'ಇಂಗ್ಲಿಷ್ ಗೀತಗಳು'. ಜನರಲ್ಲಿ ಹೊಸ ಹುರುಪು ಮೈದಾಳುತ್ತಿದೆ; ಹೊಸ ಭಾವ ಕೊನರುತ್ತಿದೆ; ಹೊಸ ದೃಷ್ಟಿ ಹೊಡೆಯಿಡುತ್ತಿದೆ; ಅದಕ್ಕೆ ತಕ್ಕಂತೆ ಸಾಹಿತ್ಯದಲ್ಲೂ ಹೊಸ ಸೃಷ್ಟಿ ಆಗಬೇಕು ಎಂದರು. 'ಪಡುವ ಕಡಲ ಹೊನ್ನ ಹೆಣ್ಣಿನ' ಉಡುಗೆಯನ್ನು ನಾಡ ಹೆಣ್ಣಿಗೆ ತೊಡಿಸಿದರು. 'ಅವಳ ತೊಡಿಗೆ ಇವಳಿಗಿಟ್ಟು ಹಾಡ ಬಯಸಿ'ದರು; ಬಯಸಿ ಹಾಡಿದರು; ಹಾಡಿ ನಲಿವನಾಂತರು. 'ಒಮ್ಮೆ ಅವಳು, ಒಮ್ಮೆ ಇವಳು, ಕುಣಿಸಿ' ನಲಿಸುತ್ತಿರಲು ತಾವೂ ನಲಿದರು, ತಮ್ಮ ಜನರನ್ನೂ ನಲಿಸಿದರು, ತಣಿಸಿದರು. ಹೊಸದನ್ನು ಕಂಡ ಜನ ಆಶೆಯಿಂದ ಆ ಕೃತಿಯ ಕಡೆಗೆ ನೋಡಿತು; ಆ ನಿಡುನೋಟಕ್ಕೆ ಮನಸೋತು ಅದನ್ನು ಸೆಳೆದಪ್ಪಿತು.

ಕನ್ನಡ ನಾಡಿಗಾಗಿ ಇವರು ಪಟ್ಟಪಾಡು ಅಷ್ಟಿಷ್ಟಲ್ಲ. ಕನ್ನಡ ನಾಡಿನಲ್ಲಿ ಇವರು ಸುತ್ತದ ಊರಿಲ್ಲ. ಇವರು ತಮ್ಮ ಹಿಂದೆ ಒಂದು ದೊಡ್ಡ ಕನ್ನಡದ ಪಡೆಯನ್ನೆ ಕಟ್ಟಿದರು; ತಮ್ಮ ಹೊಂಗನಸಿನ ನೋಟವನ್ನು ಆ ಪಡೆಗೂ ತೋರಿದರು; ಅದರ ಕೈಯಲ್ಲಿ ನಾಡಿನ ಮುಂಗಾಣ್ಕೆಯ ಹೊಣೆಯನ್ನಿತ್ತರು. ಕನ್ನಡ ಸಾಹಿತ್ಯ ಸಮ್ಮೇಳನ ಅಧ್ಯಕ್ಷತೆಯನ್ನಿತ್ತು ನಾಡು ಇವರನ್ನು ಗೌರವಿಸಿತು. ಐದು ವರುಷ ಇವರು ಪರಿಷತ್ತಿನ ಉಪಾಧ್ಯಕ್ಷರಾಗಿದ್ದರು; ಹೋದ ವರುಷ ಇವರು ವಿಶ್ವವಿದ್ಯಾನಿಲಯ ಪ್ರಧಾನಾಧ್ಯಾಪಕತನದಿಂದ ನಿವೃತ್ತಿ ಹೊಂದಿದುದರಿಂದ ಇವರ ಹೊತ್ತೆಲ್ಲ ನಾಡಿಗಾಗಿಯೇ ಸಲ್ಲುವುದೆಂದು ನಾಡು ಹರುಷ ತಾಳಿತು. ಆದರೆ ಈಗ ಇವರು ಪರಿಷತ್ತಿನ ಉಪಾಧ್ಯಕ್ಷಸ್ಥಾನದಿಂದ ನಿವೃತ್ತಿ ಹೊಂದಿದರೆಂಬ ಅನಿರೀಕ್ಷಿತವಾದ ಸುದ್ದಿ ಜನಕ್ಕೆ ನಿರಾಶೆಯನ್ನುಂಟುಮಾಡಿತು. ಇವರು ಪರಿಷತ್ತಿನ ಅಧಿಕಾರವನ್ನು ಬಿಟ್ಟರೂ ನಾಡು ಇವರನ್ನು ಬಿಡದು. ಇವರೂ ಕನ್ನಡದ ಜನವನ್ನು ಎಂದಿನಂತೆಯೆ 'ಕೈ ಹಿಡಿದು ನಡಸು'ವರೆಂಬ ಭರವಸೆ ಜನಕ್ಕಿದೆ.

'ಶ್ರೀ'ಯವರು ಪಾಠ ಹೇಳುವ ತರಗತಿಯಲ್ಲಿ ಕೂರಬೇಕೆಂದು ನನಗೊಂದು ಹಿರಿಯಾಸೆ ಇತ್ತು. ಆದರೆ ನನಗೆ ಆ ಭಾಗ್ಯ ಕಾಲೇಜಿನಲ್ಲಿ ಲಭಿಸಲಿಲ್ಲ; ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ನಡಸ

ಲ್ಪಡುವ 'ಸಾಹಿತ್ಯ ತರಗತಿ'ಯಲ್ಲಿ ಲಭಿಸಿತು. ಕನ್ನಡದ ತರುಣರೆಂದರೆ ಇವರಿಗೆ ಬಲು ಒಲವು, ಬಲು ಹಿಗ್ಗು. ಇವರ ಮಾತಿನಲ್ಲಿ ಹಾಸು ಹೊಕ್ಕಾಗಿದ್ದ ಕನ್ನಡದ ಕೆಚ್ಚು ಇವರ ಪಾಠದ ಜತೆಯಲ್ಲಿಯೇ ನಮ್ಮ ಮನದ ಮೇಲೆ ಅಚ್ಚೊತ್ತಿತು. ಒಮ್ಮೆ ಕನ್ನಡ-ಸಕ್ಕದಗಳ ಸಂಬಂಧದ ಮಾತು ಬಂತು. ಆಗ 'ಶ್ರೀ'ಯವರು "ಈ ಮಾತೆತ್ತಿದರೆ ಅದನ್ನು ತಪ್ಪಾಗಿ ತಿಳಿದುಕೊಳ್ಳುತ್ತಾರೆ, ಕೆಲವು ಸಂಸ್ಕೃತ ಪ್ರೇಮಿಗಳು. ಸಂಸ್ಕೃತ ಕನ್ನಡಕ್ಕೆ ಬೇಡವೆಂದಲ್ಲ, ನಾನು ಹೇಳುವುದು. ಅಂಥ ಹಟವಾದಿ ನಾನಲ್ಲ. ಸಂಸ್ಕೃತದಿಂದ ಕನ್ನಡದ ಬೆಳವಣಿಗೆಯಾಗಿದೆ. ಆದರೆ ಸಂಸ್ಕೃತ ಕನ್ನಡಕ್ಕೆ ಮಾರಕವಾಗಿರಬಾರದು, ಪೂರಕವಾಗಿರಬೇಕು. ಅತಿಯಾಗಿ ಸಂಸ್ಕೃತ ಮೋಹ ಬೇಡ" ಎಂದರು. ಈ ಮಾತು ಎಂದೂ ನನ್ನ ಮನಸ್ಸಿನಿಂದ ಅಳಿಸುವುದಿಲ್ಲ.

ಏನನ್ನೂ ಲೆಕ್ಕಿಸದೆ ಕನ್ನಡಕ್ಕಾಗಿ ದುಡಿಯುವುದು ಇವರ ಹಿರಿಮೆ. ಇವರ ತರಗತಿ ಪರಿಷತ್ತಿನಲ್ಲಿ ಪ್ರತಿ ಭಾನುವಾರವೂ ಬೆಳಗ್ಗೆ ಎಂಟು ಗಂಟೆಗೆ ಇತ್ತು. 'ಎಂಟು' ಎಂದರೆ ಸರಿಯಾಗಿ ಎಂಟಕ್ಕೆ ಬರುವುದು 'ಶ್ರೀ'ಯವರ ಪದ್ಧತಿ. ಒಂದು ದಿನ ನಮ್ಮ ತರಗತಿಯವರೆಲ್ಲ ಹೊರಗಡೆಯೇ ಮಾತಾಡುತ್ತ ನಿಂತಿದ್ದು ಐದು ನಿಮಿಷ ತಡವಾಗಿ ತರಗತಿಯನ್ನು ಹೊಕ್ಕೆವು. ಆಗಲೆ ಬಂದು ಕುಳಿತಿದ್ದ 'ಶ್ರೀ'ಯವರು ಆಗ ಆಡಿದುದು ಒಂದೇ ಮಾತು: "ಕನ್ನಡಕ್ಕೆ ಇನ್ನಿಷ್ಟು ಒಲವು ತೋರಿರಿ." ಮಾತು ಪುಟ್ಟದಾದರೂ ಅದರ ಹಿಂದಿದ್ದ ಭಾವ ಬಲು ದೊಡ್ಡದು. ಅದನ್ನು ಬರೆಯುವುದಕ್ಕಿಂತ ಊಹಿಸಿಕೊಳ್ಳಲು ಬಿಡುವುದೇ ಮೇಲು.

ಸಾಹಿತ್ಯ ಪರೀಕ್ಷೆ ಮುಗಿದ ಮೇಲೆ ನಮಗೆ ತಿಳಿವು ನೀಡಿದ ಗುರುಗಳೆಲ್ಲರ ಗೌರವಾರ್ಥವಾಗಿ ವಿದ್ಯಾರ್ಥಿಗಳು ಸೇರಿ ಒಂದು ಸತ್ಕಾರಕೂಟವನ್ನು ಏರ್ಪಡಿಸಿದ್ದೆವು. ಕೊನೆಯಲ್ಲಿ 'ಶ್ರೀ'ಯವರು ಎಲ್ಲ ವಿದ್ಯಾರ್ಥಿಗಳ ಕೈ ಕುಲುಕಿದರು. ನನ್ನದು ಯಾವಾಗಲೂ ಸ್ವಲ್ಪ ಸಂಕೋಚ. ಮುಂದೆ ಬರದೆ ಹಿಂದೆಯೇ ನಿಂತಿದ್ದೆ. ಆಗ ನನ್ನ ಸಹಪಾಠಿ ನನ್ನನ್ನು ಮುಂದೆ ತಳ್ಳಿದರು. 'ಶ್ರೀ'ಯವರು ನಗುತ್ತ, "ಕನ್ನಡದ ಸೇವೆಯಲ್ಲಿ ಹಿಂದೆ ಬಿದ್ದವರನ್ನು ಮುಂದೆ ನಿಲ್ಲಿಸದೆ ನಾ ಬಿಡುವುದಿಲ್ಲ" ಎಂದರು. ನನ್ನ ಮನವನ್ನು ನಿರಾಶೆಯ ಮೋಡ ಕವಿದಾಗಲೆಲ್ಲ ಈ ಮಾತು ನೆನಪಿಗೆ ಬರುತ್ತದೆ.

'ಶ್ರೀ'ಯವರ ಕೃತಿಗಳ ವಿಮರ್ಶೆ ಮಾಡುವ ಯೋಗ್ಯತೆ ನನಗಿಲ್ಲ. ಆ ಕೆಲಸವನ್ನು ಹಿರಿಯರು ಮಾಡಿದ್ದಾರೆ. ಆದರೂ 'ಶ್ರೀ'ಯವರ ಗದ್ಯದ ವಿಷಯವಾಗಿ ನನಗೆ ತಿಳಿದ ಎರಡು ಮಾತುಗಳನ್ನು ಹೇಳಬೇಕೆಂದು ಆಸೆ.

ಕನ್ನಡದಲ್ಲಿ ಹಿಂದಿನಿಂದ ಗದ್ಯ ಅಷ್ಟಾಗಿ ಬೆಳೆದು ಬರಲಿಲ್ಲ. ಹಿಂದಿನ ಸಾಹಿತ್ಯದಲ್ಲಿ 'ಚಾವುಂಡರಾಯ ಪುರಾಣಂ,' 'ವಡ್ಡಾರಾಧನಂ' ಇವನ್ನು ಬಿಟ್ಟರೆ ಇನ್ನಾವ ಗದ್ಯಗ್ರಂಥವೂ ಸಿಕ್ಕಿಲ್ಲ: ಚಂಪೂ ಕಾವ್ಯಗಳಲ್ಲಿಯೂ, 'ರಗಳೆ'ಯಲ್ಲಿಯೂ ಅಲ್ಲಲ್ಲಿ ಗದ್ಯ ತಲೆ ಹಾಕುತ್ತದೆ ಮಾತ್ರ. ಈಚಿನ ಗದ್ಯಗ್ರಂಥಗಳಲ್ಲಿ ಮುದ್ದಣನ 'ರಾಮಾಶ್ವಮೇಧ'ವೇ ಮೊದಲನೆಯದು. ವೆಂಕಟಾಚಾರ್ಯರು ಗಳಗನಾಥರು ಬಂಗಾಳಿ ಮರಾಠಿ ಕಾದಂಬರಿಗಳನ್ನು ಕನ್ನಡಿಸಿ ಕನ್ನಡ ಗದ್ಯಕ್ಕೆ ಒಂದು ಬಳುಕನ್ನು ಕೊಟ್ಟರು. 'ಶ್ರೀನಿವಾಸ'ರ ಶೈಲಿಯಲ್ಲಿ ಒಂದು ಸರಸ ಸಜ್ಜನಿಕೆಯಿದೆ; ತಿ. ತಾ. ಶರ್ಮರ ಶೈಲಿಯಲ್ಲಿ ಒಂದು ಕೆಚ್ಚಿದೆ; ಸಿದ್ದವನಹಳ್ಳಿ ಕೃಷ್ಣಶರ್ಮರ ಶೈಲಿಯಲ್ಲಿ ಒಂದು ಸಂಯಮವಿದೆ: ಒಬ್ಬೊಬ್ಬರೂ ಒಂದೊಂದಕ್ಕೆ ಪ್ರಾಧಾನ್ಯವನ್ನಿತ್ತಿದ್ದಾರೆಂದು ನನಗೆ ತೋರುತ್ತದೆ. 'ಶ್ರೀ'ಯವರ ಗದ್ಯದಲ್ಲಿ ಈ ಮೂರೂ ಗುಣಗಳು ಹೆಣೆದುಕೊಂಡಿವೆ. ಸರಸ ಸಜ್ಜನಿಕೆಗಿಂತ ಕೆಚ್ಚು, ಸಂಯಮ ಒಂದೊಂದು ಪಟ್ಟು ಹೆಚ್ಚಾಗಿವೆಯೆಂದು ಹೇಳಿದರೂ ತಪ್ಪಾಗದು. ಇವರು ಕಳೆದ ಫೆಬ್ರುವರಿಯಿಂದ 'ಕನ್ನಡ ನುಡಿ'ಯ ಸಂಪಾದಕತ್ವದಲ್ಲಿ ರಚಿಸಿದ ಗದ್ಯ ಅಮೋಘವಾದುದು; ಅಪೂರ್ವವಾದುದು. ಬೇಂದ್ರೆಯವರು ಹೇಳುವ 'ಸಾವಿರ ವರುಷದ ಸಂಸ್ಕಾರವುಳ್ಳ ಕನ್ನಡ ಭಾಷೆ' ಇವರ ಕೈಯಲ್ಲಿ ಬೆಳಗಿತು. ಡಿಸೆಂಬರ್ ೨೩ರ 'ಕನ್ನಡ ನುಡಿ'ಯಲ್ಲಿ ಇವರು ಬರೆದಿರುವ 'ಬೀಳ್ಕೊಡಿಗೆ'ಯಾದರೂ ಗದ್ಯದ ಒಡಲನ್ನು ಧರಿಸಿರುವ ಒಂದು ಕಾವ್ಯ 'ಶ್ರೀ'ಯವರ ಜೀವನ ಸಂಗೀತ ಅದರಲ್ಲಿದೆ:

ಕನ್ನಡಿಗರು ಎಚ್ಚತ್ತಿದ್ದೀರಿ. ಬೇಗ ಒಂದಾಗಿ, ಮುಂದಾಗಿ. ಕರ್ನಾಟಕ ರತ್ನಸಿಂಹಾಸನದ ದಿವ್ಯತೇಜಸ್ಸನ್ನು ಎಲ್ಲರೂ ಕೂಡಿ ಬೆಳಸಿ; ನಿಮ್ಮ ಹೆಮ್ಮೆಯ ಒಡವೆಯನ್ನಾಗಿ ಮಾಡಿಕೊಳ್ಳಿ. ಕನ್ನಡ ಬಾವುಟ ಒಂದಾಗಲಿ . . .

ಒಲುಮೆಗಿಂತ ಗೆಲವಿಲ್ಲ. ಒಕ್ಕೂಟಕ್ಕಿಂತ ಬಲವಿಲ್ಲ. ಸಣ್ಣದನ್ನು ದೊಡ್ಡದು ಮಾಡದೆ, ದೊಡ್ಡದನ್ನು ಸಣ್ಣದು ಮಾಡದೆ, ತಾಳ್ಮೆ, ಶಿಸ್ತು, ಅಚ್ಚುಕಟ್ಟು, ಒಕ್ಕೂಟ, ಒಲುಮೆ ಇವು ಕಲೆತರೆ ಕನ್ನಡ ನಾಡಿನ ಮಣ್ಣು ಹೊನ್ನಾಗುವುದು—ಬಾಳು ಬಾನಾಗುವುದು.

ಧರ್ಮದ ಹೊಸಹುಟ್ಟು, ಭಾರತದ ಬಿಡುಗಡೆ, ಕರ್ನಾಟಕದ ಒಕ್ಕೂಟ ಕನ್ನಡದಲ್ಲಿ ವಿಶ್ವಸಂಸ್ಕೃತಿ ಇವು ಎಲ್ಲೆಲ್ಲಿ ಮಿಡಿಯುತ್ತಿವೆ, ಅಲ್ಲಿ ನಾನೂ ಮಿಡಿಯುತ್ತಿದ್ದೇನೆ. ನನ್ನ ಬಾಳಿಕೆಯಲ್ಲಿ ಮಿಕ್ಕಿರುವ ದುಡಿತವೂ ಇವಕ್ಕೇ.

ನಮಸ್ಕಾರ.

"ಬೀಟ್ಕೊಡಿಂ, ಎನಗೆ ಜೀವಾನಂದಮಾಗಿದ್ದರ್ ಎಲ್ಲರ್ ಬೀಟ್ಕೊಡಿಂ, ನಾನ್ ಪೋಗಿ ಬರ್ಪೆನ್."

ಇದನ್ನು ಓದಿದಾಗ, ನನ್ನ ಕಣ್ಣುಗಳು ತೇವವಾದುವು. ಆ ಕಣ್ಣೀರು ಆನಂದದ್ದೋ, ದುಃಖದ್ದೋ ನಾ ಹೇಳಲಾರೆ.

— ಎಚ್ಚೆಸ್ಕೆ.

## ಮಾಲಕ ಅಥವಾ ಮಾಲಿಕ ಶಬ್ದ

ಮಾಲಕ ಅಥವಾ ಮಾಲಿಕ ಅನ್ನುವ ಶಬ್ದ ಯಾವ ಭಾಷೆಯದು? ಕೆಲವರು ಅರಬ್ಬೀ ಭಾಷೆಯಿಂದ ಬಂದ ಶಬ್ದವೆಂದು ಹೇಳುತ್ತಾರೆ. ಪರಿಶೋಧಿಸಿ ನೋಡಿದಲ್ಲಿ ಅದು ಹಾಗೆ ತೋರುವುದಿಲ್ಲ.

ಈ ವಿಷಯ ಶೋಧಿಸುತ್ತಿರುವಾಗ ದಿವಂಗತ ಆಪಟೆಯವರ ಸಂಸ್ಕೃತ ಕೋಶದಲ್ಲಿ 'ಮಲ್' ಧಾತುವಿನ ಅರ್ಥ to hold, to possess (ಹೊಂದಿರು) ಎಂದು ದೊರೆಯಿತು. ಅಷ್ಟೇ ಅಲ್ಲ. ಮಲಿಃ ಎಂದರೆ posssession, ಮಲಿಕ ಎಂದರೆ ರಾಜ ಎಂದೂ ಅರ್ಥ ದೊರೆಯಿತು. ಸಂಸ್ಕೃತ ಮಲಿಕದಿಂದ ಅರಬ್ಬಿ ಮಾಲಿಕ ಶಬ್ದವು ಹುಟ್ಟಿರಬಹುದೆ? ಭಾಷಾಶಾಸ್ತ್ರ ಕೋವಿದರು ಇದರ ಇತ್ಯರ್ಥವನ್ನು ಮಾಡುವುದು ಮೇಲು.

— ಕೆ. ಎಸ್. ಕೃ.

### ವಿಲಿಂಗ್‌ಡನ್ ಕಾಲೇಜು ಕರ್ನಾಟಕ ಸಂಘ, ಸಾಂಗಲಿ

ಮೈಸೂರು ವಿಶ್ವವಿದ್ಯಾನಿಲಯದ ಇತಿಹಾಸದ ಪ್ರೊಫೆಸರೂ ಮೈಸೂರು ಶಾಸನ ಶಾಖೆಯ ಅಧಿಕಾರಿಗಳೂ ಆದ ಡಾ|| ಎಂ. ಎಚ್. ಕೃಷ್ಣ ಅವರು 'ಭಾರತದಲ್ಲಿ ಕರ್ನಾಟಕದ ಸ್ಥಾನ' ಎಂಬ ವಿಷಯವಾಗಿ ಭಾಷಣ ಮಾಡಿದರು. ಭಾಷಣದ ಸಾರಾಂಶ:

"ಭಾರತದಲ್ಲಿ ಸಂಸ್ಕೃತಿಯನ್ನು ಹರಡಲು ಕರ್ನಾಟಕದ ಭೌಗೋಲಿಕ ಸ್ಥಿತಿ ತುಂಬ ಅನುಕೂಲವಾಗಿದೆ. ಆದ್ದರಿಂದಲೇ ಮೇರೆಯ ಮೇಲಿದ್ದ ಪರನಾಡಿನವರೂ ತಮ್ಮ ಸಂಸ್ಕೃತಿಯನ್ನು ಈ ನಾಡ ಮೂಲಕವೇ ಪ್ರಚಾರಮಾಡತೊಡಗಿದರು. ಮೌರ್ಯರ ಕಾಲದಿಂದ ಪೈಠಣ, ಅಮರಾವತಿ, ಪೈಠಣದ ಸುತ್ತಲಿನ ಗೋದಾವರಿ ತೀರಪ್ರದೇಶ—ಎಲ್ಲ ಕನ್ನಡ ನಾಡಿಗೆ ಸೇರಿತ್ತೆಂದು ಸಂಶೋಧನವು ಸಾರುತ್ತಿದೆ. ಎಲ್ಲೋರ ವರೆಗೂ ಅದು ಹಬ್ಬಿರಲು ಸಾಕು. ಇದರಿಂದ ಕರ್ನಾಟಕವು ಉತ್ತರದಿಂದ ದಕ್ಷಿಣಕ್ಕೆ ಸರಿಯುತ್ತ ಬಂದ್ದಿದೆಯೆಂದು ನಾವು ಊಹಿಸಬಹುದಾಗಿದೆ. ೪೪೩ ವರ್ಷ ಆಳಿದ ಶಾತವಾಹನರು ಕನ್ನಡ ನಾಡನ್ನು ಹಬ್ಬಿಸಿದರು. ಈ ಕಾಲಕ್ಕೆ ಗ್ರೀಸ್, ರೋಮ್ ಇವುಗಳೊಡನೆ ಕರ್ನಾಟಕದ ವ್ಯಾಪಾರವಿತ್ತೆಂಬ ಉಲ್ಲೇಖಗಳಿವೆ. ಸಾಹಿತ್ಯದಲ್ಲಿಯೂ ಸಾಕಷ್ಟು ರನ್ನರು ಹುಟ್ಟಿದ್ದಾರೆ. ಪಂಪನು ತನ್ನ ಆದಿಪುರಾಣವನ್ನು ಸಂಸ್ಕೃತದಲ್ಲಿ ಬರೆದಿದ್ದರೆ ಕಾಲಿದಾಸನೊಡನೆ ಸ್ಪರ್ಧಿಸಬಹುದಿತ್ತು. ಕನ್ನಡದಲ್ಲಿ ಬರೆದು ತನ್ನ ಶ್ರೇಯಸ್ಸನ್ನು ಕನ್ನಡಿಗರಿಗೆ ಕೊಟ್ಟಿದ್ದಾನೆ. ದಕ್ಷಿಣ ಹಿಂದುಸ್ಥಾನದ ಸಂಸ್ಕೃತಿಗೆ ವಿಜಯನಗರದ ರಾಜ್ಯದಿಂದ ಮಹೋಪಕಾರವಾಯಿತು. ಅಂದು ಭಾರತಕ್ಕೆಲ್ಲ ನಮ್ಮ ನಾಡು ಆದರ್ಶವಾಗಿತ್ತು. ಇಂದಾದರೂ ನಾವು ಹಾಗೆ ಆಗಲು ಯತ್ನಿಸೋಣ."

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧೨
ಬಿಡಿ ಪತ್ರಿಕೆ: ೬ ಕಾಸು




ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈ ಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿ ಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೧೨

ಬೆಂಗಳೂರು: ಶುಕ್ರವಾರ, ಜನವರಿ ೧೫, ೧೯೪೩

## ಪರಿಷತ್ತಿನ ಮುನ್ನಡೆ

೩

ನಮ್ಮ ಸದಸ್ಯ ಸಂಪತ್ತು ಮತ್ತೊಂದು ದೃಷ್ಟಿಯಿಂದ ಬೆಳೆಯ ಬೇಕಾಗಿದೆ. ಅನೇಕ ಮಿತ್ರರು ನಾವು ಭೌತಶಾಸ್ತ್ರದಲ್ಲಿ ಕೆಲಸ ಮಾಡುತ್ತಿದೇವೆ; ಸಾಹಿತ್ಯ ಪರಿಷತ್ತಿನಲ್ಲಿ ನಾವು ಮಾಡುವುದೇನು? ಅಥವಾ ನಾವು ಶಾಲೆ ಕಾಲೇಜಿನಲ್ಲಿ ಸಂಸ್ಕೃತ, ತಮಿಳು, ತೆಲುಗು ಓದಿದೆವು, ನಾವು ಕನ್ನಡದಲ್ಲಿ ಮಾಡುವುದೇನು? ಎಂದು ಮುಂತಾಗಿ ಹೇಳುತ್ತಾರೆ. ಆಧುನಿಕ ವಿದ್ಯಾಭ್ಯಾಸ ಕ್ರಮದಲ್ಲಿ ಇಂಗ್ಲಿಷು ಪ್ರಮುಖ ಭಾಷೆಯಾಗಿ, ಮಾತೃ ಭಾಷೆ ದೇಶ ಭಾಷೆಗಳು ಐಚ್ಛಿಕ ಪಾಠಗಳಾದುದರಿಂದ ನಮ್ಮ ಮನಸ್ಸಿನಲ್ಲಿ ಈ ತೊಡಕು ಉಂಟಾಗಿದೆ. ಕನ್ನಡ ದೇಶದಲ್ಲಿ ವಿದ್ಯೆಯೆಲ್ಲ ಕನ್ನಡ ಭಾಷೆಯಲ್ಲಿ ನಡೆದಿದ್ದರೆ ಇಂಥ ಮಾತನ್ನು ಯಾರೂ ಹೇಳುವುದಕ್ಕಾಗುತ್ತಿರಲಿಲ್ಲ. ಇಂಗ್ಲೆಂಡಿನಲ್ಲಿ, ನಾನು ರಾಜ್ಯ ಶಾಸ್ತ್ರದಲ್ಲಿ ಪ್ರವೀಣ, ಇಂಗ್ಲಿಷಿನಿಂದ ಏನು ಮಾಡಬಲ್ಲೆ, ಎಂದು ಯಾವ ಆಂಗ್ಲ ಪಂಡಿತನೂ ಹೇಳುವುದಿಲ್ಲ. ಫ್ರಾನ್ಸಿನಲ್ಲಿ ನಾನು ಭೌತಶಾಸ್ತ್ರ ಪ್ರವೀಣ, ಫ್ರೆಂಚ್ ಭಾಷೆಯಿಂದ ನಾನು ಏನು ಮಾಡಲಿ, ಎಂದೂ ಅಲ್ಲಿಯ ಒಬ್ಬನೂ ಹೇಳುವುದಿಲ್ಲ. ಇಂಗ್ಲೆಂಡಿನ ರಾಜ ಶಾಸ್ತ್ರಜ್ಞನೂ ಫ್ರಾನ್ಸಿನ ಭೌತ ಶಾಸ್ತ್ರಜ್ಞನೂ ಇಂಗ್ಲಿಷ್, ಫ್ರೆಂಚ್ ಭಾಷೆಗಳಲ್ಲಿ ತಮ್ಮ ಪಾಠ ಹೇಳುತ್ತಾರೆ; ತಮ್ಮ ಗ್ರಂಥ ಬರೆಯುತ್ತಾರೆ; ತಾವರಿತ ವಿಷಯಗಳನ್ನು ಕುರಿತು ಉಪನ್ಯಾಸ ಮಾಡುತ್ತಾರೆ. ಭರತ ವರ್ಷದ ದುರದೃಷ್ಟದಿಂದ ನಮ್ಮ ಸ್ಥಿತಿ ವಿಪರೀತವಾಗಿದೆ. ಯಾವ ಶಾಸ್ತ್ರವನ್ನು ಉಪಾಸಿಸುತ್ತಿದ್ದರೂ ದೇಶದ ಭಾಷೆಯಲ್ಲಿ ಪಾಠ ಹೇಳುವುದು, ಪುಸ್ತಕ ಬರೆಯುವುದು, ಉಪನ್ಯಾಸ ಮಾಡುವುದು ಸಹಜವಾದ ಸ್ಥಿತಿ, ಸದ್ಯದಲ್ಲಿ ಇರುವಂತೆ ಇಂಗ್ಲಿಷಿನಲ್ಲಿ ಪಾಠ ಹೇಳುವುದು, ಉಪನ್ಯಾಸ ಮಾಡುವುದು ವಿಪರೀತ ಸ್ಥಿತಿ, ಎಂದು ನಮ್ಮ ದೇಶದ ಶಾಸ್ತ್ರವೇತ್ತರು ತಿಳಿಯಬೇಕಾಗಿದೆ; ಸಹಜವಾದ ಸ್ಥಿತಿ ತಪ್ಪಿ ವಿಪರೀತವಾದ ಸ್ಥಿತಿ ಕೆಲವು ಕಾಲ ನಡೆದದ್ದಾಗಿದೆ. ಇನ್ನೂ ಕೆಲವು ಕಾಲ ನಡೆಯ ಬೇಕಾದೀತು. ದೇಶ ಬದುಕಿತೆಂಬ ಕಾಲಕ್ಕೆ ಈ ವಿಪರೀತ ಸ್ಥಿತಿ ಕೊನೆಗಂಡು ಸಹಜವಾದ ಸ್ಥಿತಿ ಪ್ರಾಪ್ತವಾಗಬೇಕು. ಆ ಸಹಜವಾದ ಸ್ಥಿತಿ ಬೇಗನೆ ಬರುವಂತೆ ನಮ್ಮ ಶಾಸ್ತ್ರವೇತ್ತರು ಕೆಲಸಮಾಡಬೇಕು. ಪರ ಭಾಷೆಯಿಂದ ತಮ್ಮ ಪಾಠ ಪ್ರವಚನಗಳನ್ನು ಮಾಡುತ್ತಿರುವ ವಿದ್ವಾಂಸರು ಅಲ್ಲದೆ ನಮ್ಮ ಭಾಷೆಯಲ್ಲಿಯೇ ಪಾಠ ಪ್ರವಚನಗಳನ್ನು ನಡಸುವ ಇತರ ಭಾಷಾವಿದ್ವಾಂಸರೂ ಈ ವಿಷಯವನ್ನು ಗ್ರಹಿಸ ಬೇಕಾಗಿದೆ. ಈಗ ಎರಡು ವರ್ಷದ ಹಿಂದೆ ನಾನು ಒಂದು ಸಂಸ್ಕೃತ ವಿದ್ಯಾಶಾಲೆಗೆ ಹೋಗಿದ್ದಾಗ ಅಲ್ಲಿಯ ವಿದ್ಯಾರ್ಥಿಗಳು ಸಂಸ್ಕೃತದ ಜನ ಕನ್ನಡಕ್ಕೆ ಮಾಡಬಹುದಾದ ಸೇವೆ ಏನು ಎಂಬ ವಿಷಯದಲ್ಲಿ ಒಂದು ಉಪನ್ಯಾಸ ಬೇಕೆಂದು ಕೇಳಿದರು. ಕನ್ನಡ ದೇಶದಲ್ಲಿ ಸಂಸ್ಕೃತದ ಜನ ಎಂದು ಬೇರೊಂದು ಜನ ಇಲ್ಲ. ಕನ್ನಡಿಗರು ಕೆಲವರು ಇಂಗ್ಲಿಷಿನಲ್ಲಿ, ಕೆಲವರು ರಸಾಯನ ಶಾಸ್ತ್ರದಲ್ಲಿ, ಕೆಲವರು ರಾಜ್ಯಶಾಸ್ತ್ರದಲ್ಲಿ ವಿದ್ವಾಂಸರಾಗುವಂತೆ ಕೆಲವರು ಸಂಸ್ಕೃತ ಭಾಷೆಯಲ್ಲಿ ವಿದ್ವಾಂಸರಾಗಬಹುದು; ಇವರು ಪ್ರಾಯಶಃ ಕನ್ನಡದ ಮಾತಿನಿಂದಲೇ ಪಾಠ ಹೇಳುತ್ತಾರೆ; ಕನ್ನಡದಲ್ಲಿ ಗ್ರಂಥಗಳನ್ನು ಬರೆಯುತ್ತಾರೆ; ಉಪನ್ಯಾಸ ಮಾಡುವಲ್ಲಿ ಕನ್ನಡವನ್ನು ಬಳಸುತ್ತಾರೆ. ಪಾಠದ ವಿಷಯ ಸಂಸ್ಕೃತ ಪಾಠದ ಭಾಷೆ ಕನ್ನಡ ಎನ್ನುವುದನ್ನು ಇವರು ತಿಳಿಯಬೇಕಾಗಿದೆ. ಹೀಗೆಯೆ ಇತರ ಭಾಷೆಗಳನ್ನು ಕಲಿತು ಅವುಗಳನ್ನು ಪಾಠ ಹೇಳುವ ನಮ್ಮ ಜನರು ಕನ್ನಡದ ತಳದಲ್ಲಿ ಆಯಾ ಭಾಷೆಗಳ ಪಾಠ ಆಗುತ್ತಿದೆ ಎಂದು ಮನಗಾಣಬೇಕು. ಇವರಲ್ಲಿ ಯಾರು ಹೊರಗೆ ನಿಂತರೂ ಕನ್ನಡದ ಸೇವೆಗೆ ಕೊರತೆ ಉಂಟಾಗುತ್ತದೆ. ಎಲ್ಲ ವಿಷಯಗಳನ್ನೂ ಕುರಿತು ಸಾಧ್ಯವಾದಷ್ಟು ಬೇಗನೆ ಕನ್ನಡದಲ್ಲಿ ಪಾಠ ಪ್ರವಚನ ಮಾಡುವ ಶಕ್ತಿ ನಮ್ಮ ಜನಕ್ಕೆ ಬರಬೇಕು. ಈ ಸ್ಥಿತಿ ಸಿದ್ಧಿಸಬೇಕಾದರೆ ಎಲ್ಲ ವಿಷಯಗಳನ್ನು ಕುರಿತ ವಿದ್ವಾಂಸರೂ ತಮ್ಮ ಜ್ಞಾನವನ್ನು ಕನ್ನಡ ಭಾಷೆಯ ಮೂಲಕ ಪ್ರಚಾರಪಡಿಸುವುದನ್ನು ಅಭ್ಯಾಸ ಮಾಡಬೇಕು. ಇದಕ್ಕೆ ಹತ್ತು ಜನರೊಂದಿಗೆ ಕಲೆತು ಕನ್ನಡದ ವಾತಾವರಣವನ್ನು ಕಟ್ಟಿ ಕನ್ನಡದಲ್ಲಿ ಪದೇ ಪದೇ ಮಾತನಾಡಿ, ಚರ್ಚೆಮಾಡಿ, ಕನ್ನಡಿಗರೆಂಬ ಹೆಸರಿಂದ ಸಂತುಷ್ಟರಾಗಿರುವುದಕ್ಕಿಂತ ಶ್ರೇಷ್ಠವಾದ ಸಾಧನವಿಲ್ಲ. ಇಂಥ ಎಲ್ಲ ಮಹನೀಯರೂ ಪರಿಷತ್ತಿಗೆ ತಪ್ಪದೆ ಸದಸ್ಯರಾಗಬೇಕು. ಹೀಗಲ್ಲದೆ ಪರಿಷತ್ತು ಪೂರ್ಣ ಸಂಸ್ಥೆ ಆಗಲಾರದು, ನಮ್ಮ ವಿದ್ವಾಂಸರು ಕೃತಕಾರ್ಯರಾಗಲಾರರು.

ಈ ರೀತಿಯಲ್ಲಿ ಸದಸ್ಯ ಸಂಪತ್ತು ಸಾಕಾದಷ್ಟು ಬೆಳೆದು, ಧನ ಸಹಾಯ ತಕ್ಕಷ್ಟು ದೊರೆತು, ನಾಡಿನ ಜನ ಉದ್ಧಾರದ ಮಾರ್ಗವನ್ನು ಹಿಡಿಯುವುದಾದರೆ ನಮ್ಮ ಕಾರ್ಯಕ್ರಮ ಬಹುಮುಖವಾಗಿ ವಿಸ್ತಾರ ಆಗಬೇಕು. ಅಂಥ ಕಾರ್ಯಕ್ರಮವನ್ನು ನಡಸುವುದಕ್ಕೆ ನಾಡಿನಲ್ಲಿ ಎಲ್ಲ ಕಡೆಯೂ ಈ ಕೆಲಸಕ್ಕಾಗಿ ಕನ್ನಡ ಸಂಘಗಳು ಏರ್ಪಡಬೇಕು. ಈಗ ಪರಿಷತ್ತಿಗೆ ಅಂಗಸಂಸ್ಥೆಗಳಾಗಿ ಸುಮಾರು ೩೦ ಸಂಸ್ಥೆಗಳಿವೆ. ಇವುಗಳಲ್ಲಿ ಜನರ ಉತ್ತೇಜನ ಸಾಲದೆ ಹಲವು ಸಂಘಗಳು ಕೆಲಸ ಮಾಡುತ್ತಿಲ್ಲ. ನಮ್ಮ ನಾಡಿನ ಹಳ್ಳಿಹಳ್ಳಿಯಲ್ಲಿಯೂ ಒಂದು ಸಂಘ ಏರ್ಪಟ್ಟರೂ ಸಂಸ್ಥೆಗಳ ಸಂಖ್ಯೆ ಹೆಚ್ಚು ಎನ್ನಲಾಗದು. ಹೀಗಿರುವಲ್ಲಿ ಈಗ ಬರುವ ವರ್ಷದಲ್ಲಿ ತಕ್ಕಷ್ಟು ದೊಡ್ಡ ಊರುಗಳಲ್ಲೆಲ್ಲ ಒಂದೊಂದು ಕನ್ನಡ ಸಂಘ ಏರ್ಪಡುವಂತೆ ಆದರೂ ವ್ಯವಸ್ಥೆ ಮಾಡುವುದು ತುಂಬ ಆವಶ್ಯಕ. ಕನ್ನಡದ ಸೀಮೆಯಲ್ಲಿ ಕನ್ನಡಕ್ಕಾಗಿ ಪ್ರಚಾರ ಬೇಕೆ? ಎಂದು ಒಬ್ಬರಿಬ್ಬರು ನನಗೆ ಪ್ರಶ್ನೆ ಹಾಕಿದ್ದುಂಟು. ಇಂಗ್ಲೆಂಡಿನಲ್ಲಿ ಇಂಗ್ಲಿಷ್ ಪ್ರಚಾರಕ್ಕೆ ಸಂಘ ಮಾಡಿದ್ದನ್ನು ನಾವು ಕೇಳಿಲ್ಲ ಎಂದು ಇಂಥವರು ಟೀಕೆ ಮಾಡುತ್ತಾರೆ. ಇಂಗ್ಲೆಂಡಿನಲ್ಲಿ ಇಂಗ್ಲಿಷಿಗೆ ಇರುವ ಸ್ಥಿತಿ ಕನ್ನಡ ದೇಶದಲ್ಲಿ ಕನ್ನಡಕ್ಕೆ ಬಂದಾಗ್ಗೆ ಪ್ರಚಾರದ ಆವಶ್ಯಕತೆ ಅಳಿಯಬಹುದು. ಆ ಸ್ಥಿತಿ ನಮಗೆ ಎಂದು ಕೈ ಸೇರುವುದೋ ನಾನು ಕಾಣೆ. ಆದರೆ ಆ ಸ್ಥಿತಿ ಬಂದ ಕಾಲಕ್ಕೆ ಕೂಡ ನಮಗೆ ದೇಶದ ವಿಸ್ತಾರದಲ್ಲಿ ಎಲ್ಲೆಲ್ಲೂ ಸಾಹಿತ್ಯ ಸಂಸ್ಕೃತಿಗಳಿಗಾಗಿ ದುಡಿಯುವ ಕನ್ನಡ ಸಂಘಗಳು ಇರಬೇಕಾಗುತ್ತವೆ. ಇನ್ನು ಈಗ ಇಂಥ ಸಂಘಗಳು ಬೇಕೆನ್ನುವುದನ್ನು ಒತ್ತಿ ಹೇಳಬೇಕೆ? ಕನ್ನಡದ ದೇಶದಲ್ಲಿ ಕನ್ನಡದ ಪ್ರಚಾರ ಆವಶ್ಯಕವಾಗಿದೆ ಎನ್ನುವುದಕ್ಕೆ ಇಂಥ ಟೀಕೆ ಮಾಡುವ ಕನ್ನಡಿಗರಿರುವುದೇ ಸಾಕ್ಷಿ. ಕನ್ನಡಕ್ಕೆ ಏನಾದರೂ ಆಗಬೇಕಾಗಿದೆ ಎಂದಲ್ಲ ನಾವು ಸಂಘ

(೬೪ನೆಯ ಪುಟಕ್ಕೆ)

# ಕನ್ನಡ ನುಡಿ

**ಶುಕ್ರವಾರ, ಜನವರಿ ೧೫, ೧೯೪೩**

## ಡಾ. ಅಮರನಾಥ ಝಾ ಅವರ ಭಾಷಣ

೯–೧–೪೩ನೆಯ ಶನಿವಾರ ಸಂಜೆ ಅಲಹಾಬಾದ್ ವಿಶ್ವವಿದ್ಯಾನಿಲಯದ ಸ್ಥಾನಪತಿಗಳಾದ ಡಾಕ್ಟರ್ ಜೆ. ಅಮರನಾಥ ಝಾ ಅವರು ಬೆಂಗಳೂರು ಇಂಟರ್‌ಮೀಡಿಯೆಟ್ ಕಾಲೇಜಿನ ಸಂಘದ ಪ್ರಾರಂಭ ಭಾಷಣವನ್ನು ಮಾಡಿ ವಿದ್ಯಾರ್ಥಿಗಳಿಗೆ ಉಪದೇಶ ಮಾಡಿದರು. ವಿದ್ಯಾರ್ಥಿ ಜೀವನದ ಹೊಣೆಯೇನೆಂಬುದನ್ನು ವಿವರಿಸಿ, ವಿದ್ಯಾಭ್ಯಾಸ ಕಾಲದಲ್ಲಿ ವಿದ್ಯಾರ್ಥಿಗಳು ವಿದ್ಯಾರ್ಜನೆಗೇ ಮುಖ್ಯಗಮನ ಕೊಡಬೇಕೆಂದು ಹೇಳಿ, ವಿಶ್ವವಿದ್ಯಾನಿಲಯದ ಗೌರವವನ್ನು ಕಾಪಾಡುವುದೇ ಅವರ ಆದ್ಯಕರ್ತವ್ಯವೆಂದು ಬೋಧಿಸಿದರು.

ವಿದ್ಯಾರ್ಥಿಗಳ ಮುಂದೆ ಡಾ. ಝಾ ಅವರು ಇಟ್ಟ ಲೋಕೋಪಕಾರಕವಾದ ಕಾರ್ಯಕ್ಷೇತ್ರವೆಂದರೆ, ವಿದ್ಯಾರ್ಥಿಗಳು ಬಿಡುವು ಇದ್ದಾಗ, ರಜಾ ದಿನಗಳಲ್ಲಿ, ನೆರೆಹೊರೆಯ ಇಲ್ಲವೆ ದೂರದ ಹಳ್ಳಿಗಳಲ್ಲಿಯ ಅನಕ್ಷರಸ್ಥರಿಗೆ ಓದುಬರಹ ಕಲಿಸಿ ಜನರ ತಿಳಿವಳಿಕೆಯ ಮಟ್ಟವನ್ನು ಹೆಚ್ಚಿಸುವುದು.

ಮೈಸೂರು ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳಿಗೆ ಈ ಕರ್ತವ್ಯವನ್ನು ಹೊಸದಾಗಿ ಹೇಳಿಕೊಡಬೇಕಾಗಿಲ್ಲ. ಅಕ್ಷರ ಪ್ರಚಾರ ಚಳವಳಿ ಈಚೆಗೆ ಸ್ವಲ್ಪ ತೀವ್ರಗತಿಯಲ್ಲಿ ನಡೆಯುತ್ತಿದೆ. ಮೈಸೂರು ನಗರದಲ್ಲಿ ಚಳವಳಿ ಮೊದಲಾದಂದು ಕೆಲವು ವಿದ್ಯಾರ್ಥಿಗಳು ಮುಂದೆ ಬಂದು ಸೇವೆ ಸಲ್ಲಿಸಿ ಮೇಲ್ಪಂಕ್ತಿ ಹಾಕಿದ್ದಾರೆ. ಇದು ಸಂತತವಾಗಿ ನಡೆಯಬೇಕಾದ ಕೆಲಸ. ಮೈಸೂರು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ—ದಿವಂಗತ ದೀನಬಂಧು ಆಂಡ್ರೂಸ್ ಅವರ ಪ್ರೇರಣೆಯಂತೆ—ಬೆಂಗಳೂರು ನಗರದನಲ್ಲಿ 'ಯೂನಿವರ್ಸಿಟಿ ಸೆಟ್ಲ್‌ಮೆಂಟ್' ಸ್ಥಾಪಿತವಾದಾಗ ವಿಶ್ವವಿದ್ಯಾನಿಲಯದ ಸದಸ್ಯಗಣದಿಂದ ನಡೆಯುವ ಅಕ್ಷರ ಪ್ರಚಾರವೇ ಮುಂತಾದ ಸಮಾಜ ಸೇವಾ ಕಾರ್ಯಕ್ಕೆ ಭದ್ರವಾದ ತಳಪಾಯ ಬಿತ್ತೆಂದು ಅನೇಕರು ಹರ್ಷಿಸಿದರು. ಆದರೆ ಈಚೆಗೆ ಈ ಸಂಸ್ಥೆಯ ಕಾರ್ಯ ಕಾರಣಾಂತರಗಳಿಂದ ತಾತ್ಕಾಲಿಕವಾಗಿ ನಿಂತಿರುವುದು ವ್ಯಸನವನ್ನುಂಟುಮಾಡದಿರದು. ಡಾ. ಝಾ ಅವರೂ ಇದನ್ನು ಕೇಳಿ ವಿಷಾದಿಸಿದರು.

ಡಾ. ಝಾ ಅವರು ತಮ್ಮ ಮಾತಿನಲ್ಲಿ ಇನ್ನೊಂದು ಮುಖ್ಯವಾದ ಸಂಗತಿಯನ್ನು ಒತ್ತಿಹೇಳಿದರು. ಅದು ಆಯಾ ಪ್ರಾಂತಭಾಷೆ ಇಲ್ಲವೆ ಮಾತೃಭಾಷೆಯ ಮೂಲಕವೆ ಶಿಕ್ಷಣ ನಡೆಯಬೇಕೆಂಬುದು. ಶಿಕ್ಷಣ ಶಾಸ್ತ್ರಜ್ಞರಾದ ಡಾ. ಝಾ ಅವರಂತೆಯೆ ಎಷ್ಟೋ ಮಂದಿ ತಜ್ಞರು ಈ ಮೂಲತತ್ವವನ್ನು ಒತ್ತಿ ಹೇಳುತ್ತಿದ್ದಾರೆ. ಇಂದಲ್ಲ ನಾಳೆ ಭರತಖಂಡದಲ್ಲಿ ಪ್ರಾಂತಭಾಷೆಗಳಿಗೆ ಶಿಕ್ಷಣದಲ್ಲಿ ಅಗ್ರಸ್ಥಾನ ಕೊಡಲೆ ಬೇಕಾಗುತ್ತದೆ. ಜನರೂ ಈ ಮುಖ್ಯ ವಿಷಯವನ್ನು ಮುಂದೊತ್ತುತ್ತಿದ್ದಾರೆ. ಸರಕಾರದವರು ಪ್ರಜೆಗಳ ಈ ಬೇಡಿಕೆಯನ್ನು ಇನ್ನು ತಡಮಾಡದೆ ಸಲ್ಲಿಸಿ ಶಿಕ್ಷಣಕ್ರಮದಲ್ಲಿ ತಕ್ಕ ಮಾರ್ಪಾಟುಗಳನ್ನು ಮಾಡಬೇಕಾದ ಕಾಲ ಬಂದಿದೆ.

### ಆಕಾಶವಾಣಿ, ಮೈಸೂರು

ಅಖಿಲ ಭಾರತ ರೇಡಿಯೋವಿನ ಮದರಾಸು ಶಾಖೆ ತನ್ನ 'ಮದರಾಸು ಪ್ರಾಂತೀಯ ವಾರ್ತಾಪ್ರಸರಣ ಕಾರ್ಯವ್ಯವಸ್ಥೆ'ಯಲ್ಲಿ (Madras Provincial Broadcasting Service) ಮದರಾಸು ಪ್ರಾಂತದ ಕನ್ನಡ ಪ್ರದೇಶಗಳಲ್ಲಿ ೪೩ ಸಾರ್ವಜನಿಕ ಉಪಯೋಗದ ಗ್ರಾಹಕ ಯಂತ್ರಗಳನ್ನು (Community Receiving Sets) ಇರಿಸಿ ಅವುಗಳಲ್ಲಿ ಪ್ರತಿ ಸಂಜೆ ೨ ಗಂಟೆ ಕಾಲ ಮೈಸೂರು 'ಆಕಾಶವಾಣಿ'ಯ ಕಾರ್ಯಕ್ರಮಗಳು ಕೇಳಬರುವಂತೆ ಯೋಜಿಸಿರುವುದಾಗಿ ತಿಳಿಯಬರುತ್ತದೆ. ಇದು ಸಂತೋಷದ ಸಂಗತಿ. 'ಆಕಾಶವಾಣಿ' ಮೈಸೂರು ಸರ್ಕಾರದ ನೇತೃತ್ವಕ್ಕೆ ಬಂದಂದಿನಿಂದ ಕಾರ್ಯಕ್ರಮಗಳಲ್ಲಿ ವೈವಿಧ್ಯವನ್ನು ಹೆಚ್ಚಿಸಿ ಅದನ್ನು ಜನಪ್ರಿಯವಾಗಿ ಪ್ರಸರಣ ಮಾಡುವ ಪ್ರಯತ್ನ ನಡೆಯುತ್ತಿದೆ. ಈಚೆಗೆ ಎರಡು ಸರಕಾರಗಳೂ ಒಡಂಬಟ್ಟು ಈ ರೀತಿ ಕನ್ನಡ ಕಾರ್ಯಕ್ರಮಗಳ ಪ್ರಸರಣಕ್ಕಾಗಿ ಒಂದು ಏರ್ಪಾಟಿಗೆ ಬಂದಿರುವುದು ಬಹಳ ಯೋಗ್ಯವಾಗಿದೆ. ಇದರಿಂದ ಆಕಾಶವಾಣಿಯ ವ್ಯಾಪ್ತಿ ಮೈಸೂರಿನ ಹೊರಗೆ ಕರ್ನಾಟಕದ ಇತರ ಪ್ರದೇಶಗಳಿಗೂ ಹರಡಲು ಅನುಕೂಲವಾಗಿದೆ.

### ಪರಿಷತ್ತಿನ ಮುನ್ನಡೆ

೬೩ನೆಯ ಪುಟದಿಂದ

ಗಳನ್ನು ಕಟ್ಟುವುದು; ಕನ್ನಡದ ಜನಕ್ಕೆ ಕನ್ನಡದಿಂದ ಮಾತ್ರ ಸಾಧ್ಯವಾದ ಒಂದು ಶುಭವನ್ನು ಸಾಧಿಸುವುದಕ್ಕಾಗಿ ನಮಗೆ ಸಂಘಗಳು ಬೇಕಾಗಿವೆ. ಒಂದೊಂದು ಸ್ಥಳದ ಹತ್ತು ಜನ ಪ್ರಮುಖರು ಸೇರಿ ತಮ್ಮ ಸುತ್ತಣ ನೂರು ಜನಕ್ಕಾಗಿ ದುಡಿಯುವುದೆನ್ನುವುದು ಎಲ್ಲ ಕಾಲದಲ್ಲೂ ಆವಶ್ಯಕವಾಗಿಯೇ ಇರುತ್ತದೆ. ಅದನ್ನು ಇಂದು ನಾವು ಒಂದು ಕಾರ್ಯಕ್ರಮವಾಗಿ ಕೈಗೊಳ್ಳಬೇಕಾಗಿದೆ.

ಕನ್ನಡ ನಾಡಿನ ಒಂದು ನೂರು ಮುಖ್ಯವಾದ ಊರುಗಳಲ್ಲಾದರೂ ಒಡನೆ ಕನ್ನಡ ಸಂಘಗಳು ಏರ್ಪಟ್ಟು ನಮ್ಮ ಸಾಹಿತ್ಯ ಸಂಸ್ಕೃತಿಗಳ ಪುನರುಜ್ಜೀವನಕ್ಕಾಗಿ ದುಡಿಯುವುದಾದರೆ ಹತ್ತಾರು ರೀತಿಯ ಕೆಲಸ ನಾವು ಕೈಹಾಕಲೆಂದು ಕಾದಿವೆ. ಇದರಲ್ಲಿ ಮುಖ್ಯವಾಗಿ ಕಾದಿರುವುದು ಆಯಾ ಸ್ಥಳದ ಸಂಪ್ರದಾಯದಿಂದ ಅಲ್ಲಲ್ಲಿ ವಾಡಿಕೆಯಾಗಿರುವ ಸಾರ್ವಜನಿಕ ಉದ್ಯಮಗಳಲ್ಲಿ ಭಾಗವಹಿಸಿ ಅವುಗಳನ್ನು ಪರಿಷ್ಕಾರಗೊಳಿಸಿ ಅವುಗಳ ಮೂಲಕ ಜನಜೀವನವನ್ನು ಒಂದುಗೂಡಿಸುವುದು. ಮಲೆನಾಡಿನಲ್ಲಿ, ಮಂಗಳೂರು, ಕಾರವಾರದ ಸೀಮೆಯಲ್ಲಿ ಭಾಗವತರ ಆಟ, ದಶಾವತಾರದ ಆಟಗಳು, ಮಂಗಳೂರ ಕಡೆ ತಾಳಮದ್ದಲೆ, ಅದೇ ಪ್ರಾಂತದಲ್ಲಿ ಕಂಬಳದ ಪಂದ್ಯ, ಕೊಡಗಿನಲ್ಲಿ ಮಲೆನಾಡಿನಲ್ಲಿ ಬೊಳಕಾಟ, ವೀರನೃತ್ಯ, ಬೆಳವೊಲದಲ್ಲಿ ಕರಡೀ ವಾದ್ಯ, ಜನಪದ ಗೀತ, ಮೈಸೂರಲ್ಲಿ ದೊಡ್ಡಾಟ, ಬಯಲ ನಾಟಕ, ಎಲ್ಲೆಲ್ಲೂ ಕೋಲು ಹಾಕಿ ಹಾಡುವುದು, ಕುಣಿಯುವುದು; ಹೀಗೆ ಜನತೆಗೆ ಹರ್ಷವನ್ನು ಉಂಟುಮಾಡುವ ಹಳೆಯ ಏರ್ಪಾಡುಗಳು ನಡೆದುಬಂದಿದೆ. ಬಲ್ಲವರೆಂಬ ನಾವು ಈ ವಿನೋದಗಳಲ್ಲಿ ಭಾಗವಹಿಸುವುದಿಲ್ಲ; ಅನೇಕವೇಳೆ ವಹಿಸುವುದು ಅಷ್ಟು ಸುಲಭವಲ್ಲ. ನಗರಗಳಲ್ಲಿರುವ ವಿದ್ಯಾವಂತರು ಹೊಸ ನಾಗರಿಕತೆಯ ವಿನೋದಗಳಿಗೆ ಮನಸ್ಸು ತೆತ್ತಿದೇವೆ. ಈ ಶ್ರೇಷ್ಠ ಆಚರಣೆಯನ್ನು ಅನುಸರಿಸಿ ನಗರಗಳ ಸಾಮಾನ್ಯ ಜನರೂ ಸಾವಿರ ಸಾವಿರವಾಗಿ ಸಿನೀಮಾ ಮಂದಿರಗಳಿಗೆ ಹೋಗುತ್ತಿದಾರೆ. ಸಿನೀಮ ತಕ್ಕಷ್ಟು ಹತ್ತಿರಕ್ಕೆ ಬಂದಿರುವ ಅನೇಕ ಗ್ರಾಮಗಳೂ ಈ ವ್ಯಾಧಿಯಿಂದ ಪೀಡಿತವಾಗಿವೆ. ನಗರದ ಸ್ಥಿತಿಯನ್ನು ಮಾತ್ರ ನೋಡುವ ಅನೇಕರಿಗೆ ಹಿಂದಿನ ವಿನೋದಗಳನ್ನು ಉಳಿಸುವುದು ಅಥವಾ ಬೆಳಸುವುದು ಸಾಧ್ಯವಲ್ಲ ಎಂದೇ ಕಾಣುತ್ತದೆ. ಆದರೆ ನಿಜವಾಗಿ ಕುಟುಕು ಜೀವ ಉಳಿದಿರುವ ಕಲೆಯಾದರೂ ಆಯಾ ಸ್ಥಳದ ಪ್ರಮುಖರು ಮನಸ್ಸು ಮಾಡಿದರೆ ಮತ್ತೆ ಎದ್ದುನಿಂತುಕೊಳ್ಳಬಹುದು. ಬೆಂಗಳೂರಿನಂಥ ಊರಿನಲ್ಲಿ ಕೂಡ ಹಿಂದಿನಂತೆ ಪುರಾಣ ಹೇಳುವ ಕಡೆಗೆ ಹತ್ತಾರು ಜನ ಈಗಲೂ ಹೋಗುತ್ತಾರೆ. ಇಂಥ ಸ್ಥಳಗಳು ಹೆಚ್ಚಿದರೆ ನೂರಾರು ಜನ ಹೋಗುವುದೆನ್ನುವುದರಲ್ಲಿ ಸಂಶಯವಿಲ್ಲ. ಇನ್ನು ಗ್ರಾಮ ಗ್ರಾಮಗಳಲ್ಲಿ ಅಲ್ಲಲ್ಲಿಯ ಜನರೇ ಸೇರಿ ಮನೋರಂಜಕವಾದ ಕಾರ್ಯಕ್ರಮವನ್ನು ಕೈಗೊಳ್ಳುವುದಾದರೆ ಉತ್ತೇಜನವಿಲ್ಲದೆ ಹೋದೀತೆ? ಅಥವಾ ಮೊದಮೊದಲಲ್ಲಿ ಕೆಲವರು ಈ ವಿಷಯದಲ್ಲಿ ಅಪನಂಬಿಕೆ ಅಸಡ್ಡೆ ತೋರಿದರೂ ಬರುಬರುತ್ತ ಕೆಲಸ ಚೆನ್ನಾದಂತೆ ಒಟ್ಟು ಜನತೆಯ ಮನಸ್ಸು ಇಂಥ ವಿಷಯದಲ್ಲಿ ಒಲಿದೇ ಒಲಿಯುತ್ತದೆ. ಹೀಗೆ ಹಿಂದಿನಿಂದ ನಡೆದುಬಂದು ಅಲ್ಲಲ್ಲಿ ವಾಡಿಕೆಯಾಗಿರುವ ವಿನೋದ ಕಾರ್ಯಕ್ರಮಗಳನ್ನು ಉಜ್ಜೀವನಗೊಳಿಸಿ ಜನತೆಯಲ್ಲಿ ಉಲ್ಲಾಸವನ್ನು ಮೊಳೆಸುವುದು, ಬೆಳಸುವುದು ಸ್ಥಳೀಯ ಸಂಘಗಳ ಮೊದಲನೆಯ ಕೆಲಸ.

— ಮಾಸ್ತಿ ವೆಂ. ಅ.

## ರಾಷ್ಟ್ರೀಯ ಜೀವನದಲ್ಲಿ ಸಾಹಿತ್ಯ

[ಪಿ. ಇ. ಎನ್. ಪತ್ರಿಕೆಯ ಸಂಪಾದಿಕೆಯರಾದ ಶ್ರೀಮತಿ ಸೋಫಿಯಾ ವಾಡಿಯಾ ಅವರು ಕೆಲವು ಕಾಲದ ಹಿಂದೆ ಬೆಂಗಳೂರು ಮಲ್ಲೇಶ್ವರದಲ್ಲಿ ಕೊಟ್ಟ ಭಾಷಣದ ಸಾರಾಂಶ]

ಯಾವ ನಾಡಿನ ಜೀವನದಲ್ಲಾಗಲಿ ಸಾಹಿತ್ಯಕ್ಕೆ ಮುಖ್ಯ ಸ್ಥಾನವಿದೆ; ಇಂಡಿಯದಲ್ಲಂತೂ ಸಾಹಿತ್ಯ ವಿಶೇಷ ಮುಖ್ಯತೆಯುಳ್ಳದ್ದಾಗಿದೆ. ಬಹುಶಃ ಸೋವಿಯೆಟ್ ರಷ್ಯವೊಂದನ್ನುಳಿದು, ಇನ್ನೆಲ್ಲಿಯೂ ಕಾಣಬರದಷ್ಟು ಪ್ರಮಾಣದಲ್ಲಿ ಇಲ್ಲಿ ದೇಶವಾದ್ಯಂತವೂ ಸಾಹಿತ್ಯದ ಪುನರುಜ್ಜೀವನ ಕಾರ್ಯ ಅಭಿವರ್ಧನಗೊಳ್ಳುತ್ತಿದೆ; ರಾಜಕೀಯ ಸಮಸ್ಯೆಗಳಲ್ಲಿ ಮಾತ್ರ ಮಗ್ನವಾಗಿದ್ದರೆ ಇದು ಮನವರಿಕೆಯಾಗಲು ಅಡ್ಡಿಯಾಗುತ್ತದೆ. ಬೆಳೆಯೆಲ್ಲ ಉತ್ತಮ ಗುಣದ್ದೆಂದು ಹೇಳಲಾಗುವುದಿಲ್ಲ. ಕಾರ್ಗಾಲ ತಲೆದೋರಿದಂದು ನಮ್ಮ ತೋಟದಲ್ಲಿ ಬೆಳೆಯೊಂದಿಗೆ ಕಳೆಯೂ ಮೊಳೆಯುತ್ತದೆ; ಆದರೆ ಅದನ್ನು ಕ್ರಮಕ್ರಮವಾಗಿ ಕಿತ್ತುಹಾಕುತ್ತೇವೆ; ಪ್ರಯೋಜನಕರವಾದದ್ದು, ಸುಂದರವಾದದ್ದು, ಪರಿಮಳಯುಕ್ತವಾದದ್ದು ಮಾತ್ರ ಉಳಿದುಕೊಳ್ಳುತ್ತದೆ.

ವಾಚಕರನ್ನು ವಿನೋದಪಡಿಸಬೇಕೆಂಬ ಪ್ರಯತ್ನದಲ್ಲಿ ಅಶ್ಲೀಲಕ್ಕೂ ಶಿಥಿಲವಾದ ಬರವಣಿಗೆಗೂ ಇಳಿದು, ತಮ್ಮ ಭರವಣಿಗೆಯ ಶಕ್ತಿಯನ್ನು ಹೊಲೆಗೆಡಿಸಿಕೊಳ್ಳಬಾರದು. ಬೋಧಪ್ರದವಾದ ಅಥವಾ ನೀತಿಪರವಾದ ಬರವಣಿಗೆಯೂ ಸಾಹಿತ್ಯವಾಗಬಹುದು; ವಿನೋದಪಡಿಸುವ ಗುಣವುಳ್ಳ ಬರವಣಿಗೆಯೂ ಸಾಹಿತ್ಯವಾಗಬಹುದು; ಹಾಗಾಗಬೇಕಾದರೆ ವಿಶೇಷ ಲಕ್ಷಣಗಳೇನಿರಬೇಕೆಂಬುದನ್ನು ಮಾತ್ರ ಗಮನಿಸಬೇಕು. ಸುಂದರವಾದ, ನಿಜವಾದ, ನೈತಿಕ ಜ್ಞಾನವನ್ನು ಆಳಗೊಳಿಸುವ, ನೈತಿಕದೃಷ್ಟಿಯನ್ನು ವಿಶಾಲಗೊಳಿಸುವ ಬೋಧಪ್ರದವಾದ ಬರವಣಿಗೆಯಲ್ಲಿ ನಿಜವಾದ ಸಾಹಿತ್ಯಗುಣವಿರಬಹುದು. ಇದಕ್ಕೆ ಪ್ರತಿಯಾಗಿ, ಒಳ್ಳೆಯ ಬರಹಗಾರರು ತಮ್ಮ ವಿನೋದಪಡಿಸುವ ಸಾಮರ್ಥ್ಯದ ಮೂಲಕ ನೀತಿಯ ಹೆಸರೆತ್ತದೆ ಅಪರೋಕ್ಷವಾಗಿ ನೀತಿಪಾಠವನ್ನು ಕಲಿಸಬಹುದು. ಆದರೆ, ಜನರನ್ನು ಮೇಲಕ್ಕೆತ್ತಿಸ್ಫೂರ್ತಿ ತುಂಬುವ ಅಮರ ಸಾಹಿತ್ಯ ಹೊರಹೊಮ್ಮಬೇಕಾದರೆ ಇನ್ನೂ ಹೆಚ್ಚಿನ ಗುಣಬೇಕು. ಆಧ್ಯಾತ್ಮಿಕ ಅನುಭಾವ-ಎಂದರೆ, ಸಾಮಾನ್ಯ ಭಾಷೆಯಲ್ಲಿ ಹೇಳುವುದಾದರೆ, ಸಂಸ್ಕಾರ ಅಥವಾ ಅನುಭವಸಿದ್ಧಿ: ಯಾವುದನ್ನು ಕುರಿತು ಬರೆಯುತ್ತೇವೆಯೋ ಅದರ ವಿಷಯಜ್ಞಾನ–ಇದರ ಸಂಸ್ಪರ್ಶಬೇಕು. ಇಂದು ಲೇಖಕರು ತಾವು ಕಂಡು, ಅರಿತುಕೊಂಡು, ತಮ್ಮ ಅನುಭವವನ್ನಾಗಿ ಮಾಡಿಕೊಂಡ ಸತ್ಯಗಳನ್ನು ಜನಕ್ಕೆ ಕೊಡಬಲ್ಲರಾದರೆ, ಅವರು ಅಮರ ಸಾಹಿತ್ಯ ಸೃಷ್ಟಿಗೆ ಸಾಧನವಾಗಬಲ್ಲರು.

ನಮ್ಮ ವೈಯಕ್ತಿಕ ಆಸಕ್ತಿಯನ್ನು ಒಂದು ನಿರ್ದಿಷ್ಟಭಾಷೆಯ ಎಲ್ಲೆಕಟ್ಟನಷ್ಟರಲ್ಲೇ ಪರಿಮಿತಿಗೊಳಿಸದಿರುವುದು ರಾಷ್ಟ್ರೀಯ ಐಕ್ಯತೆಗೆ ಅತ್ಯಂತ ಮುಖ್ಯ ಕಾರ್ಯ. ಬೇರೆಬೇರೆ ಪ್ರಾಂತ ಭಾಷೆಗಳ ಬರಹಗಾರರು ತಮ್ಮ ದೃಷ್ಟಿಯನ್ನು ತಮ್ಮ ಸೀಮೆಯಿಂದ ಹೊರಕ್ಕೂ ಹರಿಸಿ, ಒಂದು ಪ್ರಾಂತದ ಸಾಹಿತ್ಯವನ್ನು ಇನ್ನೊಂದು ಪ್ರಾಂತದ ವಾಚಕರಿಗೆ ತಿಳಿಸಿಕೊಡಬೇಕು.

ಭಾಷಾವೈವಿಧ್ಯ ಇಲ್ಲವೆ ಮತವೈವಿಧ್ಯ ಐಕ್ಯತೆಗೆ ಅಡ್ಡಿಯೇನಾಗಿಲ್ಲ, ಅತ್ಯುತ್ತಮ ಅವಕಾಶವೇ ಆಗಿದೆ. ಭರತಖಂಡಕ್ಕೆ ಅದರ ವೈವಿಧ್ಯವೇ ಒಂದು ದೊಡ್ಡ ಸಂಪತ್ತು. ನಮ್ಮ ದೇಶದಲ್ಲಿ ವಿವಿಧ ಮಟ್ಟದ ವಾತಾವರಣ ಸ್ಥಿತಿಗತಿಗಳಿವೆ, ಬಗೆಬಗೆಯ ಪ್ರಾಣಿಗಳೂ ಸಸ್ಯಗಳೂ ಇವೆ. ಇವಾವುವೂ ಅದರ ಭೌಗೋಲಿಕ ಐಕ್ಯತೆಗೆ ಭಂಗ ತಂದಿಲ್ಲ. ಹಾಗೆಯೆ, ನಮ್ಮ ನಾಡಿನ ನುಡಿಗಳು ಹಲವಾದರೂ ನುಡಿಯುತ್ತಿರುವ ಆತ್ಮ ಒಂದೇ. ಕವಲುಗಳು ಹಲವು, ಎಲೆಗಳು ಬಣ್ಣಬಣ್ಣದವು, ಆದರೆ ಮರವೊಂದೇ; ಅದು ಬೇರು ಬಿಟ್ಟಿರುವುದು ಒಂದೇ ಭೂಮಿಯಲ್ಲಿ; ಅದು ಎಲ್ಲರಿಗೂ ಕೊಡುವ ಆಶ್ರಯವೂ ಒಂದೇ.

ನಮ್ಮ ತಾಯ್ನಾಡಿನ ಈ ಏಕೀಕೃತ ಸಂಸ್ಕೃತಿಗೆ ಇಸ್ಲಾಂಧರ್ಮ ದೊಡ್ಡ ಕಾಣಿಕೆ ಸಲ್ಲಿಸಿದೆ. ಎರಡು ಮತ ಧರ್ಮಗಳ ಕವಿಗಳಲ್ಲೂ ಹಿಂದೂ – ಮುಸ್ಲಿಂ ಸಂಮಿಳನದ ಸಾಕ್ಷಿಯನ್ನು ಕಾಣುತ್ತೇವೆ. ರವೀಂದ್ರರ ಬರವಣಿಗೆಗಳಲ್ಲಿ ಮುಸ್ಲಿಂ ಸಂಸ್ಕೃತಿಯ ಸಾರವನ್ನು ಅವರು ಹೇಗೆ ತಮ್ಮದನ್ನಾಗಿ ಮಾಡಿಕೊಂಡಿದ್ದಾರೆಂಬುದು ವ್ಯಕ್ತವಾಗಿದೆ; ಸರ್ ಮಹಮದ್ ಇಕ್‌ಬಾಲರ ಬರವಣಿಗೆ (Secrets of the self) ಉಪನಿಷತ್ತುಗಳನ್ನು ನೆನಪಿಗೆ ತರುತ್ತದೆ. ಇತರ ಕವಿಗಳ (ಮುಖ್ಯವಾಗಿ ಶ್ರೀಮತಿ ಸರೋಜಿನಿ ನಾಯ್ಡು ಅವರ) ನಿರ್ಮಾಣಗಳಲ್ಲೂ, ಮೊದಲು ಭಾರತೀಯನೆನಿಸಿ ತರುವಾಯ ಮಾತ್ರ ಬಂಗಾಳಿ ಇಲ್ಲವೆ ಕನ್ನಡಿಗ, ಹಿಂದು, ಜೈನ ಅಥವಾ ಮುಸಲ್ಮಾನನಾಗಿರಲು ಒಂದು ಆದರ್ಶವನ್ನು ಕಾಣುತ್ತಿದ್ದೇವೆ. ಸಾಹಿತ್ಯದ ರೂಪದಲ್ಲಿ ಸಂಸ್ಕೃತಿಯ ರೂಪದಲ್ಲಿ ನಮ್ಮ ಪೂರ್ವಿಕರು ನಮಗೆ ಬಿಟ್ಟುಹೋಗಿರುವ ಅಪಾರ ಆಸ್ತಿಯ ರೂಪದಲ್ಲಿ, ನಮ್ಮ ಭಾರತಭೂಮಿ ಒಂದು. ಆ ಆದರ್ಶವನ್ನು ಸಾಧಿಸಲು ದಾರಿ ತೋರುವ ಹೊಣೆ ಲೇಖಕರದು.

— ಎಂ.ವಿ. ಸೀ.

## ಪರಿಷತ್ತಿನ ಸುದ್ದಿ

### ಕಾರ್ಯಸಮಿತಿ: ಅರಮನೆ ಪ್ರತಿನಿಧಿಗಳು

ಪರಿಷತ್ತಿನ ಕಾರ್ಯಸಮಿತಿಗೆ ಅರಮನೆಯ ಪ್ರತಿನಿಧಿಯಾಗಿ ಮೈಸೂರು ಮಹಾರಾಜರವರ ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲರಾದ ಡಾ॥ ಎ. ಎನ್. ನರಸಿಂಹಯ್ಯ, ಎಂ.ಎ., ಎಲ್.ಟಿ., ಪಿಎಚ್.ಡಿ. ಅವರು ನೇಮಕವಾಗಿದ್ದಾರೆಂದು ತಿಳಿಸಲು ಸಂತೋಷಿಸುತ್ತೇವೆ.

### ಉತ್ತರ ಕರ್ನಾಟಕ ಪ್ರಾಂತಸಮಿತಿ

೧೯೪೩ನೆಯ ವರ್ಷದಲ್ಲಿ ಉತ್ತರ ಕರ್ನಾಟಕ ಪ್ರಾಂತಸಮಿತಿಯ ಸದಸ್ಯರಾಗಿ ಆಯ್ದುಬಂದವರ ಸಭೆ ಈ ತಿಂಗಳ ೩೧ನೆಯ ದಿನದ ಭಾನುವಾರ ಸಂಜೆ ೬ ಗಂಟೆಗೆ 'ಚಾಮರಾಜ ಮಂದಿರ'ದಲ್ಲಿ ಸೇರುವುದು. ಸದಸ್ಯರೆಲ್ಲರೂ ದಯವಿಟ್ಟು ಹೊತ್ತಿಗೆ ಸರಿಯಾಗಿ ಬಂದು ಕಾರ್ಯಗಳನ್ನು ನಡೆಯಿಸಿಕೊಡಬೇಕಾಗಿ ವಿಜ್ಞಾಪನೆ.

ನಡೆಯಬೇಕಾದ ಕಾರ್ಯಗಳು

(೧) ೧೯೪೩ನೆಯ ವರ್ಷಕ್ಕಾಗಿ ಪ್ರಾಂತಸಮಿತಿಯ ಅಧ್ಯಕ್ಷರ, ಕಾರ್ಯದರ್ಶಿಗಳ ಮತ್ತು ಕೋಶಾಧ್ಯಕ್ಷರ ಆಯ್ಕೆ.

(೨) ಈ ವರ್ಷದಲ್ಲಿ ಪ್ರಾಂತ ಸಮಿತಿಯವರು ಕೈಕೊಳ್ಳಲಾಗುವ ಕಾರ್ಯಗಳು.

ಧಾರವಾಡ
೧೪-೧-೧೯೪೩

**ರಂಗಪ್ಪ ಭೀ. ಪೋದ್ದಾರ**
ಕಾರ್ಯದರ್ಶಿ

### ಪರಿಷತ್ತಿಗೆ ಕಾಣಿಕೆ

ಡಾ. ಪಿ. ಕೃಷ್ಣರಾಯರು ತಮ್ಮ ಕುಮಾರಿಯ ಮದುವೆಯ ಸಂಬಂಧದಲ್ಲಿ ಕನ್ನಡದ ಕಾಣಿಕೆಯಾಗಿ ೫ ರೂ. ಗಳನ್ನು ಕೊಟ್ಟಿರುತ್ತಾರೆ. ಪರಿಷತ್ತು ಇದನ್ನು ಕೃತಜ್ಞತೆಯಿಂದ ಸ್ವೀಕರಿಸಿದೆ.

### ಪರಿಷತ್ತಿನ ಹೊಸ ಸದಸ್ಯರು

ಈ ಕೆಳಗೆ ಕಾಣಿಸಿರುವ ೨೨ ಮಂದಿ ಮಹನೀಯರು ಪರಿಷತ್ತಿನ ಸದಸ್ಯರಾಗಿರುತ್ತಾರೆಂದು ತಿಳಿಸಲು ಸಂತೋಷಿಸುತ್ತೇವೆ.

(ತಾ. ೧-೧-೧೯೪೩—೧೩-೧-೧೯೪೩)

**೧. ಪ್ರದಾತೃಗಳು (೫೦೦ ರೂ.):** ಶ್ರೀ. ಬಿ. ದೇವರಾವ್ ಶಿವರಾಂ ಅವರು, ಬೆಂಗಳೂರು.

**೨. ಸಹಾಯಕ ಸದಸ್ಯರು (೧೦೦ ರೂ.):** ೧. ಶ್ರೀ. ಜಿ. ಸುಂದರರಾಯರು, ಬಿ.ಎ., ಮೈಸೂರು ಸರಕಾರದ ಪಿ. ಡಬ್ಲ್ಯು. ಡಿ., ಎಲೆಕ್ಟ್ರಿಕಲ್ ಮತ್ತು ರೈಲ್ವೆ ಇಲಾಖೆಗಳ ಕಾರ್ಯದರ್ಶಿಗಳು, ಬೆಂಗಳೂರು. ೨. ಡಾ. ವಿ. ವಿ. ಮಾಂಟೇರೊ ಅವರು, ಎಂ.ಬಿ.ಬಿ.ಎಸ್., ಎಲ್.ಡಿ.ಎಸ್. (ಇಂಗ್ಲೆಂಡ್), ಸೀನಿಯರ್ ಸರ್ಜನ್, ಬೆಂಗಳೂರು.

**೩. ಆಜೀವ ಸದಸ್ಯರು (೫೦ ರೂ.):** ಶ್ರೀ. ಎಸ್. ನಾಗಪ್ಪನವರು, ಬಿ.ಎ. ಗವಿಪುರ, ಬೆಂಗಳೂರು.

**೪. ಸಾಮಾನ್ಯ ಸದಸ್ಯರು (ಪತ್ರಿಕೆ ಸಹಿತ–೬ ರೂ.):** ಶ್ರೀ.ಗಳಾದ ೧. ಎಸ್. ವಿಷ್ಣುಭಟ್ಟರು, ಬಿ.ಎ., ಎಲ್‌ಎಲ್.ಬಿ. ಪ್ಲೀಡರು, ಶಿವಮೊಗ್ಗ. ೨. ಎಂ. ಎಲ್. ನರಸಿಂಹ ಅಯ್ಯಂಗಾರರು, ಬಿ.ಎ., ಬಿ.ಇ. ಬಸವನಗುಡಿ. ೩. ಬಿ. ಜಿ. ಅಪ್ಪಾದೊರೆ ಮೊದಲಿಯಾರರು, ಬಿ.ಎ., ಬಿ.ಎಸ್‌ಸಿ. ಲೇಬರ್ ಕಮಿಷನರು, ಬೆಂಗಳೂರು. ೪. ಎ. ವಾಸುದೇವರಾಯರು, ಬಿ.ಎ., ಡಿಸ್ಟ್ರಿಕ್ಟ್ ಎಜುಕೇಷನಲ್ ಆಫೀಸರು, ಚಾಮರಾಜಪುರಂ, ಮೈಸೂರು. ೫. ಎಸ್. ವೆಂಕಟಕೃಷ್ಣಯ್ಯನವರು, ಬಿ.ಎ., ಬಿ.ಎಲ್., ರಿಟೈರ್ಡ್ ಡಿಸ್ಟ್ರಿಕ್ಟ್ ಜಡ್ಜರು, ಬಸವನಗುಡಿ. ೬. ಎಸ್. ಸೀತಾರಾಮ್ ಅವರು ಬಿ.ಇ., ಇಂಜನಿಯರು ಮತ್ತು ಕಂಟ್ರಾಕ್ಟರು, ಬಸವನಗುಡಿ. ೭. ಡಾ. ಎ. ಸುಬ್ಬರಾಯರು, ಬಿ.ಎ., ಡಿ.ಎಸ್‌ಸಿ. (ಲಂಡನ್), ಪ್ರಿನ್ಸಿಪಾಲರು, ಸೆಂಟ್ರಲ್ ಕಾಲೇಜು, ಬೆಂಗಳೂರು. ೮. ಡಾ. ಬಿ. ಎಸ್. ರಾಮಣ್ಣನವರು, ಎಂ.ಬಿ.ಬಿ.ಎಸ್. ಲೇಡಿ ವಿಲಿಂಗ್‌ಡನ್ ಸ್ಯಾನಿಟೋರಿಯಂ, ಕೆಂಪೇಗೌಡ ರಸ್ತೆ, ಬೆಂಗಳೂರು. ೯. ಕೆ. ಷಂಸುದ್ದೀನ್ ಖಾನ್ ಅವರು, ಬಿ.ಎ. ಮ್ಯಾನೇಜರು, ಮೈಸೂರು ಸ್ಪನ್ ಸಿಲ್ಕ್ಸ್, ಚೆನ್ನಪಟ್ಟಣ. ೧೦. ಮಾಗನೂರು ಬಸಪ್ಪನವರು, ವ್ಯಾಪಾರಿಗಳು, ದಾವಣಗೆರೆ. ೧೧. ಎ. ಭೀಮಪ್ಪನಾಯಕರು, ಬಿ.ಎ., ಎಲ್‌ಎಲ್.ಬಿ., ಎಂ.ಎಲ್.ಸಿ ಚಿತ್ರದುರ್ಗ.

**೫. ಸಾಮಾನ್ಯ ಸದಸ್ಯರು (೩ ರೂ.):** ಶ್ರೀ.ಗಳಾದ ೧. ಆರ್. ವಿ. ಗುರುಜಾಲಿಯವರು, ಸೇವಾಶ್ರಮ, ಶ್ರೀರಾಮಪುರ, ಬೆಂಗಳೂರು. ೨. ಸಿ. ಎನ್. ರಾಘವಾಚಾರ್ಯರು, ಬಿ.ಎಸ್‌ಸಿ. ಮುನಿಸಿಪಲ್ ಹೈಸ್ಕೂಲು, ಮಳವಳ್ಳಿ. ೩. ಎನ್. ವರದರಾಜನ್ ಅವರು, ಬಿ.ಇ. ಇಂಜಿನಿಯರು ಮತ್ತು ಕಂಟ್ರಾಕ್ಟರು, ವಿಶ್ವೇಶ್ವರಪುರ, ಬೆಂಗಳೂರು. ೪. ಎಸ್. ಶೇಷಗಿರಿರಾಯರು, ಬಸವನಗುಡಿ. ಬೆಂಗಳೂರು. ೫. ಎಚ್. ಶಿವಪ್ಪನವರು, ೫೪, ಕುಂಬಾರ ಪೇಟೆ, ಬೆಂಗಳೂರು. ೬. ಶ್ರೀಮತಿ ಸಿ. ಎನ್. ರತ್ನಾಬಾಯಿ, ಬಿ.ಎ. C/o. ಸಿ. ನರಸಿಂಗರಾವ್, ಪ್ಲೀಡರ್, ಕೋಲಾರ. ೭. ವಿಠ್ಠಲರಾವ ಹಣಮಂತರಾವ ಕುಲಕರ್ಣಿಯವರು, ೨೨೬, ಠಳಕವಾಡಿ, ಬೆಳಗಾಂವಿ.

## ಕನ್ನಡ ಸುದ್ದಿ

### ಬೆಂಗಳೂರು ನಗರದ ಅಕ್ಷರ ಪ್ರಚಾರ ಸಮಿತಿ
### ಪ್ರಶಸ್ತಿಗಳ ವಿನಿಯೋಗ

೧೦–೧–೪೩ನೆಯ ಭಾನುವಾರ ಸಾಯಂಕಾಲ ೬ ಗಂಟೆಗೆ ಪರಿಷನ್ಮಂದಿರದಲ್ಲಿ, ಬೆಂಗಳೂರು ನಗರದ ಅಕ್ಷರ ಪ್ರಚಾರ ಸಮಿತಿಯ ಆಶ್ರಯದಲ್ಲಿ ವಯಸ್ಕರ ಶಿಕ್ಷಣ ಪಡೆದ ವಿದ್ಯಾರ್ಥಿಗಳಿಗೆ ಪ್ರಶಸ್ತಿಗಳನ್ನು ಹಂಚುವ ಸಮಾರಂಭ ಜರುಗಿತು. ಶ್ರೀಮತಿ ಆರ್. ಕಲ್ಯಾಣಮ್ಮನವರು ಅಧ್ಯಕ್ಷತೆ ವಹಿಸಿದ್ದರು. ಸಮಿತಿಯ ಕಾರ್ಯಕಾರಿ ಮಂಡಲದ ಸದಸ್ಯರೂ ಇತರ ಮಹನೀಯರೂ ಮಹಿಳೆಯರೂ ಸಭೆಗೆ ಬಂದಿದ್ದರು. ಪ್ರಾರ್ಥನೆಯಾದ ಮೇಲೆ ಕಾರ್ಯದರ್ಶಿಯವರಾದ ಶ್ರೀಮತಿ ರತ್ನಾಬಾಯಿಯವರು ವರದಿಯನ್ನು ಓದುತ್ತಾ ಈಗಿನ ಜನಗಣತಿ ಮೇರೆ ಈ ನಗರದಲ್ಲಿ ಸುಮಾರು ಒಂದೂವರೆ ಲಕ್ಷ ಜನ ಅನಕ್ಷರಸ್ಥರಿರುವರೆಂದೂ ಅವರೆಲ್ಲರನ್ನೂ ಆದಷ್ಟು ಬೇಗ ಅಕ್ಷರಸ್ಥರನ್ನಾಗಿ ಮಾಡುವ ಮಹತ್ಕಾರ್ಯವನ್ನು ಸಮಿತಿ ಕೈಕೊಂಡಿರುವುದೆಂದೂ ಹೇಳಿ ಇದಕ್ಕಾಗಿ ಹೆಚ್ಚುಹೆಚ್ಚಾಗಿ ಧನಸಹಾಯವೂ ವಿದ್ವಾವಂತರ ನೆರವೂ ಬೇಕೆಂದು ಕೋರಿದರು. ಸುಮಾರು ೬೦ ವಿದ್ಯಾರ್ಥಿಗಳು ಪ್ರಶಸ್ತಿಗಳನ್ನು ಪಡೆದರು. ಇವರೆಲ್ಲರೂ ಅಕ್ಷರಾಭ್ಯಾಸವನ್ನು ಪ್ರಾರಂಭ ಮಾಡಿದ ೫ ತಿಂಗಳಲ್ಲಿ ಚೆನ್ನಾಗಿ ವೃತ್ತಪತ್ರಿಕೆಗಳನ್ನು ಓದುವುದಕ್ಕೂ ಕಾಗದಗಳನ್ನು ಬರೆಯುವುದಕ್ಕೂ ಸಾಕಾದಷ್ಟು ಜ್ಞಾನ ಸಂಪಾದಿಸಿಕೊಂಡಿರುತ್ತಾರೆಂಬ ಸಂಗತಿಯನ್ನು ಸಭೆಗೆ ತಿಳಿಸಿದರು.

ಅಧ್ಯಕ್ಷರು ಪ್ರಶಸ್ತಿ ಪಡೆದ ವಿದ್ಯಾರ್ಥಿಗಳನ್ನು ಅಭಿನಂದಿಸಿ, ಸಮಿತಿ ಇನ್ನೂ ಹೆಚ್ಚು ಕಾರ್ಯವನ್ನು ಮಾಡಬೇಕಾದರೆ ಶಿಕ್ಷಕರುಗಳಿಗೆ ಹೆಚ್ಚು ವರಮಾನ ಸಿಗುವಂತೆ ಮಾಡಿ ಪೂರ್ತಿಯಾಗಿ ಅವರನ್ನು ಇದೇ ಕೆಲಸದಲ್ಲೆ ನಿಯೋಜಿಸುವುದು ಅಗತ್ಯವೆಂದು ಸಲಹೆ ಇತ್ತರು.

ಸಮಿತಿ ಕೋಶಾಧಿಕಾರಿಗಳಾದ ಶ್ರೀ. ವಾಜಪೇಯಂ ವೆಂಕಟೇಶಯ್ಯನವರಿಂದ ವಂದನಾ ಸಮರ್ಪಣೆಯಾದ ಮೇಲೆ ಸಭೆ ಮುಕ್ತಾಯವಾಯಿತು.

**ಬೆಂಗಳೂರು: ಶ್ರೀ ರಾಮಕೃಷ್ಣ ವಿದ್ಯಾರ್ಥಿನಿಲಯ**

ವಿಶ್ವೇಶ್ವರಪುರದಲ್ಲಿರುವ ಶ್ರೀ ರಾಮಕೃಷ್ಣ ವಿದ್ಯಾರ್ಥಿನಿಲಯದಲ್ಲಿ ತಾರೀಖು ೧೪–೧–೧೯೪೩ನೆಯ ಗುರುವಾರ ಸಂಜೆ ೬ ಗಂಟೆಗೆ ಶ್ರೀ. ಸಿ. ಕೆ. ವೆಂಕಟರಾಮಯ್ಯನವರು ಕವಿ ರವೀಂದ್ರರ ಚಿತ್ರದ ಅನಾವರಣ ಮಾಡಿ, ಕವಿವರ್ಯರ ವ್ಯಕ್ತಿತ್ವವನ್ನೂ ಕೃತಿಗಳನ್ನೂ ಪ್ರಶಂಸಿಸಿದರು.

ಚಿತ್ರಕಾರರು: ನಿಲಯದ ವಿದ್ಯಾರ್ಥಿಗಳಾದ ಶ್ರೀ. ಸಿ. ಎಸ್. ನಾರಾಯಣರಾಯರು.

**ಮಲ್ಲೇಶ್ವರ, ಬೆಂಗಳೂರು: ಕರ್ನಾಟಕ ಸಂಘ**

ಸಂಘದ ಆಶ್ರಯದಲ್ಲಿ ಕಾಳಿದಾಸ ಜಯಂತಿ ೧೮–೧–೧೯೪೩ನೆಯ ಸೋಮವಾರದಿಂದ ನಾಲ್ಕು ದಿನ ನಡೆಯುವುದು. ನ್ಯಾಯ ಮಂತ್ರಿಗಳಾದ ರಾಜಮಂತ್ರಪ್ರವೀಣ ಶ್ರೀ. ಎ. ವಿ. ರಾಮನಾಥನ್ ಅವರು ಉಪನ್ಯಾಸಮಾಲೆಯನ್ನು ಪ್ರಾರಂಭಗೊಳಿಸಲು ಒಪ್ಪಿರುತ್ತಾರೆ. ಶ್ರೀ. ಸಿ. ಕೆ. ವೆಂಕಟರಾಮಯ್ಯನವರು (ಕಾಳಿದಾಸನ ಕವಿತಾ ವೈಭವ), ಎಸ್. ರಾಮಚಂದ್ರರಾಯರು (ಕಾಳಿದಾಸನ ಕಾವ್ಯಗಳು), ಎಂ. ಸುಬ್ರಹ್ಮಣ್ಯಶಾಸ್ತ್ರಿಗಳು (ಶಾಕುಂತಲ: ವಾಚನ), ದೇವುಡು ನರಸಿಂಹಶಾಸ್ತ್ರಿಗಳು (ಕಾಳಿದಾಸನ ನಾಟಕಗಳು) ಎಂಬ ವಿಷಯಗಳನ್ನು ಕುರಿತು ಒಂದೊಂದು ದಿನ ಭಾಷಣ ವಾಚನಗಳನ್ನು ಮಾಡಲು ಒಪ್ಪಿದ್ದಾರೆ. ಕಾರ್ಯಕ್ರಮ: ಪ್ರತಿ ಸಂಜೆ ೬–೩೦ ಗಂಟೆಗೆ ನಡೆಯುವುದು. ಸ್ಥಳ: ಮಲ್ಲೇಶ್ವರದ ಶ್ರೀರಾಮ ಭಜನ ಸಭಾ ಮಂದಿರ.

**ಭದ್ರಾವತಿ: ಪ್ರಚಾರೋಪನ್ಯಾಸಗಳು**

ಮೈಸೂರು ವಿಶ್ವವಿದ್ಯಾನಿಲಯದ ಅಧ್ಯಾಪಕ ಸಂಘದವರು ಭದ್ರಾವತಿಯ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಯ ವೆಲ್‌ಫೇರ್ ವಿಭಾಗದ ಆಶ್ರಯದಲ್ಲಿ ಕಳೆದ ವಾರ ೪ನೆಯ ಪ್ರಚಾರೋಪನ್ಯಾಸಗಳನ್ನು ನಡಸಿದರು. ಪ್ರೊ|| ಸಿ. ಆರ್. ನರಸಿಂಹಶಾಸ್ತ್ರಿಗಳು ಆರಂಭ ಭಾಷಣ ಮಾಡಿದರು.

ತಾ. ೨೬–೧೨–೪೨. ಆರಂಭ ಭಾಷಣವಾದ ಮೇಲೆ ಈ ಕೆಳಗಿನಂತೆ ಉಪನ್ಯಾಸಗಳು ಜರುಗಿದವು: 'ಉಪನಿಷತ್ತುಗಳು'–ಶ್ರೀ. ಎಸ್. ಶಿವರಾಮಶಾಸ್ತ್ರಿಗಳು. 'ಕರ್ಮ'–ಶ್ರೀ. ಕೆ. ಆರ್. ಶ್ರೀನಿವಾಸ ಅಯ್ಯಂಗಾರರು.

ತಾ. ೨೭–೧೨–೪೨ 'ಕಬೀರ್' — ಶ್ರೀ. ಎಂ. ಯಮುನಾಚಾರ್ಯರು. 'ಸಂಸ್ಕೃತ ನಾಟಕ'–ಶ್ರೀ. ಸಿ. ಆರ್. ನರಸಿಂಹಶಾಸ್ತ್ರಿಗಳು. 'ಚಲನ ಚಿತ್ರ'–ಶ್ರೀ. ಸಿ. ರಂಗಾಚಾರ್ಯರು.

ತಾ|| ೨೮–೧೨–೪೨ 'ಸಿಕ್‌ಮತ'– ಶ್ರೀ. ಜಿ. ಹನುಮಂತರಾಯರು. 'ವಿಡಂಬನ ಚಿತ್ರಗಳು'–ಶ್ರೀ. ಬಿ. ಎಸ್. ಕೇಶವನ್ ಅವರು. 'ಸಂಸ್ಕೃತ ನಾಟಕ'–ಶ್ರೀ. ಸಿ. ಆರ್. ನರಸಿಂಹಶಾಸ್ತ್ರಿಗಳು.

ತಾ|| ೨೯–೧೨–೪೨ 'ಮುಕ್ತಕಗಳು'–ಶ್ರೀ. ಎನ್. ಶಿವರಾಮಶಾಸ್ತ್ರಿಗಳು. 'ಕಾಶ್ಮೀರ್' (ಸಚಿತ್ರ)–ಶ್ರೀ. ಸಿ. ರಂಗಾಚಾರ್ಯರು.

ಈ ರೀತಿಯಲ್ಲಿ ಕಾರ್ಯಕ್ರಮಗಳು ನಾಲ್ಕುದಿನ ನಡೆದುವು. ಅನೇಕ ಮಹಿಳೆಯರೂ ಮಹನೀಯರೂ ಉಪನ್ಯಾಸಗಳಿಗೆ ಬಂದಿದ್ದರು.

**ಚೆನ್ನಪಟ್ಟಣ: ಭಾರತವಾಚನ**

ಚೆನ್ನಪಟ್ಟಣದ ಕರ್ನಾಟಕ ರಾಷ್ಟ್ರೀಯ ವಿದ್ಯಾಶಾಲೆಯಲ್ಲಿ ತಾ. ೨೪–೧೨–೪೨ನೆಯ ಗುರುವಾರ ಸಂಜೆ ೬–೩೦ ಗಂಟೆಗೆ ಮಡಕೇರಿ ಶ್ರೀ. ಅನಂತಪದ್ಮನಾಭರಾಯರವರು ಭಾರತವಾಚನ ಮಾಡಿದರು. ಸಭೆಯಲ್ಲಿ ವರ್ತಕರೂ ಅಧಿಕಾರಿಗಳೂ ಮುಂತಾಗಿ ಮಹಾಜನರೂ ಮಹಿಳೆಯರೂ ಸೇರಿದ್ದರು. ಶ್ರೀ. ಅ. ನಾರಾಯಣಸ್ವಾಮಿ ಅಯ್ಯರವರು ಸಭಿಕರಿಗೆ ಗಮಕಿಗಳ ಪರಿಚಯ ಮಾಡಿಕೊಟ್ಟರು. ಶ್ರೀ. ಅನಂತಪದ್ಮನಾಭರಾಯರವರು ಗಮಕ ಕಲೆ, ಪರಿಷತ್ತಿನವರು ಗಮಕಕಲೆ ಮತ್ತು ಕನ್ನಡ ನುಡಿಯ ಏಳಿಗೆಗಾಗಿ ಮಾಡುತ್ತಿರುವ ಕೆಲಸಗಳು, ಈ ವಿಷಯಗಳನ್ನೆತ್ತಿ ಸಣ್ಣ ಉಪನ್ಯಾಸ ಮಾಡಿ ಕುಮಾರವ್ಯಾಸನ ಭಾರತದ ಕೃಷ್ಣರಾಯಭಾರದ ಭಾಗವನ್ನು ಸುಶ್ರಾವ್ಯವಾಗಿ ಪಠಿಸಿ ಸಭಿಕರನ್ನು ಆನಂದಗೊಳಿಸಿದರು. ವಿದ್ಯಾಲಯದ ಸಂಚಾಲಕರಾದ ಶ್ರೀ. ಶ್ರೀಕಂಠರಾಯರು ಗಮಕಿಗಳನ್ನೂ ಸಭಿಕರನ್ನೂ ವಂದಿಸಿದರು. ಶ್ರೀಮನ್ಮಹಾರಾಜರ ಶ್ರೇಯಃಪ್ರಾರ್ಥನೆಯನಂತರ ಸಭೆ ಮುಕ್ತಾಯವಾಯಿತು.

**ಮುಂಬಯಿ: ಕನ್ನಡ ಸಂಘ**

ಸಂಘದ ವಾರ್ಷಿಕ ಸಭೆ ಕಳೆದ ತಿಂಗಳಲ್ಲಿ ನಡೆಯಿತು. ವರದಿ, ಲೆಕ್ಕಗಳ ಅಂಗೀಕಾರವಾದ ಮೇಲೆ ವಿದ್ವಾನ್ ಶ್ರೀ. ಎಂ. ಆರ್. ಗೋಪಾಲಾಚಾರ್ಯರನ್ನು ಅಧ್ಯಕ್ಷರನ್ನಾಗಿಯೂ ಶ್ರೀ.ಗಳಾದ ಬಿ. ಜಿ. ಆಚಾರ್ಯರನ್ನೂ ಜಿ. ಎಸ್. ಅಯ್ಯರ್ ಅವರನ್ನೂ ಗೌರವ ಕಾರ್ಯದರ್ಶಿಗಳನ್ನಾಗಿಯೂ ಆರಿಸಲಾಯಿತು. ಕಾರ್ಯನಿರ್ವಾಹಕ ಸಮಿತಿಗೆ ಹಲವು ಮಹನೀಯರು ಆರಿಸಿಬಂದಿದ್ದಾರೆ.

೬೭೮–೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

## ಮೈಸೂರು ಗಣತಿ (೧೯೫೧)

### ಜನಸಾಮಾನ್ಯರಿಗಾಗಿ ಸಂಗ್ರಹ ವರದಿ

"ಅಖಿಲ ಭಾರತ ಗಣತಿ (ಸೆನ್ಸಸ್) ಒಂದು ಅಪೂರ್ವವಾದ ವಿಶಿಷ್ಟತೆಯಿಂದ ಕೂಡಿದೆ. ಏಕೆಂದರೆ, ನಲವತ್ತು ಕೋಟಿ ಜನರ ಬದುಕಿನ ರೀತಿ, ನಾಡಿನ ಏಳಿಗೆಯ ಸ್ಥಿತಿಗತಿಗಳನ್ನು ಅರಿತುಕೊಳ್ಳಬೇಕಾದ ದೊಡ್ಡ ಕಾರ್ಯ ಪ್ರಜಾವರ್ಗದ ಸಂಪೂರ್ಣ ಸಹಕಾರದಿಂದ ನಡೆಯುತ್ತದೆ. ಪ್ರಪಂಚದ ಇನ್ನಾವ ದೇಶದಲ್ಲಿಯೂ ಈ ರೀತಿಯ ಏರ್ಪಾಟಿಲ್ಲ. ಭಾರತದಂಥ ಇಷ್ಟು ದೊಡ್ಡ ದೇಶದ ಗಣತಿ ಕಾರ್ಯಕ್ಕೆ ಈಗ ನಡೆಯುತ್ತಿರುವ ಪ್ರಮಾಣದಲ್ಲಿ, ಕೋಟಿಗಟ್ಟಲೆ ಹಣವನ್ನೊದಗಿಸಿಕೊಳ್ಳಬೇಕಾಗುತ್ತಿತ್ತು. ಜನ ಇದನ್ನು ರಾಷ್ಟ್ರಕಾರ್ಯವೆಂದು, ಸಮಾಜ ಸೇವೆಯೆಂದು ಕರ್ತವ್ಯ ಬುದ್ಧಿಯಿಂದ ಸರಕಾರದೊಡನೆ ಸಹಕರಿಸಿ, ಪ್ರೇಮದ ಸೇವೆಯನ್ನು ಸಲ್ಲಿಸಿ ಸ್ವಲ್ಪ ವೆಚ್ಚದಲ್ಲಿ, ಎಂದರೆ ಕೇವಲ ಅರ್ಧ ಕೋಟಿ ರೂಪಾಯಿ ವೆಚ್ಚದಲ್ಲಿ, ಗಣತಿ ಕಾರ್ಯವನ್ನು ನಿರ್ವಹಿಸಿದ್ದಾರೆ. ಇಷ್ಟು ಕೆಲಸ ಅಮೆರಿಕದಲ್ಲಿ ನಡೆಯಲು ಖರ್ಚು ಎಂದರೆ ೧೫೩ ಕೋಟಿ ವೆಚ್ಚವಾಗುತ್ತದೆ. ಗಣತಿ ಕಾರ್ಯದಲ್ಲಿ ಪ್ರಜೆಗಳ ಈ ಪ್ರಧಾನ ಪಾತ್ರ ಮೊದಲಿಂದ ಭಾರತದಲ್ಲಿ ಸಂಪ್ರದಾಯವಾಗಿ ನಡೆದುಬರುತ್ತಿದೆ. ಇದು ಭಾರತಕ್ಕೆ ಗೌರವವನ್ನು ತರತಕ್ಕ ಅಂಶವಾಗಿದೆ"

ಎಂಬ ತಾತ್ಪರ್ಯದ ಮಾತುಗಳಿಂದ ಅಖಿಲ ಭಾರತದ ಸೆನ್ಸಸ್ ಕಮಿಷನರಾದ ಶ್ರೀ. ಯೇಟ್ಸ್, ಸಿ.ಐ.ಇ., ಐ.ಸಿ.ಎಸ್. ಅವರು ಭರತ ಖಂಡದ ಗಣತಿ ಹೇಗೆ ನಡೆಯುತ್ತಿದೆಯೆಂಬ ವಿಷಯವನ್ನು ಪ್ರಸ್ತಾವಿಸುತ್ತ, ಮೈಸೂರು ಸಂಸ್ಥಾನದ ಸೆನ್ಸಸ್ ಸೂಪರಿಂಟೆಂಡೆಂಟರಾದ ಶ್ರೀ. ಪಿ. ಎಚ್. ಕೃಷ್ಣರಾಯರು ಅಖಿಲ ಭಾರತ ಗಣತಿಯ (೧೯೫೧) ಸಂಬಂಧವಾಗಿ ನಡೆಯಬೇಕೆಂದು ನಿರ್ಧಾರವಾಗಿದ್ದ ಸಂಕಲ್ಪವನ್ನೂ ಯೋಜನೆಯನ್ನೂ ಅತ್ಯಂತ ನಿಷ್ಠೆಯಿಂದಲೂ ದಕ್ಷತೆಯಿಂದಲೂ ಕಾರ್ಯರೂಪಕ್ಕೆ ತಂದಿದ್ದಾರೆಂದು ಹೇಳಿ, ಅವರು ಜನಸಾಮಾನ್ಯಕ್ಕಾಗಿ ಪ್ರಕಟಿಸಿರುವ **ಸಂಗ್ರಹ ವರದಿ** ಆಬಾಲವೃದ್ಧರಿಗೂ ಆಕರ್ಷಕವಾಗಿರುವ ರೀತಿಯಲ್ಲಿ ರಚಿತವಾಗಿದೆಯೆಂದೂ, ಈ ಪುಸ್ತಕವನ್ನು ಸಿದ್ಧಗೊಳಿಸುವುದರಲ್ಲಿ ಶ್ರೀ. ಕೃಷ್ಣರಾಯರು ಅಂಕಿ ಲೆಕ್ಕಗಳಿಂದ ಕೂಡಿದ, ಜನಸಾಮಾನ್ಯಕ್ಕೆ ಸ್ವಾರಸ್ಯವಾಗಲಾರದ ಒಣ ವಿವರಗಳನ್ನು ರುಚಿ ಕಟ್ಟಿ, ಎಂಥವರು ಬೇಕಾದರೂ ಕತೆಯಂತೆ ಓದಬಹುದಾದ ಸವಿಬರಹವಾಗಿ ಮಾಡಿದ್ದಾರೆಂದು ಹೊಗಳಿದ್ದಾರೆ.

ವಾಸ್ತವವಾಗಿ ಈ ಪುಸ್ತಕವೂ, ಆಧುನಿಕ ಮೈಸೂರಿನ ಮುನ್ನಡೆಯನ್ನು ಕನ್ನಡಿಯಲ್ಲಿ ಬಿಂಬಿಸಿದಂತೆ ಅಡಕವಾಗಿ ತೋರಿಸಿರುವ ಶ್ರೀ. ಕೃಷ್ಣರಾಯರೂ ಮತ್ತು ಅವರೊಂದಿಗೆ ಶ್ರದ್ಧೆಯಿಂದ ದುಡಿದಿರುವ ಗೆಳೆಯರೂ ಅಭಿನಂದನೆಗೆ ಪಾತ್ರರು. ಮುದ್ದಾದ ಅಚ್ಚು, ೧೬ ಸುಂದರವಾದ ಭೂಪಟಗಳು, ೫ ನಕ್ಷೆಗಳು (ಬಣ್ಣದವೂ ಸೇರಿ), ೩೩ ಭಾವಚಿತ್ರಗಳು. ಬೆಲೆ ಎಲ್ಲರ ಕೈಗೆ ನಿಲುಕುವಷ್ಟು — ಕೇವಲ **೧ ರೂ. ೮ ಆಣೆ.** — ಇದೊಂದು "ಸೊಬಗಿನ ಸುಗ್ಗಿ".

ಇಂಗ್ಲಿಷಿನಲ್ಲಿ ಪ್ರಕಟವಾಗಿರುವ ಕೈಪಿಡಿ ಸದ್ಯದಲ್ಲಿಯೇ ಕನ್ನಡದಲ್ಲೂ ಬರುವುದೆಂದು ಕೇಳಿ ಹರ್ಷಿಸುತ್ತೇವೆ; ಮತ್ತು ಅದರ ಬರವನ್ನು ಎರಡು ಕಾರಣಗಳಿಂದ ಎದುರು ನೋಡುತ್ತಿದ್ದೇವೆ. ಮೊದಲನೆಯದಾಗಿ, ಕನ್ನಡ ನಾಡ ಒಂದು ಮುಖ್ಯ ಪ್ರದೇಶದ ಸ್ಥಿತಿಗತಿಗಳು ಕನ್ನಡಿಗರೆಲ್ಲರಿಗೂ ಕನ್ನಡದಲ್ಲಿಯೆ ದೊರೆಯುವಂತಹ ಸಂದರ್ಭ ಒದಗುವುದು; ಎರಡನೆಯದಾಗಿ, ಎಷ್ಟು ಮಂದಿ ಮೈಸೂರು ಸೆನ್ಸಸ್ ಕಾರ್ಯಕ್ಕೆ ಖಾಸಗಿಯಾಗಿ ನೆರವಾಗಿದ್ದಾರೆಂಬ ಅಂಶ ವರದಿಯಲ್ಲಿ ಸೂಚಿಸಿಲ್ಲ; ಸಾವಿರಗಟ್ಟಲೆಯಾಗಬಹುದು — ಇವರೆಲ್ಲ ತಮ್ಮ ಪ್ರೇಮದ ಸೇವೆಯ ಗುರುತಾಗಿ ಒಂದೊಂದು ಸಂಗ್ರಹ ವರದಿಯನ್ನು ತೆಗೆದಿಟ್ಟುಕೊಳ್ಳುವ ಸಂತೋಷ ಒದಗಿ ಬರುವುದು.

ಈ ಸಂಗ್ರಹ ವರದಿಯ ವಿಷಯವನ್ನು ಸಾಮಾನ್ಯ ವಿವರಣೆ, ಜನಸಂಖ್ಯೆ, ಜಾತಿ ಮತಗಳು, ಭಾಷೆ, ವಿದ್ಯಾಭ್ಯಾಸ ಮತ್ತು ಸಂಸ್ಕೃತಿ, ಆರ್ಥಿಕ ಮತ್ತು ಕಾಯಕ ಸ್ಥಿತಿಗಳು, ಮುಕ್ತಾಯ ಎಂದು ಏಳು ವಿಭಾಗಗಳಲ್ಲಿ ಅಡಕ ಮಾಡಿದ್ದರೂ, ಹಣ್ಣಿಗೆ ಉಂಡಿಗೆ ಹಾಕಿ ತೆಗೆದಂತೆ ಮೈಸೂರಿನ ಜನಜೀವನದ ಸ್ವರೂಪ, ಚೆಲುವು, ನೋವು, ಸಂಕಟ, ಆಶೆ, ಆಕಾಂಕ್ಷೆಗಳನ್ನು ಸುಮಾರು ೨೦೦ ಒಳವಿಭಾಗಗಳಲ್ಲಿ ವಿವರಿಸಲಾಗಿದೆ. ಒಂದೊಂದೂ ಪುಟ್ಟ 'ಪ್ರಬಂಧ' — "ಸಂಪ್ರದಾಯವಾಗಿ ಲಂಬಿಸಿ ಪ್ರಕಟವಾಗುತ್ತಿದ್ದ ವರದಿ, ಭಾರತ ಗಣತಿಯ ಮುಖ್ಯಾಧಿಕಾರಿಗಳಾದ ಶ್ರೀ. ಯೇಟ್ಸ್ ಅವರ ಸ್ಫೂರ್ತಿ ಸಲಹೆ ಮಾರ್ಗದರ್ಶನಗಳ ಫಲವಾಗಿ ಪ್ರಬಂಧದ ಪಾಕಕ್ಕಿಳಿಯಿತು." ಎಂಬುದಾಗಿ ಶ್ರೀ. ಕೃಷ್ಣರಾಯರು ವಿನಯದ ಮಾತಿನಲ್ಲಿ ತಮ್ಮ ಪಾಂಡಿತ್ಯಕ್ಕೆ ತೆರೆಯೆಳೆದಿದ್ದರೂ, ಇಂಥ ಉತ್ಕೃಷ್ಟವಾದ ಕೆಲಸ ನಡೆಯಲು ಅನುಭವಿಗಳೂ ವಿದ್ವಾಂಸರೂ ಆದ ಶ್ರೀ. ಕೃಷ್ಣರಾಯರ ನೇತೃತ್ವ ಮೈಸೂರು ಗಣತಿಯ ಕಾರ್ಯಕ್ಕೆ ಲಭಿಸಿದ್ದಕ್ಕಾಗಿ ಹರ್ಷಿಸಬೇಕಾಗಿದೆ. ಈ ಸಂದರ್ಭದಲ್ಲಿ ಪರಿಷತ್ತಿನಲ್ಲಿ ಕಳೆದ ವರ್ಷ ನಡೆದ ವಸಂತ ಸಾಹಿತ್ಯೋತ್ಸವ ಸಮಯದಲ್ಲಿ ಅವರು "ನಮ್ಮ ಮೈಸೂರು" ಎಂಬ ವಿಷಯವಾಗಿ ಮಾಡಿರುವ ಪುಟ್ಟ ಉಪನ್ಯಾಸದಲ್ಲಿ ಕಂಡ ಸ್ಫೂರ್ತಿಯ ಕಾವು ಇಲ್ಲಿ ವರದಿಯ ಉದ್ದಕ್ಕೂ ಮಿಂಚುತ್ತ ಪ್ರಜ್ವಲಿಸುತ್ತಿದೆ.

ಅನಕ್ಷರತೆಯನ್ನು ಈಡಾಡಿ, ವಿದ್ಯಾಭ್ಯಾಸವನ್ನು ಹರಡಿ, ವ್ಯವಸಾಯ, ಕೈಗಾರಿಕೆ, ವಾಹನ ಸಂಚಾರ ಸಾಧನಗಳನ್ನು ಉತ್ತಮಪಡಿಸಿ, ಆರ್ಥಿಕ ಸ್ಥಿತಿಯಲ್ಲಿ ಮೇಲ್ಪಾಟು ತಂದು, ನಿರುದ್ಯೋಗವನ್ನು ನಿವಾರಣೆ ಮಾಡಿ, ಉದ್ಯೋಗ ಕ್ಷೇತ್ರವನ್ನು ವಿಸ್ತಾರಗೊಳಿಸಿ — ಹೀಗೆಯೆ ಹಲವಾರು ಬಗೆಯಲ್ಲಿ ನಾಡನ್ನು ಕಟ್ಟಬಯಸಿ ದುಡಿಯುವವರಿಗೆ ಮೊದಲು ಗ್ರಹಿಸಿಕೊಂಡಿರಬೇಕಾದ ಅಗತ್ಯದ ಆಧಾರಗಳೆಲ್ಲ (Data) ಇಲ್ಲಿ ಸಿಕ್ಕುತ್ತವೆ.

'ನುಡಿ'ಯ ವಾಚಕರಿಗಾಗಿ ವರದಿಯ ಕೆಲವು ಭಾಗಗಳ ಸಾರಾಂಶವನ್ನು ಇಲ್ಲಿ ಕೊಟ್ಟಿದೆ.

**೧. ವರದಿಯ ಲಕ್ಷ್ಯ:** ಅಖಿಲ ಭಾರತ ಗಣತಿಯ ಒಟ್ಟು ಚಿತ್ರದ ಒಂದು ಅಂಗವಾಗಿ ಮೈಸೂರನ್ನು ಗಣಿಸಿ, ಮೈಸೂರು ಸಂಸ್ಥಾನ ಬ್ರಿಟಿಷ್ ಅಧಿಕಾರದಿಂದ ಭಾರತೀಯ ಆಳಿಕೆಗೆ ಒಳಪಟ್ಟ ೧೮೮೧ನೆಯ ವರ್ಷದಿಂದ ೧೯೫೧ನೆಯ ವರ್ಷದವರೆಗೆ, ಸಂಸ್ಥಾನದ ಸಂಪತ್ತನ್ನು ಹೆಚ್ಚಿಸಲು, ವಿದ್ಯೆಯನ್ನು ಹರಡಲು, ಆರೋಗ್ಯವನ್ನು ಕಾಯಲು, ಜನರ ಎಲ್ಲ ಬಗೆಯ ಸತ್ವಗಳನ್ನು ಬೆಳಸಲು ಸಾಮಾಜಿಕ ಆರ್ಥಿಕ ಕ್ಷೇತ್ರಗಳಲ್ಲೂ ಸಂಸ್ಕೃತಿಯ ರಂಗದಲ್ಲೂ ಎಷ್ಟು ಕಾರ್ಯ ನಡೆದಿದೆ ಎಂಬ ಅಂಶವನ್ನು ವಿವರಿಸಲಾಗಿದೆ. ಈ ವರ್ಷದ ಗಣತಿಯ ಹೊಸ ದೃಷ್ಟಿ ವಿಶೇಷ ಇದು.

**೨. ಮೈಸೂರಿನ ಭಾಷೆ** (ಅನುಚ್ಛೇದ ೯೫—೧೦೬) : ಈ ವಿಭಾಗದಲ್ಲಿ, ಮೈಸೂರ ಹೊರಗಿನ ಕನ್ನಡ ಪ್ರದೇಶವನ್ನು ಹಕ್ಕಿಯ ನೋಟದಿಂದ ನೋಡಿದೆ. ಈ ಬಾರಿ ವರದಿಗೆ ಹೊಸದಾಗಿ ಸೇರಿರುವ ಕರ್ನಾಟಕದ ಭೂಪಟದಲ್ಲಿ (ಪು. ೨೩ಕ್ಕೆ ಎದುರು) ಕೋಲಾರವನ್ನೂ ದಕ್ಷಿಣ ಕನ್ನಡ ಜಿಲ್ಲೆಯನ್ನೂ ಬಿಟ್ಟಿದೆ — ಶೇಕಡ ೫೦ಕ್ಕೆ ಹೆಚ್ಚಾಗಿ ಕನ್ನಡ ಮಾತನಾಡುವವರ ಲೆಕ್ಕವನ್ನು ಕಾರಣವಾಗಿಟ್ಟುಕೊಂಡು. ಆದರೆ ಇಲ್ಲಿಯೂ ಆಡಳಿತದ ಮತ್ತು ವಿದ್ಯೆಯ ಭಾಷೆ ಕನ್ನಡವೇ — ಇವೂ ಬಹುಕಾಲದಿಂದ ಕನ್ನಡ ನಾಡೇ.

ಕೋಲಾರದಲ್ಲಿ ತೆಲುಗು ಮುಖ್ಯ ಭಾಷೆಯೆಂದೂ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ತುಳು ಮುಖ್ಯ ಭಾಷೆಯೆಂದೂ ತೋರಿಸಿ ಹೀಗೆ ಅವೆರಡು ಪ್ರದೇಶಗಳನ್ನು ಕನ್ನಡದ ಗಡಿ ದಾಟಿಸಿರಬಹುದು. ಆದರೆ ಅದೇ ಭೂಪಟದ ಕೆಳಗೆ (ಪುಟ ೨೩) 'ಭಾರತದ ಭಾಷೆಗಳ ಭೂಪಟ' ದಲ್ಲಿ ಕೊಟ್ಟಿರುವಂತೆ ಅವೆರಡು ಪ್ರದೇಶಗಳನ್ನೂ ಕನ್ನಡ ನಾಡಿನಲ್ಲಿ ಸೇರಿಸುವುದು ಸೂಕ್ತವಾಗಿದೆ.

ಇನ್ನು ಜನಸಂಖ್ಯೆಯ ಶೇಕಡಾವಾರು ಅಂಕಿಗಳ ವಿಷಯ: ಬಂದು ತೇಲಿಹೋಗುವ ಜನರ ಸಂಖ್ಯೆಯನ್ನು ಬಿಟ್ಟು, (Floating population) ಮನೆಯಲ್ಲಿ ತಮಿಳು, ತೆಲುಗು, ತುಳು, ಉರ್ದು

ಮೊದಲಾದ ಭಾಷೆಗಳನ್ನು ಮಾತನಾಡಿದರೂ, ದೇಶ ಭಾಷೆಯಾದ ಕನ್ನಡವನ್ನು ತಿಳಿದು ವ್ಯವಹರಿಸಬಲ್ಲ ಜನರ ಸಂಖ್ಯೆಯನ್ನು ಸೇರಿಸಿ ವರದಿಯಲ್ಲಿ ಕೊಟ್ಟಿರುವ ಶೇಕಡಾವಾರು ಸಂಖ್ಯೆಗಳನ್ನು ಸರಿಪಡಿಸುವುದೂ ಸೂಕ್ತವಾಗಿದೆ. ಈಗ ಕೊಟ್ಟಿರುವ ಕನ್ನಡದ ಸಂಖ್ಯೆ ಸೇಕಡ ೭೦ ಅಗ ೯೦ರ ಮೇಲೆ ಆಗಬಹುದು.

**೩. ವಿದ್ಯೆ ಮತ್ತು ಸಂಸ್ಕೃತಿ** (ಅನುಚ್ಛೇದ ೧೦೭–೧೩೪): ವ್ಯಕ್ತಿಗಳಿಂದಲೂ, ಸಂಸ್ಥೆಗಳಿಂದಲೂ ಈ ಬಗ್ಗೆ ನಡೆಯುತ್ತಿರುವ ಚಟುವಟಿಕೆಗಳನ್ನು ಬಹು ಚೆನ್ನಾಗಿ ವಿವರಿಸಿದೆ. ೫೩ನೆಯ ಪಟ್ಟಿಯಿಂದ ೫೭ನೆಯ ಪಟ್ಟಿಯ ವರೆಗೆ ಕೊಟ್ಟಿರುವ ಅಕ್ಷರತೆಯ ವಿಷಯವಾದ ಅಂಕಿ ವಿವರಗಳು ಅಕ್ಷರ ಪ್ರಚಾರ ಕ್ಷೇತ್ರದಲ್ಲಿ ದುಡಿಯುತ್ತಿರುವರಿಗೆ ಅವರ ಹೊಣೆಯನ್ನು ಜ್ಞಾಪಿಸಿ, ಕೆಲಸವನ್ನು ತ್ವರೆಗೊಳಿಸಬೇಕಾದ ಆವಶ್ಯಕತೆಯನ್ನು ಕೂಗಿ ಹೇಳುವಂತಿವೆ.

ಸರ್ ಎಂ. ವಿಶ್ವೇಶ್ವರಯ್ಯನವರ ಕಾಲದಲ್ಲಿ ನಾಡು ಹಲವು ದಿಕ್ಕಿನಲ್ಲಿ ಮುಂದುವರಿಯಲು ಬಹುಮುಖವಾದ ಏರ್ಪಾಟುಗಳನ್ನು ಕೈಗೊಳ್ಳಲಾಯಿತಷ್ಟೆ. ಮುಖ್ಯವಾಗಿ ವಿದ್ಯಾಭ್ಯಾಸ, ಆರ್ಥಿಕ ಕ್ಷೇತ್ರ, ಸಂಸ್ಕೃತಿ ರಂಗಗಳಲ್ಲಿ ತೀವ್ರವಾದ ಕೆಲಸ ಆರಂಭವಾಯಿತು. ಈಚೆಗೆ ಸರಕಾರದ ಹಾಗೂ ಖಾಸಗಿ ಸಂಸ್ಥೆಗಳ ಆಶ್ರಯದಲ್ಲಿ ಇನ್ನೂ ಹೆಚ್ಚಿನ ಕೆಲಸ ನಡೆಯುತ್ತಿರುವುದು ಶುಭ ಚಿಹ್ನೆಯಾಗಿದೆ. ಇತ್ತೀಚಿನ ಬಹು ಮುಖ್ಯವಾದ ಪ್ರಯತ್ನಗಳೆಂದರೆ ಕನ್ನಡ ಸಾಹಿತ್ಯ ಪರಿಷತ್ತಿನ ಸಾಹಿತ್ಯ ಸಂಸ್ಕೃತಿ ಚಟುವಟಿಕೆಗಳು; ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರೋಪನ್ಯಾಸ ಮಾಲೆಗಳು ಮತ್ತು ಪುಸ್ತಕ ಪ್ರಕಟನೆಗಳು; ಮೈಸೂರು ಸಂಸ್ಥಾನದ ಅಕ್ಷರ ಪ್ರಚಾರ ಸಮಿತಿಯ ವಯಸ್ಕರ ವಿದ್ಯಾಭ್ಯಾಸ ಯೋಜನೆ. ಪರಿಷತ್ತು ಜನಸಾಮಾನ್ಯರ ವಿದ್ಯಾಪೀಠವಾಗಬೇಕೆಂಬ ಹೆಬ್ಬಯಕೆಯಿಂದ ಸಾಹಿತ್ಯ ಪರೀಕ್ಷೆಗಳನ್ನು ಮೈಸೂರಿನಲ್ಲಿ ಮಾತ್ರವಲ್ಲದೆ ಇಡಿಯ ಕರ್ನಾಟಕದಲ್ಲಿ ನಡಸುತ್ತ ಜನತೆಯಲ್ಲಿ ತಿಳಿವಳಿಕೆಯ ಮಟ್ಟವನ್ನು ಹೆಚ್ಚಿಸಲು ಪ್ರಯತ್ನಿಸುತ್ತಿರುವುದನ್ನು ಜನ ಅರಿತಿದೆ. ಇವುಗಳನ್ನು ಜ್ಞಾಪಿಸಿ ವರದಿಯಲ್ಲಿ ಶ್ರೀ. ಕೃಷ್ಣರಾಯರು ಪರಿಷತ್ತಿನ ಸ್ಥಾಪನೆ (೧೯೧೫), ಅದರ ಬೆಳ್ಳಿಯ ಹಬ್ಬ (೧೯೪೦), ಮೈಸೂರು ವಿಶ್ವವಿದ್ಯಾನಿಲಯದ ಸ್ಥಾಪನೆ (೧೯೧೭), ಅದರ ಮೊದಲ ಘಟಿಕೋತ್ಸವ ಕಾಲದಲ್ಲಿ ಆಳಿದ ಮಹಾಪ್ರಭುಗಳಾದ ಶ್ರೀ ಕೃಷ್ಣರಾಜ ಒಡೆಯರವರು ವಿಶ್ವವಿದ್ಯಾನಿಲಯದ ಮುಂದೆ ಇಟ್ಟ ಎರಡು ದೊಡ್ಡ ಗುರಿಗಳು – ೧. ಕನ್ನಡ ಸಾಹಿತ್ಯಕ್ಕೂ ದ್ರಾವಿಡ ಭಾಷೆಗಳ ಅಧ್ಯಯನಕ್ಕೂ ವಿಶೇಷ ಪ್ರೋತ್ಸಾಹ; ೨. ಜನಸಾಮಾನ್ಯರಲ್ಲಿ ಭಾಷಣ ಹಾಗೂ ಪುಸ್ತಕ ಪ್ರಕಟನೆಗಳ ಮೂಲಕ ಜ್ಞಾನಪ್ರಸಾರ – ಈ ಅಂಶಗಳನ್ನು ಎತ್ತಿ ಹೇಳಿದ್ದಾರಲ್ಲದೆ, ಶ್ರೀಯುತರ ದೃಷ್ಟಿ ಮೈಸೂರನ್ನು ದಾಟಿ, ಇಡಿಯ ಕನ್ನಡ ನಾಡ ಮೇಲ್ಮೆಯನ್ನು ಲಕ್ಷಿಸಿದೆ. ಕರ್ನಾಟಕ ಏಕೀಕರಣ ಚಳವಳಿಗೆ ಪರಿಷತ್ತಿನಿಂದ ದೊರೆತಿರುವ ಪ್ರೋತ್ಸಾಹವನ್ನೂ ಕನ್ನಡಿಗರಲ್ಲಿ ಈಚೆಗೆ ಮೂಡಿರುವ 'ಕನ್ನಡ ಕುಲ'ದ ಹೆಮ್ಮೆಯ ಭಾವನೆಯನ್ನೂ ಉಲ್ಲೇಖಿಸಲಾಗಿದೆ.

ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಿಂದ ಮೈಸೂರು ಅರಮನೆ ವಿಶೇಷವಾಗಿ ಹೊಸ ಕನ್ನಡ ಸಾಹಿತ್ಯ ಮುಂದುವರಿಯಲು ಪ್ರೋತ್ಸಾಹ ನೀಡುತ್ತ ಬಂದಿದೆ. ಶಿಲ್ಪ ಸಂಗೀತ ಕಲೆಗಳೂ ಏಳಿಗೆ ಪಡೆಯುತ್ತಿವೆ. ವೈಸ್‌ರಾಯ್ ಲಾರ್ಡ್ ಲಿನ್‌ಲಿತ್‌ಗೋ ಅವರು ಹೇಳಿರುವಂತೆ, ಆಳಿದ ನಾಲ್ಮಡಿ ಕೃಷ್ಣರಾಜ ಒಡೆಯರವರು ತಮ್ಮ ಆಳಿಕೆಯಿಂದ ಪ್ರಜೆಗಳಲ್ಲಿ ಶಾಂತಿಸಾಮರಸ್ಯಗಳು ನೆಲೆಗೊಳ್ಳುವಂತೆ ಮಾಡಿ, ಮೈಸೂರಿನ ಸೌಂದರ್ಯವನ್ನೂ ಸೌಭಾಗ್ಯವನ್ನೂ ಹೆಚ್ಚಿಸಲು ಆದರ್ಶವಾದ ಏರ್ಪಾಟುಗಳನ್ನು ಕೈಕೊಂಡರು. ಇವರ ಆದರ್ಶವಾದ ಆಳಿಕೆ ಸ್ವದೇಶದಲ್ಲಿ ಮಾತ್ರವಲ್ಲದೆ ಪರದೇಶಗಳಲ್ಲೂ ಭಾರತ ನರೇಂದ್ರ ವರ್ಗದ ಪ್ರತಿಷ್ಠೆಯನ್ನು ಹೆಚ್ಚಿಸಿತು. ಶ್ರೀ ಜಯಚಾಮರಾಜ ಒಡೆಯರವರು ಈ ಆದರ್ಶವನ್ನು ನಡಸಿಕೊಡುತ್ತ ಅನುಗ್ರಹಿಸುತಿದ್ದಾರೆ. ಇದರಿಂದ ಕನ್ನಡ ಸಂಸ್ಕೃತಿಯ ಪ್ರತಿನಿಧಿಯಾಗಿ ಮೈಸೂರಿನ ನಯ ಬೆಳೆದು ಹರಡುತ್ತಿದೆ.

ವರದಿಯ ಉದ್ದಕ್ಕೂ ಶ್ರೀ. ಕೃಷ್ಣರಾಯರು ಪ್ರಕಟಪಡಿಸಿರುವ ದೇಶಾಭಿಮಾನ ಎದ್ದು ಕಾಣುತ್ತಿದೆ. ಮೈಸೂರಿನ ಇದುವರೆಗಿನ ಪ್ರಗತಿಗಾಗಿ ಹೆಮ್ಮೆ, ಇನ್ನೂ ಪ್ರಗತಿ ಹೊಂದಬೇಕೆಂಬ ಹಾರೈಕೆ ಮಿಡಿಯುತ್ತಿವೆ. ಮಲೆನಾಡಿನ ಮತ್ತು ಹಳ್ಳಿಗಾಡಿನ ಅಭಿವೃದ್ಧಿ ಸಾಲದೆಂಬ ಅವರ ನೋವೂ, ಆ ಪ್ರದೇಶವನ್ನು ಮುಂದಕ್ಕೆ ತರಲು ಅವರು ಸೂಚಿಸುವ ಸಲಹೆಗಳೂ, ದೇಶದ ಯಾವ ಭಾಗವೂ ಏಳಿಗೆಯಲ್ಲಿ ಹಿಂದೆ ಬೀಳಬಾರದೆಂಬ ಅವರ ಆಶಯಕ್ಕೆ ಒಳ್ಳೆಯ ನಿದರ್ಶನವಾಗಿವೆ. ಒಟ್ಟಿನಲ್ಲಿ, ಯಾವ ದಿಕ್ಕಿನಿಂದಲೂ ಮೈಸೂರಿನ ಮೇಲ್ಮೆಗೆ ಎಷ್ಟುಮಟ್ಟಿನ ಅಡ್ಡಿ ಆತಂಕಗಳೂ ಇರಬಾರದೆಂಬುದು ಅವರ ಇಷ್ಟ. ಈ ಸಂದರ್ಭದಲ್ಲಿ ಅವರು ಮೈಸೂರಿಗೆ ಬಂದು ನೆಲಸುವ ಪರಕೀಯರ ಮನೋಭಾವದಲ್ಲಿ ಯಾವ ವ್ಯತ್ಯಾಸ ಆಗಬೇಕೆಂಬ ವಿಷಯವಾಗಿ ಆಡಿರುವ ಮಾತುಗಳು ಗಮನಾರ್ಹವಾಗಿವೆ. ಇಲ್ಲಿ ಹಣ ಗಳಿಸಿ ಹೊರಗೆ ವೆಚ್ಚಮಾಡುವ ಬುದ್ಧಿಯಿರದೆ, ತಾವೂ ಮೈಸೂರಿನ ಪ್ರಜೆಗಳೆಂದು ಭಾವಿಸಿ, ನಾಡ ನುಡಿ ನಡೆಗಳಿಗೆ ಮರ್ಯಾದೆ ಕೊಟ್ಟು, ಅಮೆರಿಕದಲ್ಲಿ ನೆಲಸುವ ಜನ ಮಾಡುವಂತೆ ಹೊಂದಿಕೊಂಡು 'ಉದಾರವಾಗಿ ವರ್ತಿಸುವುದು ಲೇಸು ಎಂಬುದು ಅವರ ಅಭಿಪ್ರಾಯ. ಇದು ವಲಸೆ ಹೋಗಿ ನೆಲಸುವವರೆಲ್ಲರಿಗೂ ತಕ್ಕ ಉಪದೇಶವಾಗಿದೆ.

ಸಂಗ್ರಹ ವರದಿಯ ಈ ಅವಲೋಕನವನ್ನು ಮುಗಿಸುವುದಕ್ಕೆ ಮುಂಚೆ ಒಂದು ಮಾತು. ವರದಿಯಲ್ಲಿ ಉದಾಹರಿಸಿರುವ ನಾಲ್ಮಡಿ ಕೃಷ್ಣರಾಜ ಒಡೆಯರವರ ಕೆಲವು ಮಹಾ ವಾಕ್ಯಗಳೂ (ಉದಾ: ಪುಟ ೪೪, ೪೮, ೫೦) ಶ್ರೀ ಜಯಚಾಮರಾಜ ಒಡೆಯರವರು ಸಿಂಹಾಸನವೇರಿದಾಗ ಪ್ರಜಾಸೇವೆಯನ್ನು ದೀಕ್ಷೆಯಾಗಿ ಭಾವಿಸಿ, ಕೊಟ್ಟ ಸಂದೇಶವೂ (ಪುಟ ೫೦) ನಾಡಿನ ಯೋಗಕ್ಷೇಮವನ್ನು ಚಿಂತಿಸುವವರಿಗೆಲ್ಲ ಧೈರ್ಯವನ್ನೂ ಭರವಸೆಯನ್ನೂ ಕೊಡತಕ್ಕವಾಗಿವೆ ಎಂಬುದನ್ನು ಮರೆಯುವಂತಿಲ್ಲ. ನಾಲ್ಮಡಿ ಕೃಷ್ಣರಾಜ ಒಡೆಯರವರ ಕಾಲದಲ್ಲಿ ಕನ್ನಡ ನಾಡು ನುಡಿಗಳಲ್ಲೂ ಬದುಕಿನ ಇತರ ರಂಗಗಳಲ್ಲೂ ಜಾಗೃತಿಯುಂಟಾಗಿ, ನಾಡನ್ನು ಕಟ್ಟುವ ಕೆಲಸ ಮೊದಲಾಯಿತು. ಆ ಕೆಲಸ ಶ್ರೀ ಜಯಚಾಮರಾಜ ಒಡೆಯರವರ ಕಾಲದಲ್ಲಿ ಅಮೋಘವಾಗಿ ನಡೆದು, ಮೈಸೂರೂ ಇಡಿಯ ಕನ್ನಡ ನಾಡೂ ಎಲ್ಲಾ ಬಗೆಯಲ್ಲೂ ಮುನ್ನಡೆದು, ನಮ್ಮ ನಾಡು ಹಿಂದಿನ ಹಿರಿಮೆಯನ್ನು ಮತ್ತೆ ಸಾಧಿಸಿ, ಜಗತ್ತಿನ ಒಟ್ಟು ಜೀವನದ ಸೌಂದರ್ಯವೂ ಸಂಸ್ಕೃತಿಯೂ ಸಮೃದ್ಧವಾಗಿ, ಶಾಂತಿ ಸಾಮರಸ್ಯಗಳು ಚಿರಕಾಲ ನೆಲೆಗೊಳ್ಳಲು ತನ್ನ ಪಾಲಿನ ಕಾಣಿಕೆಯನ್ನು ನೀಡಲಿ ಎಂಬುದೇ ಎಚ್ಚತ್ತ ಕನ್ನಡ ನಾಡಿನ ಹಾರೈಕೆಯಾಗಿದೆ. ಈ ಹಾರೈಕೆ ಸಿದ್ಧಿಸಬೇಕೆಂದು ಸರಿಯಾದ ದಾರಿಯಲ್ಲಿ ಕೆಲಸ ಮಾಡಲು ದೀಕ್ಷೆ ವಹಿಸುವವರಿಗೆ ಇಂಥ ಪುಸ್ತಕಗಳು ತಕ್ಕ ವಿವರಾಂಶಗಳನ್ನೂ ಮಾರ್ಗದರ್ಶನವನ್ನೂ ನೀಡುತ್ತವಾದ್ದರಿಂದ, ಶ್ರೀ. ಪಿ. ಎಚ್. ಕೃಷ್ಣರಾಯರು ಪ್ರಕಟಿಸಿರುವ ಈ ಗ್ರಂಥವನ್ನು ಇಂಗ್ಲಿಷಿನಲ್ಲಾಗಲಿ, ಕನ್ನಡದಲ್ಲಾಗಲಿ ಕನ್ನಡಿಗರೆಲ್ಲರೂ ಕೊಂಡು ಓದಿ ಗುರುತುಮಾಡಿ ಅರಗಿಸಿಕೊಳ್ಳಬೇಕೆಂದು ಆಗ್ರಹದಿಂದ ಸೂಚಿಸುತ್ತೇವೆ.

ಇಡಿಯ ಕರ್ನಾಟಕಕ್ಕೇ ಈ ಅಂಕಿ ಅಂಶಗಳು ದೊರೆಯುವಂತಿಲ್ಲವಲ್ಲಾ ಎಂದು ವಿಷಾದಿಸಬೇಕಾಗಿದೆ. ಆ ಕಾಲ ಎಂದು ಬರುವುದೋ?

'ಶ್ರೀ'.

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧॥
ಬಿಡಿ ಪತ್ರಿಕೆ: ೬ ಕಾಸು




ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿ ಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೧೩
ಬೆಂಗಳೂರು: ಶುಕ್ರವಾರ, ಜನವರಿ ೨೨, ೧೯೪೩

## ಪರಿಷತ್ತಿನ ಮುನ್ನಡೆ

೪

ಒಂದು ಕಾಲದಲ್ಲಿ ಚೆನ್ನಾಗಿದ್ದು ಈಚೆಗೆ ಉತ್ತೇಜನ ಸಾಲದೆ ಅರೋಡಾಗಿರುವ ಜಾನಪದ ವಿನೋದಗಳನ್ನು ರಕ್ಷಿಸುವಷ್ಟೇ ಅಗತ್ಯವಾಗಿ, ಸ್ಥಳೀಯ ಸಂಘಗಳು ಹೊಸ ರೀತಿಯ ಮನೋರಂಜನ ಮತ್ತು ಜ್ಞಾನಪ್ರಸಾರ ಕಾರ್ಯಕ್ರಮಗಳನ್ನೂ ಕೈಗೊಳ್ಳಬೇಕು. ಈಗಲೂ ಅನೇಕ ಗ್ರಾಮಗಳಲ್ಲಿ ಹಿಂದಿನಂತೆ ಕಾವ್ಯಗಳನ್ನೂ ಪುರಾಣಗಳನ್ನೂ ಓದುವ ಜನ ಇದಾರೆ. ಅಂಥವರನ್ನು ಹೊರಕ್ಕೆ ತಂದು ಓದಿನ ಕಟ್ಟೆಗಳನ್ನು ಏರ್ಪಡಿಸುವುದರಿಂದ ಜನಸಾಮಾನ್ಯಕ್ಕೆ ದೊಡ್ಡ ಉಪಕಾರವಾಗುತ್ತದೆ. ಇಂಥ ಕಟ್ಟೆಯಲ್ಲಿ ಹಿಂದಲ ಕಾವ್ಯ ಪುರಾಣವನ್ನಲ್ಲದೆ ಹೊಸ ಕಾವ್ಯ ಕಥೆಗಳನ್ನೂ ಓದಿ ಹೇಳಬಹುದು. ಗೊತ್ತಾದವೇಳೆಯಲ್ಲಿ ಆಯಾ ದಿನದ ವೃತ್ತಪತ್ರಿಕೆಯ ಸಾರ ಭಾಗವನ್ನೂ ಓದಿ ಹೇಳಬಹುದು. ಸಂಜೆಯ ಹೊತ್ತಿಗೆ ಇಂಥ ಒಂದು ಏರ್ಪಾಡು ಇರುವ ಊರು ಎಲ್ಲಾ ವಿಧದಿಂದಲೂ ಕ್ಷೇಮವನ್ನು ಸಾಧಿಸುತ್ತದೆ. ಓದು ಬರಹ ಬಂದವರಾದರೂ ಸಂಜೆಯಲ್ಲಿ ತಾವು ಒಬ್ಬರು ಒಂದು ಕಡೆ ಕುಳಿತು ಒಂದು ಗ್ರಂಥವನ್ನು ಓದುವ ಸಂಭವ ಕಡಮೆ. ಪತ್ರಿಕೆಯನ್ನು ಓದಬಹುದು. ಆದರೆ ಒಬ್ಬರೇ ಕುಳಿತು ಮಾಡಿದ ಸವಿಊಟದಂತೆ ಅಂಥ ಓದಿನಲ್ಲಿ ಸುಖ ಕಡಮೆ. ಕಟ್ಟೆಯಲ್ಲಿ, ಚಾವಡಿಯಲ್ಲಿ ಒಬ್ಬರು ಓದಿ ಹತ್ತೂಜನ ಕೇಳುವುದರಲ್ಲಿ ಓದುಬರಹಬಲ್ಲ ಮಂದಿಗಾದರೂ ಹೆಚ್ಚು ಸುಖ ದೊರೆಯುತ್ತದೆ. ಅಲ್ಲದೆ ಓದು ಬರಹಬಾರದವರಿಗೆ ಇಂಥ ಏರ್ಪಾಡಿನಿಂದ ಬೇರೆ ಹೇಗೂ ಅಸಾಧ್ಯವಾದ ಒಂದು ಪ್ರಯೋಜನ ಆಗುತ್ತದೆ. ಒಂದು ಶಾಲೆ ಇರುವ ಎಲ್ಲ ಗ್ರಾಮದಲ್ಲೂ ಒಂದಲ್ಲ ಒಂದು ರೀತಿಯ ಇಂಥ ಓದಿಗೆ ಏರ್ಪಾಡು ಮಾಡುವುದು ಸಾಧ್ಯವಾಗಬೇಕು. ತಕ್ಕಷ್ಟು ದೊಡ್ಡ ಶಾಲೆ ಇರುವ ಊರುಗಳಲ್ಲಿ ಊರಪ್ರಮುಖರೂ ಉಪಾಧ್ಯಾಯರೂ ಮನಸ್ಸುಮಾಡಿದರೆ ಇಂಥ ಏರ್ಪಾಡು ಅವಿಚ್ಛಿನ್ನವಾಗಿ ನಡೆಯಬಹುದು.

ಜೊತೆಗೆ ಶಾಲೆಗಳಿಗೆ ಸೇರಿದಂತೆ ಎಳೆಯರ ಬೆಳವಣಿಗೆಗೂ, ಅವರಲ್ಲಿ ಕೆಲವರಲ್ಲಾದರೂ ಇರುವ ವಿಶೇಷ ಶಕ್ತಿಗಳನ್ನು ಬೆಳಗುವುದಕ್ಕೂ, ಅವಶ್ಯಕವಾದ ಕಾರ್ಯಗಳನ್ನು ಸ್ಥಳೀಯ ಸಂಘಗಳು ಕೈಗೊಳ್ಳಬೇಕಾಗಿದೆ. ಒಂದೊಂದು ಶಾಲೆಯಲ್ಲಿಯೂ ಓದುವ ಸ್ಪರ್ಧೆ, ಹಾಡುವ ಸ್ಪರ್ಧೆ, ನಟನದ ಸ್ಪರ್ಧೆ, ಇಂಥ ಮೇಲಾಟಗಳನ್ನಿಟ್ಟು, ಊರಿನ ಎಳೆಯರ ಮನಸ್ಸು ಒಂದು ಗುರಿಯನ್ನು ಕುರಿತು ಹಾಯುವಂತೆ ಮಾಡಬೇಕು. ವಿದ್ಯೆ ಎಂದರೆ ಓದುವುದು ಮಾತ್ರ ಎಂದು ಒಂದು ತಪ್ಪುತಿಳಿವಳಿಕೆ ನಮ್ಮಲ್ಲಿ ಹರಡಿ ನಮ್ಮ ಜನದ ಮನಸ್ಸು ಇತ್ತೀಚೆಗೆ ಬೆಂಗಾಡಾಯಿತು. ನಮ್ಮ ತಲೆಮಾರಿನಲ್ಲಿ ಓದುವುದನ್ನು ಕಲಿತ ಸಾವಿರ ಮಂದಿಯಲ್ಲಿ ಒಬ್ಬರಿಬ್ಬರಾದರೂ ಓದು ಹೊರತು ಬೇರೊಂದನ್ನು ಕಲಿಯದೆ ಹೋದೆವು. ಯಾವನಾದರೂ ಹಾಡಿದರೆ "ಹಾಡುತ್ತಾ ಕಾಲಕಳೆಯುತ್ತೀಯೆ, ಓದು" ಎಂದು ಹಿರಿಯರು ಹೇಳುವರು. ನಾಟಕದಲ್ಲಿ ಸೇರಿದನೆಂದರೆ ಹುಡುಗ ಕೆಟ್ಟನೆಂದೇ ಲೆಕ್ಕ. ಈಚೆಗೆ ಇಂಥ ತಪ್ಪುತಿಳಿವಳಿಕೆ ಅಳಿದು ನೃತ್ಯ ಗೀತಗಳು ವಿದ್ಯೆಯ ಆವರಣದಲ್ಲಿ ಮರಳಿ ಸೇರಿವೆ. ಇದು ಒಂದು ಶುಭ ಚಿಹ್ನೆ. ನಾಡಿನಲ್ಲೆಲ್ಲ ಇರುವ ಕಲಾಪ್ರವೃತ್ತಿಯನ್ನು ಉದ್ಬೋಧಿಸಿ ಅದಕ್ಕೆ ತಕ್ಕ ಪ್ರೋತ್ಸಾಹವನ್ನು ಕೊಟ್ಟರೆ, ಬರುವ ತಲೆಮಾರಿಗೆ ನಮಗೆ ನಟರು, ಗಾಯಕರು, ನೃತ್ಯಕಲಾವಿದರು ಸಾವಿರ ಸಾವಿರದಿಂದ ಒದಗುವಂತೆ ಆಗುತ್ತದೆ. ಈಗ ನಾವು ಒಳ್ಳೆಯ ನಟನೆಂದರೆ ಜಾರ್ಜ್ ಆರ್ಲಿಸ್ ಎಂದೋ, ಜಾನ್ ಬಾರಿಮೋರ್ ಎಂದೋ ಪರದೇಶದವನನ್ನು ಹೇಳಬೇಕು. ಒಳ್ಳೆಯ ನಟಿ ಎಂದರೆ ಗ್ರೇಟಾಗಾರ್ಬೋ ಎಂದೋ ಮೌರಿನ್ ಓಸಲ್ಲಿವಾನ್ ಎಂದೋ ಹೇಳಬೇಕು. ಈಚೆಗೆ ಹಲಕೆಲವು ಭಾರತೀಯ ಹೆಸರುಗಳನ್ನು ಹೇಳಬಹುದಾಗಿದೆ. ಆದರೆ ಅವುಗಳಲ್ಲಿ ಕನ್ನಡದ ಹೆಸರುಗಳು ಬಹಳ ಕಡಮೆ. ಸ್ಥಳೀಯ ಸಂಸ್ಥೆಗಳು ತಮ್ಮ ತಮ್ಮ ಸುತ್ತಿನ ಎಳೆಯರಲ್ಲಿರುವ ಇಂಥ ಶಕ್ತಿಗಳು ಒಡಮೂಡಿ ಕಳೆಯೇರುವಂತೆ ಮಾಡಿದರೆ ನಾಡಿಗೆ ಹೆಸರಾಗುವ ಶ್ರೇಷ್ಠ ನಟನಟಿಯರು, ಗಾಯಕ ಗಾಯಕಿಯರು, ಕಲಾವಿದ ವಿದೆಯರು, ಅಲ್ಲದೆ ತಾವಿರುವ ಅಷ್ಟಷ್ಟು ಸ್ಥಳದಲ್ಲಿ ನೂರಾರು ಜನಕ್ಕೆ ಹರ್ಷವನ್ನು ಕೊಡಬಲ್ಲ ಕಲಾ ಸೇವಕರನ್ನು ದೇಶದಲ್ಲಿ ಪ್ರತಿಷ್ಠೆ ಮಾಡಿದಂತೆ ಆಗುತ್ತದೆ.

ಇನ್ನು ಆಗಾಗ ಉತ್ಸವಗಳನ್ನೂ ಉಪನ್ಯಾಸಗಳನ್ನೂ ಏರ್ಪಡಿಸಿ ಹೊರಗಿನಿಂದ ಬಲ್ಲವರನ್ನು ಬರಮಾಡಿಕೊಂಡು ಒಳನಾಡಿಗೆ ನಗರದ ಸಂಬಂಧವನ್ನು ಕಲ್ಪಿಸಿಕೊಡುವುದು ಸ್ಥಳೀಯ ಸಂಘಗಳ ಮತ್ತೊಂದು ಮುಖ್ಯ ಕಾರ್ಯ. ನಗರಗಳ ಮಂದಿ ಗ್ರಾಮಗಳ ಜೀವನದಲ್ಲಿ ಯಾವ ಆಸಕ್ತಿಯನ್ನೂ ತೋರದೆ ನಮ್ಮ ಜನಜೀವನದ ಏಳ್ಗೆ ಬಹುಕಾಲ ಹಿಂದು ಬಿತ್ತು. ಈಚೆಗೆ ಈ ವಿಚಾರದಲ್ಲಿ ನಮ್ಮ ಭಾವನೆ ಸ್ವಲ್ಪ ಸುಧಾರಣೆ ಹೊಂದಿದೆ. ಹಲವು ವರ್ಷದಿಂದ ನಮ್ಮ ವಿಶ್ವವಿದ್ಯಾನಿಲಯದ ಅಧ್ಯಾಪಕ ವರ್ಗದ ಮಹನೀಯರು ಒಂದು ಸಂಘವಾಗಿ ಹತ್ತಾರು ಕಡೆ ಉಪನ್ಯಾಸಮಾಲೆಗಳನ್ನು ನಡಸಿದಾರೆ. ನಮ್ಮ ಪರಿಷತ್ತು ವಸಂತೋತ್ಸವವನ್ನು ಬೆಳಸುವುದರಲ್ಲಿ ಬೆಂಗಳೂರಿನಲ್ಲೂ ಒಳನಾಡಿನ ಹಲವು ಮುಖ್ಯ ಸ್ಥಳಗಳಲ್ಲೂ ಅನೇಕ ಉಪನ್ಯಾಸಗಳನ್ನು ಏರ್ಪಡಿಸಿ ನಡಸಿದೆ. ಇದೆಲ್ಲ ಈ ಕೆಲಸಕ್ಕೆ ಆರಂಭ ಮತ್ತು ಮಾರ್ಗದರ್ಶನ ಎಂದು ಇಟ್ಟುಕೊಳ್ಳಬೇಕು. ಇಂಥ ಉಪನ್ಯಾಸ ಮಾಲೆಗಳು ಒಂದೊಂದು ದೊಡ್ಡ ಊರಿನಲ್ಲೂ ವರ್ಷಕ್ಕೆ ಒಂದು ಸಲವಾದರೂ ತಪ್ಪದೆ ನಡೆಯಬೇಕು. ವಿಶೇಷವಾಗಿ, ಪೌರಸಭೆಗಳನ್ನುಳ್ಳ ಎಲ್ಲ ಊರುಗಳಲ್ಲೂ ಈ ಕೆಲಸ ಒಡನೆಯೇ ಆರಂಭವಾಗಬೇಕು. ನಾಲ್ಕು ದಿವಸದ ಒಂದು ಉಪನ್ಯಾಸಮಾಲೆಯನ್ನು ಏರ್ಪಡಿಸುವುದಕ್ಕೆ ನೂರು ಅಥವಾ ನೂರೈವತ್ತು ರೂಪಾಯಿಯಷ್ಟು ವೆಚ್ಚವಾಗಬಹುದೆಂದು ಹೇಳಬಹುದು. ಒಂದು ವರ್ಷದ ಆಯವ್ಯಯದ ಪಟ್ಟಿಯಲ್ಲಿ ಈ ಕಾರ್ಯಕ್ಕಾಗಿ ಇಷ್ಟು ಹಣವನ್ನು ಒದಗಿಸುವುದು ಒಂದು ಜಿಲ್ಲೆ ಅಥವಾ ತಾಲ್ಲೂಕ್ ಊರಿನ ಪೌರಸಭೆಗೆ ಕಷ್ಟವಲ್ಲ. ಇದು ಅವಶ್ಯವಾಗಿ ಆಗಬೇಕಾದ ಒಂದು ಕೆಲಸ ಎಂದು ಅವರು ಮನಸ್ಸಿಗೆ ತೆಗೆದುಕೊಳ್ಳಬೇಕಾಗಿದೆ; ಅಷ್ಟೆ. ನಮ್ಮ ಸ್ಥಳೀಯ ಸಂಘಗಳು ಪೌರಸಭೆಗಳ ನೆರವನ್ನೂ ಬೇಡಿದರೆ ಇಂಥ ಏರ್ಪಾಡು ಸುಲಭವಾಗಿ ರೂಪಗೊಳ್ಳುವುದರಲ್ಲಿ ಸಂದೇಹವಿಲ್ಲ.

(೭೧ನೆಯ ಪುಟಕ್ಕೆ)

# ಕನ್ನಡ ನುಡಿ

**ಶುಕ್ರವಾರ, ಜನವರಿ ೨೨, ೧೯೪೩**

## ವಿದ್ಯಾಭ್ಯಾಸದ ಗುರಿ

ನಮ್ಮ ದೇಶದಲ್ಲಿ ವಿದ್ಯಾಭ್ಯಾಸಪದ್ಧತಿ ಸಮರ್ಪಕವಾಗಿಲ್ಲವೆಂದೂ ಅದನ್ನು ಹಲವಂಶಗಳಲ್ಲಿ ಪರಿಷ್ಕರಿಸಬೇಕೆಂದೂ ಪಂಡಿತರು ಅಭಿಪ್ರಾಯಪಟ್ಟು ತಮತಮಗೆ ತೋರಿದ ಮಾರ್ಪಾಟುಗಳನ್ನು ಆಗಿಂದಾಗ್ಗೆ ಹೇಳುತ್ತಿರುವುದು ಸರಿಯಷ್ಟೆ. ಶ್ರೀ. ಜೆ. ಪಿ. ಗುಪ್ತ ಅವರು 'ವಿದ್ಯಾಭ್ಯಾಸದ ನಿಜವಾದ ಗುರಿ'ಯ ಬಗ್ಗೆ ತಮ್ಮ ಅಭಿಪ್ರಾಯವನ್ನು ವಿವರಿಸಿದ್ದಾರೆ. ಅದರ ಮುಖ್ಯಾಂಶಗಳನ್ನು ಮುಂದೆ ಕೊಟ್ಟಿದೆ.

"ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಯೋಗ್ಯತೆಗೆ ತಕ್ಕ ಸ್ಥಾನವನ್ನು ಕಂಡುಕೊಂಡು, ಜೀವನೋಪಾಯವನ್ನು ದೊರಕಿಸಿಕೊಂಡು, ಸಮಕಾಲಿಕ ಪ್ರಪಂಚದಲ್ಲಿ ಹೊಂದಿಕೊಳ್ಳುವಂತೆ ಶಿಕ್ಷಣ ಕೊಡುವುದೇ ಪಾಠಶಾಲೆಯ ಅಂತಿಮ ಗುರಿಯಾಗಿರಬೇಕು. ಇದನ್ನು ಪ್ರಪಂಚದ ನಾನಾ ಭಾಗಗಳ ವಿದ್ಯಾಭ್ಯಾಸದ ಪಂಡಿತರು ಈಚೆಗೆ ಗ್ರಹಿಸುತ್ತಿದ್ದಾರೆ. ಆದುದರಿಂದ ಪಾಠಶಾಲೆ 'ಕೇವಲ ಪಾಠ ಕಲಿಯುವ ಸಂಸ್ಥೆ' ಎಂಬ ಅಭಿಪ್ರಾಯವನ್ನು ಬಿಟ್ಟು, ಅದು 'ತರುಣ ಪ್ರಜೆಗಳ ಯೋಗಕ್ಷೇಮಕ್ಕಾಗಿ ಸೃಷ್ಟಿಯಾಗಿರುವ ಒಂದು ಸಾಮಾಜಿಕ ಸಂಸ್ಥೆ' ಎಂದು ಇಂಡಿಯಾ ದೇಶದಲ್ಲಿ ನಾವು ಗ್ರಹಿಸುವ ಕಾಲ ಬಂದಿದೆ. ವಿದ್ಯಾಭ್ಯಾಸದ ಕಾರ್ಯಕ್ಷೇತ್ರ ಕೆಲವು ಪಠ್ಯ ವಿಷಯಗಳನ್ನು ಕಲಿಸುವುದು ಮಾತ್ರವಲ್ಲ, ಅದಕ್ಕಿಂತ ಹೆಚ್ಚು ವಿಶಾಲವಾದುದು—ಎಂದು ಈಗ ಪ್ರತಿಯೊಬ್ಬರೂ ಒಪ್ಪುತ್ತಾರೆ" ಎಂದು ಹೇಳಿ, ಪಾಶ್ಚಾತ್ಯ ದೇಶಗಳಲ್ಲಿ ಒಂದು ಕಡೆ ವಿದ್ಯಾಭ್ಯಾಸಕ್ಕೂ ಜನಜೀವನಕ್ಕೂ, ಮತ್ತೊಂದು ಕಡೆ ವಿದ್ಯಾಭ್ಯಾಸಕ್ಕೂ ಐಹಿಕ ಜೀವನಕ್ಕೂ, ಹೇಗೆ ನಿಕಟಸಂಬಂಧ ಬೆಳೆಯುತ್ತಿದೆ ಎಂಬುದರ ಬಗ್ಗೆ ಅಲ್ಲಿಯ ಪಂಡಿತರ ಅಭಿಪ್ರಾಯವನ್ನು ಉದ್ಧರಿಸಿ, ಇಂಡಿಯಾ ದೇಶದಲ್ಲಿ ನಾವು ಏನು ಮಾಡಬಹುದೆಂಬುದನ್ನು ಹೀಗೆ ತಿಳಿಸಿದ್ದಾರೆ:

"ಈಗ ನಮ್ಮ ಪಾಠಶಾಲೆಗಳಲ್ಲಿ ತರಗತಿಗಳು ಬಹಳ ದೊಡ್ಡವು. ಉಪಾಧ್ಯಾಯನಿಗೂ ಹುಡುಗನಿಗೂ ವ್ಯಕ್ತಿಶಃ ಪರಿಚಯ ಸಂಬಂಧ ಸಂಪರ್ಕಗಳು ಇರುವುದಿಲ್ಲ. ವಿದ್ಯಾರ್ಥಿಯ ಸ್ವಂತ ವಿಷಯವನ್ನಾಗಲಿ, ಅವನ ಮನೆಯಲ್ಲಿಯ ಸ್ಥಿತಿಗತಿಗಳನ್ನಾಗಲಿ ಸಾಮಾನ್ಯವಾಗಿ ಉಪಾಧ್ಯಾಯನು ಅರಿಯನು. ಆದರೆ ಅವುಗಳನ್ನು ಚೆನ್ನಾಗಿ ತಿಳಿದಿರಬೇಕಾದುದು ಅತ್ಯಗತ್ಯ. ಏಕೆಂದರೆ, ವಿದ್ಯಾರ್ಥಿಯ ವಿದ್ಯಾಭಿವೃದ್ಧಿಯ ಮೇಲೂ ಅವನ ಮೂರ್ತಿಸ್ವರೂಪದ ವಿಕಾಸದ ಮೇಲೂ ಅವುಗಳ ಪರಿಣಾಮ ಹೆಚ್ಚಾಗಿದೆ. ಇದಕ್ಕೆಲ್ಲ ನಮಗೆ ಹೆಚ್ಚು ಅನುಕೂಲಗಳೂ ಹೆಚ್ಚು ಜನ ಉಪಾಧ್ಯಾಯರೂ ಆವಶ್ಯಕ. ಮನೆಗೂ ಪಾಠಶಾಲೆಗೂ ಸಂಬಂಧ ಬೆಳೆಯುವಂತೆ 'ಅಟೆಂಡೆನ್ಸ್ ಆಫೀಸರ್' ಎಂಬ ಅಧಿಕಾರಿಯನ್ನೂ, ಮನೆಗಳಿಗೆ ಭೇಟಿ ಕೊಡುವುದಕ್ಕಾಗಿಯೇ ಒಬ್ಬ ಉಪಾಧ್ಯಾಯನನ್ನೂ ನೇಮಿಸುವುದು ಆವಶ್ಯಕ. ಹಾಗೆಯೇ ಪಾಠಶಾಲೆ, ಮನೆ ಮತ್ತು ಕಾರ್ಖಾನೆಗಳಿಗೆ ಸಂಬಂಧ ಬೆಳೆಯುವಂತೆ 'ವೃತ್ತಿ ಶಿಕ್ಷಣದ ಸಲಹೆಗಾರ' ಎಂಬ ಒಬ್ಬ ಅಧಿಕಾರಿಯನ್ನು ನೇಮಿಸುವುದೂ ಆವಶ್ಯಕ. ಹೀಗೆ ಮಾಡಿದರೆ, ಒಂದು ಕಡೆ ಹುಡುಗನ ವಿದ್ಯಾಭಿವೃದ್ಧಿ ಸಮರ್ಪಕವಾಗಿರುವುದಕ್ಕೂ ಮತ್ತೊಂದು ಕಡೆ ಪಾಠಶಾಲೆಯಲ್ಲಿ ವಿದ್ಯಾಭ್ಯಾಸ ಮುಗಿಯುವ ಹೊತ್ತಿಗೆ ಅವನು ಯಾವುದಾದರೂ ವೃತ್ತಿಯಲ್ಲೋ ಕಾರ್ಖಾನೆಯಲ್ಲೋ ಸೇರಿಕೊಂಡು ತನ್ನ ಜೀವನ ನಡಸಿಕೊಳ್ಳುವುದಕ್ಕೂ ಬಹುಮಟ್ಟಿಗೆ ಸಹಾಯವಾಗುತ್ತದೆ. ಇವುಗಳಲ್ಲದೆ ಪಾಠಶಾಲೆ ಮಾಡಬೇಕಾದ ಮತ್ತೊಂದು ಮುಖ್ಯ ಕಾರ್ಯವಿದೆ. ತರುಣನು ಮುಂದೆ ಸಭ್ಯ ಗೃಹಸ್ಥನಾಗಿ ಬಾಳುವುದಕ್ಕೆ ಸಹಾಯವಾಗಿ ಮದುವೆ, ಸಂಸಾರ ಮೊದಲಾದ ವಿಷಯಗಳಲ್ಲಿ ಅವನಿಗೆ ತಕ್ಕ ತಿಳಿವಳಿಕೆಯನ್ನು ಕೊಡಬೇಕು. ಹಾಗೆ ನಾವು ವಿಹಿತ ಕ್ರಮದಲ್ಲಿ ಕೊಡದಿದ್ದರೆ ಅಪಮಾರ್ಗಗಳಿಂದ ವಿಷಯಗಳನ್ನು ತಿಳಿದುಕೊಳ್ಳುವುದಕ್ಕೆ ಅವನು ಪ್ರಯತ್ನಿಸುತ್ತಾನೆ."

ತರುವಾಯ ಅಟೆಂಡೆನ್ಸ್ ಆಫೀಸರ್ ಎಂಬ ಅಧಿಕಾರಿಯ ಪ್ರಸ್ತಾಪ ಮಾಡಿ, ಆತನು ಮಕ್ಕಳ ಗೈರುಹಾಜರಿಗೆ ತಂದೆ ತಾಯಿಗಳ ಮೇಲೆ ತಪ್ಪು ಹೊರಿಸಿ ಅವರನ್ನು ಕೋರ್ಟಿಗೆಳೆದುಬಿಟ್ಟರೆ ತನ್ನ ಕರ್ತವ್ಯವಾಯಿತೆಂದು ತಿಳಿಯುವ ಅಧಿಕಾರಿಯಾಗಿ ಮಾತ್ರವಿದ್ದರೆ ಸಾಲದೆಂದೂ, ಆ ಗೈರುಹಾಜರಿಗೆ ಕಾರಣಗಳನ್ನು ತಿಳಿದು ತಕ್ಕ ಪರಿಹಾರೋಪಾಯಗಳನ್ನು ಸೂಚಿಸತಕ್ಕವನಾಗಿರಬೇಕೆಂದೂ ಮಕ್ಕಳಿಗೆ ಪಾಠಶಾಲೆಯಲ್ಲಿಯೂ ವಿದ್ಯಾಭ್ಯಾಸದಲ್ಲಿಯೂ ಆಸಕ್ತಿ ಹುಟ್ಟುವಂತೆ ತಕ್ಕ ಕಾರ್ಯಕ್ರಮವನ್ನು ಕೈಕೊಳ್ಳುವ ಸಾಮರ್ಥ್ಯಶಾಲಿಯಾಗಿರಬೇಕೆಂದೂ, ಆಗಾಗ್ಗೆ ಪಾಠಶಾಲೆಗಳಿಗೂ ಮನೆಗಳಿಗೂ ಭೇಟಿ ಕೊಡುವುದು, ಮಕ್ಕಳ ಮತ್ತು ತಂದೆ ತಾಯಿಗಳ ಸಭೆಗಳನ್ನು ಕೂಡಿಸುವುದು, ಪಾಠಬೋಧನೆಯ ಕ್ರಮದಲ್ಲಾಗಲಿ ಪಾಠಪಟ್ಟಿಗಳಲ್ಲಾಗಲಿ ನೀರಸ ಭಾಗಗಳಿದ್ದರೆ ಅವುಗಳನ್ನು ಕ್ರಮಪಡಿಸುವುದು – ಇವೇ ಮೊದಲಾದ ಕೆಲಸಗಳನ್ನು ಮಾಡತಕ್ಕವನಾಗಿರಬೇಕೆಂದೂ ಹೇಳಿದ್ದಾರೆ.

ಮನೆಗಳಿಗೆ ಭೇಟಿ ಕೊಡುವ ಉಪಾಧ್ಯಾಯನ ಕರ್ತವ್ಯಗಳನ್ನು ತಿಳಿಸುತ್ತ, ಹುಡುಗನು ಪಾಠಗಳಲ್ಲಿ ಏತಕ್ಕೆ ಹಿಂದೆ ಬಿದ್ದಿರುವನು? ಅದಕ್ಕೆ ನಿಜವಾದ ಕಾರಣ ಏನು? ಪಾಠಶಾಲೆಯ ಅನಂತರ ಮನೆಯಲ್ಲಿ ಇತರ ಕೆಲಸಗಳಿಗೆ ಅವನನ್ನು ಹಾಕುತ್ತಾರೆಯೆ? ಕೆಲಸವೇನಾದರೂ ಹೆಚ್ಚೆ? ತಂದೆ ತಾಯಿಗಳ ಹತೋಟಿಯಿಲ್ಲದೆ ಕೆಟ್ಟ ಸಹವಾಸದಲ್ಲಿ ಇರುತ್ತಾನೆಯೆ? ಓದುವುದಕ್ಕೆ ತಕ್ಕ ಸ್ಥಳಾನುಕೂಲ್ಯವಿಲ್ಲವೆ? ಮನೆಯಲ್ಲಿ ಯಾವಾಗಲೂ ಜಗಳವೆ? ಹಣಕಾಸಿನ ತೊಂದರೆಯಿಂದ ನರಗಳ ಜಾಡ್ಯವೆ? ಆಹಾರ ಪುಷ್ಟಿ ಹುಡುಗನಿಗೆ ಸಾಲದೆ? ತಂದೆ ತಾಯಿಗಳಿಗಾಗಲಿ ಹುಡುಗನಿಗಾಗಲಿ ಪಾಠಶಾಲೆಯ ವಿಚಾರದಲ್ಲಿ ತಾತ್ಸಾರವೆ? – ಇವೇ ಮುಂತಾದುವನ್ನು ಪರಿಶೋಧಿಸಿ, ಆತನು ತಕ್ಕರೀತಿ ಸರಿಪಡಿಸುವ ದಕ್ಷತೆಯುಳ್ಳವನಾಗಿರಬೇಕೆಂದು ಹೇಳುತ್ತಾರೆ.

ಹಾಗೆಯೇ ವೃತ್ತಿ ಶಿಕ್ಷಣ ಸಲಹೆಗಾರನು ಹೊರಗಿನ ಕಾರ್ಖಾನೆಗಳಲ್ಲಿ ನಡೆಯುವ ಕೆಲಸ, ಅಲ್ಲಿಗೆ ಎಂಥ ಜನ ಬೇಕು, ಪಾಠಶಾಲೆಯ ವಿದ್ಯಾರ್ಥಿಗಳನ್ನು ಎಷ್ಟರ ಮಟ್ಟಿಗೆ ಆ ಕಾರ್ಖಾನೆಯ ಕೆಲಸಗಳಿಗೆ ತಯಾರು ಮಾಡಬಹುದು, ಯಾವ ವೃತ್ತಿಗೆ ಹೆಚ್ಚು ಗಿರಾಕಿಯಿದೆ, ಹುಡುಗನಿಗೆ ಯಾವ ವೃತ್ತಿಯ ಕಡೆಗೆ ಒಲವಿದೆ ಮೊದಲಾದುವನ್ನು ತಿಳಿದುಕೊಂಡು ಕಾರ್ಖಾನೆಗಳಿಗೆ ಭೇಟಿ ಕೊಡುತ್ತ ಪಾಠಶಾಲೆಗಳಿಗೂ ಕಾರ್ಖಾನೆಗಳಿಗೂ ಸಂಬಂಧ ಬೆಳಸುವ ಮತ್ತು ತರುಣನಿಗೆ ಜೀವನೋಪಾಯವನ್ನು ಕಲ್ಪಿಸಿ ಕೊಡುವ ಅಧಿಕಾರಿಯಾಗಿರಬೇಕೆಂದು ಹೇಳುತ್ತಾರೆ.

ಶ್ರೀ. ಗುಪ್ತರು ಹೇಳಿರುವ ವಿಷಯಗಳನ್ನೆಲ್ಲ ಒಪ್ಪಬಹುದಾಗಿದೆ. ಆದರೆ ನಾವು ಹೇಳಬೇಕಾದ ಕೆಲವು ವಿಷಯಗಳೂ ಇವೆ. ಅವುಗಳನ್ನು ಹೇಳದೆ ವಿಧಿಯಿಲ್ಲ. ಪಾಶ್ಚಾತ್ಯ ರಾಷ್ಟ್ರಗಳು ಸ್ವತಂತ್ರವಾಗಿವೆ. ಆಯಾ ಜನಾಂಗ ತನ್ನ ಭಾವೀ ಪ್ರಜೆಗಳ ಯೋಗಕ್ಷೇಮ ಪುರೋಭಿವೃದ್ಧಿಗಳಿಗೆ ತಕ್ಕಂತೆ ಯೋಜನೆಯನ್ನು ಸಿದ್ಧಪಡಿಸಿಕೊಂಡು ರಾಷ್ಟ್ರದೃಷ್ಟಿಯಿಂದಲೂ ಜನಾಂಗದ ಏಳ್ಗೆಯ ದೃಷ್ಟಿಯಿಂದಲೂ ದೇಶಪ್ರೇಮದಿಂದ ಕೆಲಸ ಕಾರ್ಯಗಳನ್ನು ಮಾಡುತ್ತದೆ. ಅಲ್ಲಿಯ ವಾತಾವರಣ ಪರಿಸ್ಥಿತಿಗಳೇ ಬೇರೆ; ಇಲ್ಲಿಯವೇ ಬೇರೆ. ನಮ್ಮ ದೇಶದಲ್ಲಾದರೋ ವಿದ್ಯಾಭ್ಯಾಸದ ಸೂತ್ರಗಳನ್ನು ಹಿಡಿದಿರುವವರೂ, ವಿದ್ಯಾಭ್ಯಾಸಕ್ಕೆ ರೂಪ ಕೊಡುವವರೂ ಹಲವು ಸಂದರ್ಭಗಳಲ್ಲಿ ನಮ್ಮ ಜನಗಳಲ್ಲ. ಒಂದು ವೇಳೆ

ನಮ್ಮ ಜನಗಳು ಕೆಲವು ವರ್ಷಗಳ ಕಾಲ ಆ ಪದವಿಗಳಿಗೆ ಬಂದರೆ ಕಾರಣಾಂತರಗಳಿಂದ ಹೆಚ್ಚು ಪ್ರಯೋಜನವೂ ಆಗುವುದಿಲ್ಲ. ಕೆಲ ಕೆಲವು ಸಂದರ್ಭಗಳಲ್ಲಿ ಯೋಜನೆಗಳನ್ನು ಎರಡು ವರ್ಷ ಕಾಲ ನಡಸುತ್ತಾರೆ; ತರುವಾಯ ಬಂದವರು ಮತ್ತೆ ಬದಲಾಯಿಸುತ್ತಾರೆ. ವಿದ್ಯಾಭ್ಯಾಸದ ಪಂಡಿತರೆನಿಸಿದವರೂ ಸ್ವಲ್ಪ ಜನ ಮಾತ್ರವೇ. ಅವರೆಲ್ಲ ಬಹುಮಟ್ಟಿಗೆ ಸರ್ಕಾರದ ನೌಕರರು. ನಮ್ಮ ದೇಶದಲ್ಲಿ ಸಾರ್ವಜನಿಕಾಭಿಪ್ರಾಯ ರೂಪುಗೊಂಡಿಲ್ಲ, ವಿದ್ಯಾಭ್ಯಾಸದ ವಿಷಯ ಗಳ ಮೇಲೆ ತನ್ನ ಪ್ರಭಾವವನ್ನು ಬೀರುವುದಿಲ್ಲ. ಆದುದರಿಂದ ಒಟ್ಟನಲ್ಲಿ ಒಂದು ಗೊತ್ತಾದ ಯೋಜನೆಯಿಲ್ಲ, ಸರಿಯಾದ ಯೋಜನೆಯಿದ್ದರೆ ಅದನ್ನು ಮುಂದುವರಿಸುವವರು ಸಾಕಷ್ಟು ಮಂದಿಯಿಲ್ಲ, ಮುಂದುವರಿಸುವ ಕಾಲಕ್ಕೆ ತಕ್ಕ ಉಪಪತ್ತಿಯಿಲ್ಲ, ಸಿಬ್ಬಂದಿಯಿಲ್ಲ. ಹೀಗಾಗಿ ಕುಳಿತಿದೆ. ನಮ್ಮದು ಬಡತನದ ದೇಶ, ರೋಗರುಜಿನಗಳ ಬೀಡು; ಪಾಶ್ಚಾತ್ಯ ಯೋಜನೆಗಳ ಅಂಧಾನು ಕರಣದಲ್ಲಿ ಹಣವೇನೋ ಖರ್ಚಾಗುತ್ತಲಿದೆ, ದೇಶಕ್ಕೆ ಮಾತ್ರ ಹೆಚ್ಚು ಪ್ರಯೋಜನವಾಗುತ್ತಿಲ್ಲ. ಆದುದರಿಂದ ನಮ್ಮ ದೇಶದ ಸ್ಥಿತಿಗತಿಗಳನ್ನು ಚೆನ್ನಾಗಿ ತಿಳಿದುಕೊಂಡು, ಚೆನ್ನಾಗಿ ಯೋಚಿಸಿ ಸಿದ್ಧಗೊಳಿಸಿದ ಯೋಜನೆಯನ್ನು ಒಂದು ಕ್ಲುಪ್ತಕಾಲದವರೆ ಗಾದರೂ ಪ್ರಯೋಗಕ್ಕೆ ತಂದುಕೊಳ್ಳುವುದು ಒಳ್ಳೆಯದು.

## ಲಘು ಸಾಹಿತ್ಯ

[ಸುಪ್ರಸಿದ್ಧ ಮರಾಠಿ ಸಾಹಿತಿ ಶ್ರೀ. ಪಿ. ಕೆ. ಅತ್ರೆಯವರ ಭಾಷಣದ ಸಾರ. ಪಿ.ಇ.ಎಸ್. ಪತ್ರಿಕೆಯಿಂದ.]

ಸಾಹಿತ್ಯ ಪ್ರಪಂಚದಲ್ಲಿ ಲಘು ಸಾಹಿತ್ಯಕ್ಕೂ ಒಂದು ಗಣ್ಯಸ್ಥಾನ ವಿರಬೇಕು. ಇತರ ಸಾಹಿತ್ಯ ಶಾಖೆಗಳ ಬೆಲೆ, ಮುಖ್ಯತೆ ಅವಕ್ಕೆ ಇದ್ದೇ ಇದೆ. ಆದರೆ ಜನಸಾಮಾನ್ಯವನ್ನು ಮುಟ್ಟುವಂಥದು ಲಘುಸಾಹಿತ್ಯ; ಆದಕಾರಣ ಅದನ್ನು ಅವಹೇಳನ ಮಾಡುವುದಾಗಲಿ ಉಪೇಕ್ಷೆಮಾಡು ವುದಾಗಲಿ ಸಲ್ಲದು.

ಒಬ್ಬ ದೊಡ್ಡ ಕವಿಗಾಗಲಿ, ದೊಡ್ಡ ಕಾದಂಬರಿಕಾರನಿಗಾಗಲಿ, ಸಾಹಿತ್ಯ ಪ್ರಪಂಚದಲ್ಲಿ ಶ್ರೇಷ್ಠರೆನಿಸಿದವರ ಜೊತೆ ಸ್ಥಾನವಿದೆ, ಸಹಜ; ಆದರೆ, ಲಘುಸಾಹಿತ್ಯ ಹೇರಳವಾದ್ದರಿಂದ ಇತರ ಸಾಹಿತ್ಯ ಶಾಖೆಗಳಲ್ಲಿ ಇರುವುದಕ್ಕಿಂತ ಇದರಲ್ಲಿ ಕೀಳ್ತರದ ಪುಸ್ತಕಗಳ ಸಂಖ್ಯೆ ಹೆಚ್ಚಿರುವುದು ಸಂಭವ; ಆದ್ದರಿಂದಲೇ ಈ ಸಾಹಿತ್ಯ ಭಾಗ ಅಷ್ಟೊಂದು ಕಟು ಟೀಕೆಗೆ ಗುರಿಯಾಗಿರುವುದು.

ಲಘು ಸಾಹಿತ್ಯವೆಂದ ಮಾತ್ರಕ್ಕೆ ಹುರುಳಿಲ್ಲದ್ದಲ್ಲವೆಂದಲ್ಲ ಅಥವಾ ಯಾರು ಬೇಕಾದರೂ ಅದರಲ್ಲಿ ಒಂದು ಕೈ ನೋಡಬಹುದೆಂದಲ್ಲ. ಲಘು ಸಾಹಿತ್ಯದ ಹೆಚ್ಚುಗಾರಿಕೆಯೆಂದರೆ ಹಾಸ್ಯ, ನಗೆ, ನಲಿವುಗಳಿಂದ ಜನರನ್ನು ಆಕರ್ಷಿಸಿ, ಅವರಲ್ಲಿ ಓದುವ ಒಲವನ್ನು ಹುಟ್ಟಿಸಬಲ್ಲ ಶಕ್ತಿ ಅದಕ್ಕೆ ಇರುವುದು. ವಾಚನಾಭಿರುಚಿಯನ್ನು ಹೆಚ್ಚಿಸಲು ಲಘು ಸಾಹಿತ್ಯವೇ ಸಾಧನ.

### ಸಾಹಿತ್ಯ ಸಲಹೆಗಳು.

ಶ್ರೀ. ಅತ್ರೆಯವರು ತಮ್ಮ ಭಾಷಣದಲ್ಲಿ ಮರಾಠಿ ಸಾಹಿತ್ಯ ಸಂಬಂಧವಾಗಿ ಕೆಲವು ಅಮೂಲ್ಯ ಸಲಹೆಗಳನ್ನು ಮಾಡಿರುವುದಾಗಿ ವರದಿಯಾಗಿದೆ: ೧. ಲೇಖಕರಿಗೆ ಅವರ ಲೇಖನಗಳಿಗಾಗಿ ಸಂಭಾ ವನೆ ಕೊಡಬೇಕು. ೨. ವಾಚಕರು ಹಣಕೊಟ್ಟು ಓದಬೇಕು. ೩. ಪಾಶ್ಚಾತ್ಯ ಜ್ಞಾನ ವಿಜ್ಞಾನವನ್ನು ಮರಾಠಿ ಸಾಹಿತ್ಯಕ್ಕೆ ತಂದು ತುಂಬಿ ಕೊಳ್ಳಬೇಕು. ೪. ಇಂಗ್ಲಿಷಿನ 'ಪೆಂಗ್ವಿನ್' ಮಾಲೆಯಂಥ ಗ್ರಂಥ ಮಾಲೆಗಳನ್ನು ಹೊರಡಿಸಬೇಕು. ೫. ವಿಶ್ವವಿದ್ಯಾನಿಲಯಗಳು ಲೇಖಕ ರಿಗೆ ಮನ್ನಣೆ ಕೊಡಬೇಕು. ೬. ಲೇಖಕರು ಸಾಮಾನ್ಯ ಮಾನವನ ಜೀವನವನ್ನು ಹೆಚ್ಚುಹೆಚ್ಚಾಗಿ ಪ್ರತಿಬಿಂಬಿಸಬೇಕು. ಒಂದು ಮಾತಿ ನಲ್ಲಿ ಅವರು ಸಂಪ್ರದಾಯದ ಶೃಂಖಲೆಗಳನ್ನು ಕಡಿದುಕೊಂಡು ಮುನ್ನುಗ್ಗಬೇಕು.

ಕನ್ನಡಿಗರೂ ಕೂಡ ಇವನ್ನು ವಿಚಾರ ಮಾಡಬೇಕಾಗಿದೆ.

— ಎಂ.ವಿ.ಸೀ.

## ಪರಿಷತ್ತಿನ ಮುನ್ನಡೆ

(೬ನೆಯ ಪುಟದಿಂದ)

ಪರಿಷತ್ತಿನ ಮುನ್ನಡೆಯೆಂದು ಹೇಳುತ್ತ ಈ ಲೇಖನದಲ್ಲಿ ಇದುವರೆಗೆ ಸ್ಥಳೀಯ ಸಂಘಗಳು ಕೈಗೊಳ್ಳಬೇಕಾದ ಕಾರ್ಯಕ್ರಮ ವನ್ನು ಕುರಿತು ಪ್ರಸ್ತಾಪಿಸಿದೆ. ಇದನ್ನು ನೋಡಿ ಯಾರೂ ಆಶ್ಚರ್ಯ ಪಡಲಾರರೆಂದು ನಾನು ನಂಬಿದೇನೆ. ನಾಡೆಲ್ಲ ಎಚ್ಚರಗೊಳ್ಳದೆ, ನಗರಗಳೆಲ್ಲ ಯತ್ನಮಾಡದೆ, ಊರುಗಳು ನಡುಕಟ್ಟಿ ಕಾರ್ಯಕ್ಕೆ ತೊಡಗದೆ, ಪರಿಷತ್ತು ಏನನ್ನೂ ಮಾಡಲಾರದು. ಸದಸ್ಯರು ಸೇರಿ ಪರಿಷತ್ತು ಮೈಗೂಡುತ್ತದೆ. ಸ್ಥಳೀಯ ಸಂಘಗಳು ದುಡಿದು ಪರಿಷತ್ತು ಕೃತಕೃತ್ಯವಾಗುತ್ತದೆ. ಪರಿಷತ್ತಿಗೆ ಸದಸ್ಯರು ಬೇಕು. ಅವರು ನೀಡುವ ಧನಸಹಾಯ ಬೇಕು. ಸ್ಥಳೀಯ ಸಂಘಗಳು ಅಂಗಗಳಾಗಬೇಕು; ಜನದ ಏಳ್ಗೆಗಾಗಿ ಅದು ಬೇಡುವ ಕಾರ್ಯದಲ್ಲಿ ದುಡಿಯಬೇಕು.

— ಮಾಸ್ತಿ ವೆಂ. ಅ.

## ಲಿಂಗರಾಜ ಜಯಂತ್ಯುತ್ಸವ, ಬೆಳಗಾಂವಿ

ಗೌರವ ಕಾರ್ಯದರ್ಶಿಗಳಾದ ಶ್ರೀ. ಶ. ವೀ. ಪಾಟೀಲ ಅವರು ಹೀಗೆ ಬರೆಯುತ್ತಾರೆ:

೧೦-೧-೪೩ನೆಯ ದಿನ ಕೊಡುಗೈ ದೊರೆಗಳಾದ ಕೈ. ವಾ. ಶ್ರೀಮಂತ ಲಿಂಗಪ್ಪಾ ಜಾಯಪ್ಪಾ ಸರದೇಸಾಯಿ ಶಿರಸಂಗಿ ಮತ್ತು ನವಲಗುಂದ ಇವರ ಹುಟ್ಟುಹಬ್ಬವನ್ನು ಲಿಂಗರಾಜ ಜಯಂತ್ಯುತ್ಸವ ಸಮಿತಿಯವರು ಪ್ರಿ. ಡಾ. ಶಿ. ಚ. ನಂದೀಮಠ ಇವರ ಅಧ್ಯಕ್ಷತೆಯಲ್ಲಿ ಆಚರಿಸಿದರು. ಈ ಕಲ್ಯಾಣ ಉತ್ಸವಕ್ಕೆ 'ಶರಣ ಸಂದೇಶ'ದ ಸಂಪಾದಕರಾದ ಮಂಜಪ್ಪಾ ಹರ್ಡೇಕರ ಇವರು ಅತಿಥಿ ಗಳಾಗಿ ಬಂದಿದ್ದರು. ಕನ್ನಡಿಗರಿಗೆ ತ್ಯಾಗದಲ್ಲಿ ಮೇಲ್ಪಂಕ್ತಿ ಹಾಕಿಕೊಟ್ಟ ತ್ಯಾಗವೀರ ಲಿಂಗರಾಜ ಇವರ ವ್ಯಕ್ತಿಯ ಬಗ್ಗೆ ನಾಲ್ಕು ಮಾತುಗಳನ್ನು ಹೇಳಿದರು. ಬೆಳಗಾಂ ವಿಯ ಲಿಂಗರಾಜ ಕಾಲೇಜು ಲಿಂಗರಾಜರ ತ್ಯಾಗಜೀವನಕ್ಕೆ ಉಜ್ವಲ ಸ್ಮಾರಕ. ಪಟ್ಟಣಗಳಲ್ಲಷ್ಟೇ ಇವರ ಜಯಂತ್ಯುತ್ಸವಗಳು ನಡೆಯದೆ, ಹಳ್ಳಿಗಳಲ್ಲಿಯೂ ನಡೆದು ಹಳ್ಳಿಗರ ಬಾಳನ್ನೂ ಹಸನು ಮಾಡುವಂತೆ ಮುಂದೆ ಆಗಲಿ ಎಂದು ಸನ್ಮಾನ್ಯ ಅತಿಥಿಗಳು ಆಶಿಸಿದರು.

ಉತ್ಸವದ ಅಂಗವಾಗಿ ಪ್ರಬಂಧ ಮೇಲಾಟ ಹಾಗೂ ವಾಕ್ ಸ್ಪರ್ಧೆಗಳನ್ನು ಇಡಲಾಗಿತ್ತು. ಲಿಂಗರಾಜ ಗಮಕ ಪಾರಿತೋಷಕ ಸಮಿತಿಯವರು ಒಂದು ಉರುಳುವ ಗಮಕ ಪಾರಿತೋಷಕವನ್ನು ಲಿಂಗರಾಜರ ಹೆಸರಿನಲ್ಲಿ ಈ ವರ್ಷ ಇಟ್ಟಿದ್ದಾರೆ. ಸ್ಥಳೀಯ ವಿದ್ಯಾಸಂಸ್ಥೆಗಳೆಲ್ಲಕ್ಕೂ ಈ ಮೇಲಾಟದಲ್ಲಿ ಭಾಗವಹಿಸಲು ಅವಕಾಶವಿದೆ.

## ಪ್ರಹ್ಲಾದ

### ಇನ್ನೊಂದು ಕನ್ನಡ ವಾಕ್ಚಿತ್ರ

ಮಂಗಳೂರಿನ ನ್ಯೂ ಚಿತ್ರಾ ಟಾಕೀಸ್ ಮಂದಿರದಲ್ಲಿ ೧೪-೧-೪೩ನೆಯ ದಿನದಿಂದ ಕಲ್ಯಾಣಿಯವರ ಮೊದಲನೆಯ ಕನ್ನಡ ವಾಕ್ಚಿತ್ರವಾದ 'ಪ್ರಹ್ಲಾದ' ಪ್ರದರ್ಶಿತವಾಗುತ್ತಿದೆ. ಪ್ರಾರಂಭೋತ್ಸವ ಶ್ರೀ. ಬಿ. ವೈಕುಂಠ ಬಾಳಿಗ, ಬಿ.ಎ., ಬಿ.ಎಲ್. ಅವರಿಂದ ನೆರವೇರಿತು. ಶ್ರೀಯುತರು ತಮ್ಮ ಭಾಷಣದಲ್ಲಿ ಚಲಚ್ಚಿತ್ರ ಗಳ ಪ್ರಗತಿ, ಅವುಗಳ ಶೈಕ್ಷಣಿಕ ಮೌಲ್ಯ, ಸಾಮಾನ್ಯರಿಗೂ ಅವುಗಳಿಂದ ದೊರೆ ಯುವ ಅನಂತ ಪ್ರಯೋಜನಗಳನ್ನು ವಿವರಿಸಿ, 'ಪ್ರಹ್ಲಾದ' ಚಿತ್ರದ ಸೊಗಸನ್ನು ಕುರಿತು ಪ್ರಶಂಸೆಯ ಮಾತನ್ನಾಡಿದರು.

ಮಂಗಳೂರಿನ 'ಪ್ರಭಾತ' ಪತ್ರಿಕೆಯವರೂ ಈ ಚಿತ್ರದ ಪ್ರಸಾರಕರಾದ ಮೈಸೂರು ಫಿಲ್ಮ್ ಕಾರ್ಪೊರೇಷನ್, ಗಾಂಧಿನಗರ, ಬೆಂಗಳೂರು, ಇವರೂ ಸಹಕರಿಸಿ, ಅಭಿನಯ, ಹಾಡಿಕೆ, ನರ್ತನ, ಸಂವಾದ, ಛಾಯಾಚಿತ್ರಣ ಮುಂತಾದ ಮುಖಗಳಿಂದ 'ಪ್ರಹ್ಲಾದ' ಚಿತ್ರದ ವಿಮರ್ಶೆಯನ್ನು ಸ್ಥಳೀಯ ಪ್ರೇಕ್ಷಕರಿಂದ ಬರ ಮಾಡಿಕೊಂಡು ಬಹುಮಾನ ಕೊಡುವ ಯೋಜನೆ ಮಾಡಿದ್ದಾರೆ.

## ಕರ್ನಾಟಕ ಸಂಘ, ರಾಣೀಬೆನ್ನೂರು

ರಾಣೀಬೆನ್ನೂರು ಕರ್ನಾಟಕ ಸಂಘದ ೧೯೪೨ನೆಯ ವರ್ಷದ ವರದಿಯನ್ನು ಸಂತೋಷದಿಂದ ಸ್ವೀಕರಿಸಿದ್ದೇವೆ. ಪರಿಷತ್ತಿನ ಅಂಗಸಂಸ್ಥೆಯಾದ ಈ ಸಂಘ ಆರು ವರ್ಷಗಳಿಂದ ಬಹಳ ಚೆನ್ನಾಗಿ ಕೆಲಸ ಮಾಡುತ್ತಿದೆ. ಉಪನ್ಯಾಸ, ಉತ್ಸವಗಳು ಮುಂತಾದ ಸಾಮಾನ್ಯ ಕಾರ್ಯಕ್ರಮಗಳೊಂದಿಗೆ ಒಂದು ಪುಸ್ತಕ ಭಂಡಾರವನ್ನು (೬೦೦ ಕನ್ನಡ ಪುಸ್ತಕಗಳು, ೨೫೦ ಇಂಗ್ಲಿಷ್ ಪುಸ್ತಕಗಳು ಇವೆ) ನಡಸಿಕೊಂಡು ಬರುತ್ತಿದೆ. ಸಂಘದ ಒಂದು ಮುಖ್ಯವಾದ ಚಟುವಟಿಕೆಯೆಂದರೆ ಅದರ ನಾಟ್ಯ ಶಾಖೆಯವರು ಸಂತತವಾಗಿ ನಾಟಕ ಕಲೆಗೆ ಮನಸ್ಸು ಕೊಟ್ಟು ಉತ್ತಮ ತೆರನ ನಾಟಕಗಳನ್ನು ಪ್ರಯೋಗಿಸುತ್ತಿರುವುದು. ಕಳೆದ ವರ್ಷದಲ್ಲಿ ನಾಟ್ಯ ಶಾಖೆಯಿಂದ ಸಂಘಕ್ಕೆ ಬಹಳ ಆರ್ಥಿಕ ಸಹಾಯವಾಗಿದೆ ಎಂದು ವರದಿಯಲ್ಲಿ ಹೇಳಿದೆ. ಇದು ಅತ್ಯಂತ ಸಂತೋಷವನ್ನುಂಟುಮಾಡುವ ವಿಚಾರವಾಗಿದೆ. ಸಂಘದ ಕಾರ್ಯ ಕಲಾಪಗಳಿಗೆ ಹೀಗೆಯೆ ವರ್ಷ ವರ್ಷವೂ ಯಶಸ್ಸು ಲಭಿಸಲೆಂದು ಹಾರೈಸುತ್ತೇವೆ.

## ಪರಿಷತ್ತಿನ ಸುದ್ದಿ

### ಪರಿಷತ್ತಿಗೆ ಗ್ರಂಥದಾನ

ರಾಜಸೇವಾಪ್ರಸಕ್ತ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರರಿಗೆ ದಿವಾನ್‌ಬಹದ್ದೂರ್ ರಾಜಸೇವಾಸಕ್ತ ಶ್ರೀ. ಕೆ. ಆರ್. ಶೇಷಾಚಾರ್ಯರವರು ವಿಶ್ವಾಸಪೂರ್ವಕವಾಗಿ ಕೊಟ್ಟ ತಾರಾನಾಥ ತರ್ಕ ವಾಚಸ್ಪತಿಯವರಿಂದ ಸಂಪಾದಿತವಾದ **ವಾಚಸ್ಪತ್ಯಾ** ಎಂಬ ಸಂಸ್ಕೃತ ನಿಘಂಟಿನ ಐದು ದೊಡ್ಡ ಸಂಪುಟಗಳನ್ನು ಶ್ರೀ. ಮಾಸ್ತಿಯವರು ಪರಿಷತ್ತಿಗೆ ದಾನ ಮಾಡಿರುತ್ತಾರೆ. ಪರಿಷತ್ತು ಈ ಗ್ರಂಥವನ್ನು ಕೃತಜ್ಞತೆಯಿಂದ ಸ್ವೀಕರಿಸಿದೆ.

### ಪರಿಷತ್ತಿನ ಸದಸ್ಯರ ಬೆಳವಣಿಗೆ

(ತಾ. ೧೪-೧-೧೯೪೩ ರಿಂದ ೨೦-೧-೧೯೪೩ರ ವರೆಗೆ)

**ಸಹಾಯಕ ಸದಸ್ಯರು (೧೦೦ರೂ.):** ಶ್ರೀ. ಪಿ. ಎಚ್. ಕೃಷ್ಣರಾಯರು, ಎಂ.ಎ., ಸೆನ್ಸಸ್ ಸೂಪರಿಂಟೆಂಡೆಂಟರು, ಬೆಂಗಳೂರು.

**ಆಜೀವ ಸದಸ್ಯರು (೫೦ ರೂ.):** ಶ್ರೀ. ಬಿ. ಅಶ್ವತ್ಥನಾರಾಯಣರಾಯರು, ನೀಲಕಂಠೇಶ್ವರ ಪ್ರೆಸ್, ಸುಲ್ತಾನ್ ಪೇಟೆ, ಬೆಂಗಳೂರು. (ಸಾಮಾನ್ಯ ಸದಸ್ಯತ್ವದಿಂದ ಬದಲಾವಣೆ)

**ಸಾಮಾನ್ಯ ಸದಸ್ಯರು (೩ ರೂ.):** ಶ್ರೀ.ಗಳಾದ ೧. ಬಿ.ಎಸ್. ರಾಮಾಚಾರ್ಯರು, ಅಗ್ರಿಕಲ್ಚರಲ್ ಇನ್‌ಸ್ಪೆಕ್ಟರು, ಸಂತೆಬೆನ್ನೂರು. ೨. ಎ. ನಾರಾಯಣರಾಯರು, ಎಂ.ಎಸ್‌ಸಿ., ಸೆಂಟ್ರಲ್ ಕಾಲೇಜು, ಬೆಂಗಳೂರು. ೩. ಕೆ. ಸೀತಾರಾಮಯ್ಯನವರು, ಚಿತ್ರದುರ್ಗ. ೪. ಬಿ. ರಾಮಾನುಜ ಅಯ್ಯಂಗಾರ್, ಬಿ.ಎ., ಬಿ.ಎಲ್. ಅವರು, ವಿಶ್ವೇಶ್ವರಪುರ, ಬೆಂಗಳೂರು. ೫. ಕೆ. ವೆಂಕಟಸ್ವಾಮಿರಾಜು ಅವರು, ಮಾರೇನಹಳ್ಳಿ, ಉತ್ತರಹಳ್ಳಿ ಹೋಬಳಿ, ಬೆಂಗಳೂರು ತಾಲ್ಲೂಕು.

### ಕನ್ನಡ ಸಾಹಿತ್ಯ ಪರೀಕ್ಷೆಗಳು – ಜನವರಿ ೧೯೪೩
### ವೇಳಾಪಟ್ಟಿ

(ಪ್ರತಿದಿನವೂ ಬೆಳಗ್ಗೆ ೮ರಿಂದ ೧೨ ಗಂಟೆಯ ವರೆಗೆ)

೨೯-೧-೪೩ ಶುಕ್ರವಾರ: **ಜಾಣ ಪರೀಕ್ಷೆ**
ಸಾಹಿತ್ಯ ಭಾಗ: ನಾಟಕ, ಕಾವ್ಯ, ಗದ್ಯ.

೩೦-೧-೪೩ ಶನಿವಾರ: (೧) **ಕಾವ ಪರೀಕ್ಷೆ**
ಸಾಹಿತ್ಯ ಭಾಗ: ನಾಟಕ, ಕಾವ್ಯ, ಗದ್ಯ.

,, (೨) **ಜಾಣ ಪರೀಕ್ಷೆ**
ವ್ಯಾಕರಣ, ಭಾಷಾ ಚರಿತ್ರೆ, ಸಾಹಿತ್ಯ ಚರಿತ್ರೆ ಮತ್ತು ವಿಮರ್ಶೆ.

೩೧-೧-೪೩ ಭಾನುವಾರ: (೧) **ಕಾವ ಪರೀಕ್ಷೆ**
ವ್ಯಾಕರಣ ಮತ್ತು ಸಂಸ್ಕೃತಿ.

,, (೨) **ಜಾಣ ಪರೀಕ್ಷೆ**
ಸಂಸ್ಕೃತಿ ಮತ್ತು ಚರಿತ್ರೆ.

### ಪರಿಷತ್ತಿನ ಮಹಿಳಾ ಶಾಖೆ

ಪರಿಷತ್ತಿನ ಮಹಿಳಾ ಸದಸ್ಯರ ಸಭೆ ಇದೇ ತಿಂಗಳು ೨೪ನೆಯ ತಾರೀಖು ಭಾನುವಾರ ಸಂಜೆ ೫-೩೦ ಗಂಟೆಗೆ ಪರಿಷನ್ಮಂದಿರದಲ್ಲಿ ಸೇರುತ್ತದೆ. ಪರಿಷತ್ತಿನ ಎಲ್ಲ ಮಹಿಳಾ ಸದಸ್ಯರೂ (ಅಭಿಮಾನಿಗಳೂ ಸಹ) ಸಭೆಗೆ ದಯಮಾಡಿಸಿ ಸಭೆಯ ಕಾರ್ಯಕಲಾಪಗಳಲ್ಲಿ ಸಹಕರಿಸಬೇಕಾಗಿ ಪ್ರಾರ್ಥನೆ.

**ಕಾರ್ಯ ವಿವರ**

೧. ಮಹಿಳಾ ಶಾಖೆಯ ಪ್ರಸಕ್ತ ವರ್ಷದ ಅಧ್ಯಕ್ಷರು; ವ್ಯವಸ್ಥಾಪಕರು, ಸಮಿತಿಯ ಸದಸ್ಯರು, ಇವರುಗಳ ಆಯ್ಕೆ.

೨. ಮಹಿಳಾ ಶಾಖೆಯ ವರ್ಷದ ಕಾರ್ಯಕ್ರಮ.

ಬಿ. ಎಲ್. ಸುಶೀಲಮ್ಮ
ವ್ಯವಸ್ಥಾಪಕರು

### ಪರಿಷತ್ತಿನ ಸದಸ್ಯರಲ್ಲಿ ಬಿನ್ನಹ

ಪರಿಷತ್ತಿನ ಕಾರ್ಯಕಲಾಪಗಳು ಸುಸೂತ್ರವಾಗಿ ನಡೆಯಲು ಅನುಕೂಲವಾಗುವಂತೆ ಪರಿಷತ್ತಿನ ಸದಸ್ಯರು ದಯವಿಟ್ಟು ತಮ್ಮಿಂದ ಸಲ್ಲಬೇಕಾದ ಚಂದಾಹಣವನ್ನು ಪರಿಷತ್ತಿಗೆ ಬೇಗ ಕಳಿಸಿಕೊಟ್ಟು ಉಪಕಾರ ಮಾಡಬೇಕಾಗಿ ಪ್ರಾರ್ಥನೆ.

೧೯೪೩ನೆಯ ವರ್ಷದ ಚಂದಾಹಣವನ್ನು ೧೯೪೩ರ ಮಾರ್ಚಿ ತಿಂಗಳ ಕೊನೆಯೊಳಗೆ ಸಲ್ಲಿಸಬೇಕೆಂದೂ, 'ಕನ್ನಡ ನುಡಿ'ಯ ಅಂಚೆ ವೆಚ್ಚದ ಬಗ್ಗೆ ೧೨ ಆಣೆಯನ್ನೂ ಸದಸ್ಯತ್ವದ ಚಂದಾ ಮೊಬಲಗಿನ ಜತೆಯಲ್ಲಿ ಕಳಿಸಬೇಕೆಂದೂ ಪ್ರಾರ್ಥನೆ.

ಮಾರ್ಚಿಯ ವರೆಗೂ ತಡೆಯದೆ ಒಡನೆಯೆ ಚಂದಾ ಸಲ್ಲಿಸುವುದಾದರೆ ತುಂಬ ಅನುಕೂಲವಾಗುತ್ತದೆಂದು ಬೇರೆ ಹೇಳಬೇಕಾಗಿಲ್ಲ.

ಮಾರ್ಚಿಯೊಳಗೆ ಚಂದಾಹಣವನ್ನಾಗಲಿ, ಅಂಚೆ ವೆಚ್ಚವನ್ನಾಗಲಿ ಕಳಿಸದೆ, ತರುವಾಯ ಸಲ್ಲಿಸುವವರಿಗೆ ಹಣ ಸಲ್ಲಿಸಿದ ತಾರೀಖಿನಿಂದ ಮಾತ್ರ 'ಕನ್ನಡ ನುಡಿ'ಯನ್ನು ಕಳಿಸಿಕೊಡಲು ಸಾಧ್ಯವೇ ಹೊರತು ಹಿಂದಿನ ಸಂಚಿಕೆಗಳನ್ನು ಕಳಿಸಿಕೊಡಲು ಆಗುವುದಿಲ್ಲವೆಂಬುದನ್ನು ದಯವಿಟ್ಟು ಅರಿಯಬೇಕಾಗಿ ಪ್ರಾರ್ಥನೆ.

ಬಿ. ವೆಂಕೋಬರಾವ್
ಕಾರ್ಯದರ್ಶಿ

## ಕನ್ನಡ ಸುದ್ದಿ

**ತುಮಕೂರು: ಇಂಟರ್‌ಮೀಡಿಯೆಟ್ ಕಾಲೇಜು ಸಂಘ**

೧೬-೧-೪೩ನೆಯ ಶನಿವಾರ ಸಂಜೆ ೬-೩೦ಕ್ಕೆ ಸಂಘದ ಆಶ್ರಯದಲ್ಲಿ ಶ್ರೀ. ಸಿದ್ದವನಹಳ್ಳಿ ಕೃಷ್ಣಶರ್ಮ ಅವರು "ಗಾಂಧೀಜಿಯ ಜೊತೆಯಲ್ಲಿ" ಎಂಬ ವಿಷಯವಾಗಿ ಉಪನ್ಯಾಸ ಮಾಡಿ, ಗಾಂಧೀಜಿಯವರ ವ್ಯಕ್ತಿತ್ವವನ್ನೂ ಅವರ ಆಶ್ರಮದ ವಾತಾವರಣವನ್ನೂ ವರ್ಣಿಸಿದರು.

ಪೌರಸಭಾಧ್ಯಕ್ಷರಾದ ಶ್ರೀ. ಬಿ. ಎಸ್. ಕೇಶವ ಅಯ್ಯಂಗಾರರು ಅಧ್ಯಕ್ಷತೆ ವಹಿಸಿದ್ದರು.

ಮರುದಿನ ಸಂಜೆ ೬-೧೫ಕ್ಕೆ ಸಂಘದ ಆಶ್ರಯದಲ್ಲಿ **ಸಾಹಿತ್ಯ ವಾಚನ** ನಡೆಯಿತು. ಶ್ರೀ.ಗಳಾದ ಪರಮೇಶ್ವರ ಭಟ್ಟರು, ವೈ. ಎಸ್. ಲೂಯಿಸ್ ಅವರು, ಬಿ. ಚಂದ್ರಶೇಖರ್ ಅವರು ಅನುಕ್ರಮವಾಗಿ ಗದ್ಯ, ಪದ್ಯ, ನಾಟಕ ವಾಚನ ನಡಸಿದರು.

ಪದ್ಯ ವಾಚನ ಮಾಡಿದ ಶ್ರೀ. ಲೂಯಿಸ್ ಅವರು ಶ್ರೀ.ಗಳಾದ ಬೇಂದ್ರೆಯವರು, ಪುಟ್ಟಪ್ಪನವರು ಮತ್ತು ಪರಮೇಶ್ವರ ಭಟ್ಟರ ಕವಿತೆಗಳ ಜೊತೆಗೆ ಹೊಸದಾಗಿ ರಚಿಸಿರುವ ತಮ್ಮ ಸ್ವಂತ ಕವಿತೆಯನ್ನೂ ಓದಿದರು.

ಶ್ರೀ. ಸಿದ್ದವನಹಳ್ಳಿ ಕೃಷ್ಣಶರ್ಮ ಅವರು ಅಧ್ಯಕ್ಷತೆ ವಹಿಸಿದ್ದರು.

**ಬೆಳಗಾವಿ: ರಾಜಾ ಲಖಮನಗೌಡ, ಲಾ ಕಾಲೇಜು ಕರ್ನಾಟಕ ಸಂಘ**

ಸಂಘದ ಕಾರ್ಯದರ್ಶಿಗಳಾದ ಶ್ರೀ. ಎ. ಆರ್. ಶ್ರೀನಿವಾಸರಾವ್ ಮತ್ತು ಶ್ರೀ. ರಾ. ದ. ಕುರಂದವಾಡ ಅವರು ಹೀಗೆ ಬರೆಯುತ್ತಾರೆ:

ತಾ. ೯-೧-೪೩ನೆಯ ಶನಿವಾರ ಸಂಘದ ಆಶ್ರಯದಲ್ಲಿ 'ಅವಿಭಕ್ತ ಕುಟುಂಬ ಪದ್ಧತಿ ಹಿಂದೂ ಜನಾಂಗದ ಅಭಿವೃದ್ಧಿಗೆ ಈಗಿನ ಕಾಲದಲ್ಲಿ ಪ್ರತಿಬಂಧವಾಗಿ ಪರಿಣಮಿಸಿದೆ' ಎಂಬ ವಿಷಯದ ಬಗ್ಗೆ ಒಂದು ಚರ್ಚೆಯನ್ನೇರ್ಪಡಿಸಲಾಗಿತ್ತು. ಇಲ್ಲಿಯ ಸಬ್‌ಜಜ್ಜರಾದ ಶ್ರೀಮಾನ್ ಅಂಗಡಿ ಅವರು ಅಧ್ಯಕ್ಷಸ್ಥಾನವನ್ನು ಅಲಂಕರಿಸಿದ್ದರು. ವಿಷಯವನ್ನು ಮಂಡಿಸುತ್ತ ವ್ಹಿ. ಜಿ. ಕುಲಕರ್ಣಿ ಅವರು, 'ಒಟ್ಟು ಕುಟುಂಬ ಪದ್ಧತಿ ಇಂದು ನಿರ್ಜೀವವಾಗಿದೆ; ಅಪ್ರಯೋಜಕವಾಗಿದೆ. ಅದು ವ್ಯಕ್ತಿಸ್ವಾತಂತ್ರ್ಯಕ್ಕೆ ತಡೆಯಾಗಿದೆ; ಆರ್ಥಿಕ ದೃಷ್ಟಿಯಿಂದ ಹಾನಿಕರವಾಗಿದೆ. ಮಾನಸಶಾಸ್ತ್ರದ ದೃಷ್ಟಿಯಿಂದ ಅಸಮಾಧಾನಕರವಾಗಿದೆ ಮುಂತಾಗಿ ಮಾತನಾಡಿದರು. ಖಂಡನಕಾರರಾದ ಪ್ರೊ. ದಾತಾರ ಅವರು ಬ್ರಿಟಿಷ್ ಕಾನೂನಿಗಿಂತ ಹೆಚ್ಚಾಗಿ ಹಿಂದೂ ಕಾನೂನಿನಲ್ಲಿ ವ್ಯಕ್ತಿಸ್ವಾತಂತ್ರ್ಯಕ್ಕೆ ಇರುವ ಎಡೆಯನ್ನು ತೋರಿಸಿಕೊಟ್ಟು ಅತ್ಯಾಧುನಿಕ ತತ್ವಜ್ಞಾನವಾದ ಸಾಮ್ಯವಾದಕ್ಕೂ ಒಟ್ಟು ಕುಟುಂಬ ಪದ್ಧತಿಗೂ ಇರುವ ಮಹತ್ವದ ಸಾಮ್ಯವನ್ನು ತಿಳಿಸಿ, ಅವಿಭಕ್ತ ಕುಟುಂಬ ಪದ್ಧತಿ ಹಿಂದೂ ಜನಾಂಗದ ಅಭಿವೃದ್ಧಿಗೆ ತಡೆಯಾಗಿಲ್ಲವೆಂದು ವಾದಿಸಿದರು.

ಇದಲ್ಲದೆ, ಪ್ರೊ. ನಾಯಿಕ, ಶ್ರೀಗಳಾದ ಸೆಗಳೂರ, ಎಚ್.ಬಿ. ಕುಲಕರ್ಣಿ, ರಂಗನಾಥರಾವ್, ಕುರಂದರವಾಡ ಹಾಗು ವ್ಹಿ. ಶಾಸ್ತ್ರಿ ಅವರೂ ಭಾಗವಹಿಸಿ ವಿಷಯವನ್ನು ಕೂಲಂಕಷವಾಗಿ ಚರ್ಚಿಸಿದರು. ಸಭಿಕರು ವಿಷಯಕ್ಕೆ ವಿರೋಧವಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತಗೊಳಿಸಿದರು.

೬೮೫—೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧೨
ಬಿಡಿ ಪತ್ರಿಕೆ: ೬ ಕಾಸು



ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ, ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೧೪

ಬೆಂಗಳೂರು: ಶುಕ್ರವಾರ, ಜನವರಿ ೨೯, ೧೯೪೩

## ಪರಿಷತ್ತಿನ ಮುನ್ನಡೆ

೫

ಇನ್ನು ಪರಿಷತ್ತಿನ ಕೇಂದ್ರ ಸಂಸ್ಥೆ ನಡಸಬೇಕಾದ ಕಾರ್ಯವೇನೆಂದು ವಿವರಿಸಬೇಕಾಗಿದೆ. ಪರಿಷತ್ತು ಸ್ಥಾಪಿತವಾದ ಮೊದಲಿಂದ ಪರಿಷತ್ಪತ್ರಿಕೆ ಒಂದು ಪ್ರಕಟವಾಗುತ್ತ ಬಂದಿದೆ. ಕೆಲವು ವರ್ಷಗಳ ವರೆಗೆ ಅದು ಮೂರು ತಿಂಗಳಿಗೆ ಒಂದು ಸಲ ಪ್ರಕಟವಾಗಬೇಕಾಗಿತ್ತು. ಈಗ ಆರು ತಿಂಗಳಿಗೆ ಒಮ್ಮೆ ಆಗುತ್ತಿದೆ. ಈ ಪತ್ರಿಕೆ ಮುಖ್ಯವಾಗಿ ವಿದ್ವಾಂಸರ ಲೇಖನಗಳಿಗೆ ಎಡೆ ಕೊಡತಕ್ಕದ್ದು. ನಾಡಿನ ಎಲ್ಲ ವಿದ್ವಾಂಸರೂ ತಮ್ಮ ತಮ್ಮ ಅಭ್ಯಾಸದ ವಿಷಯಗಳನ್ನು ಕುರಿತು ಲೇಖನಗಳನ್ನು ಒದಗಿಸಿದರೆ ಇದು ಮತ್ತೆ ತ್ರೈಮಾಸಿಕ ಅಥವಾ ಮಾಸಿಕ ಪತ್ರಿಕೆಯೇ ಆಗಬೇಕಾದೀತು. ಪರಿಷತ್ತಿನ ಮತ್ತು ಕನ್ನಡದ ಸುದ್ದಿ ಚಳುವಳಿಗಳ ಹರಹಿಗಾಗಿ ಈಗ ಕೆಲವು ವರ್ಷಗಳಿಂದ ಈ ಪತ್ರಿಕೆ (ಕನ್ನಡ ನುಡಿ) ವಾರಕ್ಕೊಮ್ಮೆ ಹೊರಡುತ್ತಿದೆ. ಇದು ಹೆಚ್ಚು ಹೆಚ್ಚಾಗಿ ಜನದ ಕೈಯಲ್ಲಿ ಓಡಾಡಬೇಕು. ನಾಡಿನ ಎಲ್ಲೆಡೆಯಲ್ಲಿ ಏನೇನಾಗುತ್ತಿದೆ, ಯಾವ ಸಂಘದಲ್ಲಿ ಉತ್ಸವ, ಎಲ್ಲಿ ಉಪನ್ಯಾಸ ಎನ್ನುವುದು ಕನ್ನಡಿಗರೆಲ್ಲರ ಕುತೂಹಲಕ್ಕೆ ವಸ್ತುವಾಗಬೇಕು. ನಿಮ್ಮಲ್ಲಿ ಉತ್ಸವ ನಡೆಯುತ್ತಿದೆ, ನಾನು ಅಲ್ಲಿ ಬರುವುದು ಸಾಧ್ಯವಿಲ್ಲ, ದೇಹ ಇಲ್ಲಿದ್ದರೂ ಮನಸ್ಸು ನಿಮ್ಮೊಡನೆ ಉತ್ಸವದಲ್ಲಿ ಭಾಗವಹಿಸುತ್ತಿದೆ, ಎಂದು ಉತ್ಸವಗಳಿಗೆ ಬಾರದವರು ಒಮ್ಮೊಮ್ಮೆ ಬರೆಯುವರಲ್ಲವೆ? ಇದು ಬಹು ಸಂದರ್ಭದಲ್ಲಿ ಬರಿಯ ಉಪಚಾರದ ಮಾತಾಗುತ್ತದೆ. ಪ್ರಯತ್ನಿಸಿದರೆ ಒಂದೊಂದು ಇಂಥ ಸಂದರ್ಭದಲ್ಲಿಯೂ ಎಲ್ಲ ಕನ್ನಡಿಗರೂ ಉತ್ಸವದಲ್ಲಿ ಭಾಗವಹಿಸುವುದು ಸಾಧ್ಯ. ಇತರ ಸ್ಥಳಗಳ ಅಭಿಮಾನಿಗಳು ಪ್ರಮುಖರು ಇಂಥ ಒಂದು ಆಸಕ್ತಿಯಿಂದ ತಮ್ಮ ಕಡೆ ನೋಡುತ್ತಿದಾರೆಂದು ತಿಳಿದರೆ ಉತ್ಸವದ ಹೊಣೆ ತೊಟ್ಟವರಿಗೆ ಕೆಚ್ಚು ಹೆಚ್ಚುತ್ತದೆ, ಉತ್ಸಾಹ ಬೆಳೆಯುತ್ತದೆ. 'ಕನ್ನಡ ನುಡಿ' ಕನ್ನಡದ ಜನವನ್ನು ಹೀಗೆ ಒಂದು ಮನೆಯ ಮಂದಿಯಂತೆ ಒಂದುಗೂಡಿಸುವ ಸಾಧನವಾಗಬೇಕು. ಸದ್ಯದಲ್ಲಿ ಕನ್ನಡದಲ್ಲಿ ಪ್ರಕಟವಾಗುತ್ತಿರುವ ಪುಸ್ತಕಗಳು ಸಾಕಾದಷ್ಟು ಬೇಗನೆ ಸಾಕಾದಷ್ಟು ಕ್ರಮವಾಗಿ ವಿಮರ್ಶೆಯನ್ನು ಪಡೆಯುತ್ತಿಲ್ಲ. ಇಂಥ ವಿಮರ್ಶೆಗಾಗಿಯೇ ತಿಂಗಳಿಗೊಮ್ಮೆ ಆರು ಅಥವಾ ಎಂಟು ಪುಟದ ಒಂದು ಸಾಹಿತ್ಯ ಸಂಚಿಕೆಯನ್ನು ಹಾಕುವುದು ಆವಶ್ಯಕವೆಂದು ತೋರುತ್ತಿದೆ. ವಿಮರ್ಶೆ ಲೇಖಕನಿಗೆ ತಪ್ಪನ್ನು ತೋರಿಸಿಕೊಡುವುದಕ್ಕೆ ಮಾತ್ರ ಸಾಧನವಲ್ಲ; ಇಂಥ ಗ್ರಂಥ ಬಂದಿದೆಯೆಂದು ಪ್ರಕಟ ಮಾಡುತ್ತದೆ, ಬಲ್ಲವರೊಬ್ಬರ ಭಾವನೆಯನ್ನು ಪ್ರಕಾಶಕ್ಕೆ ತರುತ್ತದೆ, ಜನಸಾಮಾನ್ಯದಲ್ಲಿ ಗ್ರಂಥಗಳನ್ನು ಕುರಿತು ಅವುಗಳ ವಿಷಯಗಳನ್ನು ಕುರಿತು ಒಟ್ಟನಲ್ಲಿ ಜ್ಞಾನವನ್ನೇ ಕುರಿತು ಲವಲವಿಕೆಯನ್ನು ಉಂಟು ಮಾಡುತ್ತದೆ. ಗುರಿಯರಿತ ವಿಮರ್ಶೆ ಬೆಳಗಿನ ಗಾಳಿಯಂತೆ ಬುದ್ಧಿಗೆ ಉಜ್ಜೀವಕವಾಗುತ್ತದೆ. ಸಾಹಿತ್ಯ ಸಂಚಿಕೆಯನ್ನು ಆರಂಭಿಸುವುದೆಂದು ಪರಿಷತ್ತಿನ ಸಂಪಾದಕಮಂಡಲಿ ನಿಶ್ಚಯಿಸಿದ ಕಾಲಕ್ಕೆ ನಾಡ ಎಲ್ಲ ಲೇಖಕ ಪ್ರಕಾಶಕರು ಅದಕ್ಕೆ ವಿಮರ್ಶೆಗಾಗಿ ಗ್ರಂಥಗಳನ್ನು ಕಳುಹಿಸಬೇಕೆಂದೂ, ವಿಮರ್ಶಕ ಮಿತ್ರರು ಸಂಪಾದಕ ಮಂಡಲಿ ಒಪ್ಪಿಸುವ ಕೆಲಸವನ್ನು ಒಪ್ಪಿಕೊಂಡು ತೊಂದರೆಗಳನ್ನು ಲೆಕ್ಕಿಸದೆ ವಿಮರ್ಶೆಗಳನ್ನು ಒದಗಿಸಿ ಸಹಾಯ ಮಾಡಬೇಕೆಂದೂ ಈಗ ಮುಂಗಡವಾಗಿ ಇಲ್ಲಿ ಪ್ರಾರ್ಥನೆ.

ಪರಿಷತ್ತು ಇದುವರೆಗೆ ಮಾಡಿರುವ ಮತ್ತೊಂದು ಮುಖ್ಯಕಾರ್ಯ ಉಪನ್ಯಾಸ ಉತ್ಸವಗಳ ಏರ್ಪಾಡು. ಸ್ಥಳೀಯ ಸಂಸ್ಥೆಗಳು ಹೆಚ್ಚು ಹೆಚ್ಚಾಗಿ ಉಪನ್ಯಾಸಗಳನ್ನೂ ಉತ್ಸವಗಳನ್ನೂ ನಡಸತೊಡಗಿದರೆ ಕೇಂದ್ರಸಂಸ್ಥೆ ಈ ಉತ್ಸವಗಳ ಪಂಚಾಂಗವೊಂದನ್ನು ಮಾಡಿ, ಅವಕ್ಕೆ ನಾಡೆಲ್ಲದರ ಗಮನವನ್ನು ಸೆಳೆಯಬಹುದು. ಹಾಗೆಯೇ ಮುಂದಾಗಿ ಎಲ್ಲ ಪ್ರಾಂತಗಳ ಉಪನ್ಯಾಸಕ ಮಿತ್ರರಿಗೆ ಪತ್ರಗಳನ್ನು ಬರೆದು ಒಂದೊಂದು ಜಿಲ್ಲೆಯ ಉತ್ಸವಗಳಿಗೆ ಒಬ್ಬರಿಬ್ಬರು ಮಿತ್ರರು ಅನುಕೂಲವಾದ ಕಾಲದಲ್ಲಿ ಬರುವಂತೆ ಏರ್ಪಡಿಸಬಹುದು. ಇದರಲ್ಲಿ ಮುಖ್ಯವಾಗಿ ಪರಿಷತ್ತಿನ ಗುರಿ ಏನೆಂದರೆ ಬೇರೆಬೇರೆ ಪ್ರಾಂತಗಳ ಭಾಷಾಸೇವಕರು ಉಳಿದ ಪ್ರಾಂತಗಳಿಗೆ ಹೆಚ್ಚುಹೆಚ್ಚಾಗಿ ಬರುವಂತೆ, ಪರಿಚಯವಾಗುವಂತೆ ಮಾಡುವುದು. ಈ ಭಾಗದಲ್ಲಿ ಈ ವರ್ಷದ ಕಾರ್ಯಕ್ರಮದ ಸ್ವಲ್ಪವನ್ನು ನಿಷ್ಕರ್ಷಿಸಲು ಈಗಾಗಲೆ ಯತ್ನ ನಡೆದಿದೆ. ಇದು ಸುಗಮವಾಗಿ ಫಲಕಾರಿಯಾಗಿ ಬೆಳೆಯುವಂತೆ ಮಾಡುವುದು ಸ್ಥಳೀಯ ಸಂಸ್ಥೆಗಳನ್ನೂ ಮತ್ತು ಉಪನ್ಯಾಸಕ ಮಹನೀಯರನ್ನೂ ಸೇರಿದ ಭಾರವಾಗಿದೆ.

ಇದುವರೆಗೆ ತಕ್ಕಷ್ಟು ನಡೆದು ಮುಂದೆ ಬಹಳವಾಗಿ ಬೆಳೆಯಬೇಕಾಗಿರುವ ಒಂದು ಕಾರ್ಯಕ್ರಮ ಗಮಕಕಲಾಭ್ಯಾಸ. ಭಾರತವನ್ನು, ಇತರ ಕಾವ್ಯಗಳನ್ನು ಸಭೆಗಳ ಮುಂದೆ ಲಕ್ಷಣವಾಗಿ ಧೈರ್ಯವಾಗಿ ಜನಮನೋರಂಜಕವಾಗಿ ಓದುವ ಓದಬಲ್ಲ ಮಹನೀಯರು ಈಗ ಹಲವರಿದಾರೆ. ಆದರೆ ನಾಡಿನ ಹರವಿಗೆ ಈ ಸಂಖ್ಯೆ ತೀರ ಸಾಲದು. ಗಮಕ ಕಲೆಯ ಉತ್ತೇಜನಕ್ಕಾಗಿ ಇದುವರೆಗೆ ಏರ್ಪಟ್ಟಿರುವುದು ಮಾನ್ಯರಾದ ರಾಜಸೇವಾಸಕ್ತ ಶ್ರೀ. ಬಿ. ಎಂ. ಶ್ರೀಕಂಠಯ್ಯನವರು, ಶ್ರೀ. ಅಸುಂಡಿ ಅನಂತರಾಯರು, ಶ್ರೀಮತಿ ಡಿ. ಚಂಪಾಬಾಯಿಯವರು ಮತ್ತು ಶ್ರೀ. ಎಚ್. ಹನುಮಂತರಾಯರು ಮಾಡಿರುವ ದಾನ. ಶ್ರೀಮಂತರು ಈ ಮಹನೀಯರಂತೆ ಗಮಕ ಕಲೆಯ ಅಭ್ಯಾಸಕ್ಕಾಗಿ ಸಹಾಯ ನೀಡಬೇಕು. ಸಾಧ್ಯವಾದರೆ ಮುಖ್ಯ ನಗರಗಳಲ್ಲಿ ಗಮಕದ ಪಾಠಕ್ಕಾಗಿ ತರಗತಿಗಳನ್ನು ಏರ್ಪಡಿಸಬೇಕು. ಸದ್ಯಕ್ಕೆ ಬೆಂಗಳೂರು, ಮೈಸೂರು, ಮಂಗಳೂರು, ಧಾರವಾಡ ಈ ಸ್ಥಳಗಳಲ್ಲಿ ಇಂಥ ತರಗತಿಗಳು ಏರ್ಪಟ್ಟು ಆಯಾ ಪ್ರಾಂತಗಳ ಗಾನವಿದರು ಕಾವ್ಯ ವಾಚನವನ್ನು ಅಭ್ಯಾಸ ಮಾಡುವುದಾದರೆ ಒಂದೆರಡು ವರ್ಷದಲ್ಲಿ ನಾಡಿನಲ್ಲಿ ಒಂದು ನೂರು ಜನ ಶಕ್ತರಾದ ಗಮಕಿಗಳು ಆಗುವುದಕ್ಕೆ ಅಭ್ಯಂತರವಿಲ್ಲ. ಇದರ ಉದ್ದೇಶ ಗಮಕಿಗಳ ಸಂಖ್ಯೆಯನ್ನು ಹೆಚ್ಚಿಸುವುದು. ಇದನ್ನು ಪ್ರೌಢಪಾಠ ಎನ್ನಬಹುದು. ಎಳೆಯರಿಗಾಗಿ ತರಗತಿಗಳನ್ನು ಈಗಿನಂತೆ ಇನ್ನೂ ಹೆಚ್ಚು ಸ್ಥಳಗಳಲ್ಲಿ ನಡಸಲೇಬೇಕು. ಈ ಕೆಲಸದಲ್ಲಿ ನಾಡಿನ ವಿದ್ಯಾಖಾತೆಗಳಿಂದ ನಮಗೆ ಸಹಾಯ ದೊರೆಯಬೇಕಾಗಿದೆ. ಓದುವುದು ಬರೆಯುವುದು ಎಂಬಲ್ಲಿ ಓದುವುದು ಎಂಬುದರ ಅರ್ಥ ವರ್ತಮಾನ ಪತ್ರಿಕೆಯನ್ನು ಅಥವಾ ಒಂದು

(೭೫ನೆಯ ಪುಟಕ್ಕೆ)

# ಕನ್ನಡ ನುಡಿ

**ಶುಕ್ರವಾರ, ಜನವರಿ ೨೯, ೧೯೪೩**

## ಕನ್ನಡ - ಶಿಕ್ಷಣ ಭಾಷೆ

ಈಗ ಮೈಸೂರು ಸಂಸ್ಥಾನದ ಹಲವು ಹೈಸ್ಕೂಲುಗಳಲ್ಲಿ ಭಾಷೇತರ ವಿಷಯಗಳನ್ನು ನಾಡನುಡಿಯಾದ ಕನ್ನಡದಲ್ಲಿ ಕಲಿಸುವ ಪ್ರಯೋಗ ನಡೆಯುತ್ತಿದೆ. ಈ ಪ್ರಯೋಗ ಆರಂಭವಾದಾಗ, ಇಂಗ್ಲಿಷಿನಲ್ಲಿ ಬೋಧಿಸುತ್ತಿರುವ ವಿಷಯಗಳನ್ನು ಹೀಗೆ ಇನ್ನು ಮುಂದೆ ಕನ್ನಡದಲ್ಲಿ ಪಾಠ ಹೇಳಿದರೆ, ಇಂಗ್ಲಿಷಿನ ಭಾಷಾಜ್ಞಾನದ ಮಟ್ಟ ಕಡಮೆಯಾಗಿ ವಿದ್ಯಾರ್ಥಿಗೆ ಕಾಲೇಜಿನ ವಿದ್ಯಾಭ್ಯಾಸದಲ್ಲಿ ಅನನುಕೂಲವೂ ತೊಂದರೆಯೂ ಉಂಟಾಗುವುವೆಂದು ಕೆಲವರು ಶಂಕಿಸಿದರು. ಈ ಶಂಕೆ ಇನ್ನೂ ಪರಿಹಾರವಾಗದಿರುವುದರಿಂದ ಇಡಿಯ ಸಂಸ್ಥಾನದಲ್ಲಿ ಹೈಸ್ಕೂಲುಗಳಲ್ಲೆಲ್ಲ ಕನ್ನಡವನ್ನೇ ಏಕೈಕ ಮಾಧ್ಯಮ ಭಾಷೆಯಾಗಿ ಬಳಸುವ ಸುಯೋಗ ಇನ್ನೂ ಪ್ರಾಪ್ತವಾಗಿಲ್ಲ. ಆದ್ದರಿಂದ, ಹೈಸ್ಕೂಲಿನಲ್ಲಿ ಈಗ ಪ್ರಯೋಗದಲ್ಲಿರುವ ಕನ್ನಡ ಮಾಧ್ಯಮದಿಂದ ಕಾಲೇಜ್ ಶಿಕ್ಷಣಕ್ಕೆ ಎಷ್ಟುಮಟ್ಟಿನ ತೊಂದರೆಯಾಗಿದೆ? ತೊಂದರೆ ಇದ್ದರೆ ತಿದ್ದುವ ಪ್ರಯತ್ನ ಹೇಗೆ ನಡೆಯಬೇಕು? ತೊಂದರೆ ಇಲ್ಲದಿದ್ದರೆ ಕನ್ನಡ ಮಾಧ್ಯಮದ ವ್ಯಾಪ್ತಿಯನ್ನು ಹರಡಲು ಬೇಗ ಮನಸ್ಸು ಕೊಡಬೇಡವೆ? ಮುಂತಾದ, ಕನ್ನಡದ ಯೋಗಕ್ಷೇಮದ ದೃಷ್ಟಿಯಿಂದ, ಬಹಳ ಮುಖ್ಯವಾದ ಪ್ರಶ್ನೆಗಳನ್ನು ನಾವು ಬಿಡಿಸಿ, ದಿಟವನ್ನು ಕಂಡುಕೊಂಡು ನಮ್ಮ ಶಿಕ್ಷಣ ವಿಧಾನವನ್ನು ಸುಧಾರಿಸಿಕೊಳ್ಳಬೇಕಾಗಿದೆ. ಕನ್ನಡ ಸಾಹಿತ್ಯ ಪರಿಷತ್ತಿನ ಮೈಸೂರು ಪ್ರಾಂತ ಸಮಿತಿ ಈ ದೃಷ್ಟಿಯಿಂದ ಶೋಧನೆ ಮಾಡಲು, ಮೈಸೂರು ನಗರದಲ್ಲಿ ಅಕ್ಷರಪ್ರಚಾರ ಕಾರ್ಯದಲ್ಲಿ ತೊಡಗಿರುವ ಶ್ರೀ. ಜಿ. ಆರ್. ರಂಗಸ್ವಾಮಿ, ಎಂ.ಎ. ಅವರನ್ನು ಪ್ರಾರ್ಥಿಸಿತು. ಅವರು ಕನ್ನಡ ಹಾಗೂ ಇಂಗ್ಲಿಷು ಮಾಧ್ಯಮ ಪ್ರಯೋಗವಿರುವ ಮೈಸೂರು ನಗರದ ಐದು ಹೈಸ್ಕೂಲುಗಳಲ್ಲಿ ಅಧ್ಯಯನ ಮಾಡಿದ ವಿದ್ಯಾರ್ಥಿಗಳು ಕಾಲೇಜಿಗೆ ಸೇರಿ ಅಲ್ಲಿ ಮತ್ತೆ ಇಂಗ್ಲಿಷ್ ಮಾಧ್ಯಮವನ್ನೇ ಅವಲಂಬಿಸಿ ಓದಿ ತೇರ್ಗಡೆಯಾದ ಪರಿಯನ್ನೂ, ಆದರಿಂದ ಹೊರಡುವ ಅಂಕಿ, ವಿವರಗಳನ್ನೂ ಲೆಕ್ಕಿಸಿ ಉಪಕಾರಮಾಡಿದ್ದಾರೆ.* ಅವರು ಬಂದಿರುವ ತೀರ್ಮಾನ ಕನ್ನಡ ಮಾಧ್ಯಮದಿಂದ ಕಾಲೇಜು ಶಿಕ್ಷಣಕ್ಕೆ ತೊಂದರೆಯಾಗುತ್ತಿಲ್ಲ ಎಂಬುದು. ಮೈಸೂರು ನಗರದ ಹೈಸ್ಕೂಲುಗಳಿಂದ ಹೊರಪಟ್ಟಿರುವ 'ದತ್ತಾಂಶ'ಗಳು ಈ ರೀತಿಯ ತೀರ್ಮಾನಕ್ಕೆ ಅವಕಾಶ ಕೊಟ್ಟಿರುವುದು ಸಂತೋಷಕ್ಕೆ ಕಾರಣವಾಗಿದೆ. ಸಂಸ್ಥಾನದ ಇತರ ಹೈಸ್ಕೂಲುಗಳ ಸಂಖ್ಯೆಗಳನ್ನು ಪರಿಶೀಲಿಸುವ ವಿವರವಾದ ಶೋಧನೆ ನಡೆದಲ್ಲಿ, ಕನ್ನಡ ಮಾಧ್ಯಮ ಪ್ರಯೋಗದ ಸಫಲತೆ ಇನ್ನಷ್ಟು ದೃಢಪಡುವುದರಲ್ಲಿ ಸಂದೇಹವಿಲ್ಲ. ಈಗ ನಡೆದಿರುವ ಶೋಧನೆ ಇನ್ನೂ ದೊಡ್ಡ ಪ್ರಮಾಣದಲ್ಲಿ ನಡೆಯುವುದು ಅಗತ್ಯ. ಇದಕ್ಕೆ ಸಂಸ್ಥಾನದ ಶಿಕ್ಷಣ ಸಮಿತಿಯ, ವಿದ್ಯಾಭ್ಯಾಸ ಇಲಾಖೆಯ ಮತ್ತು ವಿಶ್ವವಿದ್ಯಾನಿಲಯದ ಪೂರ್ಣ ಸಹಕಾರ ಮಾತ್ರ ದೊರೆಯಬೇಕಾಗಿದೆ.

ಶ್ರೀ. ರಂಗಸ್ವಾಮಿಯವರ ಪ್ರಥಮ ಶೋಧನೆಯ ಅಂಕಿ ವಿವರಗಳನ್ನು ಇಲ್ಲಿ ಸಂಗ್ರಹಿಸಿದೆ:

ಮೈಸೂರು ನಗರದ ೧. ಮಹಾರಾಜಾ ಹೈಸ್ಕೂಲು, ೨. ಬನುಮಯ್ಯ ಹೈಸ್ಕೂಲು, ೩. ಮೆಥೊಡಿಸ್ಟ್ ಹೈಸ್ಕೂಲು, ೪. ಮಹಾಜನ ಹೈಸ್ಕೂಲು ಮತ್ತು ೫. ಮರಿಮಲ್ಲಪ್ಪ ಹೈಸ್ಕೂಲು – ಇವು ಶೋಧನೆಯ ಕ್ಷೇತ್ರಗಳಾದುವು. ಈ ಶಾಲೆಗಳಲ್ಲಿ ಇಂಗ್ಲಿಷ್ ಮಾಧ್ಯಮದ ಮೂಲಕ ೧೯೯ ಮಂದಿ ವಿದ್ಯಾರ್ಥಿಗಳೂ, ಕನ್ನಡ ಮಾಧ್ಯಮದ ಮೂಲಕ ೧೨೮ ಮಂದಿ ವಿದ್ಯಾರ್ಥಿಗಳೂ ಶಿಕ್ಷಣ ಪಡೆದರು. ಅವರಲ್ಲಿ ಅನುಕ್ರಮವಾಗಿ ಮೈಸೂರು ಇಂಟರ್ ಮೀಡಿಯಿಟ್ ಕಾಲೇಜಿಗೆ ೮೯ (ಇಂಗ್ಲಿಷ್), ೮೫ (ಕನ್ನಡ) ಮಂದಿ ಸೇರಿ ಅಭ್ಯಾಸ ಮಾಡಿದರು.

ಮಾಧ್ಯಮದ ಭೇದದಿಂದ ವಿದ್ಯಾರ್ಥಿಗಳ ಜ್ಞಾನಾರ್ಜನೆಯ ಮಟ್ಟದಲ್ಲಿ ಅಂಥ ದೊಡ್ಡ ವ್ಯತ್ಯಾಸವೇನೂ ಕಂಡುಬರುವುದಿಲ್ಲ ಎಂಬುದಕ್ಕೆ ಸಾಕ್ಷಿಯಾಗಿ ಕೆಳಗೆ ಒಂದೆರಡು ಪಟ್ಟಿಗಳನ್ನು ಕೊಟ್ಟಿದೆ:

| ಎಸ್.ಎಸ್.ಎಲ್.ಸಿ. ಫಲಿತಾಂಶ | ಇಂಗ್ಲಿಷ್ ಮಾಧ್ಯಮ | ಕನ್ನಡ ಮಾಧ್ಯಮ |
|---|---|---|
| ಐಚ್ಛಿಕ: ಗಣಿತ | ೫೩ | ೪೫ |
| ,, ಚರಿತ್ರೆ, ವಾಣಿಜ್ಯ | ೩೧ | ೩೪ |
| ,, ಚಿತ್ರ, ಇತರ ಕಲೆ | ೫ | ೬ |
| | ೮೯ | ೮೫ |
| ಮೊದಲನೆಯ ತರಗತಿ | ೧೬ | ೧೮ |
| ಇಂಗ್ಲಿಷಿನಲ್ಲಿ ಸರಾಸರಿ ಅಂಕ | ೫೦ | ೪೮ |
| ಗಣಿತದಲ್ಲಿ ,, | ೭೦ | ೭೨ |

ಜೂನಿಯರ್ ಇಂಟರ್‌ಮೀಡಿಯೆಟ್ ವಾರ್ಷಿಕ ಪರೀಕ್ಷೆಯಲ್ಲಿ ಈ ಬಾಲಕರ ಯೋಗ್ಯತೆಯನ್ನು (ಸೇಕಡ) ಗಮನಿಸಿ:

| ವಿಷಯ | ಇಂಗ್ಲಿಷ್ ಮಾಧ್ಯಮ | ಕನ್ನಡ ಮಾಧ್ಯಮ |
|---|---|---|
| ಇಂಗ್ಲಿಷ್ | ೩೯ | ೩೮ |
| ಐಚ್ಛಿಕ ೧ | ೩೯ | ೪೨ |
| ,, ೨ | ೪೮ | ೪೯ |
| ,, ೩ | ೪೩ | ೪೭ |
| ,, ೪ (ಸಿ.ಬಿ.ಜಡ್ ಇತ್ಯಾದಿ) | ೪೦ | ೪೦ |

ವಿಶ್ವವಿದ್ಯಾನಿಲಯದಲ್ಲಿ ಐಚ್ಛಿಕವಾಗಿ ವಿಜ್ಞಾನ, ಗಣಿತ ಮುಂತಾದ ವಿಷಯಗಳನ್ನು ಕಲಿಯಲು ವಿದ್ಯಾರ್ಥಿ ವಿಶೇಷ ಅರ್ಹತೆಯನ್ನು ಪಡೆದಿರಬೇಕಾಗುತ್ತದೆ. ಇಂಗ್ಲಿಷ್ ಮಾಧ್ಯಮದ ವಿದ್ಯಾರ್ಥಿಯೇ ಕನ್ನಡ ಮಾಧ್ಯಮದ ವಿದ್ಯಾರ್ಥಿಗಿಂತ ಮೇಲೆಂಬ ತಿಳಿವಳಿಕೆಗೆ ಬುಡವಿಲ್ಲವೆಂಬ ಅಂಶವನ್ನು ಸಾರಲು ತಕ್ಕ ಅಂಕಿ ಅಂಶಗಳು ಶ್ರೀ. ರಂಗಸ್ವಾಮಿಯವರಿಗೆ ದೊರೆತಿವೆಯೆಂಬುದು ಗಮನಾರ್ಹ.

ಈ ಪಟ್ಟಿಯನ್ನು ನೋಡಿ:

| ವಿಷಯ | ಇಂಗ್ಲಿಷ್ ಮಾಧ್ಯಮ | ಕನ್ನಡ ಮಾಧ್ಯಮ |
|---|---|---|
| ಗಣಿತ, ಭೌತಶಾಸ್ತ್ರ, ರಸಾಯನಶಾಸ್ತ್ರ | ೨೮ | ೩೦ |
| ರ. ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರ | ೧೦ | ೧೨ |
| ರ. ಸ. ಭೂಶಾಸ್ತ್ರ | ೫ | ೩ |
| ರ. ಭೂ. ಅರ್ಥಶಾಸ್ತ್ರ | ೧ | ೩ |
| ಗ. ಭೌ. ಅ. | ೫ | ೫ |
| ಚರಿತ್ರೆ, ಗ, ಅ. | ೯ | ೯ |
| ಚ. ಅ. ತರ್ಕ | ೨೮ | ೨೨ |
| ಇತರ ಸಮಾಜ ಶಾಸ್ತ್ರಗಳು | ೩ | ೧ |
| | ೮೯ | ೮೫ |

ಇನ್ನು ಜೂನಿಯರ್ ಇಂಟರ್ ಪರೀಕ್ಷೆಯಲ್ಲಿ ಇಂಗ್ಲಿಷಿನಲ್ಲಿ ೩೫%, ಐಚ್ಛಿಕ ವಿಷಯಗಳಲ್ಲಿ ೩೦%ಕ್ಕಿಂತ ಕಡಮೆಯಾಗಿ ಅಂಕ ಪಡೆದು 'ಫೇಲ್' ಆದವರಲ್ಲಿ ಕನ್ನಡ ಮಾಧ್ಯಮದವರ ಸಂಖ್ಯೆ ಯಾರೂ ತಲೆ ತಗ್ಗಿಸಬೇಕಾದ ಪರಿಸ್ಥಿತಿಯನ್ನುಂಟುಮಾಡಿಲ್ಲ. ಇಂಗ್ಲಿಷ್ ಮಾಧ್ಯಮದವರೂ ಸಮಮಟ್ಟದಲ್ಲೇ ಫೇಲಾಗಿದ್ದಾರೆ. ಉದಾ: ಇಂಗ್ಲಿಷ್ ಮಾಧ್ಯಮದವರು ೩೪%. ಕನ್ನಡ ಮಾಧ್ಯಮದವರು ೩೭%. ಐಚ್ಛಿಕ ವಿಷಯಗಳಲ್ಲಿ ಕನ್ನಡದವರ ಸೇಕಡಾವಾರು ಸಂಖ್ಯೆ ಇಂಗ್ಲಿಷ್ ಮಾಧ್ಯಮದ ಕಡೆ ವಾದಿಸುವಂತೇನೂ ಇಲ್ಲ.

* ವರದಿ 'ಪ್ರಬುದ್ಧ ಕರ್ಣಾಟಕ'ದ ಸಂಕ್ರಾಂತಿ ಸಂಚಿಕೆಯಲ್ಲಿ ಪ್ರಕಟವಾಗಿದೆ.

ವ್ಯಾಸಂಗ ವಿಷಯದಲ್ಲಿ ೫೦%ಕ್ಕಿಂತ ಹೆಚ್ಚಾಗಿ ಪಡೆದವರ ಸೇಕಡ:

| ಪಾಠಗಳು | ಇಂಗ್ಲಿಷ್ ಮಾಧ್ಯಮ | ಕನ್ನಡ ಮಾಧ್ಯಮ |
|---|---|---|
| ಇಂಗ್ಲಿಷ್ | ೧೫ | ೧೨ |
| ಐಚ್ಛಿಕ ೧ | ೧೭ | ೨೭ |
| ,, ೨ | ೩೫ | ೪೧ |
| ,, ೩ | ೨೬ | ೪೨ |
| ,, ೪ (ಸಿ.ಬಿ.ಜಡ್ ಇತ್ಯಾದಿ) | ೧೩ | ೧೧ |

ಎಲ್ಲಕ್ಕಿಂತ ಹೆಚ್ಚಾಗಿ, ಈ ಅಂಕಿಗಳೆಲ್ಲದರ ಸಾರವಾಗಿ, ಎಲ್ಲಾ ವಿಷಯಗಳಲ್ಲಿಯೂ ತೇರ್ಗಡೆ ಹೊಂದಿದವರ ಸಂಖ್ಯೆ (ಇಂಗ್ಲಿಷ್ ೩೫%, ಇತರ ಪಾಠಗಳಲ್ಲಿ ೩೦% ಪಡೆದು ಉತ್ತೀರ್ಣರಾದವರು): ಇಂಗ್ಲಿಷ್ ಮಾಧ್ಯಮದಲ್ಲಿ ೪೭ ಕನ್ನಡ ಮಾಧ್ಯಮದಲ್ಲಿ ೪೯. ಸೇಕಡ ಅನುಕ್ರಮವಾಗಿ ೫೩ ಮತ್ತು ೫೮.

ಎಸ್. ಎಸ್. ಎಲ್. ಸಿ. ಮತ್ತು ಜೂನಿಯರ್ ಇಂಟರ್ ಮಿಡಿಯೆಟ್ ಪರೀಕ್ಷಾ ಫಲಿತಾಂಶಗಳನ್ನು ಗಮನಿಸಿದಲ್ಲಿ ಕನ್ನಡ ಮಾಧ್ಯಮದ ಸಫಲತೆ, ಅದರ ಆವಶ್ಯಕತೆ ಚೆನ್ನಾಗಿ ಪ್ರತಿಬಿಂಬಿತವಾಗುತ್ತವೆ. ನಾಡನುಡಿಯಲ್ಲಿ ಶಿಕ್ಷಣ ಎಂಬ ಶಿಕ್ಷಣಶಾಸ್ತ್ರದ ಸರಿಯಾದ ನೀತಿಗೆ ಹೊಂದುವ ಪರಿಸ್ಥಿತಿಯನ್ನು ಕನ್ನಡ ಮಾಧ್ಯಮದ ಅಂಕಿಗಳು ಸಾರಿಹೇಳುವುವೆಂಬುದರಲ್ಲಿ ಸಂದೇಹವಿಲ್ಲ. ಈ ಶೋಧನೆ ಸಣ್ಣ ಕ್ಷೇತ್ರದಲ್ಲಿ ನಡೆದುದೆಂದು ಇಂಗ್ಲಿಷ್ ಮಾಧ್ಯಮದ ಪಕ್ಷಪಾತಿಗಳು ಇನ್ನು ಹೇಳಲಾರರೆಂದು ನಮ್ಮ ದೃಢವಾದ ನಂಬಿಕೆ.

ಸ್ಥಾಲೀಪುಲಾಕನ್ಯಾಯ ಎಂದಿಗೂ ಸುಳ್ಳಾಗಲಾರದು.

## ಇಬ್ಬರು ಪ್ರಸಿದ್ಧ ವಿದ್ವಾಂಸರ ನಿಧನ

ಮೈಸೂರಿನ ಓರಿಯಂಟಲ್ ಲೈಬ್ರರಿಯ ಕ್ಯೂರೇಟರೂ, ಉಭಯ ಭಾಷಾ ಪಂಡಿತರೂ, ಹಲವು ಕನ್ನಡ ಗ್ರಂಥಗಳನ್ನು ವಿಶ್ವವಿದ್ಯಾನಿಲಯಕ್ಕೆ ಸಂಪಾದಿಸಿ ಕೊಟ್ಟವರೂ ಆದ ಶ್ರೀ. ಎಂ. ಎಸ್. ಬಸವಲಿಂಗಯ್ಯ, ಎಂ.ಎ., ಬಿ.ಎಲ್. ಅವರು ಕೆಲವು ದಿನಗಳ ಹಿಂದೆ ಕಾಲವಾದರು.

ಪುಣೆಯ ಭಂಡಾರಕರ್ ಪ್ರಾಚ್ಯಸಂಶೋಧನ ಸಂಸ್ಥೆಯ ಮುಖ್ಯ ಕಾರ್ಯಕರ್ತರಲ್ಲೊಬ್ಬರಾದ ಡಾ. ವಿ. ಎಸ್. ಸುಖಥನಕರ್, ಎಂ.ಎ., ಪಿಎಚ್.ಡಿ. ಅವರು ಕೆಲವು ದಿನಗಳ ಹಿಂದೆ ಕಾಲವಾದರು.

ಈ ಇಬ್ಬರು ಮಹನೀಯರ ನಿಧನದಿಂದ ಸಾಹಿತ್ಯ ಹಾಗೂ ಪ್ರಾಚ್ಯಸಂಶೋಧನ ಪ್ರಪಂಚಕ್ಕೆ ದೊಡ್ಡ ನಷ್ಟವಾಗಿದೆ. ಭಗವಂತನು ಇವರ ಆತ್ಮಕ್ಕೆ ಸದ್ಗತಿ ಕೊಡಲಿ.

## ಶ್ರೀ ಪುರಂದರದಾಸರ ಆರಾಧನೆ

ಶ್ರೀ. ಬೇಲೂರು ಕೇಶವದಾಸರು ಹೀಗೆ ಬರೆಯುತ್ತಾರೆ:

ಶ್ರೀ ಪುರಂದರದಾಸರ ಹೆಸರು ನಿಖಿಲ ಕರ್ನಾಟಕದಲ್ಲಿ, ಆಂಧ್ರ ತಮಿಳು ನಾಡುಗಳಲ್ಲಿ ಭಕ್ತ ಜನರ ಮನೆ ಮಾತಾಗಿರುವುದು ಸರ್ವ ವಿದಿತವಾಗಿದೆ.

ಶ್ರೀ ದಾಸರ ಆರಾಧನೆ ಇದೇ ಪುಷ್ಯ ಬಹುಳ ಅಮಾವಾಸ್ಯೆ (ತಾ. ೪-೨-೪೩) ಗುರುವಾರ ಪ್ರಾಪ್ತವಾಗುವ ಕಾರಣ, ಕರ್ನಾಟಕ ಸಂಘಗಳಿರುವ ನಗರಗಳಲ್ಲಾಗಲಿ, ಇಲ್ಲದಿರುವ ನಗರಗಳಲ್ಲಾಗಲಿ ಕನ್ನಡಿಗರು ಒಮ್ಮತದಿಂದ ಮಿಳಿತರಾಗಿ, ಶ್ರೀ. ಪುರಂದರದಾಸರು ಕರ್ನಾಟಕ ಸಂಗೀತಕ್ಕೆ ವ್ಯವಸ್ಥಿತ ರೂಪ ಕೊಟ್ಟವರು, ಕನ್ನಡ ಭಾಷೆಯಲ್ಲಿ ಲಲಿತ ಕವಿತೆಗಳಿಂದ ಧರ್ಮಪ್ರಚಾರ ಮಾಡಿದವರು ಮತ್ತು ರಾಷ್ಟ್ರಪುರುಷರು ಎಂಬ ವಿಶಾಲ ಭಾವನೆಯಿಂದ ಆ ಮಹಾಪುರುಷರ ಪುಣ್ಯ ಸ್ಮರಣಮಾಡಿ, ಅವರ ಕವಿತೆಗಳ ಮಾದರಿಗಳನ್ನು ಹಾಡಿ ಜನತೆಯಲ್ಲಿ ಕನ್ನಡಪ್ರೇಮವನ್ನೂ ದೇಶಾಭಿಮಾನ ಭಾಷಾಭಿಮಾನಗಳನ್ನೂ ಉಂಟುಮಾಡಿ ಪುಣ್ಯ ಭಾಗಿಗಳಾಗಬೇಕಾಗಿ ಬಿನ್ನಹ.

### ಪರಿಷತ್ತಿನ ಮುನ್ನಡೆ

(೬೩ನೆಯ ಪುಟದಿಂದ)

ಅರ್ಜಿಯನ್ನು ಓದುವುದು ಎಂದು ನಾವು ಇಟ್ಟುಕೊಳ್ಳಬಾರದು. ಓದುವುದು ಎಂದರೆ ಕಾವ್ಯವನ್ನು ಓದುವುದು ಎಂಬ ಧ್ಯೇಯವನ್ನಿಟ್ಟುಕೊಳ್ಳಬೇಕು. ನಮ್ಮ ಸಂಪ್ರದಾಯದಲ್ಲಿ ಪೂರ್ವದ ಕಾವ್ಯವನ್ನು ರಾಗವಿಲ್ಲದೆ ಓದುವುದೆನ್ನುವುದು ಇಲ್ಲವೇ ಇಲ್ಲ. ಯಾವ ಶ್ಲೋಕವನ್ನೂ ಪದ್ಯವನ್ನೂ ಹಾಡಿನಂತೆ ರಾಗವಾಗಿ ಹೇಳುವುದೇ ನಮ್ಮಲ್ಲಿ ವಾಡಿಕೆ. ಶಾಲೆಗಳು ಈ ಸಂಪ್ರದಾಯವನ್ನು ಅಂಗೀಕರಿಸಿ ಜೀವಂತ ಮಾಡಿದರೆ ಜನರ ಮನಸ್ಸಿಗೆ ಉಲ್ಲಾಸ ಕೊಡಬಲ್ಲ ಒಂದು ಪದ್ಧತಿಯನ್ನು ಸುಲಭವಾಗಿ ಮೊಳೆಸಿದಂತಾಗುತ್ತದೆ. ಈ ಭಾಗದಲ್ಲಿ ಪರಿಷತ್ತು ಸರಕಾರಗಳನ್ನೂ ವಿದ್ಯಾಖಾತೆಗಳನ್ನೂ ಸಹಾಯ ನೀಡಿರೆಂದು ಬೇಡಬೇಕಾಗಿದೆ.

**— ಮಾಸ್ತಿ ವೆಂ. ಅ.**

## ಪರಿಷತ್ತಿನ ಸುದ್ದಿ

### ಪರಿಷತ್ತಿನ ಸದಸ್ಯರ ಬೆಳವಣಿಗೆ

(ತಾ. ೨೦-೧-೪೩ ರಿಂದ ೨೮-೧-೪೩ರ ವರೆಗೆ)

**ಸಹಾಯಕ ಸದಸ್ಯರು (೧೦೦ರೂ.):** ರಾವ್ ಬಹದ್ದೂರ್ ಡಾ. ಸಿ. ಬಿ. ರಾಮರಾಯರು, ಬಸವನಗುಡಿ. (ಸಾಮಾನ್ಯ ಸದಸ್ಯತ್ವದಿಂದ ಬದಲಾವಣೆ)

**ಸಾಮಾನ್ಯ ಸದಸ್ಯರು (೬ ರೂ.):** ಶ್ರೀ.ಗಳಾದ ೧. ಎ. ಹನುಮಂತರಾಯರು, ಮುಖ್ಯೋಪಾಧ್ಯಾಯರು, ಬೋರ್ಡ್ ಹೈಸ್ಕೂಲು, ಕೊಟ್ಟೂರು. ೨. ಕೆ. ಎಸ್. ಶ್ರೀಕಂಠನ್, ಎಂ.ಎ. ಅವರು, ಅ. ಡೈರೆಕ್ಟರ್ ಆಫ್ ಇಂಡಸ್ಟ್ರೀಸ್, ಶಂಕರಪುರ, ಬೆಂಗಳೂರು. ೩. ಡಾ. ಎಂ. ಎನ್. ಮಹದೇವನ್ ಅವರು, ಬೆಂಗಳೂರು.

**ಸಾಮಾನ್ಯ ಸದಸ್ಯರು (೩ ರೂ.):** ಶ್ರೀ.ಗಳಾದ ೧. ವಿ. ಗುರುರಾಜನ್, ಬಿ.ಎ. ಅವರು, ಚಾಮರಾಜಪೇಟೆ, ಬೆಂಗಳೂರು. ೨. ಪಿ. ಎಸ್. ರಾಜಾರಾಯರು, ಕ್ಲೋಸ್‌ಪೇಟೆ. ೩. ಆರ್. ಪಿ. ಕುಲಕರ್ಣಿ ಬಿ.ಎ., ಎಲ್‌ಎಲ್.ಬಿ. ಅವರು, ಜಮಖಂಡಿ. ೪. ಕೆ. ಗುಂಡೂರಾಯರು, ಬಿ.ಎ., ರಿಟೈರ್ಡ್ ಅಸಿಸ್ಟೆಂಟ್ ಕಮೀಷನರ್, ೨೦೬, ವಿಶ್ವೇಶ್ವರಪುರ, ಬೆಂಗಳೂರು.

### ಮಹಿಳಾ ಶಾಖೆ

ಪರಿಷತ್ತಿನ ಮಹಿಳಾಸದಸ್ಯರ ಸಭೆ ಇದೇ ತಿಂಗಳು ೨೪ನೆಯ ಭಾನುವಾರ ಸೇರಿ ಪ್ರಸಕ್ತವರ್ಷದ ಮಹಿಳಾ ಶಾಖೆಯ ಕಾರ್ಯಸಮಿತಿಯನ್ನು ರಚಿಸಿತು.

**ಅಧ್ಯಕ್ಷರು:** ಶ್ರೀಮತಿ ಎ. ಶೇಷಮ್ಮನವರು.

**ವ್ಯವಸ್ಥಾಪಕರು:** ಶ್ರೀಮತಿ ಬಿ.ಎಲ್. ಸುಶೀಲಮ್ಮನವರು, ಎಂ.ಎಸ್‌ಸಿ.

**ಸದಸ್ಯರು:** ಶ್ರೀಮತಿಗಳಾದ ೧. ಪಂಕಜಮ್ಮ ವೆಂಕಟೇಶ ಅಯ್ಯಂಗಾರರು. ೨. ಕೆ. ವೆಂಕಟಸುಬ್ಬಮ್ಮನವರು. ೩. ಬಿ. ಎಂ. ಶಾರದಮ್ಮನವರು. ೪. ಡಿ. ಚಂಪಾಬಾಯಿಯವರು, ಎಂ.ಎ. ೫. ಆರ್. ಕಲ್ಯಾಣಮ್ಮನವರು. ೬. ಎಚ್. ರತ್ನಮ್ಮನವರು, ಎಂ.ಎಸ್‌ಸಿ. ೭. ಎಚ್. ವಿ. ಸೀತಮ್ಮನವರು, ೮. ಎಂ. ಶಾರದಮ್ಮನವರು, ಎಂ.ಎ. ೯. ಗದಿಗೆಮ್ಮನವರು, ೧೦. ಪಿ. ವೆಂಕಮ್ಮನವರು. ೧೧. ಸಿ.ಎನ್. ರತ್ನಮ್ಮನವರು, ಬಿ.ಎ. ೧೨. ಎಸ್.ಜಿ. ವೆಂಕಟಸುಬ್ಬಮ್ಮನವರು.

ಕಳೆದ ವರ್ಷದ ಮಹಿಳಾ ಶಾಖೆಯ ಅಧ್ಯಕ್ಷರಿಗೂ ಇತರ ಅಧಿಕಾರಿಗಳಿಗೂ ವಂದನಾರ್ಪಣೆ ಆದ ಮೇಲೆ ಪ್ರಸಕ್ತ ವರ್ಷದ ಕಾರ್ಯಕ್ರಮವನ್ನು ಗೊತ್ತುಮಾಡಲಾಯಿತು.

### ಮಂಗಳೂರು – ಕೊಡಗು ಪ್ರಾಂತಸಮಿತಿ

ಪ್ರಾಂತಸಮಿತಿಯ ಮೊದಲ ಅಧಿವೇಶನ ೨೩-೧-೪೩ನೆಯ ಶನಿವಾರ ಮಡಕೇರಿಯ ವೇದಾಂತ ಸಂಘ ಮಂದಿರದಲ್ಲಿ ಶ್ರೀ. ಸಿ. ಎನ್. ವೆಂಕಪ್ಪಯ್ಯನವರ ಅಧ್ಯಕ್ಷತೆಯಲ್ಲಿ ನಡೆಯಿತು.

ಕಳೆದ ವರ್ಷದ ಸಮಿತಿಯ ಅಧಿಕಾರಿಗಳು ಮತ್ತು ಸದಸ್ಯರಿಗೆ ವಂದನಾರ್ಪಣೆಯಾದ ಮೇಲೆ ಕೆಳಗೆ ಕಾಣಿಸಿದಂತೆ ಪ್ರಸಕ್ತ ವರ್ಷದ ಅಧಿಕಾರಿಗಳ ಮತ್ತು ವಸಂತ ಸಾಹಿತ್ಯೋತ್ಸವ, ಉಪನ್ಯಾಸಾದಿ ಉತ್ಸವಗಳು, ಅಕ್ಷರ ಪ್ರಚಾರ, ಗಮಕ ಶಿಕ್ಷಣ ಸಾಹಿತ್ಯ ಪರೀಕ್ಷೆಗಳ ಸಂಬಂಧವಾಗಿ ಕೆಲಸನಡಸಲು ಉಪಸಮಿತಿಗಳ ಆಯ್ಕೆಯಾದುವು.

**ಅಧಿಕಾರಿಗಳು:** ಶ್ರೀ.ಗಳಾದ ಸಿ. ಎನ್. ವೆಂಕಪ್ಪಯ್ಯನವರು, ಬಿ.ಎ., ಬಿ.ಎಲ್. (ಅಧ್ಯಕ್ಷರು), ಎಂ. ಎಸ್. ಅನಂತಪದ್ಮನಾಭರಾಯರು. (ಕಾರ್ಯದರ್ಶಿಗಳು), ಸಿ. ಎಂ. ರಾಮರಾಯರವರು, ಬಿ.ಎ., ಎಲ್.ಟಿ. (ಕೋಶಾಧಿಕಾರಿಗಳು).

**ಉತ್ಸವ ಸಮಿತಿ:** ಶ್ರೀ.ಗಳಾದ ೧. ಪ್ರಾಂತ ಸಮಿತಿಯ ಅಧ್ಯಕ್ಷರು. ೨. ಕಾರ್ಯದರ್ಶಿಗಳು. ೩. ಕೆ. ಪಿ. ಅಪ್ಪಯ್ಯನವರು. ೪. ಬೆಳ್ಳೆ ರಾಮಚಂದ್ರರಾಯರು, ಎಂ.ಎ., ಬಿ.ಎಲ್. ೫. ವಿದ್ವಾನ್ ಮುಳಿಯ ತಿಮ್ಮಪ್ಪಯ್ಯನವರು.

**ಅಕ್ಷರ ಪ್ರಚಾರ ಸಮಿತಿ:** ಶ್ರೀ.ಗಳಾದ ೧. ಐ. ಸಿ. ಸುಬ್ಬಯ್ಯನವರು, ಎಂ.ಎ., ಬಿ.ಎಲ್. ೨. ಬೆಳ್ಳೆ ರಾಮಚಂದ್ರರಾಯರು. ೩. ಕೆ. ಪಿ. ಅಪ್ಪಯ್ಯನವರು. ೪. ವಿದ್ವಾನ್ ಕೆ. ಕೃಷ್ಣಮಾಚಾರ್ಯರು. ೫. ಜಿ. ಎಸ್. ಕೃಷ್ಣರಾಜು, ಬಿ.ಎ. ಅವರು.

**ಸಾಹಿತ್ಯ ತರಗತಿಯ ಮತ್ತು ಗಮಕ ಶಿಕ್ಷಣದ ಸಮಿತಿ:** ಶ್ರೀ.ಗಳಾದ ೧. ಸಿ. ಎನ್. ವೆಂಕಪ್ಪಯ್ಯನವರು. ೨. ಜಿ. ಎಸ್. ಕೇಶವಾಚಾರ್ಯರು, ಬಿ.ಎಸ್‌ಸಿ., ಬಿ.ಟಿ. ೩. ವಿದ್ವಾನ್ ಪಿ. ಎಂ. ಮುತ್ತಣ್ಣನವರು. ೪. ವಿದ್ವಾನ್ ಕೆ. ಕೃಷ್ಣಮಾಚಾರ್ಯರು. ೫. ಎಂ. ಎಸ್. ಅನಂತಪದ್ಮನಾಭರಾಯರು.

### ಪರಿಷತ್ತಿಗೆ ಕಾಣಿಕೆ

ದ್ವೈತ ದರ್ಶನದ ದೊಡ್ಡ ವಿದ್ವಾಂಸರೂ ಹರಿದಾಸ ಸಾಹಿತ್ಯ ಪ್ರೇಮಿಗಳೂ, ಧಾರವಾಡದ ವಿಕ್ಟೋರಿಯಾ ಹೈಸ್ಕೂಲಿನಲ್ಲಿ ಅಧ್ಯಾಪಕರಾಗಿದ್ದು ಸಾವಿರಾರು ವಿದ್ಯಾರ್ಥಿಗಳಿಗೆ ಪ್ರಿಯರಾದವರೂ ಆದ ಶ್ರೀ. ಮಧ್ವಾಚಾರ್ಯ ಕಟ್ಟಿ, ಬಿ.ಎ. ಅವರು (೨೧-೧-೪೩ರಲ್ಲಿ) ಕಾಲವಾದರು. ಅವರ ಶಿಷ್ಯರಲ್ಲೊಬ್ಬರಾದ ಪುಣೆಯ ಶ್ರೀ. ಎಸ್. ಟಿ. ಪಪ್ಪು ಅವರು ತಮ್ಮ ದಿವಂಗತ ಗುರುಗಳ ನೆನಪಾಗಿ ೫ ರೂಪಾಯಿಗಳನ್ನು ಪರಿಷತ್ತಿಗೆ ಸಲ್ಲಿಸಿದ್ದಾರೆ. ಈ ಕಾಣಿಕೆಯನ್ನು ಪರಿಷತ್ತು ಕೃತಜ್ಞತೆಯಿಂದ ಸ್ವೀಕರಿಸಿದೆಯಲ್ಲದೆ ಭಗವಂತನು ದಿವಂಗತರ ಆತ್ಮಕ್ಕೆ ಸದ್ಗತಿಯನ್ನು ನೀಡಲೆಂದು ಪ್ರಾರ್ಥಿಸುತ್ತದೆ.

## ಕನ್ನಡ ಸುದ್ದಿ

### ಅಖಿಲ ಕರ್ನಾಟಕ ಅಂತರ ಸಂಘಗಳ ಚರ್ಚಾ ಸ್ಪರ್ಧೆ

#### ಸರ್ ಮಿರ್ಜಾ ಪರ್ಯಾಯ ಪಾರಿತೋಷಿಕ

ಬೆಂಗಳೂರು ಮಿತ್ರ ಸಂಘದ ಆಶ್ರಯದಲ್ಲಿ ಇದೇ ತಿಂಗಳು ೩೧ನೆಯ ತಾರೀಕು ಭಾನುವಾರ ಸಂಜೆ ೫ ಗಂಟೆಗೆ ಸರಿಯಾಗಿ ಸಾಹಿತ್ಯ ಪರಿಷನ್ಮಂದಿರದಲ್ಲಿ ಅಖಿಲ ಕರ್ನಾಟಕ ಅಂತರ ಸಂಘಗಳ ಚರ್ಚಾಸ್ಪರ್ಧೆ ನಡೆಯುತ್ತದೆ. ಕನ್ನಡ ಸಾಹಿತ್ಯ ಪರಿಷತ್ತಿನ ಮಾನ್ಯ ಉಪಾಧ್ಯಕ್ಷರಾದ ರಾಜಸೇವಾಪ್ರಸಕ್ತ ಮಾಸ್ತಿ ವೆಂಕಟೇಶ ಅಯ್ಯಂಗಾರವರು ಅಧ್ಯಕ್ಷತೆ ವಹಿಸಲು ದಯಮಾಡಿ ಒಪ್ಪಿರುವರು. ಸ್ಥಳ ಪರಸ್ಥಳಗಳಿಂದ ೧೩ ಸಂಘಗಳ ಪ್ರತಿನಿಧಿಗಳು ಭಾಗವಹಿಸುವರು. ಅತ್ಯುತ್ತಮ ಪ್ರತಿನಿಧಿಗಳನ್ನು ಕಳಿಸುವ ಸಂಘಕ್ಕೆ ಸರ್ ಮಿರ್ಜಾರವರ ಪರ್ಯಾಯ ಪಾರಿತೋಷಿಕ ಸಲ್ಲುತ್ತದೆ. ಇದಲ್ಲದೆ ಚೆನ್ನಾಗಿ ಮಾತನಾಡುವ ಸ್ಪರ್ಧಿಗಳಿಗೂ ಬಹುಮಾನಗಳನ್ನು ಕೊಡುವ ಏರ್ಪಾಟಿದೆ. ಕಳೆದ ವರ್ಷದ ಸ್ಪರ್ಧೆಯಲ್ಲಿ ಪಾರಿತೋಷಿಕವು ಬೆಂಗಳೂರಿನ ಮಹಾರಾಣಿ ಕಾಲೇಜಿಗೆ ಸಿಕ್ಕಿತು.

**ಬೆಳಗಾವಿ: ಲಾ ಕಾಲೇಜು, ಕರ್ನಾಟಕ ಸಂಘ**

ಸಂಘದ ವಾರ್ಷಿಕೋತ್ಸವ ೨೪-೧-೪೩ನೆಯ ಭಾನುವಾರ ನಡೆಯಿತು.

ಪ್ರೊ॥ ಆರ್. ವ್ಹಿ. ಜಾಗೀರದಾರ, ಎಂ.ಎ. (ಲಂಡನ) ಅವರು ಮುಖ್ಯ ಅತಿಥಿಗಳಾಗಿ ದಯಮಾಡಿಸಿದ್ದರು. ಕಾರ್ಯಕ್ರಮದ ಅಂಗವಾಗಿ ಸಂಘದ ಪುಸ್ತಕ ಭಂಡಾರವನ್ನು ಅತಿಥಿಗಳು ತೆರೆದರು. ಸಂಜೆ 'ಬಂಢ್ವಾಳ್ವಿಲ್ಲದ ಬಡಾಯಿ' (ಕೈಲಾಸಂ) ನಾಟಕವೂ 'ಸುರತನಗರ ಶ್ರೇಷ್ಠಿ' (ಕೆರೂರು ವಾಸುದೇವಾಚಾರ್ಯ) ಎಂಬ ನಾಟಕದ ನ್ಯಾಯಸಭಾದೃಶ್ಯವೂ ಅಭಿನಯಿಸಲ್ಪಟ್ಟವು.

೧೬-೧-೪೩ನೆಯ ಶನಿವಾರ ಕವೀಂದ್ರ ಬೇಂದ್ರೆಯವರು, ಪ್ರೊ. ಮುಗಳಿ ಅವರ ಅಧ್ಯಕ್ಷತೆಯಲ್ಲಿ 'ಕವಯಃ ಕ್ರಾಂತಿದರ್ಶನಃ' ವಿಷಯ ಮಾತನಾಡಿದರು.

ಅನಂತರ ಶ್ರೀ. ಬೇಂದ್ರೆ ಅವರು ತಮ್ಮ 'ಅಕೆ ಇದ್ದಳು ಕೂಸು..' 'ತುಂಬಿ' ಹಾಗೂ ತಾವು ಇತ್ತೀಚೆಗೆ ಅನುವಾದಿಸಿದ ಮೇಘದೂತದಿಂದ ಕೆಲವು ಪದ್ಯಗಳನ್ನೂ ಹಾಡಿ ತೋರಿಸಿದರು. ಆದರಂತೆಯೇ ಲಿಂಗರಾಜ ಕಾಲೇಜಿನ ಪ್ರೊ. ರಾಮಲಿಂಗಯ್ಯ ಅವರು ಮಹಾಕವಿಗಳಾದ ಪಂಪ, ರನ್ನ, ಹರಿಹರರ ಕಾವ್ಯಗಳಿಂದ ಕೆಲವು ಭಾಗಗಳನ್ನೂ ಪ್ರೊ. ಮುಗಳಿ ಅವರು, 'ಬಾಸಿಗ'ದಿಂದ ಕೆಲವು ಗೀತಗಳನ್ನೂ ಹಾಡಿ ತೋರಿಸಿದರು.

**ಬಳ್ಳಾರಿ: ವಾರ್ಡ್ಲಾ ಹೈಸ್ಕೂಲು ಕರ್ನಾಟಕ ಸಂಘ**

ಸಂಘದ ವಾರ್ಷಿಕೋತ್ಸವ ೨೩-೧-೪೩ನೆಯ ದಿನ ಮಧ್ಯಾಹ್ನ ನಡೆಯಿತು. ಸೊಲ್ಲಾಪುರದ ಡಿ. ಎ. ವಿ. ಕಾಲೇಜಿನ ಪ್ರೊ. ವಿ. ಬಿ. ನಾಯಕರು ಮುಖ್ಯ ಅತಿಥಿಗಳಾಗಿ ದಯಮಾಡಿಸಿದ್ದರು. 'ರಾಷ್ಟ್ರದ ಏಳಿಗೆ ಮತ್ತು ಶಿಕ್ಷಣ' ಎಂಬ ವಿಷಯವಾಗಿ ಅವರು ಮಾತನಾಡಿದರು. ಶ್ರೀ. ಎ. ವೆಂಕಪ್ಪ ಶಾಸ್ತ್ರಿಗಳು ಅಧ್ಯಕ್ಷತೆ ವಹಿಸಿದ್ದರು.

ಸಂಜೆ ರಾವ್‌ಬಹದ್ದೂರ್ ಟಿ. ರಾಘವ ಅವರ ಅಧ್ಯಕ್ಷತೆಯಲ್ಲಿ ಶ್ರೀ. ನಾಯಕರು 'ಉದ್ಯೋಗ ವರ್ಗದ ಉಪದೇಶ' ಎಂಬ ವಿಷಯವಾಗಿ ಭಾಷಣ ಮಾಡಿದರು.

## ಸಂಸ್ಥಾನ ಅಕ್ಷರ ಪ್ರಚಾರ ಸಮಿತಿ

### ಸ್ಥಳೀಯ ಸಂಸ್ಥೆಗಳ ಮತ್ತು ಆರೋಗ್ಯ ಶಾಖೆಯ ಸಚಿವರೊಂದಿಗೆ ಭೇಟಿ

೨೫-೧-೪೩ ಸೋಮವಾರ ಮಧ್ಯಾಹ್ನ ೩ ಗಂಟೆಗೆ ಅಕ್ಷರ ಪ್ರಚಾರ ಸಮಿತಿಯ ಸದಸ್ಯರುಗಳಾದ ಶ್ರೀ. ಡಬ್ಲ್ಯು. ಜಿ. ಈಗಲ್‌ಟನ್, ಇಸ್ಮಾಯಿಲ್ ಷರೀಫ್, ಟಿ. ಕೃಷ್ಣಮೂರ್ತಿ ಮತ್ತು ಎಸ್. ವಿ. ಶ್ರೀನಿವಾಸರಾವ್ ಇವರುಗಳು ಸಚಿವರನ್ನು ಭೇಟಿಮಾಡಿ ಪಂಚವಾರ್ಷಿಕ ಗ್ರಾಮೋದ್ಧಾರ ಕಾರ್ಯದೊಂದಿಗೆ ವಯಸ್ಕರ ವಿದ್ಯಾಭ್ಯಾಸವನ್ನು ನಡಸಲು ತಾವು ರಚಿಸಿದ ಯೋಜನೆಯನ್ನು ಚರ್ಚಿಸಿದರು. ಗ್ರಾಮೋದ್ಧಾರ ಕಾರ್ಯದ ಭಾಗವಾಗಿ ವಯಸ್ಕರ ವಿದ್ಯಾಭ್ಯಾಸವನ್ನು ನಡಸುವುದರ ಜೊತೆಗೆ ಪುಸ್ತಕ ಭಂಡಾರವನ್ನು ಸ್ಥಾಪಿಸುವುದು ಅಗತ್ಯವೆಂದು ಸಚಿವರು ಅಭಿಪ್ರಾಯಪಟ್ಟು, ಸಮಿತಿಯವರು ರಚಿಸಿರುವ ಈ ಯೋಜನೆಯನ್ನು ಸಹಾನುಭೂತಿಯಿಂದ ಪರಿಶೀಲಿಸುವುದಾಗಿ ಭರವಸೆಯಿತ್ತರು.

ಅದೇ ಸೋಮವಾರ ಸಂಜೆ ೬ ಗಂಟೆಗೆ ಅಕ್ಷರ ಪ್ರಚಾರ ಸಮಿತಿಯ ಸಭೆ ಪರಿಷನ್ಮಂದಿರದಲ್ಲಿ ನಡೆದು ಪರಿಷತ್ತಿನ ಕಾರ್ಯದರ್ಶಿಗಳನ್ನು ಸಮಿತಿಯ ಸದಸ್ಯರನ್ನಾಗಿ ಆಯ್ದುಕೊಳ್ಳಬೇಕೆಂದು ತೀರ್ಮಾನವಾಯಿತು. ಇದರಂತೆ ಶ್ರೀ. ಬಿ. ವೆಂಕೋಬರಾಯರು ಸಮಿತಿಗೆ ಸದಸ್ಯರಾಗಿ ಆಯ್ಕೆಯಾಗಿರುತ್ತಾರೆ.

### ವಯಸ್ಕರ ವಿದ್ಯಾಭ್ಯಾಸದ ತರಗತಿಗಳಿಗೆ ಪ್ರಜಾಪ್ರತಿನಿಧಿ ಸಭೆಯ ಸದಸ್ಯರು ಉಪಾಧ್ಯಾಯರು

ಮೈಸೂರು ಸಂಸ್ಥಾನದ ಅಕ್ಷರ ಪ್ರಚಾರ ಸಮಿತಿಯ ಕಾರ್ಯದರ್ಶಿಯವರು ಮಳವಳ್ಳಿಯಲ್ಲಿ ಇದೇ ತಿಂಗಳು ೨೦ ರಿಂದ ೨೫ರ ವರೆಗೆ ಇದ್ದು ಅಲ್ಲಿನ ಉಪಾಧ್ಯಾಯರಿಗೆ ಶಿಕ್ಷಣವನ್ನು ಕೊಟ್ಟರು. ಅಲ್ಲಿ ಈ ತರಗತಿಗಳ ಮೇಲ್ವಿಚಾರಣೆಗೆ ಒಂದು ಸಮಿತಿ ಏರ್ಪಾಡಾಗಿದೆ. ಪೌರಸಭೆಯವರು ಈ ಕಾರ್ಯಕ್ಕೆ ಈ ಸಾಲಿನಲ್ಲಿ ೪೮೦ ರೂ.ಗಳನ್ನು ಮಂಜೂರು ಮಾಡಿರುತ್ತಾರೆ. ಮಳವಳ್ಳಿಯಲ್ಲಿ ೧೦ ತರಗತಿಗಳೂ, ಸುತ್ತಮುತ್ತ ಹಳ್ಳಿಗಳಲ್ಲಿ ೧೦ ತರಗತಿಗಳೂ ನಡೆಯುವಂತೆ ಏರ್ಪಾಡಾಗಿದೆ.

೨೪ನೆಯ ಭಾನುವಾರ ರಾತ್ರಿ ೮ ಗಂಟೆಗೆ ಆದಿಕರ್ನಾಟಕ ಕೇರಿಯಲ್ಲಿ ಒಂದು ತರಗತಿಯ ಆರಂಭೋತ್ಸವವನ್ನು ಮಳವಳ್ಳಿಯ ಹೈಸ್ಕೂಲಿನ ಮುಖ್ಯೋಪಾಧ್ಯಾಯರಾದ ಶ್ರೀ. ಸಿ. ಎನ್. ರಾಘವಾಚಾರ್ಯರು ನಡಸಿದರು. ಅಲ್ಲಿಗೆ ಉಪಾಧ್ಯಾಯರು ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾದ ಶ್ರೀ. ಡಿ. ದೇವಯ್ಯನವರು.

೭೯೬—೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧–೮–೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧೨
ಬಿಡಿ ಪತ್ರಿಕೆ: ೬ ಕಾಸು



ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮–೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈ ಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿ ಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೧೫
ಬೆಂಗಳೂರು: ಶುಕ್ರವಾರ, ಫೆಬ್ರುವರಿ ೫, ೧೯೪೩

## ಡಾ. ಜಾನ್‌ಸನ್ ಅವರ ನಿಘಂಟು

ಆಂಗ್ಲ ಸಾಹಿತ್ಯೇತಿಹಾಸದಲ್ಲಿ ೧೮ನೆಯ ಶತಮಾನ ಹಲವು ಮಹಾ ಪಾತ್ರಗಳಿಗೂ, ಕೃತಿಗಳಿಗೂ ಹೆಸರಾಗಿದೆ. ಆ ಹಲವು ಮಹಾ ಪಾತ್ರಗಳಲ್ಲಿ ಸ್ಯಾಮ್ಯುಲ್ ಜಾನ್‌ಸನ್ ಒಬ್ಬ (೧೭೦೯–೧೭೮೪). ಆತ ಪ್ರತಿಭಾಶಾಲಿ; ಅಷ್ಟಕ್ಕಷ್ಟೂ ವಕ್ರ–ದೇಹವೂ ವಕ್ರ, ಬುದ್ಧಿಯೂ ವಕ್ರ; ಅಷ್ಟಾವಕ್ರ ಎಂದರೂ ಸಲ್ಲುತ್ತದೆ.

ಚಿಕ್ಕಂದಿನಲ್ಲೇ ಮಹಾ ಪುರುಷನ ಲಕ್ಷಣಗಳಿವನಲ್ಲಿ ಕಾಣಬರುತ್ತಿದ್ದುವು. ದೇಹಬಲ, ಬುದ್ಧಿ ಬಲ. ಜಾನ್‌ಸನ್ ಕೇವಲ ಸಾಹಿತಿ ಮಾತ್ರವಲ್ಲ ಅಪೂರ್ವ ವಿಮರ್ಶಕಾರ; ನಿಘಂಟುಕಾರ ಇಷ್ಟೇ ಅಲ್ಲ, ಅವನು ಒಂದು ಮಹಾ ಸಂಸ್ಥೆ, ಸಾಹಿತ್ಯ ಸೌರವ್ಯೂಹದಲ್ಲಿ ಪ್ರಚಂಡ ಭಾಸ್ಕರ.

ಜಾನ್‌ಸನ್ ಹುಟ್ಟಿದ್ದು ಬಡವರ ಮನೆಯಲ್ಲಿ, ಬೆಳೆದದ್ದು ಬಡತನದಲ್ಲಿ. ಪ್ರೌಢವಿದ್ಯಾಭ್ಯಾಸ ಮಾಡಲು ಅವನಿಗೆ ಅವಕಾಶವೆಲ್ಲಿಯದು? ಆಕ್ಸ್‌ಫರ್ಡಿನಲ್ಲಿ ಎರಡು ವರ್ಷಗಳಿದ್ದ. ಇವನ ಬಡತನ ಕಂಡು ಶ್ರೀಮಂತರ ಮಕ್ಕಳಿಗೆ ಹಾಸ್ಯ. ಇವನನ್ನು ನೋಡಿ ಲೇವಡಿ ಮಾಡುತ್ತಿದ್ದರು. ಜಾನ್‌ಸನ್ ಮಹಾ ಗರ್ವಿ–ಆದರೆ ಅದು ಗಂಭೀರ ಗರ್ವ. ಆಕ್ಸ್‌ಫರ್ಡ್ ಬಿಟ್ಟಮೇಲೆ (೧೭೩೧) ಸುಮಾರು ೩೦ ವರ್ಷ ಕಾಲ ಜಾನ್‌ಸನ್ನನ ಜೀವನ ಸ್ಮರಣ ಭಯಂಕರವಾಗಿತ್ತು; ಜಾನ್‌ಸನ್ ಬಡತನದ ಕಠೋರ ಸ್ವರೂಪವನ್ನು ಕಂಡ. ಆರೋಗ್ಯ ಹೋಯಿತು; "ನಾನೊಬ್ಬ ಹುಚ್ಚ"ನೆಂದು ಜಾನ್‌ಸನ್ ಎಷ್ಟೋ ಸಾರಿ ಹೇಳುತ್ತಿದ್ದ. ಎಷ್ಟು ಬಡವನೋ ಅಷ್ಟು ಆತ್ಮ ಗೌರವ. ಯಾರನ್ನೂ ಲಕ್ಷ್ಯ ಮಾಡುವ ಪ್ರಾಣಿಯಲ್ಲ.

ಉಳಿದ ಕತೆಯೆಲ್ಲ ಹಾಗಿರಲಿ; ಅದು ವಿಸ್ತಾರ. ಜಾನ್‌ಸನ್ ನಿಘಂಟುವೊಂದನ್ನು ಬರೆಯಲು ನಿಶ್ಚಯಮಾಡಿ, ಸಹಾಯ ಬೇಡಿ, ಲಾರ್ಡ್ ಚೆಸ್ಟರ್‌ಫೀಲ್ಡನ ಬಳಿಸಾರಿದ. ಆಗ ಆತ ಸಾಹಿತಿಗಳಿಗೆಲ್ಲ ಆಶ್ರಯದಾತ. ಜಾನ್‌ಸನ್ನನ ದುರದೃಷ್ಟ; ಲಾರ್ಡ್ ಚೆಸ್ಟರ್‌ಫೀಲ್ಡ್ ಇವನನ್ನು ಉಪೇಕ್ಷೆ ಮಾಡಿದ. ಆದರೆ ಗುಹ್ಯೈಕಪಕ್ಷಪಾತಿ; ಜಾನ್‌ಸನ್ನನ ನಿಘಂಟು ಹೊರಬಿದ್ದುದನ್ನು ಕೇಳಿ ಪತ್ರಿಕೆಗೊಂದು ಪ್ರಶಂಸಾ ಪತ್ರ ಬರೆದ.

ಅದನ್ನೋದಿ, ಸ್ಯಾಮ್ಯುಲ್ ಜಾನ್‌ಸನ್ ಚೆಸ್ಟರ್‌ಫೀಲ್ಡಿಗೆ ಒಂದು ಕಾಗದ ಬರೆದ. ಆಂಗ್ಲ ಸಾಹಿತ್ಯ ಚರಿತ್ರೆಯಲ್ಲಿ ಇದೊಂದು ಮಹಾ ಘಟ್ಟ.

— ತಿ. ತಾ. ಶ.

### ಡಾ. ಜಾನ್‌ಸನ್‌ರವರ ನಿಘಂಟು ಕುರಿತು ಲಾರ್ಡ್ ಚೆಸ್ಟರ್‌ಫೀಲ್ಡರು ಪತ್ರಿಕೆಗೆ ಬರೆದುದು

ವರ್ಷಋತುವಿನಲ್ಲಿ ಶ್ರೀ. ಜಾನ್‌ಸನ್ನರು ತಮ್ಮ ಇಂಗ್ಲಿಷ್ ನಿಘಂಟು, ಅದರೊಂದಿಗೆ ವ್ಯಾಕರಣ ಮತ್ತು ಇಂಗ್ಲಿಷ್ ಭಾಷೆಯ ಚರಿತ್ರೆಯನ್ನು ದೊಡ್ಡ ಆಕಾರದ ಎರಡು ಸಂಪುಟಗಳಲ್ಲಿ ಪ್ರಕಟಿಸುವರೆಂದು ಮನ್ನೆ ಕೇಳಿದೆ; ಬಹಳ ಸಂತೋಷವಾಯಿತು.

ನಮ್ಮ ಭಾಷೆಗೆ ನ್ಯಾಯವಾದ, ನಿಕರವಾದ ಅಪೇಕ್ಷಕರಿಗೊಂದು ಪ್ರಮಾಣವನ್ನು ನಿಗದಿಮಾಡುವ ಗ್ರಂಥವೊಂದಿಲ್ಲವಲ್ಲಾ; ಇಂಗ್ಲಿಷನ್ನು ವ್ಯಾಕರಣ ಬದ್ಧವಾಗಿ, ತಪ್ಪಿಲ್ಲದೆ ಬರೆಯಬಯಸುವವರಿಗೆ, ಮಾತನಾಡಲಾಶಿಸುವವರಿಗೆ ಒಂದು ಪುಸ್ತಕವಿಲ್ಲವಲ್ಲಾ ಎಂದು ಬಹಳ ಕಾಲದಿಂದ ನಾನು ವಿಷಾದಪಟ್ಟಿದ್ದೇನೆ. ಈ ಕಾರ್ಯಸಾಧನೆಗೆ ಅಪೂರ್ವ ಮೇಧಾವಿಗಳೊಬ್ಬರು ಮುಂದೆ ಬಂದು ಅವರೊಬ್ಬರೇ ಈ ಕೆಲಸ ಮಾಡಬೇಕೆಂದೂ, ಇಲ್ಲವೆ ಈ ಕೆಲಸಕ್ಕಾಗಿ ಗೃಹಸ್ಥರು ಕೆಲವರು ಒಂದು ಗುಂಪು ಕೂಡಬೇಕೆಂದೂ, ಸರಕಾರದವರು ಈ ಉದ್ದಿಶ್ಯ ಸಾಧನೆಗಾಗಿ ಒಂದು ಸಂಸ್ಥೆಯನ್ನು ರಚಿಸಬೇಕೆಂದೂ ಬಹಳ ಕಾಲದಿಂದ ನಾನು ಆಶಿಸಿದ್ದೇನೆ. ಯುಕ್ತಿವಂತನಾದ ಡಾ|| ಸ್ವಿಫ್ಟ್ ಇಂತಹ ಕೆಲಸಕ್ಕೆಂದು ಆಲೋಚನೆ ಮಾಡಿ ತನ್ನ ಮಿತ್ರ (ಹಾಗೆ ಭಾವಿಸಿದ್ದ) ಲಾರ್ಡ್ ಟ್ರೆಷರರ್ ಆಕ್ಸ್‌ಫರ್ಡಿಗೆ ಸೂಚನೆ ಮಾಡಿದ್ದ. ಆದರೆ ಆ ಪ್ರಯತ್ನ ಫಲಿಸಲಿಲ್ಲ. ಮಂತ್ರಿಗಳಿಗೂ ಸರಳತೆ, ನಿಕರ ಜ್ಞಾನಕ್ಕೂ ಬಲು ದೂರ. ಅದರಲ್ಲೂ ಆಕ್ಸ್‌ಫರ್ಡರಿಗೆ ಇದು ಶುದ್ಧಾಂಗವಾಗಿ ಶೂನ್ಯ.

ಇಂತಹ ದೊಡ್ಡ ಗ್ರಂಥವನ್ನು ಅನೇಕರು ಸೇರಿ ನಿರ್ವಹಿಸಿದ್ದರೆ ಚನ್ನಾಗಿತ್ತೆಂದೂ, ಹಾಗೆ ಮಾಡಿದ್ದರೆ ಅನೇಕರು ಒಂದೊಂದು ವಿಭಾಗವನ್ನು ತೆಗೆದುಕ್ಕೊಂಡು ಪರೀಕ್ಷೆ ಮಾಡಿ, ಶೋಧಿಸಿ, ಕೇರಿ, ಶುದ್ಧಿ ಮಾಡಿ, ಕಡೆಗೆ ಎಲ್ಲರೂ ಮಾಡಿದ ಎಲ್ಲವನ್ನೂ ಸೇರಿಸಿ ನಮ್ಮ ಭಾಷೆಗೊಂದು ಪ್ರಮಾಣದ ಬೆಲೆ ಕೊಡುತ್ತಿದ್ದರೆಂದೂ ಅನೇಕರು ಭಾವಿಸುತ್ತಾರೆ.

ಈ ಅಭಿಪ್ರಾಯವು ಸರಿಯೋ ತಪ್ಪೋ ಹೇಗಾದರೂ ಇರಲಿ. ಸಾರ್ವಜನಿಕರೆಲ್ಲ, ಅದರಲ್ಲೂ ವಿದ್ವಾಂಸರೆಲ್ಲ ಶ್ರೀ. ಜಾನ್‌ಸನ್ನರವರಿಗೆ ವಿಶೇಷ ಋಣಿಗಳಾಗಿದ್ದಾರೆ. ಅಪೇಕ್ಷಣೀಯವಾದ ಇಂತಹ ಮಹಾ ಗ್ರಂಥರಚನೆಯನ್ನು ಕೈಕೊಂಡು ಪೂರ್ಣಗೊಳಿಸಿದರಲ್ಲಾ ಎಂದು ಕೃತಜ್ಞತೆಯಿಂದ ಕೂಡಿದ್ದಾರೆ. ಒಬ್ಬ ವ್ಯಕ್ತಿಯಿಂದ ಪರಿಪೂರ್ಣತೆಯನ್ನು ನಿರೀಕ್ಷಿಸುವುದು ಸರಿಯಲ್ಲ. ಡಾ. ಜಾನ್‌ಸನ್ನರಾಗಲೇ ಬರೆದು ಪ್ರಕಟಿಸಿದ ಗ್ರಂಥಗಳನ್ನು ನೋಡಿದರೆ ಒಬ್ಬ ವ್ಯಕ್ತಿಗೆಷ್ಟು ಸಾಧ್ಯವೋ, ಎಷ್ಟುಮಟ್ಟಿನ ಪರಿಪೂರ್ಣಾವಸ್ಥೆಗಿದನ್ನು ತರಬಹುದೋ ಅಷ್ಟಕ್ಕೆ ಅವರು ತರಲು ಸಮರ್ಥರೆಂದು ಹೇಳಲೇಬೇಕು. ಕೆಲವು ವರ್ಷಗಳ ಹಿಂದೆ ಅವರು ಪ್ರಕಟಿಸಿದ ನಿಘಂಟುವಿನ ಸ್ವರೂಪ ಸೂಚನೆಯೇ ಇದಕ್ಕೆ ಸಾಕ್ಷಿ. ಇದಕ್ಕಿಂತ ವಿವೇಕಯುತವಾಗಿ, ಮನೋಜ್ಞವಾಗಿ, ನಿಕರವಾಗಿ ಬರೆದ ಗ್ರಂಥವನ್ನು ಭಾವಿಸಲಾಗದು. ನಿಘಂಟುವನ್ನು ಕೊಂಡುಕೊಳ್ಳಬೇಕೆಂದಿರುವವರೆಲ್ಲರಿಗೂ- ಅವರೆಲ್ಲ ಕೊಳ್ಳಲು ಸಮರ್ಥರೆಂದೇ ನಾನು ಭಾವಿಸುತ್ತೇನೆ– ಇದರ ಮೊದಲ ಪರಿಚಯವಗತ್ಯವೆಂದು ಶಿಫಾರಸು ಮಾಡುತ್ತೇನೆ.

ಫ್ಲಾರೆನ್‌ಟೈನ್, ಫ್ರೆಂಚ್ ಪರಿಷತ್ತುಗಳ ನಿಘಂಟುಗಳು ಪ್ರಖ್ಯಾತಗಳು; ಅವುಗಳ ಪರಿಪೂರ್ಣತೆ ಮತ್ತು ಆಕಾರ! ಅವುಗಳ ಆರಂಭದೆಶೆಯೂ ಸಣ್ಣದಾಗಿಯೇ ಇತ್ತು. ಫ್ಲಾರೆನ್ಸಿನಲ್ಲೂ, ಪ್ಯಾರಿಸ್‌ನಲ್ಲೂ ಕೆಲವು ಸಾರ್ವಜನಿಕರು ಅವರಿವರ ಮನೆಗೆ, ಹೋದರು; ತಮ್ಮ ತಮ್ಮ ಭಾಷೆಗಳ ವಿಚಾರವಾಗಿ ಮಾತನಾಡಿದರು. ಆ ಭಾಷೆಗಳನ್ನು ಕುರಿತು ಸಣ್ಣ ಸಣ್ಣ ಪ್ರಬಂಧಗಳನ್ನು ಪ್ರಕಟಿಸಿದರು. ಆ ಪ್ರಬಂಧಗಳೇ ಉಭಯ ಜನಾಂಗಗಳ ಕೀರ್ತಿಕಾರಣಗಳೆನಿಸಿದ

(೧೧ನೆಯ ಪುಟಕ್ಕೆ)

# ಕನ್ನಡ ನುಡಿ

**ಶುಕ್ರವಾರ, ಫೆಬ್ರುವರಿ ೫, ೧೯೪೩**

## ಶ್ರೀ ಪುರಂದರದಾಸರು

ನೆನ್ನೆ, ೪-೨-೪೩ನೆಯ ದಿನ ಶ್ರೀ ಪುರಂದರದಾಸರ ಪುಣ್ಯದಿನ. ಇಡಿಯ ಕನ್ನಡನಾಡು ಅವರ ಪವಿತ್ರ ಸ್ಮರಣೆ ಮಾಡುತ್ತ, ಅವರ ಕೀರ್ತನೆಗಳನ್ನು ಹಾಡಿಕೊಂಡು ಬಾಳಿನ ನೋವನ್ನು ಮರೆಯುತ್ತಿದ್ದಾರೆ. ನಾಡಿನ ಹಲವು ಭಾಷಾ ಸಂಸ್ಕೃತಿ ಸಂಸ್ಥೆಗಳಲ್ಲಿ, ಬಾನುಲಿ ಸಂಸ್ಥೆಗಳಲ್ಲಿ, ಸಂಗೀತ ವಿದ್ವಾಂಸರ ಮನೆಗಳಲ್ಲಿ ಆರಾಧನೆ ನಡೆಯುತ್ತಿದೆ. ಕಳೆದ ತಿಂಗಳು ಶ್ರೀ ತ್ಯಾಗರಾಜರ ಆರಾಧನೆ ನಡೆಯಿತು. ತ್ಯಾಗರಾಜರು ತೆಲುಗಿನಲ್ಲಿ ಭಗವಂತನ ನಾಮಸ್ಮರಣೆ ಮಾಡಿದರು; ಪುರಂದರದಾಸರು ಕನ್ನಡದಲ್ಲಿ ಭಗವಂತನನ್ನು ಕೊಂಡಾಡಿದರು. ಒಬ್ಬರು ಕರ್ನಾಟಕ ಸಂಗೀತಕ್ಕೆ ತಳಪಾಯ; ಇನ್ನೊಬ್ಬರು ಈ ಕಲೆಯ ಕಲಶ. ಹೀಗೆಂದು ಎಲ್ಲ ದೇಶಗಳವರೂ ಈ ಇಬ್ಬರನ್ನೂ ತಮ್ಮವರೆಂದು ಒಪ್ಪಿಕೊಂಡು ಆರಾಧಿಸುತ್ತಿದ್ದಾರೆ.

ಶ್ರೀ ಪುರಂದರದಾಸರ ವ್ಯಕ್ತಿತ್ವ, ಅವರ ಕೃತಿಗಳಲ್ಲಿ ಕಂಡುಬರುವ ವೇದವೇದಾಂತಗಳ ಸಾರ ಇನ್ನೂ ಜನಜೀವನದಲ್ಲಿ ಪ್ರಚಾರವಾಗಬೇಕಾಗಿದೆ. ಅವರಂತೆಯೆ ದಾಸಕೂಟದ ಇನ್ನೂ ಹಲವರು ಹರಿದಾಸರು ಕರ್ನಾಟಕ ಸಂಗೀತಕ್ಕೆ ದೊಡ್ಡ ಉಪಕಾರ ಮಾಡಿದ್ದಾರೆ. ಇವರೆಲ್ಲರ ಕೃತಿಗಳೂ ಬೆಳಕನ್ನು ಕಾಣಬೇಕು; ಜನದ ಬಾಳನ್ನು ಬೆಳಗುವ ಅವಕಾಶವಾಗಬೇಕು. ಸಾಹಿತ್ಯ ಪರಿಷತ್ತಿನ ಬೆಳ್ಳಿಯ ಹಬ್ಬದಲ್ಲಿ, ಆಳಿದ ಸ್ವಾಮಿ ಶ್ರೀ ಕೃಷ್ಣರಾಜ ಒಡೆಯರವರು ದಯಪಾಲಿಸಿದ ಭಾಷಣದಲ್ಲಿ:

"ಕನ್ನಡನಾಡೆಲ್ಲ ಗೀತಗಳಿಂದ ತುಂಬಿದೆ ..... ದಾಸರ ಪದಗಳು ಮುಂತಾದುವನ್ನು ಸಂಗ್ರಹಿಸಿ ಬರೆದಿಡುವ ಕಾರ್ಯ ಇನ್ನೂ ಪೂರ್ತಿಯಾಗಿ ನೆರವೇರಿಲ್ಲವೆಂದು ನಾವು ಭಾವಿಸಿರುವೆವು. ಅವುಗಳನ್ನು ಸಂಗ್ರಹಿಸಿ, ಮೂಲರೂಪದಲ್ಲಿ ಅವುಗಳನ್ನು ಭದ್ರವಾಗಿಡುವುದು ಬಹಳ ಶ್ರೇಷ್ಠವಾದ ಕಾರ್ಯ. ಆದಕಾರಣ ಅದು ನೆರವೇರುವುದು ತೀರ ಉಚಿತವಾಗಿದೆ. .... ಗೀತಗಳ ಮೂಲಕ ಶ್ರೇಷ್ಠ ಜೀವನಮಾರ್ಗವನ್ನು ಜನರಿಗೆ ಹೃದಯಂಗಮವಾಗಿ ಬೋಧಿಸಿ ಮನದಟ್ಟು ಮಾಡಿಕೊಡುವ ಪ್ರಯತ್ನ ಮುಂದುವರಿಯಬೇಕಾಗಿದೆ"

ಎಂದು ಅಪ್ಪಣೆ ಕೊಡಿಸಿ, ಹಿಂದಿನ ಗೀತಗಳ ಸಂಕಲನ ಪ್ರಚಾರಗಳ ಜೊತೆಗೆ ನವೀನ ಗೀತಗಳ ರಚನೆಯೂ ಪ್ರಚಾರವೂ ನಡೆಯಲೆಂದು ಹಾರಯಿಸಿದರು.

ನಮ್ಮ ನಾಡಿನ ಗಾಯಕರು ಸಂಗೀತ ಸಭೆಗಳಲ್ಲಿ ಕನ್ನಡ ಕೃತಿಗಳಿಗೆ ಹೆಚ್ಚಿನ ಪ್ರಾಧಾನ್ಯ ಕೊಡಬೇಕೆಂದು ನಾವು ಆಗಿಂದಾಗ್ಗೆ ಪ್ರಾರ್ಥಿಸುತ್ತಿದ್ದೇವೆ. ಈ ಪ್ರಾರ್ಥನೆಯನ್ನು ಶ್ರೀ ಪುರಂದರದಾಸರ ಪುಣ್ಯತಿಥಿಯ ದಿನ ಮತ್ತೆ ಮಾಡುವುದು ಆವಶ್ಯಕವೆಂದು ಬಗೆದು ಗಾಯಕರ ಗಮನವನ್ನು ಈ ಮುಖ್ಯ ಪ್ರಶ್ನೆಯ ಕಡೆಗೆ ಸೆಳೆಯಲು ಬಯಸುತ್ತೇವೆ.

ಪರಿಷತ್ತು ಈಚೆಗೆ **'ಶ್ರೀ ಹರಿದಾಸರ ಕೃತಿಗಳು'** ಎಂಬ ಬೇರೆ ಬೇರೆ ಹರಿದಾಸರ ನಲವತ್ತು ಕೃತಿಗಳನ್ನೊಳಗೊಂಡ ಒಂದು ಪ್ರಕಟನೆಯನ್ನು ಹೊರಡಿಸಿ ಸಂಗೀತ ವಿದ್ವಾಂಸರ ಮುಂದೆಯೂ ಮಹಾ ಜನರೆದರೂ ಇಟ್ಟಿದೆ. ಇಂಥ ಕೃತಿಗಳು ನೂರಾರು ಪ್ರಕಟವಾಗಬೇಕು. ನಮ್ಮ ಸಂಗೀತ ವಿದ್ವಾಂಸರು ಈ ದಿಕ್ಕಿನಲ್ಲಿ ಪರಿಶ್ರಮ ಮಾಡಬೇಕು. ಹೊಸ ಹೊಸ ವಾಗ್ಗೇಯಕಾರರೂ ಹುಟ್ಟಿ, ಅವರಿಗೆ ಜನದ ಆದರ ಲಭಿಸಿ ಆಳಿದ ಶ್ರೀ ಕೃಷ್ಣರಾಜ ಒಡೆಯರವರ ಹಾರಯಿಕೆ ನನಸಾಗಬೇಕು. ಈ ಹಾರಯಿಕೆ ಶ್ರೀ ಪುರಂದರದಾಸರ ಕೃತಿರಚನೆಯ ಉದ್ದೇಶವಾಗಿತ್ತು. ಅವರ ಪುಣ್ಯ ಸ್ಮರಣೆಯ ದಿನ, ಆ ಉದ್ದೇಶ ಸಾಧನೆಗೆ ತಕ್ಕ ಮನೋಧರ್ಮ ನಮ್ಮ ಸಂಗೀತ ಕಲಾವಿದರಲ್ಲಿ ಮೂಡಲೆಂದೂ ಅವರು ಇದನ್ನು ದೀಕ್ಷೆಯಾಗಿ ಭಾವಿಸಿ ನಡಸಿಕೊಡಲೆಂದೂ ಪ್ರಾರ್ಥಿಸುತ್ತೇವೆ.

ಕೊನೆಯದಾಗಿ, ಶ್ರೀ ಪುರಂದರದಾಸರ ಪವಿತ್ರ ಆತ್ಮಕ್ಕೆ ನಾಡು ಸಲ್ಲಿಸುತ್ತಿರುವ ಕಾಣಿಕೆಗೆ 'ನುಡಿ'ಯೂ ದನಿಗೂಡಿಸುತ್ತದೆ.

"ಹರಿದಾಸರಲ್ಲೆಲ್ಲ ಹಿಂದೂ ಸಂಸ್ಕೃತಿಗೂ ಸಂಗೀತ ಕಲಾ ವಿಜ್ಞಾನಗಳಿಗೂ ಮಹತ್ತಾದ ಕಾಣಿಕೆಯನ್ನು ಸಲ್ಲಿಸಿದವರಲ್ಲಿ ಹಿರಿಯರಾದ ಪುರಂದರದಾಸರು ಕೋಟ್ಯಧೀಶರಾಗಿ ಹುಟ್ಟಿದವರು. ಆದರೆ ಬಗೆಯಲ್ಲಿ ಪಾರಮಾರ್ಥದ 'ಬೆಕ್ಕೆಳಗಾಡಲ್' ಐಹಿಕ ಸಂಪತ್ತನ್ನು ಈಡಾಡಿ, ದೈವಿಕವಾದ ಶ್ರೇಯಸ್ಸನ್ನು ಗಳಿಸಲು ಇದ್ದ ಅಡ್ಡಿಗಳನ್ನೆಲ್ಲ ದಾಟಿ, ಪ್ರೇಮ ತ್ಯಾಗಗಳಿಂದ ಭಗವಂತನ ಕೃಪೆಗೆ ಪಾತ್ರರಾದವರು. ಅಂದಿನಿಂದ ನಿರಂತರವಾಗಿ ಭಗವನ್ನಾಮವನ್ನು ಹಾಡುತ್ತ, ಲಕ್ಷಾಂತರ ಕೀರ್ತನೆಗಳನ್ನು ರಚಿಸಿದರು. ಈ ಕೀರ್ತನೆಗಳ ಸೌಂದರ್ಯ ಅವಿನಾಶಿಯಾದುದು. ಸಂಗೀತದ ಲಕ್ಷಣದಲ್ಲಿ ಪುರಂದರದಾಸರು ಅತ್ಯಂತ ಪ್ರಾವೀಣ್ಯವನ್ನು ಗಳಿಸಿದ್ದರು. ಇಂದಿಗೂ ಕರ್ನಾಟಕ ಸಂಗೀತಕ್ಕೆ ಅವರೇ ದೊಡ್ಡ ಲಕ್ಷಣಕಾರರಾಗಿ ಅಗ್ರಸ್ಥಾನವನ್ನು ಪಡೆದಿದ್ದಾರೆ. ಕರ್ನಾಟಕ ಸಂಗೀತ ಪದ್ಧತಿ ಅವರ ಕೊಡುಗೆಯೆ. ಅವರೇ ಸಂಗೀತದ ಮೊದಲ ಪಾಠಗಳ ಶಿಕ್ಷಾಗುರು. ಅವರು ರಚಿಸಿರುವ 'ಕೆರೆಯ ನೀರನು ಕೆರೆಗೆ ಚೆಲ್ಲಿ' ಮುಂತಾದ ಸುಂದರವಾದ ಸ್ವರಾವಳಿಗಳನ್ನೂ ಅಲಂಕಾರಗಳನ್ನೂ ಗೀತಗಳನ್ನೂ ಮೊದಲು ಕಲಿಯದ ಸಂಗೀತಾಭ್ಯಾಸಿಗಳಿಲ್ಲ. ಸಂಗೀತದ ಭವ್ಯ ಪಾಂಡಿತ್ಯಕ್ಕೆ ಗಟ್ಟಿಯಾದ ತಳಪಾಯ ಬೀಳಲು ಇವು ಅಗತ್ಯವಾದುವು. ಪುರಂದರದಾಸರ ಕೀರ್ತನೆಗಳಲ್ಲಿ ಪದಗಳ ಆಯ್ಕೆಯ ಸರಳ ಸೌಂದರ್ಯ, ನಾದ ಮಾಧುರ್ಯ, ಭಾವ-ಇವು ಇತರ ಕೀರ್ತನಕಾರರಿಗೆ ಮೇಲ್ಪಂಕ್ತಿಯಾದುವು. ಸಂಗೀತದ ವಿವಿಧ ರೂಪಗಳಲ್ಲಿ ಅವರ ಸುಳಾದಿಗಳು ಅನುಪಮವಾದುವು. ಒಟ್ಟಿನಲ್ಲಿ ಅವರು ಆಧುನಿಕ ಕರ್ನಾಟಕ ಸಂಗೀತದ ಮೂಲಪುರುಷರು, ವಾಗ್ಗೇಯಕಾರರು ಮತ್ತು ಲಕ್ಷಣಕಾರರು."

## ಕನ್ನಡದ ದಾನಶೂರರಾದ
## ಶ್ರೀ. ಹಸೂಡಿ ವೆಂಕಟಶಾಸ್ತ್ರಿಗಳು



ಇವರು ಶಿವಮೊಗ್ಗ ಕರ್ನಾಟಕ ಸಂಘಕ್ಕೆ ಕಟ್ಟಡವನ್ನು ಕಟ್ಟಿಸಿಕೊಟ್ಟಿರುವ ವಿಚಾರವನ್ನು ಹಿಂದೆ ಒಂದೆರಡು ಬಾರಿ ನುಡಿಯ ವಾಚಕರಲ್ಲಿ ನಿವೇದಿಸಿಕೊಳ್ಳಲಾಗಿತ್ತು.

ಕಟ್ಟಡದ ಕೆಲಸ ಪೂರಯಿಸಿ, ಕರ್ನಾಟಕ ರತ್ನಸಿಂಹಾಸನಾಧೀಶ್ವರರಾದ ಶ್ರೀ ಜಯಚಾಮರಾಜ ಒಡೆಯರವರು ಮುಂದಿನ

ಗುರುವಾರ (೧೧-೨-೫೩) ತಮ್ಮ ಅಮೃತ ಹಸ್ತದಿಂದ ಅದರ ಪ್ರಾರಂಭೋತ್ಸವವನ್ನು ನಡಸಿಕೊಡಲು ಅನುಗ್ರಹಿಸಿದ್ದಾರೆಂಬ ಶುಭವಾರ್ತೆಯನ್ನು ಬೇರೆ ಕಡೆ ಪ್ರಕಟಿಸಿದೆ.

ತಮ್ಮ ಬಹುಮುಖವಾದ ದಾನ ಧರ್ಮ ಕಾರ್ಯಗಳಿಂದ ಪ್ರಜಾ ಪ್ರೇಮವನ್ನು ಗಳಿಸಿರುವ ಶ್ರೀ. ಹಸೂಡಿ ವೆಂಕಟಶಾಸ್ತ್ರಿಗಳು ಪ್ರಭುಗಳಿಂದ ಕಳೆದ ವರ್ಷ ಸೇವಾ ಪ್ರಶಸ್ತಿಯನ್ನು ಪಡೆದರು.

ಇವರ ದಾನದ ಒಂದು ವಿಶೇಷ ಲಕ್ಷಣವೆಂದರೆ, ಅದರಲ್ಲಿ ಸ್ವಾರ್ಥ ಎಳ್ಳಷ್ಟೂ ಇಲ್ಲದಿರುವುದು. ಇವರ ಜನ್ಮಸ್ಥಳವಾದ ಶಿವಮೊಗ್ಗೆಯ ತಾಲ್ಲೂಕು ಹಸೂಡಿ ಗ್ರಾಮದಲ್ಲಿ ಶ್ರೀ ವೀರಭದ್ರ ಸ್ವಾಮಿ ದೇವಾಲಯವನ್ನು ಜೀರ್ಣೋದ್ಧಾರ ಮಾಡಲು ಸುಮಾರು **೪ ಸಾವಿರ ರೂ.** ಗಳನ್ನು ನೀಡಿ ಪರಮತ ಸಹಿಷ್ಣುಗಳಿಗೆ ಆದರ್ಶ ರಾಗಿರುವರು.

ಕರ್ನಾಟಕ ಸಂಘದ ಕಟ್ಟಡವನ್ನು ಕಟ್ಟಿಸಲು ಸಂಕಲ್ಪ ಮಾಡಿದಾಗ ಅವರು ನೀಡಿದ ಹಣ **೫ ಸಾವಿರ ರೂ.** ಕಟ್ಟಡ ಕಟ್ಟದಂತೆಲ್ಲ— ಇದು ಶಾರದಾಂಬೆಯ ಗುಡಿ ಎಂಬ ಪ್ರೇಮ ಇವರಲ್ಲಿ ಬೆಳೆದ ಕುರುಹೆಂಬಂತೆ—ವೆಚ್ಚವೂ ಬೆಳೆದು, ಕಟ್ಟಡ ಮುಗಿಯುವ ಹೊತ್ತಿಗೆ ಶ್ರೀ ಶಾಸ್ತ್ರಿಗಳು **೩೦ ಸಾವಿರ ರೂ.** ಗಳನ್ನು ನೀಡಬೇಕಾಯಿತು. ಇದರಿಂದ ಶ್ರೀ ಶಾಸ್ತ್ರಿಗಳ ಹೃದಯದ ಔದಾರ್ಯವೂ ತುಂಬು ಕನ್ನಡ ಪ್ರೇಮವೂ ಚೆನ್ನಾಗಿ ವ್ಯಕ್ತವಾಗುತ್ತದೆ. ಲಕ್ಷ್ಮೀ ಪುತ್ರರು ಹೀಗೆ ಕನ್ನಡಕ್ಕೆ ಒಲಿದರೆ ಕನ್ನಡಶ್ರೀಗೆ ಬಡತನವೆಲ್ಲಿ ಬಂತು! ಇವರ ದಾನಕ್ಕೆ ಕನ್ನಡಿಗರೆಲ್ಲ ಹೆಮ್ಮೆ ಪಡುತ್ತಿದ್ದಾರೆ.

ಏನು ಧಾರಾಳ! ಕನ್ನಡದ ನಿಷ್ಠೆ!

## ಪರಿಷತ್ತಿನ ಸುದ್ದಿ

### ಪರಿಷತ್ತಿನ ಸದಸ್ಯರ ಬೆಳವಣಿಗೆ

(ತಾ. ೨೮-೧-೫೩ ರಿಂದ ೪-೨-೫೩ರ ವರೆಗೆ)

**ಸಹಾಯಕ ಸದಸ್ಯರು (೧೦೦ ರೂ.):** ಶ್ರೀ. ಎಸ್. ಜಿ. ಶಾಸ್ತ್ರಿಗಳು, ಬಿ.ಎ., ಬಿ.ಎಸ್‌ಸಿ., ಎಫ್.ಜಿ.ಎಸ್. (ಆಜೀವ ಸದಸ್ಯತ್ವದಿಂದ ಬದಲಾವಣೆ).

**ಆಜೀವ ಸದಸ್ಯರು (೫೦ ರೂ.):** ಶ್ರೀಮತಿ ಬಿ. ಎಲ್. ಸುಶೀಲಮ್ಮನವರು, ಎಂ.ಎಸ್‌ಸಿ., ಮಹಾರಾಣಿಯವರ ಕಾಲೇಜು, ಬೆಂಗಳೂರು. (ಸಾಮಾನ್ಯ ಸದಸ್ಯತ್ವದಿಂದ ಬದಲಾವಣೆ).

**ಸಾಮಾನ್ಯ ಸದಸ್ಯರು (೬ ರೂ.):** ಶ್ರೀ.ಗಳಾದ ೧. ಡಾ|| ಬಿ. ಕೆ. ರಾಮಪ್ರಸಾದ್ ಅವರು, ಎಂ.ಎ. (ಆನರ್ಸ್), ಡಿ.ಎಸ್‌ಸಿ., ಎಂ.ಐ.ಇ., ಬೆಂಗಳೂರು. ೨. ಎಂ. ವಾಸುದೇವರಾವ್, ಎಂ.ಎ., ಎಲ್.ಟಿ., ಬಿ.ಇ.ಎಂ. ಹೈಸ್ಕೂಲು, ಮಂಗಳೂರು. ೩. ಎಂ. ಸುಲ್ತಾನ್ ಮೊಹಿಯುದ್ದೀನ್, ಎಂ.ಎ., ಎಲ್‌ಎಲ್.ಬಿ., ಎಂ.ಇ.ಡಿ., ನಂ. ೩, ಕನ್ನಿಂಗ್ ಹ್ಯಾಂ ಕ್ರೆಸೆಂಟ್, ಬೆಂಗಳೂರು ದಂಡು.

**ಸಾಮಾನ್ಯ ಸದಸ್ಯರು (೩ ರೂ.):** ೧. ಶ್ರೀ. ಸಿ. ಆರ್. ಕೃಷ್ಣಸ್ವಾಮಿರಾಯರು, ಅಸಿಸ್ಟೆಂಟ್ ಸೆಕ್ರೆಟರಿಗಳು, ಬೆಂಗಳೂರು ಸಿಟಿ ಕೊಆಪರೇಟೀವ್ ಬ್ಯಾಂಕ್, ಬೆಂಗಳೂರು. ೨. ಶ್ರೀಮತಿ ಎಂ. ಶಾರದಮ್ಮನವರು, ಎಂ.ಎ., ಮಹಾರಾಣಿಯವರ ಕಾಲೇಜು, ಬೆಂಗಳೂರು. ೩. ಶ್ರೀ. ಎಸ್. ವಿ. ರುದ್ರಮುನಿಯಪ್ಪನವರು, ಬಿ.ಎಸ್‌ಸಿ. ವಡಗೇನಹಳ್ಳಿ, ಬೆಂಗಳೂರು ಡಿಸ್ಟ್ರಿಕು. ೪. ಜಿ. ಎಲ್. ಪಾಟೀಲ, ಬಿ.ಎ., ಎಲ್‌ಎಲ್.ಬಿ. ಸಾಲವಾಡಗಿ, ಬಾಗೇವಾಡಿ ತಾಲ್ಲೂಕು, ಬಿಜಾಪುರ.

### ಮೈಸೂರಿನಲ್ಲಿ ನಡೆದ ಗಮಕ ಪರೀಕ್ಷೆಯ ಫಲಿತಾಂಶ

ಮೈಸೂರಿನ ಮಹಿಳಾ ಸದನದ ಮತ್ತು ನಗರ ಕರ್ನಾಟಕ ಸಂಘದ ಸಹಕಾರದೊಡನೆ ಪರಿಷತ್ತು ಮೈಸೂರು ಕೇಂದ್ರದಲ್ಲಿ ಗಮಕ ಪರೀಕ್ಷೆ ನಡಸಿತು. ಶ್ರೀ. ಶ್ರೀಕಂಠಯ್ಯನವರು ಶಿಕ್ಷಕರಾಗಿದ್ದರು. ಪರೀಕ್ಷೆಗೆ ಕುಳಿತಿದ್ದ ಒಟ್ಟು ಹದಿನೆಂಟು ಮಂದಿ ಹೆಣ್ಣುಮಕ್ಕಳಲ್ಲಿ ಹದಿನಾರು ಮಂದಿ ತೇರ್ಗಡೆಯಾದರು.

**ಮೊದಲನೆಯ ತರಗತಿ:** ಶ್ರೀಮತಿಗಳಾದ ೧. ಕೆ. ಲಕ್ಷ್ಮೀನರಸಮ್ಮ. ೨. ಜಿ. ಎಸ್. ನಾಗರತ್ನಮ್ಮ. ೩. ಬಿ. ಆರ್. ಲಲಿತಮ್ಮ. ೪. ಎ. ಎನ್. ಪ್ರಸನ್ನ. ೫. ಎಂ. ಕೆ. ಸೀತಮ್ಮ.

**ಎರಡನೆಯ ತರಗತಿ:** ಶ್ರೀಮತಿಗಳಾದ ೧. ಎಚ್. ಎಸ್. ರತ್ನಮ್ಮ. ೨. ಬಿ. ಆರ್. ಕಮಲಮ್ಮ. ೩. ಎಸ್. ಲಕ್ಷ್ಮೀನರಸಮ್ಮ. ೪. ಎಸ್. ಎಲ್. ಸೀತಮ್ಮ. ೫. ಸಿ. ಎನ್. ಸುಲೋಚನ. ೬. ಎಸ್. ಪದ್ಮ. ೭. ಕೆ. ವಿ. ಲಲಿತಮ್ಮ. ೮. ಎಂ. ಆರ್. ರತ್ನಮ್ಮ. ೯. ಎಂ. ಎಲ್. ಲಕ್ಷ್ಮೀನರಸಮ್ಮ. ೧೦. ಎಂ. ಒ. ಸಿಂಗಮ್ಮ. ೧೧. ಎಸ್. ಲೀಲಾವತಿ.

ತರಗತಿಗಳನ್ನು ನಡಸಲು ನೆರವಾದ ಮೇಲೆ ಹೆಸರಿಸಿರುವ ಮೈಸೂರಿನ ಎರಡು ಸಂಸ್ಥೆಗಳಿಗೂ, ಶಿಕ್ಷಣ ಕೊಟ್ಟು ಉಪಕಾರ ಮಾಡಿದ ಶ್ರೀ. ಶ್ರೀಕಂಠಯ್ಯನವರಿಗೂ, ಪರೀಕ್ಷಕರುಗಳಾಗಿ ಸಹಕರಿಸಿದ ವಿದ್ವಾನ್ ರಾಳ್ಳಪಲ್ಲಿ ಅನಂತಕೃಷ್ಣಶರ್ಮ ಅವರು, ಶ್ರೀ. ಎ. ಆರ್. ಕೃಷ್ಣಶಾಸ್ತ್ರಿಗಳು ಮತ್ತು ಡಾ|| ಎ. ವೆಂಕಟಸುಬ್ಬಯ್ಯನವರು – ಇವರುಗಳಿಗೂ ಪರಿಷತ್ತು ಕೃತಜ್ಞವಾಗಿದೆ.

### ಮೈಸೂರು ಪ್ರಾಂತ ಸಮಿತಿ

ಮೈಸೂರು ಪ್ರಾಂತ ಸಮಿತಿಯ ಈ ವರ್ಷದ ಮೊದಲನೆಯ ಸದಸ್ಯ ಸಭೆ ಇದೇ ತಿಂಗಳು ೧೧ನೆಯ ತಾರೀಕು ಬುಧವಾರ ಸಂಜೆ ೬ ಗಂಟೆಗೆ ಪರಿಷನ್ಮಂದಿರದಲ್ಲಿ ಸೇರುತ್ತದೆ.

ಕಾರ್ಯಸೂಚಿ

ಅಧಿಕಾರಿಗಳ ಆಯ್ಕೆ; ವರ್ಷದ ಕಾರ್ಯಕಲಾಪಗಳ ಬಗ್ಗೆ ವಿಚಾರ ವಿನಿಮಯ ಮತ್ತು ಉಪಸಮಿತಿಗಳ ರಚನೆ.

ಪ್ರಾಂತ ಸಮಿತಿಯ ಸದಸ್ಯರು ದಯಮಾಡಿ ಬಿಡುವು ಮಾಡಿಕೊಂಡು ಸಭೆಗೆ ಬರಬೇಕಾಗಿ ಬಿನ್ನಹ.

ಬೆಂಗಳೂರು **ಜಿ. ಪಿ. ರಾಜರತ್ನಂ**
೧-೨-೫೩ ಕಾರ್ಯದರ್ಶಿ

### ಉತ್ತರ ಕರ್ನಾಟಕ ಪ್ರಾಂತ ಸಮಿತಿ

ಮೇಲ್ಕಂಡ ಸಮಿತಿಯ ಸದಸ್ಯ ಸಭೆ ೩೧-೧-೧೯೫೩ನೆಯ ಭಾನುವಾರ ಧಾರವಾಡದಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘದ ಚಾಮರಾಜಮಂದಿರದಲ್ಲಿ ಶ್ರೀ. ಅಮಿನಭಾವಿ ತಮ್ಮಣರಾಯರ ಅಧ್ಯಕ್ಷತೆಯಲ್ಲಿ ನಡೆಯಿತು. ಅಧಿಕಾರಿಗಳ ಆಯ್ಕೆಯಾದಮೇಲೆ ಕಳೆದ ಮೂರು ವರ್ಷಗಳಿಂದ ಸಮಿತಿಯ ಅಧ್ಯಕ್ಷರಾಗಿದ್ದು ಕೆಲಸ ನಡಸಿಕೊಟ್ಟ ಶ್ರೀ. ಶ್ರೀ. ಬಸವಲಿಂಗಸ್ವಾಮಿಗಳು, ಗವಿಮಠ, ನವಿಲುಗುಂದ ಅವರಿಗೂ ಕಳೆದ ವರ್ಷ ಕಾರ್ಯದರ್ಶಿಗಳಾಗಿದ್ದ ಶ್ರೀ. ರಂಗಪ್ಪ ಪೋದ್ದಾರ ಅವರಿಗೂ ವಂದನಾರ್ಪಣೆಯಾಗಿ ಸಭೆ ಮುಗಿಯಿತು.

#### ಈ ವರ್ಷದ ಅಧಿಕಾರಿಗಳು

**ಅಧ್ಯಕ್ಷರು:** ಶ್ರೀ. ಆರ್. ವಿ. ಜಾಗಿರದಾರರು.

**ಕಾರ್ಯದರ್ಶಿಗಳು:** ಶ್ರೀ. ಅಮಿನಭಾವಿ ತಮ್ಮಣರಾಯರು.

**ಕೋಶಾಧಿಕಾರಿಗಳು:** ಶ್ರೀ. ವಿರೂಪಾಕ್ಷನ್ ಅವರು.

ಶ್ರೀ. ಸಿದ್ಧೇಶ್ವರಸ್ವಾಮಿ ಮಳೀಮಠ ಅವರು ಲೆಕ್ಕಪತ್ರಗಳ ಪರೀಕ್ಷಕರು.

## ಶಿವಮೊಗ್ಗ ಕರ್ನಾಟಕ ಸಂಘ

### ಶ್ರೀಮನ್ಮಹಾರಾಜರವರಿಂದ ಕಟ್ಟಡದ ಪ್ರಾರಂಭೋತ್ಸವ

ಮೈಸೂರು ಸಂಸ್ಥಾನದ ಮಹಾರಾಜರವರಾದ ಶ್ರೀ ಜಯ ಚಾಮರಾಜ ಒಡೆಯರವರು ೧೧-೨-೧೯೪೩ನೆಯ ಗುರುವಾರ ಬೆಳಗ್ಗೆ ಶಿವಮೊಗ್ಗ ಕರ್ನಾಟಕ ಸಂಘದ ಕಟ್ಟಡದ ಪ್ರಾರಂಭೋತ್ಸವವನ್ನು ನಡಸಿಕೊಡಲು ಕೃಪೆಮಾಡಿ ಒಪ್ಪಿರುತ್ತಾರೆಂದು ತಿಳಿಸಲು ಸಂತೋಷವಾಗುತ್ತದೆ.

**ಬೆಂಗಳೂರು: ಗಮಕ ಕಲಾ ಸಂಘ**

೬-೨-೪೩ನೆಯ ಶನಿವಾರ ಸಂಜೆ ೬ ಗಂಟೆಗೆ ಪರಿಷನ್ಮಂದಿರದಲ್ಲಿ ಶ್ರೀ ಪುರಂದರದಾಸರ ಮತ್ತು ಶ್ರೀ ತ್ಯಾಗರಾಜರ ಸ್ಮಾರಕೋತ್ಸವ ನಡೆಯುತ್ತದೆ. ಸರ್ವರಿಗೂ ಆಹ್ವಾನವುಂಟು.

**ರಾಯಿಚೂರು: ಕರ್ನಾಟಕ ತರುಣ ಸಂಘ**

ದಿವಂಗತ ಶ್ರೀ. ಜಿ. ಕೃಷ್ಣರಾಯರ ವ್ಯಾಖ್ಯಾನಮಾಲೆ ಕರ್ನಾಟಕ ತರುಣ ಸಂಘದ ಆಶ್ರಯದಲ್ಲಿ ಫೆಬ್ರುವರಿ ೫ನೆಯ ಶುಕ್ರವಾರ ಮತ್ತು ೬ನೆಯ ಶನಿವಾರ ನಗರೇಶ್ವರ ದೇವಾಲಯದಲ್ಲಿ ನಡೆಯುವುದು. ವ್ಯಾಖ್ಯಾತರು: ಶ್ರೀ. ವಿ. ಸೀತಾರಾಮಯ್ಯನವರು.

**ಕಲ್ಬುರ್ಗಿ: ಕನ್ನಡ ಸಾಹಿತ್ಯ ಸಂಘ**

ದಿನಾಂಕ ೨೬-೧-೪೩ಕ್ಕೆ ಇಲ್ಲಿಯ ಡೆಪ್ಯುಟಿ ಕಲೆಕ್ಟರ್ ಶ್ರೀ. ಕೆ. ಐ. ವಿದ್ಯಾಸಾಗರ, ಎಂ.ಎ., ಎಚ್.ಸಿ.ಎಸ್. ಅವರು ಸಂಘವನ್ನು ಸಂದರ್ಶಿಸಿದರು. ಶ್ರೀಯುತರು ವರ್ಗವಾಗಿ ಬೇರೆ ಸ್ಥಳಕ್ಕೆ ಹೋಗುವವರಿದ್ದ ಮೂಲಕ ಅವರ ಗೌರವಾರ್ಥವಾಗಿ ಒಂದು ಸಭೆಯನ್ನು ಕರೆಯಲಾಗಿತ್ತು. ಸಂಘದ ಎಲ್ಲ ಕಾರ್ಯಕರ್ತರೂ ಪಟ್ಟಣವಾಸಿಗಳಾದ ಇತರ ಸದ್ಗೃಹಸ್ಥರೂ ಆಗಮಿಸಿದ್ದರು. ಶ್ರೀ. ಪದ್ಮನಾಭ ಪುರಾಣಿಕ ಅವರು ಒಂದು ಚಿಕ್ಕ ಭಾಷಣಮಾಡಿ ಶ್ರೀ. ವಿದ್ಯಾಸಾಗರ ಅವರ ಪರಿಚಯವನ್ನು ಸಭಿಕರಿಗೆ ಮಾಡಿಕೊಡುತ್ತ ಶ್ರೀಯುತರ ಸೌಶೀಲ್ಯ ಸದ್ಗುಣಗಳನ್ನು ಹೊಗಳಿದರು.

ಅನಂತರ ಶ್ರೀ. ವಿದ್ಯಾಸಾಗರರು ಉತ್ತರ ಕೊಡುತ್ತ ಸಂಘದ ಉದ್ದೇಶವನ್ನೂ ಅದರ ಸಾಧನೆಗಾಗಿ – ವಿಶೇಷವಾಗಿ ಜ್ಞಾನಪ್ರಸಾರಕ್ಕಾಗಿ – ಸಂಘ ಮಾಡಿದ ಮತ್ತು ಮಾಡುತ್ತಿರುವ ಕಾರ್ಯಗಳನ್ನೂ ಮನವಾರೆ ಹೊಗಳಿದರು. ಸಂಘಕ್ಕೆ ೧೦ ರೂ. ಬೆಲೆಬಾಳುವ ಪುಸ್ತಕಗಳನ್ನೂ ೨೫ರೂ.ಗಳ ನಗದು ಹಣವನ್ನೂ ಕಾಣಿಕೆಯಾಗಿ ಕೊಟ್ಟರು.

ಕಾರ್ಯದರ್ಶಿಗಳು ಸಭಿಕರೆಲ್ಲರಿಗೂ ವಂದನೆಗಳನ್ನು ಅರ್ಪಿಸಿದ ಮೇಲೆ ಅಂದಿನ ಕಾರ್ಯಗಳು ಮುಗಿದವು.

ಸಾಹಿತ್ಯ ಸಂಘದ ಕಟ್ಟಡದಲ್ಲಿ ಜನವರಿ ೨೯, ೩೦, ೩೧ರಲ್ಲಿ ಪರಿಷತ್ತಿನ ಸಾಹಿತ್ಯ ಪರೀಕ್ಷೆಗಳು ನಡೆದುವು.

**ಬೆಂಗಳೂರು: ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘ**

೧-೨-೪೩ನೆಯ ಸೋಮವಾರ ಸಂಘದ ಆಶ್ರಯದಲ್ಲಿ 'ಕವಿ ಸಮ್ಮೇಳನ' ನಡೆಯಿತು. ಶ್ರೀ. ಎಲ್. ಗುಂಡಪ್ಪ, ಎಂ.ಎ. ಅವರು ಅಧ್ಯಕ್ಷತೆ ವಹಿಸಿದ್ದರು. ವಿದ್ಯಾರ್ಥಿ ಲೇಖಕರು ತಮ್ಮ ಕೃತಿಗಳನ್ನು ಓದಿ ತೋರಿಸಿದರು. ಶ್ರೀ. ಗುಂಡಪ್ಪನವರು ಮಾತನಾಡುತ್ತ "ಕವಿಗಳಾಗಲು ಜ್ಞಾನ ಅನುಭವ ಬೇಕು, ಮನಸ್ಸು ವಿಸ್ತಾರವಾಗಬೇಕು. ಶೈಲಿ ಪಳಗಬೇಕು. ಬಾಳು ಬಿಟ್ಟು ಸಾಹಿತ್ಯವಿಲ್ಲ. ಎಲ್ಲ ಸಾಹಿತ್ಯದ ಗುರಿ ಬಾಳನ್ನು ಬಿಂಬಿಸುವುದು. ನಿಮ್ಮ ನೋಟ ತೀಕ್ಷ್ಣವಾದಷ್ಟು ಅನುಭವ ಆಳವಾದಷ್ಟು ಕೃತಿ ಉತ್ತಮವಾಗುವುದು" ಎಂದರು.

ಶ್ರೀ. ಜಿ. ಪಿ. ರಾಜರತ್ನಂ ಅವರು ವಂದನೆಯನ್ನು ಸಮರ್ಪಿಸಿದ ಮೇಲೆ ಸಮ್ಮೇಳನ ಮುಗಿಯಿತು.

**ಕರ್ನಾಟಕ ಸಂಘ: ಅಹಮ್ಮದನಗರ**

೨೮-೧-೪೩ನೆಯ ದಿನ ಸಂಘದ ವಾರ್ಷಿಕ ಸಭೆ ನಡೆಯಿತು. ಕಾರ್ಯದರ್ಶಿಗಳಾದ ಶ್ರೀ. ಎಸ್. ಕೆ. ಕುಲಕರ್ಣಿಯವರು ವರದಿಯನ್ನು ಓದಿದರು.

ಬಳಿಕ ಅಧಿಕಾರಿಗಳ ಆಯ್ಕೆಯಾಗಿ ಶ್ರೀ. ಆರ್. ಜಿ. ದೇಶಪಾಂಡೆಯವರು ಅಧ್ಯಕ್ಷರಾಗಿಯೂ, ಶ್ರೀ. ಎಸ್. ಕೆ. ಕುಲಕರ್ಣಿಯವರು ಕಾರ್ಯದರ್ಶಿಗಳಾಗಿಯೂ ಕೋಶಾಧ್ಯಕ್ಷರಾಗಿಯೂ ಆಯ್ದುಬಂದರು. ಉಪಕಾರ್ಯದರ್ಶಿಗಳ ಸ್ಥಾನಕ್ಕೆ ಶ್ರೀ. ಎಸ್. ಕೆ. ಪಾಟೀಲ ಇವರನ್ನು ನಿಯಮಿಸಲಾಯಿತು. ಆಮೇಲೆ ಶ್ರೀ. ಎಂ. ಎನ್. ದೇಸಾಯಿ ಅವರು 'ಕನ್ನಡ ನಾಡಿನ ಗ್ರಾಮಪುನರುಜ್ಜೀವನ' ಎಂಬ ವಿಷಯವಾಗಿ ಉಪನ್ಯಾಸ ಮಾಡಿದರು.

**ಮೇಲುಕೋಟೆ ಕನ್ನಡ ಸಂಘ:**

ಮೇಲ್ಕಂಡ ಸಂಘದ ನಾಲ್ಕನೆಯ ವಾರ್ಷಿಕೋತ್ಸವ ಇದೇ ಫೆಬ್ರುವರಿ ೬ನೆಯ ತಾರೀಖು ಶನಿವಾರ ಸಾಂಖ್ಯತೀರ್ಥ ವೇದಾಂತ ವಿದ್ವಾನ್ ಶ್ರೀ. ಜಗ್ಗು ವೆಂಕಟಾಚಾರ್ಯರ ಅಧ್ಯಕ್ಷತೆಯಲ್ಲಿ ನಡೆಯುವುದು. ಮೈಸೂರಿನಿಂದ ಬರುವ ಮುಖ್ಯ ಅತಿಥಿಗಳ ಉಪನ್ಯಾಸಗಳು ನಡೆಯುತ್ತವೆ. ರಾತ್ರಿ ಶ್ರೀ. ಪು. ತಿ. ನರಸಿಂಹಾಚಾರ್ಯರ '**ಅಹಲ್ಯೆ**'ಯ ಉತ್ತರಾಂಕವನ್ನು ಅಭಿನಯಿಸಲಾಗುವುದು. ಮಾರನೆಯ ದಿನ ಬೆಳಗ್ಗೆ ಕಲಾಪ್ರದರ್ಶನದ ಆರಂಭೋತ್ಸವವೂ ಸಂಜೆ ಉಪನ್ಯಾಸ ಸಭೆಯೂ ಹರಿಸೇವೆಯ ಪದಗಳ ಹಾಡುಗಾರಿಕೆಯೂ ರಾತ್ರಿ ಯಕ್ಷಗಾನ ಪ್ರದರ್ಶನವೂ ಜರುಗುತ್ತವೆ.

## ಸಾದರ ಸ್ವೀಕಾರ

**ಆಧುನಿಕ ರಷ್ಯಾ** (ಯು. ಎಸ್. ಎಸ್. ಆರ್.): ಬರೆದವರು: ಶ್ರೀ. ಪಿ. ಆರ್. ರಾಮಯ್ಯನವರು, ಬಿ.ಎಸ್‌ಸಿ., 'ತಾಯಿನಾಡು' ಮತ್ತು 'ಡೇಲಿ ನ್ಯೂಸ್' ಪತ್ರಿಕೆಗಳ ಯಜಮಾನರು, ಬೆಂಗಳೂರು. ಪ್ರಕಾಶಕರು: ತಾಯಿನಾಡು ಪ್ರಕಟನಾಲಯ, ಬೆಂಗಳೂರು ನಗರ. ಕ್ರೌನ್ ಅಷ್ಟಪತ್ರ ಸುಮಾರು ೩೬೦ ಪುಟಗಳು. ಬೆಲೆ ೧ ರೂ. ೮ ಅಣೆ.

ಫ್ರಾನ್ಸಿನ ಮಹಾಕ್ರಾಂತಿಯನ್ನು ಕುರಿತು ಒಂದು ಗ್ರಂಥವನ್ನು ಬರೆದು ಉಪಕಾರ ಮಾಡಿರುವ ಶ್ರೀ. ರಾಮಯ್ಯನವರು ಈಗ ತಮ್ಮ ದೃಷ್ಟಿಯನ್ನು ಸೋವಿಯಟ್ ರಷ್ಯದ ಕಡೆ ಹರಿಯಿಸಿ, ಸಮಾಜ ಸುಖದ ಒಂದು ದೊಡ್ಡ ತತ್ವದ ಪ್ರಯೋಗವನ್ನು ನಡಸುತ್ತಿರುವ ಆ ಹಿರಿಯ ರಾಷ್ಟ್ರದ ಇತಿಹಾಸವನ್ನು ಕನ್ನಡಿಗರಿಗೆ ಒದಗಿಸಿಕೊಟ್ಟಿದ್ದಾರೆ. ಇದು ಅಗತ್ಯವಾಗಿ ಪ್ರಕಟವಾಗಬೇಕಾಗಿದ್ದ ಗ್ರಂಥ.

**ಹಿಂದೂದೇಶದ ಚರಿತ್ರೆ:** (ಮೂರನೆಯ ಪುಸ್ತಕ). ಬರೆದವರು: ಡಾ|| ಕೆ. ರಾಮಸ್ವಾಮಿ, ಎಂ.ಎ., ಡಿ.ಲಿಟ್. ಅವರು. ಡೆಮಿ ಅಷ್ಟಪತ್ರ ೨೬೮ ಪುಟಗಳು. ಬೆಲೆ ೮ ಆಣೆ ೯ ಕಾಸು.

ಶಿಕ್ಷಣಶಾಸ್ತ್ರದಲ್ಲಿ ಬಲ್ಲಿದರಾದವರಲ್ಲೊಬ್ಬರೂ, ಸ್ವತಃ ಶಿಕ್ಷಕರಾಗಿ ಅನುಭವ ಪಡೆದವರೂ ಆದ ಡಾ|| ರಾಮಸ್ವಾಮಿಯವರು ಬರೆದಿರುವ ಈ ಪಾಠಪುಸ್ತಕ 'ಮಕ್ಕಳ ಮನೋಬೆಳವಣಿಗೆಗೆ ಅನ್ವಯಿಸಿ ಒಂದು ಕ್ರಮವನ್ನೂ ರೀತಿಯನ್ನೂ ಅನುಸರಿಸಿ' ಬರೆಯಲ್ಪಟ್ಟದ್ದಾಗಿದೆ. 'ನುಡಿ'ಯಲ್ಲಿ ಹಿಂದೆ ಈ ಚರಿತ್ರಮಾಲೆಯ ಮೊದಲ ಎರಡು ಪುಸ್ತಕಗಳನ್ನು ಸ್ವಾಗತಿಸಿತ್ತು. ನಮ್ಮ ದೇಶದ ಚರಿತ್ರೆಯನ್ನು ನಮ್ಮ ಮಕ್ಕಳು ಚೆನ್ನಾಗಿ ತಿಳಿಯಬೇಕೆಂಬ ಉದ್ದೇಶದಿಂದ ವಿದ್ಯಾಭ್ಯಾಸ ಇಲಾಖೆಯವರು ಚರಿತೆಯನ್ನು "ಒಂಬತ್ತು ವರ್ಷಕಾಲ ಅವಿಚ್ಛಿನ್ನವಾಗಿ ಓದಲು ಅವಕಾಶ ಕಲ್ಪಿಸಿದ್ದಾರೆ." ಇಂಥ ಪಾಠಪುಸ್ತಕಗಳಲ್ಲದೆ ಇವಕ್ಕೆ ಪೂರಕವಾಗಿ, ಇತಿಹಾಸ ಕಥೆಗಳೂ ಇತಿಹಾಸದ ಆಯಾ ಕಾಲದಲ್ಲಿ ಜನಜೀವನವನ್ನು ನಾನಾ ದಿಕ್ಕುಗಳಲ್ಲಿ ತಿದ್ದಲು ನಡೆದ ಧರ್ಮ, ಸಾಹಿತ್ಯ ಮುಂತಾದ ಚಳವಳಿಗಳನ್ನು ವಿವರಿಸುವ ಪುಸ್ತಕಗಳೂ ನಮ್ಮ ವಿದ್ಯಾರ್ಥಿಗಳಿಗೆ ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಸಿಕ್ಕುವಂತಾಗಲೆಂದು ನಾವು ಹಾರೈಸುತ್ತೇವೆ.

೧. A Mannual of Trigonometry (ತ್ರಿಕೋಣಮಿತಿ): ಬರೆದವರು: ಶ್ರೀ. ಎನ್. ಕೆ. ನರಸಿಂಹಮೂರ್ತಿಗಳು ಎಂ.ಎಸ್‌ಸಿ., ಗಣಿತ ಅಧ್ಯಾಪಕರು, ಮೈಸೂರು ವಿಶ್ವವಿದ್ಯಾನಿಲಯ. ಬೆಲೆ ೨ ರೂ.

೨. Questions and Answers in Mathematics; Part I - Algebra & Calculus (ಮೈಸೂರು ಇಂಟರ್‌ಮೀಡಿಯೆಟ್ ಪರೀಕ್ಷೆಯ ಪ್ರಶ್ನೆಪತ್ರಿಕೆಗಳ ಉತ್ತರ): ಬರೆದವರು: ಶ್ರೀ. ಎಚ್. ಎಸ್. ಸುಬ್ಬರಾಯರು, ಎಂ.ಎಸ್‌ಸಿ. ಬೆಲೆ ೧ ರೂ. ೪ ಆಣೆ.

ಪ್ರಕಾಶಕರು: ಪ್ರಭಾಕರ ಬುಕ್ ಡಿಪೋ, ಕೋಟೆ, ಬೆಂಗಳೂರು.

ನಮ್ಮ ಶಾಲೆ ಕಾಲೇಜುಗಳ ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಗಣಿತ ವಿಜ್ಞಾನ ಪ್ರಕಟನೆಗಳು, 'ಸ್ವದೇಶೀ'ಯ ಉದ್ಯಮಗಳಾಗಿ ಹೊರಬೀಳುತ್ತಿರುವುದು ಶುಭಚಿಹ್ನೆ. ಸಾಮಾನ್ಯವಾಗಿ ಇವು ಇದುವರೆಗೆ ಪರದೇಶಗಳಿಂದ ಬರುತ್ತಿದ್ದುವು. ಈಚೆಗೆ ಆಯಾ ಪ್ರಾಂತದಲ್ಲೇ ಪ್ರಕಾಶಕರೂ ಲೇಖಕರೂ ಈ ಬಗ್ಗೆ ಸಹಕರಿಸುತ್ತಿರುವುದು ಸಂತೋಷದ ಸಂಗತಿ.

ಮೇಲೆ ಹೇಳಿದ ಪುಸ್ತಕಗಳು ವಿದ್ಯಾರ್ಥಿಗಣಕ್ಕೆ ಪ್ರಿಯವಾಗುವುವೆಂದು ನಾವು ದೃಢವಾಗಿ ನಂಬಿದ್ದೇವೆ. ಇದೇ ಪ್ರಕಾಶಕರ ಹಿಂದಿನ ಪ್ರಕಟನೆಯಾದ 'ಜ್ಯಾಮಿತಿ' ಒಳ್ಳೆಯ ಪ್ರಕಟನೆಯೆಂದು ಪ್ರಸಿದ್ಧಿಗೆ ಬಂದಿತು. ಅದನ್ನು ಬರೆದ ಶ್ರೀ. ನರಸಿಂಹ ಮೂರ್ತಿಗಳೇ ಈಗ 'ತ್ರಿಕೋಣಮಿತಿ'ಯನ್ನು ಬರೆದಿದ್ದಾರೆ.

ಈ ಎರಡೂ ಪುಸ್ತಕಗಳ ಲೇಖಕರು ಗಣಿತಬೋಧಕರಾಗಿ ಅನುಭವ ಪಡೆದವರು. ವಿದ್ಯಾರ್ಥಿಗಳ ಮನಸ್ಸನ್ನು ಅರಿತು, ಗಹನವಾದ ವಿಷಯಗಳನ್ನು ಸುಲಭವಾಗಿ ಬೋಧೆಯಾಗುವಂತೆ ನುರಿತ ಕೈಯಿಂದ ಬರೆದಿದ್ದಾರೆ.

ಮುಂದೆ ವಿಶ್ವವಿದ್ಯಾನಿಲಯದಲ್ಲಿ ಕನ್ನಡವೇ ಬೋಧಭಾಷೆಯಾಗುವಾಗ ಅನುಭವಿಗಳಾದ ಇಂಥ ಗಣಿತ ವಿಜ್ಞಾನ ಪಂಡಿತರಿಂದ ಸರಿಯಾದ ಸೇವೆ ಕನ್ನಡಕ್ಕೆ ದೊರೆಯುವುದೆಂದು ನಾಡು ಹಾರೈಸುತ್ತಿದೆ.

ತ್ರಿಕೋಣಮಿತಿಯೂ ಗಣಿತ ಪ್ರಶ್ನೋತ್ತರಗಳೂ ಭಾರತೀಯ ವಿಶ್ವವಿದ್ಯಾನಿಲಯಗಳ ಇಂಟರ್‌ಮೀಡಿಯೆಟ್ ಮಟ್ಟದ ವಿದ್ಯಾರ್ಥಿಗಳ ಉಪಯೋಗಕ್ಕೆಂದು ಸಿದ್ಧವಾದ ಪುಸ್ತಕಗಳು.

೭೦೨—೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಭಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

## ಡಾ. ಜಾನ್‌ಸನ್ ಅವರ ನಿಘಂಟು

(೭೭ನೆಯ ಪುಟದಿಂದ)

ಮಹಾ ಗ್ರಂಥಗಳ ಬೀಜಗಳು. ಸ್ಪೆಯಿನಿನಲ್ಲಿ ಅಲ್ಲಿನ ಭೂಗುಣವೇಕೋ ಈಗ ಗ್ರಂಥರಚನೆಗಾಗಲಿ, ಅಭಿವೃದ್ಧಿಗಾಗಲಿ ಅನುಕೂಲವಾಗಿಲ್ಲ. ಅಂತಹ ದೇಶದಲ್ಲೂ ಒಂದು ನಿಂಘಂಟು ನಿರ್ಮಾಣವಾಗಿದೆ; ಅದು ಚೆನ್ನಾಗಿದೆ. ಫ್ಲೋಲಿಯೋ ಆಕಾರದಲ್ಲಿ, ಸ್ಪೆಯಿನ್ ಭಾಷಾ ನಿಘಂಟುವು, ಆರು ದೊಡ್ಡ ಸಂಪುಟಗಳಲ್ಲಿ ಪ್ರಕಟವಾಗಿದೆ.

ನಮ್ಮ ಭಾಷೆಗೆ ಇಂತಹ ಪ್ರಮಾಣ ಗ್ರಂಥವೊಂದು ಇದುವರೆಗೆ ಇಲ್ಲದೆ ಇರುವುದು ನಮ್ಮ ಜನಾಂಗಕ್ಕೇ ಮಹದವಮಾನವೆಂದು ನಾನು ಭಾವಿಸದಿರಲು ಸಾಧ್ಯವಿಲ್ಲ. ಜರ್ಮನರೂ, ಡಚ್ಚರೂ ತಮ್ಮ ನಿಘಂಟುಗಳನ್ನು ಕೇವಲ 'ಶಬ್ದಕೋಶ'ಗಳೆಂದು ಕರೆಯುತ್ತಾರೆ. ಈಗ ನಮ್ಮಲ್ಲಿರುವ ನಿಘಂಟುಗಳೂ, ಸಹ ನಮ್ಮ ನೆರೆ ಹೊರೆಯವರ 'ಶಬ್ದಕೋಶ'ಗಳಿಗಿಂತ ಲೇಶವೂ ಉತ್ತಮವಾಗಿಲ್ಲ. ನಿಘಂಟುವೆಂಬ ಘನವಾದ ಹೆಸರಿಗೇ ಅವು ಅರ್ಹವಾದವುಗಳಲ್ಲ. ಒಳ್ಳೆಯದು, ಕೆಟ್ಟದ್ದು, ಎಲ್ಲ ಮಾತುಗಳನ್ನು ಹುಚ್ಚಾಪಟ್ಟೆ ಸೇರಿಸಿಬಿಟ್ಟಿದ್ದಾರೆ. ಉಚಿತ ಅನೌಚಿತವರಿಯದವನು ತನ್ನಿಚ್ಛೆ ಬಂದಂತೆ ಬರೆಯಬಹುದು; ಮಾತನಾಡಬಹುದು. ಗಾಂಭೀರ್ಯವಿಲ್ಲದೆ, ಔಚಿತ್ಯವಿಲ್ಲದೆ, ಹೇಸಿಕೆಯಿಂದ ಮಾತನಾಡಬಹುದು, ಬರೆಯಬಹುದು. ಇಂತಹ 'ಶಬ್ದಕೋಶ'ಗಳನ್ನು ನೋಡಿಹರೆ ಆಗುವುದಿನ್ನೇನು?

ಇಂದು ನಮ್ಮ ಭಾಷೆಯು ತೀರ ಅವ್ಯವಸ್ಥೆಯಲ್ಲಿದೆ. ಇದರಿಂದ ಬಹುಶಃ ಅದಕ್ಕಾದದ್ದೂ ಅಷ್ಟರಲ್ಲೇ ಇದೆ. ಸ್ವತಂತ್ರ ಮತ್ತು ಬಹಿರಂಗ ವ್ಯಾಪಾರದಿಂದ ಅನೇಕ ಪದಗಳೂ, ಸಮಾಸ ಪದಗಳೂ ಬಂದುಬಿಟ್ಟವೆ; ಅವುಗಳನ್ನು ಸ್ವೀಕರಿಸಿ, ಇತರ ಭಾಷಾ ಗೋತ್ರಗಳಿಂದ ಸ್ವಗೋತ್ರಕ್ಕೆ ತೆಗೆದುಕೊಳ್ಳಲಾಗಿದೆ. ಇದರಿಂದ ನಮ್ಮ ಭಾಷೆ ವಿಶೇಷ ಸಂಪದ್ಯುಕ್ತವಾಯಿತು. ಇತರ ಭಾಷೆಗಳಿಂದ ಪಡೆದ ಬಲವನ್ನು, ಸೌಂದರ್ಯವನ್ನು ಅದು ಕಾಪಾಡಿಕೊಳ್ಳಲಿ. ಆದರೆ ವಿದೇಶೀಯ ಪ್ರಕೃತಿಯ, ಅನಾವಶ್ಯಕ (ಟಾರ್ಪಿಯನ್ ಕನ್ಯೆಯಂತೆ) ಅಲಂಕಾರಗಳಿಂದ ಹಾಳಾಗದೆ ಇರಲಿ. ವಿವೇಕತನ ತೋರಿಸುವ ಸಮಯ ಬಂದಿದೆ. ಸಹಿಷ್ಣುತೆ, ಸ್ವೀಕಾರ, ಸ್ವಗೋತ್ರೀಕರಣ ಆಗ ಬೇಕಾದಷ್ಟಾಗಿಹೋಗಿದೆ. ಸದ್ವ್ಯವಸ್ಥೆ ಮತ್ತು ಅಧಿಕಾರ ಈಗ ಆವಶ್ಯಕವಾಗಿದೆ. ಇವುಗಳನ್ನೆಲ್ಲಿಂದ ತರೋಣ? ಅಲ್ಲದೆ ಅವುಗಳಿಗೆ ಬೇಕಾದ ವಿಧೇಯತೆಯನ್ನೆಲ್ಲಿಂದ ತರೋಣ?

ಅವ್ಯವಸ್ಥೆಯುಂಟಾದಾಗ, ಹಿಂದಿನ ರೋಮಕರು ಮಾಡಿದಂತೆ ಸರ್ವತಂತ್ರ ಸ್ವತಂತ್ರನೊಬ್ಬನನ್ನು (ಡಿಕ್ಟೇಟರ್) ಆರಿಸಬೇಕು. ಈ ತತ್ವಕ್ಕನುಸಾರವಾಗಿ ನಾನು ಡಾ. ಜಾನ್‌ಸನ್‌ರವರಿಗೆ ನನ್ನ ವೋಟನ್ನು ಕೊಡುತ್ತೇನೆ; ಆ ಮಹಾ ಪದವಿಯನ್ನು, ಆ ಕಷ್ಟವನ್ನು ವಹಿಸಲು, ಸಹಿಸಲು ಅವರೇ ಯೋಗ್ಯರು. ಡಾ. ಜಾನ್‌ಸನ್‌ರವರು ಸರ್ವತಂತ್ರ ಸ್ವತಂತ್ರ ('ಡಿಕ್ಟೇಟರ್ ಷಿಪ್') ಪದವಿಯಲ್ಲಿರುವವರೆಗೆ, ಇಂಗ್ಲಿಷ್ ಭಾಷೆಯಲ್ಲಿ ಸ್ವತಂತ್ರ ಬ್ರಿಟನ್ನಿನವನಾದ ನನಗಿರುವ ಸಕಲ ಹಕ್ಕುಗಳನ್ನೂ, ವಿಶೇಷಾಧಿಕಾರಗಳನ್ನೂ ಅವರಿಗೇ ಬಿಟ್ಟುಕೊಡುತ್ತೇನೆ. ಅಷ್ಟೇ ಅಲ್ಲ. ಹಳೆಯ ರೋಮಕನಂತೆ, ಸರ್ವತಂತ್ರ ಸ್ವತಂತ್ರನಾದ ಆತನಿಗೆ ನಾನು ವಿಧೇಯನಾಗಿರುತ್ತೇನೆ. ಇಂದಿನ ರೋಮಕನಂತೆ ನನ್ನ ಪೋಪಿನಲ್ಲಿ ನನಗೆಷ್ಟು ಶ್ರದ್ಧಾ ಭಕ್ತಿಯುಂಟೋ ಅಷ್ಟನ್ನೂ ಆತನಿಗೆ ತೋರಿಸುತ್ತೇನೆ. ಮಾತನಾಡದೆ ಪೋಪನಲ್ಲಿ ನಂಬಿಕೆ ಇಡುವಂತೆ, ಆತನಾ ಪದವಿಯಲ್ಲಿರುವವರೆಗೆ– ಆಮೇಲಲ್ಲ – ಆತನು ತಪ್ಪೇ ಮಾಡುವುದಿಲ್ಲವೆಂದು ಆತನಲ್ಲಿ ನಂಬಿಕೆ ಇಡುತ್ತೇನೆ. ಇದಕ್ಕಿಂತ ಹೆಚ್ಚಾಗಿ ಆತ ನಿನ್ನೇನನ್ನೂ ಅಪೇಕ್ಷಿಸಲಾರ. ವಿಧೇಯತೆ ತೋರಿಸದೆ ಹೋದರೆ ಕೆಡಕಾದೀತೆಂಬ ಭಯವಿರಬೇಕು; ಇಲ್ಲವೆ ಅದರ ಆವಶ್ಯಕತೆ ಕಾಣಬರಬೇಕು. ಎರಡೂ ಇಲ್ಲ.

ನನಗೆ ಸಹಜವಾದ ಇಂಗ್ಲಿಷ್ ಗರ್ವವಿದೆ; ದುರಾಗ್ರಹ, ದುರಭಿಮಾನವಿದೆ. ನನ್ನ ಮಾತೃಭೂಮಿಯ ಗೌರವ, ಲಾಭ, ಅಲಂಕಾರಕ್ಕೆ ಕಾರಣವೆನಿಸಿದುದಕ್ಕೆಲ್ಲ ನನ್ನ ಕಾಣಿಕೆ ಅಪಾರವಾದುದೆಂದು ನಾನು ನಂಬುತ್ತೇನೆ. ನಮ್ಮ ಭಾಷೆಯು ಇತ್ತೀಚಿಗೆ ಇಷ್ಟು ವೇಗದಿಂದ ವೃದ್ಧಿ ಹೊಂದಿತಲ್ಲಾ, ಯೂರೋಪಿನಲ್ಲೆಲ್ಲ ಇನ್ನೂ ಹೊಂದುತ್ತಿದೆಯಲ್ಲಾ ಎಂದು ಭಾವಿಸಿದಾಗಲೆಲ್ಲ ನಾನು ಸೂಕ್ಷ್ಮ ಸುಖಾನುಭವ ಮಾಡುವ ಶಕ್ತಿಯುಳ್ಳವನಾಗಿದ್ದೇನೆ. ಈಗ ಹಾಲೆಂಡಿನಲ್ಲಿ ಸದಾ ಮಾತನಾಡುತ್ತಾರೆ; ಸರ್ವತ್ರ ಈ ಬಗೆಯ ತಿಳಿವಳಿಕೆ ಇದೆ. ಜರ್ಮನಿಯ ನಾಗರಿಕ ಭಾಗಗಳಲ್ಲೆಲ್ಲ 'ಇದು ಬಾಂಧವ್ಯ ಭಾಗ್ಯ'ವೆಂದು ಗ್ರಹಿಸಲಾಗಿದೆ. ಫ್ರಾನ್ಸ್ ಮತ್ತು ಇಟಲಿಗಳಲ್ಲಿ ಕಲಿತವರೂ, ಕಲಿತವರೆಂದು ನಟನೆ ಮಾಡುವರೂ, ಮಾತನಾಡದೆ ಹೋದರೂ ಪ್ರೌಢ ಭಾಷೆಯೆಂದು ಇಂಗ್ಲಿಷನ್ನು ಕಲಿಯುತ್ತಾರೆ.

ಫ್ರೆಂಚ್ ಭಾಷೆಯು ಯೂರೋಪಿನಲ್ಲೆಲ್ಲ ಹರಡುವಂತೆ – ಅದು ಲೋಕತ್ರಯ ಭಾಷೆಯೆನಿಸುವವರೆಗೂ ಹೋಗುವಂತೆ ಮಾಡಿದವನು ಹದಿನಾಲ್ಕನೆಯ ಲೂಯಿ. ತನ್ನ ಪ್ರಭುತ್ವದಲ್ಲಿ ತಾನು ಸಾಧಿಸಿದ್ದರಲ್ಲಿ ಇದು ವಿಶೇಷವಾದುದೆಂದವನ ಕಲ್ಪನೆ. ಆದರೆ ಇದನ್ನು ನೆನಪಿನಲ್ಲಿಡಬೇಕು; ಅವನ ರಣವಿಜಯವು ಈ ಭಾಷಾ ಪ್ರಭಾವಕ್ಕೆ ದಾರಿ ಮಾಡಿತು. ಆತನ ಕಾಲದಲ್ಲಿ ಅನೇಕ ಮಂದಿ ಶ್ರೇಷ್ಠ ಲೇಖಕರು ಬೆಳಗಿದರು. ಅವರು ಫ್ರೆಂಚ್ ಭಾಷೆಗೆ ಶಕ್ತಿ ದಾನ ಮಾಡಿದರು; ಅದರ ಅಭಿವೃದ್ಧಿಗತ್ಯಂತ ವೇಗವನ್ನು ಕೊಟ್ಟರು. ನಮ್ಮ ಭಾಷೆಯಾದರೋ ಯಾವ ಸಹಾಯವೂ ಇಲ್ಲದೆ ತನ್ನಷ್ಟಕ್ಕೆ ತಾನೇ ಷೇಕ್ಸ್‌ಪಿಯರ್, ಬೇಕನ್, ಮಿಲ್ಟನ್, ಲಾಕ್, ನ್ಯೂಟನ್, ಸ್ವಿಫ್ಟ್, ಪೋಪ್, ಅಡಿಸನ್ ಮುಂತಾದವರ ನಾಯಕತ್ವದಲ್ಲಿ ಬೆಳೆಯಿತು.

ಘನತೆಗೊಂಡ ವಿಜಯ; ಮಹಾವೈಭವಯುತವಾದ ಜಯ! ತಾವಾಗಿ, ಸಂತೋಷದಿಂದ ಮೆಚ್ಚಿದವರಿಂದ ಪುರಸ್ಕೃತವಾದುದೇ ಹೊರತು ಮತ್ತಾವುದರಿಂದಲೂ ಅಲ್ಲ!

ಈ ಗ್ರಂಥಕರ್ತರು ಉದಾಸೀನದಿಂದ ಇಂಗ್ಲಿಷ್ ಗ್ರಂಥಗಳನ್ನು ಪರಭಾಷೆಗಳಿಗೆ ಅನುವಾದ ಮಾಡಿದರೂ, ಇಂಗ್ಲಿಷ್ ಪ್ರತಿಭೆಯ ರುಚಿಯ ಮಾದರಿಯನ್ನು ವಿದೇಶೀ ಜನಾಂಗಗಳಿಗೆ ಮಾಡಿಕೊಟ್ಟರು. ಅಸಮಗ್ರವಾದ ಈ ಪ್ರತಿಗಳ ರುಚಿ ನೋಡಿದವರಿಗೆ ಮೂಲವನ್ನು ನೋಡಬೇಕೆಂಬ ಕುತೂಹಲ ಹುಟ್ಟಿತು. ನಮ್ಮ ಗ್ರಂಥಕರ್ತರೂ, 'ಚಿರಂತನಾಚಾರ್ಯ' ಸ್ಥಾನಕ್ಕೇರಿದರು! ನಮ್ಮ ಗ್ರಂಥಗಳೂ ಮಹಾ ಮಹಾ ಕಾವ್ಯಗಳ ಮಟ್ಟಕ್ಕೇರಿ ಬಿಟ್ಟವು!

ಆದರೆ ಒಂದು ವ್ಯಾಕರಣ, ಒಂದು ನಿಘಂಟು, ಒಂದು ಭಾಷಾ ಇತಿಹಾಸ ಅವುಗಳ ನಾನಾ ಘಟ್ಟಗಳಲ್ಲಿ ನಮ್ಮ ಜನರಿಗೆ ಬೇಕಾಗಿತ್ತು. ಪರದೇಶದವರಾದರೂ ಇವುಗಳಿಗಾಗಿ ಹಾತೊರೆಯುತ್ತಿದ್ದರು. ಅಧ್ಯಯನಾಭ್ಯಾಸಿಗಳಿಗೊಂದು ಪ್ರಮಾಣಗ್ರಂಥ ಲಭ್ಯವಾಗದೆ ಬಹಳ ನಿರಾಶೆಯಾಯಿತು. ಇಂತಹ ಗ್ರಂಥ ನಿರ್ಮಾಣವೇ ಇಲ್ಲಿ ಸಾಧ್ಯವಿಲ್ಲವೆಂದು ಸಹಜವಾಗಿ ಭಾವಿಸಿದರು. ಅಂಥವರಿಗೆ ಈಗ ಭ್ರಮನಿರಸನವಾದಂತಾಯಿತು; ಪ್ರೋತ್ಸಾಹಕ್ಕೆ ಕಾರಣವೆನಿಸಿತು.

ನಮ್ಮ ಭಾಷೆಗೆ ಸಂಬಂಧಪಟ್ಟಂತೆ ಎಷ್ಟೋ ವಿಚಾರಗಳು, ಸೂಚನೆಗಳಿವೆ. ಅವುಗಳನ್ನು ನಾನು ಶ್ರೀ. ಜಾನ್‌ಸನ್‌ರವರಿಗೆ ತಿಳಿಸಲು ಸ್ವಾತಂತ್ರ್ಯ ವಹಿಸುತ್ತಿದ್ದೆ. ಆದರೆ ಅವು ಶ್ರೀ. ಜಾನ್‌ಸನ್‌ರವರಿಗೂ ಹೊಳೆದಿವೆಯೆಂದು ನನ್ನ ಮನಸ್ಸಿಗೆ ಸಮಾಧಾನವುಂಟಾಗಿದೆ. ಒಂದೇ ಒಂದು ವಿಷಯವಿದೆ; ಅದಕ್ಕೆ ಮಾತ್ರ ಶ್ರೀ. ಜಾನ್‌ಸನ್‌ರವರು ಕೊಡಬೇಕಾದಷ್ಟು ಗಮನವನ್ನು ಬಹುಶಃ ಕೊಡಲಿಲ್ಲ.

ಅದು ನಮ್ಮ ಭಾಷೆಯ ಲಲಿತಾಂಗ; ಇದನ್ನು ಸೃಷ್ಟಿಸಿದವರೂ ಬೆಳೆಸಿದವರೂ ನಮ್ಮ ಮಹಿಳೆಯರು. ಅವರು ಪುಷ್ಕಳವಾಗಿ ಬರೆಯುತ್ತಾರೆ; ಆದರೆ ವಾಕ್ಸರಣಿಯನ್ನು ತಿದ್ದುವುದರಡೆಗೆ ಅಷ್ಟು ಗಮನ ಕೊಡುವುದಿಲ್ಲ. ಈ ನಾರಿಯರು ನಮ್ಮ ಭಾಷೆಗೆ 'ವಿಪರೀತ ಸುಖ', 'ಅತಿಭೋಗ'ದ ಶಬ್ದಾಲಂಕಾರಗಳನ್ನು ತೊಡಿಸಿ, ಅದನ್ನು ಸಂಪದ್ಯುಕ್ತವನ್ನಾಗಿ ಮಾಡಿದ್ದಾರೆ. ಇವುಗಳಾವುದನ್ನೂ ಮೆಚ್ಚಿ ಸೂಚನೆ ಮಾಡುವಷ್ಟು ಅವಿಚಾರವನ್ನೂ ಆತುರವನ್ನೂ ತೋರಿಸಬೇಕೆಂದು ನಾನು

ಸಲಹೆ ಮಾಡುವುದಿಲ್ಲ. ಅವರು ಸಂತೋಷದಿಂದ ಸಂಕೋಲೆ ಶಿಕ್ಷೆ ವಿಧಿಸುತ್ತಾರೆ; ಆದರೆ ಅವುಗಳನ್ನು ತೊಡಿಸಿಕೊಳ್ಳಲು ಬಹಳ ಅಸಮಾಧಾನ ತೋರಿಸಿ ಕಡೆಗೆ ಒಪ್ಪುತ್ತಾರೆ. ಈ ಸಂದರ್ಭದಲ್ಲಿ ಮಾತ್ರ ವ್ಯವಹರಿಸುವುದು ಬಹಳ ಕಷ್ಟ. ಉಭಯರ ಮಿತ್ರನೆನಿಸಿ ನಾನು ಮುಂದೆ ಯಾವದಾದರೊಂದು ಪತ್ರಿಕೆಯಲ್ಲಿ ಈ ವಿಚಾರಗಳನ್ನು ಹೊಂದಿಸುವ ವಿಧಾನ ಕುರಿತು ಬರೆಯುತ್ತೇನೆ.

## ಲಾರ್ಡ್ ಚೆಸ್ಟರ್‌ಫೀಲ್ಡಿಗೆ ಸ್ಯಾಮ್ಯುಲ್ ಜಾನ್‌ಸನ್ನನು ಬರೆದ ಪತ್ರ

ಪ್ರಭೋ !

'ವರ್ಲ್ಡ್' ಪತ್ರಿಕಾಧಿಪತಿಗಳು ಹೇಳಿದರು ಮನ್ನೆ, ತಾವು ನನ್ನ ನಿಘಂಟುವನ್ನು ಸಾರ್ವಜನಿಕರಿಗೆ ಶಿಫಾರಸುಮಾಡಿ ಎರಡು ಲೇಖನಗಳನ್ನು ಬರೆದಿರೆಂದು. ತಮ್ಮಂತಹವರಿಂದ 'ಸೈ' ಅನ್ನಿಸಿಕೊಳ್ಳುವುದೇ ಒಂದು ಗೌರವ. ದೊಡ್ಡವರ ಅನುಗ್ರಹಕ್ಕೆ ಪಾತ್ರನಾಗುವ ಅನುಭವ ಲೇಶವೂ ನನಗಿಲ್ಲವಾಗಿ ತಾವು ತೋರಿಸಿರುವ ಅನುಗ್ರಹವನ್ನು ಹೇಗೆ ಸ್ವೀಕರಿಸಬೇಕೋ, ಕೃತಜ್ಞತೆಯನ್ನು ಹೇಗೆ ವ್ಯಕ್ತಪಡಿಸಬೇಕೋ ನಾನರಿಯೆ.

ತಾವು ಕೊಂಚ ಪ್ರೋತ್ಸಾಹ ಕೊಟ್ಟಿರಿ; ತಮ್ಮ ಭೇಟಿಯನ್ನು ಮೊದಲನೆಯ ಸಾರಿ ತೆಗೆದುಕೊಂಡೆ. ಮಾನವ ಲೋಕದಂತೆ ನಾನೂ ತಮ್ಮ ಪುರಸ್ಕಾರದ ಇಂದ್ರಜಾಲದಿಂದ ಮೋಹಿತನಾಗಿ ಸೊರಗಿಹೋದೆ. ಜಗತ್ತೆಲ್ಲ ತಮ್ಮ ಕೃಪೆಯನ್ನು ಸಂಪಾದಿಸಲಿಕ್ಕಾಗಿ ಒದ್ದಾಡುತ್ತಿದೆಯಷ್ಟೆ; ಅಂತಹ ಕೃಪೆಯನ್ನು ಗಳಿಸುವ ಆಶೆಯನ್ನು ನಿರೋಧಿಸಲು ನೋಡಿದೆನಾದರೂ ಅದು ಸಾಧ್ಯವಾಗಲಿಲ್ಲ. ನಾನೂ ಬಾಗಿಲು ಕಾದೆ; ಏನು ಪ್ರಯೋಜನ? ಲೇಶವಾದರೂ ಪ್ರೋತ್ಸಾಹ ಸಿಗಲಿಲ್ಲ. ನನ್ನ ಸ್ವಾಭಿಮಾನ, ನನ್ನ ವಿನಯ ಬಾಗಿಲು ಕಾಯುವ ನೋವನ್ನು ಸಹಿಸಲಾರದಾಯಿತು. ಬಹಿರಂಗವಾಗಿ ಹಿಂದೊಮ್ಮೆ ತಮ್ಮನ್ನು ಸಮೀಪಿಸಿ, ವೃದ್ಧ ಸಭಾಮರ್ಯಾದೆಯರಿಯದ ವಿದ್ವಾಂಸನು ತೋರಿಸಬಹುದಾದ ಚಮತ್ಕಾರವನ್ನೆಲ್ಲ ತೋರಿಸಿ, ತಮ್ಮ ಮನಸ್ಸನ್ನು ಒಲಿಸುವ ಪ್ರಯತ್ನ ಮಾಡಿದೆ. ಮಾಡಬಹುದಾದುದನ್ನೆಲ್ಲ ಮಾಡಿದೆ. ಎಷ್ಟೇ ಸಣ್ಣವನಾಗಿರಲಿ, ಯಾವನು ತಾನೆ ತನ್ನ ಮರ್ಯಾದೆಯನ್ನೆಲ್ಲ ಕಳೆದುಕೊಳ್ಳಲು ಸಿದ್ಧನಾದಾನು ?

ಏಳು ವರ್ಷಗಳುರುಳಿದವು ಮಹಾ ಪ್ರಭೋ! ತಮ್ಮ ಹೊರ ಕೋಣೆಗಳ ಬಳಿ ನಿಂತೆ; 'ನೀನಾವೂರು ದಾಸಯ್ಯ' ಎಂದು ಕೇಳಿದವರಿಲ್ಲ. ಬಾಗಿಲ ಹತ್ತಿರ ಬಂದೆ; ಅರ್ಧಚಂದ್ರಪ್ರಯೋಗವಾಯಿತು. ಈ ಮಧ್ಯೆ ಮಹಾಕಷ್ಟವಾದರೂ ನನ್ನ ಕೆಲಸ ನಾನು ಮಾಡುತ್ತ ಹೋಗುತ್ತಿದ್ದೇನೆ. ನನ್ನ ಕಷ್ಟಗಳನ್ನು ಕುರಿತು ದೂರಿಕೊಂಡು ಫಲವಿಲ್ಲ. ಒಂದು ಚೂರು ಸಹಾಯವಿಲ್ಲದೆ, ಒಂದು ಪ್ರೋತ್ಸಾಹದ ಮಾತಿಲ್ಲದೆ, ಅನುಗ್ರಹದ ಮಂದಹಾಸದೊಂದು ಕಟಾಕ್ಷವಿಲ್ಲದೆ ಕೆಲಸವನ್ನು ಹೇಗೋ ಮುಗಿಸಿದೆ; ಪ್ರಕಟಿಸುವವರೆಗೂ ತಂದೆ. ಇಂತಹ ನಡತೆಯನ್ನು ನಾನು ನಿರೀಕ್ಷಿಸಲಿಲ್ಲ; ಏಕನ್ನುವಿರೋ ಇದುವರೆಗೆ ನಾನು ಯಾರ ಆಶ್ರಯವನ್ನು ಪಡೆದವನಲ್ಲ.

ವರ್ಜಿಲನ ಕುರುಬ ಕಟ್ಟಕಡೆಗೆ ಪ್ರೀತಿಯ ಪರಿಚಯ ಮಾಡಿಕೊಂಡ. ಕಲ್ಲುಗುಡ್ಡಗಳ ನಿವಾಸಿಯೊಬ್ಬನಲ್ಲಿ ಅದನ್ನು ಕಂಡುಕೊಂಡ.

ನೀರಿನಲ್ಲಿ ಬಿದ್ದು ಒದ್ದಾಡುತ್ತಿರುವವನ ಕಡೆಗೇ ನೋಡದೆ ಆ ಪ್ರಾಣಿ ಹೇಗೊ ದಡವನ್ನು ಸೇರಿದ ಮೇಲೆ ಅವನಿಗೆ ಉದಾರ ಸಹಾಯ ನೀಡಿ, ಅವನನ್ನು ಸಂಕೋಚಕ್ಕೆ ಗುರಿಮಾಡುವುದೇನೋ ಸಂರಕ್ಷಕರ ಲಕ್ಷಣ? ನನ್ನ ಶ್ರಮೆ ಕುರಿತು ತಾವು ಒಂದೊಳ್ಳೆ ಮಾತು ಹೇಳುವ ಔದಾರ್ಯ ತೋರಿಸಿದ್ದೀರಿ. ಅದು ಸಕಾಲದಲ್ಲಿ ಬಂದಿದ್ದರೆ, ವಿಶ್ವಾಸದಿಂದ ಕೂಡಿದ್ದರೆ, ಆ ಮಾತು ಬೇರೆಯಾಗಿತ್ತು. ಸಾವಕಾಶವಾಗಿ ಹೋಯಿತು; ನಾನು ಉದಾಸೀನನಾಗಿರುವೆನಾಗಿ ಅದರ ಸುಖಾನುಭವ ಮಾಡಲಾರೆ. ನಾನೇಕಾಂಗಿ ನಿವೇದಿಸಲಾರೆ. ಜಗತ್ತಿಗೆ ನನ್ನ ಪರಿಚಯವಾಗಿದೆಯಾಗಿ ತಮ್ಮ ಅನುಗ್ರಹ ಬೇಕಿಲ್ಲ. ಪ್ರಯೋಜನವೇನೂ ಪಡೆಯದೆ ಇರುವಾಗ ಉಪಕಾರ ಸ್ಮರಣೆ ಮಾಡದೆ ಹೋದರೆ ಅದನ್ನು ಕುಚೋದ್ಯವೆಂದಾಗಲಿ, ಒರಟುತನವೆಂದಾಗಲಿ ಭಾವಿಸಬಾರದು. ನಾನು ನನ್ನ ಪೋಷಕರ ಹಂಗಿಗೆ ಒಳಗಾಗಿದ್ದೂ ಆ ಅಂಶವನ್ನು ಯಾರೂ ತಿಳಿಯದಂತಿರಿಸಲು ಬಯಸುವೆನೆಂದು ತಿಳಿಯಬಾರದು. ದೇವರ ಕೃಪೆಯಿಂದ ಯಾರ ಸಹಾಯವೂ ಇಲ್ಲದೆ ಸ್ವಸಾಮರ್ಥ್ಯದಿಂದಲೇ ಕಾರ್ಯ ನಿರ್ವಹಿಸಿದ್ದೇನೆ.

ವಿದ್ಯಾಪಕ್ಷಪಾತಿಯೊಬ್ಬನಿಗೂ ಲೇಶವೂ ಹೊಣೆಗಾರನಾಗದೆ ಕೆಲಸವನ್ನು ಮುಗಿಸಿದೆನಾಗಿ ನನಗೇನೂ ನಿರಾಶೆಯಿಲ್ಲ. ನಾನೂ ಮಹದಾಶೆಯಿಟ್ಟುಕೊಂಡು, ಕನಸು ಕಾಣುತ್ತ, ಪರವಶನಾದ ಕಾಲವೂ ಒಂದಿತ್ತು; ಆದರೆ ಈಗ ಜ್ಞಾನೋದಯವಾಗಿದೆ.

ವಿಧೇಯನೂ, ದೀನನೂ ಆದ ಸ್ವಾಮಿಯ ಸೇವಕ,

ಸ್ಯಾಮ್ಯುಲ್ ಜಾನ್‌ಸನ್

## ಸರ್ ಮಿರ್ಜಾ ಅವರ ಪರ್ಯಾಯ ಪಾರಿತೋಷಕ ಸ್ಪರ್ಧೆ

ಬಸವನಗುಡಿಯಲ್ಲಿರುವ ಮಿತ್ರ ಸಂಘದ ಆಶ್ರಯದಲ್ಲಿ ಕಳೆದ ೩೧–೧–೪೩ನೆಯ ಭಾನುವಾರ ಸಂಜೆ, ಸರ್ ಮಿರ್ಜಾ ಇಸ್ಮಾಯಿಲರ ಪಾರಿತೋಷಕ ಚರ್ಚೆ ಪರಿಷನ್ಮಂದಿರದಲ್ಲಿ ನಡೆಯಿತು. ಶ್ರೀ. ಡಿ. ವಿ. ಗುಂಡಪ್ಪನವರು ಅಧ್ಯಕ್ಷರಾಗಿದ್ದರು.

"ಇಂಡಿಯಾ ದೇಶದ ಜನರು ಇಂಗ್ಲೀಷನ್ನು ಕಲಿಯದಿದ್ದರೆ ಏನೂ ನಷ್ಟವಿಲ್ಲ" ಎಂಬುದು ಚರ್ಚೆಯ ವಿಷಯ. ಕರ್ನಾಟಕದ ನಾನಾ ಭಾಗದ ಸಂಘಗಳಿಂದ ೨೬ ಮಂದಿ ಪ್ರತಿನಿಧಿಗಳು ಸ್ಪರ್ಧೆಯಲ್ಲಿ ಭಾಗವಹಿಸಿದ್ದರು.

ಶ್ರೀ. ಡಿ. ವಿ. ಗುಂಡಪ್ಪನವರು, ಶ್ರೀ. ಸಿ. ಕೆ. ವೆಂಕಟರಾಮಯ್ಯನವರು ಮತ್ತು ಶ್ರೀ. ವಿ. ಸೀತಾರಾಮಯ್ಯನವರು ಪರೀಕ್ಷಕರಾಗಿದ್ದರು. ಇವರು ತಮ್ಮ ಅಭಿಪ್ರಾಯವನ್ನು ನಿರ್ಧರಿಸಲು ಅರುಗಾದಾಗ ಶ್ರೀ. ಜಿ. ಪಿ. ರಾಜರತ್ನಂ ಅವರು 'ಪುರುಷ ಸರಸ್ವತಿ' ಮತ್ತು 'ರತ್ನನ ಪದಗಳು' ಎಂಬ ತಮ್ಮ ಕೃತಿಗಳಿಂದ ಕೆಲವು ಭಾಗಗಳನ್ನು ಓದಿ ಸಭಿಕರನ್ನು ಆನಂದಪಡಿಸಿದರು.

ಶ್ರೀ. ಡಿ. ವಿ. ಗುಂಡಪ್ಪನವರು ಸ್ಪರ್ಧೆಯ ಫಲಿತಾಂಶಗಳನ್ನು ಹೇಳಿ ಸ್ಪರ್ಧಿಗಳ ವಾದ ವಿವಾದಗಳ ರೀತಿಯನ್ನು ಶ್ಲಾಘಿಸಿದರು. ಮೈಸೂರಿನ ಸ್ವಾಸ್ತಿಕ ಸಾಹಿತ್ಯ ಸಂಘಕ್ಕೆ ಸರ್ ಮಿರ್ಜಾ ಇಸ್ಮಾಯಿಲರ ಪರ್ಯಾಯ ಪಾರಿತೋಷಕ ಸೇರಿತು. ದಿವಾನ್ ಬಹದ್ದೂರ್ ಕೆ. ರಾಮಸ್ವಾಮಿಯವರ ಪ್ರಥಮ ಬಹುಮಾನ ರಾಜಾ ಲಖಮುಗೌಡ ಲಾ ಕಾಲೇಜಿನ ಪ್ರತಿನಿಧಿ ಶ್ರೀ. ಎಸ್. ಎಸ್. ರಂಗನಾಥರಾವ್ ಅವರಿಗೂ, ರಾವ್‌ಬಹದ್ದೂರ್ ಶ್ರೀ. ಬಿ. ವೆಂಕಟೇಶಾಚಾರ್ಯರ ದ್ವಿತೀಯ ಬಹುಮಾನ ಮಹಾರಾಜರವರ ಕಾಲೇಜಿನ ಕರ್ನಾಟಕ ಸಂಘದ ಪ್ರತಿನಿಧಿ ಶ್ರೀ. ಸಿ. ಕೃಷ್ಣ ಅವರಿಗೂ, ಮಿತ್ರ ಸಂಘದ ಅಧ್ಯಕ್ಷರಾದ ಶ್ರೀ. ಬಿ. ವಾಸುದೇವ ಮೂರ್ತಿಯವರ ತೃತೀಯ ಬಹುಮಾನ ಸ್ವಾಸ್ತಿಕ ಸಾಹಿತ್ಯ ಸಂಘದ ಪ್ರತಿನಿಧಿ ಶ್ರೀ. ಅಬ್ದುಲ್ ಗಫಾರ್ ಅವರಿಗೂ ದೊರೆಯಿತು. ಬೆಂಗಳೂರು ಇಂಟರ್‌ಮೀಡಿಯೆಟ್ ಕಾಲೇಜಿನ ಪ್ರತಿನಿಧಿ ಶ್ರೀ. ಸಿ. ಕೆ. ಸ್ವಾಮಿನಾಥನ್ ಅವರು ವಿಶೇಷ ಪ್ರಶಂಸೆಗೆ ಪಾತ್ರರಾದರು.

ವಂದನ ಸಮರ್ಪಣೆಯಾದ ಮೇಲೆ ಶ್ರೀಮನ್ಮಹಾರಾಜರವರ ಜಯಘೋಷದೊಡನೆ ಚರ್ಚಾಕೂಟ ಮುಗಿಯಿತು.

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧೨
ಬಿಡಿ ಪತ್ರಿಕೆ: ೬ ಕಾಸು




ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈ ಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿ ಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೧೬

ಬೆಂಗಳೂರು: ಶುಕ್ರವಾರ, ಫೆಬ್ರುವರಿ ೧೨, ೧೯೪೩

### ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರಾದ

## ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್

### ಮಹಾಸ್ವಾಮಿಯವರ ದಿವ್ಯಸನ್ನಿಧಿಯಲ್ಲಿ

### ಶಿವಮೊಗ್ಗ ನಗರನಿವಾಸಿ ಹಸೂಡಿ ವೆಂಕಟಶಾಸ್ತ್ರಿ ಮತ್ತು ಶಿವಮೊಗ್ಗ ಕರ್ಣಾಟಕ ಸಂಘದ ಸದಸ್ಯರು ಅರ್ಪಿಸಿದ ಬಿನ್ನವತ್ತಳೆ

ಮಹಾಸ್ವಾಮಿ,

ಮಹಾಸ್ವಾಮಿಯವರ ಮಲೆನಾಡಿನ ಪ್ರವಾಸ ಸುಖವಾಗಿಯೂ ಆನಂದದಾಯಕವಾಗಿಯೂ ನಡೆಯಲೆಂದೂ, ಮಲೆನಾಡಿನ ಸೊಗಸಾದ ನೋಟಗಳು ಮಹಾಸ್ವಾಮಿಯವರಿಗೆ ಹೃದಯಂಗಮವಾಗಲೆಂದೂ ವಿನಯಪೂರ್ವಕವಾಗಿ ಹಾರೈಸಿ, ಮಹಾಪ್ರಭುಗಳವರಿಗೆ ಸುಖಾಗಮನವನ್ನು ಬಯಸಲು ಅಪ್ಪಣೆ ಬೇಡುತ್ತೇವೆ, ಮಹಾಸ್ವಾಮಿ.

ಮಹಾಸ್ವಾಮಿಯವರು ರಾಜ್ಯಸೂತ್ರವನ್ನು ವಹಿಸಿದ ಮೇಲೆ ಎರಡು ಬಾರಿ ಮಲೆನಾಡಿನಲ್ಲಿ ಪ್ರವಾಸ ಮಾಡಿರುವ ಅನುಗ್ರಹವನ್ನೂ, ಪ್ರಜಾವರ್ಗದ ಆಶೋತ್ತರಗಳು ಮತ್ತು ಕುಂದುಕೊರತೆಗಳನ್ನು ಸ್ವತಃ ದಿವ್ಯಚಿತ್ತಕ್ಕೆ ತಂದುಕೊಳ್ಳುತ್ತಿರುವ ಪ್ರಜಾವಾತ್ಸಲ್ಯವನ್ನೂ ಎಡೆಬಿಡದೆ ನೆನೆಯುತ್ತ ಪ್ರಭುಗಳವರ ದರ್ಶನದಿಂದ ಆನಂದಿಸಿ ಮಹಾಪ್ರಭುಗಳ ಅಭ್ಯುದಯವನ್ನು ಸದಾ ಹಾರೈಸುವವರಾಗಿರುತ್ತೇವೆ, ಮಹಾಸ್ವಾಮಿ.

ಮಹಾಸ್ವಾಮಿಯವರ ಪ್ರಜೆಗಳಲ್ಲಿ ಕನ್ನಡದ ಮೂಲಕ ಜ್ಞಾನಪ್ರಸಾರ ಮಾಡಬೇಕೆಂಬ ಉದಾತ್ತಧ್ಯೇಯದಿಂದ ಹನ್ನೆರಡು ವರ್ಷಗಳ ಹಿಂದೆ ಈ ನಮ್ಮ ಕರ್ಣಾಟಕ ಸಂಘ ಆರಂಭವಾಯಿತು. ಆ ಪವಿತ್ರ ಕಾರ್ಯದಲ್ಲಿ ಅದು ಜಿಲ್ಲೆಯ ಮುಖ್ಯ ನಗರವಾದ ಶಿವಮೊಗ್ಗದಲ್ಲಿಯೂ ಜಿಲ್ಲೆಯ ಇತರ ಪ್ರಾಂತಗಳಲ್ಲಿಯೂ, ವಿಶೇಷವಾಗಿ ಹಳ್ಳಿಗಳಲ್ಲಿಯೂ ಉಪನ್ಯಾಸಗಳನ್ನೇರ್ಪಡಿಸಿ, ವಿದ್ವಾಂಸರನ್ನು ಆಹ್ವಾನಿಸಿ, ಸಮ್ಮೇಳನಗಳನ್ನು ಕೂಡಿಸಿ, ಹಬ್ಬಗಳನ್ನು ಬೆಳಸಿ, ಪುಸ್ತಕಗಳನ್ನು ಪ್ರಕಟಿಸಿ, ಜನಾಂಗದ ಆತ್ಮವನ್ನು ಅರಳಿಸುವ ದಿವ್ಯ ಸಾಹಿತ್ಯದ ಹೊಸ ಬೆಳಕನ್ನು ಹರಡಿ, ತನ್ನ ಕೈಯಲ್ಲಾದಷ್ಟು ದುಡಿದಿದೆ. ಈ ಸಂಘದ ಕಾರ್ಯನಿರ್ವಾಹಕರ ಉಜ್ಜ್ವಲವಾದ ಕನ್ನಡ ನುಡಿಯ ಮೇಲಣ ಅಭಿಮಾನ, ಕನ್ನಡ ಜನತೆಯ ಮೇಲಿರುವ ಪ್ರೇಮ, ಕನ್ನಡ ನಾಡಿನ ಮುನ್ನಡೆಯನ್ನು ಕುರಿತ ಉತ್ಸಾಹ– ಇವುಗಳನ್ನು ಕಂಡು, ಪ್ರಜಾಸೇವೆಯೇ ರಾಜಸೇವೆಯೆಂದು ಅರಿತು, ನನ್ನ ಅಲ್ಪ ಸಹಾಯವನ್ನೂ ಕೂಡಿಸಬೇಕೆಂದು ಭಗವತ್ಪ್ರೇರಣೆಯಾಗಿ, ಸಂಘಕ್ಕೆ ನೆಲೆಯಾಗಿ ಈ ಮಂದಿರವನ್ನೂ ಮೂಲನಿಧಿಯಾಗಿ ಒಂದು ಸಾವಿರ ರೂಪಾಯಿಗಳನ್ನೂ ನನ್ನ ಕಾಣಿಕೆಯಾಗಿ ಅರ್ಪಿಸಿರುತ್ತೇನೆಂದು ದಿವ್ಯಸನ್ನಿಧಿಯಲ್ಲಿ ಅರಿಕೆ ಮಾಡಿಕೊಳ್ಳಲು ಅವಕಾಶ ಬೇಡುತ್ತೇನೆ, ಮಹಾಸ್ವಾಮಿ.

ಕರ್ಣಾಟಕ ರತ್ನಸಿಂಹಾಸನಾಧೀಶ್ವರರಾಗಿ, ಕರ್ಣಾಟಕ ಸಂಸ್ಕೃತಿ ವೈಭವಗಳಿಗೆ ಕೇಂದ್ರಸ್ಥಾನವಾಗಿ, ಕನ್ನಡಿಗರೆಲ್ಲರ ಭಕ್ತಿ ಗೌರವ ವಿಶ್ವಾಸಗಳಿಗೆ ಪಾತ್ರರಾಗಿ, ತಾವೂ ತಮ್ಮ ಹಿರಿಯರೂ ಮೊದಲಿಂದಲೂ ಕನ್ನಡಿಗರನ್ನೂ ಕನ್ನಡವನ್ನೂ ಕಾಪಾಡಿ ಬೆಳಸಿಕೊಂಡು ಬರುತ್ತಿರುವುದು ದೇಶದ ಭಾಗ್ಯೋದಯವೆಂದು ಭಾವಿಸುತ್ತೇವೆ. ಸಾವಿರದ ಒಂಬೈನೂರ ನಲವತ್ತರಲ್ಲಿ ನಡೆದ ಕನ್ನಡ ಸಾಹಿತ್ಯ ಪರಿಷತ್ತಿನ ಬೆಳ್ಳಿಯ ಹಬ್ಬದ ಉತ್ಸವದಲ್ಲಿ ತಮ್ಮ ಪೂಜ್ಯ ದೊಡ್ಡಪ್ಪನವರೊಡನೆ ತಾವೂ ಬಿಜಯಮಾಡಿಸಿ ಅಪ್ಪಣೆಕೊಟ್ಟ ಆಶೀರ್ವಾದ ವಾಕ್ಯಗಳು ಯಾವಾಗಲೂ ನಮ್ಮ ಕಿವಿಗಳಲ್ಲಿ ಮೊಳಗುತ್ತ ಮಾರ್ಗದರ್ಶಕವಾಗಿವೆ. ಮಹಾಸ್ವಾಮಿಯವರು ಪರಿಷತ್ತಿನ ಅಧ್ಯಕ್ಷರಾಗಿದ್ದು, ಈಗ ಮಹಾಪೋಷಕರಾಗಿ ದಯಪಾಲಿಸುತ್ತಿರುವ ಪ್ರೋತ್ಸಾಹ ಕನ್ನಡ ನುಡಿಗೆ ಮತ್ತು ಸಂಸ್ಕೃತಿಗೆ ಪ್ರಾಶಸ್ತ್ಯವನ್ನೂ ಬಲವನ್ನೂ ನೀಡುತ್ತಿದೆ. ಕರ್ಣಾಟಕ ಸಂಸ್ಕೃತಿಯ ಮತ್ತು ಸಾಹಿತ್ಯದ ಪ್ರಚಾರ ಕಾರ್ಯದಲ್ಲಿ ಒಂದು ಗಣ್ಯಸಂಸ್ಥೆಯಾಗಿ ಸೇವೆಸಲ್ಲಿಸಲು ಕಂಕಣಬದ್ಧವಾಗಿರುವ ಶಿವಮೊಗ್ಗದ ಕರ್ಣಾಟಕ ಸಂಘದ ಈ ನೂತನ ಭವನದ ಪ್ರಾರಂಭೋತ್ಸವವನ್ನು ಮಹಾಸ್ವಾಮಿಯವರು ನಡಸಿಕೊಡಬೇಕೆಂಬ ನಮ್ಮ ಹಂಬಲನ್ನು ಉದಾತ್ತಚಿತ್ತದಿಂದ ನೆರವೇರಿಸಿಕೊಟ್ಟು ಮಹಾಸ್ವಾಮಿಯವರು ಅನುಗ್ರಹಿಸಿರುವುದಕ್ಕಾಗಿ ನಾವು ಎಷ್ಟು ಕೃತಜ್ಞರಾಗಿದ್ದೇವೆಂಬುದನ್ನು ಅರುಹಲು ಶಕ್ತರಲ್ಲ, ಮಹಾಸ್ವಾಮಿ.

ಶ್ರೀ ಶಾರದಾಂಬೆಯ ಆರಾಧನೆಗಾಗಿ ನಿರ್ಮಿಸಿರುವ ಈ ಭವನವನ್ನು ಮಹಾಸ್ವಾಮಿಯವರು ತಮ್ಮ ಅಮೃತಹಸ್ತದಿಂದ ತೆರೆದು ನಮ್ಮ ಸಂಘದಿಂದ ಜ್ಞಾನದಾನ ಸಮಾರಂಭ ನಿರಂತರವಾಗಿ ನಡೆಯುತ್ತಿರಲೆಂದು ಆಶೀರ್ವದಿಸಬೇಕಾಗಿ ವಿನಯದಿಂದ ಪ್ರಾರ್ಥಿಸಿಕೊಳ್ಳುತ್ತೇವೆ, ಮಹಾಸ್ವಾಮಿ.

ಶ್ರೀ ಚಾಮುಂಡೇಶ್ವರೀ ಮಹಾತಾಯಿ ಮಹಾಸ್ವಾಮಿಯವರಿಗೂ ರಾಜಮನೆತನದವರಿಗೂ ದೀರ್ಘಾಯುರಾರೋಗ್ಯಭಾಗ್ಯಾದಿಗಳನ್ನು ಕರುಣಿಸಲೆಂದು ಅನನ್ಯಶ್ರದ್ಧೆಯಿಂದ ಪ್ರಾರ್ಥಿಸುತ್ತಿರುತ್ತೇವೆ, ಮಹಾಸ್ವಾಮಿ.

ಶಿವಮೊಗ್ಗ,
೧೧ನೆಯ ಫೆಬ್ರುವರಿ ೧೯೪೩.

ಇಂತು, ಮಹಾಸ್ವಾಮಿಯವರ
ರಾಜಭಕ್ತ ಪ್ರಜೆಗಳು,
**ಹಸೂಡಿ ವೆಂಕಟಶಾಸ್ತ್ರಿ**
**ಮತ್ತು ಶಿವಮೊಗ್ಗ ಕರ್ಣಾಟಕ**
**ಸಂಘದ ಸದಸ್ಯರು.**

# ಕನ್ನಡ ನುಡಿ

**ಶುಕ್ರವಾರ, ಫೆಬ್ರುವರಿ ೧೨, ೧೯೪೩**

## ಅಖಿಲ ಭಾರತ ಕಲಾ ಸಾಹಿತ್ಯ ಪರಿಷತ್ತು

ಭರತಖಂಡದ ಎಲ್ಲ ಜನಕ್ಕೂ, ಎಲ್ಲ ಪ್ರಾಂತಗಳಿಗೂ, ಎಲ್ಲ ಪ್ರಾಂತ ಭಾಷೆಗಳಿಗೂ, ಎಲ್ಲ ಬಗೆಯ ಕಲಾ ವಿದ್ಯೆಗಳಿಗೂ ಅನ್ವಯಿಸುವಂತಹ ಒಂದು ಕೇಂದ್ರ ಸಂಸ್ಥೆ ಏರ್ಪಡಬೇಕಾದದ್ದು ಅಗತ್ಯವೆಂಬ ಅಭಿಪ್ರಾಯ ಈಗ ಕೆಲವು ಕಾಲದಿಂದ ವ್ಯಕ್ತಪಡುತ್ತಿದೆ. ಹಲವು ಮಂದಿ ದೇಶಾಭಿಮಾನಿಗಳು ಈ ಸೂಚನೆಯನ್ನು ಎತ್ತಿಹಿಡಿದು ಸಹಾನುಭೂತಿ ತೋರಿದ್ದಾರೆ. ಎಲ್ಲ ದೇಶ ಭಾಷೆಗಳ ಸಾಹಿತಿಗಳಿಗೂ ಅವಕಾಶವಿರುವ ಇಂಡಿಯದ ಪಿ. ಇ. ಎನ್. ಸಂಸ್ಥೆ ಈ ಹಿಂದೆಯೇ ತನ್ನ (ಪಿ. ಇ. ಎನ್) ಪತ್ರಿಕೆಯಲ್ಲಿ ಈ ವಿಷಯವನ್ನು ಸಮರ್ಥಿಸಿ ಪ್ರಸ್ತಾವಿಸಿದೆ. ಈಚೆಗೆ, ಶ್ರೀಯುತ ಕುನ್‌ಹನ್‌ರಾಜ ಎಂಬವರು ಅದೇ ಪತ್ರಿಕೆಯಲ್ಲಿ ಇಂತಹ ಸಂಸ್ಥೆಯ ಆವಶ್ಯಕತೆಯನ್ನು ಒತ್ತಿ ಹೇಳಿ, ಹಲವರ ಹಂಬಲನ್ನು ಬಿಂಬಿಸಿದ್ದಾರೆ. ಅವರ ವಾದದ ಸಾರ ಸಂಗ್ರಹ ಇದು :

"ಭಾರತ ರಾಷ್ಟ್ರೀಯ ಸಭೆಯೊಂದೇ ಬಹುಶಃ ಮೊತ್ತಮೊದಲನೆಯ ಅಖಿಲ ಭಾರತ ಸಂಸ್ಥೆ. ಇದರ ಅಂಗವಾಗಿ ವರ್ಷವರ್ಷವೂ ನಡೆಯುತ್ತಿದ್ದ ಸಮ್ಮೇಳನಗಳ ಗುರಿ ಪ್ರಮುಖವಾಗಿ ರಾಜಕೀಯ ಪ್ರಶ್ನೆಗೆ ಸಂಬಂಧಪಟ್ಟದ್ದು. ರಾಷ್ಟ್ರಿಯ ವಿದ್ಯಾಭ್ಯಾಸ, ರಾಷ್ಟ್ರ ಭಾಷೆ, ರಾಷ್ಟ್ರೀಯ ಪೋಷಾಕು, ರಾಷ್ಟ್ರ ಧ್ವಜ– ಹೀಗೆ 'ರಾಷ್ಟ್ರ'ಕ್ಕೆ ಸಂಬಂಧಪಟ್ಟ ಯಾವುದನ್ನೇ ತೆಗೆದುಕೊಳ್ಳಲಿ, ಅದರ ರಂಗು ರಾಜಕೀಯ. ರಾಜಕೀಯ ಸ್ವಾತಂತ್ರ್ಯ, ಆರ್ಥಿಕ ಸಂಪತ್ತು, ಯುದ್ಧೋತ್ಸುಕತೆ– ಇವೆಲ್ಲವನ್ನೂ ನಮ್ಮ ದೇಶ ಕಳೆದುಕೊಂಡಿದೆ, ದಿಟ; ಆದರೆ, ಇಂಡಿಯ ನಿಜವಾಗಿ ಕಳೆದುಕೊಂಡಿರತಕ್ಕದ್ದೆಂದರೆ, ಆದರ್ಶ – ಧರ್ಮ, ಕುಲ, ಜಾತಿ, ಪಂಗಡ, ಪಂಥ ಎಂಬ ಎಲ್ಲ ಭೇದಗಳನ್ನೂ ಮರಸಿ ಎಲ್ಲರಲ್ಲೂ ಒಂದೇ ಭಾವ, ಒಂದೇ ಭಕ್ತಿ ನೆಲಸುವಂತೆ ಮಾಡಬಲ್ಲ ಆ ಆದರ್ಶ. ಆಗಿಂದಾಗ್ಗೆ ನಮ್ಮ ದೇಶ ಪರಕೀಯರ ಆಕ್ರಮಣಕ್ಕೆ ಒಳಗಾಗುತ್ತ ಬಂದಿದೆಯಾದರೂ, ಹಿಂದೆಲ್ಲ ಇಂಡಿಯದ ಆಳಿಕೆ ಇಂಡಿಯದಲ್ಲೇ ಇತ್ತು. ರಾಜ್ಯಾಡಳಿತ ಮಾತ್ರವಲ್ಲದೆ ತಮ್ಮ ಕಲೆ, ಸಂಸ್ಕೃತಿ, ದರ್ಶನ ಮೊದಲಾದ ರಾಷ್ಟ್ರೀಯ ಜೀವನದ ನಾನಾ ಶಾಖೆಗಳನ್ನು ಅಬಾಧಿತವಾಗಿ ಬೆಳಸಿಕೊಳ್ಳಲು ಭಾರತೀಯರಿಗೆ ಸಂಪೂರ್ಣ ಅವಕಾಶವಿತ್ತು. ದೆಹಲಿಯ ಚಕ್ರವರ್ತಿಗಳಿಗೆ ಅತ್ತ ರಾಜಪೂತ ವೀರರು ಗೆಲವು ತಂದು ಕೊಡುತ್ತಿದ್ದರೆ, ಇತ್ತ ಹಿಂದೂಗಳು ರಾಜ್ಯಾಡಳಿತಕ್ಕೆ ನೆರವಾಗಿ ದೇಶದ ಶಾಂತಿ ಸುಭಿಕ್ಷಗಳನ್ನು ಕಾಯುತ್ತಿದ್ದರು; ಆದರೂ ಕವಿಗಳನ್ನೂ ತಾತ್ತ್ವಿಕರನ್ನೂ ವಿದ್ವಾಂಸರನ್ನೂ ಉಪೇಕ್ಷಿಸಿರಲಿಲ್ಲ; ರಾಜಾಸ್ಥಾನದಲ್ಲಿ ಅವರಿಗೆ ಮನ್ನಣೆಯಿತ್ತು. ಚಕ್ರವರ್ತಿಗಳು ತಮ್ಮ ಭಾಷೆಯನ್ನು ಪೋಷಿಸಿ ನಾಡಿನ ಭಾಷೆಯನ್ನು ಕಡೆಗಣಿಸಲಿಲ್ಲ. ಪಾರಸಿ ಉರ್ದು ಭಾಷೆಗಳು ಸಂಸ್ಕೃತವನ್ನು ಮೂಲೆಗೆ ಹಾಕದೆ, ಮೂರೂ ಒಂದು ತವರಿನ ಅಕ್ಕತಂಗಿಯರಂತೆ ಬೆಳೆಯುತ್ತ ಬಂದುವು. ಆದರೆ, ಇಂಡಿಯದ ಆಡಳಿತದ ಅಧಿಕಾರ ಸ್ಥಾನವನ್ನು ಈ ದೇಶದಿಂದ ಹೊರಕ್ಕೆ ಬದಲಾಯಿಸಿದಾಗ ಪರಿಸ್ಥಿತಿ ಮಾರ್ಪಾಡಾಯಿತು. ಆಡಳಿತದ ಸ್ಥಾನ ಎಲ್ಲಿ ನೆಲಸಿತೋ ಅಲ್ಲಿಯ ಭಾಷೆ ಸಾಹಿತ್ಯಗಳು ಈ ದೇಶದ ಭಾಷೆ ಸಾಹಿತ್ಯಗಳ ಸ್ಥಾನಾಕ್ರಮಣ ಮಾಡಿದವು. ವ್ಯತ್ಯಸ್ತ ಪರಿಸ್ಥಿತಿಯಲ್ಲಿ, ಪ್ರೌಢ ವಿದ್ಯಾಭ್ಯಾಸ ಕ್ರಮದಲ್ಲಿ ಸಂಸ್ಕೃತಕ್ಕೂ ಇತರ ದೇಶ ಭಾಷೆಗಳಿಗೂ ಉಳಿದ ವ್ಯಾಸಂಗ ವಿಷಯಗಳಿಗೆ ಸರಿಸಮನಾದ ಮನ್ನಣೆಯ ಸ್ಥಾನ ದೊರಕದೆ ಹೋಯಿತು. ತರುಣನೊಬ್ಬನು ಯಾವ ವಿಷಯದಲ್ಲಾದರೂ ನಿಷ್ಣಾತನಾಗಬೇಕೆಂದರೆ ತನ್ನ ದೇಶ ಬಿಟ್ಟು ಹೊರಗೆ ಕಲಿಯಬೇಕಾದ ದುಃಸ್ಥಿತಿ ಒದಗಿತು. ಹೀಗಾಗಿ, ನಮ್ಮ ದೇಶಕ್ಕೆ ಆಗಿರುವ ನಿಜವಾದ ನಷ್ಟ ಸಂಸ್ಕೃತಿಯದು, ಸಾಹಿತ್ಯದ್ದು: ರಾಜಕೀಯ ನಷ್ಟ ಮೊತ್ತದಲ್ಲಿ ಅಪಾರ, ಗಾಡಿತುಂಬ, ಆದರೆ ಬರಿಯ ಹುಲ್ಲು; ಸಾಂಸ್ಕೃತಿಕ ನಷ್ಟ ಅಲ್ಪ ಪ್ರಮಾಣದ್ದು, ಕಿಸೆಯಲ್ಲಿ ಹಾಕಿಕೊಳ್ಳಬಹುದಾದ್ದು, ಆದರೆ ಅಮೂಲ್ಯ ವಜ್ರ. ಈಗ ನಾವು ಯಾವುದಕ್ಕಾಗಿ ಮೊದಲು ಶ್ರಮಿಸಬೇಕು ಎಂಬುದು ದೊಡ್ಡ ಪ್ರಶ್ನೆ. ರಾಜಕೀಯ ಸ್ವಾತಂತ್ರ್ಯ ಲಾಭವಾದರೆ ಕಳೆದುಹೋದ ಸಾಂಸ್ಕೃತಿಕ ಸಂಪತ್ತು ತಾನಾಗಿ ಹಿಂದಿರುಗುವುದೆಂಬ ಭಾವನೆ ಸಾಮಾನ್ಯವಾಗಿರುವಂತೆ ಕಾಣುತ್ತದೆ. ಆದ್ದರಿಂದ ಆ ದಿಸೆಯಲ್ಲಿ ಅತಿಶಯ ಪ್ರಯತ್ನ ನಡೆಯುತ್ತಿದೆ. ನಮ್ಮ ಪ್ರಯತ್ನದ ಬಲವೆಲ್ಲವನ್ನೂ ಆ ಕಡೆಯಿಂದ ಈ ಕಡೆಗೆ ತಿರುಗಿಸಿದರೆ, ನಮ್ಮ ನಷ್ಟ ಸಾಂಸ್ಕೃತಿಕ ಸಂಪತ್ತು ನಮಗೆ ಮರಳಿ ಲಭಿಸುತ್ತದೆ. ಇದಕ್ಕಾಗಿ, ಎಂದರೆ ಭಾರತದ ಸಮಾನ ಸಾಂಸ್ಕೃತಿಕ ಸಂಪತ್ತಿನ ಸಮಸ್ಯೆಯ ಭಾರವನ್ನು ಹೊತ್ತು ನಿರ್ವಹಿಸುವುದಕ್ಕಾಗಿ, ಒಂದು ಅಖಿಲ ಭಾರತ ಸಂಸ್ಥೆ ಆವಶ್ಯಕ.

"ಭಾರತದ ಬೇರೆ ಬೇರೆ ಸಂಪದ್ಯುಕ್ತ ಸಾಹಿತ್ಯಗಳು ನಾಗರಿಕ ಮಾನವನ ಬುದ್ಧಿ–ಭಾವ ಸಂಬಂಧವಾದ ಅಪೇಕ್ಷೆಗಳನ್ನು ಪೂರೈಸುವಂತೆ ಯೋಜಿಸಬೇಕು; ಭಾರತೀಯ ವಿಶ್ವವಿದ್ಯಾನಿಲಯಗಳಲ್ಲಿ ದೊರೆಯುವ ಶಿಕ್ಷಣ ಎಲ್ಲ ಬಗೆಯಲ್ಲೂ ಅತ್ಯುಚ್ಚ ತೆರದ್ದಾಗಬೇಕು; ಭಾರತೀಯ ಸಂಸ್ಥೆಯೊಂದು ಒಬ್ಬನ ವಿದ್ವತ್ತನ್ನು ಮೆಚ್ಚಿ, ಹಾಗೆ ಮೆಚ್ಚಿದ ಕುರುಹಾಗಿ ಬಹುಮಾನ ಮಾಡಿತೆಂದರೆ, ಅದು ಇಡಿಯ ರಾಷ್ಟ್ರದ ಬಹುಮಾನವೆಂಬ ಪರಿಗಣನೆಗೆ ಪಾತ್ರವಾಗುವಂತಾಗಬೇಕು; ಅಂತಹ ಸಂಸ್ಥೆಯೊಂದರ ಮೂಲಕ ಭಾರತೀಯ ಜನಾಂಗ ತೋರುವ ಮನ್ನಣೆಯನ್ನು ಪ್ರಪಂಚದ ಯಾವುದೇ ನಾಡಿನ ವಿದ್ವಾಂಸನಾಗಲಿ ಬಯಸುವಂತಾಗಬೇಕು.

"ಹೊಟ್ಟೆ ಹೊರೆಯುವುದಾಗಲಿ ವೋಟು ಕೊಡುವ ಹಕ್ಕಾಗಲಿ ಜನಾಂಗವೆಲ್ಲವನ್ನೂ ಕಾರ್ಯಪ್ರವೃತ್ತವನ್ನಾಗಿ ಮಾಡಬಲ್ಲ ಆದರ್ಶವಾಗಲಾರದು. ನಾವು ಬದುಕಿರುವುದು ಗೌರವಕ್ಕಾಗಿ, ಮಡಿಯುವುದು ಗೌರವಕ್ಕಾಗಿ. ಉರುಳಿ ಹೋಗಿರುವ ವಿದ್ಯೆ ಮತ್ತು ಸಂಸ್ಕೃತಿಗಳ ದೇವ ಮಂದಿರವನ್ನು ಮತ್ತೆ ಕಟ್ಟಿ, ಹಿಂದೆ ಅಲ್ಲಿ ಸಲ್ಲುತ್ತಿದ್ದ ಪೂಜೆಯನ್ನು ಮತ್ತೆ ಕೈಗೊಂಡು, ಶಾಶ್ವತ ಕೀರ್ತಿ ಗೌರವಗಳ ವರಪ್ರಸಾದವನ್ನು ನಮ್ಮ ಪೂರ್ವಿಕರಂತೆ ನಾವೂ ಪಡೆಯಬೇಕಾಗಿದೆ. ಅಂತಹ ದೇವಮಂದಿರವೆಂದರೆ ಅಖಿಲ ಭಾರತ ಕಲಾ ಸಾಹಿತ್ಯ ಪರಿಷತ್ತು."

ಮೇಲ್ಕಂಡ ಆಶಯಕ್ಕೆ ನಮ್ಮ ಹೃತ್ಪೂರ್ವಕವಾದ ಸಹಾನುಭೂತಿಯುಂಟು. ಪಿ. ಇ. ಎನ್. ಪತ್ರಿಕಾ ಸಂಪಾದಕರು ಹೇಳುವಂತೆ, ರಾಷ್ಟ್ರೀಯ ಚಳವಳಿಯಲ್ಲಿ ಸಾಂಸ್ಕೃತಿಕ ವಿಚಾರಕ್ಕೆ ಈಗಿಗಿಂತ ಹೆಚ್ಚಿನ ಪ್ರಾಧಾನ್ಯ ಸಲ್ಲಬೇಕು. ಸಾಹಿತ್ಯದ ಪೋಷಣೆ ಬೆಳವಣಿಗೆಗಳ ಕಡೆಗೆ ನಮ್ಮ ಮನಸ್ಸು ತಿರುಗಬೇಕು: ನಾಡ ನುಡಿಗಳಲ್ಲಿ ನಮ್ಮ ನಿಜವಾದ, ದೃಢವಾದ, ಅಕ್ಕರೆ ಇಡಬೇಕು. ಸಂಸ್ಕೃತಿ ಹೊಮ್ಮುವುದು, ಹರಡುವುದು, ಉಳಿಯುವುದು ಕಲೆ ಸಾಹಿತ್ಯಗಳ ಮೂಲಕ. ನಮ್ಮ ಘನವಾದ ಪ್ರಾಚೀನ ಸಂಸ್ಕೃತಿಯಲ್ಲೇ ನಮ್ಮ ತಾಯ್ಬೇರು; ಅದರಿಂದಲೇ ನಾವು ಬಲವನ್ನೂ, ಮಾರ್ಗದರ್ಶನವನ್ನೂ ಪಡೆಯಬೇಕಾಗಿದೆ, ನಮ್ಮ ಜೀವಂತ ಏಕತೆಯನ್ನು ಕಂಡುಕೊಳ್ಳಬೇಕಾಗಿದೆ. ಆದರೆ ಸದ್ಯಃಸ್ಥಿತಿಯಲ್ಲಿ ಅಂತಹ ಸಂಸ್ಥೆಯಿಂದ ನಮಗೆ ಈಗ ಅತ್ಯಗತ್ಯವಾಗಿರುವ ಐಕಮತ್ಯಕ್ಕಾಗಲಿ, ನಮ್ಮ ಸಂಸ್ಕೃತಿಯ ಮಟ್ಟವನ್ನೂ ಭಾರತದ ಗೌರವವನ್ನೂ ಹೆಚ್ಚಿಸುವುದಕ್ಕಾಗಲಿ ಹೆಚ್ಚು ಸಹಾಯವಾಗದೆಂದು ಪಿ.ಇ.ಎನ್. ಪತ್ರಿಕೆಯ ಸಂಪಾದಕರು ಅಭಿಪ್ರಾಯಪಡುತ್ತಾರೆ. ಅಂದರೆ ಅಂತಹ ಸಂಸ್ಥೆಯೇ ಬೇಕಿಲ್ಲವೆಂದಲ್ಲ. ಅದನ್ನು ಸ್ಥಾಪಿಸುವುದಾದರೆ, ಅದರ ಸ್ವರೂಪ ಹೇಗಿರಬೇಕೆಂಬ ಪ್ರಶ್ನೆ ಏಳುತ್ತದೆ. ಈ ಸಂಬಂಧದಲ್ಲಿ ಅವರು ಮಾಡಿರುವ ಸಲಹೆ ಸೂಚನೆಗಳು ಗಮನಾರ್ಹವಾಗಿವೆ :

(೧) ನಾವು ಯಾರನ್ನು ಸಾಂಸ್ಕೃತಿಕ ಮುಂದಾಳುಗಳೆಂದು ಒಪ್ಪಿದ್ದೇವೆಯೊ ಅಂತಹ ಸರ್ವಮತ ಪಂಗಡಗಳ ಪ್ರತಿನಿಧಿಗಳಿಂದಲೇ ಕಾರ್ಯಪ್ರಯತ್ನ ಪ್ರಾರಂಭ

ವಾಗಬೇಕು; ಇದು ಸ್ವತಂತ್ರ ಭಾರತದಲ್ಲಾದರೆ ಮೇಲು; ಏಕೆಂದರೆ, ಸದಸ್ಯತ್ವಕ್ಕೆ ಯಾವ ಬಗೆಯ ಪರಾಶ್ರಯ ಭಾವದ ಕಳಂಕವೂ ಅಂಟಿಕೊಂಡಿರಕೂಡದು.

(೨) ಈ ಯೋಜನೆಯಲ್ಲಿ, ಸಾಹಿತಿಗಳಾಗ ಬಯಸುವವರಿಗೆ ಸಲಹೆ ಕೊಡುವುದರಿಂದ ಮೊದಲಾಗಿ ಬಹುಮಾನ ಹಂಚಿಕೆಯವರೆಗೆ, ಯಾವ ಬಗೆಯ ಬಿರುದು ಬಾವಲಿಗಳಂಥ ಮಾರಾಟದ ಅಲಂಕಾರವಸ್ತುಗಳಿಗೂ (Catch-penny trappings) ಅವಕಾಶವಿರತಕ್ಕದ್ದಲ್ಲ. ಸದಸ್ಯತ್ವ ದೊರೆತರೆ ಅದೇ ಅತ್ಯಂತ ಹೆಚ್ಚಿನ ಬಹುಮಾನ.

(೩) ಮತ, ಭಾಷೆ, ಪಂಗಡ ಮತ್ತು ಅಧಿಕಾರ – ಇವುಗಳ ಸಂಬಂಧವಾದ ಪಕ್ಷಪಾತಗಳಿಗೆ ಎಡೆಯಿರಕೂಡದು.

(೪) ಸಂಸ್ಕೃತಿಯ ತಿರುಳು ಮಾತ್ರ ಇರುವಂತೆ, ಸದಸ್ಯ ಸಂಖ್ಯೆಯನ್ನು ಪರಿಮಿತಗೊಳಿಸಬೇಕು.

(೫) ಸದಸ್ಯತ್ವಕ್ಕಾಗಿ ಅಪೇಕ್ಷೆ ಪತ್ರಗಳನ್ನು ಹಾಕಿಕೊಳ್ಳುವುದು ಸಂಸ್ಥೆಯ ಗೌರವಕ್ಕೆ ಕಡಮೆ. ಮೂಲ ಸದಸ್ಯರನ್ನು ಬಹು ಜೋಕೆಯಿಂದ ಆಯಬೇಕು. ನಾಡಿನ ಎಲ್ಲ ಭಾಗಗಳ ಅತ್ಯುಚ್ಚ ವಿದ್ಯಾ ಮತ್ತು ಸಾಂಸ್ಕೃತಿಕ ಸಂಸ್ಥೆಗಳ ಪ್ರತಿನಿಧಿಗಳನ್ನು ಆಯ್ಕೆಯ ಸಮಿತಿಯನ್ನಾಗಿ ನೇಮಿಸಬೇಕು. ಒಬ್ಬ ವ್ಯಕ್ತಿಯ ಸದಸ್ಯತ್ವದ ಅರ್ಹತೆಯ ಬಗ್ಗೆ ಅವರೆಲ್ಲರೂ ಸರ್ವಾನುಮತದಿಂದ ಒಪ್ಪಬೇಕು.

(೬) ಸದಸ್ಯತ್ವ ಆಜೀವವಾಗಿರತಕ್ಕದ್ದು; ಪರಿಷತ್ತು ಸ್ವಸ್ಥಿರೀಕಾರಿಯಾಗಿರಬೇಕು (Self-perpetuating). ತೆರಪಾದ ಸ್ಥಾನಗಳನ್ನು ಪರಿಷತ್ತಿನ ಸದಸ್ಯರು ಸ್ವತಂತ್ರ ಆಯ್ಕೆಯಿಂದ ಭರತಿ ಮಾಡತಕ್ಕದ್ದು. ಗೊತ್ತಾದ ಸಂಖ್ಯೆಯ ಸದಸ್ಯರು ವಿರೋಧ ಸೂಚಿಸಿದರೆ, ಕೂಡಲೆ ತಿರಸ್ಕಾರವಾಗತಕ್ಕದ್ದು.

ಮೇಲಿನವು ಸಲಹೆ ಸೂಚನೆಗಳು ಮಾತ್ರ. ಇವೇ ಕಡೆಯ ಮಾತೆಂದು ಯಾರು ಭಾವಿಸಬೇಕಾಗಿಲ್ಲ; ಅವರೂ ಹಾಗೆ ತಿಳಿದಿಲ್ಲ. ಈ ವಿಷಯವಾಗಿ ಎಲ್ಲರೂ ಪರ್ಯಾಲೋಚನೆ ಮಾಡಬೇಕಾಗಿದೆ. ಇಂತಹ ಸಂಸ್ಥೆಯ ರೂಪಣಕಾರ್ಯದಲ್ಲಿ ಕನ್ನಡಿಗರೂ ಭಾಗವಹಿಸಬೇಕಾದ್ದರಿಂದ ಕನ್ನಡಿಗರು ಈ ಬಗ್ಗೆ ದೀರ್ಘವಾಗಿ ಆಲೋಚನೆ ಮಾಡಿ, ಸಂದರ್ಭ ವೊದಗಿದಾಗ ತಮ್ಮ ಅಮೂಲ್ಯ ಸಲಹೆಗಳನ್ನು ಕೊಡಬಹುದಾಗಿದೆ. ಈ ಸಂಸ್ಥೆಯಲ್ಲಿ "ಸದಸ್ಯತ್ವ ದೊರೆತರೆ ಅದೇ ಅತ್ಯಂತ ಹೆಚ್ಚಿನ ಸನ್ಮಾನ" ಎಂಬ ಮಾತಿನಿಂದ ಅದರ ಘನತೆ ಗೌರವ ಎಷ್ಟರಮಟ್ಟಿಗೆ ಇರಬೇಕೆಂಬುದನ್ನು ಊಹಿಸಿಕೊಳ್ಳಬಹುದು. ಪಾಶ್ಚಾತ್ಯ ದೇಶಗಳಲ್ಲಿ ಇಂತಹ ಸಂಸ್ಥೆಗಳು ಇವೆ. ನಮ್ಮ ನಾಡಿನ ಪುಣ್ಯದಿಂದ ಅಂತಹ ಸಂಸ್ಥೆ ಇಲ್ಲಿಯೂ ಹುಟ್ಟಿ, ನಾಡಿನ ಜ್ಯೋತಿಗಳು ಅಲ್ಲಿ ನಾಡತಾಯ ಸೇವೆ ಮಾಡಲಿ, ನಾಡು ಬೆಳಗಲಿ!

---

## ಕನ್ನಡ ಸಂಶೋಧನ ಸಂಸ್ಥೆಯ ಉಪನ್ಯಾಸ ಮಾಲೆ

ಕನ್ನಡ ಸಂಶೋಧನ ಸಂಸ್ಥೆಯ ಪರವಾಗಿ ಕಳೆದ ಜನವರಿ ೨೮, ೨೯ ಮತ್ತು ೩೦ನೆಯ ದಿವಸಗಳಲ್ಲಿ ಉಪನ್ಯಾಸ ಮಾಲೆಯನ್ನು ಏರ್ಪಡಿಸಲಾಯಿತು. ಉಸ್ಮಾನಿಯ ವಿಶ್ವವಿದ್ಯಾನಿಲಯದ ಕನ್ನಡ ಮುಖ್ಯಾಧ್ಯಾಪಕರಾದ ಶ್ರೀಮಾನ್ ಭೀಮಸೇನರಾವ್, ಎಂ.ಎ. ಇವರು, ಮುಂಬಯಿ ಇಲಾಖೆಯ ಕನ್ನಡ ಸಂಶೋಧನ ಡೈರೆಕ್ಟರಾದ ಶ್ರೀ. ಆರ್. ಎಸ್. ಪಂಚಮುಖಿ, ಎಂ.ಎ. ಇವರ ಅಧ್ಯಕ್ಷತೆಯಲ್ಲಿ (೧) 'ಶಬ್ದಮಣಿದರ್ಪಣದ ಪಾಠಾಂತರಗಳು' ಹಾಗೂ (೨) 'ಅನುಭವಾಮೃತವೂ ಹರಿಕಥಾಮೃತ ಸಾರವೂ' ಎಂಬ ಎರಡು ವಿಷಯಗಳ ಮೇಲೆ ಉಪನ್ಯಾಸ ಮಾಡಿದರು.

ಮೊದಲನೆಯ ವಿಷಯದ ಮೇಲೆ ಮಾತನಾಡುತ್ತ ಜ ಟ, ಕುಳ, ಕ್ಷಳ ಶ್ರುತಿ ಸಹ್ಯ ಸಂಧಿ, ಗಮಕ ಸಮಾಸ, ಸಮುಚಿತವಾಗಿ ಬರುವ ಸತಿಸಪ್ತಮಿ ಮೊದಲಾದ ವಿಷಯಗಳನ್ನು ಕೂಲಂಕಷವಾಗಿ ಚರ್ಚಿಸಿದರು. ಇದುವರೆಗೆ ಪ್ರಕಟವಾದ ಶಬ್ದಮಣಿದರ್ಪಣದ ಪ್ರತಿಗಳಲ್ಲಿ ಅರ್ಥವಾಗದೆ ಉಳಿದಿರುವ ಸೂತ್ರಗಳನ್ನು ತಮಗೆ ದೊರೆತ ಉಸ್ಮಾನಿಯಾ ಯೂನಿವರ್ಸಿಟಿಯಲ್ಲಿರುವ ಆ ಗ್ರಂಥದ ಹೊಸ ಹಸ್ತಲಿಖಿತ ಪ್ರತಿಯಿಂದ ಸಮರ್ಪಕವಾಗಿ ಅರ್ಥ ಮಾಡಿಕೊಳ್ಳಬಹುದೆಂದು ಆಮೂಲಾಗ್ರವಾಗಿ ಸೂತ್ರಗಳನ್ನು ವಿವೇಚಿಸಿ ತಿಳಿಸಿ ಹೇಳಿದರು.

ಎರಡನೆಯ ಉಪನ್ಯಾಸದಲ್ಲಿ ಅನುಭವಾಮೃತ ಹಾಗೂ ಹರಿಕಥಾಮೃತ ಸಾರಗಳಲ್ಲಿ ಅನುಕ್ರಮವಾಗಿ ಅದ್ವೈತ ಹಾಗೂ ದ್ವೈತ ತತ್ವ ಪ್ರತಿಪಾದನೆಯ ಭಿನ್ನದೃಷ್ಟಿಯಿದ್ದರೂ ಅವುಗಳ ಭಾಷೆಯ ಹೋಲಿಕೆ, ವಿಚಾರಗಳ ಏಕರೂಪತೆ ಎಲ್ಲೆಲ್ಲಿ ಇರುವವೆಂಬುದನ್ನು ಅನೇಕ ಉದಾಹರಣೆಗಳಿಂದ ತಿಳಿಸಿದರು.

ಅಧ್ಯಕ್ಷರು ಉಪನ್ಯಾಸಕರ ಜಾಣ್ಮೆಯನ್ನು ಹೊಗಳಿ, ಕನ್ನಡ ತಾಡ ಓಲೆಯ ಗ್ರಂಥಗಳನ್ನು ಸಂಗ್ರಹಿಸಿ ಸಂರಕ್ಷಿಸಿ ತನ್ಮೂಲಕ ಉಸ್ಮಾನಿಯಾ ಯೂನಿವರ್ಸಿಟಿಯವರು ಕನ್ನಡಕ್ಕೆ ಮಾಡಿದ ಮನ್ನಣೆ ಹಾಗೂ ಉಪಕಾರವು ಚಿರಸ್ಮರಣೀಯವಿದೆ ಎಂದು ಕೊಂಡಾಡಿದರು. ಕೊನೆಯದಾಗಿ ಆ ಗ್ರಂಥಗಳನ್ನು ಮುಖ್ಯವಾಗಿ ಶಬ್ದಮಣಿದರ್ಪಣದ ಹಸ್ತಪ್ರತಿಯನ್ನು ಪರಿಷ್ಕರಿಸಿ ಅಚ್ಚುಹಾಕಿಸಿ, ಉಸ್ಮಾನಿಯ ಯೂನಿವರ್ಸಿಟಿಯವರು ಕನ್ನಡದ ಏಳ್ಗೆಗೆ ಇನ್ನಿಷ್ಟು ನೆರವಾಗಬೇಕೆಂದು ಹಾರೈಸಿದರು.

## ಶಿವಮೊಗ್ಗ ಕರ್ಣಾಟಕ ಸಂಘದ ಕಟ್ಟಡದ ಆರಂಭೋತ್ಸವ

ಶ್ರೀಮನ್ ಮಹಾರಾಜರವರು ನಿನ್ನೆಯ ದಿನ ಪ್ರಾತಃಕಾಲ ಶಿವಮೊಗ್ಗಕ್ಕೆ ೧೦ ಗಂಟೆಗೆ ಭೇಟಿಯನ್ನು ದಯಪಾಲಿಸಿದರು. ಮಹಾಸ್ವಾಮಿಯವರು ಕರ್ಣಾಟಕ ಸಂಘದ ಕಟ್ಟಡವನ್ನು ಪ್ರಾರಂಭ ಮಾಡಿಕೊಡುವ ಮುನ್ನ ನಗರದ ಮುಖ್ಯವಾದ ಬೀದಿಗಳಲ್ಲಿ ಮೆರವಣಿಗೆ ಹೊರಟು ಪ್ರಜೆಗಳ ಆದರದ ಮತ್ತು ನಿಷ್ಠೆಯ ಸ್ವಾಗತವನ್ನು ಸ್ವೀಕರಿಸಿ ಕರ್ಣಾಟಕ ಸಂಘದ ಬಳಿಗೆ ೧೧ ಗಂಟೆಗೆ ದಯಮಾಡಿಸಿದರು. ಮಹಾಸ್ವಾಮಿಯವರು ರಥದಿಂದ ಇಳಿದಕೂಡಲೆ ಶ್ರೀ. ಹಸೂಡಿ ವೆಂಕಟಶಾಸ್ತ್ರಿಗಳವರು ತಮ್ಮ ಪರವಾಗಿಯೂ, ಶ್ರೀ. ವಿಷ್ಣುಭಟ್ಟರು ಸಂಘದ ಪರವಾಗಿಯೂ, ಶ್ರೀ. ಬಿ. ವೆಂಕೋಬರಾಯರು ಪರಿಷತ್ತಿನ ಪರವಾಗಿಯೂ, ಶ್ರೀ. ಟಿ. ವೆಂಕಟಸುಬ್ಬಾಶಾಸ್ತ್ರಿಗಳು ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಪ್ರಸಕ್ತ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರರ ಪರವಾಗಿಯೂ ಹಾರಗಳನ್ನು ಸಮರ್ಪಿಸಿದರು.

ಪ್ರಾರ್ಥನೆ, ಸ್ವಾಗತಗೀತೆ ಆದಮೇಲೆ ಶ್ರೀ. ಹಸೂಡಿ ವೆಂಕಟಶಾಸ್ತ್ರಿಗಳು ಬಿನ್ನವತ್ತಳೆಯನ್ನೂ ರಜತ ಕರಂಡವನ್ನೂ ಅರ್ಪಿಸಿದರು. (ಕರಂಡವನ್ನು ಬೆಂಗಳೂರಿನ ಶ್ರೀ ಲಲಿತ ಜ್ಯೂಯಲರಿ ಮಾರ್ಟಿನವರು ಬಹು ಅಂದವಾಗಿ ತಯಾರಿಸಿದ್ದರು). ಬಳಿಕ ಮಹಾಸ್ವಾಮಿಯವರು ಹೀಗೆ ಭಾಷಣವನ್ನು ಅಪ್ಪಣೆ ಕೊಡಿಸಿದರು:

"ಇಲ್ಲಿನ ಕರ್ಣಾಟಕ ಸಂಘದ ಕಟ್ಟಡದ ಪ್ರಾರಂಭೋತ್ಸವವನ್ನು ಈ ದಿನ ನೆರವೇರಿಸುವ ಅವಕಾಶ ಒದಗಿರುವುದು ನಮಗೆ ವಿಶೇಷ ಸಂತೋಷವನ್ನುಂಟುಮಾಡಿದೆ. ಕನ್ನಡ ಭಾಷೆಯ ಅಭಿವೃದ್ಧಿಗೂ, ಕನ್ನಡ ಸಂಸ್ಕೃತಿಯ ಪ್ರಸಾರಕ್ಕೂ ನಿಮ್ಮ ಸಂಘವು ಹಲವು ವಿಧಗಳಲ್ಲಿ ಮಾಡಿರುವ ಪ್ರಯತ್ನವನ್ನು ಬಿನ್ನವತ್ತಳೆಯಲ್ಲಿ ಸೂಚಿಸಿದ್ದೀರಿ. ಪುರಾತನಕಾಲದಿಂದಲೂ ಸಾಹಿತ್ಯ ಮತ್ತು ಕಲೆಗಳ ಬೆಳವಣಿಗೆಗೆ ಪ್ರಸಿದ್ಧವಾಗಿರುವ ಈ ಪ್ರಾಂತ್ಯದಲ್ಲಿ ಈ ರೀತಿಯ ಪ್ರಯತ್ನವು ನಡೆಯುವುದು ಸಹಜವೇ ಆಗಿದೆ. ಶ್ರೀ. ಹಸೂಡಿ ವೆಂಕಟಶಾಸ್ತ್ರಿಗಳು ಉದಾರವಾಗಿ ಧನಸಹಾಯಮಾಡಿ ಕಟ್ಟಿಸಿರುವ ಕಟ್ಟಡವು ಸಂಘದ ಕಾರ್ಯಕಲಾಪಗಳಿಗೆ ಸಹಕಾರಿಯಾಗಿ ಇಲ್ಲಿ ನಡೆಯುತ್ತಿರುವ ಭಾಷಾಸೇವೆಯ ಮುಖ್ಯಕೇಂದ್ರವಾಗಿ ಪರಿಣಮಿಸಲೆಂದು ಹಾರೈಸುತ್ತೇವೆ. ಕನ್ನಡದಲ್ಲಿ ಅಭಿಮಾನವೂ ಆಸಕ್ತಿಯೂ ವಿಶೇಷವಾಗಿರುವ ಈ ಜಿಲ್ಲೆಯಲ್ಲಿ ಸಾಹಿತ್ಯ ಸಂಸ್ಕೃತಿಗಳ ಅಭಿವೃದ್ಧಿಗೆ ಇನ್ನೂ ಹೆಚ್ಚುಹೆಚ್ಚಾಗಿ ಉತ್ತೇಜನ ದೊರೆಯುವುದೆಂದು ನಾವು ನಂಬಿದ್ದೇವೆ. ಭಕ್ತಿ ವಿಶ್ವಾಸಗಳನ್ನು ಸೂಚಿಸಿ ನಮಗೆ ಶುಭಾಶಯವನ್ನು ಕೋರಿರುವುದಕ್ಕಾಗಿ ನಿಮ್ಮನ್ನು ವಂದಿಸಿ, ಕರ್ಣಾಟಕ ಸಂಘದ ಕಟ್ಟಡದ ಪ್ರಾರಂಭೋತ್ಸವವನ್ನು ಸಂತೋಷದಿಂದ ನೆರವೇರಿಸುತ್ತೇವೆ."

ಅನಂತರ, ಮಹಾಸ್ವಾಮಿಯವರು ಸಂಘದ ಕಟ್ಟಡವನ್ನು ತೆರೆದು, ಒಳಕ್ಕೆ ಪ್ರವೇಶಮಾಡಿ, ಸಂಘದ ಯೋಗಕ್ಷೇಮವನ್ನು ವಿಚಾರಿಸಿ, ಕಟ್ಟಡ ಚೆಲುವಾಗಿದೆಯೆಂದು ಸಂತೋಷಿಸಿ, ಶ್ರೀ. ಹಸೂಡಿ ವೆಂಕಟಶಾಸ್ತ್ರಿಗಳು ಸಾಹಿತ್ಯ ಪರಿಷತ್ತಿಗೆ ತುಂಬಾ ಉಪಕಾರ ಮಾಡಿದ್ದಾರೆಂದು ಅಪ್ಪಣೆಕೊಡಿಸಿ, ಇವರು ಹಾಕಿಕೊಟ್ಟ ಮೇಲ್ಪಂಕ್ತಿಯನ್ನು ನಾಡಿನ ಇತರ ಧನಿಕರೂ ಅನುಸರಿಸಲೆಂದು ಹಾರೈಸಿದರು.

## ಪರಿಷತ್ತಿನ ಸುದ್ದಿ

### ಪರಿಷತ್ತಿನ ಸದಸ್ಯರ ಬೆಳವಣಿಗೆ

(ತಾ. ೪-೨-೪೩ ರಿಂದ ೧೧-೨-೪೩ರ ವರೆಗೆ)

**ಸಹಾಯಕ ಸದಸ್ಯರು (೧೦೦ ರೂ.) :** ೧. ಶ್ರೀ. ಎಚ್. ಸಿ. ಕೆ. ಭಟ್ಟ ಅವರು, ಅಸಿಸ್ಟೆಂಟ್ ಇಂಜಿನಿಯರು, ಹಿರೇಭಾಸ್ಕರ. (ಆಜೀವ ಸದಸ್ಯತ್ವದಿಂದ ಬದಲಾವಣೆ.) ೨. ಡಾಕ್ಟರ್ ಎಂ. ಶಿವರಾಮ್, ಮಲ್ಲೇಶ್ವರ, ಬೆಂಗಳೂರು.

**ಆಜೀವ ಸದಸ್ಯರು (೫೦ ರೂ.) :** ಶ್ರೀ. ಡಿ. ಆರ್. ದೇಶಪಾಂಡೆ ಅವರು, ವಕೀಲರು, ಶಿರಹಟ್ಟಿ, ಧಾರವಾಡ ಜಿಲ್ಲಾ.

**ಸಾಮಾನ್ಯ ಸದಸ್ಯರು (೬ ರೂ.) :** ಶ್ರೀ. ವಿ. ವಿ. ಕರ್ವೆ ಅವರು, ಎಲ್.ಸಿ.ಇ., ರಿಟೈರ್ಡ್ ಸೂಪರಿಂಟೆಂಡಿಂಗ್ ಇಂಜಿನಿಯರ್, ಬುಲ್‌ಟೆಂಪಲ್ ರಸ್ತೆ, ಬಸವನಗುಡಿ. ೨. ಶ್ರೀ. ಎಚ್. ನಂಜುಂಡಯ್ಯನವರು, ಬಿ.ಎ., ಬಿ.ಎಲ್., ರಿಟೈರ್ಡ್ ಡಿಸ್ಟ್ರಿಕ್ಟ್ ಮತ್ತು ಸೆಷನ್ಸ್ ಜಡ್ಜರು, ವಿಶ್ವೇಶ್ವರಪುರ, ಬೆಂಗಳೂರು.

**ಸಾಮಾನ್ಯ ಸದಸ್ಯರು (೩ ರೂ.) :** ಶ್ರೀ.ಗಳಾದ ೧. ಜಿ. ಎ. ನರಸಿಂಹಮೂರ್ತಿ ಅವರು, ಆರ್. ಎನ್. ನ್ಯೂಸ್ ಏಜನ್ಸಿ, ಬೆಂಗಳೂರು. ೨. ಜಿ. ಸುಬ್ಬರಾಯಲು ಅವರು, ೬, ಕುಂಬಾರ ಬೀದಿ, ಬೆಂಗಳೂರು (ದಂಡು). ೩. ಎಸ್. ವಿ. ರಾಜಾರಾಮ ಅಯ್ಯಂಗಾರ್, ಬಿ.ಎ. ಅವರು, ಬದನವಾಳ ಖಾದೀ ಕೇಂದ್ರ, ಬದನವಾಳ. ೪. ಪಿ. ಎಂ. ಬಸವರಾಜ್ ಅವರು, ೧-೩೪೩, ವಿಶ್ವೇಶ್ವರಪುರ.

**ಸಾಮಾನ್ಯ ಅಂಗಸಂಸ್ಥೆ (೬ ರೂ.) :** ಕರ್ಣಾಟಕ ಸಂಘ, ಕೊರಟಗೆರೆ.

---

**ಮೈಸೂರು ಪ್ರಾಂತ ಸಮಿತಿಯ** ಮೊದಲನಯ ಸಭೆ ತಾ. ೧೦-೨-೪೩ನೆಯ ಬುಧವಾರ ಸಂಜೆ ಶ್ರೀಮತಿ ಆರ್. ಕಲ್ಯಾಣಮ್ಮನವರ ಅಧ್ಯಕ್ಷತೆಯಲ್ಲಿ ನಡೆಯಿತು.

೧. ಅಧಿಕಾರಿಗಳ ಆಯ್ಕೆ : ಶ್ರೀ. ಸಿ.-ಕೆ. ವೆಂಕಟರಾಮಯ್ಯನವರು (ಅಧ್ಯಕ್ಷರು), ಶ್ರೀ. ಕೆ. ಆಂಬ್ರೋಸ್ ಆನಂದ ಅವರು (ಕಾರ್ಯದರ್ಶಿಗಳು), ಶ್ರೀ. ಜಿ. ಪಿ. ರಾಜರತ್ನಂ ಅವರು (ಕೋಶಾಧಿಕಾರಿಗಳು).

ಉಪಸಮಿತಿಗಳ ನೇಮಕ : (ಅ) ಉಪನ್ಯಾಸ ಸಮಿತಿ: ಶ್ರೀ. ಕೆ. ಎ. ಆನಂದ ಅವರು, ವ್ಯವಸ್ಥಾಪಕರು. (ಆ) ನಾಟಕ ಸಮಿತಿ: ಶ್ರೀ. ಎಸ್. ಮಂಜನಾಥ್ ಅವರು, ವ್ಯವಸ್ಥಾಪಕರು. (ಇ) ಸ್ಪರ್ಧೆಗಳ ಸಮಿತಿ: ಶ್ರೀ. ಜಿ.ಪಿ. ರಾಜರತ್ನಂ ಅವರು, ವ್ಯವಸ್ಥಾಪಕರು.

### ಮಂಗಳೂರು–ಕೊಡಗು ಪ್ರಾಂತ ಸಮಿತಿ

ಜನವರಿ ತಾ|| ೨೯ರಿಂದ ೩೧ರವರೆಗೆ ತ್ಯಾಗರಾಜ, ಪುರಂದರದಾಸ ಮತ್ತು ವಿವೇಕಾನಂದರ ಉತ್ಸವಗಳು ಜರುಗಿದುವು. ಶ್ರೀ. ಕೆ. ಪಿ. ಮುತ್ತಣ್ಣ, ಬಿ.ಎ., ಎಲ್.ಟಿ. ಅವರು ತ್ಯಾಗರಾಜರ ಜೀವನ ಚರಿತ್ರೆಯಮೇಲೆ ಉಪನ್ಯಾಸವಿತ್ತರು. ಚಿ|| ಕೆ. ಎಂ. ಚಂಗಪ್ಪನವರು ಮತ್ತು ಶ್ರೀ. ಶೇಷಾಚಾರ್ಯರು ತ್ಯಾಗರಾಜರ ಕೀರ್ತನೆಗಳನ್ನು ಸುಶ್ರಾವ್ಯವಾಗಿ ಹಾಡಿದರು. ಶ್ರೀ. ಬಿ. ಕೆ. ಸುಬ್ಬರಾಯರು ಪುರಂದರದಾಸರ ಕೀರ್ತನೆಯನ್ನು ಮಾಡಿದರು. ಸ್ವಾಮಿ ಪ್ರಣವೇಶಾನಂದಜಿಯವರು ವಿವೇಕಾನಂದರ ವಿಷಯ ಭಾಷಣವಿತ್ತರು.

ಫೆಬ್ರುವರಿ ತಾ|| ೧೩ರಲ್ಲಿ ಕುಮಾರವ್ಯಾಸ ಜಯಂತ್ಯುತ್ಸವವು ರಾವ್‌ಬಹದ್ದೂರ್ ಕೆ. ಟಿ. ಉತ್ತಪ್ಪ, ಬಿ.ಎ. ಅವರ ಅಧ್ಯಕ್ಷತೆಯಲ್ಲಿ ಜರುಗುವುದು. ವಿದ್ವಾನ್ ಕೆ. ಕೃಷ್ಣಮಾಚಾರ್ಯರ 'ಕುಮಾರವ್ಯಾಸ' ಎಂಬ ಭಾಷಣವೂ, ಶ್ರೀ. ಬಿ. ಕೆ. ಸುಬ್ಬರಾಯರ ಭಾರತ ವಾಚನವೂ, ಬಾಲಕರಿಂದ 'ಭೀಷ್ಮ' ಎಂಬ ಸಣ್ಣ ದೃಶ್ಯ ಪ್ರದರ್ಶನವೂ ನಡೆಯುವುವು.

## ಕನ್ನಡ ಸುದ್ದಿ

**ಬೆಂಗಳೂರು: ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘ**

ತಾ. ೮-೨-೪೨ರಲ್ಲಿ ಶ್ರೀ. ಟಿ. ಆರ್. ಜಯರಾಯರು ಕುಮಾರವ್ಯಾಸ ಭಾರತದಿಂದ ಕುಂತಿ – ಕರ್ಣ ಭಾಗವನ್ನು ಸುಶ್ರಾವ್ಯವಾಗಿ ಪಠಿಸಿದರು. ಅನಂತರ ಶ್ರೀ. ಸಿ. ಕೆ. ವೆಂಕಟರಾಮಯ್ಯನವರು 'ಕಾಳಿದಾಸನ ಪಾತ್ರ ರಚನಾ ಕೌಶಲ' ಎಂಬ ವಿಷಯವಾಗಿ ವಿಚಾರಪೂರ್ಣವಾದ ಭಾಷಣ ಮಾಡಿದರು.

ತಾ. ೧೧-೨-೪೨ರಲ್ಲಿ ಪ್ರೊಫೆಸರ್ ಕೆ. ವಿ. ಅಯ್ಯರ್ ಅವರು ಕರ್ನಾಟಕ ಸಂಘದ ಈ ವರ್ಷದ ಕಾರ್ಯಕಲಾಪಗಳ ಮುಗಿತಾಯ ಕಾರ್ಯಕ್ರಮವಾಗಿ ಶ್ರೀ. ಕೈಲಾಸಂ ಅವರ 'ಹುತ್ತದಲ್ಲಿ ಹುತ್ತ' ಎಂಬ ನಾಟಕವನ್ನು ವಾಚಿಸಿದರು.

**ರಾಯಿಚೂರು: ಕರ್ನಾಟಕ ಸಂಘ**

ಮೇಲ್ಕಂಡ ಸಂಘದ ಆಶ್ರಯದಲ್ಲಿ ದಿವಂಗತ ಜಿ. ಕೃಷ್ಣರಾಯರ ವ್ಯಾಖ್ಯಾನಮಾಲೆ ಫೆಬ್ರುವರಿ ೫–೬ನೆಯ ದಿನಗಳಲ್ಲಿ ನಡೆಯಿತು. ಬೆಂಗಳೂರಿನಿಂದ ಶ್ರೀ. ವಿ. ಸೀತಾರಾಮಯ್ಯನವರು ವ್ಯಾಖ್ಯಾನಕಾರರಾಗಿ ದಯಮಾಡಿ 'ಮಹಾಭಾರತದ ಶ್ರೀ ಕೃಷ್ಣ' ಎಂಬ ವಿಷಯವಾಗಿ ವಿಚಾರಪೂರ್ಣ ಭಾಷಣ ಮಾಡಿದರು.

ಶ್ರೀ. ಸೀತಾರಾಮಯ್ಯನವರು 'ಬಾಲಕರ ಬಿಡಾರ'ಕ್ಕೆ ಭೇಟಿಕೊಟ್ಟು, ಆ ಸಂಘದ ಕನ್ನಡದ ಸೇವೆಯನ್ನು ಮೆಚ್ಚಿ, ಸಂತೋಷವನ್ನು ವ್ಯಕ್ತಪಡಿಸಿದರು.

**ಬೆಳಗಾಂವಿ: ಲಿಂಗರಾಜ ಕಾಲೇಜು ಸಾಹಿತ್ಯ ಸಂಘ**

ಮೇಲ್ಕಂಡ ಸಂಘದ ಆಶ್ರಯದಲ್ಲಿ ಪ್ರೊ. ಆರ್. ವಿ. ಜಾಗಿರದಾರರು ಸಂಸ್ಕೃತ ಭಾಷಾಜ್ಞಾನದ ಆವಶ್ಯಕತೆಯನ್ನು ಕುರಿತು ೨-೨-೪೩ರಲ್ಲಿ ವಿಚಾರಪೂರ್ಣವಾದ ಭಾಷಣವನ್ನಿತ್ತರು. ಆರಂಭದಲ್ಲಿ ಭಾಷಣಕಾರರು ಸಂಸ್ಕೃತ 'ಮೃತಭಾಷೆ' ಎಂಬ ವಾದವನ್ನು ಸಕಾರಣವಾಗಿ ಅಲ್ಲಗಳೆದು, ಭಾರತೀಯ ದೇಶಭಾಷೆಗಳ ಮೇಲಾದ ಅದರ ಪ್ರಭಾವವನ್ನು ಎತ್ತಿತೋರಿಸಿ, ಅದು ಸಜೀವ ಭಾಷೆಯೆಂದು ಆಧಾರಪೂರ್ವಕ ಮನಗಾಣಿಸಿಕೊಟ್ಟರು. ವೇದಕಾಲದಿಂದ ಸಂಸ್ಕೃತ ಸಾಹಿತ್ಯದ ಸಿಂಹಾವಲೋಕನ ಮಾಡಿ, ಉಪನಿಷತ್ ಸಾಹಿತ್ಯದ ಮೇಲ್ಮೆಯನ್ನು ಹೊಗಳುತ್ತಾ, ಕಾಳಿದಾಸ ಭವಭೂತಾದಿ ಕವಿಕೃತಿಗಳ ಮಹತಿಯನ್ನು ವರ್ಣಿಸಿದರು. ಸಾಹಿತ್ಯ ಸಂಸ್ಕೃತಿ ತತ್ವಜ್ಞಾನಗಳ ದೃಷ್ಟಿಯಿಂದ, ಸಂಸ್ಕೃತ ಭಾಷಾ ಸಾಹಿತ್ಯಗಳ ಪರಿಚಯ ಇಂದು ಅತ್ಯಾವಶ್ಯವೆಂದು ಅಭಿಪ್ರಾಯಪಟ್ಟರು.

ಗೌರವ ಕಾರ್ಯದರ್ಶಿಗಳಾದ ಶ್ರೀಮಾನ್ ಎಸ್. ಪಿ. ಚಟ್ನಿಯವರು ಅತಿಥಿಗಳಿಗೆ ಪೂಮಾಲೆಯರ್ಪಿಸಿ, ಆಭಾರಮನ್ನಿಸಿದನಂತರ ಉಪಾಹಾರ, ಫೋಟೋದೊಂದಿಗೆ ಸಭಾಕಾರ್ಯ ಕೊನೆಗಂಡಿತು.

ಜನವರಿ ೨೦ನೆಯ ತಾರೀಖು ಬುಧವಾರ ದಿನ ನಾಟ್ಯರತ್ನ ಗುಬ್ಬಿ ವೀರಣ್ಣನವರು, ೩–೩೦ ಗಂಟೆಗೆ ಲಿಂಗರಾಜ ಕಾಲೇಜಿನ ಕರ್ನಾಟಕ ಸಂಘದಲ್ಲಿ, ಚಲನ ಚಿತ್ರದ ಚಿತ್ರರಂಗದಲ್ಲಿ ಪಡೆದ ಅನುಭವಗಳನ್ನು ಮನೋಹರವಾಗಿ ಹಾಸ್ಯಯುಕ್ತವಾಗಿ ಹೇಳಿ, ಕನ್ನಡ ಚಿತ್ರಪಟ ಈಗ ಯಾವ ಸ್ಥಿತಿಯಲ್ಲಿದೆ, ಅದರ ಎರಡು ತೊಡರುಗಳೆಷ್ಟು ಅದು ಮುಂದುವರಿದು ಕನ್ನಡನಾಡಿನ ಶಕ್ತಿಯ ಕೇಂದ್ರವಾಗುವ ಬಗೆ, ಅದರ ಉಚ್ಛ್ರಾಯ ಸ್ಥಿತಿಗೆ ಕನ್ನಡಿಗರು ಯಾವ ಭಾವನೆ ಇಟ್ಟುಕೊಳ್ಳಬೇಕು ಎಂಬುದಾಗಿ ಮನಮುಟ್ಟುವಂತೆ ಭಾಷಣ ಮಾಡಿದರು. ಕೊನೆಗೆ ಜೀವನ ನಾಟಕದಲ್ಲಿಯ ಕೆಲವು ಹಾಡುಗಳನ್ನು ಹೇಳಿ ಸಭಿಕರನ್ನು ನಗೆಗಡಲಲ್ಲಿ ತೇಲಾಡಿಸಿದರು.

೪–೩೦ ಗಂಟೆಗೆ ಕಿರಿಯರ ಬಳಗದವರು ನಾಟ್ಯರತ್ನ ಶ್ರೀ. ಗುಬ್ಬಿ ವೀರಣ್ಣನವರಿಗೆ ಸತ್ಕಾರಕೂಟವನ್ನು ಏರ್ಪಡಿಸಿದ್ದ ಪ್ರಿ. ಎಸ್.ಸಿ. ನಂದೀಮಠ, ಹಂಚಿನಾಳ ಮೊದಲಾದ ಗೃಹಸ್ಥರು ಸತ್ಕಾರಕೂಟಕ್ಕೆ ಆಗಮಿಸಿದ್ದರು. "ನಾಟ್ಯ ಪ್ರಪಂಚದಲ್ಲಿ ಚಿರವಾದ ಕೀರ್ತಿಗಳಿಸಿದ ಗುಬ್ಬಿ ವೀರಣ್ಣನವರು ಕನ್ನಡ ಚಿತ್ರಪಟ ಪ್ರಪಂಚದಲ್ಲಿ ವಿಶೇಷ ಕ್ರಾಂತಿಯನ್ನು ಮಾಡುವುದರಲ್ಲಿ ಸಂದೇಹವಿಲ್ಲವೆಂದೂ ವೀರಣ್ಣನವರು ಕನ್ನಡ ಚಿತ್ರಪಟಕ್ಕೆ ಭಾಗ್ಯವಿಧಾತರೆಂದೂ, ಕನ್ನಡಿಗರ ಹೆಮ್ಮೆ ಹುಮ್ಮಸಿಗಳ ಕುರುಹೆಂದೂ ಹೇಳಿ ಬಳಗದವರು ಅತಿಥಿಗಳಿಗೆ ಧನ್ಯವಾದಗಳನ್ನು ಸಮರ್ಪಿಸಿದರು.

೫–೩೦ ಗಂಟೆಗೆ ರಾಜಾ ಲಖಮನಗೌಡಾ ಲಾ ಕಾಲೇಜಿನಲ್ಲಿ ಕರ್ನಾಟಕ ಸಂಘದಲ್ಲಿ "ಕನ್ನಡ ಚಿತ್ರಪಟ ಮುಂದುವರಿವ ಉಪಾಯ, ಕನ್ನಡಿಗರ ಕರ್ತವ್ಯ, ಕನ್ನಡನಾಡಿಗೆ ಎಂಥ ಚಿತ್ರಗಳು ಆವಶ್ಯಕ ಎಂಬ ವಿಷಯಗಳನ್ನೊಳಗೊಂಡ ಬೋಧಪ್ರದ ಭಾಷಣ ಮಾಡಿದರು. ಈ ಕಾರ್ಯದರ್ಶಿಗಳು ಅತಿಥಿಗಳಿಗೆ ಹೂಮಾಲೆಯನ್ನು ಅರ್ಪಿಸಿ, ಅವರನ್ನು ಮನ್ನಿಸಿದರು.

೭೧೫—೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

# ಶ್ರೀ ಪುರಂದರದಾಸರ ಪರಿಚಯ*

(ಶ್ರೀ. ಎಂ. ವಿ. ಸೀತಾರಾಮಯ್ಯನವರು, ಎಂ.ಎ.)

ಪುರಂದರದಾಸರ ಹೆಸರನ್ನರಿಯದ ಕನ್ನಡಿಗನಿಲ್ಲ. ಆದರೂ ಅವರು ನಮಗೆ ಮಾಡಿರುವ ಉಪಕಾರದ ನಿಜವಾದ ಬೆಲೆ ಬಹು ಮಂದಿಗೆ ಗೊತ್ತಿಲ್ಲ. ಪುರಂದರದಾಸರೆಂದರೆ, ಕಂಕುಳಲ್ಲಿ ಜೋಳಿಗೆ ಹಾಕಿಕೊಂಡು ತಂಬೂರಿ ಮೀಟುತ್ತ ಪದಗಳನ್ನು ಹೇಳಿಕೊಂಡು ಕೇರಿ ಕೇರಿ ತಿರುಗುತ್ತಿದ್ದ ಬಡ ದಾಸರೆಂಬ ಭಾವನೆ ಜನದ ಮನಸ್ಸಿನಲ್ಲಿ ಬೇರೂರಿ ನೆಲಸಿದೆ. ದಟ್ಟ ದರಿದ್ರನನ್ನು ಪುರಂದರದಾಸ ಎಂದು ಕರೆಯುವುದು ಗಾದೆಮಾತಾಗಿದೆ. ಪುರಂದರದಾಸರು ತಾವಾಗಿ ಬಡತನವನ್ನಪ್ಪಿ, ಬಡವರಾಗಿದ್ದುದು ನಿಜ. ಆದರೆ ಅವರು ನಮಗಾಗಿ ಗಳಿಸಿ ಉಳಿಸಿಹೋಗಿರುವ ಶಾಶ್ವತವಾದ ಆಸ್ತಿಯನ್ನು ನಾವು ಕಡೆಗಣಿಸಿದ್ದೇವೆ. ಅದನ್ನು ರೂಢಿಸಿಟ್ಟುಕೊಳ್ಳಲು ಕನ್ನಡಿಗರಾದ ನಾವು ಹೆಚ್ಚು ಪ್ರಯತ್ನಪಡಬೇಕಾಗಿದೆ. ಪುರಂದರದಾಸರು ನಮಗೆ ಬಿಟ್ಟಿರುವ ದೊಡ್ಡ ಆಸ್ತಿ ಎಂದರೆ ಅವರ ಕೃತಿಗಳು. ಅವುಗಳನ್ನು ಹಾಡಿದರೆ ಸಂಗೀತ, ಓದಿದರೆ ಸಾಹಿತ್ಯ, ಮನನ ಮಾಡಿದರೆ ದೈವ ಸಾಕ್ಷಾತ್ಕಾರ.

ಪುರಂದರದಾಸರ ಜೀವನ ಚರಿತ್ರೆಯ ವಿಷಯವಾಗಿ ಒಂದು ಐತಿಹ್ಯವಿದೆ. ಎಷ್ಟೆಂದರೂ ಅದು ಐತಿಹ್ಯವೇ. ಈ ಐತಿಹ್ಯವನ್ನು ಒತ್ತಟ್ಟಿಗಿಟ್ಟರೆ ಬಾಧಕವೇನಿಲ್ಲ; ಪುರಂದರದಾಸರ ವ್ಯಕ್ತಿತ್ವಕ್ಕೆ, ಮಹಿಮೆಗೆ ಯಾವ ಕುಂದುಕೊರತೆಯೂ ಉಂಟಾಗುವುದಿಲ್ಲ. ಪುರಂದರದಾಸರ ಹೆಸರು ನಿಂತಿರುವುದು ಅವರ ಕೃತಿಗಳಿಂದಲೇ ಹೊರತು ಐತಿಹ್ಯದಲ್ಲಿ ಉಕ್ತವಾಗಿರುವ ಪವಾಡದಿಂದಲ್ಲ.

ದಾಸರ ಕೃತಿಗಳ ಪರಿಶೀಲನೆಯಿಂದಲೇ ಅವರು ತುಳಿದ ಬಾಳ ದಾರಿಯ ಜಾಡನ್ನು ಹಿಡಿಯಬಹುದು. ಐತಿಹ್ಯದಲ್ಲಿ ಹೇಳುವಂತೆ, ಪುರಂದರದಾಸರು ತಮ್ಮ ಪೂರ್ವ ಜೀವನದಲ್ಲಿ ರತ್ನಪಡಿ ವರ್ತಕರಾಗಿದ್ದರೋ ಇಲ್ಲವೋ ಅದು ಅಷ್ಟು ಮುಖ್ಯವಲ್ಲ. ಇಷ್ಟು ನಿಜ: ಹಣದ ಸಂಪಾದನೆಯಲ್ಲೇ ಅವರ ಮನಸ್ಸು; ಉದರಂಭರಣವೇ ಅವರ ಜೀವನದ ಧ್ಯೇಯ; ಹೆಂಡತಿ ಮಕ್ಕಳನ್ನು ಸಾಕಿ ಸಲಹುವುದೇ ಬಾಳ ಗುರಿ. ಈ ಅಂಶಗಳನ್ನು ದಾಸರು ತಮ್ಮ ಕೃತಿಗಳಲ್ಲಿ ಪದೇ ಪದೇ ಹೇಳಿಕೊಂಡು ತಮ್ಮ ಪೂರ್ವದ ಅಜ್ಞಾನಕ್ಕಾಗಿ ಪಶ್ಚಾತ್ತಾಪ ಪಟ್ಟಿದ್ದಾರೆ: "ವಿತ್ತದೊಳಗೆ ಮನವಿಟ್ಟು ನಿನ್ನ ಉತ್ತಮ ನಾಮದ ಸ್ಮರಣೆಯ ಬಿಟ್ಟು ಮತ್ತನಾದೆ ಮತಿಗೆಟ್ಟು" ಎಂದೂ, "ಸ್ನಾನ ಸಂಧ್ಯಾವಂದನವನೊಂದನರಿಯೆ, ಅನ್ನ ಪಾನಗಳನು ನಾನೊಮ್ಮೆ ಮರೆಯೆ, ಹೀನರ ಸಂಗ ಎಂದೆಂದು ತೊರೆಯೆ" ಎಂದೂ, "ಕೃಷ್ಣರಾಯನನರ್ಚಿಸಲಿಲ್ಲ, ಎಷ್ಟು ಹೇಳಲಿ ಅವಗುಣಗಳಿಲ್ಲ, ಅವು ಅಷ್ಟು ಇಷ್ಟು ಎಂದು ಎಣಿಕೆಯಿಲ್ಲ" ಎಂದೂ ತಪ್ಪೊಪ್ಪಿಕೊಂಡಿದ್ದಾರೆ; "ಶಿಶುಮೋಹ, ಸತಿಮೋಹ, ರಾಜಮೋಹ, ಅನ್ನಮದ, ಅರ್ಥಮದ, ಅಖಿಲವೈಭವದ ಮದ, ಪ್ರಾಯಮದ, ರೂಪಮದ" ಮೊದಲಾದ "ಅನಂತ ಅಪರಾಧ ಎನ್ನಲ್ಲಿ ಇರಲಾಗಿ ಬಿನ್ನಹಕೆ ಬಾಯಿಲ್ಲವಯ್ಯ" ಎಂದು ಮರುಗಿದ್ದಾರೆ; "ಅತಿಥಿಗಳಿಗೆ ಅನ್ನ ಕೊಟ್ಟವನಲ್ಲ . . . ಇನ್ನಾದರೂ ನಿನ್ನ ದಾಸರ ಸಂಗವಿತ್ತು ಮನ್ನಿಸಿ ಸಲಹಯ್ಯ" ಎಂದು ದೇವರಲ್ಲಿ ಮೊರೆಯಿಟ್ಟಿದ್ದಾರೆ. ಹೀಗೆ ಇಹ ಸಂಸಾರದ ಸುಖ ಸಂತೋಷಗಳಲ್ಲೂ ಭೋಗಾನುಭವದ ಅನ್ವೇಷಣದಲ್ಲೂ ಮಗ್ನನಾಗಿ, ಧನವನ್ನೇ ದೇವರೆಂದು ತಿಳಿದು, "ಇಷ್ಟು ದೊರೆತರೆ ಇನ್ನಷ್ಟು ಬೇಕೆಂಬಾಸೆ"ಗೆ ಸಿಲುಕಿದ್ದ ಪರಮ ಲೋಭಿಯೊಬ್ಬನು ತನ್ನ ಸರ್ವಸ್ವವನ್ನೂ ತ್ಯಾಗಮಾಡಿ, ಹರಿಸೇವೆಗಾಗಿ ಕೈಯಲ್ಲಿ ತಂಬೂರಿ ಹಿಡಿದು ತಿರುಪೆಗೆ ಹೊರಟನೆಂದರೆ, ಕ್ಷಣಮಾತ್ರದಲ್ಲಿ ತೀವ್ರ ವೈರಾಗ್ಯ ಭಾವವನ್ನು ಹುಟ್ಟಿಸುವ ಅದ್ಭುತ ಪ್ರಸಂಗವೊಂದು ಆತನ ಜೀವನದಲ್ಲಿ ನಡೆದಿರಬೇಕೆಂದು ಊಹಿಸಬಹುದು. ದಾಸರ ಸಂಬಂಧವಾದ ಐತಿಹ್ಯ ಈ ಊಹೆಗೆ ಒಂದು ರೂಪ ಕೊಟ್ಟಿದೆ ಎನ್ನಬಹುದು. ಐತಿಹ್ಯದಲ್ಲಿ ಬರುವ ಮೂಗುತಿಯ ಪ್ರಸಂಗ ಒಂದು ಪವಾಡ. ಇದು ಹೇಗಾದರೂ ಇರಲಿ. ಹೆಂಡತಿಯ ಪ್ರಭಾವದಿಂದ ದಾಸರಿಗೆ ಜ್ಞಾನೋದಯವಾಗಿ, ಅವರು ದಂಡಿಗೆ ಭಿಕ್ಷಾಪಾತ್ರೆಗಳನ್ನು ಹಿಡಿದು ಹರಿಸೇವಾಕಾರ್ಯಕ್ಕೆ ತಮ್ಮ ಜೀವಿತವನ್ನು ಮೀಸಲಾಗೊಪ್ಪಿಸಿದರು ಎನ್ನುವುದು ನಿರ್ವಿವಾದ. ಇದನ್ನು ದಾಸರೇ—"ಆದದ್ದೆಲ್ಲ ಒಳಿತೇ ಆಯಿತು. ನಮ್ಮ ಶ್ರೀಧರ ಸೇವೆಗೆ ಸಾಧನ ಸಂಪತ್ತಾಯಿತು. ದಂಡಿಗೆ ಬೆತ್ತ ಹಿಡಿಯುವುದಕ್ಕೆ ಮಂಡೆ ಬಾಗಿ ನಾಚುತಲಿದ್ದೆ. ಹೆಂಡತಿ ಸಂತತಿ ಸಾವಿರವಾಗಲಿ, ದಂಡಿಗೆ ಬೆತ್ತ ಹಿಡಿಸಿದಳಣ್ಣ, ಗೋಪಾಳಬುಟ್ಟಿ ಹಿಡಿಸಿದಳಣ್ಣ" ಎಂದು ಹೇಳಿಕೊಂಡಿದ್ದಾರೆ.

ದಾಸರು ಸರ್ವಸ್ವವನ್ನೂ ತೊರೆದರೂ ಹೆಂಡತಿ ಮಕ್ಕಳನ್ನು ಕೈಬಿಟ್ಟು ತಪಸ್ಸುಮಾಡುತ್ತೇನೆಂಧು ಕಾಡಿಗೆ ಹೋಗಿ ಮೂಗು ಹಿಡಿದುಕೊಂಡು ಕುಳಿತುಕೊಳ್ಳಲಿಲ್ಲ; ಸಂಸಾರಸ್ಥರಾಗಿಯೇ ಇದ್ದು ಅಧ್ಯಾತ್ಮದ ಸಾಧನೆ ಮಾಡಿದರು. ಆದರೂ ಅವರ ಸಾಧನೆ ಯಾವ ತಪಸ್ಸಿಗೂ ಕಡಮೆಯಾಗಿರಲಿಲ್ಲ; ಅವರ ದೇಹ ತಪಿಸಿತು, ಮನಸ್ಸು ಪುಟಗೊಂಡಿತು, ಆತ್ಮ ಪ್ರಜ್ವಲಿಸಿತು. ಎಂದು ಅವರು ಮನೆಯನ್ನು ಬಿಟ್ಟು, ಸಿರಿಯನ್ನು ತೊರೆದು, ಹರಿಯನ್ನು ನಂಬಿ ಹರಿದಾಸರಾದರೋ ಅಂದು ದಟ್ಟದಾರಿದ್ರ್ಯ ಅವರನ್ನು ಆವರಿಸಿತು. ತಮ್ಮ ಹೊಟ್ಟೆ ಹೊರೆಯಬೇಕು, ಹೆಂಡತಿ ಮಕ್ಕಳನ್ನು ಪೊರೆಯಬೇಕು. ಈ ಬವಣೆಯಲ್ಲಿ ದಾಸರು ತುಂಬ ಬಳಲಿರಬೇಕು. "ಅಭಿಮಾನವನು ತೊರೆದು ಪರರನ್ನು ಬೇಡುವುದ ಏನು ಬರೆದೆಯೋ? ಗೇಣೊಡಲ ಪೊರೆವುದಕೆ ಪೋಗಿ . . . ಬಲ್ಲಿದರ ಮನೆಯ ಬಾಗಿಲ ಕಾಯ್ದು ಬೇಸತ್ತು . . . ಇಲ್ಲ ಈ ವೇಳೆಯಲಿ ತಿರುಗಿ ಬಾರೆಂದೆನಲು ಅಲ್ಲವನು ತಿಂದ ಇಲಿಯಂತೆ ಕೊರಗುವುದ ಏನು ಬರೆದೆಯೊ?" ಎಂದು ಸೃಷ್ಟಿಕರ್ತನನ್ನು ಆಕ್ಷೇಪಿಸಿ, "ಮುಂದೆನ್ನ ವಂಶದಲಿ ಜನಿಸುವರ ಕಾಯೊ" ಎಂದು ಬೇಡಿಕೊಂಡರು. ತಮಗಾಗಿ ಏನನ್ನೂ ಬೇಡಿಕೊಳ್ಳಲಿಲ್ಲ! ಆದರೂ ಕೂಡ, "ಕಾಯಲಾರೆನು ಕೃಷ್ಣ ಕಂಡವರ ಬಾಗಿಲನು ನಾಯಿಕುನ್ನಿಗಳಂತೆ ಪರರ ಪೀಡಿಸುತ" ಎಂದು ಬೇಸತ್ತರು; "ಪುಟ್ಟಿಸಬೇಡವೊ, ದೇವ, ಎಂದೆಂದಿಗು ಇಂಥ ಕಷ್ಟಪಟ್ಟು ತಿರುಗುವ ಪಾಪಿ ಜೀವನವ" ಎಂದು ಒರಲಿದರು. ಹೀಗೆ ಹೊಟ್ಟೆಗೆ ಬಟ್ಟೆಗೆ ಏನೇನೂ ಹುಟ್ಟದೆ ಇರಲು ದಾಸರು ಸಾಲವನ್ನೂ ಮಾಡಬೇಕಾಗಿ ಬಂದಿರಬೇಕು: "ಋಣವೆಂಬ ಪಾತಕವು ಬಹು ಬಾಧೆ ಪಡಿಸುತಿದೆ,/ ಗುಣನಿಧಿಯೆ, ನೀನೆನ್ನ ಋಣವ ಪರಿಹರಿಸೊ" ಎಂದು ಭಗವಂತನಲ್ಲಿ ಮೊರೆಯಿಟ್ಟರು. ಮನುಷ್ಯಮಾತ್ರರಾದ ದಾಸರು ಹಸಿವಿನ ಕೂಗಿಗೆ ಮೊದಮೊದಲು ಕಿವಿಗೊಟ್ಟರೂ, "ಯಾಕೆ ಚಿಂತಿಪೆ ಬರಿದೆ, ವಿಧಿ ಬರೆದ ವಾಕು ತಪ್ಪದು", "ಕೊಡುವ ಕರ್ತ ಬೇರೆ ಇರುತಿರೆ ಬಿಡು ಬಿಡು ಚಿಂತೆಯನು" ಎಂಬ ಸಮಾಧಾನಕ್ಕೆ ಬಂದರು. ಈ ಸಮಾಧಾನ ಮೂಡಿದಮೇಲೆ, "ಯಾಕೆ ಕಕುಲಾತಿ ಪಡುವೆ, ಎಲೆ ಮರುಳೆ, ಲೋಕ ಮೂರನು ಆಳ್ವ ಶ್ರೀನಿವಾಸನು ನಮ್ಮ ಸಾಕಲಾರದೆ ಬಿಡುವನೆ?" ಎಂದು ತಮ್ಮ ಒಡಲ ಹೊರೆವ ಹೊರೆಯನ್ನು ದೇವರ ಮೇಲೆಯೇ ಹಾಕಿ, ಭಕ್ತಿ ಸಾಧನೆಯ ಕಡೆಗೆ ಮನಸ್ಸು ತಿರುಗಿಸಿದರು. ಮನಸ್ಸು ಈ ನಿರ್ಧಾರಕ್ಕೆ ಬಂದಾಗ ಒಡಲ ಚಿಂತೆ ಅವರನ್ನು ಬಿಟ್ಟು ತೊಲಗಿತು. ಉಡುವುದಕ್ಕೆ ಚೂರುಬಟ್ಟೆಯೂ ಇಲ್ಲದೆ ಕೌಪೀನವನ್ನು ಆಶ್ರಯಿಸಬೇಕಾಗಿ ಬಂದ ವೇಳೆಯಲ್ಲಿ ಕೂಡ "ಲಂಗೋಟಿ ಬಲುವೊಳ್ಳೇದಣ್ಣ, ಒಬ್ಬರ ಹಂಗಿಲ್ಲದೆ ಮಡಿಗೆ ಒದಗುವುದಣ್ಣ, ಬಡವರಿಗಾಧಾರವಣ್ಣ" ಎಂದು ನೋವನ್ನು ನಗೆಯಲ್ಲಿ ತೇಲಬಿಟ್ಟರು. ಆದರೂ, ಸಂಪೂರ್ಣ ವೈರಾಗ್ಯಸಾಧನೆಯಾದ ಹೊರತು ಭಕ್ತಿ ಸಾಧನೆಯಾಗದು; ಸಂಪೂರ್ಣ ವೈರಾಗ್ಯ ಸಾಧನೆಯಾಗಬೇಕಾದರೆ ಎಲ್ಲ ಬಗೆಯ ಆಶಾಪಾಶಗಳನ್ನೂ ಮೋಹ ಬಂಧಗಳನ್ನೂ ಕಡಿದುಹಾಕಿ, ಚಿತ್ತಶುದ್ಧಿ ಪಡೆಯಬೇಕು; ಚಿತ್ತ ನಿರೋಧವಾದ ಹೊರತು ಆಸೆಗಳು ಹಿಂಗವು, ವೈರಾಗ್ಯ ಕೈಗೂಡದು, ನಿಜವಾದ ಭಕ್ತಿ ಮೊಳೆಯದು. ಇದನ್ನು ದಾಸರು ಮನಗಂಡರು. ಚಿತ್ತ ನಿರೋಧಕ್ಕಾಗಿ, ಅಂತರಂಗ ಶುದ್ಧಿಗಾಗಿ, ಬಹು ಸಾಹಸಪಟ್ಟರು. ಭಗವಂತನನ್ನು ಏಕಚಿತ್ತದಿಂದ ಧ್ಯಾನಿಸಲು ಬಹು ವಿಧಗಳಲ್ಲಿ ಪ್ರಯತ್ನಪಟ್ಟರು. ಈ ಪ್ರಯತ್ನದಲ್ಲಿ, "ಮನವ ನಿಲಿಸುವುದು ಬಹು ಕಷ್ಟ,

---

*೫-೨-೫೩ರಲ್ಲಿ ಮೈಸೂರು 'ಆಕಾಶವಾಣಿ'ಯವರು ಆಚರಿಸಿದ ಪುರಂದರದಾಸರ ಪುಣ್ಯದಿನದಲ್ಲಿ ಮಾಡಿದ ಭಾಷಣವನ್ನು ವಿಸ್ತರಿಸಿ ಬರೆದದ್ದು.

ಹರಿದಾಡುವ ಮನವ ನಿಲಿಸುವುದು ಬಹು ಕಷ್ಟ . . . ಧ್ಯಾನದಿ ಪುರಂದರ ವಿಠಲನ ಚರಣದಲಿ ಹರಿದಾಡುವ ಮನವ ನಿಲಿಸುವುದು ಬಹು ಕಷ್ಟ" ಎಂದು ದಾಸರಿಗೆ ಮನವರಿಕೆಯಾಯಿತು. ಸಂಸಾರದ ಚಿಂತೆ ದೂರವಾಗುವ ವರೆಗೂ ಚಿತ್ತೈಕ್ಯತೆ ಸಾಧಿಸದೆಂದು ಅರಿತಾಗ, "ಮನವೆಂಬ ಆಸೆಯು ಎನ್ನ ಮುಂದುಗೆಡಿಸುತಿದೆ, ಮನೆವಾರುತೆಯು ಎನ್ನ ಭಂಗಪಡಿಸುತಿದೆ, . . . ಇನಿತಾಸೆಯುಳಿದು ಬುದ್ಧಿ ನಿನ್ನಲ್ಲಿ ನಿಲುವಂತೆ ಮಾಡು" ಎಂದು ಭಗವಂತನಲ್ಲಿ ಬಿನ್ನವಿಸಿಕೊಂಡರು. ಹೀಗೆ ದಾಸರು ದಿಕ್ಕು ತೋರದೆ ದಾರಿ ಕಾಣದೆ ತೊಳಲುತ್ತಿರುವಾಗ "ಗುರುವಿನ ಚರಣಕ್ಕೆರಗಲಿಬೇಕು, ತರಣೋಪಾಯವನರಿಯಲ್ಲಿಬೇಕು" ಎಂದು ಅಂತರಾತ್ಮನ ಪ್ರೇರಣೆಯಾಯಿತು. ಗುರುವನ್ನು ಅರಸಿಕೊಂಡು ಹೊರಟರು. ಕಡೆಗೆ, ಶ್ರೀ ವ್ಯಾಸರಾಯರ ದರ್ಶನವಾಯಿತು ದಾಸರಿಗೆ: "ವ್ಯಾಸರಾಯರ ಚರಣ ಕಮಲ ದರ್ಶನವೆನಗೆ ಏಸು ಜನ್ಮದ ಸುಕೃತ ಫಲ ದೊರಕಿತು", "ವರಗುರು ಉಪದೇಶ ನೆರವಾಯಿತೆನಗೀಗ, ಹರಿದಾಸರ ಸಂಗ ದೊರಕಿತು ಎನಗೀಗ ಇನ್ನೇನಿನ್ನೇನು", "ಬದುಕಿದೆನು ಬದುಕಿದೆನು, ಹರಿಯ ತೀರ್ಥ ಪ್ರಸಾದವಿಂದೆನಗೆ ದೊರಕಿತು, ಹರಿಕಥಾಮೃತವೆನ್ನ ಕಿವಿಯೊಳಾಯ್ತು, ಹರಿದಾಸರ ಸಂಘ ಬಂಧು ಬಳಗವಾಯಿತು, ಹರಿಮುದ್ರೆ ಎನಗೆ ಆಭರಣವಾಯ್ತು; ಮುಕ್ತಿ ಮಾರ್ಗಕೆ ಯೋಗ್ಯ ನಾನಾದೆ" ಎಂದು ದಾಸರು ಹಿಗ್ಗಿದರು. ಗುರೂಪದೇಶವನ್ನು ಪಡೆದು, ದಾಸರು ದಾಸಕೂಟಕ್ಕೆ ಸೇರಿ ನಿಜವಾದ ಹರಿದಾಸರಾದರು. "ಅಂಕಿತವಿಲ್ಲದ ದೇಹ ನಿಷಿದ್ಧ, ಅಂಕಿತವಿಲ್ಲದ ಕಾರ್ಯ ಶೋಭಿಸದು, ಅಂಕಿತವಿಲ್ಲದಿರಬಾರದು ಎಂದು ಪಂಕಜನಾಭ ವಿಠಲನ್ನ ಅಂಕಿತವೆನಗಿತ್ತ ಗುರು ವ್ಯಾಸಮುನಿರಾಯ." ಅಂದಿನಿಂದ ದಾಸರು ಪುರಂದರದಾಸರಾದರು. [ಸಶೇಷ]

## ಶಿವಮೊಗ್ಗದಲ್ಲಿ
## ಅಕ್ಷರ ಪ್ರಚಾರ ಜಿಲ್ಲಾ ಸಮಿತಿಯ ಸ್ಥಾಪನೆ

ಫೆಬ್ರುವರಿ ೨ನೆಯ ತಾರೀಖು ಶಿವಮೊಗ್ಗದಲ್ಲಿ ಜಿಲ್ಲಾ ಬೋರ್ಡು ಅಧ್ಯಕ್ಷರಾದ ಶ್ರೀಮಾನ್ ಸಿದ್ದಪ್ಪನವರ ಅಧ್ಯಕ್ಷತೆಯಲ್ಲಿ ಒಂದು ಸಭೆ ನಡೆದು ಜಿಲ್ಲೆಯಲ್ಲಿ ಅಕ್ಷರ ಪ್ರಚಾರದ ವಿಚಾರವನ್ನು ಆಲೋಚಿಸಿತು. ಜಿಲ್ಲಾ ಅಕ್ಷರ ಪ್ರಚಾರ ಸಮಿತಿ ನೇಮಕವಾಯಿತು. ಜಿಲ್ಲಾಧಿಕಾರಿಗಳು ಗೌರವಾಧ್ಯಕ್ಷರು. ಜಿಲ್ಲಾ ಬೋರ್ಡು ಅಧ್ಯಕ್ಷರೇ ಸಮಿತಿಯ ಅಧ್ಯಕ್ಷರು. ಜಿಲ್ಲಾ ವಿದ್ಯಾಧಿಕಾರಿಗಳಾದ ಶ್ರೀ. ಡಿ. ನರಸಿಂಹನ್ ಅವರು, ಶ್ರೀ. ಎಚ್. ಲಿಂಗಪ್ಪನವರು ಮತ್ತು ಸೂ॥ ಎಂಜಿನಿಯರಾದ ಶ್ರೀ. ಎಂ. ನರಸಿಂಹಯ್ಯನವರು ಉಪಾಧ್ಯಕ್ಷರುಗಳು. ನ್ಯಾಯ ವಿಧಾಯಕ ಸಭಾ ಸದಸ್ಯರೂ ಮೈಸೂರು ವಿಶ್ವವಿದ್ಯಾನಿಲಯದ ಸೆನೆಟ್ ಸದಸ್ಯರೂ ಆದ ಶ್ರೀ. ಬಿ. ಆರ್. ಪುಟ್ಟನಂಜಪ್ಪನವರು ಕಾರ್ಯದರ್ಶಿಗಳು.

ಜಿಲ್ಲಾ ಸಮಿತಿಯ ರಚನೆ ಹಾಗೂ ಜಿಲ್ಲೆಯಲ್ಲಿ ವಯಸ್ಕರ ಶಿಕ್ಷಣದ ಪ್ರಚಾರದ ಏರ್ಪಾಟಿಗಾಗಿ ಸಂಸ್ಥಾನದ ಅಕ್ಷರ ಪ್ರಚಾರ ಸಮಿತಿಯ ವ್ಯವಸ್ಥಾಪಕ-ಕಾರ್ಯದರ್ಶಿಗಳಾದ ಶ್ರೀ ಎಸ್. ವಿ. ಶ್ರೀನಿವಾಸರಾಯರು ಹೋಗಿದ್ದರು.

ಶಿವಮೊಗ್ಗ ಜಿಲ್ಲಾ ಸಮಿತಿಗೆ ಜಿಲ್ಲಾ ಬೋರ್ಡಿನವರು ೧,೦೦೦ ರೂ. ಕೊಟ್ಟಿದ್ದಾರೆ. ಕೇಂದ್ರ ಸಮಿತಿಯವರು ಕೊಡುವ ೨,೭೦೦ ರೂ. ವೆಚ್ಚಮಾಡಿ ೪೦ ತರಗತಿಗಳನ್ನೂ ಪುಸ್ತಕ ಭಂಡಾರ ವಾಚನಾಲಯಗಳನ್ನೂ ನಡಸಬೇಕೆಂದು ತೀರ್ಮಾನವಾಗಿದೆ.

ಇಡಿಯ ಸಂಸ್ಥಾನದಲ್ಲಿ ಏಳು ಜಿಲ್ಲೆಗಳಲ್ಲಿ ಜಿಲ್ಲಾ ಅಕ್ಷರ ಪ್ರಚಾರ ಸಮಿತಿಗಳು ಸ್ಥಾಪಿತವಾಗಿವೆ. ಕಡೂರು ತುಮಕೂರು ಜಿಲ್ಲೆಗಳಲ್ಲಿ ಇನ್ನೂ ಆಗಬೇಕಾಗಿದೆ.

## ರಾಷ್ಟ್ರೀಯ ಶಿಕ್ಷಣ ಸಮಿತಿ, ಮುಂಬಯಿ
## ಸಮಿತಿಯ ಶಾಲೆಯ ಮೂರನೆಯ ವಾರ್ಷಿಕೋತ್ಸವ

ಮುಂಬಯಿ ರಾಷ್ಟ್ರೀಯ ಶಿಕ್ಷಣ ಸಮಿತಿ ಮಾತುಂಗ ವಿಸ್ತರಣದಲ್ಲಿ ನಡಸುತ್ತಿರುವ ಪ್ರಾಥಮಿಕ ಪಾಠಶಾಲೆಯ ಮೂರನೆಯ ವಾರ್ಷಿಕೋತ್ಸವ ಮುಂಬಯಿ ಹೈಕೋರ್ಟು ನ್ಯಾಯಾಧೀಶರಾದ ಶ್ರೀ. ಎನ್. ಎಸ್. ಲೋಕೂರರವರ ಅಧ್ಯಕ್ಷತೆಯಲ್ಲಿ ೩೧-೧-೪೩ನೆಯ ಭಾನುವಾರ ನಡೆಯಿತು. ಸಂಘದ ಕಾರ್ಯಕಲಾಪಗಳನ್ನು ಮೆಚ್ಚಿ ಯಶಸ್ಸು ಕೋರಿ, ಇಂಡಿಯಾ ಸರಕಾರದ ವಾಣಿಜ್ಯ ಸಚಿವರಾದ ಶ್ರೀ. ನಳನೀರಂಜನ ಸರ್ಕಾರರು, ಮೈಸೂರು ಸಂಸ್ಥಾನದ ದಿವಾನರಾದ ಪ್ರಧಾನ ಶಿರೋಮಣಿ ಶ್ರೀ. ಎನ್. ಮಾಧವರಾಯರು ಮುಂತಾಗಿ ಅನೇಕ ಮಹನೀಯರುಗಳಿಂದ ಸಂದೇಶಗಳು ಬಂದಿದ್ದವು. ಉತ್ಸವದ ಕಾರ್ಯಕ್ರಮಗಳೆಲ್ಲ ಸಾಂಗವಾಗಿ ನೆರವೇರಿತು. ಅಧ್ಯಕ್ಷರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು:

"ಕನ್ನಡನಾಡು ಚೂರು ಚೂರಾಗಿದೆ. ಅದೆಲ್ಲ ಒಂದಾಗಿ ಒಂದು ಕನ್ನಡ ನಾಡಾಗಬೇಕು ಎಂಬ ಆಶೆ ಎಲ್ಲರಿಗೂ ಇದೆ. ಇದಕ್ಕೆ ಅಡಚಣೆಗಳು ಬಹಳ ಇವೆ. ಇಂಥ ಶಾಲೆಗಳು ಇನ್ನೂ ಹೆಚ್ಚಬೇಕು. ಇಲ್ಲದಿದ್ದರೆ ನಮ್ಮ ಮಕ್ಕಳಿಗೆ ಇಲ್ಲಿ ಗುಜರಾತಿಯನ್ನೋ ಮರಾಠಿಯನ್ನೋ ಕಲಿಸಿ, ನಮ್ಮ ಸಂಸ್ಕೃತಿಯನ್ನು ಕಲಿಸಿಕೊಡದಂತಾಗುತ್ತದೆ. ನಾನು ಮಹಾರಾಷ್ಟ್ರ ಗುಜರಾಥ ಪ್ರಾಂತಗಳಲ್ಲಿ ವರ್ಗವಾಗಿ ಹೋದಾಗ ನನ್ನ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ತೊಂದರೆಪಟ್ಟು ಕನ್ನಡ ಶಾಲೆ ಇಲ್ಲದೆ ಆದ ಕಷ್ಟ ಏನೆಂದು ತಿಳಿದಿದ್ದೇನೆ. ಈ ಶಾಲೆ ಹೈಸ್ಕೂಲಾಗಿ ಕಾಲೇಜಾಗಿ ಬೆಳೆಯಲಿ. ಇದಕ್ಕಾಗಿ ಮುಂಬಯಿ ಕನ್ನಡಿಗರೆಲ್ಲ ಶ್ರಮಿಸಬೇಕು."

ಮುಂಬಯಿಯಲ್ಲಿ ಕಾಂಗ್ರೆಸ್ ಮಂತ್ರಿಮಂಡಲವಿದ್ದಾಗ ಈ ಶಾಲೆ ಸ್ಥಾಪಿತವಾಯಿತು. ಮುಖ್ಯ ಮಂತ್ರಿಗಳಾಗಿದ್ದ ಶ್ರೀ. ಖೇರರೂ ಹಣಕಾಸಿನ ಮಂತ್ರಿಗಳಾಗಿದ್ದ ಶ್ರೀ. ಲಠ್ಠೆಯವರೂ ಈ ಶಾಲೆಯ ಏಳಿಗೆಯಲ್ಲಿ ಆಸಕ್ತಿತೋರಿಸಿ ಉಪಕಾರ ಮಾಡಿದ್ದಾರೆ. ಮುಂಬಯಿ ಪೌರಸಭೆಯಿಂದ ಮನ್ನಣೆಯೂ ೨೦೦ ರೂ. ಸಹಾಯದ್ರವ್ಯವೂ ದೊರೆತಿವೆ. ಮೈಸೂರು ಸರಕಾರ ೧೯೪೨-೪೩ನೆಯ ವರ್ಷಕ್ಕೆ ೨೦೦ ರೂ. ಸಹಾಯದ್ರವ್ಯ ಕೊಟ್ಟಿದೆ. ಶಾಲೆಯ ಕಟ್ಟಡ ಕಟ್ಟಿಸಲು ಧನ ಸಂಗ್ರಹಕಾರ್ಯ ನಡೆದಿದೆ. ಇದುವರೆಗೆ ೫,೦೦೦ ರೂ.ಗಳಷ್ಟು ಹಣ ಸೇರಿದೆ.

## ೧. ಪ್ರಾರ್ಥನೆ*

ಜಗದ ಸಂಸಾರದಲಿ ನಾನೊಬ್ಬನೆಂದೆಂಬ
ಬಿತ್ತರದ ಭಾವನೆಯು ಬೆಳೆದು ಬಂದು,
ಇಳೆಯ ಮಾನವರೆಲ್ಲ ಸೋದರರು ನನಗೆಂಬ
ಒಲವಿನಂಕುರವಿಟ್ಟು ಮರವಾಗಲಿ.

ನನ್ನ ಸುಖಕಾಗೆಲ್ಲ ಮೇಲಾಟವೆನ್ನದೆಯೆ
ಹೆರರ ಸುಖ ದುಃಖಗಳೆ ನನ್ನವೆಂದರಿತು,
ನಾಡು ನುಡಿಗಳಿಗಾಗಿ, ಮಾನವೀಯತೆಗಾಗಿ
ನನ್ನ ಜೀವನ ಸತತ ಸೇವೆಯಾಗಿರಲಿ.

ಬಾಳ ಬಡಿದಾಟದಲಿ ಅತ್ತಿತ್ತಲುಲುಗದೆಯೆ
ನಿನ್ನ ಚಿತ್ತಕೆ ಬಾಗಿ ನೇರ ನಡೆದು,
ವಿಶ್ವತಾನದಿ ಬೆರೆತು ಕಲೆತು ದನಿ ಸೇರಿಸಲು
ನನ್ನ ಜೀವನವೊಂದು ಹಾಡಿನಂತಿರಲಿ.

ನಿನ್ನ ಆನಂದದಲಿ, ಹಿಂದನರಿಯದೆ ಬಂದು
ಸೊಗದ ಸುಂದರ ಸಹಜ ಬಾಳ ಬಾಳಿ,
ಕಡೆಗೆ ನಿಜಪಾದದಲೆ ಮುಕ್ತಿಯನು ಬಯಸುತಿಹ
ಕುಸುಮದಂತಿರಲೆನ್ನ ಜೀವನವು ದೇವ.

## ೨. ನನ್ನ ತಾಯಿ*

ನನ್ನೂರ ಸೋಗೆಗಳ ಹೆಣೆದು ನಾ ಕಟ್ಟುವೆನು
ಪುಟ್ಟ ಗುಡಿಸಿಲನೊಂದ ತಾಯಿಗೆಂದು
ತಿರೆಯ ಗರ್ಭವ ಬಗೆದು ಹೊನ್ನಿನದಿರನು ತೆಗೆದು
ಚಿನ್ನದರಮನೆಯ ನಾ ಕಟ್ಟಕೊಡಲಾರೆ.

ಹಿರಿಯ ಮಂದಿಯ ಹಲವು ಹಿರಿಯ ಮನೆಗಳ ಕಳೆದು
ತಾಯಿ ಬರುವಳು ನನ್ನ ಪುಟ್ಟ ಗುಡಿಸಿಲಿಗೆ
ರತ್ನಸಿಂಹಾಸನದಿ ಕುಳಿತುಕೊಳ್ಳುವ ತಾಯಿ
ಕೂರುವಳು ನಾ ಹೆಣೆದ ಗರಿಯ ಚಾಪೆಯಲಿ.

'ನೋಡಮ್ಮ ನಾ ಹೆಣೆದ ಮಾಲೆಯಿದು ನಿನಗಾಗಿ
ನನ್ನ ಜೀವನವೆಲ್ಲ ದುಡಿದೆನಿದಕಾಗಿ'
ಎಂದು ನಾ ಕೊಡಲೊಂದು ಸಣ್ಣ ಸುಮಮಾಲಿಕೆಯ
ತಾಯಿ ಧರಿಸುವಳದನೆ ನಟ್ಟ ನಡುವಿನಲಿ.

ಹೊನ್ನಿನರಮನೆಯ ನಾ ಕಟ್ಟಿಕೊಡಲಿಲ್ಲ;
ರತ್ನ ಸಿಂಹಾಸನವ ತಂದೀಯಲಿಲ್ಲ;
ಅವಳ ಬಾವುಟವನ್ನು ನಭಕೆತ್ತಲಿಲ್ಲ;
ಆದರೂ, ಒಲವಿಗೊಲವೀಯುವಳು ನನ್ನ ತಾಯಿ.

— ಕೆ. ವಿ. ಸುಬ್ಬರಾಯ.

* ೧-೨-೪೩ರಲ್ಲಿ ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘದ ವಿದ್ಯಾರ್ಥಿ ಬರಹಗಾರರ ಕೂಟದಲ್ಲಿ ಓದಿದುದು.

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧–೮–೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧೨
ಬಿಡಿ ಪತ್ರಿಕೆ: ೬ ಕಾಸು




ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮–೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈ ಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೧೭

ಬೆಂಗಳೂರು: ಶುಕ್ರವಾರ, ಫೆಬ್ರುವರಿ ೧೯, ೧೯೪೩

## ಮೈಸೂರು ಆಕಾಶವಾಣಿಯಲ್ಲಿ 'ಮ್ಯಾಕ್‌ಬೆತ್' ರುದ್ರನಾಟಕದ ಪ್ರಯೋಗ

ಷೇಕ್ಸ್‌ಪಿಯರಿನ ನಾಟಕಗಳಲ್ಲಿ ರುದ್ರನಾಟಕಗಳಿಗೆ ಬಂದಿರುವ ಪ್ರಶಸ್ತಿ ಇತರ ನಾಟಕಗಳಿಗೆ ಬಂದಿಲ್ಲ. ಅವು ಜೀವನದ ಬಹು ಗಹನವಾದ ವಿಚಾರಗಳ ಚರ್ಚೆಯಲ್ಲಿ ತೊಡಗುವುದರಿಂದ ಅವಕ್ಕೆ ಆ ಪ್ರಾಮುಖ್ಯತೆ. ಅವುಗಳಲ್ಲಿಯೂ ನಾಲ್ಕನ್ನು ಬಹು ಪ್ರಸಿದ್ಧವೆಂದು ಸಾಹಿತಿಗಳು ಒಪ್ಪಿದ್ದಾರೆ: 'ಮ್ಯಾಕ್‌ಬೆತ್', 'ಹ್ಯಾಮ್ಲೆಟ್', 'ಒಥೆಲೊ', 'ರಾಜ ಲೀಯರ್'. ಉತ್ತಮವಾದ ಈ ನಾಲ್ಕರಲ್ಲಿ ಮ್ಯಾಕ್‌ಬೆತ್ ಗಾತ್ರದಲ್ಲಿ ಚಿಕ್ಕದು; ಆದರೆ ಶಕ್ತಿಯಲ್ಲಿ, ವೇಗದಲ್ಲಿ ಎಲ್ಲಕ್ಕಿಂತಲೂ ಬಹು ದೊಡ್ಡದು. ಈ ಬಗೆಯ ನಾಟಕ ನಮ್ಮಲ್ಲಿ ವಿರಳ. ಶ್ರೀ. ಡಿ. ವಿ. ಗುಂಡಪ್ಪನವರಂಥ ಶ್ರೇಷ್ಠ ಪಂಡಿತರೂ ಸಾಹಿತಿಗಳೂ ಇದನ್ನು ಕನ್ನಡಕ್ಕೆ ಮಾಡಿ ಕನ್ನಡಿಗರಿಗೆ ಬಹು ಉಪಕಾರ ಮಾಡಿದ್ದಾರೆ. ಟ್ರ್ಯಾಜೆಡಿ ಅಥವಾ ರುದ್ರನಾಟಕದಿಂದ ಆಗುವ ಪ್ರಯೋಜನವನ್ನು ಅವರೇ ಪೀಠಿಕೆಯಲ್ಲಿ ಹೀಗೆ ಹೇಳಿದ್ದಾರೆ: 'ಟ್ರ್ಯಾಜೆಡಿಯ ಮುಖ್ಯ ಲಕ್ಷಣ ಕರುಣೆ ಭೀತಿಗಳನ್ನು ಪ್ರೇಕ್ಷಕರಲ್ಲಿ, ಅಥವಾ ವಾಚಕರಲ್ಲಿ, (ಅಥವಾ ಶ್ರೋತೃಗಳಲ್ಲಿ ಎಂದು ಈಗ ನಾವು ಸೇರಿಸಿಕೊಳ್ಳಬಹುದು) ಉಂಟುಮಾಡಿಸತಕ್ಕದ್ದು. ಅನೇಕ ಮಹಾಗುಣಗಳೂ ಶಕ್ತಿಗಳೂ ಉಳ್ಳ ಒಬ್ಬಾನೊಬ್ಬ ಉನ್ನತಪುರುಷನು ಒಂದು ಪೌರುಷಾತೀತವಾದ–ಅದೃಷ್ಟವೆಂಬ, ವಿಧಿಯೆಂಬ, ಬೇಕಾದರೆ ಪ್ರಾಚೀನ ಕರ್ಮವೆಂಬ ಯಾವುದೋ ಶಕ್ತಿಯ ವೈರಕ್ಕೆ ಗುರಿಯಾಗಿ, ಅದರ ಕುಟಿಲ ತಂತ್ರಜಾಲಕ್ಕೆ ಸಿಕ್ಕಿಬಿದ್ದು, ಪಾಡಾಗಲು ಪರಿಪರಿಯಾಗಿ ಸಾಹಸ ಮಾಡುವವನಾಗಿ, ಆದರೂ ಅವನ ಗುಣಶಕ್ತಿಗಳಿಗೆ ಯಾವ ಸಂಪತ್ತು ಸಲ್ಲುವುದೆಂದು ಜನ ತಿಳಿದುಕೊಂಡಿರುತ್ತದೆಯೋ ಅದನ್ನು ಪಡೆಯಲಾರದೆ, ಅದಕ್ಕೆ ಪ್ರತಿಯಾಗಿ ಮಹಾವಿಪತ್ತಿಗೆ ಈಡಾಗುತ್ತಾನೆ; ಎಷ್ಟೋ ಮಹಾಗುಣಗಳು ಅವನಲ್ಲಿದ್ದರೂ, ಯಾವುದೋ ಒಂದು ಗುಣವಿಶೇಷ ಅವನಲ್ಲಿ ಸಾಲದೆ ಹೋಗಿ, ಅಥವಾ ಮಿತಿಮೀರಿದ್ದಾಗಿ, ಅದರಿಂದ ಅವನ ಮಹೋದ್ಯಮಗಳು ವ್ಯರ್ಥವಾಗಿ, ಅವನ ಜೀವನವು ಅಧೋಗತಿಗೆ ಇಳಿಯುತ್ತದೆ. ಈ ಜೀವನಿರರ್ಥಕತೆಯ ದರ್ಶನ, ಈ ಜೀವಯಾತನೆಯ ದರ್ಶನ ಇವು ಟ್ರ್ಯಾಜೆಡಿಯಿಂದ ನಮಗಾಗುವ ಪ್ರಯೋಜನಗಳು.' ಅಹಂಕಾರ, ಅಧರ್ಮಗಳು ಹೆಚ್ಚಾಗಿ ಮಾನವ ಜೀವನ ಈಗಿನ ಕೀಳುಮಟ್ಟಕ್ಕೆ ಇಳಿದಿರುವ ಕಾಲದಲ್ಲಿ ರುದ್ರನಾಟಕಗಳ ದರ್ಶನದಿಂದ, ಓದಿನಿಂದ, ಶ್ರವಣದಿಂದ– ಆಕಾಶವಾಣಿಯ ಕೃಪೆಯಿಂದ ಶ್ರವಣ ಸಾಧ್ಯವಾಗಿದೆ– ಜನರ ಮೇಲೆ ಒಳ್ಳೆಯ ಪರಿಣಾಮವಾಗಬೇಕು. ಅವರಲ್ಲಿ ಪಾಪಭೀತಿಯೂ ಧರ್ಮಾಸಕ್ತಿಯ ಸನ್ಮಾರ್ಗಾವಲಂಬನೆಯೂ ಉಂಟಾಗಬೇಕು. ಇದು ಬಹಳ ಆವಶ್ಯಕ.

ಇಂಥಾ ಸನ್ನಿವೇಶದಲ್ಲಿ ಆಕಾಶವಾಣಿಯ ಚಾಲಕರು ಮ್ಯಾಕ್‌ಬೆತ್‌ನಂತಹ ಉತ್ತಮ ಕೃತಿಯನ್ನು ಜನಕ್ಕೆ ಹರಡುವ ಯೋಜನೆ ಮಾಡಿದ್ದು ಬಹು ಶ್ಲಾಘನೀಯವಾಗಿದೆ. ನಾಟಕ ಹಳಗನ್ನಡದಲ್ಲಿ ಕಾವ್ಯರೂಪವಾಗಿರುವುದರಿಂದಲೂ, ನಮ್ಮ ಜನಕ್ಕೆ ಹೊಸದಾದ ಹೆಸರುಗಳೂ ಸನ್ನಿವೇಶವೂ ಇರುವುದರಿಂದಲೂ ಆಕಾಶವಾಣಿಯ ಪ್ರಯೋಗ ಮೊದಲ ಸಲಕ್ಕೆ ಬಹು ಯಶಸ್ವಿಯಾಗಿ ಪರಿಣಾಮ ಉಂಟುಮಾಡುವುದು ಸಾಧ್ಯವಲ್ಲ. ೨೮–೧–೪೩ರಲ್ಲಿ ಆಕಾಶವಾಣಿಯವರು 'ಮ್ಯಾಕ್‌ಬೆತ್'ನ ಮೊದಲ ಎರಡಂಕಗಳನ್ನು ಅಭಿನಯಿಸಿದರು. ಪ್ರಯೋಗ ಯಶಸ್ವಿಯಾಗಿಯೂ ಆಶಾದಾಯಕವಾಗಿಯೂ ಇದ್ದಿತು. ದೃಶ್ಯಗಳ ಕೆಲವು ಭಾಗಗಳನ್ನು ಬಿಟ್ಟದ್ದು ಸರಿಯಾದರೂ ಅಂಕ ೧. ದೃಶ್ಯ ೭ರಲ್ಲಿ ಮ್ಯಾಕ್‌ಬೆತಿನ ಸಾಲಿಲೊಕ್ವಿಯ (soliloquy) ಎರಡನೆಯ ಅರ್ಧವನ್ನಾದರೂ ಕೊಡುವುದು ಮೇಲು. ದ್ವಾರಪಾಲಕನ ದೃಶ್ಯ ಬಿಟ್ಟದ್ದಕ್ಕೆ ಕಾರಣ ತಿಳಿಯಲಿಲ್ಲ. ನಟನಟಿಯರು ಮಾತುಗಳನ್ನು ಸ್ಪಷ್ಟವಾಗಿ ಉಚ್ಚರಿಸಿದರೂ ಅವರ ಶಕ್ತಿ ಎಲ್ಲವೂ ಆ ಕೆಲಸಕ್ಕೇ ವಿನಿಯೋಗವಾದಂತೆ ತೋರಿಬಂದಿತು. ಮಾತು ನಟರ ಸ್ವಾಧೀನವಾದಷ್ಟೂ ಅದಕ್ಕೆ ಹೆಚ್ಚು ಜೀವಕಳೆ ತುಂಬಬಹುದು. ಆಗ ಮಾತುಗಳು ಶ್ರೋತೃಗಳ ಮೇಲೆ ಒಳ್ಳೆಯ ಪರಿಣಾಮ ಮಾಡುವುವು. ಕೆಲವೆಡೆಗಳಲ್ಲಿ — ಕಠಾರಿಯ ಭಾಷಣದಲ್ಲಿ ಮತ್ತು ಅಜ್ಜಯ್ಯನ ದೃಶ್ಯದಲ್ಲಿ (ಅಂಕ ೨. ದೃಶ್ಯ ೪) — ಪುನರುಚ್ಚಾರಣೆ ಆವಶ್ಯಕವಲ್ಲ; ಇದು ಗ್ರಂಥದಲ್ಲಿಯೂ ಇಲ್ಲ. ಈ ದೃಶ್ಯದಲ್ಲೇ ಮ್ಯಾಲ್ಕೊಮ್ ಡಾನಲ್ಬೇಯ್ನರ ಮೇಲೆ ಮ್ಯಾಕ್‌ಡಫ್ ಸಂಶಯ ತೋರುವಾಗ "ರಾಜಕುವರರ್" ಎಂದು ನಕ್ಕು ಅಣಕಿಸಿದ ಧ್ವನಿ ಕೇಳ ಬಂದಿತು. ಈ ಅಣಕಕ್ಕೆ ಗ್ರಂಥಾಧಾರವಿಲ್ಲ. ಅಂಕ ೨. ದೃಶ್ಯ ೩ ರಲ್ಲಿ ಸತಿ ಮ್ಯಾಕ್‌ಬೆತ್ ಮೂರ್ಛೆ ಹೋದಾಗ ಅವಳ ಹೆಸರನ್ನು ಕೂಗಿ ನಾಲ್ಕಾರು ಬಾರಿ ಗೋಳಿಡುವುದೂ ಅನಾವಶ್ಯಕ, ಇದಕ್ಕೂ ಗ್ರಂಥಾಧಾರವಿಲ್ಲ. ಗ್ರಂಥಕ್ಕೆ ಹೆಚ್ಚು ಬೆಲೆ ಕೊಡುವುದು ಮೇಲು. ಹಿನ್ನೆಲೆಯ ವಾದ್ಯದ ಧ್ವನಿ ಹೆಚ್ಚಾಗಿ ನಟರ ಮಾತು ಅಸ್ಪಷ್ಟವಾಗಿದ್ದಿತು. ಒಟ್ಟಿನಲ್ಲಿ ಎಲ್ಲರ ಧ್ವನಿಯೂ ಸ್ವಲ್ಪ ಎತ್ತರದಲ್ಲಿರಬೇಕು. ಲೆನಕ್ಸಿನ ಪಾತ್ರವನ್ನು ಬೇರೆ ನಟನಿಗೆ ಕೊಡುವುದೂ ಉತ್ತಮ. ಬ್ಯಾಗ್‌ಪೈಪಿನ ಧ್ವನಿ ಇನ್ನೂ ತುಂಬು ಕಂಠದಿಂದ ಬಂದರೆ ಸ್ಕಾಟ್ಲೆಂಡಿನ ವಾತಾವರಣ ಹೆಚ್ಚು ಸ್ಪಷ್ಟವಾಗಿ ನಿರ್ಮಿತವಾಗಬಹುದು. ಬಾಗಿಲು ತಟ್ಟಿದ ಶಬ್ದ ಹೆಚ್ಚು ಗಂಭೀರವಾಗಿದ್ದಿದ್ದರೆ ಚೆನ್ನಾಗಿತ್ತು. ಮೊದಲ ಪ್ರಯೋಗವಾದ್ದರಿಂದ ಈ ಸಣ್ಣ ಕುಂದುಕೊರತೆಗಳು ಕಂಡುಬಂದಿವೆ. ಇವೆಲ್ಲ ಬಹು ಅಲ್ಪವಾದುವು. ಎರಡನೆಯ ಪ್ರಯೋಗದ ವೇಳೆಗೆ ಸ್ವಲ್ಪ ಲಕ್ಷ್ಯ ಕೊಟ್ಟರೆ ಇವೆಲ್ಲಾ ಮಾಯವಾಗಿ ಹೋಗುವುದರಲ್ಲಿ ಯಾವ ಸಂಶಯವೂ ಇಲ್ಲ. ಆಕಾಶವಾಣಿಯವರು ಈ ಬಗೆಯ ಪ್ರಯೋಗಗಳನ್ನು ಹೆಚ್ಚು ಹೆಚ್ಚಾಗಿ ಮಾಡಬೇಕು. ಮ್ಯಾಕ್‌ಬೆತ್ ನಾಟಕವನ್ನಂತೂ ಇಷ್ಟಕ್ಕೇ ನಿಲ್ಲಿಸಬಾರದು, ನಿಲ್ಲಿಸುವುದಿಲ್ಲವೆಂದೂ ನಾನು ಭಾವಿಸುತ್ತೇನೆ. ಎರಡು ಅಥವಾ ಮೂರು ದಿನಗಳಲ್ಲಿ ಒಟ್ಟು ನಾಟಕವನ್ನು ಕೊಡುವ ಏರ್ಪಾಡನ್ನು ಮಾಡಿದರೆ ಬಹು ಅನುಕೂಲ. ಇದಕ್ಕೆ ಒಂದೆರಡು ದಿನ ಮುಂಚೆ ವೃತ್ತಪತ್ರಿಕೆಗಳಲ್ಲಿ ನಾಟಕದ ಸಾರಾಂಶ ಬರುವಂತೆ ಮಾಡಿದರೆ, ಕೇಳುವವರಿಗೆ ಆಸಕ್ತಿಯುಂಟಾಗುವುದರಲ್ಲಿಯೂ, ಅನುಕೂಲವಾಗುವುದರಲ್ಲಿಯೂ ಸಂಶಯವಿಲ್ಲ. ಈಗಿನ ಪ್ರಯೋಗಕ್ಕೆ ಆಕಾಶವಾಣಿಯನ್ನು ಅಭಿನಂದಿಸಿ, ಮುಂದಿನ ಪ್ರಯೋಗದ ತಾರೀಖನ್ನು ಉತ್ಸಾಹದಿಂದ ಎದುರುನೋಡುತ್ತಿದ್ದೇನೆ.— **ಮಂ.**

# ಕನ್ನಡ ನುಡಿ

**ಶುಕ್ರವಾರ, ಫೆಬ್ರುವರಿ ೧೯, ೧೯೪೩**

## ಬೆಂಗಳೂರಿನಲ್ಲಿ ತುರ್ಕಿಯ ಪತ್ರಿಕಾ ಪ್ರತಿನಿಧಿಗಳು

ಇಂದಿನ ತುರ್ಕಿದೇಶದ ಬಹುಮುಖವಾದ ಏಳಿಗೆಗೆ ಮುಸ್ತಫಾ ಕಮಾಲ್ ಪಾಷಾ ಅವರು, ಕಳೆದ ಮಹಾಯುದ್ಧ ಮುಗಿದ ಮೇಲೆ ಅಧಿಕಾರಕ್ಕೆ ಬಂದು, ದಿಟ್ಟತನದಿಂದ ಕೈಕೊಂಡ ಹಲವು ಸುಧಾರಣೆಯ ಮಾರ್ಗಗಳೇ ಕಾರಣ. ಅವರ ಧೀರಪ್ರಯತ್ನದ ಫಲವಾಗಿ ಬಹುಕಾಲದಿಂದ 'ಯೂರೋಪಿನ ರೋಗಿರಾಷ್ಟ್ರ'ವೆಂಬ ಮಾತಿಗೆ ತುತ್ತಾಗಿದ್ದ ಆ ದೇಶಕ್ಕೆ ಹೊಸ ಜೀವ ಬಂದು, ಪ್ರಗತಿಪರ ರಾಷ್ಟ್ರಗಳಲ್ಲಿ ಅದು ಒಂದು ಎಂದು ಗಣಿಸುವಂತಾಯಿತು. ಈ ಮಾರ್ಪಾಟು ಅವರ ಜೀವಮಾನದಲ್ಲೆ ಆದದ್ದು ಕಮಾಲರ ಭಾಗ್ಯ, ತುರ್ಕಿಯ ಯೋಗ. ಇದಕ್ಕಾಗಿಯೇ ಅವರು 'ಅತಾತುರ್ಕ್' (ತುರ್ಕಿಯ ತಂದೆ) ಎಂದು ಕರೆಯಿಸಿಕೊಂಡು ತುರ್ಕಿಯ ಹಾಗೂ ಪ್ರಪಂಚದ ಇತಿಹಾಸದಲ್ಲಿ ನೂರುಕಾಲ ನೆನಪಿನಲ್ಲುಳಿಯುವ ವ್ಯಕ್ತಿಯಾದರು.

ಅವರು ತಮ್ಮ ದೇಶವನ್ನು ಉದ್ಧಾರ ಮಾಡಲು ತಳೆದ ದೀಕ್ಷೆ, ಕೈಕೊಂಡ ಮನೋಧರ್ಮ, ಮಾಡಿದ ಕೆಲಸ — ಯಾವುದರಲ್ಲಿಯೂ ಸಂಕುಚಿತ ಭಾವನೆಯನ್ನು ತೋರಲಿಲ್ಲ. ತುರ್ಕಿ ಬೆಳೆಯಬಹುದಾದರೆ, ಬೆಳೆಯ ಬೇಕಾದರೆ ಅದಕ್ಕೆ ಒಗ್ಗದ ರೂಢಿ ಬೇಡ; ಮುನ್ನಡೆಯನ್ನು ತಡೆಯುವ ಸಂಪ್ರದಾಯದ ಕಟ್ಟುಗಳು ಬೇಡ; ಸ್ವದೇಶಾಭಿಮಾನದ ಅತ್ಯಭಿಮಾನ, ದುರಭಿಮಾನ ಬೇಡ; ತುರ್ಕಿಯ ಪ್ರತಿಯೊಂದು ಜೀವವೂ ಬೆಳೆದು ಜೀವನವೂ ಬೆಳೆದು ಪ್ರಪಂಚದ ಪ್ರಗತಿಯ ಪ್ರವಾಹಕ್ಕೆ ಹೊಂದಿಕೊಳ್ಳುವುದಕ್ಕೆ ತಕ್ಕ ರೀತಿಯಲ್ಲಿ ಮನಸ್ಸನ್ನು ಬೆಳಸೋಣ, ಕೆಲಸವನ್ನು ಮಾಡೋಣ ಎಂಬುದು ಕಮಾಲರು ಕೈಕೊಂಡ ಸುಧಾರಣೆಯ ಮೂಲಸೂತ್ರ. ಆದ್ದರಿಂದಲೆ ಅವರು ಸಾಧಿಸಿದ ಸುಧಾರಣೆಯ ಒಟ್ಟು ಚಿತ್ರ — ಅದನ್ನು ಅಕ್ಷರ ಪ್ರಚಾರ, ಭಾಷೆ, ಸಾಹಿತ್ಯ, ವಾಣಿಜ್ಯ, ಅರ್ಥ, ರಾಜಕೀಯ ಮುಂತಾಗಿ ಯಾವ ಮುಖದಿಂದ ನೋಡಿದರೂ ಅದು — ಲೌಕಿಕವಾಗಿ ಕಂಡು ಬರುತ್ತಿರುವುದು.

ಇಂಥ ನಾಡಿನಿಂದ ಎಂ. ಆಟೆಯವರ ಮುಂದಾಳುತನದಲ್ಲಿ ನಮ್ಮ ನಾಡಿಗೆ ಬಂದಿರುವ ಅತಿಥಿಗಳು — ತುರ್ಕಿಯ ಪತ್ರಿಕಾ ಮಂಡಲಿಯ ಸದಸ್ಯರು — ಎಲ್ಲ ಕಡೆಗಳಲ್ಲೂ ವಿಶ್ವಾಸದ ಮತ್ತು ನಂಟಿನ ಸ್ವಾಗತವನ್ನು ಪಡೆಯುತ್ತಿದ್ದಾರೆ. ಇವರು ಕಳೆದ ವಾರ ಮೈಸೂರು ಸಂಸ್ಥಾನಕ್ಕೂ ಭೇಟಿ ಕೊಟ್ಟರು. ಮೈಸೂರಿನ ಪ್ರಕೃತಿ ಸೌಂದರ್ಯವನ್ನು ದರ್ಶನ ಮಾಡಿದರು. ಬೆಂಗಳೂರು ಪತ್ರಿಕೋದ್ಯೋಗಿಸಂಘ ಮುಂತಾದ ಸಂಸ್ಥೆಗಳಿಂದ ಸತ್ಕಾರ ಪಡೆದರು.

ಒಂದು ನಾಡಿನ ಎಲ್ಲ ಮುಖದ ಏಳಿಗೆಗೆ ಆ ನಾಡಿನ ಜನವರ್ಗ ಅಕ್ಷರಸ್ಥರಾಗುವುದೇ ಸರಿಯಾದ ತಳಪಾಯ. ಆದ್ದರಿಂದ ನಾವು ತುರ್ಕಿಯಲ್ಲಿ ಅಷ್ಟು ದೊಡ್ಡ ಪ್ರಮಾಣದ ಸುಧಾರಣೆ ಅಲ್ಪ ಕಾಲಾವಧಿಯಲ್ಲಿ ನಡೆದುದಕ್ಕೆ ಕಮಾಲರ ಸುಧಾರಣ ಕಾರ್ಯಕ್ರಮದಲ್ಲಿ ಅಕ್ಷರ ಪ್ರಚಾರಕ್ಕೆ, ಜ್ಞಾನ ಪ್ರಸಾರಕ್ಕೆ ಮುಖ್ಯಸ್ಥಾನವನ್ನು ಕೊಟ್ಟದ್ದುದನ್ನು ಗಮನಿಸುವುದು ಒಳ್ಳೆಯದು. ಅತಿಥಿಗಳು ಬೆಂಗಳೂರಿಗೆ ಬಂದ ದಿನವೇ ರೈಲ್ವೆ ನಿಲ್ದಾಣದಲ್ಲಿ ನಡೆದ ಸಂಭಾಷಣೆಯಲ್ಲಿ, ಬೆಂಗಳೂರಿನ ಬಹು ಉತ್ತಮವಾದ ಹವ ಮುಂತಾದ ಉಪಚಾರದ ಮಾತಾದ ಮೇಲೆ, ತುರ್ಕಿಯ ಪತ್ರಿಕೆಗಳ ಪ್ರಚಾರ — ಕನಿಷ್ಠ ೫೦,೦೦೦ ಇರುವುದು; ವಿದ್ಯಾವಂತರ ಸಂಖ್ಯೆ — ೭ರಿಂದ ೭೦ಕ್ಕೆ ಏರಿದ್ದು ಎಂಬ ಮುಖ್ಯ ಪ್ರಶ್ನೆ ಮಾತಿನ ಸರಣಿಗೆ ನುಗ್ಗಿತು.

೧೯೨೮ರಲ್ಲಿ ತುರ್ಕಿಯಲ್ಲಿ ಅಕ್ಷರಪ್ರಚಾರವೂ, ಭಾಷೆಯ ಸುಧಾರಣೆಯೂ ಜೊತೆ ಜೊತೆಯಾಗಿಯೆ ನಡೆದುವು. ಅರಬ್ಬಿ ಲಿಪಿಗೆ ಬದಲಾಗಿ ಸುಲಭವೆಂದು ರೋಮಕ (Roman) ಲಿಪಿಯನ್ನು ರೂಢಿಗೆ ತಂದರು. ಭಾಷೆಯನ್ನು ಸರಳವಾಗಿ ತಿದ್ದಿದರು. ಅಗತ್ಯವಾಗಿದ್ದ ಬಲವಂತವೂ ಸೇರಿತು. ವಿದ್ಯಾಭ್ಯಾಸ ಕ್ರಮದಲ್ಲಿ ಅನುಗುಣವಾದ ಮಾರ್ಪಾಟುಗಳಾದುವು. ಇವುಗಳ ಫಲವಾಗಿ ತುರ್ಕಿಯ ಜನವರ್ಗ ಬೇಗ ಬೇಗ ಅಕ್ಷರಸ್ಥರಾದರು, ಕಲಿತ ಅಕ್ಷರವನ್ನು ಮರೆಯದಂತೆ ಏರ್ಪಾಟುಗಳೂ ಇದ್ದುದರಿಂದ ಅಕ್ಷರತೆಯ ಸಂಖ್ಯೆ ಏರಿತು. ಜನಜೀವನದ ಸಂತೋಷ ಸಂತುಷ್ಟಿಗಳು ಹೆಚ್ಚಲು ನಡೆದ ದೊಡ್ಡ ಪ್ರಯತ್ನಗಳಲ್ಲಿ ಜನವರ್ಗ ಹೆಚ್ಚು ಹೆಚ್ಚಾಗಿ ಭಾಗವಹಿಸಲು ಅವಕಾಶವಾಯಿತು.

ನಮ್ಮ ನಾಡಿನಲ್ಲಿ ಈಗ ಅಕ್ಷರ ಪ್ರಚಾರದ ಕೆಲಸ ಬಹಳ ಭರದಿಂದ ನಡೆಯುತ್ತಿದೆ. ಸರ್ಕಾರವೂ ಸಾರ್ವಜನಿಕ ಸಂಸ್ಥೆಗಳೂ ಇದನ್ನು ಶ್ರದ್ಧೆಯಿಂದ ನಡಸಿಕೊಂಡು ಬರುತ್ತಿವೆ. ಇಂಥಾ ಸಮಯದಲ್ಲಿ ತುರ್ಕಿಯಿಂದ ಬಂದು ಕೆಲಕಾಲ ನಮ್ಮ ನಾಡಿನಲ್ಲಿ ಸಂಚರಿಸಿ, ಅಲ್ಲಿನ ಅನುಭವವನ್ನು ಇಲ್ಲಿ ಹೇಳಿ, ಇಲ್ಲಿನ ಅನುಭವವನ್ನು ಅಲ್ಲಿಗೆ ಕೊಂಡು ಉಭಯ ರಾಷ್ಟ್ರಗಳ ಸಖ್ಯವನ್ನು ಬೆಳಸಲು ಉದ್ಯುಕ್ತರಾಗಿರುವ ತುರ್ಕಿಯ ಪತ್ರಿಕೋದ್ಯೋಗಿ ಮಂಡಲಿಗೆ ನಮ್ಮ ವಂದನೆಗಳು ಸಲ್ಲತಕ್ಕವಾಗಿವೆ.

## ಶ್ರೀ ಪುರಂದರದಾಸರ ಪರಿಚಯ

(ಶ್ರೀ. ಎಂ. ವಿ. ಸೀತಾರಾಮಯ್ಯನವರು, ಎಂ.ಎ.)

(ಕಳೆದ ಸಂಚಿಕೆಯಿಂದ ಮುಂದುವರಿದುದು)

ದಾಸರು ಗುರುವಿನಲ್ಲಿ ಉಪದೇಶಪಡೆದು ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಸಾಧಿಸಿದರು: ವೇದ, ಉಪನಿಷತ್ತು, ಸ್ಮೃತಿ, ಪುರಾಣಗಳು ಮೊದಲಾದವುಗಳನ್ನು ವ್ಯಾಸಂಗಮಾಡಿ ಅವುಗಳ ಸಾರವನ್ನು ಹೀರಿದರು, ಮತ್ತು ಹಾಗೆ ಲಭಿಸಿದ ಜ್ಞಾನವನ್ನು ತಮ್ಮ ಜೀವನದಲ್ಲಿ ಅನುಸಂಧಾನ ಮಾಡತೊಡಗಿದರು. ಅವರು "ಹರಿಸರ್ವೋತ್ತಮನೆಂಬ ಜ್ಞಾನವ" ಪಡೆದರು; "ಜೀವ ಈಶಗೆ, ಜೀವ ಜೀವಕೆ, ಜೀವ ಜಡಕೆ, ಜಡ ಜಡಕೆ, ಜೀವ ಜಡ ಪರಮಾತ್ಮಗೆ ಸರ್ವತ್ರ ಭೇದ" ಎಂಬ ಇದೇ ಮುಂತಾದ ಮಧ್ವಮತ ಸಿದ್ಧಾಂತ ಸಾರವನ್ನು ಗ್ರಹಿಸಿದರು; "ಲೊಳಲೊಟ್ಟೆ ಎಲ್ಲಾ ಲೊಳಲೊಟ್ಟೆ" ಈ ಬದುಕು, "ವಾರಿಜನಾಭನ ಕರುಣವೆ ಸ್ಥಿರ, ಸಂಸಾರ ಎರವು", "ಭಾಗ್ಯ ಯಾರಿಗೂ ಸ್ಥಿರವಲ್ಲ", "ಲೋಕದ ಸಂಸಾರ" "ಪಕ್ಷಿ ಅಂಗಳದಲ್ಲಿ ಬಂದು ಕೂತಂತೆ, ಆ ಕ್ಷಣದಲ್ಲಿ ಹಾರಿಹೋದಂತೆ"; "ದೇಹ ನಿತ್ಯವಲ್ಲ ನಿತ್ಯವಲ್ಲ ಅನಿತ್ಯ, ಬಂದು ಯಮದೂತರು ಸೆಳೆದೊಯ್ಯುವಾಗ ಹಿಂದೆ ಬಾಹೋರಿಲ್ಲ"; "ಹರಿಚಿತ್ತ ಸತ್ಯ ನರಚಿತ್ತ ಲವಲೇಶ ನಡೆಯದು"; "ಭವರೋಗಕ್ಕೆ ವೈದ್ಯ ಹರಿಯೆ"; "ಅಪಾಯ ಕೋಟಿಗಳಿಗುಪಾಯವೊಂದೆ, ಹರಿಭಕ್ತರು ತೋರಿಕೊಟ್ಟ ಉಪಾಯವೊಂದೆ, ಪುರಂದರ ವಿಠಲನ್ನ ಭೋರಿಟ್ಟು ಕರೆವ ಉಪಾಯವೊಂದೆ" — ಎಂದು ಮುಂತಾಗಿ ಸಂಸಾರದ ನಿಸ್ಸಾರತೆಯನ್ನೂ ದೇಹದ ನಶ್ವರತೆಯನ್ನೂ ವಿಧಿಯ ಮುಂದೆ ಮಾನವನ ಅಸಹಾಯತ್ವವನ್ನೂ ಹರಿಯನ್ನು ನಂಬುವುದೇ ಮುಕ್ತಿಗುಪಾಯವೆಂಬುದನ್ನೂ ಚೆನ್ನಾಗಿ ಮನಗಂಡು, ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಸಾಧಿಸಿದರು. ಇನ್ನು ದಾಸರ ಪಥ ಸುಗಮವಾಯಿತು; ಸಾಧನದ ಗುರಿಯಾದ ಪರಮಾತ್ಮನ ಸಾಕ್ಷಾತ್ಕಾರ ಸಮೀಪವರ್ತಿಯಾಯಿತು. ಅವರು ಕಠೋರ ನಿಷ್ಠೆಯಿಂದ ಭಗವಂತನ ಆರಾಧನೆ ಮಾಡತೊಡಗಿದರು. "ಎಂತು ನಿನ್ನ ಪೂಜೆಮಾಡಿ ಮೆಚ್ಚಿಸುವೆನೊ" ಎಂಬ ಚಿಂತೆಗೊಳಗಾದರು. "ಅಣುವಾಗಬಲ್ಲ ಮಹತ್ತಾಗಬಲ್ಲ, ಅಣು ಮಹತ್ತುಗಳೆರಡೊಂದಾಗಬಲ್ಲ. ಸಗುಣನಾಗಬಲ್ಲ, ನಿರ್ಗುಣನಾಗಬಲ್ಲ" — ಇಂತಹ ಸರ್ವೇಶ ಸರ್ವವ್ಯಾಪಕ ಸರ್ವಜ್ಞನಾದ ಭಗವಂತನನ್ನು ಸಾಕಾರವಾಗಿ ಕಾಣಬೇಕೆಂಬ ಅಪೇಕ್ಷೆ ದಾಸರಲ್ಲಿ ಸಹಜವಾಗಿ ಅಂಕುರಿಸಿರಬೇಕು. "ಎಂದಪ್ಪಿಕೊಂಬೆ ರಂಗಯ್ಯನ ಎಂದಪ್ಪಿಕೊಂಬೆ, ನಾನೆಂದು ಮುದ್ದಾಡುವೆ, ಎಂದಿಗೆ ಸವಿಮಾತಾಡಿ ನಾ ದಣಿವೆ" ಎಂದು ದಾಸರು ಹಾತೊರೆಯ ತೊಡಗಿದರು. ಶ್ರೀ ಹರಿಯ ಧ್ಯಾನದಲ್ಲಿ ಅವರು ಮೈಮರೆತರು. "ಅಚ್ಯುತನ ನಾಮವೆಂಬ ಹುಚ್ಚು ಹಿಡಿಯಿತು" ಅವರಿಗೆ. ಭಕ್ತಿಯ

ಕಣ್ಣಿಯಿಂದ ಅವರು ಭಗವಂತನನ್ನು ಕಟ್ಟಿಹಾಕಲು ಪ್ರಯತ್ನಪಟ್ಟರು. ಕಡೆಗೆ ಅರಿತರು: ಭಗವಂತನನ್ನು ಯೋಗದೃಷ್ಟಿಯಲ್ಲಿ, "ಒಳಗಣ್ಣಿನಿಂದಲಿ", ನೋಡಬೇಕೆಂಬುದನ್ನು. "ಕರಿಯು ಕನ್ನಡಿಯೊಳಗೆ ಅಡಗಿಪ್ಪ ತೆರನಂತೆ ನೀನು ಎನ್ನೊಳಡಗಿಪ್ಪೆ" ಎಂಬ ಪರಮ ಜ್ಞಾನ ಅವರಿಗೆ ಉಂಟಾಯಿತು. ಇದಕ್ಕಿಂತ ಹೆಚ್ಚಿನ ಪರಮಾತ್ಮ ಸಾಕ್ಷಾತ್ಕಾರ ಯಾವುದು ?

ಹರಿಕೃಪೆಯಿಂದ, ಗುರು ಕೃಪೆಯಿಂದ, ತಮ್ಮ ಧ್ಯೇಯಸಾಧನೆ ಯಾದಮೇಲೆ ಪುರಂದರ ದಾಸರು ತಾವು ಕೃತ ಕತ್ಯರಾದಂತೆ ಭಾವಿಸಿಕೊಳ್ಳಲಿಲ್ಲ. ಜನಸಾಮಾನ್ಯದಲ್ಲಿ ಭಾಗವತ ಧರ್ಮವನ್ನೂ ದ್ವೈತ ದರ್ಶನವನ್ನೂ ಪ್ರಸಾರ ಮಾಡುವುದಕ್ಕಾಗಿ ಆ ವೇಳೆಗಾಗಲೆ ಸ್ಥಾಪಿತವಾಗಿದ್ದ ದಾಸಕೂಟಕ್ಕೆ ಸೇರಿ, ದ್ವೈತ ಸಿದ್ಧಾಂತವನ್ನೂ ಭಾಗವತ ಧರ್ಮವನ್ನೂ ವೇದ ಉಪನಿಷತ್ತುಗಳ ಸಾರವನ್ನೂ ಜೊತೆಗೆ ತಮ್ಮ ಸಾಧನಾ ಫಲವಾದ ಅನುಭವಾಮೃತವನ್ನೂ ಜನಸಾಮಾನ್ಯದಲ್ಲಿ ಪ್ರಸಾರ ಮಾಡತೊಡಗಿದರು. ಇವರಿಗಿಂತ ಪೂರ್ವದಲ್ಲಿ ಬಸವೇಶ್ವರರೇ ಮೊದಲಾದ ಶಿವಶರಣರೂ, ಹರಿದಾಸರುಗಳೂ ಮತ ಧರ್ಮವನ್ನು ನಾಡ ನುಡಿಯಲ್ಲಿ ವಚನಗಳ ಮೂಲಕವೂ ಉಗಾಭೋಗಗಳ ಮೂಲಕವೂ ಬೋಧಿಸುವ ಪರಿಣಾಮಕಾರಿಯಾದ ಮಾರ್ಗವನ್ನು ಬಳಕೆಗೆ ತಂದಿದ್ದರು. ಉಗಾಭೋಗಗಳು ವಚನಗಳನ್ನು ಹೋಲುತ್ತವೆ; ಉಗಾಭೋಗಗಳನ್ನೂ ವಚನಗಳನ್ನೂ ಹೇಳುತ್ತಿದ್ದುದ್ದು ಆ ಕಾಲದ ಬೋಧಕರ ರೂಢಿಯಾಗಿತ್ತು; ಇವೆರಡನ್ನೂ ಹಾಡುತ್ತಿದ್ದಿರಬೇಕೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಈ ರೂಢಿಯನ್ನು ಅನುಸರಿಸಿಯೇ ಪುರಂದರದಾಸರು ಉಗಾಭೋಗಗಳನ್ನು ರಚಿಸಿರುವರಾದರೂ ವಚನ ಸಾಹಿತ್ಯದ ಪ್ರಭಾವ ಅವರ ಮೇಲೆ ಬಿದ್ದಿರಬಹುದೆ ಎಂಬ ಸಂಧೇಹ ಹುಟ್ಟುತ್ತದೆ. ಇದು ವಿಚಾರ ಮಾಡತಕ್ಕ ಸಂಗತಿ. ಮಹಾಪುರುಷರು ಯಾವಾಗಲೂ ಹೊಸದಾರಿ ತುಳಿಯುತ್ತಾರೆ, ಅವರು ತುಳಿದ ದಾರಿ ಇತರರಿಗೆ ರಾಜಮಾರ್ಗವಾಗುತ್ತದೆ. ಅಂತೆಯೇ ಪುರಂದರದಾಸರು ತಮ್ಮ ಬೋಧನೆಗಾಗಿ ವಚನ ಪದ್ಧತಿಯನ್ನು ಅಷ್ಟಾಗಿ ಹಿಡಿಯದೆ ಸಂಗೀತ ಪದ್ಧತಿಯನ್ನು ಪ್ರಥಮತಃ ಅವಲಂಬಿಸಿ, ಕೀರ್ತನೆ ಸುಳಾದಿಗಳನ್ನು ಕಟ್ಟಿ ಹಾಡಿ, ಕರ್ನಾಟಕ ಸಂಗೀತದ ಆದ್ಯ ಪ್ರವರ್ತಕರೆನಿಸಿದರು; ಹರಿದಾಸ ಸಾಹಿತ್ಯ ಶಿರೋರತ್ನವೆನಿಸಿದರು.

ಪುರಂದರದಾಸರು ಬರೆದಿರುವ ಸುಳಾದಿಗಳು, ಉಗಾಭೋಗಗಳು ಇವನ್ನು ಹಾಡುವ ಕ್ರಮ ಬಳಕೆ ತಪ್ಪಿಹೋಗಿದೆ, ಯಾರೂ ಹಾಡುತ್ತಲೂ ಇಲ್ಲ. ಇವುಗಳ ವಿಚಾರ ಹಾಗಿರಲಿ. ದೇವರ ನಾಮಗಳನ್ನು ಕೂಡ ಕ್ರಮಬದ್ಧವಾಗಿ ಹಾಡುತ್ತಿಲ್ಲ; ಹಾಗೆ ಹಾಡಲಾಗುವುದಿಲ್ಲವೆಂಬ ಭಾವನೆ ಹಲವರಿಗೆ. ಇದು ತಪ್ಪು ಭಾವನೆ. ದಾಸರು ತಮ್ಮ ಪ್ರತಿಯೊಂದು ದೇವರ ನಾಮವನ್ನೂ ಪಲ್ಲವಿ, ಅನುಪಲ್ಲವಿ, ಚರಣಗಳಾಗಿ ವಿಭಾಗಿಸಿರುವರೆಂಬುದನ್ನು ನಾವು ಗಮನಿಸಬೇಕು. ಈ ಬಗೆಯ ವಿಭಾಗಗಳು ಕರ್ನಾಟಕ ಸಂಗೀತ ಕೃತಿಗಳ ಪ್ರಮುಖ ಅಂಗಗಳೆಂಬುದನ್ನು ಸಂಗೀತ ಶಾಸ್ತ್ರಜ್ಞರೆಲ್ಲರೂ ಬಲ್ಲರು. ದಾಸರಿಗಿಂತ ಹಿಂದೆ ದಕ್ಷಿಣ ದೇಶದ ಯಾವ ಸಾಹಿತ್ಯದಲ್ಲೂ ಈ ಬಗೆಯ ಕಟ್ಟಡವುಳ್ಳ ಕೃತಿಗಳು ದೊರೆತಿಲ್ಲ. ಇಷ್ಟೇ ಅಲ್ಲ. ದಾಸರು ಸಂಗೀತಶಾಸ್ತ್ರ ಪಾಂಡಿತ್ಯವನ್ನು ಹೊಂದಿದ್ದರೆಂಬುದಕ್ಕೆ ಅವರ ಕೃತಿಗಳಲ್ಲಿ ಸುಳಿವು ದೊರೆಯುತ್ತದೆ. "ಅಂಗನೆಯರೆಲ್ಲ ನೆರೆದು ಚಪ್ಪಾಳಿಕ್ಕುತ ಪಾಡಿ ರಂಗನ ಕುಣಿಸುವರು" ಎಂಬ ಕೀರ್ತನೆಯಲ್ಲಿ "ಪಾಡಿ ಮಲ್ಹಾರಿ ಭೈರವಿ ಸಾರಂಗಿ ದೇಶಿ ಗುಂಡಕ್ರಿಯ ಗುಜ್ಜರಿ ಕಲ್ಯಾಣಿ ರಾಗದಿ" ಎಂದೂ, "ರಂಗಕೊಳಲನೂದಲಾಗಿ" ಎಂಬ ಕೀರ್ತನೆಯಲ್ಲಿ "ಸಾಮಕ್ರಿಯ ಮೇಘರಂಜನಿ ಪಾಡೆ" ಎಂದೂ ದಾಸರು ಕೆಲವು ಪ್ರಮುಖ ರಾಗಗಳನ್ನು ಹೆಸರಿಸಿದ್ದಾರೆ; ಇದಕ್ಕಿಂತ ಹೆಚ್ಚಾಗಿ, "ಆಡಿದನೋ ರಂಗ ಅದ್ಭುತದಿಂದಲಿ ಕಾಳಿಂಗನ ಫಣೆಯಲಿ" ಎಂಬ ಆರಭಿ ರಾಗದ ಕೀರ್ತನೆಯಲ್ಲಿ "ಝುಂತಟ ತಕಧಿಮಿ ತಧಿಗಿಣಿ ತೋಂ ಎಂದು ಝುಂಪೆ ತಾಳದಿ ತುಂಬುರನೊಪ್ಪಿಸೆ, **ಧಾ ನು ಪ ಸಾ ಧ ಸ ರೀ**" ಎಂದು ಆರಭಿ ರಾಗದ ಸ್ವರ ಸಂಚಾರವನ್ನು ನಿರ್ದೇಶಿಸಿರುವುದೂ, ಮೃದಂಗದ ಜತಿಗಳನ್ನು ಕೀರ್ತನೆಯ ತಾಳಕ್ಕೆ ಅಳವಡಿಸಿರುವುದೂ ಸಂಗೀತ ಶಾಸ್ತ್ರ ಜ್ಞಾನವನ್ನು ಸೂಚಿಸುತ್ತವೆ. ಅಲ್ಲದೆ, ದಾಸರ ಕರ್ನಾಟಕ ಸಂಗೀತಕ್ಕೆ ಕಲಶಪ್ರಾಯರಾದ ಶ್ರೀ ತ್ಯಾಗರಾಜರು ತಮ್ಮ ಪ್ರಹ್ಲಾದ ಭಕ್ತಿ ವಿಜಯ" ಎಂಬ ಪ್ರಬಂಧದಲ್ಲಿ

"ದುರಿತ ವ್ರಾತಮುಲೆಲ್ಲನು
ಪರಿಮಾರ್ಚೆಡಿ **ಹರಿಗುಣಮುಲ ಬಾಡುಚುನೆಪುಡುನ್** ।
ಪರವಶುಡೈ ವೆಲಯು ಪುರಂ
ದರದಾಸುನಿ ಮಹಿಮಮುಲನು ದಲಚೆದ ಮದಿಲೋನ್ ॥

ಎಂದು ಭಕ್ತಿಯಿಂದ ಸ್ಮರಿಸಿರುವುದು ಗಮನಾರ್ಹವಾಗಿದೆ. ಉತ್ತಮ ಹಾಡಿಕೆಯ ವಿಚಾರದಲ್ಲಿ "ತಾಳ ಬೇಕು, ತಕ್ಕ ಮೇಳ ಬೇಕು, ಶಾಂತ ವೇಳೆ ಬೇಕು ಗಾನವನ್ನು ಕೇಳಬೇಕೆಂಬುವವರಿಗೆ; ಯತಿ ಪ್ರಾಸವಿರಬೇಕು, ಗತಿಗೆ ನಿಲ್ಲಿಸಬೇಕು, ಗಳ ಶುದ್ಧ ವಿರಬೇಕು, ತಿಳಿದು ಪೇಳಲಿಬೇಕು, ಕಳವಳವ ಬಿಡಬೇಕು, ಕಳೆಮುಖವಿರಬೇಕು" ಎಂಬುದಾಗಿ ದಾಸರು ಹೇಳಿದ್ದಾರೆ. ಇದರಿಂದ ಅವರಿಗೆ ಬರಿಯ ಶಾಸ್ತ್ರಭಾಗ ಪರಿಚಯ ಮಾತ್ರವಲ್ಲದೆ ಉತ್ತಮ ರೀತಿಯ ಹಾಡಿಕೆಯೂ ಬರುತ್ತಿದ್ದಿರಬಹುದೆಂದು ಊಹಿಸಬಹುದಲ್ಲವೆ? ಹೀಗೆ, ದಾಸರು ಕೀರ್ತನೆಗಳನ್ನು ಕಟ್ಟಿ ಹಾಡಿ, ಬಹಳ ಪ್ರಾಚೀನ ಕಾಲದಿಂದ ದಕ್ಷಿಣ ದೇಶದಲ್ಲಿ ರೂಢಿಯಲ್ಲಿದ್ದಿರಬೇಕಾದ ದಾಕ್ಷಿಣಾತ್ಯ ಸಂಗೀತವನ್ನು ಉಜ್ಜೀವನಗೊಳಿಸಿ ಅದಕ್ಕೆ ಮೂರ್ತಸ್ವರೂಪವನ್ನು ಕೊಟ್ಟು, ದಾಕ್ಷಿಣಾತ್ಯ ಸಂಗೀತಕ್ಕೆ ಕರ್ನಾಟಕ ಸಂಗೀತವೆಂದು ಹೆಸರಾಗಲು ಕಾರಣಭೂತರಾದರು.

ನಮ್ಮ ದೇಶದಲ್ಲಿ ಸಂಗೀತ ಎಂದಿನಿಂದಲೂ ಭಗವನ್ನಾಮ ಸಂಕೀರ್ತನೆಗೆ ಮೀಸಲಾಗಿದೆ. ದಾಸರಾದರೂ ಸಹ ತಮ್ಮ ಹರಿಭಕ್ತಿ ಕುಸುಮಗಳನ್ನು ಸಂಗೀತವೆಂಬ ದಾರದಲ್ಲಿ ಕೋದು ದೇವನಡಿಗಳಿಗೆ ಅರ್ಪಿಸಿರುವುದು ಅನಾದಿ ಸಂಪ್ರದಾಯಕ್ಕೆ ಅನುಸಾರವಾಗಿದೆ. "ಹರಿ ಸ್ಮರಣವಿಲ್ಲದ ಹಾಡಿಕೆ ಅರಣ್ಯರೋದನ, "ಕೇಳನೋ ಹರಿ ತಾಳನೋ ತಾಳ ಮೇಳಗಳಿದ್ದು ಪ್ರೇಮ(ಭಕ್ತಿ)ವಿಲ್ಲದ ಗಾನ" ಎಂದು ಅವರ ಮತ. ಹರಿ ಭಕ್ತಿ ಪ್ರದರ್ಶನಕ್ಕೆ ಮಾತ್ರವಲ್ಲದೆ, ತಮ್ಮ ಬೋಧನೆಗೂ ದಾಸರು ಸಂಗೀತವನ್ನು ಸಾಧನವನ್ನಾಗಿಟ್ಟುಕೊಂಡದ್ದು ಅವರ ವೈಶಿಷ್ಟ್ಯ. ಔಷಧವನ್ನು ಜೇನಿನ ಅನುಪಾನದಲ್ಲಿ ಕೊಟ್ಟರೆ ರೋಗಿಗೆ ಪ್ರಿಯವೂ ಹಿತಕಾರಿಯೂ ಆಗುವಂತೆ, ಸಂಗೀತ ಸುಧಾರಸದಲ್ಲಿ ಬೆರಸಿ ಬೀರಿದ ದಾಸಬೋಧೆಯನ್ನು ನಾಡು ಸವಿದು, ನಾಡಿನ ಬದುಕು ನಯವಾಯಿತು, ಹಸನಾಯಿತು, ಮಧುರವಾಯಿತು. ಅವರ ಬೋಧೆ ಅಂದಿನಿಂದ ಇಂದಿನ ವರೆಗೆ ನಾಡಿನಮೇಲೆ ಪ್ರಭಾವ ಬೀರಿ, ನಮ್ಮ ಒಟ್ಟು ಸಂಸ್ಕೃತಿಯನ್ನೇ ರೂಪಗೊಳಿಸಿದೆಯೆಂಬುದಕ್ಕೆ ಅವರ ನುಡಿಗಳು ಗಾದೆ ಮಾತುಗಳಂತೆ ಜನದ ಬಾಯಲ್ಲಿ ಉಲಿಯುತ್ತಿರುವುದೇ ಸಾಕ್ಷಿ. ದಾಸರ ಕೃತಿಗಳು ಸಂಗೀತದಲ್ಲಿ ಮಾತ್ರವಲ್ಲದೆ ಕನ್ನಡ ಸಾಹಿತ್ಯದಲ್ಲೂ ಒಂದು ದೊಡ್ಡ ಸ್ಥಾನವನ್ನು ಪಡೆದಿವೆ. ಆತ್ಮವನ್ನು ವಿಕಾಸಮಾಡುವ, ಜೀವನವನ್ನು ವಿಮರ್ಶೆಮಾಡುವ ಬರವಣಿಗೆ ಸಾಹಿತ್ಯ ಎಂದು ಒಪ್ಪುವುದಾದರೆ ದಾಸರ ಕೃತಿಗಳು ಶ್ರೇಷ್ಠ ತೆರದ ಸಾಹಿತ್ಯ ಎನ್ನಲು ಯಾವ ಅಡ್ಡಿಯೂ ಇಲ್ಲ.

ದಾಸರ ಬೋಧೆ ಬಹುಶ್ರುತ, ಬಹುವ್ಯಾಪಕ, ಬಹುಮುಖಿ. ಅವರು ಬೇರೆ ಬೇರೆ ಮಟ್ಟದ ಜನಕ್ಕೆ ಬೇರೆ ಬೇರೆ ರೀತಿಯಲ್ಲಿ ಬೋಧಿಸಿದ್ದರೂ, ಒಟ್ಟಿನಲ್ಲಿ ಅವರ ರೀತಿ, ಭಾಷೆ, ಸರಳ; ಸಂದರ್ಭಕ್ಕೆ ತಕ್ಕಂತೆ ಕಠೋರವೂ ಆಗಬಲ್ಲವು, ಕೋಮಲವೂ ಆಗಬಲ್ಲವು. ತಾವು ಹೇಳುವ ವಿಷಯ ಜನಮನಕ್ಕೆ ನಾಟಬೇಕೆಂಬ ಉದ್ದೇಶದಿಂದ ಹೇಳಿದ್ದನ್ನೇ ಬೇರೆ ಬೇರೆ ಉಪಮಾನಗಳಿಂದ ಮನ ಹೊಗಿಸುತ್ತಾರೆ. ವಿಷಯ ಲೋಲುಪರಾಗಿರುವವರಿಗೆ ಜ್ಞಾನೋದಯವಾಗಲೆಂಬ ಎಣಿಕೆಯಿಂದ ಅವರು ವೈರಾಗ್ಯವನ್ನು ಪದೇ ಪದೇ ಬೋಧಿಸಿದ್ದಾರೆಯೇ ಹೊರತು ವೈರಾಗ್ಯಕ್ಕೆ ಅವರು ಅತಿ ಪ್ರಾಶಸ್ತ್ಯ ಕೊಟ್ಟಿದ್ದಾರೆಂದು ಯಾರೂ ತಿಳಿಯಬಾರದು. "ಸಂಸಾರವೆಂಬಂಥ ಭಾಗ್ಯವಿರಲಿ", ಆದರೆ "ಕಂಸಾರಿ ನೆನವೆಂಬ ಸೌಭಾಗ್ಯವಿರಲಿ" ಎಂಬುದು ಅವರ ಆಶಯ; ಮನುಷ್ಯ ದೇಹ ತುಚ್ಛವಿರಬಹುದು, ನಶ್ವರವಿರಬಹುದು,

ಆದರೆ "ಮಾನವ ಜನ್ಮ ದೊಡ್ಡದೋ" ಎಂಬುದು ಅವರ ನಂಬಿಕೆ; ಸಂಸಾರ ಸುಖಮಯ ಹಾಗೂ ದುಃಖಮಯ, ಆದ್ದರಿಂದ "ತಾವರೆ ಜಲದಂತೆ ಪ್ರೇಮವಿಟ್ಟು ಭವದೊಳು **ಈಸಬೇಕು, ಇದ್ದು ಜೈಸಬೇಕು**" ಎಂಬುದೇ ದಾಸರ ಧೀರ ಸಂದೇಶ, ನಮ್ಮಲ್ಲಿ ನಿಜವ ನಿಲಿಸಿ ನೆಟ್ಟು ವೆಚ್ಚು, ಕೆಚ್ಚು ಕೊಟ್ಟು ಸಂಸಾರ ಸಾಗರದಲ್ಲಿ ಕಡಹಾಯಿಸುವ ತಾರಕಮಂತ್ರ.

ಪುರಂದರದಾಸರ ಬುದ್ಧಿ ವಿಶಾಲ, ಹೃದಯ ಉದಾರ, ಆತ್ಮ ಉನ್ನತ. ಅಷ್ಟು ಹಿಂದಿನ ಕಾಲದಲ್ಲಿ ಅವರು "ಹೊಲೆಯ ಹೊರಗಿಹನೆ ಊರೊಳಗಿಲ್ಲವೇ ?" ಎಂದು ಹಾಡಿರಬೇಕಾದರೆ, ಜಾತಿ ಕುಲ ಎಂಬ ಸಂಕುಚಿತ ಭಾವನೆ ಅವರಲ್ಲಿರಲಿಲ್ಲವೆಂಬುದು ಸ್ಪಷ್ಟ. "ಕನಕನ ಮೇಲೆ ದಯಮಾಡೊ" ಎಂಬ ಕೀರ್ತನೆಯಿಂದ, ಕೀಳು ಕುಲದ ಕನಕದಾಸರ ವಿಷಯದಲ್ಲಿ ಅವರು ನುಡಿದಂತೆ ನಡೆದುಕೊಂಡಿದ್ದಾರೆ ಎನ್ನುವುದು ವ್ಯಕ್ತವಾಗುತ್ತದೆ. "ಧರ್ಮವೇ ದಿವ್ಯ ಮಂತ್ರ"ಎಂಬ ಅವರ ಕೀರ್ತನೆ ಅಭೂತಪೂರ್ವವಾದದ್ದು, ಅಪೂರ್ವ ಸುಂದರವಾದದ್ದು :

ವಿಷವಿಕ್ಕಿದವಗೆ ಷಡ್ರಸವನುಣಿಸಲಿ ಬೇಕು
ದ್ವೇಷ ಮಾಡಿದವನ ಪೋಷಿಸಲಿ ಬೇಕು
ಪುಸಿಮಾಡಿ ಕೆಡಿಸುವನ ಹಾಡಿ ಹರಸಲಿ ಬೇಕು
ಮೋಸ ಮಾಡುವನ್ಹೆಸರು ಮಗನಿಗಿಡಬೇಕು.

ಹಿಂದೆ ನಿಂದಿಪರನ್ನು ವಂದಿಸುತಲಿರಬೇಕು
ಬಂಧನದೊಳಿಟ್ಟವರ ಬರೆಯಬೇಕು
ಕೊಂದ ವೈರಿಯ ಮನೆಗೆ ನಡೆದುಹೋಗಲಿ ಬೇಕು
ಕುಂದೆಣಿಸುವವರ ಗೆಳೆತನ ಮಾಡಬೇಕು

ಕೊಂಡೊಯ್ದು ಬಡಿಯುವರ ಕೊಂಡಾಡುತಿರಬೇಕು
ಕಂಡು ಸಹಿಸದವರ ಕರೆಯಬೇಕು
ಪುಂಡರೀಕಾಕ್ಷ ಶ್ರೀ ಪುರಂದರ ವಿಠಲನ
ಕೊಂಡಾಡಿ ತಾ ಧನ್ಯನಾಗಬೇಕು.

ಇದರಲ್ಲಿ ಬುದ್ಧದೇವನ ಬೋಧೆ ಬಿಂಬಿತವಾಗಿದೆ; ಕ್ರಿಸ್ತನ ವಾಣಿ ಕೇಳಬರುತ್ತದೆ; ಮಹಾತ್ಮ ಗಾಂಧಿಯವರ ಮನೋಧರ್ಮದ ಮುಂಗಾಣ್ಕೆಯಿದೆ. ಮಹಾತ್ಮರುಗಳೆಲ್ಲ ಕಾಣುವುದೊಂದೇ: ಸತ್ಯ, ದರ್ಶನ.

## ಪರಿಷತ್ತಿನ ಸುದ್ದಿ

**ಕಾರ್ಯಸಮಿತಿ :** ೨೧–೨–೪೩ನೆಯ ಭಾನುವಾರ ಬೆಳಗ್ಗೆ ೯ ಗಂಟೆಗೆ ಪರಿಷತ್ತಿನ ಕಾರ್ಯಸಮಿತಿಯ ಸಭೆ ಪರಿಷನ್ಮಂದಿರದಲ್ಲಿ ನಡೆಯುತ್ತದೆ.

ಅಹೇ ದಿನ ಸಂಜೆ ೬ ಗಂಟೆಗೆ ಪರಿಷನ್ಮಂದಿರದಲ್ಲಿ **ಚರ್ಚಾಕೂಟ** ನಡೆಯುವುದು. ಕಾರ್ಯಸಮಿತಿಯ ಸಭೆಗೆ ದಯಮಾಡಿಸುವ ಪರಸ್ಥಳದ ಸದಸ್ಯರುಗಳು ಚರ್ಚೆಯಲ್ಲಿ ಭಾಗವಹಿಸುತ್ತಾರೆ.

ವಿಷಯ : ಇಂಗ್ಲಿಷ್ ಸಾಹಿತ್ಯದಿಂದ ಕನ್ನಡದ ಮೇಲೆ ಆಗಿರುವ ಪರಿಣಾಮ.

### ಪರಿಷತ್ತಿನ ಸದಸ್ಯರ ಬೆಳವಣಿಗೆ

(ತಾ. ೧೧–೨–೪೩ರಿಂದ ೧೮–೨–೪೩ರ ವರೆಗೆ)

**ಸಹಾಯಕ ಸದಸ್ಯರು (೧೦೦ ರೂ.):** ೧. ಶ್ರೀ.ಗಳಾದ ಕೆ. ಸುಬ್ಬರಾಯರು, ಬಿ.ಎ., ಬಿ.ಎಲ್., ಸಹಕಾರ ಸಂಸ್ಥೆಗಳ ರಿಜಿಸ್ಟ್ರಾರರು, ಬಸವನಗುಡಿ, ಬೆಂಗಳೂರು. ೨. ಕೆ. ದೊರೆಸ್ವಾಮಿ ಅಯ್ಯರವರು, ಬಿ.ಎ., ಎ.ಐ.ಎಂ.ಎಂ., ಗಣಿಗಳ ಛೀಪ್ ಇನ್ಸ್‌ಪೆಕ್ಟರು, ಉರಿಗ. ೩. ಕೆ. ಪಿ. ರಾಮನಾಥಯ್ಯನವರು, ಎಂ.ಎ., ಸ್ಪೆಷಲ್ ಮ್ಯಾಜಿಸ್ಟ್ರೇಟರು, ಚಿನ್ನದ ಗಣಿ, ಛಾಂಪಿಯನ್ ರೀಫ್ಸ್, ಉರಿಗ. ೪. ಎನ್. ಪುಟ್ಟರಂಗಸ್ವಾಮಿಯವರು, ಬಿ.ಎಸ್‌ಸಿ., ಸ್ಪೆಷಲ್ ಪೋಲೀಸ್ ಸೂಪರಿಂಟೆಂಡೆಟರು, ಚಿನ್ನದ ಗಣಿ, ಛಾಂಪಿಯನ್ ರೀಫ್ಸ್, ಉರಿಗ. ೫. ಜೆ. ಪಿ. ಡೇವಿಡ್ ಅವರು, ಬಿ.ಎಸ್‌ಸಿ., ಚಿನ್ನದ ಗಣಿಗಳ ಅ॥ ಇನ್ಸ್‌ಪೆಕ್ಟರು, ಉರಿಗ. ೬. ವೈ. ಸುಬ್ರಹ್ಮಣ್ಯಂ, ಎಂ.ಎ. ಅವರು. ಡೆಪ್ಯುಟಿ ಕಂಟ್ರೋಲರು, ಬಸವನಗುಡಿ. (ಆಜೀವ ಸದಸ್ಯತ್ವದಿಂದ ಬದಲಾವಣೆ). ೭. ವಿ. ವೇದವ್ಯಾಸಾಚಾರ್ಯ, ಬಿ.ಎ. ಅವರು, ಮೈಸೂರು ಸರ್ಕಾರದ ಡೆವೆಲಪ್‌ಮೆಂಟ್ ಇಲಾಖೆಯ ಕಾರ್ಯದರ್ಶಿಗಳು, ಬೆಂಗಳೂರು. ೮. ಸಿ. ಅಬ್ದುಲ್ ಜಬ್ಬಾರ್, ಬಿ.ಎ. ಅವರು, ಅರಣ್ಯ ಇಲಾಖೆಯ ಮುಖ್ಯಾಧಿಕಾರಿಗಳು, ಬೆಂಗಳೂರು.

**ಆಜೀವ ಸದಸ್ಯರು (೫೦ ರೂ.) :** ಶ್ರೀ. ಎ. ಹನುಮಂತರಾಯಪ್ಪನವರು, ಜಮೀನ್‌ದಾರರು, ಆವತಿ ಪೋಸ್ಟ್, ದೇವನಹಳ್ಳಿ ತಾಲ್ಲೂಕು.

**ಸಾಮಾನ್ಯ ಸದಸ್ಯರು (೬ ರೂ.):** ಶ್ರೀ.ಗಳಾದ ೧. ವಿ. ಟಿ. ಶ್ರೀನಿವಾಸನ್ ಅವರು, ಬಿ.ಎ., ಬಿ.ಎಸ್‌ಸಿ. ಡೆ॥ ಕಂಟ್ರೋಲರು, ಬಸವನಗುಡಿ, ಬೆಂಗಳೂರು. ೨. ವಿ. ನಾರಾಯಣರಾಯರು, ಬಿ.ಎ., ಗಣಿಗಳ ಇನ್ಸ್‌ಪೆಕ್ಟರು, ಉರಿಗ. ೩. ಬಿ.ಎನ್. ವೆಂಕಟಪ್ಪನವರು, ಅಸಿಸ್ಟೆಂಟ್ ಎಂಜಿನಿಯರು, ಉರಿಗದ ಚಿನ್ನದ ಗಣಿ ಕಂಪನಿ ಉರಿಗ. ೪. ಎಂ. ಸೋಮಪ್ಪನವರು, ಅಸಿಸ್ಟೆಂಟ್ ಎಂಜನಿಯರು, ಉರಿಗದ ಚಿನ್ನದಗಣಿ ಕಂಪನಿ, ಉರಿಗ. ೫. ಎಂ., ಹಯಾತ್, ಬಿ.ಇ., ಬಿ.ಎಸ್.ಇ.ಇ. ಅವರು. ಜನರಲ್ ಸೂಪರಿಂಟೆಂಡೆಂಟರು, ಕಾವೇರಿ ಪವರ್ ಸ್ಕೀಮ್, ಬೆಂಗಳೂರು.

**ಸಾಮಾನ್ಯ ಸದಸ್ಯರು (೩ ರೂ.) :** ೧. ಶ್ರೀ.ಮಾರ್ತಾಂಡ ಶ್ರೀಪಾದ ಕುಲಕರ್ಣಿ ಅವರು, ನಂ. ೮. ನಾಗಸಂದ್ರ ರಸ್ತೆ, ಬಸವನಗುಡಿ, ಬೆಂಗಳೂರು.

## ಕನ್ನಡ ಸುದ್ದಿ

**ಮದರಾಸು : ಪ್ರೆಸಿಡೆನ್ಸಿ ಕಾಲೇಜು ಕನ್ನಡ ಸಂಘ**

ಮದರಾಸು ಪ್ರೆಸಿಡೆನ್ಸಿ ಕಾಲೇಜಿನ ಕನ್ನಡ ಸಂಘದ ವಾರ್ಷಿಕಾಧಿವೇಶನ ಇದೇ ಫೆಬ್ರುವರಿ ೧೨ನೆಯ ತಾರೀಖು ಸಂಜೆ ನಡೆಯಿತು. ಹೈಕೋರ್ಟಿನ ಜಜ್ಜರಾದ ಶ್ರೀ. ಕೆ. ಪಿ. ಲಕ್ಷ್ಮಣರಾಯರು ಅಗ್ರಾಸನವನ್ನು ವಹಿಸಿದ್ದರು. ಕ್ರಮದಂತೆ: ಫೋಟೋ ತೆಗೆದು, ಉಪಹಾರ ಸಮಾರಂಭ ಮುಗಿಯಲು, ನಿವೃತ್ತ ಎಗ್ಸಿಕ್ಯೂಟಿವ್ ಇಂಜಿನಿಯರಾದ ಶ್ರೀ. ಎಂ. ಸಂಜೀವರಾಯರು ವರ್ಷಾಂತ್ಯದ ಮಂಗಳ ಭಾಷಣವನ್ನು ಮಾಡುವಾಗ ದಕ್ಷಿಣ ಕನ್ನಡದ ಕವಿಗಳಲ್ಲಿ ಅಗ್ರಗಣ್ಯರಾದ ನಂದಳಿಕೆ ಲಕ್ಷ್ಮೀನಾರಣಪ್ಪನೆಂಬವರೇ 'ಮುದ್ದಣ' ಎಂದು ಪ್ರಸಿದ್ಧಿ ಪಡೆದವರೆಂಬ ವಿಷಯದಲ್ಲಿ ಕೆಲವು ಲೇಖಕರು ಎತ್ತಿದ ಸಂಶಯಗಳಿಗೆ ಅವಕಾಶವೇ ಇಲ್ಲದಂತೆ ತನ್ನ ಅನುಭವ ಸಾಕ್ಷಿಕವಾದ ಯುಕ್ತಿಗಳಿಂದ ಹೃದಯಂಗಮವಾಗಿ ಪ್ರತಿಪಾದನೆ ಮಾಡಿದರು.

ತಾವು ೧೮೯೯ನೆಯ ಇಸವಿಯಲ್ಲಿ ಎಫ್. ಎ. ವಿದ್ಯಾರ್ಥಿಯಾಗಿ ಮಂಗಳೂರು ಗವರ್ನಮೆಂಟ್ ಕಾಲೇಜಿನಲ್ಲಿದ್ದಾಗ ಬೇಸಗೆ ರಜೆಯಲ್ಲಿ ಉಡುಪಿಗೆ ಹೋಗಿ ತಮಗೆ ಪಠ್ಯ ಗ್ರಂಥವಾಗಿದ್ದ 'ರಾಮ ಪಟ್ಟಾಭಿಷೇಕ' ಕಾವ್ಯದ ಕೆಲವು ಭಾಗಗಳನ್ನೂ ತಿಳಿಯುವುದಕ್ಕಾಗಿ ಸ್ವತಃ ಲಕ್ಷ್ಮೀನಾರಣಪ್ಪನವರಲ್ಲಿ ಕೆಲವು ದಿನ ಶಿಷ್ಯತ್ವವನ್ನು ವಹಿಸಿದ್ದುದಾಗಿಯೂ ಅವರಿಂದಲೇ ಕೇಳಿ ತಿಳಿದ ವಿಷಯಗಳೂ, ಅವರ ನೆರೆ ಹೊರೆಯವರ ಮಾತುಕತೆಗಳಿಂದ ತಿಳಿದ ಅವರ ವೈಯಕ್ತಿಕ ಚರಿತ್ರೆಗಳೂ ವಿಶ್ವಾಸಾರ್ಹಗಳೆಂದೂ ಹೇಳಿದರು. ಅಗ್ರಾಸನಾಧಿಪತಿಗಳ ಉಪಸಂಹಾರ ಭಾಷಣವೂ ಕಾರ್ಯದರ್ಶಿಗಳ ಕೃತಜ್ಞತಾ ಸಮರ್ಪಣೆಯೂ ಆದಮೇಲೆ ಅಂದಿನ ಸಮಾರಂಭ ಮುಗಿಯಿತು.



೭೮—೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧೨
ಬಿಡಿ ಪತ್ರಿಕೆ: ೬ ಕಾಸು



ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈ ಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೧೮

ಬೆಂಗಳೂರು: ಶುಕ್ರವಾರ, ಫೆಬ್ರುವರಿ ೨೬, ೧೯೪೩

## ಪರಿಷತ್ತಿನ ಮುನ್ನಡೆ

೬

ಗಮಕ ಕಲೆಯ ಬೆಳವಣಿಗೆಯಲ್ಲಿ ಪರಿಷತ್ತಿನ ಗುರಿ ಮುಖ್ಯವಾಗಿ ಇದು: ಸಂಗೀತ ಬಲ್ಲ ಒಬ್ಬೊಬ್ಬ ಕನ್ನಡಿಗನೂ ಕಾವ್ಯ ಓದುವ ರೀತಿಯನ್ನು ಅಭ್ಯಾಸಮಾಡಿ ತಾನೂ ಅವುಗಳ ಸುಖವನ್ನು ಪಡಬೇಕು, ಹತ್ತು ಜನಕ್ಕೆ ಆ ಸುಖವನ್ನು ಒದಗಿಸಬೇಕು. ಈ ಗುರಿಯನ್ನು ಮುಟ್ಟುವುದಕ್ಕೆ ತಕ್ಕಷ್ಟು ಪ್ರಯತ್ನವೂ ಕಾಲವೂ ಅಗತ್ಯ. ಅದುವರೆಗೆ, ಕೇಂದ್ರ ಸಂಸ್ಥೆ ಈಗ ಸದ್ಯದಲ್ಲಿ ನಮ್ಮಲ್ಲಿ ಹೆಸರು ಪಡೆದಿರುವ ಗಮಕ ವಿದ್ವಾಂಸರಿಂದ ನಾಡಿನಲ್ಲೆಲ್ಲ ಓದನ್ನು ಏರ್ಪಡಿಸಬೇಕಾಗಿದೆ. ಈಗ ಆಗುತ್ತಿರುವ ಓದಿನ ಏರ್ಪಾಡು ಯಾವ ಒಂದು ಕ್ರಮವನ್ನೂ ಅನುಸರಿಸಿಲ್ಲ. ಸ್ಥಳೀಯ ಸಂಸ್ಥೆಗಳು, ಸಂಘಗಳು ಉತ್ಸವ ಉಪನ್ಯಾಸ ವಾಚನಗಳನ್ನು ಏರ್ಪಡಿಸಬೇಕೆಂದು ಈ ಮೊದಲೆ ಸೂಚಿಸಿದೆ. ಈ ವಿಷಯದಲ್ಲಿ ಕೇಂದ್ರ ಸಂಸ್ಥೆ ಸ್ಥಳೀಯ ಸಂಸ್ಥೆ ಸಂಘಗಳೊಡನೆ ಸಹಕರಿಸಿ ಗಮಕ ವಿದ್ವಾಂಸರ ಅನುಕೂಲವನ್ನು ಮೊದಲೆ ತಿಳಿದುಕೊಂಡು ಒಂದು ವರ್ಷದಲ್ಲಿ ಸಾಧ್ಯವಾದಷ್ಟು ದೊಡ್ಡ ಸಣ್ಣ ಊರುಗಳಲ್ಲಿ ಒಂದು ಎರಡು ವಾಚನ ನಡೆಯುವಂತೆ ಕಾರ್ಯಕ್ರಮವನ್ನು ನಿರ್ಧರಿಸಬಹುದು. ಈ ಕೆಲಸ ಸಂಸ್ಥೆ ಸಂಘಗಳೂ ಗಮಕ ವಿದ್ವಾಂಸರೂ ಪರಿಷತ್ತಿನೊಂದಿಗೆ ಸಹಕರಿಸಿಯೇ ಆಗಬೇಕಾಗಿದೆಯೆಂದು ಮತ್ತೆ ಹೇಳುವುದು ಅನಾವಶ್ಯಕ.

ಗಮಕಿಗಳಿಂದ ಪೂರ್ವದ ಕಾವ್ಯಗಳನ್ನು ಓದಿಸುವುದಲ್ಲದೆ ಜನತೆಗೆ ಕನ್ನಡದ ಹೊಸ ಕೃತಿಗಳ ಪರಿಚಯವನ್ನು ಮಾಡಿಕೊಡುವುದೂ ವಾಚನ ಕಾರ್ಯಕ್ರಮದ ಉದ್ದೇಶವಾಗಿರಬೇಕು. ಕನ್ನಡದ ಹೊಸ ಕಾವ್ಯ, ಹೊಸ ಲೇಖನವನ್ನು ಹಳೆಯ ಸಂಪ್ರದಾಯದ ಅನುಯಾಯಿಗಳು ಅನೇಕವಾಗಿ ಇನ್ನೂ ಒಪ್ಪಿಲ್ಲ. ಹಳೆಯ ಕಾವ್ಯ ಹಾಡುವ ಕಾವ್ಯ, ಹೊಸ ಕಾವ್ಯ ಬಹುಭಾಗ ಓದುವ ಕಾವ್ಯ. ಹಾಡುವುದರಲ್ಲಿ ಒಂದು ಸೊಗಸಿರುವಂತೆ ಓದುವುದರಲ್ಲಿ ಒಂದು ಸೊಗಸಿದೆ. ಇಂಗ್ಲಿಷ್ ಕಾವ್ಯವನ್ನು ಚೆನ್ನಾಗಿ ಓದಬಲ್ಲವರು ಓದಿದಾಗ ಇದರ ನಿಜ ಸ್ಪಷ್ಟವಾಗುತ್ತದೆ. ನಮ್ಮ ಹೊಸ ಕಾವ್ಯ ಇಂಗ್ಲಿಷ್ ಕೃತಿಗಳ ರೀತಿಯನ್ನು ನೋಡಿ ಬೆಳೆದಿದೆ. ಇದರಲ್ಲಿಯೂ ಓದುವ ರೀತಿಯಿಂದ ಅರ್ಥ ಸ್ಫುಟವಾಗುತ್ತದೆ, ಭಾವ ಬೆಳಗುತ್ತದೆ. ಪದ್ಯ ಅಷ್ಟೇ ಅಲ್ಲದೆ ನಮ್ಮ ಹೊಸ ಗದ್ಯವನ್ನೂ ಸೊಗಸುವಂತೆ ಓದುವುದು ನಿಜವಾಗಿ ಒಂದು ಕಲೆ. ಇದಕ್ಕೂ ಮನೋಧರ್ಮ ಬೇಕು, ಅಭ್ಯಾಸ ಬೇಕು. ಹೊಸ ಕಾವ್ಯವನ್ನು ಒಂದು ರಾಗದಲ್ಲಿ ಒಂದು ಲಯದಲ್ಲಿ ಹಾಡಬೇಕೆಂದು ಕೆಲವು ವೇಳೆ ಕವಿ ಉದ್ದೇಶಿಸಿರುವುದುಂಟು. ಇಂಥ ಸಂದರ್ಭದಲ್ಲಿ ಸಾಧ್ಯವಾದ ಮಟ್ಟಿಗೆ ಕವಿಯ ಆ ಉದ್ದೇಶವನ್ನನುಸರಿಸಿಯೆ ಕಾವ್ಯವನ್ನು ಓದಬೇಕು. ಇದಕ್ಕೂ ಮನೋಧರ್ಮ ಬೇಕು, ಅಭ್ಯಾಸ ಬೇಕು. ಶ್ರೀಯುತರಾದ ಬೇಂದ್ರೆ, ರಾಜರತ್ನಂ, ಪುಟ್ಟಪ್ಪ, ಕಾರಂತ, ಕಡೆಂಗೋಡ್ಲು, ಮುಗಳಿ ಮುಂತಾದ ಮಿತ್ರರು ತಮ್ಮ ಮತ್ತು ಇತರರ ಕೃತಿಗಳನ್ನು ಹಾಡಿ ಅಥವಾ ಓದಿ ಹೇಳಿರುವುದನ್ನು ಕೇಳಿರುವವರೆಲ್ಲ ಹೊಸ ಕೃತಿಯನ್ನು ಓದುವುದರಲ್ಲಿಯೂ ಒಂದು ಕಲೆಯಿದೆಯೆಂದು ಕಂಡಿರುತ್ತಾರೆ. ಹೊಸ ಸಂಪ್ರದಾಯದಲ್ಲಿ ನಂಬಿಕೆ ಉಳ್ಳವರಿಗಾದರೂ ಇಂಥವರ ವಾಚನದಿಂದ ಕಾವ್ಯದ ರಸ ಹೆಚ್ಚಾಗಿ ಅನುಭವಕ್ಕೆ ಬರುತ್ತದೆ.

ನಾಡಿನ ಬೇರೆ ಬೇರೆ ಭಾಗಗಳಲ್ಲಿ ಪೂರ್ವದಿಂದ ಬೆಳೆದು ಬಂದಿರುವ ಕಲೆಗಳನ್ನು ಉಳಿಸಿಕೊಳ್ಳುವುದು, ಬೆಳಸುವುದು ಆಯಾ ಪ್ರಾಂತದ ಕರ್ತವ್ಯವೆಂದು ಹೇಳಿದ್ದಾಗಿದೆ. ಒಂದು ಪ್ರಾಂತದ ಅಂಥ ಕಲೆಯ ಸ್ವರೂಪ ಅನೇಕವಾಗಿ ಇತರ ಪ್ರಾಂತಗಳಿಗೆ ತಿಳಿಯದೆ ಇರುತ್ತದೆ. ಅಲ್ಲದೆ, ಆಯಾ ಸುತ್ತಿನಲ್ಲಿ ಶಕ್ತರೆನಿಸಿಕೊಂಡಿರುವ ಅಂಥ ಕಲೆಯ ಉಪಾಸಕರಿಗೆ ತಮ್ಮ ಸುತ್ತಿನ ಸಣ್ಣದಾದ ಒಂದು ಪ್ರಪಂಚವೇ ಕಾರ್ಯಕ್ಷೇತ್ರವಾಗಿರುತ್ತದೆ. ಹೀಗೆ ನಾಡಿನ ಒಂದು ಪ್ರಾಂತದಲ್ಲಿ ಮಾತ್ರ ಪ್ರಚಾರದಲ್ಲಿರುವ ಕಲೆಯನ್ನು ಉಳಿದ ಪ್ರಾಂತಗಳಿಗೆ ಪರಿಚಯ ಮಾಡಿಕೊಡುವುದೂ ಆ ಕಲೆಗಳ ಉಪಾಸಕರಿಗೆ ವಿಸ್ತಾರವಾದ ಕಾರ್ಯಕ್ಷೇತ್ರವನ್ನು ಒದಗಿಸಿಕೊಡುವುದೂ ಕೇಂದ್ರ ಸಂಸ್ಥೆಯ ಕೆಲಸ. ಬೆಳಗಾಂವಿಯಲ್ಲಿ ಜಮಖಂಡಿಯಲ್ಲಿ ಜನತೆಯ ಕಾವ್ಯಕಥೆಗಳನ್ನು ಗೀ ಪದಗಳನ್ನು ಹಾಡಿದ ಗುರುಪಾದಪ್ಪ, ಸತ್ಯಪ್ಪ, ರಂಗಪ್ಪ, ಹರಿಜನರ ಹೆಣ್ಣುಮಕ್ಕಳು, ಇವರ ಕಲೆ ನಿಜವಾಗಿ ಲೋಕದ ಮನ್ನಣೆಯನ್ನು ಪಡೆಯಬೇಕು. ಕನ್ನಡವನ್ನರಿಯದ ಲೋಕ ಇವರ ಕಲೆಗೆ ಮನ್ನಣೆಯನ್ನು ಕೊಡಲಾರದು. ಕನ್ನಡವನ್ನರಿತ ಲೋಕದಲ್ಲಾದರೂ ಈ ಕಲೆಯ ಸುಖವನ್ನು ಪಡೆದು ಅದರ ಉಪಾಸಕರಿಗೆ ಮನ್ನಣೆ ಕೊಡದವರು ಇರಬಾರದು. ಜನಪದ ಸಾಹಿತ್ಯದ ಈ ಮಾತನ್ನು ಉದಾಹರಣೆಗಾಗಿ ಹೇಳಿದೆ, ಅಷ್ಟೆ. ಉಳಿದ ಇಂಥ ಕಲೆಗೂ ಇದೇ ಮಾತು ಅನ್ವಯಿಸುತ್ತದೆ. ಇಂಥ ಕಲೋಪಾಸಕರನ್ನು ನಾಡಿನ ಬೇರೆ ಬೇರೆ ಪ್ರಾಂತಗಳ ಸಂಸ್ಥೆ ಸಂಘಗಳು ಬರಮಾಡಿಕೊಂಡು ತಮ್ಮ ಸುತ್ತಿನ ಜನರು ಅವರ ಕಲೆಯಿಂದ ಸುಖಪಡುವಂತೆ ಆ ಕಲೋಪಾಸಕರಿಗೆ ಉತ್ತೇಜನ ದೊರೆಯುವಂತೆ ಮಾಡುವುದು ಆವಶ್ಯಕ. ಕೆಲವು ವೇಳೆ ಒಂದು ಸ್ಥಳದ ಕಲೆ ಬೇರೆಯ ಕಡೆಗೆ ಬರಲಾಗದಂಥದು ಆಗಿರಬಹುದು. ಮಂಗಳೂರಿನ ಪ್ರಾಂತದ ಕಂಬಳದ ಓಟ ಇದಕ್ಕೆ ಉದಾಹರಣೆ. ಈ ಓಟದ ಪಂದ್ಯವನ್ನು ಬೇರೆ ಕಡೆ ಏರ್ಪಡಿಸುವುದು ಸಾಧ್ಯವಲ್ಲ. ಆದರೆ ಅದನ್ನು ನೋಡುವುದಕ್ಕೆ ಎಷ್ಟು ಸಾವಿರ ಮೈಲಿಯಿಂದ ಬಂದರೂ ಹೆಚ್ಚಲ್ಲ. ಇಂಥ ಒಂದು ಚೆಂದದ ವ್ಯಾಯಾಮ ನಮ್ಮ ದೇಶದಲ್ಲಿ ಒಂದು ಕಡೆ ಇರುತ್ತ, ಉಳಿದ ಕಡೆಯವರು ಅದನ್ನು ಕಾಣದೆ ಇರುವುದು ತೀರ ಅಸಮಂಜಸ. ಯಾತ್ರೆಗಳಿಗೆ ತೀರ್ಥಗಳಿಗೆ ಹೋಗುವಂತೆ ನಮ್ಮ ಜನ ಈ ಪಂದ್ಯಗಳನ್ನು ನೋಡುವುದಕ್ಕೆ ಹೋಗಿ ನೋಡಬೇಕು. ಇದಕ್ಕೆ ಈ ಕಲೆಗಳನ್ನು ಉಳಿಸಿಕೊಂಡಿರುವ ಪ್ರಾಂತಗಳೂ ಅವಕ್ಕೆ ನೆರವಾಗಿ ನಿಂತು ಕೇಂದ್ರ ಸಂಸ್ಥೆಯೂ ತಕ್ಕ ಏರ್ಪಾಡು ಮಾಡಬೇಕು.

— ಮಾಸ್ತಿ ವೆಂ. ಅ.

# ಕನ್ನಡ ನುಡಿ

**ಶುಕ್ರವಾರ, ಫೆಬ್ರುವರಿ ೨೬, ೧೯೪೩**

## ಜಮುಖಂಡಿಯಲ್ಲಿ ಕನ್ನಡ

ಕುಂದಗೋಳದಲ್ಲಿ ಕೆಲವು ದಿವಸಗಳ ಹಿಂದೆ ಜಮುಖಂಡಿ ಸಂಸ್ಥಾನದ ಪ್ರಜಾಪರಿಷತ್ತಿನ ಕಾರ್ಯಕಾರಿ ಮಂಡಲದ ಸಭೆ ಡಾಕ್ಟರ್ ಹುಲ್ಯಾಳಕರ ಅವರ ಅಧ್ಯಕ್ಷತೆಯಲ್ಲಿ ನಡೆದು, ಅಲ್ಲಿ ಕೈಗೊಳ್ಳಲಾದ ಮುಖ್ಯವಾದ ಗೊತ್ತುವಳಿಗಳ ಸಂಗತಿ 'ಸಂಯುಕ್ತ ಕರ್ನಾಟಕ' (೨೩–೨–೪೩) ಪತ್ರಿಕೆಯಲ್ಲಿ ಪ್ರಕಟವಾಗಿದೆ. ಆ ಗೊತ್ತುವಳಿಗಳಲ್ಲಿ ಒಂದು ಕನ್ನಡಕ್ಕೆ ಸಂಬಂಧಪಟ್ಟದ್ದಾದ್ದರಿಂದ ಅದನ್ನು ಇಲ್ಲಿ 'ನುಡಿ'ಯ ವಾಚಕರಿಗಾಗಿ ಎತ್ತಿಕೊಟ್ಟಿದೆ:

"ಈ ಸಂಸ್ಥಾನದಲ್ಲಿ ರಾಜ್ಯದಾಡಳಿತೆಯ ಭಾಷೆ ಕನ್ನಡವಾಗುವ ಕುರಿತು ಇದ್ದ ಬೇಡಿಕೆಯ ಯೋಗ್ಯತೆಯನ್ನು ಅರಿತು ೧೯೩೮ರಲ್ಲಿ 'ಸಂಸ್ಥಾನದ ಬಹುಜನ ಸಮಾಜದ ಭಾಷೆ ಕನ್ನಡವಿದ್ದು, ಸರಕಾರೀ ದಪ್ತರ ಶಕ್ಯವಿದ್ದಷ್ಟು ಕನ್ನಡವಿರಬೇಕು' ಎಂಬ ತತ್ವವನ್ನು ಸರಕಾರವು ಒಪ್ಪಿತು. ಆದರೆ ಅದನ್ನು ಕಾರ್ಯರೂಪದಲ್ಲಿ ತರಲು ಒಂದಿಲ್ಲೊಂದು ಕಾರಣವನ್ನು ಮುಂದೆಮಾಡಿ ಇದುವರೆಗೆ ವಿಲಂಬ ಮಾಡಲಾಗಿದೆ ಮತ್ತು ಈ ವಿಷಯದಲ್ಲಿ ಸರ್ಕಾರದ ಉದಾಸೀನತೆ ಈ ಕಮಿಟಿಗೆ ಕಂಡುಬಂದಿದೆ. ೧೯೪೨ರಲ್ಲಿ ಜಾಹೀರ ಮಾಡಿದ ಯೋಜನೆ ಅಸಮಾಧಾನಕರವಿದ್ದರೂ ಅದು ಕೂಡ ಅಕ್ಷರಶಃ ಪಾಲಿಸಲ್ಪಟ್ಟಿಲ್ಲ ಎಂಬುದು ಶೋಚನೀಯವಾಗಿದೆ. ಆದಾಗ್ಗೂ ಆ ಯೋಜನೆಯನ್ನಾದರೂ ಕೂಡಲೇ ನಡವಳಿಕೆಯಲ್ಲಿ ತರಬೇಕೆಂದು ಈ ಕಮಿಟಿಯು ಆಗ್ರಹಪೂರ್ವಕವಾಗಿ ಬಿನ್ನವಿಸುತ್ತದೆ. ಅದರಂತೆ ಅದೇ ತತ್ವವನ್ನನುಲಕ್ಷಿಸಿ ಕನ್ನಡ ಪ್ರಾಥಮಿಕ ಶಾಲೆಗಳ ದಪ್ತರ ಕೂಡಲೇ ಕನ್ನಡ ಆಗಬೇಕು: ಫೌಜದಾರ ಹಾಗೂ ಮ್ಯಾಜಿಸ್ಟ್ರೇಟ ಕಚೇರಿಗಳಲ್ಲಿಯ ಸಮನು, ನೋಟೀಸುಗಳು ಕನ್ನಡದಲ್ಲಿ ಹೊರಡಬೇಕು. ಅಲ್ಲಿಯ ಜಬಾನಿಗಳನ್ನು ಕೂಡ ಕನ್ನಡದಲ್ಲಿ ತಕ್ಕೊಳ್ಳುವ, ಬರಕೊಳ್ಳುವ ಏರ್ಪಾಡು ಆಗಿ ಅದರಂತೆ ಜಾಹೀರು ಪಡಿಸಬೇಕೆಂದು ಈ ಸಭೆ ಆಗ್ರಹದಿಂದ ಬೇಡುತ್ತದೆ."

ಜಮುಖಂಡಿಯಲ್ಲಿ ನೂರಕ್ಕೆ ತೊಂಬತ್ತೈದರಂತೆ ಕನ್ನಡಿಗರಿದ್ದಾರೆ; ಹೀಗಿರುವಾಗ ಅಲ್ಲಿನ ಓಲಗದ ಭಾಷೆ ಕನ್ನಡವೇ ಆಗಿರಬೇಕೆಂಬ ಬಗ್ಗೆ ಸಾಕ್ಷಿಗಳನ್ನು ಕೇಳುವುದೇ ಅನಾವಶ್ಯಕವೆಂದೂ ಜಮುಖಂಡಿಯಲ್ಲಿ ಆಡಳಿತ ಭಾಷೆ ಕನ್ನಡವಾಗಬೇಕು; ಲಿಪಿಯೂ ಕನ್ನಡದ್ದೇ ಇರಬೇಕು ಎಂದೂ ಸೂಚಿಸಿ, ಪ್ರಸಿದ್ಧ ಸಾಹಿತಿಗಳೂ ಸಂಶೋಧಕರೂ ಆದ ಧಾರವಾಡದ ಶ್ರೀ. ಶಂ. ಬಾ. ಜೋಶಿಯವರು ೧೭–೨–೪೦ರಷ್ಟು ಹಿಂದೆಯೆ ಒಂದು ಲೇಖನ ಬರೆದದ್ದನ್ನು ಹಿಂದೆ ನಾವು ನುಡಿಯಲ್ಲಿ (೧–೩–೧೯೪೦ರಲ್ಲಿ) ಗಮನಿಸಿ, ಅದೇ ವರ್ಷ ಮಾರ್ಚಿ ಎಂಟನೆಯ ತಾರೀಖಿನ ಸಂಚಿಕೆಯಲ್ಲಿ ಸಂಪಾದಕೀಯ ಟಿಪ್ಪಣಿ ಬರೆದೆವು. ಅಲ್ಲಿಂದೀಚೆಗೆ ಪದೇಪದೆ ಜಮುಖಂಡಿಯಲ್ಲಿ (ಇದೊಂದು ಸಂಸ್ಥಾನವೇ ಅಲ್ಲ, ಕನ್ನಡ ನಾಡು ಇನ್ನೂ ಹತ್ತಾರು ಸಂಸ್ಥಾನಗಳಲ್ಲಿ ಹರಿದು ಹಂಚಿಹೋಗಿದೆ; ಆ ಸಂಸ್ಥಾನಗಳಲ್ಲೆಲ್ಲ) ಕನ್ನಡದ ಸ್ಥಾನವೂ ಮಾನವೂ ಬಲಗೊಳ್ಳಬೇಕೆಂದು ಚಳವಳಿಯನ್ನು ನಡಸಿಕೊಂಡೇ ಬರುತ್ತಿದೆ. ಸಾಹಿತ್ಯ ಸಮ್ಮೇಳನಗಳಲ್ಲಿ ಗೊತ್ತುವಳಿಗಳನ್ನು ಮಾಡಿ, ಆಯಾ ಸಂಸ್ಥಾನಾಧೀಶರನ್ನು ಪ್ರಾರ್ಥಿಸಿಕೊಳ್ಳುತ್ತಿದೆ. ಸ್ಥಳೀಯವಾಗಿ ಜಮುಖಂಡಿ ಪ್ರಜಾಪರಿಷತ್ತಿನವರೂ, ಶ್ರೀ. ಚ. ಚ. ಅಬಕಾರ ಮುಂತಾದ ಸಾರ್ವಜನಿಕ ಮಹನೀಯರೂ ಈ ಮುಖ್ಯಪ್ರಶ್ನೆಯನ್ನು ಮುಂದೊತ್ತುತ್ತ ಬರುತ್ತಿದ್ದಾರೆ. ಸಾಲದುದಕ್ಕೆ ೧೭-೮-೪೧ರಿಂದ ೨೦-೮-೪೧ರವರೆಗೆ ನಡೆದ ಜಮುಖಂಡಿಯ ಹೊಸ ರಾಜಕೀಯ ಸುಧಾರಣೆಗಳಂತೆ ಘಟಿತವಾದ ನೂತನ ಅಸೆಂಬ್ಲಿಯ ಅಧಿವೇಶನದಲ್ಲಿ "ಜಮುಖಂಡಿಯ ಪಿ. ಬಿ. ಹೈಸ್ಕೂಲಿನಲ್ಲಿ ೧ನೆಯ ಇಯತ್ತೆಯಲ್ಲಿ ಕನ್ನಡ ಕಲಿಸುವ ವ್ಯವಸ್ಥೆಯಿಲ್ಲ. ಕನ್ನಡದಲ್ಲಿ ಶಿಕ್ಷಣ ಹೇಳುವ ಏರ್ಪಾಡು ಇಲ್ಲ. ಮರಾಠಿ ಪೇಪರುಗಳನ್ನೇ ಕನ್ನಡ ವಿದ್ಯಾರ್ಥಿಗಳಿಗೆ ಕೊಡುತ್ತಾರೆ ಎಂಬ ವಿಷಯವಾಗಿ ನಿಂದಾವ್ಯಂಜಕ ಗೊತ್ತುವಳಿ ತರಲ್ಪಟ್ಟಿತ್ತು. ಅಡಚಣೆ ದೂರ ಮಾಡಲಾಗುವುದು ಎಂದು ಸರ್ಕಾರದವರು ಆಶ್ವಾಸ ಕೊಟ್ಟರು." ಆಮೇಲೆ ಸೂಚಿತವಾಗಿದ್ದ ನಿಂದಾವ್ಯಂಜಕವಾದ ಹಾಗೂ ಕಡಿತದ ಗೊತ್ತುವಳಿ ಹಿಂದಕ್ಕೆ ತೆಗೆದುಕೊಳ್ಳಲ್ಪಟ್ಟಿತು. ಹೀಗೆ ಕನ್ನಡವೇ ಶಿಕ್ಷಣ ಭಾಷೆಯೂ ಆಡಳಿತದ ಭಾಷೆಯೂ ಆಗಬೇಕೆಂಬ ಬೇಡಿಕೆಯನ್ನು ಜಮುಖಂಡಿ ಸರಕಾರದ ಮುಂದೊತ್ತುತ್ತ ಬಂದಿದ್ದರೂ, ಮೇಲೆ ಎತ್ತಿಕೊಟ್ಟಿರುವ ಪ್ರಜಾಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯ ನಿರ್ಣಯದಲ್ಲಿ ಸೂಚಿಸಿರುವಂತೆ, 'ಸಂಸ್ಥಾನದ ಬಹುಜನ ಸಮಾಜದ ಭಾಷೆ ಕನ್ನಡವಿದ್ದು ಸರಕಾರೀ ಭಾಷೆ ಶಕ್ಯವಿದ್ದಷ್ಟು ಕನ್ನಡವಿರಬೇಕೆಂದು' ೧೯೩೮ರಲ್ಲಿಯೆ ಸರಕಾರ ಒಪ್ಪಿದ್ದರೂ ಇನ್ನೂ ಅಲ್ಲಿ ಕನ್ನಡದ ಸ್ಥಾನ ಉತ್ತಮಗೊಳ್ಳಲಿಲ್ಲ. ಕನ್ನಡದ ಪ್ರಗತಿಗೆ ಅಡ್ಡವಾಗಿರುವ ಶಕ್ತಿಗಳು ಅಡಗುವ ಸೂಚನೆ ತೋರಲಿಲ್ಲ.

ನೂರಕ್ಕೆ ತೊಂಬತ್ತೈದು ಮಂದಿಯಿರುವ ಕನ್ನಡ ನಾಡಿಗೆ ಸೇರಿದ ಒಂದು ಪ್ರದೇಶದಲ್ಲಿ ಓಲಗದ ಭಾಷೆ ಕನ್ನಡವಿರಬೇಕೇ ಎಂಬ ಬಗ್ಗೆ ಸಾಕ್ಷ್ಯ ತೆಗೆದುಕೊಳ್ಳುವುದೇ ವಿಪರೀತ ಸ್ಥಿತಿ. ಇದರಿಂದ ಕನ್ನಡ ಸಮಸ್ಯೆಯ ತೀವ್ರತೆ ಗೊತ್ತಾಗುತ್ತದೆ. ಸಾಕ್ಷ್ಯ ತೆಗೆದುಕೊಂಡದ್ದಾಗಿರಬೇಕು. ಕನ್ನಡಿಗರು ಕನ್ನಡಕ್ಕಲ್ಲದೆ ಮತ್ತಾವ ಭಾಷೆಗೆ ಅಭಿಮತ ಕೊಟ್ಟಿದ್ದಾರು? ಪ್ರಜೆಗಳ ಭಾಷೆಯನ್ನು ಸರಕಾರದವರು ಒಪ್ಪಿ ಆ ಭಾಷೆಗೆ ತಕ್ಕ ಗೌರವದ ಸ್ಥಾನವನ್ನು ಕೊಡುವ ಪರಿಸ್ಥಿತಿ ಬೇಗ ಉಂಟಾಗಲೆಂದು ನಾವು ಹಾರೈಸುತ್ತೇವೆ ಮತ್ತು ಆ ಪರಿಸ್ಥಿತಿಯನ್ನು ಉಂಟುಮಾಡಲು ಜಮುಖಂಡಿಯ ಕನ್ನಡಿಗರೆಲ್ಲ ಒಮ್ಮತದಿಂದ ಒಗ್ಗಟ್ಟಿನಿಂದ ದುಡಿಯಬೇಕೆಂದು ಪ್ರಾರ್ಥಿಸುತ್ತೇವೆ.

## ಇಂಗ್ಲಿಷ್ ಸಾಹಿತ್ಯದಿಂದ ಕನ್ನಡದ ಮೇಲೆ ಆಗಿರುವ ಪರಿಣಾಮ

ಪರಿಷತ್ತಿನ ಆಶ್ರಯದಲ್ಲಿ ೨೧–೨–೧೯೪೩ನೆಯ ಭಾನುವಾರ ಸಂಜೆ ೬ ಗಂಟೆಗೆ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಚರ್ಚಾಕೂಟ ಸೇರಿದ್ದಿತು. ಪರಿಷತ್ತಿನ ಗೌರವ ಕಾರ್ಯದರ್ಶಿಗಳಾದ ಶ್ರೀ. ಬಿ. ವೆಂಕೋಬರಾಯರು ಅಧ್ಯಕ್ಷತೆ ವಹಿಸಿದ್ದರು. ಅಂದೇ ಬೆಳಗ್ಗೆ ನಡೆದ ಪರಿಷತ್ತಿನ ಕಾರ್ಯಸಮಿತಿಯ ಅಧಿವೇಶನಕ್ಕೆ ದಯಮಾಡಿಸಿದ್ದ ಕೆಲವು ಸದಸ್ಯರು ಚರ್ಚೆಯಲ್ಲಿ ಭಾಗವಹಿಸಿದ್ದರು.

ವಿಷಯ : ಇಂಗ್ಲಿಷ್ ಸಾಹಿತ್ಯದಿಂದ ಕನ್ನಡದ ಮೇಲೆ ಆಗಿರುವ ಪರಿಣಾಮ.

ಕಾರ್ಯಕ್ರಮಕ್ಕೆ ಮುಂಚೆ, ಶ್ರೀ. ಬಿ. ವೆಂಕೋಬರಾಯರು ಮಹಾತ್ಮ ಗಾಂಧಿಯವರು ಕೈಗೊಂಡಿರುವ ಇಪ್ಪತ್ತೊಂದು ದಿನಗಳ ಉಪವಾಸ ವ್ರತವನ್ನು ಪ್ರಸ್ತಾವಿಸಿ, ದೇವರ ಕೃಪೆಯಿಂದ ಉಪವಾಸ ಸುಮುಖವಾಗಿ ಮುಗಿದು ಗಾಂಧಿಯವರು ಚಿರಕಾಲ ದೇಶ ಸೇವೆಯನ್ನು ಮಾಡುವಂತೆ ಆಗಲೆಂದು ನಾವೆಲ್ಲರೂ ಭಗವಂತನನ್ನು ಪ್ರಾರ್ಥಿಸೋಣ ಎಂದರು. ಸಭೆ ಎರಡು ನಿಮಿಷಗಳ ಕಾಲ ಮೌನವಾಗಿ ಪ್ರಾರ್ಥಿಸಿತು.

ಆ ಮೇಲೆ ಅಧ್ಯಕ್ಷರು ಚರ್ಚೆಯಲ್ಲಿ ಭಾಗವಹಿಸುವ ಮಹನೀಯರ ಪರಿಚಯ ಮಾಡಿಕೊಟ್ಟರು.

ಶ್ರೀ. ಆರ್. ಎಸ್. ಮುಗಳಿಯವರು ಮೊದಲು ಮಾತನಾಡಿದರು. ಅವರ ಮಾತಿನ ಸಾರಾಂಶ ಇದು :

ಕನ್ನಡ ಎರಡು ಸಾವಿರ ವರ್ಷಗಳ ಸಂಪ್ರದಾಯವುಳ್ಳ ಭಾಷೆ. ಮೊಧಲಿಂದಲೂ ಕನ್ನಡದ ಬೆಳವಣಿಗೆಯ ಒಂದು ವಿಶೇಷವೆಂದರೆ,

ಸ್ವಸತ್ವವನ್ನು ಕಾಪಾಡಿಕೊಂಡು, ಪರ ಸಾಹಿತ್ಯ ಸಂಸ್ಕೃತಿಗಳ ಸಾರವನ್ನು ಹೀರಿಕೊಂಡು ಪುಷ್ಟವಾಗಿ ಬೆಳೆದು, ಸ್ವಸಂಸ್ಕೃತಿಯನ್ನು ಜನತೆಯಲ್ಲಿ ಪ್ರಚಾರ ಮಾಡುವುದು. ಆರ್ಯ ಭಾಷೆಯಾದ ಸಂಸ್ಕೃತದಿಂದ, ಆರ್ಯರ ಸಂಸ್ಕೃತಿಯಿಂದ ಕನ್ನಡ ಭಾಷೆಯ ಸಂಪತ್ತು ಹೆಚ್ಚಿತು. ಸಂಸ್ಕೃತಿ ಬೆಳೆಯಿತು. ಕೆಲವು ಕಡೆ ಕನ್ನಡ ಸಂಸ್ಕೃತವನ್ನು ಹೆಚ್ಚಾಗಿ ಅನುಸರಿಸಿ ಅಂಧಾನುಕರಣ ಮಾಡಿರಬಹುದು. ಆದರೆ ಒಟ್ಟಿನಲ್ಲಿ ಕನ್ನಡತನ ಉಳಿಯಿತು. ಸಾಹಿತ್ಯ ಬೆಳೆಯಿತು.

ಹಾಗೆಯೆ, ಈಗ ೪೦–೫೦ ವರ್ಷಗಳಿಂದ ಕನ್ನಡದಲ್ಲಿ ಪುನರುಜ್ಜೀವನ ಕಾರ್ಯ ನಡೆಯುತ್ತಿದೆ. ಸಂಸ್ಕೃತದಂತೆಯೆ ಈಗ ಇಂಗ್ಲಿಷ್ ಪ್ರಭಾವ ಬೀರುತ್ತಿದೆ. ಇಂಗ್ಲಿಷ್ ಕಲಿತ ವಿದ್ವಾಂಸರು ಕನ್ನಡದ ಪುನರುಜ್ಜೀವನ ಚಳವಳಿಯಲ್ಲಿ ಭಾಗವಹಿಸುತ್ತಿದ್ದಾರೆ. ಅದರ ಫಲವಾಗಿ ಒಂದು ಹೊಸ ಮನೋಧರ್ಮ ಮೂಡಿ, ಸಾಹಿತ್ಯ ಧರ್ಮ ಮುಂತಾದ ಹಲವು ರಂಗಗಳಲ್ಲಿ ಕೆಲಸ ಮಾಡಿಸುತ್ತಿದೆ. ವಿವರಗಳಲ್ಲಿ ಕೆಲವು ವೇಳೆ ದುಷ್ಪರಿಣಾಮ ಆಗಿದೆಯೆಂದು ಪೂರ್ವ ಸಂಪ್ರದಾಯದವರು ಹೇಳಲು ಆಸ್ಪದವಿದ್ದರೂ, ಒಟ್ಟಿನಲ್ಲಿ ಎಂದರೆ ಒಟ್ಟು ಪ್ರಯೋಜನದ ದೃಷ್ಟಿಯಿಂದ ಒಳ್ಳೆಯ ಪರಿಣಾಮವೇ ಆಗಿದೆಯೆನ್ನಬಹುದು. ೨೦೦–೩೦೦ ವರ್ಷಗಳ ಹಿಂದೆ ಇಂಗ್ಲೆಂಡಿನಲ್ಲಿ ವರ್ಡ್ಸ್‌ವರ್ತ್, ಕೋಲ್‌ರಿಜ್, ಷೆಲ್ಲಿ, ಕೀಟ್ಸ್ ಮುಂತಾದ ಕವಿಗಳು ಸಾಹಿತ್ಯಕ್ಷೇತ್ರದಲ್ಲಿ ಸ್ವತಂತ್ರ ಯುಗವನ್ನು ತಂದರು. ಅವರ ಕೃತಿಗಳಿಂದ ಇಂಗ್ಲಿಷ್ ಸಾಹಿತ್ಯದ ಬೆಲೆ ಹೆಚ್ಚಿತು.

ಇಂದಿನ ಸಾಹಿತ್ಯದ ಎಲ್ಲ ರೂಪಗಳಲ್ಲೂ ಇಂಗ್ಲಿಷಿನ ಪ್ರಭಾವ ಕಂಡುಬಂದರೂ ಮುಖ್ಯವಾಗಿ ಇಲ್ಲಿ, ಕನ್ನಡ ಭಾವಕವಿತೆಯ ರಚನೆಯಲ್ಲಿ ಇಂಗ್ಲಿಷ್ ಸಾಹಿತ್ಯದ ಪ್ರಭಾವವೇನೆಂಬುದನ್ನು ಗಮನಿಸಿದೆ. ಕವಿ ತಾನು ಅನುಭವದಿಂದ ಕಂಡ ಸತ್ಯವನ್ನು, ಸೌಂದರ್ಯವನ್ನು ಅಲಂಕಾರದ ಹೊರೆಯಿಲ್ಲದೆ ಸರಳವಾದ ಶೈಲಿಯಲ್ಲಿ ಜನಕ್ಕೆ ತಿಳಿಸಬೇಕೆಂಬುದೇ ಕನ್ನಡಕ್ಕೆ ಬಂದ ಹೊಸ ಮನೋಧರ್ಮ. ಸಮಯನಿಷ್ಠವಾದ ಕವಿತಾ ಮಾರ್ಗ ರೀತಿಗಳನ್ನನುಸರಿಸದೆ ಸ್ವಚ್ಛಂದವೆನಿಸಿಕೊಳ್ಳದ ಸ್ವಾತಂತ್ರ್ಯವನ್ನು ಅನುಸರಿಸಿ ಭಾವ ಕವಿತೆಗಳು ರಚಿತವಾದುವು. ಜನಪದ ಸಾಹಿತ್ಯದ ಕಡೆ ಒಲವು ಹೆಚ್ಚಿತು.

ಇಂಗ್ಲಿಷ್ ಭಾವ ಕವಿತೆಯ ಪ್ರಭಾವದಿಂದ ನಮ್ಮ ಕೃತಿಗಳಲ್ಲಿ ಸರಳತೆಯ ಜೊತೆಗೆ ಪ್ರಾಮಾಣಿಕತೆಯೂ ಸೇರುತ್ತ ಬಂದಿದೆ. ಇಂಗ್ಲಿಷ್ ಕಲಿಯದಿದ್ದರೆ ಈ ಗುಣ ಬರುತ್ತಿರಲಿಲ್ಲವೆಂದಲ್ಲ. ಕಲಿತದ್ದರಿಂದ ಬಂದಿದೆ ಎಂದು ಒಪ್ಪುವುದು ನ್ಯಾಯ.

ಛಂದಸ್ಸಿನಲ್ಲಿ ಜನಪ್ರಿಯವಾದ ರೂಪಗಳು ನಮ್ಮ ಸಾಹಿತ್ಯಕ್ಕೆ ಒದಗಿದುವು. ಭಾವ ಕವಿತೆಗೆ ವಸ್ತುವನ್ನು ಆಯುವುದರಲ್ಲಿ ನಿರ್ಬಂಧ ತಪ್ಪಿತು. ಭಾವಗೀತಾತ್ಮಕವಾದ ಜೀವಾಳ ಮಿಡಿಯದ ವಸ್ತುವಿಲ್ಲ ಎಂಬ ವಿಶಾಲವಾದ ಭಾವನೆ ('ಈಶಾವಾಸ್ಯಾಮಿದಂ ಸರ್ವಂ' ಎಂಬ ಆಯುಷಿಯ ದರ್ಶನದಂತೆ) ಮೂಡಿತು. ಮುಖ್ಯ ನಮ್ಮ ಕವಿತೆ ಸರಸವಾಗಲು ಸರಳವಾಗಲು ತಕ್ಕ ಮನೋಧರ್ಮ ಇಂಗ್ಲಿಷ್ ಸಾಹಿತ್ಯದ ಅಧ್ಯಯನದಿಂದ ಬಂದಿತೆಂದು ಧಾರಾಳವಾಗಿ ಹೇಳಬಹುದು.

ಶ್ರೀ. ಎಂ.ಎಸ್. ಅನಂತಪದ್ಮನಾಭರಾಯರು ತಮ್ಮ ಮಾತಿನಲ್ಲಿ ಕೊಡಗು ಪ್ರಾಂತದಲ್ಲಿ ಕನ್ನಡಕ್ಕೆ ಇಂಗ್ಲಿಷಿನಿಂದ ಯಾವ ಸ್ಥಿತಿ ಒದಗಿದೆ ಎಂಬ ಅಂಶವನ್ನು ತಿಳಿಸಿದರು: ಇಂಗ್ಲಿಷಿನ ಅಧ್ಯಯನದಿಂದ ಆಗಿರುವ ಒಳ್ಳೆಯ ಪರಿಣಾಮದ ಜೊತೆಗೆ ಕೆಟ್ಟ ಪರಿಣಾಮವೂ ಆಗಿದೆ. ಆಲೋಚನೆಯಲ್ಲಿ ನುಡಿಯಲ್ಲಿ ನಡೆಯಲ್ಲಿ ಇಂಗ್ಲಿಷಿನ ಅಂಧಾನುಕರಣ; ಆಡುವ ಮಾತಿನಲ್ಲಿ ಇಂಗ್ಲಿಷು ಹೆಚ್ಚಾಯಿತು. ಕನ್ನಡ ಕಡಮೆಯಾಯಿತು. ಹಾಡುವ ಇಂಗ್ಲಿಷ್ 'ನೋಟ್'ಗೆ ಕಿವಿ, ಎದೆ ಅರಳುತ್ತದೆ. ಕರ್ನಾಟಕ ಸಂಗೀತ ಪದ್ಧತಿಗನುಸಾರವಾದ ಗಾಯನ–ಗಮಕ ಸಭೆಗಳಿಗೆ ಆದರ ಕಡಮೆ. ಹಿಂದೀ ಪ್ರಚಾರದಿಂದ ಕನ್ನಡಕ್ಕೆ ಧಕ್ಕೆ ಎಂಬ ವಾದಕ್ಕೂ ಇಂಗ್ಲಿಷಿನಿಂದ ಕನ್ನಡಕ್ಕೆ ಕೇಡು ಎಂಬ ವಾದಕ್ಕೂ ಮೂಲತಃ ಒಂದೇ ಕಾರಣ. ಆದ್ದರಿಂದ ನಮ್ಮ ಭಾಷೆಯ ಏಳಿಗೆಗೆ ಪರ ಭಾಷೆಯಿಂದ ಎಷ್ಟುಮಟ್ಟಿನ ಅಡ್ಡಿಯಾದರೂ ಅದನ್ನು ನಿವಾರಿಸಲು ನಾವು ಪ್ರಯತ್ನಿಸಬೇಕು.

ಶ್ರೀ. ವಿ. ಬಿ. ನಾಯಕರು ನಮ್ಮ ನಾಡಿನ ನಿತ್ಯದ ಬಾಳಿಗೆ ಸಂಬಂಧಿಸಿದ ಪತ್ರಿಕೋದ್ಯಮದ ಮೇಲೆ ಇಂಗ್ಲಿಷ್ ಸಾಹಿತ್ಯದಿಂದ ಆಗಿರುವ ಪರಿಣಾಮವನ್ನು ವಿವರಿಸಿದರು. ಇಪ್ಪತ್ತು ವರ್ಷಗಳ ಹಿಂದೆ ಕನ್ನಡ ಪತ್ರಿಕೆಗಳಲ್ಲಿ ಹೊಸ ಭಾವನೆಗಳನ್ನು ವ್ಯಕ್ತಪಡಿಸಲು ಕನ್ನಡ ಮಾತುಗಳು ಸಿಕ್ಕದೆ, ಇಂಗ್ಲಿಷ್ ಮಾತುಗಳನ್ನೇ ಬಳಸಲಾಗುತ್ತಿತ್ತು. ಜೊತೆಗೆ ಇಂಗ್ಲಿಷ್ ಮೋಹ ಸೇರಿ ಕನ್ನಡ ಪತ್ರಿಕೆಗಳಲ್ಲಿ ಕನ್ನಡತನ ಅಷ್ಟಾಗಿ ಕಾಣಿಸುತ್ತಿರಲಿಲ್ಲ. ಈಚೆಗೆ ನಮ್ಮ ಪತ್ರಿಕೆಗಳಲ್ಲಿ ಕನ್ನಡ 'ತನ್ನತನ'ವನ್ನು ಕಂಡುಕೊಳ್ಳುತ್ತಿದೆ. ಇಂಗ್ಲಿಷಿನ ಮೋಹ ತಪ್ಪುತ್ತಿದೆ. ಅಂಧಾನುಕರಣ ಹೋಗಿ ಗುಣಗ್ರಹಣ ಶಕ್ತಿ ಹೆಚ್ಚುತ್ತಿದೆ.

ಇಂಗ್ಲಿಷ್ ಪತ್ರಿಕೆಗಳಿಂದ ನಾವು ಕಲಿತ ಒಂದು ಪಾಠವೆಂದರೆ ಸರಳವಾಗಿ, ನೇರವಾಗಿ ಸ್ಪಷ್ಟವಾದ ಬರವಣಿಗೆಯನ್ನು ಬರೆಯುವುದು. ಶೈಲಿಯಲ್ಲಿ ಕೃತಕತೆ ಹೋಗಿ, ಸಹಜತೆ ಮೂಡಿ, ಪತ್ರಿಕೆಗಳಿಂದ ಜನಸಾಮಾನ್ಯ ಸುಲಭವಾಗಿ ಲೋಕಾನುಭವವನ್ನು ಪಡೆದು ಮುನ್ನಡೆಯಬೇಕು. ನಾಡ ಸೇವೆಯಲ್ಲಿ ಕನ್ನಡ ಪತ್ರಿಕೆಗಳ ಅಧಿಕಾರ ದಿನ ದಿನಕ್ಕೂ ಹೆಚ್ಚುವಂತಾಗಿದೆ.

ಬಳಿಕ ಅಧ್ಯಕ್ಷರು ಶ್ರೀ. ಪಿ. ಆರ್. ರಾಮಯ್ಯನವರನ್ನು ಮಾತನಾಡಲು ಪ್ರಾರ್ಥಿಸಿದರು. ಅವರು ಕನ್ನಡ ಪತ್ರಿಕೆಗಳಲ್ಲಿ ಇರುವ ಲೋಪದೋಷಗಳಿಗೆ ಪತ್ರಿಕೆ ನಡಸುವ ವ್ಯಕ್ತಿಯೂ ದೇಶದ ಪರಿಸ್ಥಿತಿಯೂ ಕಾರಣವೆಂದು ನುಡಿದರು: ದಿನ ಪತ್ರಿಕೆಗಳ ಕೆಲಸ ಬಹಳ ವೇಗದಿಂದ ನಡೆಯಬೇಕಾಗಿರುವುದರಿಂದ ಅದರ ಭಾಷೆ ಶುದ್ಧ ಸಾಹಿತ್ಯದ ಭಾಷೆಯಂತೆ ದೋಷದೂರವಾಗಿರುವುದು ಕಷ್ಟವಾಗುತ್ತದೆ. ಜನಸಾಮಾನ್ಯಕ್ಕೆ ಬೇಗ ಅರ್ಥವಾಗಬೇಕೆಂಬ ದೃಷ್ಟಿಯಿಂದ ದೂರ ದೇಶಗಳಿಂದ ಬರುವ ತಂತಿ ಸಮಾಚಾರಗಳನ್ನೂ ಆತುರದಿಂದ ಭಾಷಾಂತರ ಮಾಡುತ್ತದೆ. ಕೆಲವು ವೇಳೆ ತಕ್ಕ ಪದಪ್ರಯೋಗವಾಗದೆ, ಪರಿಭಾಷಾ ಸಂಪತ್ತು ಸಾಲದೆ, ಬರವಣಿಗೆ ಸ್ಪಷ್ಟವಾಗದೆ ಹೋಗಬಹುದು. ಪತ್ರಿಕೆಗಳ ಭಾಷೆಯನ್ನು ಸಂಕುಚಿತ ದೃಷ್ಟಿಯಿಂದ ನೋಡದೆ, ಪ್ರಕೃತಿ ಸಂಬಂಧವಾದ ಮತ್ತು ಮಾನವ ಸಂಬಂಧವಾದ ದೃಷ್ಟಿಗಳಿಂದ ನೋಡಬೇಕು.

ಪರಿಷತ್ತಿನಂಥ ಸಂಸ್ಥೆಗಳು ಆರು ತಿಂಗಳಿಗೊ ವರ್ಷಕ್ಕೊ ಒಮ್ಮೆ ಕನ್ನಡ ಪತ್ರಿಕೆಗಳಲ್ಲಿ ಬರುವ ಮಾತುಗಳನ್ನು ತೂಗಿ ಜಲ್ಲಡಿ ಹಿಡಿದು, ಒಪ್ಪುವುದನ್ನು ಒಪ್ಪಿ, ಬೇಡದ್ದನ್ನು ಬಿಡಲು ಸಲಹೆ ಕೊಡಬೇಕು. ಎಷ್ಟೋ ವೇಳೆ 'ಆಶುವಾಕ್ಯ ರಚನೆ'ಯೇ ಆಗಬೇಕಾದರೂ ಪತ್ರಿಕಾ ಕಾರ್ಯಾಲಯದಲ್ಲಿ ಹೊಸ ಭಾವಕ್ಕೆ ತಕ್ಕ ಮಾತು ಸ್ಫೂರ್ತಿಯಿಂದ ಹೊಳೆಯುವುದೂ ಉಂಟು. ಕನ್ನಡ ಪತ್ರಿಕೆಗಳಿಗೆ ಉತ್ತಮವಾದ ಭವಿಷ್ಯತ್ತಿದೆ.

ಆಮೇಲೆ ಶ್ರೀ. ವಿ. ಸೀತಾರಾಮಯ್ಯನವರು ಅಧ್ಯಕ್ಷರಿಗೂ ಚರ್ಚಾಕೂಟದಲ್ಲಿ ಭಾಗವಹಿಸಿದ ಮಹನೀಯರಿಗೂ ಧನ್ಯವಾದ ಸಮರ್ಪಿಸಿದ ಮೇಲೆ ಸಭೆ ಮುಗಿಯಿತು.

## ಪರಿಷತ್ತಿನ ಸುದ್ದಿ

### ಕಾರ್ಯಸಮಿತಿಯ ಸಭೆ: ನಿರ್ಣಯಗಳು

ಪರಿಷತ್ತಿನ ಕಾರ್ಯಸಮಿತಿ ೨೧–೨–೪೩ನೆಯ ಭಾನುವಾರ ಬೆಳಗ್ಗೆ ಪರಿಷನ್ಮಂದಿರದಲ್ಲಿ ಸಭೆ ಸೇರಿ ಈ ಕೆಳಗಿನ ನಿರ್ಣಯಗಳನ್ನು ಮಾಡಿರುತ್ತದೆ:

೧. ಮಹಾತ್ಮಾ ಗಾಂಧಿಯವರು ಇಪ್ಪತ್ತೊಂದು ದಿನಗಳ ಉಪವಾಸ ಕೈಗೊಂಡಿರುವುದು ಎಲ್ಲರಿಗೂ ಕಳವಳವನ್ನುಂಟುಮಾಡಿದೆ. ಅವರ ಈ ಉಪವಾಸವ್ರತ ಸುಮುಖವಾಗಿ ಮುಗಿದು ಅವರು ಇನ್ನೂ ಹೆಚ್ಚುಕಾಲ ಜೀವಂತರಾಗಿದ್ದು ದೇಶಸೇವೆ ಲೋಕಸೇವೆ ಮಾಡುವಂತಾಗಲೆಂದು ಈ ಸಭೆ ದೇವರಲ್ಲಿ ಪ್ರಾರ್ಥಿಸುತ್ತದೆ.

೨. ಕನ್ನಡ ರತ್ನ (ರತ್ನೆ) ಪ್ರಶಸ್ತಿಯ ಪರೀಕ್ಷೆಯನ್ನು ಪರಿಷತ್ತು ನಡಸಬಹುದು. ಈ ವರ್ಷದ ಪರೀಕ್ಷೆಯನ್ನು ಡಿಸೆಂಬರು ತಿಂಗಳಿನ ೨ ಅಥವಾ ೩ನೆಯ ವಾರದ ಮೊದಲಿನಲ್ಲಿ ಏರ್ಪಡಿಸಬಹುದು.

೩. ಕಲ್ಬುರ್ಗಿಯ ಕನ್ನಡ ಸಾಹಿತ್ಯ ಸಂಘದವರು ಕಾರ್ಯಸಮಿತಿಯ ಜುಲೈ ತಿಂಗಳ ಸಭೆಯನ್ನು ಕಲ್ಬುರ್ಗಿಯಲ್ಲಿ ನಡಸುವಂತೆ ಕೊಟ್ಟಿದ್ದ ಆಹ್ವಾನವನ್ನು ಕಾರ್ಯಸಮಿತಿ ಸಂತೋಷದಿಂದ ಸ್ವೀಕರಿಸಿದೆ.

೪. "ನಿಯಮಗಳ ಮೇರೆಗೆ ಆಜೀವ ಸದಸ್ಯತ್ವದ ರುಸುಂ ರೂ. ೫೦. ದುಡಿಯತಕ್ಕ ಬಡ್ಡಿಯಲ್ಲಿ ಆಜೀವ ಸದಸ್ಯರಿಗೆ ಕನ್ನಡ ನುಡಿ, ಪರಿಷತ್ಪತ್ರಿಕೆ ಮೊದಲಾದುವನ್ನು ಒದಗಿಸಲು ಕಷ್ಟವಾಗಿರುವುದರಿಂದ ಈ ವರ್ಷದ ಚಂದಾಹಣ ಕನಿಷ್ಠಪಕ್ಷ ರೂ. ೧೦೦ ಇರಬೇಕೆಂದು ಕಾರ್ಯಸಮಿತಿ ಅಭಿಪ್ರಾಯಪಡುತ್ತದೆ; ಮತ್ತು ಈ ಸಲಹೆಯನ್ನು ಮುಂದಿನ ಸದಸ್ಯ ಸಭೆಯು ಒಪ್ಪುವವರೆಗೆ, ಅದರ ಒಪ್ಪಿಗೆಯ ನಿರೀಕ್ಷಣೆಯ ಮೇಲೆ ಈ ೫೦ ರೂಪಾಯಿನ ಸದಸ್ಯತ್ವವನ್ನು ತಡೆದಿಟ್ಟರ ತಕ್ಕದ್ದು."

### ಪರಿಷತ್ತಿನ ಸದಸ್ಯರ ಬೆಳವಣಿಗೆ

(ತಾ. ೧೯-೨-೪೩ರಿಂದ ೨೫-೨-೪೩ರ ವರೆಗೆ)

**ಸಹಾಯಕ ಸದಸ್ಯರು (೧೦೦ ರೂ.):** ೧. ಶ್ರೀ.ಗಳಾದ ಎಚ್.ಎಸ್. ಸುಬ್ಬರಾವ್, ಬಿ.ಇ. ಅವರು, ಅ. ಇಂಜಿನಿಯರು, ಕಣ್ವ ಪಾಜೆಕ್ಟ್, ಕಣ್ವ (ಕ್ಲೋಸ್‌ಪೇಟೆ ತಾಲ್ಲೂಕು). ೨. ಸಿ. ಕೆ. ವೆಂಕಟರಾಮಯ್ಯ, ಎಂ.ಎ., ಎಲ್‌ಎಲ್.ಬಿ. ಅವರು, ಮೈಸೂರು ಸರ್ಕಾರದ ಕನ್ನಡ ಟ್ರಾನ್‌ಸ್ಲೇಟರರು, ಬೆಂಗಳೂರು. (ಆಜೀವ ಸದಸ್ಯತ್ವದಿಂದ ಬದಲಾವಣೆ). ೩. ಬಿ. ವಾಸುದೇವಮೂರ್ತಿಗಳು, ಬಿ.ಎ., ಬಿ.ಎಲ್., ಅಡ್ವೊಕೇಟರು, ಬೆಂಗಳೂರು. (ಸಾಮಾನ್ಯ ಸದಸ್ಯತ್ವದಿಂದ ಬದಲಾವಣೆ).

**ಸಾಮಾನ್ಯ ಸದಸ್ಯರು (೬ ರೂ.):** ಶ್ರೀ.ಗಳಾದ ೧. ಡಿ.ಎಸ್. ಹನುಮಂತರಾಯರು, ಅಕೌಂಟೆಂಟರು, ಮೈಸೂರು ಸ್ಪನ್‌ಸಿಲ್ಕ್ ಕಂಪೆನಿ, ಚೆನ್ನಪಟ್ಟಣ. ೨. ಆರ್. ಸೂರ್ಯನಾರಾಯಣರಾಯರು, ಆಫೀಸ್ ಮ್ಯಾನೇಜರು, ಮೈಸೂರು ಸ್ಪನ್‌ಸಿಲ್ಕ್ ಕಂಪೆನಿ, ಚೆನ್ನಪಟ್ಟಣ. ೩. ಟಿ. ಜೆ. ಕೃಷ್ಣಮೂರ್ತಿ ಅವರು, ಅಸಿಸ್ಟೆಂಟ್ ಸೂಪರಿಂಟೆಂಡೆಂಟರು, ರೇಷ್ಮೆವ್ಯವಸಾಯದ ಇಲಾಖೆ, ಚೆನ್ನಪಟ್ಟಣ. ೪. ಎಚ್. ನಾರಾಯಣರಾಯರು, ಮ್ಯಾನೇಜರು, ಮೈಸೂರು ಬ್ಯಾಂಕ್ ಶಾಖೆ, ಚೆನ್ನಪಟ್ಟಣ. ೫. ಬಿ. ರಂಗಪ್ಪನವರು, ಎಕ್ಸೈಸ್ ಇನ್ಸ್‌ಪೆಕ್ಟರು, ಚೆನ್ನಪಟ್ಟಣ. ೬. ಐ. ಎಸ್. ರಾಮಚಂದ್ರಶೆಟ್ಟಿ ಅವರು, ರೇಷ್ಮೆ ವ್ಯಾಪಾರಿಗಳು, ಕ್ಲೋಸ್‌ಪೇಟೆ. ೭. ಎ. ಎಸ್. ಕರೀಮ್ ಅವರು, ರೇಷ್ಮೆ ವ್ಯಾಪಾರಿಗಳು, ಕ್ಲೋಸ್‌ಪೇಟೆ. ೮. ಎಸ್. ದಾರಾ ಷಾ ಅವರು, ಡಿ. ಸೂಪರಿಂಟೆಂಡೆಂಟ್ ಆಫ್ ಪೋಲೀಸ್, ಇರ್ವಿನ್ ರಸ್ತೆ, ಮೈಸೂರು. ೯. ಯು. ಕೆ. ಸೋಮಪ್ಪ ಬಿ.ಎ. ಅವರು, ಡಿ. ಸೂಪರಿಂಟೆಂಡೆಂಟ್ ಆಫ್ ಪೋಲೀಸ್, ಅಲಸೂರು, ಬೆಂಗಳೂರು.

**ಸಾಮಾನ್ಯ ಸದಸ್ಯರು (೩ ರೂ.):** ೧. ಶ್ರೀ. ಕೆ. ಎನ್. ಜೀವೋತ್ತಮರಾಯರು, ಬೆಂಗಳೂರು ಟ್ರಾನ್ಸ್‌ಪೋರ್ಟ್ ಕಂಪೆನಿ, ಬಸವನಗುಡಿ, ಬೆಂಗಳೂರು.

**ವಾರ್ಷಿಕ ಅಂಗಸಂಸ್ಥೆ (೬ ರೂ.):** ಸಿದ್ಧೇಶ್ವರ ವಾಚನಾಲಯ ಇಂಗಳೇಶ್ವರ, ಬಾಗೇವಾಡಿ ಪೋಸ್ಟ್.

**ಮೈಸೂರು ಪ್ರಾಂತಸಮಿತಿ: ಎರಡು ಉಪನ್ಯಾಸಗಳು**

೧೯೪೩ನೆಯ **ಮಾರ್ಚಿ ೩ನೆಯ** ತಾರೀಖು **ಬುಧವಾರ** ಸಂಜೆ ೬-೩೦ ಗಂಟೆಗೆ ಪರಿಷನ್ಮಂದಿರದಲ್ಲಿ ರಾಜಸೇವಾಪ್ರಸಕ್ತ ಶ್ರೀ. ಎ. ಎನ್. ರಾಘವಾಚಾರ್ಯರು 'ರಾಮಾಯಣದ ಸೊಗಸು' ಎಂಬ ವಿಷಯವಾಗಿ ಉಪನ್ಯಾಸ ಮಾಡುತ್ತಾರೆ.

೧೯೪೩ನೆಯ **ಮಾರ್ಚಿ ೫ನೆಯ** ತಾರೀಖು **ಶುಕ್ರವಾರ** ಸಂಜೆ ೬-೩೦ ಗಂಟೆಗೆ ಪರಿಷನ್ಮಂದಿರದಲ್ಲಿ ರಾಜಸಭಾಭೂಷಣ ಸರ್ ಸಿ. ವಿ. ರಾಮನ್, ಎಂ.ಎ., ಡಿ.ಎಸ್‌ಸಿ., ಎಫ್.ಆರ್.ಎಸ್., ಎನ್.ಎಲ್. ಅವರು "The Human Voice as a Musical Instrument" ಎಂಬ ವಿಷಯವಾಗಿ ಇಂಗ್ಲಿಷಿನಲ್ಲಿ ಉಪನ್ಯಾಸ ಮಾಡುತ್ತಾರೆ.

## ೨೬ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಶಿವಮೊಗ್ಗ

ಸ್ವಾಗತ ಸಮಿತಿಯ ಸಭೆ ೨೦-೨-೪೩ನೆಯ ದಿನ ನಡೆದು ಈ ಕೆಳಗಿನಂತೆ ತೀರ್ಮಾನಗಳಾದವು:

೧. ಕಳೆದ ೯-೨-೪೨ರಲ್ಲಿ ಪರಿಷತ್ತಿನ ಸಮ್ಮೇಳನವನ್ನು ಶಿವಮೊಗ್ಗೆಯಲ್ಲಿ ನಡಸಲು ಆಹ್ವಾನಿಸಲು ತೀರ್ಮಾನಿಸಿದ ನಂತರ ದೇಶದ ಪರಿಸ್ಥಿತಿ ಬದಲಾಯಿಸುತ್ತ ಬಂದಿದೆ. ಈ ಕಾರಣದಿಂದ ಇದುವರೆಗೆ ಯಾವ ತೀರ್ಮಾನವನ್ನು ಮಾಡಲೂ ಸಾಧ್ಯವಾಗದೆ ಮುಂದುವರಿಸುತ್ತ ಬಂದಿರುವುದಾಗಿರುತ್ತದೆ. ಮಹಾತ್ಮಾ ಗಾಂಧಿಯವರ ಉಪವಾಸ ವ್ರತದಿಂದ ಉಂಟಾಗಿರುವ ಕಳವಳದ ಪರಿಸ್ಥಿತಿಯಲ್ಲಿ ಸಮ್ಮೇಳನ ನಡಸುವ ವಿಚಾರವಾಗಿ ಒಂದು ನಿರ್ದಿಷ್ಟ ತೀರ್ಮಾನಕ್ಕೆ ಬರಲು ಈ ದಿನದ ಸಭೆಯಲ್ಲಿ ಸಾಧ್ಯವಿಲ್ಲ. ಉಪವಾಸದ ಅವಧಿ ಕಳೆದನಂತರ ಪುನಃ ಸಭೆ ಸೇರಿ, ಸಭೆಯ ತೀರ್ಮಾನವನ್ನು ಪರಿಷತ್ತಿನ ಕಾರ್ಯದರ್ಶಿಗಳಿಗೆ ತಿಳಿಸಬಹುದಾಗಿದೆ.

೨. ಮಹಾತ್ಮಾ ಗಾಂಧಿಯವರು ಕೈಗೊಂಡಿರುವ ಉಪವಾಸ ವ್ರತದ ಉಳಿದ ಅವಧಿ ಸುಗಮವಾಗಿ ಕಳೆದು ಅವರ ಮಹೋದ್ದೇಶವು ಸಫಲವಾಗುವಂತೆ ಕರುಣಿಸಲೆಂದು ಈ ಸಭೆ ಜಗದೀಶ್ವರನಲ್ಲಿ ಅನನ್ಯ ಭಕ್ತಿಯಿಂದ ಪ್ರಾರ್ಥಿಸುತ್ತದೆ.

## ವಿಮರ್ಶೆ

ಆತ್ಮಾರ್ಪಣ (ಸಂಗೀತ ಸಮಸ್ಯಾತ್ಮಕ ನಾಟಕ): ಗ್ರಂಥಕರ್ತೃ: 'ಕಾವ್ಯಾನಂದ' ಪ್ರಕಾಶಕರು: ಅನ್ನಪೂರ್ಣಸ್ವಾಮಿಗಳು, ಮಲ್ಲಾಪಲ್ಲಿ ೨೨೬, ಹೈದರಾಬಾದು. ಡೆಮ್ಮೈ ಅಷ್ಟಪತ್ರ ಪುಟಗಳು ೧೧೧+೬+೮. ಬೆಲೆ?

ಕಾವ್ಯಾನಂದರ 'ಆತ್ಮಾರ್ಪಣ'ವು ಹೈದರಾಬಾದು ವೀರಶೈವ ತರುಣ ಸಂಘದ ಪ್ರಕಟಣೆ. ಕಾವ್ಯಾನಂದರಾದ ಶ್ರೀ. ಸಿದ್ಧಯ್ಯ ಪುರಾಣಿಕ, ಬಿ.ಎ. ಅವರು ತರುಣ ವಿದ್ಯಾರ್ಥಿಗಳು, ಎಳೆಯ ಕವಿಗಳು, ಪಳಗಲಿರುವ ಸಾಹಿತಿಗಳು. ಆತ್ಮಾರ್ಪಣ ಅಚ್ಚಿಗೆ ಬಂದ ಅವರ ಮೊದಲ ಮಹಾಪ್ರಯತ್ನ. ಇವರ ಕೆಲ ಕವನಗಳನ್ನು 'ಜಯಂತಿ' ಮೊದಲಾದ ಪತ್ರಿಕೆಗಳಲ್ಲಿ ಕನ್ನಡಿಗರು ಓದಿ ಸವಿದಿರಬೇಕು. 'ಆತ್ಮಾರ್ಪಣ' ಮಹಾಪುರುಷರಾದ ಬಸವಣ್ಣನವರ ಚರಿತ್ರೆ. ಇವರ ಚರಿತ್ರೆಯಲ್ಲಿ ಆನುಷಂಗಿಕವಾಗಿ ಜರುಗಿದ ಅರಳಯ್ಯ ಮಧುವರಸರ ದುರಂತ ಘಟನೆಯನ್ನೆ ಲೇಖಕರು ಆಧಾರವಾಗಿಟ್ಟುಕೊಂಡು ಆತ್ಮಾರ್ಪಣವೆಂಬ ಹೆಸರನ್ನು ನಾಟಕಕ್ಕೆ ಕೊಟ್ಟಿದ್ದಾರೆ. ಧರ್ಮ ಮತ್ತು ತತ್ತ್ವಕ್ಕಾಗಿ ಆತ್ಮಾರ್ಪಣವನ್ನು ಮಾಡಿದವರ ಹಿರಿಮೆಯನ್ನು ಹಾಡುವುದೇ ಈ ಗ್ರಂಥದ ಉದ್ದೇಶವಾಗಿದೆ. ಆದ್ಯರ ವಚನಗಳನ್ನು ಅಂದವಾಗಿ ಸಂಭಾಷಣೆಗಳಲ್ಲಿ ಜೋಡಿಸಿಕೊಳ್ಳಲಾಗಿದೆ. ನೆಯ್ಗೆ ಚೆನ್ನಾಗಿದೆ. ಬಸವಣ್ಣನವರ ವ್ಯಕ್ತಿತ್ವವು ಸ್ಫುಟವಾಗಿ ಚಿತ್ರಿತವಾಗಿದೆ. ನಿಜಾಮ ಕರ್ಣಾಟಕದಲ್ಲಿ ಸಾಹಿತ್ಯ ನಿರ್ಮಾಣಶಕ್ತಿ ಈಗ ತಾನೆ ಮೊಳೆಯುತ್ತಲಿದೆ. ಕಾವ್ಯಾನಂದರು ಅರಳುತ್ತಿರುವ ಮೊಗ್ಗೆ. ಕಂಪು ಕಮ್ಮಿತ್ತಾಗಲೆಂದು ಹಾರೈಸುವೆವು. ಎಲ್ಲರೂ ಅಗತ್ಯವಾಗಿ ಈ ಗ್ರಂಥವನ್ನು ಆದರಿಸಿ ಪ್ರೋತ್ಸಾಹಿಸುವರೆಂದು ನಂಬುವೆವು. ಹೈದರಾಬಾದು ವೀರಶೈವ ತರುಣ ಸಂಘವು ಸಾಹಿತ್ಯ ಸೇವೆಯಲ್ಲಿ ಹೀಗೆಯೆ ಸತತವಾಗಿ ತೊಡಗಿ ಅನ್ಯರಿಗೆ ಆದರ್ಶವಾಗಲೆಂದೂ ಹಾರೈಸುವೆವು.

'ಮಾಸ್ತಿ'

೬೩೧—೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

## ಒಂದು ಮೊರೆ

೧

ಜನಾರ್ಧನ ಕೇಳು ಶೋಕದಲಿ
ಮೊರೆಯನಿಡುತಿದೆ ಲೋಕ ನಿನ್ನ ಬಳಿ.
ರೋದನದ ಕಿಚ್ಚೆದ್ದು ಉರಿಯುತಿದೆ.
ತಮಗಾವ ಸುಖವೆಂದು ಕಾಣದಲೆ.
ಘಾತಕರು ಕಾರುತಿಹ ವಿಷದಿಂದ
ಬೆಂದಿರುವ ಸಜ್ಜನರ ನಿಟ್ಟುಸಿರು
ಧೂಮದೊಲು ಸುರಲೋಕಕೇರುತಿದೆ.
ಕರುಣನಿಧಿ ಕಾಯೆಯಾ
ಪಾಪದಲಿ ಮುಳುಗುತಿಹ ಭೂಮಿಯನು ?
ಕರೆ ಬರಲಿ ಎಂದು ಕಾಯುವೆಯ ?
ಭಕ್ತರಂ ಪೊರೆವುದನು ಮರೆತಿಹೆಯ ?

೨

ಮರೆತಿಹೆಯ ಅಂದು ಶೋಕಿಸುವ
ಪಾರ್ಥನಿಗೆ ನೀನಿತ್ತ ವಚನವನು ?
ರಾಜ್ಯಮದದಲಿ ಸೊಕ್ಕಿ ಧರ್ಮವನು
ತೊರೆದಿದ್ದ ರಕ್ಕಸರ ನೀ ಕೊಂದೆ.
ಉಭಯ ಬಲ ಮಧ್ಯದಲಿ ಅಭಯವನು
ನರಗಿತ್ತು ಖಳರಾದ ಕೌರವರ
ಹೆಸರುಳಿಯದಂತೆಸಗೆ ನೆರವಾದೆ.
ಅಂದಿನಂತಭಯವನು
ಶಾಂತಿ ಭಿಕ್ಷೆಯನೆಮಗೆ ನೀಡಯ್ಯ.
ಕಲ್ಮಷದಿ ಕೊಳೆತ ಇಳೆಯಲ್ಲಿ
ಇಂದೆಡೆಯಿಲ್ಲ ಶಾಂತಿಗೆನಬೇಡ.

೩

ಶಮ ದಮಗಳಿಲ್ಲ, ಒಲವಿಲ್ಲ,
ಶಾಂತಿಯೊಂದಿನಿಸಿಲ್ಲ ಜನರಲ್ಲಿ.
ಒಲವು ಶಮ ಧರ್ಮ ನೀತಿಗಳಳಿಯೆ,
ಇಳೆಯೊಳವನೆಲ್ಲ ನೆಲೆ ನಿಲ್ಲಿಸುವೆ ;
ಯುಗ ಯುಗದಿ ಬಂದು ಸುಜನರ ಸಲಹಿ
ದುಷ್ಟರನು ಮಡಿಪಿ ಧರ್ಮವ ಕಾಯ್ವೆ
ನೆಂದು ವಚನವನಿತ್ತೆ ಪಾರ್ಥನಿಗೆ.
ಜನಪದಕೆ ಬೆಳಕೀಯೆ
ದೊರೆತನವ ಬಿಟ್ಟು ದೇಸಿಗನಾದೆ.
ಕ್ರೂರಿಗಳ ಪೆರ್ಬಡೆಯನಿಕ್ಕಿ
ಅಸುವಡಗುತಿಹ ಧರ್ಮವನು ಸಲಹು.

೪

ನಂಬುಗೆಯ ದೀಪ ನಂದುತಿದೆ ;
ಬಸವಳಿದ ಜನಕಿಂದು ಬೆಳಕಿಲ್ಲ.
ಎಳೆಯರಬಲರು ಸಾಧು ಭೀರುಗಳು,
ದೋಷ ಪಾಪಂಗಳಿಗೆ ಬೆದರುವರು,
ಕೊಲೆಗರುಹರಲ್ಲದರು – ಅನಿಬರುಂ
ಹಲವಾರು ಪಾತಕಿಗಳೆಸಗುತಿಹ
ಪಾಪದೊಳಗೆಂತೆಂತು ನೊಂದಿಹರು !
ನಿನ್ನನೇ ಮೊರೆವೊಕ್ಕ
ಜನರ ನೀಂ ಅಸುರಾರಿ ಕಾಯೆಯಾ ? —
ಮಲಿನದಲಿ ಕೊಳೆ ಕೊಳೆತ
ಕಲಿಯುಗದ ಮಾನವರ ಬುವಿಯಿಂದ
ತೊಳೆ ತೊಳೆದು ಭದ್ರಜೀವಿಗಳ
ಭವ್ಯಲೋಕವನೊಂದ ಕಟ್ಟುವೆಯ ?

— ಜಿ. ಚಂ.

ನನ್ನ ಹಳ್ಳಿಯ ಪ್ರವಾಸ

## ೧. ಹಂದನಹಾಲು

(ಶ್ರೀಮತಿ ಎಂ. ಆರ್. ಲಕ್ಷ್ಮಮ್ಮ, ಎಂ.ಎ.)

ಅಕ್ಟೋಬರ್ ತಿಂಗಳ ಕೊನೆ. ವಿಜಯದಶಮಿಯ ಪವಿತ್ರ ದಿನ. ಸುಮಾರು ಹನ್ನೊಂದು ಗಂಟೆಗೆ ನಾವು ಹಗರೆಯನ್ನು ಬಿಟ್ಟು ಆಗ್ನೇಯಾಭಿಮುಖವಾಗಿ ಹೊರಟೆವು. ಹಾದಿಯಲ್ಲಿ ಸಿಕ್ಕಿದ ಗದ್ದೆ ತೆವರಿಗಳನ್ನು ದಾಟಕೊಂಡು ಬಯಲನ್ನು ಮುಟ್ಟುವ ಹೊತ್ತಿಗೆ ಬಿಸಿಲಿನ ಚುರುಕು ತೀವ್ರವಾಯಿತು. ವಾಪಸು ಹೊರಡೋಣವೇ ಅನ್ನಿಸಿತು. ಮನಸ್ಸಿನ ಸೆಳೆತವನ್ನು ಬದಿಗೊತ್ತಿ ಮುಂದುವರಿದೆವು.

ಆ ಬಯಲ ನೆಲದಲ್ಲಿದ್ದುವು ಬಗೆಬಗೆಯ ಕಿರುಹೂಗಳು. ಬೆಳಗಿನ ಹೊತ್ತು ಬಿದ್ದಿದ್ದ ಇಬ್ಬನಿಯ ಜೀವರಸದಿಂದ ಪೋಷಿತವಾದ ಹೂಗಳೂ ಅವುಗಳ ಜತೆಯಲ್ಲಿ ಬೆಳೆದಿದ್ದ ಗರಿಕೆಯ ಹುಲ್ಲೂ ಸೊಂಪಾಗಿ ನಳನಳಿಸುತ್ತಿದ್ದುವು. ಕೆಲ ಹೂಗಳು ಕಂಚಿ ಕುಂಕುಮದ ಬಣ್ಣದವು; ನಾಲ್ಕು ದಳಗಳೂ ಸೇರಿ ಕಡಲೆ ಕಾಳಿನಷ್ಟು ಅಗಲವಿಲ್ಲ. ಅಷ್ಟು ಪುಟ್ಟದರಲ್ಲಿಯೇ ಅದೆಷ್ಟು ಚೆಲುವು ತುಂಬಿತ್ತು ! ಇನ್ನು ಕೆಲವು ಬಿಳಿಯ ಪೂಗುತ್ತಿಗಳು. ಮರಗಿಡಗಳ ತುದಿಯಲ್ಲಿ ತಲೆಯೆತ್ತಿ ನಿಂತು ಎಲ್ಲ ಕಡೆಗೂ ಕುತೂಹಲದ ಕಣ್ಣನ್ನರಳಿಸಿದಂತಿತ್ತು. ಒಂದು ಹೂ ತನ್ನ ಹೊಳಪು ಹಳದಿಯ ನಾಲಗೆಯನ್ನು ನಿಡಿದಾಗಿ ಚಾಚಿತ್ತು, ಸಣ್ಣ ಪುಟ್ಟ ಹುಳಗಳನ್ನು ಆಕರ್ಷಿಸಿ ಕೊಲ್ಲ ಮೋಹಿನಿಯಂತೆ.

ಇದ್ದಕ್ಕಿದ್ದ ಹಾಗೆ ನಮ್ಮೊಡನಿದ್ದ ಹುಡುಗಿಯೊಬ್ಬಳು "ಅಲ್ಲಿ ನೋಡಿ ಅಲ್ಲಿ" ಎಂದು ಪಕ್ಕದಲ್ಲಿದ್ದ ಗಿಡದ ಕಡೆ ಕೈ ಚಾಚಿ ತೋರಿದಳು. ತಲೆಯೆತ್ತಿ ನೋಡಿದೆವು. ಒಣಗಿದ ಈಚಲ ಮರವೊಂದು ಗಂಟುಗಂಟಾಗಿ ನಿಂತಿದೆ. ಅದರ ತಲೆಯಲ್ಲಿ ಅಚೇತನವಾದ ಮಣ್ಣು ಗುಪ್ಪೆಯ ಮೇಲೆ ಹರಿಯುವ ಜರಿಯು ಎದ್ದು ಕಾಣುವಂತೆ ಒಂದು ಹಾವು ಸುತ್ತಿ ಸುತ್ತಿ ನುಲಿಯುತ್ತಿರುವುದು ಕಣ್ಣಿಗೆ ಬಿತ್ತು. ನಾಗರ ಹಾವಿರಬಹುದೇ ಎಂದು ನಾನು ಅಂಜಿದೆ; ಅಲ್ಲ, ಕ್ಯಾರೆ ಹಾವೆಂದು ನಮ್ಮವರು ಹೇಳಿದರು.

ಹಗರೆಗೆ **ಹಂದನಹಾಲು** ಎಂಬ ಹಳ್ಳಿ ಸುಮಾರು ಎರಡು ಮೈಲಿ ದೂರದಲ್ಲಿದೆ. ನಾವು ಹಂದನಹಾಲಿನ ಕೆರೆಯ ಅಂಚಿಗೆ ತಲಪಿದಾಗ ಗಂಟೆ ಸುಮಾರು ಹನ್ನೆರಡಾಗಿತ್ತು. ಊರಿನ ದನಕರುಗಳು ಮೇವಿಗೆ ಹೊರಟಿದ್ದುವು.

ಕೆರೆ ಏರಿಯ ಎದುರಲ್ಲಿ ದೊಡ್ಡ ತೋಪು, ಅದರಲ್ಲಿ ವಿಶೇಷವಾಗಿ ಅಡಕೆಯ ಮರಗಳು. ಸುತ್ತಲೂ ಲಾಂಟಾನಾ ಹಾಗೂ ಸೀಗೆಯ ಬೇಲಿ. ಬಗಿನಿಯ ಮರವೊಂದು ಬಾಗಿ ನಿಂತಿತ್ತು. ಅಡಕೆ ಗಿಡಗಳ ಎಲೆಗಳ ಮಧ್ಯೆ ಸರಪಣಿ ಮಾದರಿಯ ಎರಡಡಿ ಉದ್ದದ ಬಿಳಲ ಗೊಂಚಲುಗಳು ತೂಗಾಡುತ್ತಿದ್ದುವು.

ನೋಡಿ ನೋಡಿ ಎಡಕತ್ತು ನೋಯಲಾರಂಭಿಸಿ ದೃಷ್ಟಿ ಹಾಗೆಯೇ ಬಲಕ್ಕೆ ಕೆರೆಯ ಕಡೆ ಹೊರಳಿತು. ಅಲ್ಲಿ ನಟ್ಟ ದೃಷ್ಟಿ ಮತ್ತೆ ಸುಲಭಕ್ಕೆ ಕೀಳುವಂತಿರಲಿಲ್ಲ. ನೀರಿನ ಇರ್ಕಡೆಗಳಲ್ಲೂ ಕಮಲಗಳ ಗುಂಪೇ ಕೂಡಿತ್ತು. ಮೃದುವಾದ ಕೆಂಬಣ್ಣವನ್ನು ಹೊರಸೂಸುತ್ತಿದ್ದುವು ಕೆಲವು. ನಿಜ ಹೇಳುವುದಾದರೆ ರೂಪಸಿಯ ತುಟಿಗೆಂಪು ಸಹ ತಾವರೆಯ ಮೃದು ವರ್ಣಕ್ಕೆ ಅದರ ದಿವ್ಯ ಕಾಂತಿಗೆ ಸರಿಸಾಟಿ ನಿಲ್ಲಲಾರದು. ಗುಲಾಬಿ ಮೂಸಲು, ಮುಡಿಯಲು ಚೆನ್ನ. ಆದರೆ ಕೆಂದಾವರೆ ನೀರಲ್ಲಿದ್ದಾಗ ನೋಡಲು ಅತಿಶಯ ಚೆನ್ನ. ನೀರಿನ ನೀಲಿಮೆ, ಎಲೆಯ ಪಚ್ಚೆ ವರ್ಣದ ಕಾಂತಿ, ರೇಕಿನ ಕೆಂಪು ; ಇವೆಲ್ಲದರ ಸಮ್ಮಿಲನ ಮನಮೋಹಕವಾದುದು. ಸಂಗಡ ಗೋಧಿ ಕಾಳಿನ ಬಣ್ಣದ ತಾವರೆಗಳೂ, ಚಿಕ್ಕ ಚಿಕ್ಕ ಬಿಳಿಯ ತಾವರೆಗಳ ಗುಂಪೂ ಸೇರಿ ಕೆಳದಿಯರೊಡನೆ ವಿಹರಿಸುವ ರಾಜ ಕುಮಾರಿಯರ ನೆನಪು ತರುತ್ತಿತ್ತು.

ಊರಿಗೆ ಹೋಗಲು ಸಣ್ಣ ಬಂಡೆಗಳನ್ನು ಹಾಸಿ ಮಾಡಿದ ಮೆಟ್ಟಲುಗಳ ಸಾಲು ; ಹತ್ತುವ ಮುನ್ನ ಎಡಕ್ಕೆ ಒಂದು ಹಳ್ಳ ಕಪ್ಪಾಗಿ ನಿಂತಿತ್ತು. ನೀರಿನ ಮೇಲ್ಪೊರೆ ಸುಕ್ಕು ಸುಕ್ಕಾಗಿ ಬದಿಯಾಗಿತ್ತು.

ಬೇಸಗೆಯಲ್ಲಿ ಅದು ಒಣಗಿಹೋದಾಗ ಮೇಲಿನ ಹೆಪ್ಪು ಒಡೆದರೆ ಕೆಳಗೆ ಬೆಳ್ಳಗೆ ರಂಗೋಲೆ ಸಿಕ್ಕುವುದೆಂದು ಹೇಳಿದರು. ನೀರು ನಿಂತಾಗ ಅಂತೂ ಅದೊಂದು ಮಲೇರಿಯದ ಬೀಡೇ ಸರಿ.

ಹಳ್ಳಿಯು ತಕ್ಕಮಟ್ಟಿಗೆ ಎತ್ತರದಲ್ಲಿದೆ. ಬ್ರಾಹ್ಮಣರ ಮನೆಗಳೂ ೨೦–೩೦ ಇವೆಯಂತೆ. ಸಂಕೇತ ಬ್ರಾಹ್ಮಣರ ಒಕ್ಕಲೇ ಪ್ರಧಾನವಾಗಿದೆ. ಹೊಯ್ಸಳರ ಗುಡಿಗಳಂತೆ ಹಳ್ಳಿಯವರ ಮನೆಗಳನ್ನು ಎತ್ತರವಾದ ಜಗತಿಮೇಲೆ ಕಟ್ಟಲಾಗಿದೆ.

ಊರಿನಲ್ಲಿ ಮೂರು ಗುಡಿಗಳಿವೆಯೆಂದು ಪರಿಚಿತರೊಬ್ಬರು ಹೇಳಿದರು. ಮೊದಲನೆಯದು ಈಶ್ವರ ದೇವಾಲಯ. ಹೊರಗಿಂದ ನೋಡಲು ಕೇವಲ ಹಳ್ಳಿಯ ಮನೆಯ ಪ್ರತಿಬಿಂಬವೇ. ಇದನ್ನು ನಾಲ್ಕೈದು ತಲೆಮಾರಿನ ಕೆಳಗೆ ಬ್ರಾಹ್ಮಣರೊಬ್ಬರು ಕಟ್ಟಿಸಿದರಂತೆ. ಆತ ಮಹಾ ವಿದ್ವಾಂಸನಂತೆ. ಉತ್ತರ ದೇಶಕ್ಕೆ ಹೋಗಿದ್ದಾಗ ಪೇಷ್ವೆ ಎರಡನೆಯ ಬಾಜೀರಾಯ ಆತನ ವಿದ್ವತ್ತಿಗೆ ಮೆಚ್ಚಿ ಆಶ್ರಯವಿತ್ತನಂತೆ. ಶ್ರೀಮಂತರಿಂದ ದೊರೆತ ಸಂಪತ್ತಿನ ಕೆಲ ಭಾಗವನ್ನು ಬ್ರಾಹ್ಮಣ ಊರಿಗೆ ಹಿಂದಿರುಗಿದ ಮೇಲೆ ಈ ಗುಡಿ ಕಟ್ಟಲು ವಿನಿಯೋಗಿಸಿದನಂತೆ. ನಾವು ಹೋದಾಗ ಗರ್ಭಗುಡಿ ಮುಚ್ಚಿತ್ತು. ಮಿಕ್ಕ ಭಾಗದಲ್ಲಿ ಏನೂ ಹೆಚ್ಚಿಗೆ ಕಂಡುಬರಲಿಲ್ಲ.

ಇನ್ನೊಂದು ಲಕ್ಷ್ಮೀನರಸಿಂಹ ದೇವಾಲಯ. ವಿಗ್ರಹವು ಹಳೆಯದಿರಬೇಕು. ಕಟ್ಟಡ ಮಾತ್ರ ಈಚಿನದು. ದೇವರ ಸೇವೆಯಾದಮೇಲೆ ನಾವು ನಮ್ಮ ಪರಿಚಿತರನ್ನು "ಇಲ್ಲಿ ಪ್ರಾಚೀನ ದೇವರ ಮಂದಿರ ಒಂದೂ ಇಲ್ಲವೆ? ಕಲ್ಲು ಕಟ್ಟಡ, ನೋಡಿ ಈ ತರದ ಒರಟು ಕಂಬದ ಬದಲು ನುಣ್ಣನೆ ಬಳಪದ ಕಂಬ ಇರುವ ಹಳೆಯಪಳೆಯ ಕಟ್ಟಡವಿದ್ದರೆ ಹೇಳಿ" ಎಂದು ಕೇಳಿದೆವು. ಅದಕ್ಕವರು "ಊರ ಹಿಂಭಾಗಕ್ಕೆ ಒಂದು ಅಂತಹ ಗುಡಿ ಇದೆ. ಆದರದು ತೀರ ಖಿಲವಾಗಿದೆ. ಸುತ್ತ ಪೊದೆ ಬೆಳೆದಿದೆ. ಅಲ್ಲಿಗೆ ಆಗಾಗ್ಗೆ ಹುಲಿ ಬರುವುದೂ ಉಂಟು. ನೋಡಿ ನಮ್ಮ. . . ರ ಯಜಮಾನರನ್ನು ೫೦ ವರ್ಷಗಳ ಹಿಂದೆ ಒಂದು ಹುಲಿ ಹೊಡೆದುಬಿಟ್ಟಿತು. ನಾವು ಆ ಕಡೆ ಹೆಚ್ಚಾಗಿ ಹೋಗುವುದಿಲ್ಲ. ನಿಮಗೆ ಬೇಕಿದ್ದರೆ . . ." ಎಂದರು.

ನಮಗೆ ಬೇಕಿದ್ದುದೊಂದೇ ಅಲ್ಲ. ಅತ್ಯಗತ್ಯವಾಗಿದೆ, ನಡೀರಿ ಅಂದೆವು. ಅನುಮಾನಿಸುತ್ತಲೇ ಆತ ಕರೆದುಕೊಂಡು ಹೋದರು. ಅನುಮಾನದ ಕಾರಣವಿಷ್ಟೆ. ದಾರಿಯಲ್ಲೆಲ್ಲಾ ಜನ ಹೇಸಿಗೆ ಮಾಡಿ ಕೆಡಿಸಿಬಿಟ್ಟಿದ್ದರು. ಇದೇನು ವಿಚಿತ್ರ. ಮೊನ್ನೆ ಮೊನ್ನೆ ಕಟ್ಟಿಸಿದ ಗುಡಿಗಳಿಗೆ ಪೂಜೆ ಪುನಸ್ಕಾರ ಸನ್ಮಾನ. ಪುರಾತನರಿಂದ ದತ್ತವಾದ ಘನವಾದ ಆಸ್ತಿ ಬಗ್ಗೆ ಉದಾಸೀನ!

ದೇವಾಲಯವನ್ನು ಎತ್ತರದ ಸ್ಥಳದಲ್ಲಿ ಕಟ್ಟಿದ್ದರು. ಎರಡು ಮೂರು ಪದರ ಬಂಡೆಯನ್ನು ನಾವು ಹತ್ತಿ ಹೋದೆವು. ನಾಲ್ಕು ದುಂಡನೆಯ ನಯವಾದ ಆ ಕಂಬಗಳನ್ನು ನೋಡಿದಾಕ್ಷಣವೇ ತಿಳಿಯಿತು – ಹೊಯ್ಸಳರ ಕೈವಾಡವದೆಂದು.

ಹಿಂದೆ ಹೇಗಿತ್ತೋ ಎಷ್ಟಿತ್ತೋ, ಈಗಂತೂ ಹಳೆಯದೆಂದರೆ ಗರ್ಭಗುಡಿಯೊಂದೇ. ಅದರ ಮುಂದಿನ ಕಟ್ಟಡ ಈಚಿನದಿರಬೇಕು. ಮೊದಲಿನ ನವರಂಗ ಕುಸಿದು ಖಿಲವಾದಮೇಲೆ ಯಾರೋ ಹಳೆಯ ಕಂಬಗಳನ್ನಿಟ್ಟು ಆಕಡೆ ಈಕಡೆ ಮೇಲೆ ತಮಗೆ ಕೋರಿದಂತೆ ಕಲ್ಲು ಚಪ್ಪಡಿಗಳನ್ನು ನೆಟ್ಟು ಹಾಸಿರಬೇಕು. ಗರ್ಭಗುಡಿ ನವರಂಗಕ್ಕಿಂತ ೧೩ ಅಡಿಯಷ್ಟು ತಗ್ಗಾಗಿತ್ತು. ಲಿಂಗ ಪ್ರಶಸ್ತವಾಗಿತ್ತು. ಪುಣ್ಯಾತ್ಮರಾರೋ ನೀರೆರೆದು ಅದರ ಮೇಲೆರಡು ಹೂವಿಟ್ಟಿದ್ದರು. ಹಿಂದಣ ಗೋಡೆಯ ಅರ್ಧ ಮಟ್ಟದಲ್ಲೊಂದು ಅಡ್ಡಪಟ್ಟಿ. ಅದರಮೇಲೆ ವಿವಿಧಾಕೃತಿಯ ನಾಗರ ಕಲ್ಲುಗಳನ್ನು ಇಡಲಾಗಿತ್ತು.

ನವರಂಗದಲ್ಲಿ – (ಆ ಮುರುಕು ಛಾವಣಿಯ ಹರುಕಲ ಗೋಡೆಯ ಕುಸಿದ ಕಟ್ಟಡಕ್ಕೆ ನವರಂಗವೆಂಬ ನಾಮಧೇಯ ವಿರೋಧಾಭಾಸ) – ಮುರಿದ ಎರಡು ಗಣೇಶ ವಿಗ್ರಹಗಳು ಮೂಲೆಯಲ್ಲಿ ಅಡಗಿದ್ದವು. ಬಸವಣ್ಣ ಮಾತ್ರ ಮುದ್ದಾಗಿತ್ತು. ಬಸವಣ್ಣನ ಬಲಭಾಗಕ್ಕೆ ಒಂದು ಕಲ್ಲು ಬಿದ್ದಿತ್ತು. ಅದರಾಕೃತಿ ನೋಡಿ ಶಾಸನದ ಕಲ್ಲಿರಬೇಕೆಂದೂಹಿಸಿ ತಡಕಿ ಮಣ್ಣೊರಸಿ ನೋಡಿದೆವು. ಎರಡಂಗುಲ ದಪ್ಪದಕ್ಷರಗಳು ಸ್ಫುಟವಾದುವು. ನಮ್ಮೊಡನೆ ಬಂದಾತ "ಇದು ಯಾವ ಲಿಪಿಯೋ ಗೊತ್ತಿಲ್ಲ. ಕನ್ನಡವೂ ಅಲ್ಲ. ದೇವ ನಾಗರಿಯೂ ಅಲ್ಲ" ಎಂದು ಹೇಳಿದರು. ನಾವು ಎರಡಡಿ ಉದ್ದ ಒಂದೂವರೆ ಅಡಿ ಅಗಲವಿದ್ದ ಆ ಕಲ್ಲನ್ನು ಹೊರಗೆ ತೆಗೆಸಿ ನೀರಿನಿಂದ ತೊಳೆದು ನೋಡಲಾಗಿ ಅಚ್ಚ ಕನ್ನಡವೇ ಆಗಿತ್ತು. ನಾವು ಈ ಶಾಸನವನ್ನು ಹಿಂದೆ ಯಾರಾದರೂ ಓದಿದ್ದರೇ ಎಂದು ಕೇಳಲಾಗ ಒಬ್ಬಾತ ಯಾರೂ ಇಲ್ಲಿಗೆ ಸುಳಿದೇ ಇಲ್ಲ ಅಂದರು. ಇನ್ನೊಬ್ಬಾತ "ಈಗ ೮–೯ ವರ್ಷಗಳ ಕೆಳಗೆ ಇಲಾಖೆಯವರು ಬಂದು ಓದಿಕೊಂಡು ಹೋದರು" ಎಂದರು. ಊರ ಮುಖಂಡರಿಗೆ ಈ ವಿಷಯ ಗೊತ್ತಿರಲಿಲ್ಲ. ಅದರಮೇಲೆ ನಾವದನ್ನು ಓದಲು ಪ್ರಯತ್ನಪಟ್ಟೆವು. ಪೂರ್ತಿ ಅರ್ಥವಾಗದಿದ್ದರೂ ಅದು ವೀರ ಬಲ್ಲಾಳನ ಕಾಲದ ಶಾಸನವೆಂಬುದು ನಿರ್ಧರವಾಯಿತು. ಅದರ ಅಚ್ಚನ್ನು ತೆಗೆದುಕೊಂಡೆವು.

ಮತ್ತೆ ಇಲಾಖೆಯವರು ಇದರ ತನಿಖೆ ನಡಸುವ ತನಕ ತುಂಟ ಹುಡುಗರ ಕಲ್ಲಿನೇಟಿಗಾಗಲಿ, ಮಿಕ್ಕಾವ ಅನಾಹುತಕ್ಕಾಗಲಿ ಗುರಿಯಾಗದಿರಲೆಂದು ಆ ಕಲ್ಲನ್ನು ಊರವರ ಸಹಾಯದಿಂದ ಲಕ್ಷ್ಮೀನರಸಿಂಹ ದೇವಾಲಯದಲ್ಲಿರಿಸಿ, ಅದರ ಮಹತ್ವವನ್ನು ಅವರಿಗೆ ತಿಳಿಸಿ, ಪಾಳು ಗುಡಿಯನ್ನು ಅನಾದರಣೆ ಮಾಡದಿರಿ ಎಂದವರನ್ನು ಪ್ರಾರ್ಥಿಸಿ, ಅವರು ಕೊಟ್ಟ ಹಾಲು ಕುಡಿದು ಮುಂದೆ ಹೊರಟೆವು.

೨ ಗಂಟೆ ಸುಮಯ. ಹೊಟ್ಟೆ ತೀರ ಹಸಿದಿತ್ತು. ಕುಡಿದ ಹಾಲಿನಿಂದದು ತೃಪ್ತಿ ಹೊಂದಲಿಲ್ಲ. ಆದರೆ ಕಾಲೇಜಿನಲ್ಲಿ ಶಾಸನಗಳ ವಿಷಯ ಕಲಿತುದನ್ನು ಇಲ್ಲಿ ಈದಿನ ಪ್ರಯೋಗಮಾಡಲು ಅವಕಾಶ ಸಿಕ್ಕಿತಲ್ಲ ಎಂಬ ಹಿಗ್ಗು ಹಸಿವೆಯನ್ನು ತಡೆವ ಶಕ್ತಿ ಕೊಟ್ಟಿತು.

ಊರಿಗೆ ಹಿಂದಿರುಗಿದಮೇಲೆ ಇಲಾಖೆಯ ವರದಿಗಳನ್ನೂ, ರೈಸ್‌ರವರ ಹಾಸನದ ಶಾಸನಗಳ ಗ್ರಂಥವನ್ನೂ ಹುಡುಕಲಾಗಿ ಹಂದನಹಾಲಿನ ಶಾಸನ ಇದುವರೆಗೆ ಪತ್ತೆಯಾಗಿರಲಲ್ಲವೆಂದು ತಿಳಿಯಿತು. ಅದರಲ್ಲಿರುವ ವಿಷಯವಿದು "ಸ್ವಸ್ತಿ ಶ್ರೀಮತು **ಹೊಯಿಸಣ ಚಕ್ರವರ್ತಿ ಬಲ್ಲಾಳ ದೇವರ್ಸರು** ಸುಖರಾಜ್ಯ ಮಾಡುತ್ತಿರ್ದ್ದಲ್ಲಿ ಕಾಳಾಯುಕ್ತ ಸಂವತ್ಸರದ ಕಾರ್ತ್ತಿಕ ಸುದ್ದ ೬ ಬೃಸ್ಪವಂದು ಹಂದಳ ಹಾಲು ಮದುರಯ್ಯನ ಮಗ ಚಿಕ್ಕ ಗುಂಮಂಣ್ಣನು ತಂಮ್ಮಣ್ಣ ಗುಂಮಂಣ್ಣನ ಹೆಸರಲಿ ಪುರವಾರ್ಗ್ಗವಾಗಿ ಸಂಭುದೇವರ ಮುಂದೆ ಅಯ್ದು ಮನೆಯ ಕೊಟ್ಟು ಅಯ್ದು ಸಲಗೆ ಗದ್ದೆಯನು ಅದಕ್ಕುಳ್ಳ ಬೆದ್ದಲನು ಕೊಟ್ಟು ಆ ಕ್ಷೇತ್ರಕ್ಕೆ ಆ ಮನೆಗೆ ಸೇಸೆ ಸಿದ್ಧಾಯ . . . ಯೀ ಧರ್ಮ್ಮವ ಕೆಡ್ಸಿದವ ನಾಯಕ ನರಕದಲ್ಲಿ ಬಿಳುವನು. ಯಿ ಲೋಕ ಮಾರ್ತ್ಯ ಲೋಕಕ್ಕೆ ದೂರ. ಅವನ ಕೊಂದವನೆ ವೀರ."

ಇದರಲ್ಲಿರುವ ಕಾಳಾಯುಕ್ತ ಸಂವತ್ಸರವು ಕ್ರಿ.ಶ. ೧೨೫೮ ಅಥವಾ ಅದರ ೬೦ರ ಆವರ್ತಗಳಿಗೆ ಅನ್ವಯಿಸುತ್ತದೆಂದು ಒಂದು ವರದಿಯಲ್ಲಿ ಓದಿದೆ. ಅಂದರೆ ವೀರ ಬಲ್ಲಾಳನು ೧೨೫೮ರಲ್ಲಿರಲಿಲ್ಲ. ರೈಸ್‌ರವರ ಪ್ರಕಾರ ಅವನಾಳಿಕೆ ಕ್ರಿ.ಶ. ೧೧೭೩ರಿಂದ ೧೨೨೦ರ ವರೆಗೆ ಅಂದರೆ ೧೨೫೮ರಲ್ಲಿ ೬೦ ಕಳೆದರೆ ೧೧೯೮ ಸಿಕ್ಕುತ್ತದೆ. ಶಾಸನವು ಬಹುಶಃ ಈ ವರ್ಷದ್ದಿರಬೇಕು. ನಮ್ಮ "ಸಂಭುದೇವರ ಗುಡಿ" ಇಮ್ಮಡಿ ಬಲ್ಲಾಳರಾಯನ ಅಥವಾ ಅವನಿಗೂ ಹಿಂದಿನ ಕಾಲದ್ದು. ಆ ದಿನದ ಅದರ ವೈಭವವೆಲ್ಲೋ. ಸಂದ ಗದ್ದೆ ಬೆದ್ದಲೆಗಳೆಲ್ಲೋ. ತಿಪ್ಪೆಗುಂಡಿಯ ಎದುರು ಹೇಸಿಗೆಯ ವಾತಾವರಣದಲ್ಲಿ, ಲಾಂಟಾನ ಪೊದೆಯ ನಡುವೆ ಕುಳಿತಿದಾನೆ ಎಂಟುನೂರು ವರ್ಷಗಳ ಹಿಂದಿನ ಶಂಭುಲಿಂಗೇಶ್ವರಸ್ವಾಮಿ.

## ಸಾದರ ಸ್ವೀಕಾರ

**ತೆನಾಲಿ ರಾಮಕೃಷ್ಣ** (ಮೂರಂಕಿನ ಐತಿಹಾಸಿಕ ನಾಟಕ): ಬರೆದವರು: ಶ್ರೀ. ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್‌ಎಲ್.ಬಿ., ಬೆಂಗಳೂರು. ಕಿರೀಟಾಕಾರದ ಅಷ್ಟಪತ್ರ ಪುಟಗಳು ೯೫ + ೪. ಬೆಲೆ ೧ ರೂ.

**ಮೋಡಗಳು:** ಏಳು ಸಣ್ಣ ಕತೆಗಳ ಸಂಗ್ರಹ. ಕತೆಗಾರರು: "ಶ್ರೀ ಸ್ವಾಮಿ" ಅವರು. ಕಿರೀಟಾಕಾರದ ಅಷ್ಟಪತ್ರ ಪುಟಗಳು ೧೫೭+೮. ಬೆಲೆ ೧ ರೂ.

ಮನೋಹರ ಗ್ರಂಥಮಾಲೆಯ ೫೭ ಮತ್ತು ೫೮ನೆಯ ಕುಸುಮಗಳು.

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧॥
ಬಿಡಿ ಪತ್ರಿಕೆ: ೬ ಕಾಸು




ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈ ಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೧೯

ಬೆಂಗಳೂರು: ಶುಕ್ರವಾರ, ಮಾರ್ಚಿ ೫, ೧೯೪೩

## ಪರಿಷತ್ತಿನ ಮುನ್ನಡೆ

೭

ಕನ್ನಡದೇಶದ ನಾಟಕ ಸಿನೀಮ ಸಂಗೀತ ಚಿತ್ರಕಲೆ ನೃತ್ಯಗಳ ಬೆಳವಣಿಗೆ ಮತ್ತು ರಕ್ಷಣೆಯಲ್ಲಿ ಕೇಂದ್ರ ಸಂಸ್ಥೆ ಕೈಗೊಳ್ಳಬೇಕಾದ ಕೆಲಸ ತಕ್ಕಷ್ಟು ಇದೆ. ಈಗ ಹತ್ತು ವರ್ಷದ ಹಿಂದೆ ಕನ್ನಡದಲ್ಲಿ ಹಲವು ನಾಟಕ ಸಂಘಗಳು ಸಾಕಾದಷ್ಟು ಉತ್ತೇಜನ ಪಡೆದು ಬಾಳುತ್ತಿದ್ದವು. ಈಗ ಅವು ಒಂದಲ್ಲ ಒಂದು ಕಾರಣದಿಂದ ಕೆಲಸ ನಿಲ್ಲಿಸಿವೆ. ಅವುಗಳ ಪ್ರತಿಯಾಗಿ ಬೇರೆ ಸಂಘಗಳು ಹುಟ್ಟಿಕೊಂಡಿಲ್ಲ. ಒಂದು ಜನದ ಜೀವನದಲ್ಲಿ ನಾಟಕದಿಂದಲೇ ಆಗಬೇಕಾದ ಸಂಸ್ಕಾರ ಒಂದಿದೆ. ಅದು ಸಿನೀಮಾ ನೋಡುವುದರಿಂದ ಆಗಲಾರದು. ಈ ಸಂಸ್ಕಾರವನ್ನು ಪಡೆಯುವುದಕ್ಕೆ ನಾವು ನಮ್ಮ ದೇಶದ ನಾಟಕ ಸಂಘಗಳಿಗೆ ಶಕ್ತಿ ಬರುವಂತೆ ಏರ್ಪಾಡು ಮಾಡಬೇಕಾಗಿದೆ. ಈಗ ಕೆಲವು ವರ್ಷದ ಹಿಂದೆ ಮೈಸೂರಿನ ಪ್ರಾಂತ ಸಮಿತಿಯ ಆಶ್ರಯದಲ್ಲಿ ಪರಿಷತ್ತಿನಲ್ಲಿ ಒಂದು ನಾಟಕ ಶಾಖೆ ಏರ್ಪಾಡಾಯಿತು. ಕನ್ನಡ ನಾಟಕದ ಪುನರುಜ್ಜೀವನಕ್ಕೆ ಕೈಕೊಳ್ಳಬೇಕಾದ ಕಾರ್ಯಕ್ರಮ ಏನೆಂದು ಈ ಶಾಖೆಯ ಕಾರ್ಯಕರ್ತರು ಪರಿಶೀಲಿಸಬೇಕಾಗಿದೆ. ನಾಟಕ ಹಿಂದೆ ಬೀಳುವುದಕ್ಕೆ ಒಂದು ಕಾರಣ ಸಿನೀಮಾ ಮುಂದಾಗಿರುವುದು. ಆದರೆ ಈಗಿನ ನಮ್ಮ ಸ್ಥಿತಿಯಲ್ಲಿ ಈ ಮುಂದಾಗಿರುವ ಸಿನೀಮಾ ಕನ್ನಡದ್ದಲ್ಲ. ಕನ್ನಡದ ಸಿನೀಮಾ ಮುಂದುವರಿಯುವ ಸೂಚನೆ ಈಗೀಗ ಕಾಣುತ್ತಿದೆ. ಈ ಭಾಗದಲ್ಲಿ ಪರಿಷತ್ತಿನ ಸದಸ್ಯರು ಯಾವ ರೀತಿ ಸಹಾಯ ಮಾಡುವುದು ಎಂದು ನಾವು ಯೋಚಿಸಬೇಕಾಗಿದೆ.

ಕರ್ನಾಟಕದ ಸಂಗೀತ ಬಹುಕಾಲ ಕನ್ನಡ ದೇಶದ ಹೊರಗಡೆ ಬೆಳೆದು ಹೆಸರಷ್ಟಕ್ಕೆ ಕರ್ನಾಟಕದ್ದಾಗಿ ಇದ್ದಿತು. ಮೈಸೂರಿನ ಅರಮನೆಯ ಆಶ್ರಯದಲ್ಲಿ ಎಷ್ಟೊ ಅಷ್ಟು ಈಚೆಗೆ ಅದು ತಲೆ ಎತ್ತಿದೆ. ಬೆಂಗಳೂರಿನಂಥ ಊರಿನಲ್ಲಿ ಸಂಗೀತ ಕಚೇರಿಯಲ್ಲಿ ಕನ್ನಡಿಗನೊಬ್ಬನು ಹಾಡುವುದು ಅಪೂರ್ವ ಸಂಗತಿ. ಹೀಗೆ ಅಪೂರ್ವವಾಗಿ ಹಾಡುವುದು ಕೂಡ ಇತ್ತೀಚಿನ ಮಾತು. ಹಾಗೆಯೇ ಸಂಗೀತದ ಕೃತಿಗಳು ಒಂದು ಸೋದರ ಭಾಷೆಯವು. ಸೋದರ ಭಾಷೆ ಬೇಡ ಎನ್ನುವ ಅವಿವೇಕ ನಮ್ಮಲ್ಲಿ ಮೊಳೆಯುವುದು ಬೇಡ. ಎಲ್ಲ ಭಾಷೆಯನ್ನೂ ಪ್ರೀತಿಯಿಂದ ನೋಡುವ ವೈಶಾಲ್ಯ ಕನ್ನಡ ಹೃದಯದ ಮುಖ್ಯ ಲಕ್ಷಣ. ಹೀಗಿದ್ದೂ ಕನ್ನಡದಲ್ಲಿ ಕೃತಿಗಳು ಆಗಬೇಕೆಂದು ಅಪೇಕ್ಷಿಸುವುದು ತಪ್ಪಲ್ಲ. ಕೃತಿಗಳ ರಚನೆಗೆ ಯಾವುದೋ ಒಂದು ಭಾಷೆ ಮಾತ್ರ ಅನುಕೂಲಿಸುತ್ತದೆ, ಉಳಿದವು ಅನುಕೂಲಿಸುವುದಿಲ್ಲ ಎನ್ನುವುದು ಸಲ್ಲದ ಮಾತು. ಸಂಗೀತಜ್ಞಾನಿಗಳಾದ ಕನ್ನಡಿಗರು ಕನ್ನಡ ಕೃತಿಗಳ ರಚನೆಯಲ್ಲಿ, ಅವುಗಳನ್ನು ವಾಡಿಕೆಗೆ ತರುವುದಕ್ಕೆ ಹಾಡುವುದರಲ್ಲಿ ಶ್ರದ್ಧೆ ವಹಿಸಬೇಕು. ಆಳಿದ ಮಹಾಸ್ವಾಮಿಗಳು ಶ್ರೀಮನ್ ನಾಲ್ವಡಿ ಕೃಷ್ಣರಾಜ ಒಡೆಯರ ಪ್ರೋತ್ಸಾಹದಿಂದ ರಚಿತವಾದ ಕನ್ನಡ ಕೃತಿ ಕೆಲವು ಆಳುವ ಮಹಾಸ್ವಾಮಿಗಳು ಶ್ರೀ ಜಯಚಾಮರಾಜ ಒಡೆಯರವರ ಅಪ್ಪಣೆಯಿಂದ ದರ್ಬಾರುಗಳಲ್ಲಿ ಶ್ರುತವಾಗಿವೆ. ಆಗ ಅವು ಚೆನ್ನಾಗಿಯೇ ಇದ್ದವು. ಅವುಗಳಂತೆ ಅನೇಕ ಕೃತಿಗಳು ರಚನೆಯಾಗುವುದು ಆವಶ್ಯಕ.

ಸಂಗೀತದ ವಿಷಯದಲ್ಲಿ ಆವಶ್ಯಕವಾಗಿ ಮಾಡಬೇಕಾಗಿರುವ ಒಂದು ಪ್ರಯತ್ನವೆಂದರೆ ಶುದ್ಧ ಕರ್ನಾಟಕದ ಗಾಯನ ಪದ್ಧತಿಯನ್ನು ಕನ್ನಡ ನಾಡಿನ ಉತ್ತರ ಭಾಗಗಳಲ್ಲಿ ನೆಲೆಗೊಳಿಸುವುದು. ಮಹಾರಾಷ್ಟ್ರದ ಸಂಬಂಧದಿಂದ ಈಗ ಇಲ್ಲೆಲ್ಲ ಔತ್ತರೇಯ ಗಾಯನ ಪದ್ಧತಿ ಬೇರೂರಿದೆ. ಆ ಪದ್ಧತಿಯನ್ನು ನಾವು ಬಿಡಬೇಕಾಗಿಲ್ಲ. ನಿಜವಾಗಿ ನೋಡಿದರೆ ಅದೂ ನಮ್ಮದೆ. ಆದರೆ ಅದಕ್ಕೆ ಮೂಲವಾದ ಕನ್ನಡದ ಸ್ವರ ಪ್ರಸ್ತಾರವನ್ನು ನಾಡಿನ ಎಲ್ಲಾ ಭಾಗದಲ್ಲೂ ನಾವು ಪ್ರಚಾರಕ್ಕೆ ತರಬೇಕು.

ಕನ್ನಡದ ಚಿತ್ರಕಲೆಯೂ ಎತ್ತರದ ಮಟ್ಟದ್ದು. ಎಷ್ಟು ಎತ್ತರದ್ದು ಎನ್ನುವುದಕ್ಕೆ ನಮ್ಮ ಶ್ರೀ. ವೆಂಕಟಪ್ಪನವರ ಹೆಸರು ಸಾಕ್ಷಿ. ಈ ಮಹನೀಯರು ಚಿತ್ರಕಲೆಯ ಉಪದೇಶಕ್ಕಾಗಿ ಒಂದು ಸಂಸ್ಥೆಯನ್ನು ಸ್ಥಾಪಿಸಿದಾರೆ. ಕನ್ನಡ ನಾಡಿನಲ್ಲಿ ಇತರ ಪ್ರಸಿದ್ಧ ಚಿತ್ರಕಾರರೂ ಇದಾರೆ. ಅನೇಕ ತರುಣರು ಕಲೆಯಲ್ಲಿ ತೊಡಗಿ ತಕ್ಕಷ್ಟು ಮುಂದುವರಿದು ಉತ್ತೇಜನ ಸಾಲದೆ, ನೀರಿಲ್ಲದ ವನದಂತೆ ಒಣಗುತ್ತಿದಾರೆ. ಹೀಗೆ ಪ್ರಸಿದ್ಧವಾದ ಮತ್ತು ಆಗಬೇಕಾಗಿರುವ ಕಲೆಯನ್ನು ಜನದ ಕಣ್ಣ ಮುಂದೆ ಇರಿಸಿ ಅದಕ್ಕೆ ಉತ್ತೇಜನ ದೊರೆಯುವಂತೆ ಮಾಡುವುದೂ ಅದರಿಂದ ಜನದ ಮನಸ್ಸು ನಯವಾಗುವಂತೆ ಮಾಡುವುದೂ ನಮ್ಮ ಕಾರ್ಯದಲ್ಲಿ ಒಂದು ಭಾಗ. ಯಾವುದೋ ಕಾಲದಲ್ಲಿ ನೃತ್ಯ ಅಭಿನಯಗಳು ವಾರವನಿತೆಯರ ಲಕ್ಷಣಗಳೆಂಬ ಅಭಿಪ್ರಾಯ ಹುಟ್ಟಿ ಗೃಹಸ್ಥ ಸ್ತ್ರೀಯರಿಗೆ ದೂಷ್ಯವೂ ದೂರವೂ ಆದವು. ಇತ್ತೀಚೆಗೆ ಇಂಥ ಭಾವನೆ ಅಸಾಧುವೆಂದು ನಮಗೆ ತಿಳಿಯುತ್ತಿದೆ. ಇವುಗಳ ಪುನರುಜ್ಜೀವನಕ್ಕೆ ಆವಶ್ಯಕವಾದ ಪ್ರಯತ್ನವನ್ನು ನಾವು ಮಾಡಬೇಕಾಗಿದೆ.

ಜನದ ಏಳಿಗೆಗೆ ಅಕ್ಷರಪ್ರಚಾರ ಬಹು ಮುಖ್ಯ ಸಾಧನ. ಶಾಲೆಗಳಲ್ಲಿಯೇ ಅಕ್ಷರ ಕಲಿಸಿ ಜನರನ್ನೆಲ್ಲ ವಿದ್ಯಾವಂತರನ್ನಾಗಿ ಮಾಡುವುದು ದುಃಸಾಧ್ಯ. ಪ್ರಾಯಶಃ ಅಸಾಧ್ಯ ಎಂದೇ ಹೇಳಬೇಕು. ತಮ್ಮ ತಮ್ಮ ಜೀವನವನ್ನು ಸಂಪಾದಿಸಿಕೊಳ್ಳುತ್ತ ಯಾವುದೋ ಕೆಲಸದಲ್ಲಿ ತೊಡಗಿರುವ ವಯಸ್ಕರನ್ನು ಕರೆದು ಅವರಿಗೆ ಓದಿನಲ್ಲಿ ರುಚಿಹುಟ್ಟುವಂತೆ ಮಾಡಿ ನಾಲ್ಕು ಅಕ್ಷರ ಕಲಿಸುವುದೇ ಜನತೆಯ ವಿದ್ಯಾವಂತಿಕೆಗೆ ರಾಜಮಾರ್ಗ. ಈ ಬಗೆಗೆ ಒಂದು ಕಾರ್ಯಕ್ರಮ ಮೈಸೂರು ದೇಶದಲ್ಲಿ ಸರ್ಕಾರದ ಸಹಾಯದಿಂದ ಈಗ ಆರಂಭವಾಗಿದೆ. ಇದರಂತೆ ಉಳಿದ ಪ್ರಾಂತಗಳಲ್ಲೂ ಆವಶ್ಯಕವಾದ ಏರ್ಪಾಡು ಆಗಬೇಕು; ಮತ್ತು ಎಲ್ಲ ಕಡೆಯಲ್ಲಿಯೂ ಪರಿಷತ್ತಿನ ಪರವಾಗಿ ಸಾಧ್ಯವಾದ ಎಲ್ಲ ನೆರವನ್ನೂ ನಾವು ಕೊಡಬೇಕು. ಮೈಸೂರಿನ ಅಕ್ಷರಪ್ರಚಾರ ಸಮಿತಿಯವರು ತಮ್ಮಲ್ಲಿ ಅಕ್ಷರ ಕಲಿತ ಜನರು ಓದಿನಲ್ಲಿ ಮುಂದರಿದರೆ ಪರಿಷತ್ತಿನ ಪರೀಕ್ಷೆಗಳಿಗೆ ಅವರನ್ನು ಸೇರಿಸಬೇಕೆಂದು ಸೂಚಿಸಿದ್ದರ ಮೇಲೆ ಆಗಬಹುದು ಎಂದು ಈಗಾಗಲೆ ನಾವು ಒಪ್ಪಿದೇವೆ. ಈ ಸೌಕರ್ಯವನ್ನು ಸಾಕಾದಷ್ಟು ಜನ ಉಪಯೋಗಿಸಿಕೊಳ್ಳಲೆಂದು ಹಾರೈಸಬೇಕಾಗಿದೆ.

— ಮಾಸ್ತಿ ವೆಂ. ಅ.

# ಕನ್ನಡ ನುಡಿ

**ಶುಕ್ರವಾರ, ಮಾರ್ಚಿ ೫, ೧೯೪೩**

## ಬೆಂಗಳೂರು ಗಾಯನ ಸಮಾಜದಲ್ಲಿ ಸಂಗೀತ ಸ್ಪರ್ಧೆಗಳು

ಈ ವರ್ಷದ ಶ್ರೀ ಪುರಂದರದಾಸರ ಮತ್ತು ಶ್ರೀ ತ್ಯಾಗರಾಜರ ದಿನಾಚರಣೆಯ ಸಂಬಂಧವಾಗಿ ಗಾಯನ ಸ್ಪರ್ಧೆಗಳು ಕಳೆದ ತಿಂಗಳು ತಾ. ೨೦ ಮತ್ತು ೨೧ನೆಯ ದಿನಗಳಲ್ಲಿ ನಡೆದುವು. ತ್ಯಾಗರಾಜರ ಒಂದು ವಿಳಂಬಕಾಲದ ಕೃತಿಯನ್ನೂ ಪುರಂದರದಾಸರ ಒಂದು ದೇವರನಾಮವನ್ನೂ ಹಾಡಬೇಕೆಂದು ವಿಧಿಸಲಾಗಿತ್ತು. ಈ ಸ್ಪರ್ಧೆಗಳಲ್ಲಿ ೩೧ ಮಂದಿ ಹೆಣ್ಣುಮಕ್ಕಳೂ ೯ ಮಂದಿ ಗಂಡುಮಕ್ಕಳೂ ಭಾಗವಹಿಸಿ ತಮ್ಮ ಸಂಗೀತಾಭ್ಯಾಸದ ಮಟ್ಟವನ್ನು ವ್ಯಕ್ತಪಡಿಸಿದರು. ಹಾಡಿಕೆಯ ಮಟ್ಟ ಆಶಾದಾಯಕವಾಗಿದ್ದಿತು. ಅವಕಾಶ ಇನ್ನೂ ಹೆಚ್ಚಾಗಿ ದೊರೆತರೆ ಇವರೆಲ್ಲ ಉತ್ತಮ ಸಂಗೀತ ಕಲಾವಿದರಾಗಬಲ್ಲರೆಂಬುದನ್ನು ಸಾರಿಹೇಳುವಂತಿದ್ದಿತು. ಏಳು ಮಂದಿ ಹೆಣ್ಣುಮಕ್ಕಳೂ ಇಬ್ಬರು ಗಂಡು ಮಕ್ಕಳೂ ಬಹು ಚೆನ್ನಾಗಿ ಹಾಡಿ ಸ್ಪರ್ಧೆಯಲ್ಲಿ ಗೆದ್ದರು.

ಈ ಸಂದರ್ಭದಲ್ಲಿ, ಗಾಯನ ಸ್ಪರ್ಧೆಯನ್ನು ಏರ್ಪಡಿಸಿ ತರುಣ ತಲೆಮಾರಿನಲ್ಲಿರುವ ಸಂಗೀತ ಪ್ರತಿಭೆಯನ್ನು ಕಂಡುಕೊಂಡು ಪ್ರೋತ್ಸಾಹ ನೀಡಿದ್ದಕ್ಕಾಗಿ ಗಾಯನ ಸಮಾಜದ ಅಧಿಕಾರಿಗಳನ್ನು ಅಭಿನಂದಿಸುತ್ತೇವೆ. ವರ್ಷವರ್ಷವೂ ಈ ಸ್ಪರ್ಧೆಗಳು ನಡೆದುಬರುವಂತೆ ವ್ಯವಸ್ಥೆ ಮಾಡಲಾಗುವುದೆಂದು ಹಾರೈಸುತ್ತೇವೆ.

ಕರ್ನಾಟಕದ ದೊಡ್ಡ ಸಂಗೀತ ಸಂಸ್ಥೆಯಾದ ಗಾಯನ ಸಮಾಜದ ಮುಂದೆ ಕರ್ನಾಟಕ ಸಂಗೀತ ಕಲೆಯನ್ನು ಕಾಪಾಡಿ ಬೆಳಸುವ ದೊಡ್ಡ ಗುರಿ ಇದೆ. ಸ್ವಂತ ಕಟ್ಟಡ ಕಟ್ಟಿಸಿಕೊಳ್ಳುವುದಕ್ಕಾಗಿ ಸಮಾಜ ನಡಸುತ್ತಿರುವ ಪ್ರಯತ್ನ ಫಲಿಸಿ, ಸಂಸ್ಥೆಯ ಗುರಿಗಳೆಲ್ಲ ಈಡೇರುವುದಕ್ಕೆ ತಕ್ಕ ಚಟುವಟಿಕೆಗಳು ಸಾರೋದ್ಧಾರವಾಗಿ ನಡೆಯಲು ಮಹಾಜನರ ಪ್ರೋತ್ಸಾಹ ಸಹಕಾರ ಒದಗಿಬರಲಿ.

## ಕಂಬನಿ

### ದಿವಂಗತ ಹಳ್ಳಿಪ್ಪನವರ ಗೋವಿಂದರಾಯರು

ಕೆಲವು ದಿವಸಗಳ ಹಿಂದೆ ಹುಬ್ಬಳ್ಳಿಯ ಸತ್ಯಬೋಧ ವಾಚನಾಲಯದಲ್ಲಿ ಶ್ರೀ. ಕುಲಕರ್ಣಿ ವಸಂತರಾಯರ ಅಧ್ಯಕ್ಷತೆಯಲ್ಲಿ ಕಲಘಟಗಿಯ ಶ್ರೀ. ಹಳ್ಳಪ್ಪನವರ ಗೋವಿಂದರಾಯರು ನಿಧನರಾದ ಬಗ್ಗೆ ಸಂತಾಪ ಸೂಚಿಸಲು ಸಭೆ ಸೇರಿದ್ದಿತು. ಶ್ರೀಯುತರಾದ ನರೇಗಲ್ಲ ಪ್ರಹ್ಲಾದರಾಯರು, ಪಾಟೀಲ ಅನಂತರಾಯರು ಹಾಗೂ ಅಧ್ಯಕ್ಷರು ಭಾಷಣ ಮಾಡಿದರು. ಅನಂತರ ೨ ನಿಮಿಷಗಳ ಮೌನ ಪ್ರಾರ್ಥನೆಯೊಡನೆ ಸಂತಾಪ ಸೂಚಕ ನಿರ್ಣಯ ಸ್ವೀಕರಿಸಲ್ಪಟ್ಟಿತು.

ಕಲಘಟಗಿಯ ಶ್ರೀ. ಹಳ್ಳಿಪ್ಪನವರ ಗೋವಿಂದರಾಯರು ಶಾಂತ ಸ್ವಭಾವದ ದೇಶಸೇವಕರು. 'ಜಲಧರ', 'ಗದಾಧರ' ಎಂಬ ಸಂಕೇತ ನಾಮಗಳಿಂದ ಸಾಹಿತಿಗಳಿಗೆ ಪರಿಚಿತರು; 'ಕುರಿಹಿಂಡು' 'ನಾಗಮಹಾಶಯರ ಕಥೆ' ಎಂಬ ಗ್ರಂಥಗಳ ಲೇಖಕರು; ಸಂಯುಕ್ತ ಕರ್ನಾಟಕ, ಜಯಕರ್ನಾಟಕಾದಿ ಪತ್ರಿಕೆಗಳಿಗೆ ಬರೆಹಗಾರರಾಗಿದ್ದರು. 'ದೇವದಾಸ ಕಾದಂಬರಿ'ಯಲ್ಲಿ ಶರಚ್ಚಂದ್ರರ ಚರಿತ್ರೆ, ಜಯಕರ್ನಾಟಕದಲ್ಲಿ ಭಾರತೀಯ ಕ್ರಾಂತಿಕಾರಕ ದೇಶಭಕ್ತರ ಚರಿತ್ರೆಗಳು ಇವನ್ನು ಬರೆದವರು. ಚರಿತ್ರಕಾರರು. ಬಾಲ್ಯದಲ್ಲಿಯೇ ಮಹಾತ್ಮಾ ಗಾಂಧಿಯವರ ಶಿಷ್ಯರಾಗಿ, ಧಾರವಾಡದ ರಾಷ್ಟ್ರೀಯ ಶಾಲೆಯ ವಿದ್ಯಾರ್ಥಿಗಳಾಗಿ, ತಾರುಣ್ಯದಲ್ಲಿ ಡಾ. ಹರ್ಡೀಕರರ ಸೇವಾದಲದ ಸ್ವಯಂಸೇವಕರಾಗಿ, ಕೆಲಕಾಲ ರವೀಂದ್ರ ಗುರುದೇವರ ಶಾಂತಿನಿಕೇತನ ಆಶ್ರಮವಾಸಿಗಳಾಗಿ ಇದ್ದವರು. ಬಂಗಾಲಿ, ಹಿಂದಿ, ಮರಾಠಿ ಭಾಷೆಗಳಲ್ಲಿ ಪ್ರವೀಣರಾಗಿದ್ದರು. ಆ ಭಾಷೆಗಳ ಕೆಲವು ಗ್ರಂಥಗಳನ್ನು ಕನ್ನಡಿಸಿದ್ದಾರೆ.

ದಿವಂಗತರ ಆತ್ಮಕ್ಕೆ ಭಗವಂತನು ಶಾಂತಿಯನ್ನು ಕರುಣಿಸಲಿ.

## ನಮ್ಮ ಬಾಪೂ

ಮೂಳೆಚಕ್ಕಳ ಒಂದು ಹಿಡಿ, ಅಷ್ಟೆ; ಅದಕೆ ಸುರಿ
ಮೂರೊ ನಾಲ್ಕೋ ಚಮಚ ರಕ್ತ ಮಾಂಸ; ಜೊತೆಗಿರಿಸು:
ನೆರೆಬಂದ ಕಡಲಂಥ ಪ್ರೇಮ ತುಂಬಿದ ಹೃದಯ,
ಪೂರ ಪಾಪವ ಬಿಟ್ಟ ಕಡಲಿನಾಳದ ಮನಸು;
ಹಚ್ಚು: ಮೊರಕಿವಿ ಎರಡ, ಎರಡು ಪಿಳಿಪಿಳಿ ಕಣ್ಣ;
ಹಾಲುಹಸುಳೆಯ ಮಂದಹಾಸವನು ಲೇಪಿಸದಕೆ;
ಒಳಗಿರಿಸು: ಜೇನ ಮೀರಿದ ಸವಿಯ ನುಡಿಸುತ್ತ
ಹಿಮವಂತದಗ್ರಕೂ ಮೇಲೆದ್ದ ಆತ್ಮವೊಂದ;
ಹೂರಣವೊ? ಸೋಯಬೀನ್ಸ್, ಖರ್ಜೂರ, ಮೇಕೆಹಾಲು!
ಇನ್ನು, ಅಂಚಿನವರೆಗು ದುಃಖಿಗಳ ಕಣ್ಣೀರು ತುಂಬಿ
ಪಕ್ವಮಾಡೀ ಇದನು ಜೆಯಿಲಿನೊಳಗೊಂದಷ್ಟು ವರುಷ;
ಹೊರಗೆ ತೆಗೆ, ಪರಯ ಪರಿವಾರದಿಂ ಗಮಗಮಿಸಗೊಳಿಸು;
ಚಿಂದಿಯಲಿ ಸುತ್ತಿ, ಸೆಳೆಬೊಂಬಿನಾಲಂಬನವನಿತ್ತು
ನೀಡು ತಾ! ಅವನೆ ಕಾಣ್: ಲೋಕತಾರಕ: **ನಮ್ಮ ಬಾಪೂ!!!**

ಶ್ರೀ. ಟಿ. ಪಿ. ಕೈಲಾಸಂ ಅವರ ಮೂಲದಿಂದ
ಅನುವಾದಕ: ರಾಜರತ್ನಂ

## ದೇವರ ಸಾಕ್ಷಿ: ಗಾಂಧೀಜಿ*

('ಶ್ರೀ ಗಾಂಧೀ ಜ್ಞಾನಪರಿಚಯ ಮಾಲೆ'ಯ ೧ನೆಯ ಕುಸುಮ)

ಕಳೆದ ತಿಂಗಳು ಹತ್ತನೆಯ ತಾರೀಖಿನಿಂದ ಮೊನ್ನೆಯವರೆಗೆ ಇಪ್ಪತ್ತೊಂದು ದಿನಗಳ ಮಹೋಪವಾಸವನ್ನು ಕೈಗೊಂಡು ಮುಗಿಸಿರುವ ಗಾಂಧೀಜೀಯವರ ಬಗ್ಗೆ ಇಲ್ಲಿ ಹೇಳಬೇಕಾದುದಾದರೂ ಇಷ್ಟೆ. ಅವರು ನಿರಶನ ವ್ರತವನ್ನು ಅವಲಂಬಿಸಿದರೆಂದೊಡನೆಯೆ ಇಡಿಯ ಭಾರತದೇಶ ಚಕಿತವಾಯಿತು. ಹಿರಿಯ ವಯಸ್ಸು, ಮೂಳೆಚಕ್ಕಳದ ಪಂಜರ ಮುಂತಾದುವುಗಳಿಂದ ಒಂದೆಡೆ ಜನದ ಮನಸ್ಸಿನಲ್ಲಿ ಭೀತಿ. ದಿನದಿನದ ವೈದ್ಯರ ವರದಿಯನ್ನು ಕೇಳುವ ಕಾತರ. ದೆಹಲಿಯಲ್ಲಿ ಭಾರತದ ಎಲ್ಲ ಕಡೆಗಳಿಂದಲೂ ಜನನಾಯಕರು ನೆರೆದು ಗಾಂಧೀಜಿಯವರನ್ನು ಬಿಡುಗಡೆ ಮಾಡಿರೆಂದು ಭಾರತ ಸರಕಾರವನ್ನು ಅಂಗಲಾಚಿ ಬೇಡಿದ ಪ್ರಸಂಗ. ದೇಶದ ಮೂಲೆ ಮೂಲೆಗಳಿಂದಲೂ ಹೊರಟ ತಂತಿಗಳ ಪ್ರವಾಹ, ಇಲ್ಲಲ್ಲದೆ ಇತರ ಕಡೆಗಳಲ್ಲಿಯೂ ಭಾರತದ ಮಿತ್ರರ, ಎಲ್ಲ ಜನರ ಮನಸ್ಸಿನ ಕಳವಳ— ಹೀಗೆಯೇ ಕಳೆಯಿತು ಮೂರು ವಾರ. ಇದೆಲ್ಲದರ ಮಧ್ಯೆ, ಅತಿ ವಿಷಮಸ್ಥಿತಿಯಲ್ಲಿಯೂ, ವೈದ್ಯರೆಲ್ಲರೂ ತಮ್ಮ ಸಾಹಸವೆಲ್ಲ ಮೀರಿತೆಂದಾಗಲೂ, "ನನಗೆ ಜೀವಿಸಬೇಕೆನಿಸುತ್ತಿದೆ, ನಾನು ಜೀವಿಸಿಯೇ ಜೀವಿಸುವೆ"ನೆಂದು ಹೇಳಿ ಸತ್ಯಪ್ರತಿಜ್ಞರಾಗಿ ಆ ಮಾತನ್ನು ನಡಸಿಕೊಟ್ಟು ನಮಗಾಗಿ, **ಮಾನವಕೋಟಿಗಾಗಿ ಅಭಯವನ್ನು ಬೀರಿದ ಗಾಂಧೀಜಿ**ಯವರು ನಮ್ಮೊಡನೆ ಚಿರಕಾಲ ಇರುವಂತೆ ಭಗವಂತನು ನಮಗೆ ಕೃಪೆಮಾಡಲಿ.

ವಿಜ್ಞಾನ ಬೆಳೆದಂತೆ, ಪಾಶ್ಚಾತ್ಯ ಸಂಸ್ಕೃತಿಯ ಸಂಪರ್ಕ ಅಧಿಕವಾದಂತೆ, ನಮ್ಮೀ ಭಾರತದ ಜನತೆಯಲ್ಲಿ ಬಗೆ ಬಗೆಯ ಭಾವಗಳು ಮೂಡಿ, ಮನೆಮಾಡಿ ಜನತೆಯ ಮನಸ್ಸನ್ನು ವಿಧವಿಧವಾಗಿ ಮಾರ್ಪಡಿಸಿ, ಹಲವು ಸಲ ಹುರುಳಿಲ್ಲದ ನಂಬಿಕೆಗಳನ್ನಲ್ಲಾಡಿಸಿ ಕಿತ್ತೊಗೆಯಲು ಅನುವಾಗುತ್ತಿವೆ. ಈ ಪ್ರಯತ್ನದಲ್ಲಿ ಅತಿ ಪ್ರಾಚೀನವೂ ಅತಿ ನವೀನವೂ ಆದ ಭಾವನೆಯೊಂದರ

* ಸಂಗ್ರಾಹಕರು: ಶ್ರೀ. ಜಿ. ಪಿ. ರಾಜರತ್ನಂ, ಶಾಕ್ಯಸಾಹಿತ್ಯಮಂಟಪ, ಪ್ರಕಾಶಕರು: ಸತ್ಯಶೋಧನ ಪ್ರಕಟನ ಮಂದಿರ, ಬೆಂಗಳೂರು. ಪುಟಗಳು ೨೪. ಬೆಲೆ ಮೂರಾಣೆ.

ಮೇಲೆ ಸಹ ಬೆಳಕು ಹೆಚ್ಚು ಹೆಚ್ಚಾಗಿ ಬೀಳಲಾರಂಭಿಸಿದೆ. ಆ ಭಾವನೆಯೆಂದರೆ, ದೇವರಲ್ಲಿ ನಂಬಿಕೆ. ಮನುಷ್ಯನು ಯೋಚನೆ ಮಾಡಲಾರಂಭಿಸಿದಂದಿನಿಂದ ಇಂದಿನವರೆಗೆ 'ದೇವರು' ಎಂಬ ಒಂದು ತತ್ವದ ಭಾವನೆ ಕಾಣುತ್ತದೆ. ಇದರೊಡನೆಯೇ 'ದೇವರು ಇಲ್ಲ' ಎಂಬ ವಾದವೂ ಅಂದಿನಿಂದ ಇಂದಿಗೂ ಕೇಳ ಬರುತ್ತಿದೆ. ವಿಜ್ಞಾನದಲ್ಲಿ ಅತಿ ಮುಂದೆ ಹೋಗಿರುವ ಪಾಶ್ಚಾತ್ಯ ರಾಷ್ಟ್ರಗಳು ದೇವರಲ್ಲಿ ನಂಬಿಕೆಯನ್ನು ಇನ್ನೂ ಇಟ್ಟೇ ಇವೆ ಯಾದರೂ, ಹಲವು ವೇಳೆ ಸಾಮಾಜಿಕ ಜೀವನದಲ್ಲಿಯಾಗಲಿ ರಾಜಕೀಯದಲ್ಲಿಯಾಗಲಿ ಆರ್ಥಿಕಸ್ಥಿತಿ ರೀತಿಗಳಲ್ಲಾಗಲೀ ಆ ಭಾವನೆಯ ಪರಿಣಾಮ ಕೊಂಚವಾದರೂ ಕಾಣಬಂದಿಲ್ಲ. ಸಮಾಜ ವನ್ನಾಗಲಿ ರಾಜಕೀಯವನ್ನಾಗಲಿ ಮತದ, ಧರ್ಮದ, ದೇವರ ಸಂಗದಿಂದ ಆದಷ್ಟು ಬೇರೆಯಾಗಿರಿಸಬೇಕಂಬ ಪ್ರಯತ್ನ ಹಲವು ಬಾರಿ ನಡೆದಂತೆ ಕಾಣುತ್ತದೆ. ಆದರೆ, ಅಡಿಗಡಿಗೆ ಅಲ್ಲಿಯೂ ಸಹ ದೇವರ ಕೃಪೆಗೂ ಅನುಗ್ರಹಕ್ಕೂ ಮೊರೆಯಿಡುವುದೂ, ಆತನ ಅನುಗ್ರಹಕ್ಕಾಗಿ ಆತನನ್ನು ವಂದಿಸುತ್ತಿರುವುದೂ ಇನ್ನೂ ನಡೆದೇ ಇದೆ. ದೇವರು ಇದ್ದಾನೆಯೇ ಅಥವಾ ಇಲ್ಲವೇ ಎಂಬುದನ್ನು ವಿವೇಚಿಸುವುದು ಪ್ರಕೃತವಲ್ಲ. ದೇವರು ಇದ್ದಾನೆಂಬ ನಂಬಿಕೆ ಬೇಕು, ಆತನಲ್ಲಿ ಭಕ್ತಿಬೇಕು, ಆತನ ಅನಂತ ಸ್ವರೂಪದ ಒಂದು ಕಿರುನೋಟವೊಂದು ಸಾಕು. ಆತನ ಸಹಾಯವಿಲ್ಲದೆ ಯಾವ ಕೆಲಸವೂ ನಡೆಯದೆಂಬ ವಿಶ್ವಾಸ ಅಗತ್ಯ ಎಂದು ಮುಂತಾಗಿ, ಕತ್ತಲಲ್ಲಿ ದಾರಿ ಕಾಣದೆ ತೊಳಲಿ ಬಳಲುತ್ತಿದ್ದ ಜನರಿಗೆ ದೀವಿಗೆ ಯಂತೆ ದಾರಿ ತೋರಿದ ಧರ್ಮದೇಶಿಕರ ವಚನ ಇದು ಬಡತನ, ಅಜ್ಞಾನ, ಅಸ್ವಾತಂತ್ರ್ಯಗಳಿಂದ ಕಣ್ಣುಮುಚ್ಚಿ ಹೋದ ಭಾರ ತೀಯರನ್ನೂ ಅವರೊಡನೆಯೇ ಮಾನವಕುಲವೆಲ್ಲವನ್ನೂ ಎಚ್ಚ ರಿಸಿ ದಾರಿತೋರಲು ಅವತರಿಸಿದ ಮಹಾತ್ಮಾ ಗಾಂಧಿಯವರ ಬಾಯಲ್ಲಿ ಬರುತ್ತಿದೆ. ಗಾಂಧೀಜಿಯವರನ್ನು ರಾಜಕೀಯದಲ್ಲಿ ಕೆಲಸ ಮಾಡುತ್ತಿರುವವರೆಂದು ಭಾವಿಸುವುದು, ಅವರ ಸ್ವರೂಪ ವನ್ನು ಒಂದೇ ಒಂದು ಅಂಶದಲ್ಲಿ ತಿಳಿದಂತೆ; ಆ ಒಂದಂಶ ದಲ್ಲಿಯೂ ಅವರ ಕೆಲಸಗಳ ಹಿನ್ನೆಲೆಯಾಗಿ ನಿಂತಿರುವ, ತಳಹದಿಯಾಗಿರುವ ಧರ್ಮವನ್ನರಿಯದಿದ್ದರೆ, ಅವರು ಮಾಡುವ ಕೆಲಸಗಳ ಅರ್ಥವಾಗಲಿ ತರ್ಕವಾಗಲಿ ತಿಳಿವಿಗೆ ನಿಲುಕದಿರ ಬಹುದು. ಆದುದರಿಂದಲೇ ಮಹಾತ್ಮಜಿಯವರ ಮಾತಿನಲ್ಲೇ ಹೇಳಬೇಕಾದರೆ, ರಾಜಕೀಯ ಧರ್ಮದಿಂದ ಹೊರತಲ್ಲ, ಅದರಲ್ಲೆ ಅಂತರ್ಗತವಾದುದು. ಧರ್ಮದ ವ್ಯಾಪ್ತಿ ವಿಶ್ವದ ವ್ಯಾಪ್ತಿಯನ್ನೂ ಮೀರಿದ್ದು; ಧರ್ಮ ವ್ಯಾಪಕ, ಇನ್ನೆಲ್ಲ ವ್ಯಾಪ್ತ.

ದೇವರನ್ನು ಭಾವಿಸಿರುವುದು ಬಹುತೆರನಾಗಿ; ಬೇರೆ ಬೇರೆ ಜನರು ತಮ್ಮ ಸಂಸ್ಕೃತಿ, ಸನ್ನಿವೇಶ, ಇನ್ನಿತರ ಸಾಮಗ್ರಿಗಳಿಗೆ ಅನುಸಾರವಾಗಿ ದೇವರನ್ನು ತಮತಮಗೆ ಬೇಕಾದಂತೆ ಭಾವಿಸಿ, ಭಜಿಸಿ, ಹಾಡಿ, ಹೊಗಳಿ ಧನ್ಯರಾದೆವು ಎಂದೆಂದುಕೊಂಡಿದ್ದಾರೆ, ಈ ಎಲ್ಲ ಕಲ್ಪನೆಗಳಿಗೆ ಆಧಾರವಾದ ಒಂದು ಭಾವನೆ **'ಸತ್'** (ಇರುವಿಕೆ) ಎಂಬುದು. ಆದುದರಿಂದ 'ದೇವರು ಸತ್'–'ಇರು ವಿಕೆ' ದೇವರು. ಹಾಗೆಯೇ **ಸತ್ಯ.** ಈ ಎಲ್ಲ ಕಲ್ಪನೆಗಳಿಗೆ ಆಧಾರ ವಾದ ಇನ್ನೊಂದು ಭಾವನೆ ಎಂದರೆ ದೇವರು ತಿಳಿವು – **'ಚಿತ್'**. ಹೀಗೆಯೇ ಎಲ್ಲ ಕಲ್ಪನೆಗಳಲ್ಲಿಯೂ ದೇವರೂ **ಆನಂದವೂ** ಒಂದೇ ಎಂಬುದನ್ನೂ ಕಾಣಬಹುದು. ಉಪನಿಷತ್ತುಗಳ ಬ್ರಹ್ಮ, ದಿನ ದಿನವೂ ಪೂಜೆ ಪುನಸ್ಕಾರಗಳನ್ನು ಕೈಗೊಳ್ಳುವ ಹರಿಹರರು, ಮಹಮದೀಯರು ಹೇಳುವ 'ಅಲ್ಲಾ', ಕ್ರಿಸ್ತರು ಹೊಗಳುವ 'God, Father in Heaven', ಎಲ್ಲ ಒಂದೇ ಎಂಬ ತಿಳಿವೂ ಸಹ, ಈ ವಿಧ ವಿಧವಾದ ಕಲ್ಪನೆಗಳಿಗಾಧಾರವಾಗಿರುವ ಭಾವನೆಗಳನ್ನು ಅರ್ಥಮಾಡಿಕೊಂಡ ಯಾವನಿಗಾದರೂ ಒಮ್ಮೆಯೇ ತಿಳಿದುಬರು ತ್ತದೆ. ಈ ದೊಡ್ಡ ತತ್ವದ ಉಪದೇಶ ಶ್ರೀ ರಾಮಕೃಷ್ಣರಿಂದ ಸಾಕ್ಷಾತ್ತಾಗಿ ಪ್ರಯೋಗತಃ ಪ್ರದರ್ಶಿತವಾಗಿದೆ; ಶ್ರೀ ವಿವೇಕಾ ನಂದರ ದಿವ್ಯವಾಣಿಯಲ್ಲಿ ಕೇಳಬರುತ್ತಿದೆ. ಇದೇ ಮಾತನ್ನೆ ಇಂದು ಮಹಾತ್ಮಾ ಗಾಂಧಿಯವರೂ ತಮ್ಮದೇ ರೀತಿಯಲ್ಲಿ ಮೇಲಿಂದ ಮೇಲೆ ಹೇಳಿ ಎಚ್ಚರಿಕೆ ಕೊಡುತ್ತಿದ್ದಾರೆ.

ದೇವರು ಧರ್ಮ ಬೇರೆಬೇರೆಯಲ್ಲ; ನಿಯಾಮಕನೂ ನಿಯಮವೂ ಒಂದೇ ಎಂಬ ಆರ್ಷೇಯವಾದ ತತ್ತ್ವವನ್ನು ಇನ್ನೊಮ್ಮೆ ಗಾಂಧೀಜೀ ಒತ್ತಿ ಹೇಳಿದ್ದಾರೆ. ನಿಯಮದ–ನಿಯಾಮಕನ–ಬಗ್ಗೆ ಪ್ರತಿಯೊಬ್ಬನ ಕರ್ತವ್ಯವೇನೆಂಬುದನ್ನು ಬಹು ಸ್ಪಷ್ಟವೂ, ಮನನಾಟುವಂತಹದೂ ಆದ ರೀತಿಯಲ್ಲಿ ಗಾಂಧೀಜಿ ಹೇಳಿರುವಂತೆ ಬೇರಾರೂ ಹೇಳಿದಂತೆ ಕಾಣದು. ದೇವರ ಹಿರಿಮೆ ಯನ್ನು ನಂಬಿ, ದೇವರಲ್ಲಿ ಅನನ್ಯಭಕ್ತಿಯಿಟ್ಟು, ದೇವರು ನಿಯಮಿಸಿದ ಕಾರ್ಯಗಳನ್ನು ಶ್ರದ್ಧೆಯಿಂದ ಮಾಡಿ ಜನ್ಮಸಾರ್ಥಕ್ಯ ಮಾಡಿಕೊಳ್ಳ ಬೇಕೆಂಬವನಿಗೆ ಇರುವ ಅನೇಕ ಹಾದಿಗಳೊಡನೆ ಗಾಂಧೀಜಿ ಯವರದೂ ಒಂದು. ಹಳೆಯ ಹಾದಿಯೇ, ಹೊಸ ಮಾರ್ಗದರ್ಶಿ; ಅಂತೆಯೇ ಹೊಸ ರೀತಿ, ಹೊಸ ಸಂತೋಷ.

ಗೀತೆಯಲ್ಲಿ ಉಪದಿಷ್ಟವಾದ ಈ ತತ್ವವನ್ನು ಜೀವನದಲ್ಲಿ ಅನುಸಂಧಾನ ಮಾಡಿ, ಹಾಗೆಯೇ ಇತರರಿಂದಲೂ ಅನುಸಂಧಾನ ಮಾಡಿಸಬೇಕೆಂದು ಪ್ರಯತ್ನಮಾಡಿ ಬಹುಮಟ್ಟಿಗೆ ಜಯಶೀಲರು ಗಾಂಧೀಜಿ. ಆದುದರಿಂದ ಈ 'ಜ್ಞಾನ'ಕ್ಕೆ ಒಂದು ಸ್ಥಾನವೂ ಆದರವೂ ಆಚರಣೆಯೂ ದೊರಕಬೇಕು. ವಿಮರ್ಶೆಗಿರುವ ಈ ಪುಸ್ತಕದ ಮೇಲುಗಡೆ 'ಶ್ರೀ ಗಾಂಧೀ ಜ್ಞಾನ ಪರಿಚಯ—೧' ಎಂಬುದು ಕಾಣುವುದರಿಂದ, ಈ 'ಗಾಂಧೀಜ್ಞಾನ'ದ 'ಪರಿಚಯ ಗಳು' ಅನೇಕ ಬರಲಿವೆಯೆಂಬುದು ಸಿದ್ಧ. 'ಗಾಂಧೀಜ್ಞಾನ'ದ ತಿಳಿವಳಿಕೆಯ ಅಗತ್ಯದ ಬಗ್ಗೆ ಹೆಚ್ಚೇನೂ ಪ್ರಸ್ತಾಪಮಾಡ ಬೇಕಾಗಿಲ್ಲವಾದರೂ ಆ ತಿಳಿವು ಆಬಾಲವೃದ್ಧರೆಲ್ಲರಿಗೂ ಇರಲೇ ಬೇಕಾದುದು ಎಂದು ಮಾತ್ರ ಹೇಳಬೇಕಾಗಿದೆ.

ಇಡಿಯ ಪುಸ್ತಕದಲ್ಲಿ ಕಾಣುವುದು ಇಪ್ಪತ್ತೊಂದು ದಿನಗಳಿಗೆ ಗಾಂಧೀಜಿಯವರ ಇಪ್ಪತ್ತೊಂದು ಮಾತುಗಳು – ದೇವರು, ಪ್ರಾರ್ಥನೆ ಮುಂತಾದ ಧಾರ್ಮಿಕ ವಿಷಯಗಳನ್ನು ಕುರಿತವು. ಗಾಂಧೀಜಿಯವರ ಮಾತುಗಳೇ ಮೃದುಮಧುರ. ಅವುಗಳನ್ನು ಶ್ರೀ. ರಾಜರತ್ನಂರವರು ಸಂಗ್ರಹಿಸಿ ಕನ್ನಡಿಸಿ ಕೊಟ್ಟಿದ್ದಾರೆ. ಇಂತಹ ಕ್ಲಿಷ್ಟಸಮಯದಲ್ಲೂ ಸಹ ಪುಸ್ತಕವನ್ನು ಬರೆದು ಮತ್ತು ಮುದ್ರಿಸಿ ಉಪಕಾರ ಮಾಡಿಕೊಟ್ಟ ಶ್ರೀ. ರಾಜರತ್ನಂ ಅವರಿಗೂ, ಬಿ. ಬಿ. ಡಿ. ಮುದ್ರಣಾಲಯದವರಿಗೂ ಧನ್ಯವಾದಗಳು ಸಲ್ಲುತ್ತವೆ.

—ಕೃ.

## ಶ್ರೀ ವೆಂಕಣ್ಣಯ್ಯ ಸ್ಮಾರಕ ಕನ್ನಡ ಚರ್ಚೆ

"ಭಾಷೇತರ ವಿಚಾರಗಳನ್ನು ಕನ್ನಡದಲ್ಲಿ ಬೋಧಿಸುವ ವಿದ್ಯಾ ಭ್ಯಾಸವೇ ಕನ್ನಡಿಗರ ಉನ್ನತಿಗೆ ಉತ್ತಮ ಸಾಧನ." ಎಂಬ ವಿಷಯದ ಮೇಲೆ ಕಳೆದ ತಿಂಗಳು ೨೨ನೆಯ ತಾರೀಖು ಸಂಜೆ ದಿವಂಗತ ಪ್ರೊ. ಟಿ. ಎಸ್. ವೆಂಕಣ್ಣಯ್ಯ ಸ್ಮಾರಕ ಅಂತರ ವಿಶ್ವವಿದ್ಯಾನಿಲಯ ಕನ್ನಡ ಚರ್ಚಾಸ್ಪರ್ಧೆ ಸರ್ ಪುಟ್ಟಣ್ಣಚೆಟ್ಟರ ಪುರಭವನದಲ್ಲಿ ನಡೆಯಿತು. ೯ ಸಂಸ್ಥೆಗಳ ಪ್ರತಿನಿಧಿಗಳು ಭಾಗವಹಿಸಿದ್ದರು. ಶ್ರೀ. ಗಳಾದ ಎಸ್. ಜಿ. ಶಾಸ್ತ್ರಿ, ಎಸ್. ಕೃಷ್ಣಶರ್ಮ, ರಾಜಸೇವಾಸಕ್ತ ಶ್ರೀ. ಬಿ. ವೆಂಕಟನಾರಾಯಣಪ್ಪನವರು ಪರೀಕ್ಷಕರಾಗಿದ್ದರು. ಶ್ರೀ. ಹೆಚ್. ಜಿ. ವಿಜಯರಾಘವರೆಡ್ಡಿಯವರು ಅಧ್ಯಕ್ಷತೆ ವಹಿಸಿದ್ದರು.

ಸೆಂಟ್ರಲ್ ಕಾಲೇಜಿಗೆ ಟ್ರೋಫಿ ದೊರೆಯಿತು. ಮೊದಲನೆಯ ಬಹುಮಾನ ಶ್ರೀ. ಎಲ್. ಎಸ್. ಶೇಷಗಿರಿರಾವ್, ಎರಡನೆಯ ಬಹು ಮಾನ ಶ್ರೀ. ಸಿ. ಕೆ. ಸ್ವಾಮಿನಾಥನ್, ಮೂರನೆಯ ಬಹುಮಾನ ಶ್ರೀ. ಜಿ.ಎ. ನರಸಿಂಹಮೂರ್ತಿ ಇವರುಗಳಿಗೆ ದೊರೆಯಿತು. ರಾಜಸೇವಾಸಕ್ತ ಶ್ರೀ. ಬಿ. ವೆಂಕಟನಾರಾಯಣಪ್ಪನವರು ಬಹುಮಾನ ವಿನಿಯೋಗ ಮಾಡಿದರು.

## ಪರಿಷತ್ತಿನ ಸುದ್ದಿ

ಕಾರ್ಯಸಮಿತಿ ಅನುಮೋದಿಸಿರುವ ಆಜೀವ ಸದಸ್ಯತ್ವಕ್ಕೆ ಸಂಬಂಧಿಸಿದ ಈ ನಿರ್ಣಯವನ್ನು ಮತ್ತೆ ಇಲ್ಲಿ ಪ್ರಕಟಿಸಿದೆ.

"ನಿಯಮಗಳ ಮೇರೆಗೆ ಆಜೀವ ಸದಸ್ಯತ್ವದ ರುಸುಂ ರೂ. ೫೦. ದುಡಿಯತಕ್ಕ ಬಡ್ಡಿಯಲ್ಲಿ ಆಜೀವ ಸದಸ್ಯರಿಗೆ ಕನ್ನಡ ನುಡಿ, ಪರಿಷತ್ಪತ್ರಿಕೆ ಮೊದಲಾದುವನ್ನು ಒದಗಿಸಲು ಕಷ್ಟವಾಗಿರುವುದರಿಂದ ಈ ವರ್ಗದ ಚಂದಾಹಣ ಕನಿಷ್ಠಪಕ್ಷ ರೂ. ೧೦೦ ಇರಬೇಕೆಂದು ಕಾರ್ಯಸಮಿತಿ ಅಭಿಪ್ರಾಯಪಡುತ್ತದೆ; ಮತ್ತು ಈ ಸಲಹೆಯನ್ನು ಮುಂದಿನ ಸದಸ್ಯ ಸಭೆಯು ಒಪ್ಪುವವರೆಗೆ, ಅದರ ಒಪ್ಪಿಗೆಯ ನಿರೀಕ್ಷಣೆಯ ಮೇಲೆ ಈ ೫೦ ರೂಪಾಯಿನ ಸದಸ್ಯತ್ವವನ್ನು ತಡೆದಿಟ್ಟಿರತಕ್ಕದ್ದು."

### ಪರಿಷತ್ತಿನ ಸದಸ್ಯರ ಬೆಳವಣಿಗೆ

(ತಾ. ೨೫–೨–೪೩ರಿಂದ ೩-೩-೪೩ರ ವರೆಗೆ)

**ಸಹಾಯಕ ಸದಸ್ಯರು (೧೦೦ ರೂ.)** : ೧. ಶ್ರೀ.ಗಳಾದ ಡಾ. ಬಿ.ಟಿ. ನಾರಾಯಣನ್, ಬಿ.ಎ ,ಪಿ.ಎಚ್.ಡಿ.,ಡಿ.ಐ.ಸಿ. ಅವರು, ವಿಶ್ವೇಶ್ವರಪುರ, ಬೆಂಗಳೂರು. ೨. ಡಾ. ಬಿ. ಎನ್. ಬಾಲಕೃಷ್ಣರಾವ್ ಅವರು, ಬಿ.ಎಸ್‌ಸಿ., ಎಂ.ಬಿ., ಬಿ.ಎಸ್., ಡಿಸ್ಟ್ರಿಕ್ ಮೆಡಿಕಲ್ ಆಫೀಸರು, ಸಿವಿಲ್ ಹಾಸ್ಪಿಟಲ್, ರಾಬರ್ಟ್‌ಸನ್‌ಪೇಟೆ, ಕೆ.ಜಿ.ಎಫ್. ೩. ಜೆ. ಅಪ್ಪಾಜಿಗೌಡರು, ಬಿ.ಎ. (ಆನರ್ಸ್), ಮೈಸೂರು ಸರ್ಕಾರದ ಚೀಫ್ ಸೆಕ್ರೆಟರಿಯವರು, ಬೆಂಗಳೂರು. ೪. ಡಾ. ಎಂ. ವಿ. ಗೋವಿಂದಸ್ವಾಮಿ ಅವರು, ಎಂ.ಎ., ಬಿ.ಎಸ್‌ಸಿ.,ಎಂ.ಬಿ.,ಬಿ.ಎಸ್., ಸೂಪರಿಂಟೆಂಡೆಂಟರು, ಮೆಂಟಲ್ ಆಸ್ಪತ್ರೆ, ಬೆಂಗಳೂರು. ೫. ಬಿ. ಕೆ. ರಾಮಕೃಷ್ಣಯ್ಯನವರು, ಎಂ.ಎ., ಎಲ್‌ಎಲ್.ಬಿ., ಕಾರ್ಯದರ್ಶಿಗಳು, ಆರ್. ಎ. ಮತ್ತು ಎಲ್. ಸಿ., ಬೆಂಗಳೂರು. (ಆಜೀವ ಸದಸ್ಯತ್ವದಿಂದ ಬದಲಾವಣೆ). ೬. ಎಚ್. ನಂಜುಂಡಯ್ಯನವರು, ಬಿ.ಎ., ಬಿ.ಎಲ್., ನಿವೃತ್ತ ಡಿಸ್ಟ್ರಿಕ್ಟ್ ಜಡ್ಜರು, ಬೆಂಗಳೂರು. (ಸಾಮಾನ್ಯ ಸದಸ್ಯತ್ವದಿಂದ ಬದಲಾವಣೆ). ೭. ರಾಜಸೇವಾಪ್ರಸಕ್ತ ಶ್ರೀ. ಎ. ಎನ್. ರಾಘವಾಚಾರ್ಯರು, ಎಂ.ಎ., ಸರಕಾರದ ಫೈನಾನ್ಷಿಯಲ್ ಸೆಕ್ರೆಟರಿಯವರು, ಚಾಮರಾಜಪೇಟೆ, ಬೆಂಗಳೂರು. (ಆಜೀವ ಸದಸ್ಯತ್ವದಿಂದ ಬದಲಾವಣೆ).

**ಸಾಮಾನ್ಯ ಸದಸ್ಯರು (೬ ರೂ.)** : ಶ್ರೀ. ಎಂ. ಎ. ಅಲ್ಲವು, ಬಿ.ಎ., ಎಲ್‌ಎಲ್.ಬಿ. ಅವರು, ಅಡ್ವೊಕೇಟ್ ಮತ್ತು ಪಬ್ಲಿಕ್ ಪ್ರಾಸಿಕ್ಯೂಟರ್, ರಾಬರ್ಟ್‌ಸನ್‌ಪೇಟೆ, ಕೆ. ಜಿ. ಎಫ್.

**ಸಾಮಾನ್ಯ ಸದಸ್ಯರು (೩ ರೂ.)** : ೧. ಶ್ರೀಮತಿಗಳಾದ ಬಿ. ವಿ. ಯಶೋದಮ್ಮನವರು, ೨೩೪, ೩ನೆಯ ರಸ್ತೆ, ಚಾಮರಾಜಪೇಟೆ, ಬೆಂಗಳೂರು. ೨. ಸುಭದ್ರಮ್ಮ ಡ್ಯಾನಿಯಲ್ ಅವರು, ೧೦೨, ಕಬ್ಬನ್‌ಪೇಟೆ, ಮೈನ್ ರಸ್ತೆ, ಬೆಂಗಳೂರು.

### ಮಹಿಳಾ ಶಾಖೆ: ಉಪನ್ಯಾಸ

ಮಹಿಳಾ ಶಾಖೆಯ ಆಶ್ರಯದಲ್ಲಿ ತಾ. **೭–೩–೧೯೪೩ನೆಯ ಭಾನುವಾರ ಸಂಜೆ ೬ ಗಂಟೆಗೆ** ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಮಲ್ಲೇಶ್ವರದ ಸ್ತ್ರೀ ಸಮಾಜದ ಅಧ್ಯಕ್ಷಿಣಿಯರಾದ ಶ್ರೀಮತಿ ಜಯಮ್ಮನವರು '**ಮಹಿಳೆಯರು, ಇಂದಿನ ವಿದ್ಯಾಭ್ಯಾಸಕ್ರಮ**' ಎಂಬ ವಿಷಯವಾಗಿ ಉಪನ್ಯಾಸ ಮಾಡುತ್ತಾರೆ.

ಪರಿಷತ್ತಿನ ಮಹಿಳಾ ಶಾಖೆಯ ಅಧ್ಯಕ್ಷಿಣಿಯರಾದ ಶ್ರೀಮತಿ ಎ. ಶೇಷಮ್ಮನವರು ಅಧ್ಯಕ್ಷತೆ ವಹಿಸುತ್ತಾರೆ.

ಸೋದರಿಯರೆಲ್ಲ ಬರಬೇಕಾಗಿ ಪ್ರಾರ್ಥನೆ.

### ಹೈದರಾಬಾದು ಕರ್ನಾಟಕ ಪ್ರಾಂತಸಮಿತಿ

ಸಮಿತಿಯ ಮೊದಲ ಸದಸ್ಯ ಸಭೆ ೨೬–೨–೪೩ರಲ್ಲಿ ಕಲಬುರ್ಗಿ ಕನ್ನಡ ಸಾಹಿತ್ಯ ಸಂಘದ ಕಟ್ಟಡದಲ್ಲಿ ಶ್ರೀ. ಶ್ರೀನಿವಾಸರಾವ್ ಕಾಗಲಕರ ಅವರ ಅಧ್ಯಕ್ಷತೆಯಲ್ಲಿ ಸೇರಿತು. ಈ ಕೆಳಗಿನಂತೆ ಆಯ್ಕೆಗಳೂ ನಿರ್ಣಯಗಳೂ ಆದುವು.

ಶ್ರೀ. ಶ್ರೀನಿವಾಸರಾವ್ ಕಾಗಲಕರ, ಬಿ.ಎ.,ಎಲ್‌ಎಲ್.ಬಿ. ಅವರು (ಅಧ್ಯಕ್ಷರು ಮತ್ತು ಕೋಶಾಧ್ಯಕ್ಷರು), ಶ್ರೀ. ಗೋಸಲರಾವ ಚಿಂಚೋಳಿಯವರು (ಕಾರ್ಯದರ್ಶಿಗಳು), ಶ್ರೀ. ಪದ್ಮನಾಭಚಾರ್ಯ ಪುರಾಣಿಕ, ಎಂ.ಎಸ್‌ಸಿ. ಅವರು (ಸಹಕಾರ್ಯದರ್ಶಿಗಳು).

ಮಹಾತ್ಮಾ ಗಾಂಧೀಜಿಯವರಿಗೆ ಆಯುರಾರೋಗ್ಯವನ್ನೂ, ಶ್ರೇಯಸ್ಸನ್ನೂ ಕೋರುವ ಮತ್ತು ಪ್ರಾಂತದಲ್ಲಿ ಕನ್ನಡದ ಕೆಲಸಗಳನ್ನು ವಿಸ್ತರಿಸುವ ನಿರ್ಣಯಗಳು ಅನುಮೋದಿತವಾದುವು.

## ಕನ್ನಡ ಸುದ್ದಿ

**ಬೆಂಗಳೂರು: ಸೆಂಟ್ರಲ್ ಹೈಸ್ಕೂಲು ಕರ್ನಾಟಕ ಸಂಘ**

ಸಂಘದ ೨ನೆಯ ವಾರ್ಷಿಕೋತ್ಸವ ತಾ. ೨೭–೨–೧೯೪೩ನೆಯ ದಿನ ಸಂಜೆ ಶ್ರೀ. ಅ. ನ. ಕೃಷ್ಣರಾಯರ ಅಧ್ಯಕ್ಷತೆಯಲ್ಲಿ ನಡೆಯಿತು. ಶ್ರೀ. ಕೃಷ್ಣರಾಯರು 'ಕಾದಂಬರಿಗಳ' ವಿಷಯವಾಗಿ ಉಪನ್ಯಾಸ ಮಾಡಿದರು.

**ಬೆಂಗಳೂರು: ಎಸ್. ಎಲ್. ಎನ್. ಹೈಸ್ಕೂಲು**

ಮೇಲ್ಕಂಡ ಶಾಲೆಯ ಕರ್ನಾಟಕ ಸಂಘದಲ್ಲಿ ಕುಮಾರವ್ಯಾಸನ ಸ್ಮಾರಕ ಉತ್ಸವ ನಡೆಯಿತು. ಶ್ರೀ. ಡಿ. ವಿ. ಗುಂಡಪ್ಪನವರು ಅಧ್ಯಕ್ಷತೆ ವಹಿಸಿದ್ದರು. ಅಧ್ಯಕ್ಷರು ಕುಮಾರವ್ಯಾಸನ ಪ್ರಶಂಸೆ ಮಾಡಿ, ಆತನು ಬರೆದಿರುವ ಕನ್ನಡ ಮಹಾಭಾರತ ಆಧುನಿಕ ಪ್ರಪಂಚದ ಸಕಲ ಸಮಸ್ಯೆಗಳಿಗೂ ಸದುತ್ತರಗಳನ್ನೂ ಪರಿಹಾರೋಪಾಯಗಳನ್ನೂ ಒಳಗೊಂಡಿರುವ, ಪ್ರತಿಯೊಬ್ಬ ಕನ್ನಡಿಗನೂ ಓದಬೇಕಾದ ಮಹಾ ಕಾವ್ಯವೆಂದು ಹೇಳಿದರು.

**ಮಲ್ಲೇಶ್ವರ: ಕರ್ನಾಟಕ ಸಂಘ**

ಸಂಘದ ಸರ್ವ ಸದಸ್ಯರ ವಾರ್ಷಿಕ ಸಭೆ ಫೆಬ್ರುವರಿ ೨೮ನೆಯ ತಾರೀಖು ಭಾನುವಾರ ಸಂಜೆ ನಡೆಯಿತು. ಹಿಂದಿನ ವರುಷದ ವರದಿ, ೧೯೪೦, ೪೧ ಮತ್ತು ೪೨ನೆಯ ವರ್ಷಗಳ ಲೆಕ್ಕಪಟ್ಟಿಗಳು, ಮಾರ್ಪಾಟಾದ ಸಂಘದ ನಿಬಂಧನೆಗಳು ಇವನ್ನು ಪರಿಶೀಲಿಸಿ ಒಪ್ಪಲಾಯಿತು. ಮುಂದಿನ ವರುಷಕ್ಕೆ ಶ್ರೀ. ಬೆನಗಲ್ ರಾಮರಾಯರವರನ್ನು ಅಧ್ಯಕ್ಷರನ್ನಾಗಿಯೂ, ಶ್ರೀ. ಎಂ. ಪಿ. ಎಲ್. ಶಾಸ್ತ್ರಿಗಳನ್ನು ಗೌರವ ಕಾರ್ಯದರ್ಶಿಗಳನ್ನಾಗಿಯೂ, ಶ್ರೀ. ಆರ್. ತಮ್ಮಾಜಿರಾವ್, ಶ್ರೀ. ಎಂ.ಎಸ್. ಶಾಸ್ತ್ರಿ ಮತ್ತು ಶ್ರೀ. ಸಿ. ರಾಜಗೋಪಾಲಾಚಾರ್ಯರನ್ನು ಕಾರ್ಯನಿರ್ವಾಹಕ ಸಮಿತಿಯ ಸದಸ್ಯರನ್ನಾಗಿಯೂ ಆರಿಸಲಾಯಿತು.

## ಸಾದರ ಸ್ವೀಕಾರ

**ಶ್ರೀಮದ್ದಾಯಾನಂದರ್ಷಿ ಜೀವನ ಚರಿತಂ:** ಗ್ರಂಥಕರ್ತೃ ಮತ್ತು ಪ್ರಕಾಶಕರು: ಸುಧಾಕರ ಅವರು. ಅಷ್ಟಪತ್ರ ೫೦೦ ಪುಟಗಳುಳ್ಳ ಪದ್ಯ ಗ್ರಂಥ. ಬೆಲೆ ೧–೮–೦. ಪುಸ್ತಕ ಸಿಕ್ಕುವ ಸ್ಥಳ, ಆರ್ಯಸಮಾಜ, ಶ್ರೀರಾಮಪುರ, ಮಲ್ಲೇಶ್ವರ ಪೋಸ್ಟ್, ಬೆಂಗಳೂರು.

**ಗೀತಾ ಪ್ರವಚನಗಳು (ಅಧ್ಯಾಯ ೧, ೨) :** ಮೂಲ ಲೇಖಕರು: ಶ್ರೀ. ಆಚಾರ್ಯ ವಿನೋಬಾ ಭಾವೆ ಅವರು. ಪ್ರಕಾಶಕರು: ದತ್ತಾತ್ರೇಯ ಶಿವಾನಂದ ಬಂಕಾಪುರ, ಅವಧೂತ ಗ್ರಂಥಾಲಯ, ಹುಬ್ಬಳ್ಳಿ. ಕಿರೀಟಾಕಾರದ ಅಷ್ಟಪತ್ರ ಪುಟಗಳು ೩೫. ಬೆಲೆ ನಾಲ್ಕಾಣೆ.

**ವ್ಯವಸಾಯದ ಮಣ್ಣುಗಳು:** ಮೈಸೂರು ವಿಶ್ವವಿದ್ಯಾನಿಲಯದ ಸರ್ ಕೆ. ಪಿ. ಪುಟ್ಟಣ್ಣ ಚೆಟ್ಟರ ಪುದುವಟ್ಟಿನ ಪ್ರಕಟನ ಮಾಲೆ ೪. ಗ್ರಂಥಕರ್ತರು: ಕೂರಪಾಡು ಗುಂಡಪ್ಪ, ಬಿ.ಎ. ಅವರು. ಫೂಲ್‌ಸ್ಕ್ಯಾಪ್ ಅಷ್ಟಪತ್ರ ಪುಟಗಳು ೭೯+೧೦+೩. ಬೆಲೆ ೨ ಆಣೆ.

**ಆಕಾಶಯಾನ:** ಮೈಸೂರು ವಿಶ್ವವಿದ್ಯಾನಿಲಯದ ಸರ್ ಕೆ. ಪಿ. ಪುಟ್ಟಣ್ಣ ಚೆಟ್ಟರ ಪುದುವಟ್ಟಿನ ಪ್ರಕಟನ ಮಾಲೆ ೫. ಗ್ರಂಥಕರ್ತರು, ಮೂಲ ಲೇಖಕರು: ಶ್ರೀ. ಬಿ. ಕೆ. ಎನ್. ರಾವ್ ಅವರು, ಪುಣೆ. ಭಾಷಾಂತರಕಾರರು: ಶ್ರೀ. ಎಂ. ವಿ. ಸೀತಾರಾಮಯ್ಯ, ಎಂ.ಎ. ಅವರು. ಫೂಲ್‌ಸ್ಕ್ಯಾಪ್ ಅಷ್ಟಪತ್ರ ಪುಟಗಳು ೧೩೪. ಬೆಲೆ ೨ ಆಣೆ.

೭೪೫—೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧೨
ಬಿಡಿ ಪತ್ರಿಕೆ: ೬ ಕಾಸು



ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈ ಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೨೦
ಬೆಂಗಳೂರು: ಶುಕ್ರವಾರ, ಮಾರ್ಚಿ ೧೨, ೧೯೪೩

## ಪರಿಷತ್ತಿನ ಮುನ್ನಡೆ

೮

ಕನ್ನಡನಾಡಿನ ಎಲ್ಲಾ ಭಾಗದಲ್ಲೂ ಕನ್ನಡಕ್ಕೆ ಸರಿಯಾದ ಸ್ಥಾನವನ್ನು ಗಳಿಸುವುದು ಕೇಂದ್ರ ಸಂಸ್ಥೆಯ ಒಂದು ಮುಖ್ಯ ಕಾರ್ಯ. ಕನ್ನಡನಾಡಿನ ಎಲ್ಲ ಬಾಳುವೆಯ ಭಾಷೆ ಕನ್ನಡ ಆಗಿರಬೇಕೆಂಬುದು ನಮ್ಮ ಗುರಿ. ಸ್ಥಿತಿಗತಿ ಅತ್ಯುತ್ತಮವಾಗಿರುವ ನಮ್ಮ ಪ್ರಾಂತಗಳಲ್ಲಿ ಕೂಡ ಇದು ಇನ್ನೂ ಗುರಿಯಾಗಿಯೇ ಇದೆ; ದೂರದಲ್ಲಿದೆ. ಸ್ಥಿತಿಗತಿ ಚೆನ್ನಾಗಿಲ್ಲದ ಭಾಗಗಳನ್ನು ನೋಡಿದರೆ ಯಾವ ಕನ್ನಡಿಗನಿಗೂ ದುಃಖವಾಗುತ್ತದೆ. ಕನ್ನಡನಾಡಿನ ಕೆಲವು ಸಂಸ್ಥಾನಗಳಲ್ಲಿ ಪ್ರಜೆಗಳು ನೂರಕ್ಕೆ ತೊಂಬತ್ತರಷ್ಟು ಕನ್ನಡಿಗರಾಗಿದ್ದರೂ ಕನ್ನಡದ ಶಾಲೆಗಳಿಲ್ಲ. ಆಡಳಿತದ ಭಾಷೆ ಬೇರೆ ಭಾಷೆಯಾಗಿರುವುದರಿಂದ ಕೋರ್ಟು ಕಚೇರಿಯಲ್ಲಿ ಕನ್ನಡಿಗರು ಬೇರೆಯ ಭಾಷೆಯಲ್ಲಿ ಅರ್ಜಿ ಬರೆಯಬೇಕು; ವ್ಯವಹಾರ ನಡಸಬೇಕು. ಕೆಲವು ಭಾಗಗಳಲ್ಲಿ ಆಡಳಿತಗಳು ಜನರು ಸ್ವಂತವಾಗಿ ಶಾಲೆಗಳನ್ನು ನಡಸಿಕೊಳ್ಳುವುದಕ್ಕೂ ಅಡಚಣೆ ಒಡ್ಡುತ್ತವೆ. ಇಂಥ ಸ್ಥಿತಿ ಈಗ ವರ್ಷಕ್ಕೊಮ್ಮೆ ಸಮ್ಮೇಳನ ನಡೆದಾಗ ಉಗ್ರವಾದ ಭಾಷೆಯಲ್ಲಿ ಟೀಕೆಗೆ ಗುರಿಯಾಗಿ ಗಮನಕ್ಕೆ ಬಂದು ಗಮನದಿಂದ ಮರೆಯುತ್ತಿದೆ. ಇಂಥ ಒಂದೊಂದು ಬೇರೆ ಬೇರೆಯ ಸಂಸ್ಥಾನ ಪ್ರಾಂತವನ್ನೂ ಕುರಿತು ಒಂದು ದಫ್ತರವನ್ನು ತೆರೆದು ಈಗ ಇರುವ ಸ್ಥಿತಿಯೇನು, ಇದನ್ನು ಸರಿಪಡಿಸುವುದಕ್ಕೆ ಯಾವ ಕಾರ್ಯಕ್ರಮವನ್ನು ಕೈಗೊಳ್ಳಬೇಕು, ಎಂದು ಪರಿಶೀಲಿಸಬೇಕಾಗಿದೆ. ಯಾವ ಪ್ರಾಂತದಲ್ಲಾಗಲಿ ಹೊರಗಿನವರು ಬಂದು ಚಳವಳಿ ಎಬ್ಬಿಸಬಾರದು. ಅಲ್ಲಲ್ಲಿಯ ಜನರೇ ತಮ್ಮ ಸ್ಥಿತಿಯನ್ನು ಸರಿಪಡಿಕೊಳ್ಳುವುದಕ್ಕೆ ಯತ್ನಿಸಬೇಕು. ಕೇಂದ್ರ ಸಂಸ್ಥೆ ಆಯಾ ಪ್ರಾಂತದ ಈ ಬಗೆಗೆ ಸಂದರ್ಭಕ್ಕನುಗುಣವಾಗಿ ಅಲ್ಲಲ್ಲಿ ಏರ್ಪಾಡು ಮಾಡಬೇಕಾಗಿದೆ. ಪ್ರಜೆಗಳ ಹಿತಕ್ಕಾಗಿ ಹೇಗೋ ಹಾಗೆ ಆಯಾ ಆಡಳಿತದ ಹಿತಕ್ಕಾಗಿಯೂ ಈ ಕಾರ್ಯಕ್ರಮ ಆವಶ್ಯಕ. ಎಲ್ಲ ಪಕ್ಷಗಳ ಶುಭಕ್ಕಾಗಿ ಹೊರತು ಒಂದು ಪಕ್ಷಕ್ಕೆ ಒಳ್ಳೆಯುದನ್ನು ಇನ್ನೊಂದು ಪಕ್ಷಕ್ಕೆ ಕೆಟ್ಟುದನ್ನು ಮಾಡುವುದು ನಮ್ಮ ಉದ್ದೇಶ್ಯ ಅಲ್ಲ ಎನ್ನುವುದನ್ನು ನಾವು ಸದಾ ಸ್ಪಷ್ಟಪಡಿಸಬೇಕು.

ಕನ್ನಡದ ಒಟ್ಟು ಜನತೆಯ ಹಿತವನ್ನು ತಿಳಿಯಲಾರದೆ ನಮ್ಮಲ್ಲಿ ಕೆಲ ಮಂದಿ ಜನತೆಯ ಒಂದೊಂದು ಭಾಗದ ಹಿತವೆಂದು ಕಾಣುವ ವಿಷಯವನ್ನು ಮುಂದುಮಾಡಿ ಮಾತನಾಡುವುದುಂಟು. ಕೊಡಗರಲ್ಲಿ, ತುಳುವರಲ್ಲಿ ಕನ್ನಡದ ಬಗ್ಗೆ ಯಾವ ನಿಲುವು ಇರಬೇಕು? ತುಳು ಭಾಷೆಯನ್ನೆ ಬೇರೆಯಾಗಿ ಬೆಳಸಿ ಅದರ ಒಳ್ಳೆಯದನ್ನು ಸಾಧಿಸುವುದು ಆಗುತ್ತದೆಯೆ? ಅದು ದೇಶಕ್ಕೆ ಹಿತವೆ? ಕನ್ನಡದ ವಿಸ್ತಾರವಾದ ಭೂಮಿಕೆಯಲ್ಲಿ ತುಳು ಕೊಡಗು ನುಡಿಗಳಂತೆ ಇತರ ಕಿರುನುಡಿಗಳಿವೆ. ಒಂದೊಂದೂ ಒಂದೊಂದು ಸ್ವತಂತ್ರ ಭಾಷೆಯಾಗುವೆನೆಂದು ಯತ್ನ ಮಾಡಬಾರದು; ಮುಖ್ಯ ಭಾಷೆಯಾದ ಕನ್ನಡದ ಕೈಯಲ್ಲಿದ್ದು ಬೆಳೆಯಬೇಕು. ಕೊಡಗರು ತುಳವರು ಕನ್ನಡವನ್ನು ಬಿಟ್ಟು ಒಂದು ಪ್ರಾಂತವನ್ನು ಕಟ್ಟುವುದು ಸಾಧ್ಯವಲ್ಲ. ಅದು ಸಾಧ್ಯವಾದರೂ ಒಳಿತಲ್ಲ. ನೂರು ವರ್ಷದಿಂದ ಪಾದ್ರಿಗಳ ಬಳಿಯಲ್ಲಿ ಬೆಳೆದು ಇಂಗ್ಲೀಷಿನಲ್ಲಿ ಸ್ವಲ್ಪ ಬಳಕೆ ಹೆಚ್ಚಿರುವ ಕಾರಣದಿಂದ ಮಂಗಳೂರಿನ ನಮ್ಮ ಕ್ರೈಸ್ತ ಮಿತ್ರರು ಕೆಲವರು ತಾವು ಇಂಗ್ಲೀಷನ್ನೇ ಮನೆಮಾತು ಮಾಡಿಕೊಳ್ಳುವೆವೆಂಬಂತೆ ವಾದಿಸುವುದುಂಟು. ಮಾತು ಹೊರಗಿಂದ ಕೊಡುವ ವಸ್ತುವಲ್ಲ; ಒಳಗಿಂದ ಬೆಳೆಯುವ ವಸ್ತು. ಅಂಗಿಯಲ್ಲ; ಮೈಯ್ಯ ತೊವಲು. ಇಂಥ ವಿಷಯದಲ್ಲಿ ತಪ್ಪು ತಿಳಿವಳಿಕೆ ಜನದಲ್ಲಿ ಹರಡದಂತೆ ನಾವು ಪ್ರಚಾರ ಮಾಡಬೇಕಾಗಿದೆ.

ಮುಖ್ಯವಾಗಿ ಕರ್ನಾಟಕದ ಎಲ್ಲಾ ಭಾಗದಲ್ಲಿಯೂ, ಕನ್ನಡಿಗರ ಬಾಳುವೆಯ ಎಲ್ಲ ವಿವರದಲ್ಲಿಯೂ ಕನ್ನಡಕ್ಕೆ ಸರಿಯಾದ ಸ್ಥಾನವನ್ನೂ ಮಾನವನ್ನೂ ಗಳಿಸುವುದೂ ಉಳಿಸುವುದೂ ನಮ್ಮ ಸಂಸ್ಥೆಯ ಕರ್ತವ್ಯ. ಕನ್ನಡದ ತಂಪಾದ ಬಸಿರಲ್ಲಿ ಎಡೆಮಾಡಿಕೊಂಡು ಬಾಳಿರುವ ಹೊರಗಿನ ಮಂದಿ ಕೆಲವರು ಕನ್ನಡದ ನೆಲ ಕನ್ನಡದ್ದಲ್ಲವೆಂದೇ ಕೆಲವು ವೇಳೆ ಹೇಳುತ್ತಾರೆ. ಹೊರಗಿನವರು ತನ್ನಲ್ಲಿಗೆ ಬರಕೂಡದೆಂದು ಕನ್ನಡ ಹೇಳುವುದಿಲ್ಲ. ಎಲ್ಲರೂ ಬರಬೇಕು; ಎಲ್ಲರೂ ಬಾಳಬೇಕು; ಆದರೆ ಕನ್ನಡವನ್ನೆ ಅಲ್ಲಗಳೆಯುವ ಇಲ್ಲಗಳೆಯುವ ಸಾಹಸವನ್ನು ಮಾಡಬಾರದು. ಈ ವಿಷಯವನ್ನು ನಾವು ಗಟ್ಟಿಯಾಗಿ ಹೇಳದಿದ್ದರೂ ಸ್ಪಷ್ಟವಾಗಿ ಹೇಳಬೇಕು; ಈ ತತ್ವವನ್ನು ಎಲ್ಲ ಹೊತ್ತಿನಲ್ಲಿಯೂ ಅನುಷ್ಠಿಸಬೇಕು.

ಕನ್ನಡಕ್ಕೆ ತಕ್ಕ ಸ್ಥಾನವನ್ನು ಗಳಿಸಬೇಕೆಂಬ ಮಾತಿಗೆ ಒಂದು ಉದಾಹರಣೆ: ನಮ್ಮ ನಾಡಿಗಾಗಿ ಏರ್ಪಟ್ಟಿರುವ ಬಾನ್‌ದನಿ ಸ್ಟೇಷನ್‌ಗಳ ಕಾರ್ಯಕ್ರಮ. ಕನ್ನಡ ದೇಶವೆಲ್ಲ ಒಂದು ಆಡಳಿತದಲ್ಲಿ ಇದ್ದಿದ್ದರೆ ಆ ಮಾತು ಬೇರೆಯಾಗಿತ್ತು. ಈಗ ಕನ್ನಡ ದೇಶಕ್ಕೆ ಮದರಾಸು, ಬೊಂಬಾಯಿ, ಹೈದರಾಬಾದಿನ ರೇಡಿಯೋ ಸ್ಟೇಷನ್‌ಗಳೂ ಸೇರಿವೆ. ಆಯಾ ಸ್ಟೇಷನಿನ ಅಧಿಕಾರಿಗಳು ತಮ್ಮ ವಲಯಕ್ಕೆ ಒಳಪಟ್ಟ ಎಲ್ಲ ಭಾಷೆಗಳಿಗಾಗಿಯೂ ತಕ್ಕಷ್ಟು ಕಾರ್ಯಕ್ರಮವನ್ನು ತಮ್ಮ ಪಟ್ಟಿಯಲ್ಲಿ ಸೇರಿಸಬೇಕು. ಹಾಗೆ ಸೇರಿಸುವುದೇ ಅವರ ಧರ್ಮ. ಈ ಧರ್ಮವನ್ನು ಮನಗಾಣದೆ ಅಥವಾ ಕಂಡರೂ ಶ್ರದ್ಧೆವಹಿಸದೆ ಅವರು ಈಗ ಕನ್ನಡದಲ್ಲಿ ಸಾಕಾದಷ್ಟು ಕಾರ್ಯಕ್ರಮವನ್ನು ಏರ್ಪಡಿಸುತ್ತಿಲ್ಲ. ಕನ್ನಡ ನಾಡಿನ ಎಲ್ಲ ಭಾಗದಿಂದ ಈ ವಿಷಯದಲ್ಲಿ ಬಾನ್‌ದನಿಯ ಸ್ಟೇಷನ್ ಅಧಿಕಾರಿಗಳಿಗೆ ಅರಿಕೆ ಹೋಗಬೇಕು. ಹಾಗೂ ಕನ್ನಡಕ್ಕೆ ಸರಿಯಾದ ಸ್ಥಾನ ದೊರೆಯದೆ ಇದ್ದರೆ ಅವರಿಗೆ ಮೇಲ್ಪಟ್ಟವರಲ್ಲಿ ದೂರು ಹೋಗಬೇಕು. ಇಂಥ ಸಂದರ್ಭದಲ್ಲಿ ನಾಡಿನ ಪ್ರಾಜ್ಞರೆಲ್ಲ ಒಟ್ಟುಗೂಡಬೇಕಾಗುತ್ತದೆ. ಇದಕ್ಕೆ ಕೇಂದ್ರ ಸಂಸ್ಥೆ ಅನುಕೂಲ ಒದಗಿಸಬೇಕು. ಬಾನ್‌ದನಿಯ ಮಾತನ್ನು ಒಂದು ಉದಾಹರಣೆಯಾಗಿ ಹೇಳಿದೆ. ಇದರಂತೆ ಹತ್ತು ವಿಷಯದಲ್ಲಿ ದೇಶದ ಮುಖಂಡರು ಅದರ ಕ್ಷೇಮಕ್ಕಾಗಿ ಒಟ್ಟಾಗಿ ನಡೆಯಬೇಕಾಗುತ್ತದೆ. ಆ ಬಗ್ಗೆ ಅವರು ಕೇಂದ್ರ ಸಂಸ್ಥೆಯನ್ನು ಉಪಯೋಗಿಸಿಕೊಳ್ಳಬೇಕು.

— ಮಾಸ್ತಿ ವೆಂ. ಅ.

# ಕನ್ನಡ ನುಡಿ

**ಶುಕ್ರವಾರ, ಮಾರ್ಚಿ ೧೨, ೧೯೪೩**

## ಕಂಠಶ್ರೀ

ಪರಿಷತ್ತಿನ ಸಭಾಮಂದಿರದಲ್ಲಿ ಮಾತನಾಡುತ್ತ ಲೋಕಪ್ರಖ್ಯಾತ ಭೌತವಿಜ್ಞಾನಿಗಳಾದ ಸರ್ ಚಂದ್ರಶೇಖರ ವೆಂಕಟರಾಮನ್ ಅವರು (Sir C. V. Raman) ಮೊನ್ನೆ ಸಂಜೆ (೫-೩-೧೯೪೩) ಮನುಷ್ಯರ ಕಂಠಗುಣವನ್ನು ಕುರಿತು ಮಾತನಾಡಿದರು. ಸದ್ಯಕ್ಕೆ ವಿಷಯ ನಾದ ಶಾಸ್ತ್ರಕ್ಕೆ ಸಂಬಂಧಿಸುವುದಕ್ಕಿಂತ ಹೆಚ್ಚಾಗಿ ಗಾನಕಲೆಗೆ ಸಂಬಂಧಿಸುತ್ತದೆಂದೂ, ನಾದವಿಜ್ಞಾನವನ್ನು ಕುರಿತು ತಾವು ಹೆಚ್ಚಾಗಿ ಏನನ್ನೂ ಸಾಹಿತ್ಯ ಮಂದಿರದಲ್ಲಿ ಹೇಳಲು ಇಷ್ಟಪಡುವುದಿಲ್ಲವೆಂದೂ ಹೇಳಿದರು. ಭಾಷಣದ ಕಡೆಯಲ್ಲಿ ವಂದನಾರ್ಪಣೆ ಮಾಡುತ್ತ ಶ್ರೀಮಾನ್ ಮಾಸ್ತಿಯವರು ವಿಜ್ಞಾನಕ್ಕೂ ಸಾಹಿತ್ಯಕ್ಕೂ ವೈರವಿಲ್ಲ, ಉತ್ತಮ ಸಾಹಿತಿಗಳಂತೆ ಭಾಷಣ ಮಾಡಿದ ವಿಜ್ಞಾನಶಾಸ್ತ್ರಿ ರಾಮನ್ ಅವರೇ ಅದಕ್ಕೆ ನಿದರ್ಶನವೆಂದು ಹೇಳಿದ ಮಾತಿನ ಪ್ರತಿ ಅಕ್ಷರವೂ ನಿಜ. ಸರ್ ರಾಮನ್ ಅವರು ಮಾತನಾಡುವರೆಂದರೆ, ಕೇಳುವವರಿಗೆ ಒಂದು ಹಬ್ಬ. ಅವರಿಗೆ ಶಾಸ್ತ್ರ ಪರಿಚಯ ಎಷ್ಟುಮಟ್ಟಿಗಿದೆಯೋ ಅಷ್ಟೇ ಮಟ್ಟಿಗೆ ಪ್ರಪಂಚದ ವಿವಿಧ ವಿಷಯಗಳ ಬಳಕೆಯೂ ಸ್ವರೂಪಜ್ಞಾನವೂ ಇವೆ. ಅವರು ಸಂಗೀತ ಕಲೆಯಲ್ಲಿ ಅಭಿರುಚಿ, ಅಭಿಮಾನ ಉಳ್ಳವರು; ದಕ್ಷಿಣಾದಿ, ಹಿಂದುಸ್ತಾನಿ ಮತ್ತು ಪಾಶ್ಚಾತ್ಯ ಸಂಗೀತಗಳ ಪ್ರಸಿದ್ಧ ಗಾಯಕರನ್ನೂ ವಾದನಕಾರರನ್ನೂ ಕೇಳಿ ಕಿವಿಯ ಸಂಸ್ಕಾರ ಪಡೆದವರು. ತಾರತಮ್ಯ ವಿವೇಚನೆ ಮಾಡಬಲ್ಲವರು. ಅಂತಹವರು ಆಡಿದ ಮಾತುಗಳು ಬೆಲೆಯುಳ್ಳವು.

ಮನುಷ್ಯನಂತೆಯೇ ಇತರ ಹಲವು ಪ್ರಾಣಿಗಳಿಗೆ ಶಬ್ದಮಾಡುವ ಮತ್ತು ಒಂದು ಬಗೆಯ ನಾದಶಕ್ತಿಯುಳ್ಳ ಕಂಠವಿದೆ. ಪಕ್ಷಿಗಳಲ್ಲಂತೂ ಕೆಲವು ಸುಮಧುರವಾಗಿ ಹಾಡುವುವೆಂಬ ಪ್ರತೀತಿಯೇ ಇದೆ. ಆದರೂ ಮನುಷ್ಯನ ಕಂಠ ಒಂದು ವಿಶೇಷ ಬಗೆಯ ಶಕ್ತಿ; ಒಂದು ವಿಶೇಷ ಬಗೆಯ ಸಾಧನ. ಅವನ ಮಾತಿನಲ್ಲಿ ಅರ್ಥಶಕ್ತಿ, ಧ್ವನಿ, ರಾಗ ದ್ವೇಷಾದಿಗಳನ್ನುಂಟುಮಾಡುವ ಶಕ್ತಿ ಹೇಗಿವೆಯೊ, ಹಾಗೆಯೆ ಬಗೆ ಬಗೆಯ ಮಟ್ಟ, ಸಂಯೋಜನೆ, ವಿನ್ಯಾಸ, ಗತಿ, ಏರುತಗ್ಗು, ನಯ, ಗಡಸು, ಕುಲುಕು, ಅಲೆ, ಮೂರ್ಛನಗಳಿಂದ ಒಂದು ವಿಶೇಷಬಗೆಯ ಮನೋಮೋಹಕವಾದ ಪರಿಣಾಮವನ್ನುಂಟುಮಾಡಬಲ್ಲ ಶಕ್ತಿ ಇದೆ. ಆ ಶಕ್ತಿಯನ್ನು ಬೆಳಸಿ ಪರಿಷ್ಕಾರಗೊಳಿಸಿಕೊಂಡರೆ ಮತ್ತು ಅದರ ಮೂಲಕ ಕಲಾನುಭೂತಿ ಹೊಮ್ಮಿಸಿದರೆ ಅದು ಸಾಧಿಸಲಾರದ ತಕ್ಷಣ ಪರಿಣಾಮವೇ ಇಲ್ಲ ಎಂದರು. ನಮ್ಮ ದೇಶದ ಮತ್ತು ಇತರ ದೇಶದ ಗಾಯಕರನ್ನು ಹೋಲಿಸುತ್ತ ನಮ್ಮಲ್ಲಿ ಕಂಠವನ್ನು ಸರಿಯಾಗಿ ತಿದ್ದಿ, ಸುಸ್ವರವನ್ನು ಮಾತ್ರ ಸಾಧನೆಮಾಡುವ ಕೆಲಸ ಇನ್ನೂ ಬಹಳವಾಗಿ ಆಗಬೇಕಾಗಿದೆ ಎಂದರು. ಪಶ್ಚಿಮ ದೇಶಗಳಲ್ಲಿ ಈ ಅಂಶದ ಕಡೆಗೆ ಹೇಗೆ ವಿಶೇಷವಾದ ಗಮನ ಕೊಡುತ್ತಾರೆ, ಅಭ್ಯಾಸ, ವ್ಯಾಯಾಮ ಕ್ರಮಗಳನ್ನು ಹೇಗೆ ತಕ್ಕಂತೆ ಏರ್ಪಡಿಸುತ್ತಾರೆ, ಸ್ವರೋತ್ಪತ್ತಿ ಲಕ್ಷಣವನ್ನೂ ವಿಧಾನಗಳನ್ನೂ ಪೂರ್ತಿ ಅರಿತುಕೊಂಡು ಹೇಗೆ ಬೇರೆ ಬೇರೆ ಸ್ಥಾಯಿ, ಶಕ್ತಿಗಳ ಮಟ್ಟಗಳಲ್ಲಿ ಹಾಡಲು ಸಂಗೀತ ಶಿಕ್ಷಣಕ್ರಮವನ್ನು ರಚಿಸುತ್ತಾರೆ, ಎದೆ, ಶ್ವಾಸಕೋಶ, ಗಂಟಲ ಸ್ವರಗ್ರಂಥಿ, ಅಲ್ಲಿನ ಸ್ನಾಯುಗಳು, ಉಚ್ಚಾರಾಂಗಗಳು, ತಲೆ ಇವುಗಳಲ್ಲಿನ ವಿವಿಧ ಶಕ್ತಿಗಳನ್ನು ಸ್ಫುಟಗೊಳಿಸಿ, ನಯಗೊಳಿಸಿ, ಮಿಡಿಸಿಕೊಳ್ಳುತ್ತಾರೆ ಎಂದು ಹೇಳಿ ನಮ್ಮ ದೇಶದಲ್ಲಿಯೂ ಆ ಕೆಲಸವೂ ಆ ಬಗೆಯ ಜ್ಞಾನ ಶಿಕ್ಷಣವಿಧಾನಗಳೂ ವಿಶೇಷವಾಗಿ ಹರಡಬೇಕಾಗಿವೆ ಎಂದರು. ಸವಿಯಾಗಿ ಹಾಡಿದುದೆಲ್ಲ ಅಥವಾ ಸವಿಯಾಗಿ ಹಾಡಿದುದು ಮಾತ್ರ ಸಂಗೀತ ಎನ್ನುವವನು ನಾನಲ್ಲ; ಕರ್ಕಶದಂತೆ ಕಿವಿಗೆ ಕೇಳುತ್ತಿದ್ದರೂ ಪ್ರತಿಭಾಶಾಲಿಯಾದ ಸಂಗೀತ ವಿದ್ವಾಂಸನು ಉತ್ತಮವಾಗಿ ಹಾಡಿರುವಾಗ ಶ್ರೇಷ್ಠಸಂಗೀತ ಕಲೆಯೆಂದು ನಾನು ಮೆಚ್ಚಿದ್ದೇನೆಯಾದರೂ ಆ ಪ್ರತಿಭೆ ಪಾಂಡಿತ್ಯಗಳ ಜೊತೆಗೆ ನಾದ ಮಾಧುರ್ಯವೂ ಸೇರಿ ನುಡಿದರೆ ಸಂಗೀತ ದಿವ್ಯವಾಗಿ ಶೋಭಿಸುವುದು ಎಂದರು.

ಆಮೇಲೆ ಗಂಡು ಧ್ವನಿ, ಹೆಣ್ಣು ಧ್ವನಿ ಇವುಗಳಲ್ಲಿ ವ್ಯತ್ಯಾಸ ಏಕೆ ಎಂಬುದನ್ನು ಶಾಸ್ತ್ರರೀತಿಯಲ್ಲಿ ತಿಳಿಸಿದರು. ಸುತ್ತಣ ಜನಜೀವನದ ಮತ್ತು ಜೀವಿಗಳ ಚರಿತ್ರೆಯ ಮತ್ತು ಜೀವವಿಕಸನದ ಆವರಣದಿಂದಲೂ ಅಗತ್ಯಗಳಿಂದಲೂ ಸಂಗೀತವನ್ನು ಬೇರೆ ಮಾಡುವುದಕ್ಕೆ ಆಗುವುದಿಲ್ಲ; ಜೀವದ ಸೌಂದರ್ಯಕ್ಕೂ, ಸ್ಫೂರ್ತಿಗೂ, ಸಂತೋಷಕ್ಕೂ, ಅಗತ್ಯ ಸಫಲತೆಗಳಿಗೂ ಅದನ್ನು ಉಪಯೋಗಿಸಿಕೊಂಡು ಪ್ರಪಂಚದಲ್ಲಿ ಎಲ್ಲೆಲ್ಲಿಯೂ ಉಲ್ಲಾಸವೂ, ಸ್ನೇಹವೂ ಬೆಳೆಯುವ ಮಾರ್ಗವನ್ನು ಕಂಡುಕೊಳ್ಳಬೇಕೆಂದರು. ಇನ್ನೊಬ್ಬರ ಸಂಗೀತವನ್ನು ಕೇಳಿ ಎಷ್ಟೇ ಮೆಚ್ಚಿಕೆ, ಹರ್ಷ ಪಡೆದರೂ ಸಾಧಾರಣರೂ ತಮ್ಮ ಕೈಯಲ್ಲಾದ ಮಟ್ಟಿಗೆ ಸ್ವಲ್ಪಸ್ವಲ್ಪವಾಗಿ ತಾವೇ ತಿಳಿದು ಹಾಡಿಕೊಳ್ಳುವುದನ್ನೊ ವಾದ್ಯವಾದನ ಅಭ್ಯಾಸಗಳನ್ನೊ ಇಟ್ಟುಕೊಂಡರೆ ನಾಡಿನಲ್ಲಿ ಕಲಾಭಿರುಚಿ ಹೆಚ್ಚುವುದಲ್ಲವೆ ಕಲೆಯನ್ನು ಅರ್ಥಮಾಡಿಕೊಂಡು ಬೆಲೆ ಕಟ್ಟುವ ಬುದ್ಧಿಯ ಮಟ್ಟವೂ ಸಂಸ್ಕಾರವೂ ಮೇಲಾಗುವುವು ಎಂದರು.

ಕಡೆಯದಾಗಿ, ಪಾಶ್ಚಾತ್ಯ ದೇಶಗಳಲ್ಲಿ ಬಳಕೆಯಲ್ಲಿರುವ ಸಮೂಹಗಾನ ಪದ್ಧತಿ (Community-Singing) ನಮ್ಮಲ್ಲಿಯೂ ಬಳಕೆಗೆ ಬಂದರೆ ಕಂಠಶಕ್ತಿ ನುರಿತು ಹದವಾಗುವುದು, ಹಲವಾರು ಜನದೊಡನೆ ಹೊಂದಿಕೊಳ್ಳಬೇಕಾಗುವ ಪ್ರಸಂಗವೂ, ಸಂತೋಷ ಉತ್ಸಾಹಗಳೂ ಬೆಳೆಯುವಂತಾಗುವುದು. ಜನಜೀವನದಲ್ಲಿ ಒಂದು ಹೊಸಸೌಮನಸ್ಯ, ಸಮರಸಗಳು ಹುಟ್ಟಿ, ಸಂಗೀತವು ಜನದ ಬಾಂಧವ್ಯಗಳನ್ನು ಬೆಸೆಯುವ ಸಾಧನವಾಗುವುದು ಎಂದರು.

ಸಾಮೂಹಿಕ ಸಂಗೀತ ಕಲೆಯಾಗಿ, ಶಾಸ್ತ್ರವಾಗಿ ಇಲ್ಲಿ ಬೆಳೆಯದೆ ಇರಬಹುದು. ಲಾವಣಿ ಹಾಡುವಾಗ, ಕೋಲಾಟದ ಮತ್ತು ಇತರ ಹಲವು ಬಗೆಯ ನಾಟ್ಯಗೀತಗಳನ್ನು ಹಾಡುವಾಗ, ಭಜನೆಗಳಲ್ಲಿ ಈ ಮಾರ್ಗದ ಬಳಕೆ ನಮ್ಮಲ್ಲಿಯೂ ಮೊದಲಿಂದ ಇದೆ. ಆದರೆ ಯಾವುದನ್ನು ಸಂಗೀತಶಾಸ್ತ್ರ ಎನ್ನುತ್ತೇವೊ ಅದರಲ್ಲಿ ಈ ಕ್ರಮದ ಜೋಡಣೆಗೆ ಹೆಚ್ಚು ಅವಕಾಶವಿಲ್ಲ. ಕೃತಿಗಳನ್ನು ಹಾಡುವ ಒಂದೊಂದು ಸಂಪ್ರದಾಯ ಅಥವಾ ಪಾಠ ಅರಿತವರು ಇಬ್ಬರು ಮೂವರು – ಹಾಗೆ ತಯಾರಾದರೆ ಹಲವರು – ಜೊತೆಗೆ ಹಾಡುವುದು ಈಗ್ಗೂ ಶಕ್ಯ. ಆದರೆ ಶುದ್ಧ ಸಂಗೀತವೆನ್ನಬಹುದಾದ ರಾಗಾಲಾಪನೆಯಲ್ಲಿ ಅದು ಸಾಧ್ಯವಿಲ್ಲ. ಆ ಬಗೆ ಎಲ್ಲಿಯೂ ಅಸಾಧ್ಯವೇ. ಆದರೆ ವೇದಘೋಷಾದಿಗಳನ್ನು ಕೇಳಿದವರಿಗೆ ಮಂತ್ರದ ಉಚ್ಚಾರಣೆಯಲ್ಲಿ ಈ ಸಮೂಹಗಾನದ ಪದ್ಧತಿ ಈವರೆಗೂ ಉಳಿದುಕೊಂಡಿರುವುದು ಕಾಣುತ್ತದೆ. ಎಷ್ಟು ಸಾವಿರ ಜನ ಬೇಕಾದರೂ ಅಲ್ಲಿನ ಉದಾತ್ತ, ಅನುದಾತ್ತ, ಸ್ವರಿತ, ಪ್ಲುತಾದಿಗಳ ಪರಿಚಯ, ಅಭ್ಯಾಸ ಮಾಡಿಕೊಂಡಿದ್ದರೆ ತಮ್ಮ ಕಂಠವನ್ನು ಯಾವ ಮಟ್ಟದಲ್ಲಿಯಾದರೂ ಸಮೂಹದಲ್ಲಿ ಬೆರಸಿ ತಮ್ಮ ಕಂಠದ ವಿಶೇಷವರ್ಣ (Colour) ವನ್ನು ನಷ್ಟಪಡಿಸಿಕೊಳ್ಳದೆ, ಒಟ್ಟು ಗಾನಕ್ಕೆ ಸಂಪತ್ತಿ ಕೊಡಬಲ್ಲರೆಂಬುದು ತಿಳಿದ ಸಂಗತಿ. ಒಂದು ನಿಯಮ ಕ್ಲುಪ್ತತೆಗಳನ್ನು ಮಾತ್ರ ಅನುಸರಿಸಿ ನುಡಿಯಬೇಕು. ಮಂತ್ರಪಾಠಕ್ಕೆ ಸಲ್ಲುವ ಈ ಅನುಕೂಲವನ್ನು ಲೌಕಿಕ ಸಂಗೀತ ಕ್ರಮಕ್ಕೆ ಒದಗಿಸಿಕೊಡುವ ಪುಣ್ಯಾತ್ಮರು ಮಾತ್ರ ಹುಟ್ಟಬರಬೇಕು.

ಸರ್ ರಾಮನರಾಡಿದ ಅನೇಕ ಬೆಲೆಯುಳ್ಳ ಮಾತುಗಳಲ್ಲಿ ಕೆಲವನ್ನು ಮಾತ್ರ ಆಯ್ದು ಇಲ್ಲಿ ಒಟ್ಟಾಗಿ ನಿರ್ದೇಶಿಸಿದೆ. ದಾಕ್ಷಿಣಾತ್ಯ ಸಂಗೀತಪದ್ಧತಿ ಒಂದು ಘಟ್ಟಕ್ಕೆ ಮುಟ್ಟಿ ಬೆಳೆಯದೆ ನಿಂತುಹೋಗಿದೆಯೆಂಬ ಭಯ ಹಲವರಿಗೆ ಇದ್ದೇ ಇದೆ. ಈ ಸಂಪ್ರದಾಯವನ್ನೂ ಶುದ್ಧವಾಗಿ ಅನುಸರಿಸುವ ಬುದ್ಧಿ ಹಲವು ಕಡೆ ಕಡಮೆಯಾಗುತ್ತಿದೆ. ಉತ್ತರದ ಅಥವಾ ವಿದೇಶ ಪದ್ಧತಿಗಳು ಬೆರಕೆಯಾಗುತ್ತಿವೆ. ಕರ್ನಾಟಕ ಸಂಗೀತವೆಂದು ಹೆಸರಾದ ದಕ್ಷಿಣ ಪದ್ಧತಿಯಲ್ಲಿಯೂ ಸೃಷ್ಟಿಸಂಗೀತ ಹೊಸ ವಿಧಾನಗಳಲ್ಲಿ ರೂಪುಗೊಳ್ಳಬೇಕಾಗಿದೆ. ಮೂಲ ತತ್ವಗಳನು

ಚೆನ್ನಾಗಿ ಅರಿತುಕೊಂಡು ಒಂದು ನವ್ಯವಾದ ಪತ್ರಿಭಾಸಂಪತ್ತಿಯಿಂದ ಅದಕ್ಕೆ ಹೊಸ ಜಾಡುಗಳೊಡಸಿ ಹೊಸ ಆದರ್ಶಗಳ ಕಡೆ, ಅದು ಮುಂದುವರಿಯುವಂತೆ ಹೇಗೆ ಮಾಡಬೇಕು ಎಂಬ ಪರೀಕ್ಷಣಪ್ರಯೋಗ ತಜ್ಞರಿಂದ ಮಾತ್ರ ಆದೀತು. ಈಗಿನ ದಾರಿಯಲ್ಲಿಯೇ ನಡೆವುದೆಂದರೆ ಬೆಳವಣಿಗೆ ಪರಮಾವಧಿ ಆಗಿಹೋಗಿದೆಯೊ ಏನೊ ಎನ್ನುವಷ್ಟು ಮಟ್ಟಿಗೆ ಆ ವಿಧಾನಗಳ ಪ್ರಯೋಗ ನಡೆದು ಅದರ ಮಿತಿಗೆ ನೂಕಿ ತಡೆದುನಿಂತಿದೆ. ಅದೇ ಗಿಡದಲ್ಲಿ ಹೊಸಕುಡಿ ಒಡಸುವುದು ಹೇಗೆ? ಎಂಬುದು ಇಂದಿನ ಪ್ರಶ್ನೆ. ಶಾಸ್ತ್ರದ ತಿಳಿವಳಿಕೆ ಮತ್ತು ಹಾಡುವ ಅಭ್ಯಾಸ ಇರುವವರಿಗೆ ನಿರ್ಮಾಣ ದೃಷ್ಟಿ ಇಲ್ಲದಿರುವುದರಿಂದಲೊ, ನಿರ್ಮಾಣಶಕ್ತಿ ಇರುವವರಿಗೆ ಶಾಸ್ತ್ರ ಜ್ಞಾನವಿಲ್ಲದಿರುವುದರಿಂದಲೊ ಬೆಳವಣಿಗೆ ತಡೆದಿದೆ. ತಡೆಯನ್ನು ನೂಕಿ ಮುಂದೆ ನಡೆಯಬೇಕಾದ ಅಗತ್ಯ ಇದೆಯೆಂಬುದು ಸಂಗೀತ ಕೇಳಿದವರೆಲ್ಲರಿಗೂ ಗೊತ್ತಿರುವುದೇ. ಮಮತೆ ಪಕ್ಷಪಾತಗಳ ಆವೇಶದಲ್ಲಿ ಚರ್ವಿತಚರ್ವಣವನ್ನು ಅಥವಾ ಸಾಧನೆಯಿಂದ ಬಂದ ನುಣುಪನ್ನು ಮೆಚ್ಚಿಕೊಂಡರೂ ಹೊಸದು ಕಂಡೀತೇ ಎಂಬ ಹಂಬಲವಂತೂ ಸ್ಪಷ್ಟವಾಗಿದೆ. ಶಾಸ್ತ್ರ ಶಾಸ್ತ್ರವಾಗಿ ಉಳಿದು ಗ್ರಂಥಸಿದ್ಧಿ ಪಡೆದುಬಿಟ್ಟರೆಯೊ ಅಥವಾ ವಾದದಿಂದ ಸ್ಥಾಪಿತವಾದರೆಯೊ ಸಾಲದು—ಸಂಗೀತದಂತಹ ಕಲೆಗಳಲ್ಲಿ. ತಕ್ಷಣ ಫಲವನ್ನು ಕೊಟ್ಟು ತನ್ನ ಮೇಲ್ಮೆಯನ್ನು ತನ್ನಿಚ್ಛೆಗೆ ಒಳಪಡುವಂತೆ ಸ್ಥಾಪಿಸಿ ಒಂದು ನಿಮಿಷದಲ್ಲಿ ಬೇರೆ ಬೇರೆ ಒಲವು ಬಗೆಗಳುಳ್ಳ ಸಾವಿರ ಜನರ ಮನಸ್ಸನ್ನು ಬಂದಿ ಹಿಡಿದು ಒಪ್ಪಿಸಬಲ್ಲ ಕಂಠಶ್ರೀಯಾಗಿ ಅದು ರೂಪುಗೊಂಡು ಕಾರ್ಯಕಾರಿಯಾಗಬೇಕು. ಇಂತಹ ಮಾತನ್ನು ಅಧಿಕಾರವಾಣಿಯಿಂದ ಮತ್ತು ಹಿತದೃಷ್ಟಿಯಿಂದ ಆಡಿರುವ ಮಾನ್ಯರಿಗೆ ನಮ್ಮ ವಂದನೆಗಳು ಸಲ್ಲುತ್ತವೆ.

## ಪರಿಷತ್ತಿನ ಸುದ್ದಿ

### ಪರಿಷತ್ತಿನ ಸದಸ್ಯರ ಬೆಳವಣಿಗೆ

(ತಾ. ೪–೩–೪೩ರಿಂದ ೧೧–೩–೪೩ರ ವರೆಗೆ)

**ಸಹಾಯಕ ಸದಸ್ಯರು (೧೦೦ ರೂ.) :** ೧. ಶ್ರೀ.ಗಳಾದ ಜಿ. ಸುಬ್ಬರಾಯರು, ಬಿ.ಎ., ಬಿ.ಇ., ಎ.ಎಂ.ಐ.ಇ., ಸಹಾಯಕ ಕಾರ್ಯದರ್ಶಿಗಳು, ಪಿ. ಡಬ್ಲ್ಯು. ಡಿ., ಬೆಂಗಳೂರು. ೨. ಬಿ.ಎನ್. ಶ್ರೀನಿವಾಸಯ್ಯನವರು, ಎಂ.ಎಸ್‌ಸಿ., ಆರ್.ಎ.ಎಫ್. ಮೀಟಿಯೊ ರಾಲಜಿಸ್ಟ್, ಬೆಂಗಳೂರು. ೩. ರಾಜಸಭಾಭೂಷಣ ಸರ್ ಸಿ. ವಿ. ರಾಮನ್, ಡಿ.ಎಸ್‌ಸಿ., ಎಫ್.ಆರ್.ಎಸ್., ಎನ್.ಎಲ್. ಅವರು. ಭೌತಶಾಸ್ತ್ರದ ಪ್ರಧಾನ ಅಧ್ಯಾಪಕರು, ತಾತಾ ವಿಜ್ಞಾನ ಮಂದಿರ, ಬೆಂಗಳೂರು. ೪. ಬಿ.ಎಸ್. ಸೂರ್ಯನಾರಾಯಣ ಅವರು, ಬಿ.ಎ., ಬಿ.ಎಸ್‌ಸಿ., ಮ್ಯಾಜಿಸ್ಟ್ರೇಟರು, ಬೆಂಗಳೂರು. ೫. ಬಿ. ಪುಟ್ಟಯ್ಯನವರು, ಬಿ.ಎ., ಗೌ|| ಪ್ರೆಸ್ಸಿನ ನಿವೃತ್ತ ಸೂಪರಿಂಟೆಂಡೆಂಟರು, ಚಾಮರಾಜಪೇಟೆ, ಬೆಂಗಳೂರು. (ಆಜೀವ ಸದಸ್ಯತ್ವದಿಂದ ಬದಲಾವಣೆ).

**ಸಾಮಾನ್ಯ ಸದಸ್ಯರು (೬ ರೂ.) :** ಶ್ರೀ.ಗಳಾದ ೧. ಬಿ. ಶ್ರೀನಿವಾಸ ಅಯ್ಯಂಗಾರ್ ಅವರು, ಓರಿಯಂಟಲ್ ಲೈಫ್ ಇನ್ಷೂರೆನ್ಸ್ ಕಂಪೆನಿಯ ಪ್ರತಿನಿಧಿಗಳು, ಶಂಕರಪುರ, ಬೆಂಗಳೂರು. ೨. ಡಿ. ಸುಬ್ಬರಾಯರು, ಬಿ.ಇ., ಹಿಂದೂಸ್ತಾನ್ ಏರ್‌ಕ್ರಾಫ್ಟ್ ಕಂಪನಿ, ಬೆಂಗಳೂರು.

**ಸಾ. ಸದಸ್ಯರು (೩ ರೂ.) :** ಶ್ರೀ.ಗಳಾದ ೧. ಎಂ. ಎಸ್. ಸುಬ್ರಹ್ಮಣ್ಯಶಾಸ್ತ್ರಿಗಳು, ಚಾಮರಾಜಪೇಟೆ, ಬೆಂಗಳೂರು. ೨. ಕೆ. ಮಾಧವರಾಯರು, ರಿ||ಅ||ಕಮಿಷನರ್, ಬಸವನಗುಡಿ, ಬೆಂಗಳೂರು. ೩. ಕೆ. ಚೆಲುವಯ್ಯನವರು, ರಿ|| ಪೋಲೀಸ್ ಇನ್ಸ್‌ಪೆಕ್ಟರು, ಬಸವನಗುಡಿ, ಬೆಂಗಳೂರು.

### ರಾಮಾಯಣದ ಸೊಗಸು

ಮೈಸೂರು ಪ್ರಾಂತಸಮಿತಿಯ ಆಶ್ರಯದಲ್ಲಿ ೩–೩–೪೩ನೆಯ ಬುಧವಾರ ಸಂಜೆ ಪರಿಷನ್ಮಂದಿರದಲ್ಲಿ ರಾಜಸೇವಾಪ್ರಸಕ್ತ ಶ್ರೀಮಾನ್ ಎ. ಎನ್. ರಾಘವಾಚಾರ್ಯರು 'ರಾಮಾಯಣದ ಸೊಗಸು' ಎಂಬ ವಿಚಾರವಾಗಿ ಉಪನ್ಯಾಸ ಮಾಡಿದರು. ನಿವೃತ್ತ ಶಿಕ್ಷಣಾಧಿಕಾರಿಗಳಾದ ಶ್ರೀ. ಸಿ. ಎಂ. ವಿಜಯರಾಘವಾಚಾರ್ಯರು ಅಧ್ಯಕ್ಷತೆ ವಹಿಸಿದ್ದರು.

ಉಪನ್ಯಾಸಕರು ತಮ್ಮ ಭಾಷಣದಲ್ಲಿ ಆದಿಕಾವ್ಯವಾದ ರಾಮಾಯಣದ ಸರಳವಾದ ಭಾಷೆ, ಮಿತವಾದ, ಆದರೆ ಅರ್ಥಗರ್ಭಿತವಾದ ವಾಕ್ಸರಣಿ, ಸಂಭಾಷಣೆಯ ಚಮತ್ಕಾರ, ಪಾತ್ರರಚನಾಕೌಶಲ, ಭಾವರಸಗಳ ಮಹೋನ್ನತಿ ಮುಂತಾದುವನ್ನು ಸ್ವಾರಸ್ಯವಾಗಿ ನಿರೂಪಿಸಿದರು.

ಅಧ್ಯಕ್ಷರು ತಮ್ಮ ವಿಚಾರಪೂರ್ಣವಾದ ಭಾಷಣದಲ್ಲಿ ರಾಮಾಯಣದಲ್ಲಿಯ ಧರ್ಮದೃಷ್ಟಿಯನ್ನೂ ಕಾವ್ಯದಿಂದ ಸಮಾಜ ಕಲಿಯಬೇಕಾದ ನೀತಿಯನ್ನೂ ಪ್ರತಿಪಾದಿಸಿದರು.

### ಮಾನವನ ಕಂಠದಲ್ಲಿನ ವಾದ್ಯಧರ್ಮ

೫–೩–೪೩ನೆಯ ಶುಕ್ರವಾರ ಪರಿಷನ್ಮಂದಿರದಲ್ಲಿ ರಾಜಸಭಾಭೂಷಣ ಸರ್ ಸಿ. ವಿ. ರಾಮನ್, ಎನ್.ಎಲ್. ಅವರು ಮಾನವನ ಕಂಠದಲ್ಲಿನ ವಾದ್ಯ ಧರ್ಮ (Human Voice as a Musical Instrument) ಎಂಬ ವಿಷಯವನ್ನು ಕುರಿತು ಇಂಗ್ಲಿಷಿನಲ್ಲಿ ಉಪನ್ಯಾಸ ಮಾಡಿದರು.

ಮೈಸೂರು ಸಂಸ್ಥಾನದ ಅರ್ಥಸಚಿವರಾದ ಶ್ರೀ. ಕೆ.ವಿ. ಅನಂತ ರಾಮನ್, ಬಿ.ಎ. ಅವರು ಅಧ್ಯಕ್ಷತೆ ವಹಿಸಿದ್ದರು.

ಉಪನ್ಯಾಸ ಪ್ರಾರಂಭಕ್ಕೆ ಮೊದಲು ಮೈಸೂರು ಪ್ರಾಂತ ಸಮಿತಿಯ ಅಧ್ಯಕ್ಷರಾದ ಶ್ರೀ. ಸಿ. ಕೆ. ವೆಂಕಟರಾಮಯ್ಯನವರು ಅಧ್ಯಕ್ಷರನ್ನೂ ಉಪನ್ಯಾಸಕರನ್ನೂ ಸಭೆಗೆ ಪರಿಚಯಮಾಡಿಕೊಡುತ್ತ, ಇಬ್ಬರ ಜ್ಞಾನಾನುಭವಗಳನ್ನು ಕೊಂಡಾಡಿದರು.

ಕೊನೆಗೆ ಪರಿಷತ್ತಿನ ಉಪಾಧ್ಯಕ್ಷರಾದ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರರು ಉಪನ್ಯಾಸಕರಿಗೂ ಅಧ್ಯಕ್ಷರಿಗೂ ಧನ್ಯವಾದಗಳನ್ನು ಸಮರ್ಪಿಸಿ ಈ ಮಹನೀಯರು ಆಗಿಂದಾಗ್ಗೆ ಪರಿಷತ್ತಿಗೆ ದಯಮಾಡಿಸಿ ತಮ್ಮ ಜ್ಞಾನಾನುಭವಗಳ ಫಲವನ್ನು ಮಹಾಜನರಿಗೆ ಒದಗಿಸಿಕೊಡಬೇಕೆಂದು ಪ್ರಾರ್ಥಿಸಿದರು.

ಪರಿಷತ್ತು ತನ್ನ ಕೆಲಸಗಳನ್ನು ಇನ್ನೂ ವಿಸ್ತರಿಸಲು ಅನುಕೂಲಿಸುವಂತೆ ಸಂಸ್ಥೆಗೆ ಸದಸ್ಯರಾಗಿ ದ್ರವ್ಯಸಹಾಯ ಮಾಡಬೇಕೆಂದು ಅಭಿಮಾನಿಗಳನ್ನು ಪ್ರಾರ್ಥಿಸುತ್ತಿದೆಯೆಂದು ಹೇಳಿ ಸರ್ ರಾಮನ್ ಅವರು ೧೦೦ ರೂ.ಗಳನ್ನು ಸಭೆಗೆ ಬರುವಾಗಲೆ ತಂದುಕೊಟ್ಟದ್ದಾರೆ ಎಂದು ಅವರ ಉದಾರವಾದ ದಾನವನ್ನು ಪ್ರಕಟಪಡಿಸಿದರು. ಶ್ರೀ. ಅನಂತರಾಮನ್ ಅವರು ಸಹಾಯಕ ಸದಸ್ಯರಾಗಿರಲು ಸಮ್ಮತಿಸಿದ್ದಾರೆ ಎಂದು ಹೇಳಿ ಮಾನ್ಯ ಅತಿಥಿಗಳಿಬ್ಬರಿಗೂ ಅವರ ಔದಾರ್ಯಕ್ಕಾಗಿ ಪರಿಷತ್ತಿನ ಧನ್ಯವಾದಗಳನ್ನು ಸಮರ್ಪಿಸಿದರು.

### ಮಹಿಳಾ ಶಾಖೆ

೭–೩–೧೯೪೩ನೆಯ ಭಾನುವಾರ ಸಂಜೆ ಶ್ರೀಮತಿ ಎ. ಶೇಷಮ್ಮನವರ ಅಧ್ಯಕ್ಷತೆಯಲ್ಲಿ ಶ್ರೀಮತಿ ಜಯಮ್ಮನವರು ಭಾಷಣ ಮಾಡಿದರು. ಉಪನ್ಯಾಸಕರು ತಮ್ಮ ಭಾಷಣದಲ್ಲಿ ಈ ರೀತಿ ತಿಳಿಸಿದರು :

"ನಮ್ಮ ಹೆಣ್ಣುಮಕ್ಕಳಿಗೆ ಈಗ ದೊರೆಯುತ್ತಿರುವ ವಿದ್ಯಾಭ್ಯಾಸದಲ್ಲಿ ಹಲವು ಲೋಪದೋಷಗಳಿವೆ. ನಾಲ್ಕು ಐದು ವರ್ಷ ನಡೆಯುವ ಈ ವಿದ್ಯಾಭ್ಯಾಸಕ್ರಮದಲ್ಲಿ ಮುಂದೆ ಗೃಹಿಣಿಯರಾಗುವ ಇವರಿಗೆ ಯಾವ ಶಿಕ್ಷಣವೂ ಸಿಗದೆಹೋಗುವುದು ವಿಷಾದಕರ. ಈಗಿನ ಕಲಿತ ಹೆಣ್ಣುಮಕ್ಕಳು ಕೇವಲ ದುರ್ಬಲರಾಗುವುದನ್ನು ಮಾತ್ರ ನಾವು ಹಲವರು ಮನಗಂಡಿದ್ದೇವೆ. ದೃಢಕಾಯರಾಗಿ ಮುಂದೆ ತಮ್ಮ ಮೇಲೆ ಬೀಳುವ ಒಕ್ಕಲತನದ ಹೊಣೆಗಾರಿಕೆಯನ್ನು ಅಚ್ಚುಕಟ್ಟಾಗಿ ನಿರ್ವಹಿಸಲು ಶಕ್ತರಾಗುವಂತೆ ತಾಯುಂದಿರೆಲ್ಲರೂ ಸೇರಿ ಆಲೋಚಿಸಿ ಇಂದಿನ ವಿದ್ಯಾಭ್ಯಾಸಕ್ರಮದಲ್ಲಿ ಮಾರ್ಪಾಟುಗಳನ್ನು ಸೂಚಿಸಿ ಅವನ್ನು ಕಾರ್ಯರೂಪಕ್ಕೆ ತರಬೇಕು."

ವಂದನಾಸಮರ್ಪಣೆಯೊಡನೆ ಸಭೆ ಮುಕ್ತಾಯವಾಯಿತು.

# ಅಭಿಜ್ಞಾನ ಶಾಕುನ್ತಲ ನಾಟಕ

## ಮೂಲ ಕಥೆ

ಮಹಾಭಾರತ ಆದಿಪರ್ವದ ಉಪಾಖ್ಯಾನದಲ್ಲಿನ ಕಥೆಯೊಂದನ್ನು ಕಂಡ ಕವಿ ಅದನ್ನು ನಾಟಕಕ್ಕಾಗಿ ಆರಿಸಿಕೊಂಡನು. ಏಳಂಕದ ಲೋಕವಿಖ್ಯಾತ ನಾಟಕವನ್ನು ಬರೆದನು. ಆಖ್ಯಾನ ಶಕುನ್ತಲೋಪಾಖ್ಯಾನ. ನಾಟಕ ಅಭಿಜ್ಞಾನ ಶಾಕುನ್ತಲ. ನಾಟಕವನ್ನು ರಚಿಸಿದ ಕವಿ ಕಾಳಿದಾಸ. ಭಾರತದಲ್ಲಿ ಶಕುನ್ತಲೆಯ ಕಥೆಯಂತಹ ಕಥೆಗಳು ನೂರಾರು. ಇತಿಹಾಸ ಕವಿಗೆ ಅದಲ್ಲ ಮುಖ್ಯ ವಿಷಯ. ಮುಖ್ಯ ಕಥೆಯ ಓಟದಲ್ಲಿ ಅಲ್ಲಲ್ಲಿ ಇಂತಹ ಉಪಕಥೆಗಳು ಬರುವುವು. ಆತನು ಅವನ್ನು ಹೇಳಿ ಮುಗಿಸುವನು. ಆಕೃತಿಗೊಂಡಾಗ ಅವು ದೊಡ್ಡ ಉಳಿಯ ಪೆಟ್ಟು ರೂಪಿಸಿದ ಘನಾಕೃತಿಗಳು. ಆ ಮೂಲ ಸನ್ನಿವೇಶವು ಈಚಿನ ಕವಿಗೆ ಆವೇಶ ಸಾಮಗ್ರಿ; ಮುಖ್ಯ ವಿಷಯ. ಮಹಾಭಾರತ ಕಾಲಕ್ಕೆ ಬಹಳ ಹಿಂದೆ ನಡೆದು ಹೆಸರಾದ್ದು ಶಕುನ್ತಲೆಯ ಸಂಗತಿ. ಚಂದ್ರವಂಶದಲ್ಲಿ ಹುಟ್ಟಿದ ಯಯಾತಿ ಮುಂತಾದವರು ಆಗಿಹೋಗಿದ್ದರೂ ಭರತ ಚಕ್ರವರ್ತಿ ಇನ್ನೂ ಹುಟ್ಟಿರಲಿಲ್ಲ; ಆ ಭರತನ ತಾಯಿ ತಂದೆಯರ ಕಥೆ ಶಕುನ್ತಲೆ ದುಷ್ಯನ್ತರ ಕಥೆ. ಭರತನ ವಂಶದಲ್ಲಿ ಹುಟ್ಟಿದ ಕೌರವ ಪಾಂಡವ ಮತ್ತು ಅವರಿಗೆ ಸಂಬಂಧಿಸಿದವರ ಮಹಾ ಚರಿತ್ರೆ ಮಹಾಭಾರತ. ಎಂದರೆ, ಮಹಾಭಾರತ ಕಥೆಯ ಕಾಲಕ್ಕೆ ಬಹು ಹಿಂದೆ ನಡೆದಿದ್ದ ಒಂದು ಸಂಗತಿಯನ್ನು ಇತಿಹಾಸ ಕವಿ ತನ್ನ ಚೌಕಟ್ಟಿನ ಚಿತ್ರವಾಗಿರಿಸಿದರೆ ಈಚಿನ ಕಾಲದವನಾಗಿ ನಾಗರಿಕ ಪ್ರಪಂಚದಲ್ಲಿ ಅತಿಶಯ ಸೌಂದರ್ಯ ವಿಲಾಸಗಳನ್ನೂ ವೈಭವವನ್ನೂ ವ್ಯವಹಾರದ ಜಾಣತನ ರೀತಿ ನೀತಿಗಳನ್ನೂ ಕಲೆಯ ಮರ್ಮವನ್ನೂ ಬಲ್ಲ ಜನೆಯ ಶತಮಾನದ ಕವಿ, ಗುಪ್ತರ ಸ್ವರ್ಣಾಬ್ದದಲ್ಲಿ ನಾಟಕ ರೂಪದಲ್ಲಿ ವಿರಚಿಸಿದನು. ಕಥೆಯ ಕಾಲಕ್ಕೆ ಈಚಿನದು ಇತಿಹಾಸದ ಯುಗ; ಅಲ್ಲಿಂದ ಚರಿತ್ರೆಯ ಗೊತ್ತಿಗೆ ಸಿಕ್ಕುವ ಗುಪ್ತರ ನಾಗರಿಕತೆಯ ಕಾಲ; ಇವುಗಳಿಗಿರುವ ವ್ಯತ್ಯಾಸವನ್ನೂ ಅಂತರವನ್ನೂ ಚಿತ್ರಿಸಿಕೊಳ್ಳಬೇಕು ಓದುವವರು. ಆ ಯುಗಗಳ ತಾರತಮ್ಯವೇ ಕವಿ ಕಾವ್ಯ ವೃಷ್ಟಿಗಳ ತಾರತಮ್ಯ.

ಆಗಿನ ಕಾಲಕ್ಕೆ ಕಾವ್ಯ ಸಂಪ್ರದಾಯ ರೂಪುಗೊಂಡಿತ್ತೆನ್ನಿಸುತ್ತದೆ. ಕಾಳಿದಾಸ ಕವಿ ಆಗಿನ ಮೃದುಸಂಸ್ಕಾರದ ಹೃದಯವನ್ನು ಅರಿತವನು. ತನ್ನ ಕಾಲದ ಕಲಾವಿಲಾಸವನ್ನೆಲ್ಲ ಬಲ್ಲವನು. ತನ್ನ ಬದುಕಿನಲ್ಲಿ ಅದರ ಸವಿಯನ್ನು ಅನುಭವಿಸಿದವನು; ರಾಜರ, ವಿದ್ವಾಂಸರ, ರಸಜ್ಞರ ಮನ್ನಣೆ ವಿಶ್ವಾಸಗಳನ್ನು ಪಡೆದವನು. ಭಾವಕವಿತೆ ಕಥಾಕಾವ್ಯ ಶೃಂಗಾರಪ್ರಧಾನ ನಾಟಕಗಳನ್ನು ಬರೆದು ಈವರೆಗಾಗಲೇ ಕವಿತೆಯಲ್ಲಿ ನುರಿತವನು. ಆತನ ಮನಸ್ಸಿಗೂ ಲೋಕಾನುಭವಕ್ಕೂ ಭಾವಸಂಪತ್ತಿಗೂ ಕೈಗೂ ಒಂದು ನುರಿತ, ನುಣುಪು, ತುಂಬು ಬಂದಿದ್ದವಾಗಿ ಆತನ ಕವಿತಾಶಕ್ತಿಯ ಪರಿಪೂರ್ಣಫಲ ಶಾಕುನ್ತಲ ನಾಟಕದಲ್ಲಿ ಕಾಣುವುದು. ಆತನ ಕವಿತಾಶಕ್ತಿ ನಾಟಕಕ್ಕೆ ಎಷ್ಟು ತುಂಬು ತಂದುಕೊಟ್ಟಿದೆಯೆಂಬುದನ್ನು ಓದಿದವರೆಲ್ಲ ಹೆಜ್ಜೆ ಹೆಜ್ಜೆಗೂ ಕಾಣುವರು.

ಉಪಾಖ್ಯಾನದ ಕಥೆಯದು, ನಿರಾಭರಣ ಸೌಂದರ್ಯ. ಮುಚ್ಚುಮರೆಯ ಕುಸರಿಗಳಿಲ್ಲದೆ ಕಥಾನಕದ ವರದಿ ಮಾತ್ರ ಅದು. ಸಾಧಾರಣ ಮಾನವೀ ಕಥೆ.

ಬೇಟೆಗಾಗಿ ಹೋಗಿದ್ದ ರಾಜ ಮಧ್ಯಾಹ್ನ ಆಯಾಸ ಹೊಂದಿ ರಮ್ಯವಾದ ಕಣ್ವಾಶ್ರಮ ಎದುರಿಗೆ ಕಾಣಿಸಲು ಅಲ್ಲಿ ಹೋಗುವನು. ಆಶ್ರಮದಲ್ಲಿ ಯಾರೂ ಇಲ್ಲದಿರುವಂತೆ ಕಂಡಿತು. ಒಳಗೆ ಯಾರು? ಎಂದು ಕಾಡು ಸನ್ನಾದಗೊಳ್ಳುವಂತೆ ಕೂಗುವನು. ಸಾಕ್ಷತ್ ಸಿರಿಯಂತಿದ್ದ ಸೊಬಗಿ ಕನ್ನಿಕೆ ಒಬ್ಬಳು ಹೊರಕ್ಕೆ ಬಂದು, 'ತಂದೆ ಕಣ್ವರು ಆಶ್ರಮದಲ್ಲಿಲ್ಲ; ಹಣ್ಣು ತರಲು ಹೋಗಿದ್ದಾರೆ. ಬನ್ನಿ, ಒಂದು ಕ್ಷಣ ಕಾದರೆ ಹಿಂದಿರುಗುತ್ತಾರೆ; ತಮಗೇನಾಗ ಬೇಕಾಗಿದೆ?' ಎನ್ನುವಳು. ಆಕಾರ ಲಕ್ಷಣ ವೇಷಗಳಿಂದ ಆತನು ರಾಜನೆಂಬ ಅರಿವು ಆಕೆಗೆ ಆಗುವುದು. ಆಕೆಯ ಚೆಲುವಿಗೆ ಸೋತ ರಾಜನು, 'ನೀನಾರು? ಇಲ್ಲಿ ಏಕೆ ಬಂದಿದ್ದೀಯೆ?' ಎಂದು ಕೇಳಲು ತಾನು ಕಣ್ವರ ಸಾಕುಮಗಳೆಂದೂ ಹಿಂದೆ ಒಂದು ಸಮಯದಲ್ಲಿ ಈ ಪ್ರಶ್ನೆಯನ್ನು ಕೇಳಿದ ಒಬ್ಬ ಋಷಿಗೆ ಕಣ್ವರು ತನ್ನ ಹುಟ್ಟಿನ ಕಥೆ ಹೇಳಿದ್ದುದನ್ನೂ ವಿವರಿಸುವಳು. ಕ್ಷತ್ರಿಯಳಲ್ಲದವಳಲ್ಲಿ ತನ್ನ ಮನಸ್ಸು ತೊಡಗದೆಂದು ತಿಳಿದಿದ್ದ ರಾಜನಿಗೆ ಈ ಸಂಗತಿಯನ್ನು ಕೇಳಿ ಆಕೆಯಲ್ಲಿ ಅಭಿಲಾಷೆ ಉಂಟಾಯಿತು. 'ನೀನು ರಾಜಪುತ್ರಿ ಎಂಬುದು ಸುವ್ಯಕ್ತವಾಗಿದೆ; ನನ್ನ ಭಾರ್ಯೆಯಾಗು, ನನ್ನ ಸಮಸ್ತ ರಾಜ್ಯವೂ ನಿನ್ನದು. ಶ್ರೇಷ್ಠವಾದ ಗಾಂಧರ್ವ ವಿಧಿಯಿಂದ ನನ್ನನ್ನು ಸ್ವೀಕರಿಸು' ಎನ್ನುತ್ತಾನೆ. 'ನನ್ನ ತಂದೆಯೇ ನನಗೆ ಒಡೆಯ; ನನ್ನ ಪರಮದೇವತೆ; ತಂದೆ ನನ್ನನ್ನು ಯಾರಿಗೆ ಕೊಡುತ್ತಾರೊ ಆತನು ನನ್ನ ಭರ್ತನಾಗುವನು. ಹೆಂಗಸು ಸ್ವತಂತ್ರಳಲ್ಲ; ತಪಸ್ವಿಯಾದ ತಂದೆಯನ್ನು ಮಾನ್ಯ ಮಾಡದೆ ಅಧರ್ಮದಿಂದ ನಾನು ಹೇಗೆ ನಿನ್ನನ್ನು ವರಿಸಲಿ?' ಎನ್ನುವಳು.

ಮಹಾ ಉಕ್ತಿ ಒಂದು ಆಗ ರಾಜನ ಬಾಯಿಂದ ಹೊರಡುವುದು:

ಆತ್ಮನೋ ಬಂಧುರಾತ್ಮೈವ ಗತಿರಾತ್ಮೈವ ಚ ಆತ್ಮನಃ
ಆತ್ಮನೈವ ಆತ್ಮನೋ ದಾನಂ ಕರ್ತುಮರ್ಹಸಿ ಧರ್ಮತಃ

'ನೀನು ಹೇಳುವುದು ಸತ್ಯವಾದರೆ, ಧರ್ಮವಾದರೆ, ನನ್ನ ಮೇಲೆ ನನಗೆ ಒಡೆತನವಿರುವುದಾದರೆ ನನ್ನ ಒಂದು ಸಮಯವನ್ನು ಪಾಲಿಸು, ನಿನ್ನವಳಾಗುವೆನು; ನನ್ನಲ್ಲಿ ಹುಟ್ಟುವ ಮಗನು ನಿನ್ನ ತರುವಾಯ ರಾಜನಾಗಬೇಕು. ಜೊತೆಗೆ

ವೈವಾಹಿಕೀಂ ಕ್ರಿಯಾಂ ಸನ್ತಃ ಪ್ರಶಂಸನ್ತಿ ಪ್ರಜಾಹಿತಾಮ್
ಲೋಕಪ್ರವಾದ ಶಾನ್ತ್ಯರ್ಥಂ ವಿವಾಹಂ ವಿಧಿನಾ ಕುರು'

ಎಂದುದನ್ನು ಕೇಳಿದ ರಾಜನಿಗೆ ಸಂದೇಹ ಉಳಿಯಲಿಲ್ಲ. ತನ್ನೊಡನೆ ಹೋಗಿದ್ದ ಪುರೋಹಿತನನ್ನು ಕರೆದು ವಿಧಿವತ್ತಾಗಿ ಆ 'ಅನಿಂದಿತಗಾಮಿನಿ'ಯ ಪಾಣಿಗ್ರಹಣ ಮಾಡಿ ಮದುವೆನಿಂತನು; ಆಕೆಯೊಡನಿದ್ದನು. ರಾಜಧಾನಿಗೆ ಹಿಂದಿರುಗಬೇಕಾಗಲು

ಪ್ರೇಷಯಿಷ್ಯೇ ತವಾರ್ಥಾಯ ವಾಹಿನೀಂ ಸೂತ ಮಾಗಧೈಃ
ಸರ್ವಮಂಗಲ ಸತ್ಕಾರ್ಯೈಃ ಪ್ರಾಪಯಿಷ್ಯೇ ನೃಪಾತ್ಮಜೇ

ಎಂದು ಹೇಳಿ ಹೋಗುವನು.

ಇದಾದ ತರುವಾಯ ಕಣ್ವರು ಆಶ್ರಮಕ್ಕೆ ಬಂದರು. ಶಕುನ್ತಲೆಗೆ ನಾಚಿಕೆ. ತಂದೆಯ ಬಳಿಗೆ ಹೋಗಲಿಲ್ಲ; ಅದನ್ನು ಕಂಡ ಅವರು ಕಾರಣವೇನೆಂದು ಕೇಳಿದರು. ನಡೆದುದನ್ನು ಹೇಳು, ಮನಸ್ಸಿಗೆ ಯಾವ ಭಯವೂ ಬೇಡ ಎಂದರು. ವ್ರೀಡೆಯಿಂದ ಇನ್ನೂ ಚೆಲುವಾಗಿ ಕಾಣುತ್ತ ಆಕೆ ಹೇಳಿದಳು:

ತಾತ, ಸರ್ವಂ ತು ಯದ್ವೃತ್ತಂ ದಿವ್ಯಜ್ಞಾನೇನ ಪಶ್ಯಸಿ
ಅಭಯಂ ಕ್ಷತ್ರಿಯ ಕುಲೇ ಪ್ರಸಾದಂ ಕರ್ತುಮರ್ಹಸಿ

ಎಂದು ಬೇಡಿದಳು. ಆ ಕಾಶ್ಯಪರಿಗೆ ಧ್ಯಾನಗಮ್ಯವಾದ ವೃತ್ತಾಂತ ತಿಳಿದು ಸಂತೋಷವೇ ಆಯಿತು. ಆಕೆಯನ್ನು ಪ್ರೀತಿಯಿಂದ ಮುಟ್ಟಿ ಪರಿಶುದ್ಧಳನ್ನಾಗಿ ಮಾಡಿದರು. 'ಭಯಕ್ಕೆ ಕಾರಣವಿಲ್ಲ; ಶೋಕಿಸದಿರು; ಒಳ್ಳೆಯದೇ ಆಯಿತು. ಕ್ಷತ್ರಿಯನಿಗೆ ಗಾಂಧರ್ವ ಸಲ್ಲುವುದು: ದುಷ್ಯನ್ತನು ಧರ್ಮಾತ್ಮನು – ಮಹಾಪುರುಷನು; ವಿಧಿವತ್ತಾಗಿ ವಿವಾಹ ನಡೆದಿದೆ. ನಿನ್ನ ಹೊಟ್ಟೆಯಲ್ಲಿ ಹುಟ್ಟುವ ಮಗನು ಮಹಾತ್ಮನೂ, ಮಹಾಯಶನೂ ಆಗುತ್ತಾನೆ. ಇಂದಿನಿಂದ ನೀನು ದುಷ್ಯನ್ತನ ದೇವಿ. ಪತಿವ್ರತೆಯರದು ಯಾವ ನಡತೆಯೋ, ಆ ವೃತ್ತಿಯನ್ನು ನೀನು ಅನುಪಾಲಿಸು' ಎನ್ನುವರು. ತಂದೆಯ ಪವಿತ್ರ ಸ್ಪರ್ಶ ಮಾತ್ರದಿಂದ ಆಕೆಗೆ ಅತಿಶಯವಾದ ಹರ್ಷವುಂಟಾಯಿತು.

ದುಷ್ಯನ್ತನು ವಾಗ್ದಾನ ಮಾಡಿ ಊರಿಗೆ ಹೊರಡುವಾಗ್ಗೆ ಸತ್ವಗೊಂಡಿದ್ದ ಆತನ ಅಂಶ – ಈಕೆಯ ಗರ್ಭದಲ್ಲಿ ಬೆಳೆಯಿತು. ಮೂರು ವರ್ಷಗಳ ತರುವಾಯ ಆಕೆ ಗಂಡು ಮಗುವನ್ನು ಹೆತ್ತಳು. ಬಾನು ಹೂಮಳೆ ಕರೆಯಿತು; ದೇವತೆಗಳು ಮಧುರವಾಗಿ ಹಾಡಿದರು. ಇಂದ್ರನು ಆಶೀರ್ವಾದ ಮಾಡಿ, 'ಶಕುನ್ತಲೆ, ನಿನ್ನ ಮಗನು ಚಕ್ರವರ್ತಿಯಾಗುವನು; ಬಲ, ತೇಜಸ್ಸು, ರೂಪ ಇವುಗಳಲ್ಲಿ ಭೂಮಿಯಲ್ಲಿ ಆತನಿಗೆ ಯಾರೂ ಸಮರಾಗರು' ಎಂದನು. ಕಣ್ವರು ಜಾತಕರ್ಮಾದಿಗಳನ್ನು ನೆರವೇರಿಸಿದರು. ಮಗು ಆಶ್ರಮದಲ್ಲಿ ಬೇಗ ಬೇಗ ಬೆಳೆದನು.

ಇತ್ತ, ಮೊದಮೊದಲು ದುಷ್ಯನ್ತನಿಗೆ ಆಕೆಯ ನೆನಪು ಬಂದರೂ ಋಷಿಯ ಭಯದಿಂದ ಆಕೆಗೆ ಕರೆ ಕಳಿಸಲಿಲ್ಲ; ಬಹುಕಾಲ ಕಳೆದ ಮೇಲೆ ತಪೋಧನಳಾದ ಆಕೆಯನ್ನು ಮರೆತೇಬಿಟ್ಟನು. ಹುಡುಗನ ವಯಸ್ಸು ಆರಾಯಿತು. ಹುಲಿ, ಸಿಂಹ, ತೋಳ ಇವನ್ನು ತೋಳಬಲದಿಂದ ಅವನು ಹಿಡಿಯುವನು; ತಡೆದು ಅಂಕೆಯಲ್ಲಿಡುವನು; ಆಶ್ರಮದ ಮರಗಳಿಗೆ ಕಟ್ಟಿಹಾಕುವನು; ಅವುಗಳೊಡನೆ ಆಟವಾಡುವನು. ಇಂತಹ ಅತಿಮಾನುಷವನ್ನು ಕಂಡ ಆಶ್ರಮವಾಸಿಗಳು ಅವನಿಗೆ ಸರ್ವದಮನನೆಂಬ ಹೆಸರಿಡುವರು. ವಿಕ್ರಮ, ಓಜಸ್ಸು, ಬಲ – ಇದ್ದ ಅವನಿಗೆ ಆ ಹೆಸರು ಒಪ್ಪಿತು.

ದುಷ್ಯನ್ತನು ತನಗೆ ಹೇಳಿಕಳಿಸದ ಚಿಂತೆ ಶಕುನ್ತಲೆಗೆ ಬಲವಾದುದನ್ನು ನೋಡಿ ಕಣ್ವರು, 'ಮಗು, ಹೋಗಿ ರಾಜನನ್ನು ಆರಾಧಿಸು; ಆತನಿಗೆ ಹಿತವನ್ನು ಬಯಸು; ದೌಷ್ಯನ್ತಿ ಯುವರಾಜನಾದ್ದನ್ನು ನೋಡಿ ನಿನಗೆ ಪ್ರೀತಿ ಉಂಟಾಗುವುದು' – ಎಂದು ಹೇಳಿದರು. ಹಾಗೆಯೇ ಮೊಮ್ಮಗನನ್ನು ಕರೆದು, ಆಲಿಂಗಿಸಿಕೊಂಡು ಪೌರವನಾದ ಆತನ ತಲೆಯನ್ನು ಮೂಸಿ,

ದುಷ್ಯನ್ತನೆಂದು ಹೆಸರಾದ ರಾಜನು ಸೋಮವಂಶದವನು. ಶುಚಿವ್ರತೆಯಾದ ಈ ನಿನ್ನ ತಾಯಿ ಆತನ ಅಗ್ರಮಹಿಷಿ. ನಿನ್ನೊಡನೆ ಆಕೆ ತನ್ನ ಪತಿಯ ಬಳಿಗೆ ಹೋಗಬಯಸುತ್ತಾಳೆ. ಹೋಗಿ ರಾಜನಿಗೆ ಅಭಿವಾದನೆ ಮಾಡು; ನೀನು ಯುವರಾಜನಾಗುವೆ; ತಂದೆ ತಾತಂದಿರ ರಾಜ್ಯ ನಿನಗೆ ಸಹಜವಾಗಿ ದೊರೆಯಲಿ. ರಾಜನಾದ ಕಾಲದಲ್ಲಿ ಓ, ಪೌರವ, ನನ್ನನ್ನು ನೆನಸಿಕೊ ಎನ್ನುವರು. ಸುಲಭವಾಗಿ ಮೊದಲು ಹುಡುಗನು ಒಪ್ಪಲಿಲ್ಲ: 'ತಾಯಿ ತಂದೆ ಎಲ್ಲ ನೀವೇ; ಭರ್ತೃಕಾಮಳಾದ ತಾಯಿ ಇಷ್ಟಬಂದಂತೆ ತಾನು ಹೋಗಲಿ, ತಮ್ಮ ಪಾದಸೇವೆ ಮಾಡುತ್ತ ನಾನು ಇಲ್ಲಿಯೇ ಇರುತ್ತೇನೆ' ಎಂದು ಹುಡುಗನು ನುಡಿಯುತ್ತಾನೆ. ಆದರೆ ತಿಳಿಸುವುದನ್ನು ತಿಳಿಸಲು ತಾಯೊಡನೆ ಹೋಗಲು ಒಪ್ಪಿಕೊಳ್ಳುತ್ತಾನೆ.

ಇಬ್ಬರೂ ಋಷಿಗೆ ಪ್ರದಕ್ಷಿಣೆ ಮಾಡಿ ಆತನ ಅಪ್ಪಣೆ ಪಡೆದು ಬೀಳ್ಕೊಳ್ಳುವರು ಕಣ್ವಋಷಿಯೂ ಮನುಷ್ಯನಾದ್ದರಿಂದ ಆತನ ಕಣ್ಣಲ್ಲಿ ನೀರು ತುಂಬುವುದು. ಆತನು ತನ್ನ ಬಳಿಯ ಕೆಲವರನ್ನು ಕರೆದು, ಯಶಸ್ವಿನಿಯಾದ ಈ ಮಗಳನ್ನು ನಾನು ಸರ್ವದಾ ಲಾಲಿಸಿದ್ದೇನೆ. ಈಕೆ

ವನೇ ಜಾತಾ, ವಿವೃದ್ಧಾ ಚ ನ ಚ ಜಾನಾತಿ ಕಿಂಚನ

ಆಶ್ರಮದಿಂದ ನೀವು ಆಕೆಯನ್ನು ಕ್ಷತ್ರಿಯಾಲಯಕ್ಕೆ ಕರೆದುಕೊಂಡುಹೋಗಿ. ಗಂಗಾ ಯಮುನಾ ಸಂಗಮದಲ್ಲಿ ಪ್ರತಿಷ್ಠಾನಪುರವಿದೆ; ಅಲ್ಲಿ ಬಿಟ್ಟುಬನ್ನಿ. ಸಂಗಮದಿಂದ ನೀವು ಹಿಂದಕ್ಕೆ ಬರಬಹುದು – ಎಂದನು.

ಶಕುನ್ತಲೆಯನ್ನು ಮುಂದಿಟ್ಟು ಅವರೆಲ್ಲರೂ ಹೊರಟರು. ಕಾಡು, ನದಿ, ಶೈಲಗಳನ್ನು ದಾಟಿ ಆಯಾಸಗೊಂಡು, ಮೆಲ್ಲನೆ ಮಧ್ಯಾಹ್ನದ ಹೊತ್ತಿಗೆ ಪ್ರತಿಷ್ಠಾನವನ್ನು ಸೇರಿದರು. ಊರ ನಡುವೆ ರಾಜವೇಶ್ಮ; ಅದರ ನಡುವೆ ನಾನಾರತ್ನಭೂಷಿತವಾದ ಸಭೆ; ಸಭೆಯಲ್ಲಿ ಸರ್ವಾಲಂಕಾರಭೂಷಿತನಾದ ರಾಜರ್ಷಿ; ವಂದಿಮಾಗಧರು ಸುತ್ತ ಇದ್ದಾರೆ. ಆ ಸಮಯಕ್ಕೆ ಶಕುನ್ತಗಳ ಕಲರವ ಕೇಳಿಬಂತು. ಶುಭಶಕುನವಾಯಿತೆಂದು ಋಷಿಗಳು ಶಕುನ್ತಲೆಗೆ ಹೇಳಿದರು. ನಿನ್ನ ಇಷ್ಟ ಇಂದೇ ನೆರವೇರುವುದು. ನಮಗೆ ಪುರಪ್ರವೇಶ ಕೂಡದಾಗಿ ನಮಗೆ ಅಪ್ಪಣೆ ಕೊಡು, ಹೋಗುತ್ತೇವೆ ಎಂದು ಬಂದ ದಾರಿ ಹಿಡಿದುಹೋದರು. ಇದನ್ನು ಕಂಡು ದುಃಖಿತೆಯಾದ ಆಕೆ ಧೃತಿಯನ್ನು ಆಲಂಬಿಸಿ ಮಗನ ಸಹಾಯದಿಂದ ಮೆಲ್ಲ ಮೆಲ್ಲಗೆ ಮುಂದೆ ನಡೆದಳು. ರಾಜಮಾರ್ಗದಲ್ಲಿ ನಡೆಯುತ್ತ, ಹಿಂದೆ ಎಂದೂ ಕಾಣದಿದ್ದ ಮಂದಿರ, ಅರಮನೆ, ಚೈತ್ಯ, ಸಭಾಂಗಣಗಳು ಇವು ಮಗುವಿಗೆ ವಿಸ್ಮಯ ಉಂಟುಮಾಡಿದುವು. ಕಣ್ಣರಳಿಸಿ ಅವನ್ನು ನೋಡುತ್ತ ಹೊರಟನು. ಆಕೆಯನ್ನು ಕಂಡವರು ಆಕೆ ಲಕ್ಷ್ಮಿಯಂತಿದ್ದಾಳೆಂದರು. ಆತನು ಸಿಂಹೋರು; ಸಿಂಹ ಬಲ. ಸಿಂಹ ವಿಕ್ರಾಂತದ ನಡಗೆಯವನಾದ ಆಕೆಯ ಆ ಮಗನನು ಹೊಗಳಿದರು. ರಾಜ ಲಕ್ಷಣವುಳ್ಳವನು; ಆಕಾರದಲ್ಲಿ, ರೂಪದಲ್ಲಿ, ದೇಹದಲ್ಲಿ ತೇಜಸ್ಸಿನಲ್ಲಿ ದುಷ್ಯನ್ತನಿಗೆ ಸಮನಾಗಿದ್ದಾನೆ. ಯಾರ ಮಗನಿರಬಹುದು? ಎಂದುಕೊಂಡರು. ಸ್ನೇಹದಿಂದ ಶಕುನ್ತಲೆಯ ಹಿಂದೆಯೇ ಹೋದರು. ಶಕುನ್ತಲೆ ಏನೂ ನುಡಿಯದೆ ರಾಜಸಭೆಗೆ ಹೋದಳು. ವಿಹ್ವಲೆಯಾದಳು. ಆಕೆ ಬಂದಿರುವುದನ್ನು ರಾಜನಿಗೆ ತಿಳಿಸಿದರು. ರಾಜನು ಆಕೆಯನ್ನು ಒಳಕ್ಕೆ ಬರಹೇಳಿ ಕಳಿಸಿದನು.

ರಾಜನಿಗೆ ತಕ್ಕಂತೆ ಗೌರವ ತೋರಿಸಿ ಆಯಿತು. ಆಮೇಲೆ ಆಕೆ ಮಗನನ್ನು ಕುರಿತು,

ಅಭಿವಾದಯ ರಾಜಾನಂ ಪಿತರಂ ತೇ ದೃಢವ್ರತಮ್

ಎಂದು ಹೇಳಿ ತಾನು ಲಜ್ಜೆಯಿಂದ ತಗ್ಗಿದ ಮುಖದಿಂದ ನಿಂತುಕೊಂಡು ಕಂಬವೊಂದನ್ನು ಒರಗಿನಿಂತು ರಾಜನನ್ನು ಕುರಿತು 'ನನಗೆ ಪ್ರಸನ್ನನಾಗು' ಎಂದಳು.

ಶಕುನ್ತಲೆಯ ಮಗನು ರಾಜನ ಎದುರಿಗೆ ಕೈಮುಗಿದು ಹರ್ಷದಿಂದ ಅರಳಿದ ಕಣ್ಣಿಂದ ರಾಜನನ್ನು ನೋಡಿದನು. ಈಗ ಯಾವ ರೀತಿ ನಡೆವುದು ಧರ್ಮವೆಂದು ಯೋಚಿಸಿ ದುಷ್ಯನ್ತನು ಹೀಗೆ ಹೇಳಿದನು:

'ಸುಂದರಿ, ನೀನು ಬಂದ ಕಾರ್ಯವೇನು ಹೇಳು; ಮಾಡುತ್ತೇನೆ. ಸಂದೇಹ ಬೇಡ; ನೀನು ವಿಶೇಷವಾಗಿ ಮಗನನ್ನು ಹೆತ್ತ ತಾಯಾಗಿದ್ದೀಯೆ."

ಶಕುನ್ತಲೆ:—ಮಹಾರಾಜ, ಪ್ರಸನ್ನನಾಗು; ಈತನು ನಿಜವಾಗಿ ನಿನ್ನ ಮಗನು. ನನ್ನ ಹೊಟ್ಟೆಯಲ್ಲಿ ಹುಟ್ಟಿದವನು. ಈ ನಿನ್ನ ಮಗನಿಗೆ ಯೌವ ರಾಜ್ಯಾಭಿಷೇಕ ಮಾಡು. ಹಿಂದೆ ನನ್ನಲ್ಲಿ ಮಾಡಿಕೊಂಡ ಸಮಯ ಅದು. ಕಣ್ವಾಶ್ರಮದಲ್ಲಿ ನಡೆದುದನ್ನು ನೆನೆ.

ರಾಜನು ಆಕೆ, ಮಗ, ಆಕೆಯ ಸ್ಮಿತ ಇವನ್ನು ಮನಸ್ಸಿನಲ್ಲಿಯೇ ಚಿಂತಿಸಿದನು. ಆಕೆಯ ಮಾತಿನ ಸತ್ಯವು ಆತನಿಗೆ ತಿಳಿದು ಸ್ವಲ್ಪಹೊತ್ತು ಒಳಗೆ ಸಂತೋಷಪಟ್ಟುಕೊಂಡನು.

ಹೀಗೆ ಆಕೆಯಾಡಿದುದು ಕೇಳಿಸಿತು; ರಾಜನ ಸ್ಮರಣೆಗೂ ಬಂತು. ಆದರೂ, ರಾಜನು — ಭದ್ರೆ, ನಿನ್ನನ್ನು ಕೂಡಿದ ನೆನಪಿಲ್ಲ ನನಗೆ, ಎಂದನು. ಇದನ್ನು ಕೇಳಿ ಆಕೆಗೆ ನಾಚಿಕೆಯಾಯಿತು; ಮುಹೂರ್ತ ಮಾತ್ರ ಧ್ಯಾನ ಮಾಡಿದಳು. ದುಃಖ ಕೋಪ ಉಂಟಾದುವು. ಗಂಡನನ್ನು ನೋಡಿ ಯಥಾ ನ್ಯಾಯವಾಗಿ ಹೇಳಿದಳು: ನಿನಗೆಲ್ಲ ತಿಳಿದೂ, ತಿಳಿದಿಲ್ಲವೆಂದು ನಿಶ್ಶಂಕನಾಗಿ ಪ್ರಾಕೃತನಂತೆ ಏಕೆ ಹೀಗೆ ಹೇಳುವೆ? ನಿನ್ನ ಹೃದಯ ಬಲ್ಲುದು; ಆತ್ಮಸಾಕ್ಷಿಗೆ ಅವಮಾನ ಮಾಡಬೇಡ . . . ಹೀಗೆ ಮಾತು ಬೆಳೆಯಿತು. ಇಬ್ಬರೂ ಕಠಿಣವಾಗಿ ಮಾತನಾಡಿದರು. ಮಗನನ್ನು ತೋರಿಸುತ್ತ, ನೋಡು, ಗತಿ, ರೂಪ, ಚೇಷ್ಟೆ, ಅಂಗಚಲನೆ, ಗುಂಗುರು ಕೂದಲು, ಲಕ್ಷಣಗಳು ತಂದೆಯವೇ ಪುತ್ರನಲ್ಲಿ ಕಾಣುವುವು. ಆತನನ್ನು ಅವಮಾನಗೊಳಿಸಬೇಡ;

ತ್ವದಂಗೇಭ್ಯಃ ಪ್ರಸೂತೋಽಯಂ ಪುರುಷಾತ್ ಪುರುಷಃ ಪರಃ
ಸರಸೀವಾಮಲೇ ಽಽತ್ಮಾನಂ ದ್ವಿತೀಯಂ ಪಶ್ಯ ತೇ ಸುತಮ್

ಗಾಂಧರ್ವದಿಂದ ನನ್ನನ್ನು ಅಂದು ಯಥಾವಿಧಿಯಾಗಿ ನೀನು ಕೈಹಿಡಿದೆ;

ಸಾಽಹಂ ಕುಲಂ ಚ ಶೀಲಂ ಚ ಸತ್ಯವಾದಿತ್ವಮಾತ್ಮನಃ
ಸ್ವಧರ್ಮಂ ಚ ಪುರಸ್ಕೃತ್ಯ ತ್ವಾಮದ್ಯ ಶರಣಂ ಗತಾ

ಎನ್ನುವಳು.

ರಾಜನಿಗೆ ಇದಾವುದೂ ಒಪ್ಪದಿರಲು ಕಡೆಗೆ

ಕಾಮಂ ತ್ವಯಾ ಪರಿತ್ಯಕ್ತಾ ಗಮಿಷ್ಯಾಮಿ ಅಹಂ ಆಶ್ರಮಂ
ಇಮಂ ಬಾಲಂ ತು ಸಂತ್ಯಕ್ತುಂ ನಾರ್ಹಸಿ ಆತ್ಮಜಂ ಆತ್ಮನಾ

ಇದಕ್ಕೂ ರಾಜನಿಂದ ನಿರಾಕರಣವೇ ಆಯಿತು. ಸತ್ಯವನ್ನೂ ಸತ್ಯವಂತರನ್ನೂ ಶ್ಲಾಘಿಸಿ ಅಸತ್ಯವಂತರಿಗೆ ದುರ್ಗತಿಯಾಗುವುದು ಎನ್ನುವವರೆಗೆ ಆಡಿ ಆಕೆ ಕಡೆಗೆ

ಅನೃತಶ್ಚೇತ್ ಪ್ರಸಂಗಸ್ತೇ ಶ್ರದ್ದಧಾಸಿ ನಚೇತ್ ಸ್ವಯಂ
ಅಸಾಕ್ಷಿಣೀ ಮನ್ದಭಾಗಾ ಗಮಿಷ್ಯಾಮಿ ಯಥಾ ಗತಮ್

ಎಂದು ನುಡಿದು ನಿಲ್ಲಲು ಆಗ ಆಕಾಶವಾಣಿಯೊಂದು ದುಷ್ಯನ್ತನನ್ನು ಕುರಿತು ಹೀಗೆ ನುಡಿಯಿತು:

'ಈ ನಿನ್ನ ಮಗ ದೌಷ್ಯನ್ತಿಯನ್ನು ಪೋಷಿಸು: ಶಕುನ್ತಲೆ ಸತ್ಯವನ್ನೇ ಹೇಳುವಳು. ಈತನನ್ನು ನೀನು ಭರಿಸಬೇಕು. ನಾವೂ ಹಾಗೆ ಹೇಳುತ್ತಿದ್ದೇವೆ. ನಿನ್ನ ಮಗನ ಹೆಸರು ಹೀಗೆ ಭರತನೆಂದಾಗಲಿ. ಭಾರತ ಕುಲಕ್ಕೆ ಭರತನಿಂದ ಭಾರತೀ ಕೀರ್ತಿ ಬರುತ್ತದೆ.'

ಇದರೊಡನೆ ಪುಷ್ಪವೃಷ್ಟಿಯಾಯಿತು.

ದೇವವಾಣಿಯನ್ನು ಕೇಳಿ ರಾಜನು ಹರ್ಷಿತನಾದನು. ದೇವತೆಗಳಿಗೆ ಪ್ರಣಾಮ ಮಾಡಿದನು. ತನ್ನ ಪುರೋಹಿತರನ್ನೂ ಅಮಾತ್ಯರನ್ನೂ ಕುರಿತು, 'ಇವನು ನನ್ನ ಮಗನೆಂದು ನನಗೂ ಗೊತ್ತು. ಆದರೆ ಈಕೆಯ ಮಾತಿನಮೇಲೆಯೆ ನಾನು ನನ್ನ ಮಗನೆಂದು ಗ್ರಹಿಸಿದ್ದಿದ್ದರೆ ಜನದಲ್ಲಿ ಶಂಕೆ ಉಂಟಾಗುತ್ತಿತ್ತು. ಈಗ ಅನಂತರ ಸ್ಪಷ್ಟವಾಗಿ ತಿಳಿವುಂಟಾಗುತ್ತಿರಲಿಲ್ಲ' ಎಂದು ಹೇಳಿ ಎಲ್ಲರ ಸಾಕ್ಷಿಯಾಗಿ ಆಕೆಯನ್ನೂ ಮಗನನ್ನೂ ಒಪ್ಪಿಕೊಂಡನು. ಆಮೇಲೆ ಹೆಂಡತಿಯನ್ನು ಸಂತೈಸುತ್ತ ಹೀಗೆ ಹೇಳಿದನು:

'ಹಿಂದೆ ನನಗೂ ನಿನಗೂ ಆದ ಸಂಬಂಧ ಲೋಕದ ಪರೋಕ್ಷದಲ್ಲಿ ಬೆಳೆಯಿತು; ಇಂದು ಲೋಕದ ಸಮಕ್ಷದಲ್ಲಿ ಆಗುತ್ತಿದೆ. ನಮ್ಮ ಸಂಬಂಧದ ವಿಷಯದಲ್ಲಿ ಅವರು ಅಪನಂಬಿಕೆ ಪಡಬಹುದಾಗಿತ್ತಾದ್ದರಿಂದ ಶುದ್ಧ್ಯರ್ಥವಾಗಿ ನಿನ್ನನ್ನು ವಿಚಾರ ಮಾಡಿದೆನಷ್ಟೇ; ಈ ಮಗನಿಗೇ ರಾಜ್ಯ ಕಾದಿದೆ; ನೀನು ನನ್ನ ಅಗ್ರಮಹಿಷಿಯಾಗು. ಕೋಪದಲ್ಲಿ ನೀನಾಡಿದ ಮಾತನ್ನು ನಾನು ಗಮನಿಸುವುದಿಲ್ಲ. ನೀನು ಕೂಡ, ಕ್ಷನ್ತವ್ಯಂ ಮಮ ದುರ್ವಚಃ'

ಎಂದು ಮುಂತಾಗಿ ಹೇಳಿ ಸಮಾಧಾನ ಮಾಡುತ್ತಾನೆ.

ಉಪಾಖ್ಯಾನದ ಕಥೆ ಶುಭಾಂತವಾಗುತ್ತದೆ.

**ನಾಟಕದ ಕಥೆ, ಅಂಕರಚನೆ**

ಉಪಾಖ್ಯಾನದ ಕಥೆಯಲ್ಲಿ ಹಲವು ಮಾರ್ಪಾಡುಗಳು ಆದವು ಕಾಲಿದಾಸ ಕೃತಿಯಲ್ಲಿ. ಶಕುನ್ತಲೆ ದುಷ್ಯಂತರ ಗುಣ ಶೀಲ ವ್ಯವಹಾರಗಳ ನಯಸಂಪತ್ತಿಗೆ ಸಂಬಂಧಿಸಿದವು ಕೆಲವು. ಅಲ್ಲಿಯ ಕಥೆ ಇಲ್ಲಿನ ಸುಮಾರು ಐದನೆಯ ಅಂಕದ ಮೇರೆಗೆ ಮುಗಿದು ನಿಲ್ಲುವುದು. ಎಂದರೆ, 'ಅಸಾಕ್ಷಿಣೀ ಮಂದಭಾಗಾ ಗಮಿಷ್ಯಾಮಿ ಯಥಾಗತಂ' ಎಂದು ಆಕೆ ನಿರಾಸೆಯಿಂದ ಮರಳಬೇಕಾಗುತ್ತಿದ್ದ ಸಮಯಕ್ಕೆ ಅಲ್ಲಿ ಅಶರೀರವಾಣಿ ನುಡಿಯಿತು; ಸಭೆಗೆ ಸತ್ಯ ದರ್ಶನವಾಯಿತು. ಆಕೆ ಅಪೇಕ್ಷಿಸಿದ ಫಲಗಳು ದೊರೆತು ಕಥೆ ಶುಭಾಂತವಾಯಿತು. ನಾಟಕದಲ್ಲಿ ಹಾಗಲ್ಲ; ಇನ್ನೆರಡು ಅಂಕಗಳ ಅಂತರ ಬೇಕಾಗುವುದು ಪರಿಪಾಕಕ್ಕೆ. ಜೊತೆಗೆ ಇತರ ಪಾತ್ರ ಸನ್ನಿವೇಶಗಳ, ಇತರ ಲೋಕ ವರ್ಣನೆಗಳ ನಿರ್ಮಾಣ ಆಗಿ ಕಾವ್ಯದ ವ್ಯಾಪ್ತಿಯೂ ಸಂಪುಷ್ಟಿಯೂ ಹೆಚ್ಚುವುವು. ಇಲ್ಲಿನ ವಿಸ್ತರಣದ ಅಡಿಯಲ್ಲಿ, ನಡೆಯಲ್ಲಿ ಇರುವುದು ಒಂದು ಬಗೆಯ ಸುಂದರವಾದ, ನಯವಾದ, ಗಂಭೀರವಾದ ಬದುಕಿನ ವಿಲಾಸ; ಸಂಸ್ಕಾರಗೊಂಡ ಒಂದು ಜೀವದ ಮತ್ತು ಜೀವಕಳೆಯ ಪ್ರಾಚುರ್ಯ. ಮೂಲ ಕಥೆಯಲ್ಲಿ ಮೊದಲ ಮೂರಂಕಗಳ ಪ್ರೇಮದ ಮಧುರ ಲಲಿತ ಪ್ರಪಂಚ ಹರಡಲು ಅವಕಾಶವಿಲ್ಲ. ನಾಟಕದಲ್ಲಿನ ರೂಪು ಯೌವನಗಳ ವಿಲಾಸ, ಚೆಲುವು, ಸ್ನೇಹ, ಸರಳತೆ, ಅಸಹಾಯತೆ, ಕಪಟವರಿಯದ ಸ್ವಾತಂತ್ರ್ಯ, ಔದಾರ್ಯ

ಸಹಜಸುಂದರ ಮನೋವೃತ್ತಿಗಳು ಅಲ್ಲಿನ ಜಿಂಕೆ, ಕೋಗಿಲೆ, ಮರ, ಬಳ್ಳಿ, ಹೂಗಳಂತೆಯೇ ಅವ್ಯಾಜ ಮನೋಹರವಾದವು. ನಾಲ್ಕನೆಯ ಅಂಕದ ತುಂಬಿದ ಪ್ರೇಮವೂ ಕೋಮಲತೆ ಕರುಣೆಗಳೂ ಕಟ್ಟಲು ಅವಕಾಶವಿಲ್ಲ ಉಪಾಖ್ಯಾನದಲ್ಲಿ. ಆರು ವರ್ಷದ ಮಗನು ಜೊತೆಗೆ ಬೇರೆ ಇರುವುದರಿಂದ ಆ ಪ್ರತ್ಯಕ್ಷ ಪ್ರಮಾಣ ಸ್ಪಷ್ಟವಾಗಿ, ನೇರವಾಗಿ ಆಕೆಯ ವಾದಸ್ಥಾಪನೆಗೆ ನೆರವಾಗಿದೆ. ನಾಟಕದಲ್ಲಿ ಇನ್ನೂ ಆ ಮಗನನ್ನು ಹೊತ್ತ ತುಂಬಿದ ಬಸಿರಿ ಆಕೆ. ಪ್ರಸವವಾಗಿ ಹುಡುಗನನ್ನು ತಂದೆ ಕಾಣಬೇಕಾದರೆ ಸಭಾಂಕ ಮುಗಿದ ಮೇಲೆ ಇನ್ನೆರಡು ಅಂಕಗಳ ಬೇಗೆ, ಬಯಕೆ ಫಲಿಸಬೇಕಾಗಿರುತ್ತದೆ. ಪ್ರಿಯಂವದೆ ಅನಸೂಯೆ, ಶಾರ್ಙ್ಗರವ ಶಾರದ್ವತ ಗೌತಮಿಯರು, ದುರ್ವಾಸ ಪ್ರಭಾವ, ಉಂಗುರದ ಪ್ರಸಂಗ, ರಾಜನ ಮರವು, ಅದು ಕಳೆದು ಬಿದ್ದು ಶಕುನ್ತಲೆ ಅನುಭವಿಸಿದ ಅಪಮಾನ, ಮೇನಕೆ ಮಗಳನ್ನು ಸ್ವರ್ಗಕ್ಕೆ ಎತ್ತಿಕೊಂಡು ಹೋದುದು, ಬೆಸ್ತನ ಮೂಲಕ ಉಂಗುರ ಸಿಕ್ಕಲು ಪುನಃ ಬಂದ ನೆನವು, ಬೆಸ್ತ ನಗರರಕ್ಷಕರ ನಡತೆ, ವಸಂತ ಮಾಸಕ್ಕೆ ರಾಜಾಜ್ಞೆಯಿಂದ ಆದ ನಿರೋಧ, ಸಾನುಮತಿಯ ಮತ್ತು ಭಾವಚಿತ್ರದ ಸನ್ನಿವೇಶಗಳು, ರಾಜನಿಗಿದ್ದ ಹಂಸಪದಿಕೆ ವಸುಮತೀದೇವಿಯ ರಂತಹ ಇತರ ರಾಣಿಯರ ವೃತ್ತಾಂತ, ಅಂತಃಪುರ ಜೀವನ, ಇಂದ್ರಲೋಕದ ಮತ್ತು ಹೇಮಕೂಟದ ಸೌಭಾಗ್ಯ, ಅಲ್ಲಿನ ಬಹುಮಾನ, ಸಿದ್ಧಿ, ಮತ್ತು ಉನ್ನತ ತಪೋನಿಷ್ಠೆಯ ನಿಶ್ಚಲ ಚಿತ್ರಗಳು, ಜೊತೆಗೆ ಎಲ್ಲೆಲ್ಲಿಯೂ ಚೆಲ್ಲಿ ಸೂಸುವ ಪ್ರಕೃತಿ ಸೌಂದರ್ಯದ ಮತ್ತು ಮಾನವ ಹೃದಯದ ಮರ್ಮಗಳ ವರ್ಣನೆ, ಕವಿತಾ ವೈಭವ–ಇವಾವುವೂ ಅಲ್ಲಿ ಇಲ್ಲ.. ಕಥೆಯ ಎರಡು ಭಾಗಗಳನ್ನು ಸಮತೂಕದಲ್ಲಿ ಹಿಡಿದು ತೂಗುವ ಒಂದು ಪ್ರಭಾವವೆಂದರೆ ದುರ್ವಾಸ ಶಾಪದ್ದು. ಅದಕ್ಕೆ ಸಂಬಂಧಿಸಿದಂತೆ ಉಂಗುರದ ಕಥೆಯದು. ಬಹುಶಃ ಆ ಸೂತ್ರದ ಹಿಡಿತಕ್ಕೆ ಕಥೆಯನ್ನು ಸಿಕ್ಕಿಸಿ ಕಾಲಿದಾಸನು ಶಕುನ್ತಲಾ ದುಷ್ಯನ್ತರ ಪ್ರೇಮದ ಕಥೆಯನ್ನು ಎರಡು ಘಟ್ಟಗಳಲ್ಲಿ ತೋರಿಸಿ ಕಣ್ಬೇಟವಾಗಿ, ಕಾಮವಾಗಿ ಮೊದಲಾದದ್ದು ಶುಚಿ ಪ್ರೇಮವಾಗಿ ಮಂಗಳಕರವಾಗುವ ಚಿತ್ರ ಆ ವಿಧಾನವನ್ನು ನಿರ್ಮಾಣ ಮಾಡಿದ್ದಾನೆನ್ನಿಸುತ್ತದೆ. ಆತನಿಗೆ ಈ ಪ್ರಶ್ನೆ ಬಂದಿರಬೇಕು: ಪುರುಕುಲದ ಒಡೆಯನಾಗಿ ಧರ್ಮಾತ್ಮ, ರಾಜರ್ಷಿ, ಮಹಾತ್ಮ ಎಂದು ವ್ಯಾಸರಿಂದ ಕೂಡ ಅನ್ನಿಸಿಕೊಂಡ, ರಾಜನು ತಾನು ಪ್ರೀತಿಸಿ ಸಮಯಮಾಡಿಕೊಂಡು ಮದುವೆಯಾದ ಹೆಂಡತಿಯನ್ನು ಭಯದಿಂದ ಮರೆತುಬಿಟ್ಟು ಪ್ರಾಕೃತರಂತೆ ನಡೆದುಕೊಂಡನೆಂದರೆ ಮನಸ್ಸು ಒಪ್ಪದು; ತುಂಬಿದ ಸಭೆಯಲ್ಲಿ ಆಕೆಯನ್ನು ನಿರಾಕರಿಸಿದ ಸಂಗತಿ ನಿಜವಾದುದಾದರೆ ಕಥೆ ಹೇಗೆ ನಡೆದಿದ್ದೀತು ಬಹುಶಃ? ಎಂದು ಸಂಸ್ಕೃತವಾದ ತನ್ನ ಕಲ್ಪನೆಗೆ ತಕ್ಕಂತೆ ಈ ಸಂವಿಧಾನವನ್ನು ಹೂಡಿ ಅದನ್ನು ವಿವರಿಸಿರಬೇಕು. ವರ, ಶಾಪ, ದೇವಲೋಕ, ವಿಧಿ, ಜನ್ಮಾಂತರ, ಕರ್ಮಗಳಲ್ಲಿ ನಂಬಿಕೆಯಿದ್ದ ಆ ಕಾಲದಲ್ಲಿ ಇದು ಜನರು ಒಪ್ಪುವಂಥದೂ ಆಯಿತು. ನಾಟಕದಲ್ಲಿ ಕೂಡ, ಅಂತಹ ಒಂದು ಕಾರಣವನ್ನು ಒದಗಿಸದಿದ್ದರೆ, ರಾಜನ ಆ ನಿರಾಕರಣೆಯನ್ನು ಅರ್ಥಮಾಡಿಕೊಳ್ಳುವುದೇ ಅಶಕ್ಯವಾಗುತ್ತದೆ. ಅಂತಹ ಗಾಂಭೀರ್ಯವೂ ಉದಾರತೆಯೂ ಇವೆ ಆತನ ಶೀಲದಲ್ಲಿ. ಅದಕ್ಕೆ ತಕ್ಕಂತೆ ಕಥೆಯನ್ನು ಶಾಪಕ್ಕೆ ಮೊದಲು, ಶಾಪ ಸಮಯದಲ್ಲಿ, ಆದರ ಪರಿಣಾಮವಾಗಿ, ಅದರಿಂದ ವಿಮೋಚನೆ ಉಂಟಾದಾಗ ಎಂದು ವಿಂಗಡಿಸಿಕೊಂಡು, ಶಾಪವನ್ನು ಮನುಷ್ಯ ಸ್ವಭಾವದಲ್ಲಿಯೂ ಕರ್ತವ್ಯ ಧರ್ಮದಲ್ಲಿಯೂ ನೆಲೆಗೊಳಿಸಿ, ಸಮಾಜ ಹಿತಕ್ಕೆ ಪ್ರೇಮ ಹೇಗೆ ಮಾತ್ರ ಸಾಧಕವಾದೀತು ಎಂಬುದರ ತತ್ವವನ್ನು ಕವಿ ನಿರೂಪಿಸುವನು.

ಇದು ಕನ್ನಡಿಸಿದೆ ನಾಟಕ ರಚನೆಯಲ್ಲಿ. ಈಗ ಕಥಾ ಕಾರ್ಯವಿಭಾಗವನ್ನು ನೋಡೋಣ. ಬೇಟೆಗೆ ಹೋಗಿ ಆಶ್ರಮದಲ್ಲಿ ಶಕುನ್ತಲೆಯನ್ನು ಕಂಡು ದುಷ್ಯನ್ತನು ಆಕೆಯ ರೂಪಿಗೆ ಮೆಚ್ಚಿ, ಆಕೆಯನ್ನು ಬಯಸಿದ; ಗೆದ್ದ; ಮದುವೆಯಾದ; ರಾಜಧಾನಿಗೆ ಯಥಾರೀತಿ ಬೇಗ ಕರಸಿಕೊಳ್ಳುತ್ತೇನೆಂದು ಮಾತು ಕೊಟ್ಟು ಮರಳಿದ. ಇದು ಮೊದಲ ಭಾಗ. ಆತನನ್ನು ನಂಬಿ ಆತನ ಧ್ಯಾನದಲ್ಲಿ ಪ್ರಪಂಚವನ್ನೂ ತನ್ನನ್ನೂ ಮರೆತ ಶಕುನ್ತಲೆಯ ಗಾಂಧರ್ವ ವಿವಾಹ ಮತ್ತು ಆಕೆಯ ಗರ್ಭಧಾರಣೆಯ ಕಥೆಯನ್ನು ಕೇಳಿದ ಕಣ್ವರು ಆಕೆಯನ್ನು ಗಂಡನ ಮನೆಗೆ ಕಳಿಸಬೇಕಾದ್ದು ಅಗತ್ಯವಾಯಿತು. ಆಕೆ ಅಲ್ಲಿಗೆ ಹೋಗುವಾಗ್ಗೆಯೇ ದುರ್ವಾಸ ಶಾಪದ ಪ್ರಸಂಗ ನಡೆದಿದ್ದುದರಿಂದ ಮರವು ಕವಿದು ಆತನು ಆಕೆಯನ್ನು ನಿರಾಕರಿಸಿದ. ಭೂಮಿಯ ಮೇಲೆ ಇನ್ನು ದಿಕ್ಕಿಲ್ಲದಿದ್ದ ಆಕೆಗೆ ದೇವಲೋಕದ ಆಸರೆಯೊಂದೇ ಗತಿಯಾಯಿತು. ಉಂಗುರ ದರ್ಶನದಿಂದ ನೆನವು ಮರಳಿ ತನ್ನ ಅನ್ಯಾಯದ ಅರಿವು ಉಂಟಾಗಲು ಆಕೆಗಾಗಿ ತವಕಪಟ್ಟು ದೇವಕಾರ್ಯವನ್ನು ಮುಗಿಸಿಕೊಟ್ಟ ತರುವಾಯ ಆಕೆ ಇರುವಲ್ಲಿಯೇ ಆಕೆಯನ್ನು ಪಡೆಯಬೇಕಾಯಿತು. ಬಳಿಗೆ ಬಂದಾಗ ನಿರಾಕರಿಸಿದ್ದುದರಿಂದ ಆಕೆಯನ್ನು ಪುನಃ ಗಳಿಸಿಕೊಳ್ಳಬೇಕಾದ ಅಗತ್ಯ ಬಿದ್ದಿತ್ತು. ಆತನ ಪ್ರೇಮವು ಆಕೆಗೆ ಯೋಗ್ಯವಾಗಬೇಕಾಗಿತ್ತು. ಹೀಗೆ ದರ್ಶನ, ಒಲವು, ವಿವಾಹ, ವಾಗ್ದಾನ, ನಿರಾಕರಣೆ, ಪರಿತಾಪ, ಪುನಸ್ಸಮಾಗಮ ಈ ಕ್ರಮದಲ್ಲಿ ಕಥೆ ಕಟ್ಟುತ್ತದೆ. ಇದಕ್ಕೆ ತಕ್ಕಂತೆ ಕಥಾವಿಷಯ ಹಂಚಿ ಅಂಕಗಳು ರಚಿತವಾಗಿದೆ.

ಮೊದಲ ಮೂರಂಕಗಳ ಕಥೆ ಸೇರಿ ಒಂದು ಸಂಯುಕ್ತಾಂಕವೆಂಬಂತೆ ಕಾಣುತ್ತದೆ. ಆದರ ಪರಿಣಾಮವಾಗಿ ಶಕುನ್ತಲೆಯ ಪ್ರಯಾಣ ಆಗಬೇಕಾಗಿ ಬಂತು, ಹಸ್ತಿನಾಪುರಕ್ಕೆ. ಅದಕ್ಕಾಗಿ ನಾಲ್ಕನೆಯ ಅಂಕದಲ್ಲಿ ಬೀಳ್ಕೊಡುಗೆ. ಆ ಅಂಕ ಸಹಜವಾಗಿ ಐದನೆಯದಕ್ಕೆ ಒಯ್ಯುವ ಮಾರ್ಗ. ಐದನೆಯ ಅಂಕ ಲೋಕವ್ಯವಹಾರ, ಲೋಕಧರ್ಮ ಇವು ಶಕುನ್ತಲೆಯನ್ನು ತಬ್ಬಲಿ ಮಾಡಿದ ದೃಶ್ಯ. ತುಂಬಿದ ಆಸ್ಥಾನದಲ್ಲಿ ಗಂಡನು ತ್ಯಾಗಮಾಡಿದ ರೂಪಕ ಕಾಂಡ. ಭೂಮಿಯ ಮೇಲೆ ಆಸರೆ ಇಲ್ಲದೆ ಏಕಾಕಿಯಾದ ಆಕೆಯನ್ನು ಅಲ್ಲಿಂದ ಮುಂದಕ್ಕೆ ಸ್ವರ್ಗಕ್ಕೆ ದೇವತೆಗಳು ಕರೆದುಕೊಂಡು ಹೋಗಿದ್ದಾರೆ. ಆಕೆಗೆ ಸಂಬಂಧಿಸಿದಂತೆ ನೆನಪೂ ಪಶ್ಚಾತ್ತಾಪವೂ ಹುಟ್ಟಿ ಆಕೆಗಾಗಿ ರಾಜನು ಹಂಬಲಿಸುವ ಅಂಕ ಆರನೆಯದು. ಈವರೆಗಾಗಲೇ ಮೊದಲ ನಾಲ್ಕಂಕಗಳ ಕಣ್ವಾಶ್ರಮದ ಕಾರ್ಯ ಮುಗಿದಿದೆ. ಭೂಲೋಕದ ಪ್ರಯೋಜನ ಮಿತಿ ಮುಟ್ಟಿದೆ; ಸ್ವರ್ಗ ಲೋಕದ ದೃಷ್ಟಿಬಿದ್ದು ಅವನ ಕಣ್ಣಿಗೆ ಕಾಣಿಸದೆಯೇ ದುಷ್ಯನ್ತನ ಮನಸ್ಸನ್ನು ಅರಿತುಕೊಳ್ಳುತ್ತಿದೆ. ಕಾರ್ಯಮುಖವಾಗಿ ದುಷ್ಯನ್ತನನ್ನು ಸ್ವರ್ಗಲೋಕಕ್ಕೆ ಒಯ್ಯಲು ಸಂಧಾನ ನಡೆಯಮೊದಲಾಗಿದೆ. ಒಯ್ಯಲು ಕರೆಯೂ ಬರುತ್ತದೆ. ನಾಲ್ಕನೆಯ ಅಂಕ ಹೇಗೆ ನಾಗರಿಕ ಪ್ರಪಂಚಕ್ಕೆ ಧರ್ಮಾರಣ್ಯದಿಂದ ಪ್ರವೇಶವಾಗುವಂತಹ ಒಂದು ಮಧ್ಯಾಂಕವೋ ಹಾಗೆ ಈ ಅಂಕ ಭೂಮಿಸ್ವರ್ಗ ಎರಡಕ್ಕೂ ಸಂಬಂಧಿಸಿ ಕಥಾಕಾರ್ಯ ಸ್ವರ್ಗಮುಖವಾಗತಕ್ಕ ಒಂದು ಮಧ್ಯಾಂಕವಾಗುತ್ತದೆ. ಏಳರಲ್ಲಿ ಕಾರ್ಯಸಿದ್ಧಿ; ಪ್ರೇಮಸಾಫಲ್ಯ. ಅಂಕ ಅಂಕಕ್ಕೆ ಹೀಗೆ ಅವಿಚ್ಛಿನ್ನವಾಗಿ ಇರುವ ಕಾರಣಕಾರ್ಯಸಂಗತಿ ಸ್ಪಷ್ಟವಾಗಿ ಕಾಣುವಂತಿದೆ. ಎಷ್ಟು ಆಪ್ತವಾಗೆಂದರೆ– ಒಂದು ಮಾತು, ಒಂದು ಯೋಜನೆ, ಒಂದು ಹೆಜ್ಜೆ ನಡಗೆ, ಪಾತ್ರದ ಕಾರ್ಯ ಇದಕ್ಕೆ ಸಾಧಕವಾಗದುದು, ಈ ವಿಧಾನವನ್ನು ಪೋಷಿಸದುದು, ಈ ಪರಿಣಾಮವನ್ನು ತ್ವರೆಗೊಳಿಸದುದು ಇಲ್ಲವೆನ್ನುವಷ್ಟು. ಅಷ್ಟು ನಿಯತಿಯ ಹಿಡಿತ ಇದೆ ನಾಟಕದ ಪೂರ್ತ. ಕಾಲಿದಾಸನು ತನ್ನ ಕವಿತಾ ವೈಭವದಿಂದಲೂ ನುಣುಪು ಹರಡುವ ಒಂದು ಕಲ್ಪನಾ ಜಾಲದಿಂದಲೂ ಈ ಸಂವಿಧಾನವನ್ನು ಕವಿಯದಿದ್ದಿದ್ದರೆ ಈ ರಚನೆಯಲ್ಲಿನ ಅಂಶ ಅಂಶದಲ್ಲಿ ಬೆಸುಗೆ, ಕೊಂಡಿ, ಅಗುಳಿ, ಕೀಲು ಯಾವ ಯಾವುದನ್ನು ಹೇಗೆ ಹೇಗೆ ಕವಿ ಗಮನಕೊಟ್ಟು ಮಾಡಿದ್ದಾನೆ, ಬಿಗಿಸಿದ್ದಾನೆ, ಕಡೆಗೆ ಮಾತುಗಳಿಗೆ ಹೀಗೇ ಅರ್ಥಮಾಡಬೇಕೆಂಬ

ಪರ್ಯಂತ ಬಯಸುತ್ತಾನೆ ಎಂಬುದು ಪ್ರತ್ಯಂಗದಲ್ಲಿಯೂ ಕಂಡು ಈ ನಿಯತಿಗೆ ಬೇಸರ ಬರುತ್ತಿತ್ತೊ ಏನೊ. ಅದು ಹಾಗಿರಲಿ.

ಇನ್ನೊಂದು ಬಗೆಯಲ್ಲಿಯೂ ಇದನ್ನು ನೋಡಬಹುದು. ಒಂದಾಶ್ರಮದಲ್ಲಿ ಮೊದಲಾಗಿ ಇನ್ನೊಂದು ಆಶ್ರಮದಲ್ಲಿ ನಡೆದ ಸಂಗತಿಗಳಿಂದ ಪೂರ್ಣವಾದ ಈ ಕಥೆಯಲ್ಲಿ ಮೂರು ಪ್ರಪಂಚಗಳ ಸಂತತಿ ಇದೆ: ಮನುಷ್ಯ ವ್ಯವಹಾರದಿಂದ ದೂರವಾಗಿ ಒಂದು ದ್ವೀಪದಂತೆ ತನ್ನ ಬದುಕನ್ನು ನಡಸಿಕೊಂಡು ಪ್ರಪಂಚಕ್ಕೆ ಅತಿ ಹೊರಗಲ್ಲದಿದ್ದರೂ, ಅದರ ನಡೆನುಡಿ ಬಳಕೆಗಳ ಕಡೆ ಮನಸ್ಸು ಕೊಡದೆ ತನ್ನ ಜೀವನವನ್ನು ನಡಸಿಕೊಂಡು ಹೋಗುತ್ತ, ಆದರೆ ಅದರ ಸಹಾಯ ರಕ್ಷಣೆಗಳಿಗೆ ಕೃತಜ್ಞವಾಗಿದ್ದ ಧರ್ಮಾರಣ್ಯದ ಜೀವನ, ಪ್ರಪಂಚ ಒಂದು ನಿಟ್ಟು; ಅದರ ಮೇಲೆ ಪ್ರಪಂಚದ ಒಂದು ಸತ್ವ ಕವಿಯುವುದು; ಅಲ್ಲಿ ಆಗ ಶಾಂತಿಭಂಗ ಉಂಟಾಗುವುದು; ಅದಕ್ಕೆ ಸೋತ ಒಂದು ಜೀವ ಅಲ್ಲಿಂದ ಹೊರ ಬಿದ್ದು ತಾನು ವರಿಸಿದ ಪ್ರಪಂಚದ ಕಡೆಗೆ ಹೋಗಬೇಕಾಗುವುದು. ಆ ಲೋಕದ ನಿಯಮ, ನೀತಿ, ರೀತಿ, ವ್ಯವಹಾರ, ಪ್ರಮಾಣಗಳು ಇನ್ನೊಂದು ಬಗೆಯವು. ಅದಕ್ಕೆ ತಕ್ಕ ಪ್ರಮಾಣವನ್ನು ಒದಗಿಸಿ ಒಪ್ಪಿಸಲಾಗದ ವ್ಯಕ್ತಿ ತನ್ನ ನೋವಿನಲ್ಲಿ ದಿಕ್ಕೆಟ್ಟಿರಲು ಅದರ ಸಹಾಯಕ್ಕೆ ಒದಗಿ ಬಂದ ದೇವಲೋಕ ಮೂರನೆಯದು. ಜನವರಿಯದ ನೆಲದ ಮೂಲೆಯಲ್ಲಿ ಹುಟ್ಟಿ, ಲೋಕವನ್ನು ಮೋಹಿಸಿ ನೆಚ್ಚಿ ನೋವು ತಿಂದು ಬಳಲಿದ ಒಂದು ಜೀವವನ್ನು ಮೇಲಿನ ಧರ್ಮಮಂಡಲದಲ್ಲಿ ವಾಸಮಾಡುವ ತಾಯಿಶಕ್ತಿ ಅದನ್ನು ತನ್ನ ಮಡಿಲಲ್ಲಿ ತವರಿಗೆ ಎತ್ತಿಕೊಂಡು ಹೋಗಿ ಹೇಗೆ ಕಾಪಾಡಿತು ಎಂಬ ಚಿತ್ರವಿದೆ. ನಾಟಕದಲ್ಲಿ ಮೊದಲ ಕಣ್ವಾಶ್ರಮ ಸುಂದರವಾದುದು ನಿಜ. ಆದರೆ ಅದು ಪ್ರಪಂಚದ ಎದುರು, ಅಲ್ಲಿನ ದುಶ್ಶಕ್ತಿಗಳ ಎದುರು ಸಾಧಾರಣವಾಗಿ ಅಸಹಾಯವಾದ್ದು; ಅಲ್ಲಿ ಕೇಡಿಗತನವಿಲ್ಲ. ಕೇಡು ಸಂಭವಿಸುವಂತಿದ್ದರೆ ಶಾಂತಿ ಕರ್ಮವಾಚರಿಸುವುದೋ ಇತರರ ಸಹಾಯ ಬೇಡುವುದೋ ಮಾತ್ರ ಅದಕ್ಕೆ ಗೊತ್ತು; ಶಿಕ್ಷೆಯಾಗಲಿ ರಕ್ಷೆಯಾಗಲಿ ಅಲ್ಲಿಗೆ ಹೊರಗಿಂದ ಬರತಕ್ಕವು. ತನ್ನ ಬದುಕನ್ನು ತಾನು ಲೋಕದ ಅರಿವಿಲ್ಲದೆ, ಅದರ ಸಂಪರ್ಕ ಬಯಸದೆ ಬದುಕುತ್ತಿದೆ. ಅದನ್ನು ತಲ್ಲಣಗೊಳಿಸುತ್ತದೆ ಹೊರಗಿನಿಂದ ಬಂದ ತಾಪಗಳು; ಕಾಡಾನೆ, ರಾಜರ ಮೃಗಯಾ ವಿನೋದ, ಬೆಡಗು, ಮೋಹಕತೆ–ಕಠಿನ ಋಷಿಯ ಸುಲಭ ಕೋಪ ಇಂಥವು. ಅದರ ಜೀವನವನ್ನು ರಕ್ಷಿಸುವ ಭಾರ ಅವನೀರಕ್ಷಕರದು. ಅವರ ಪ್ರಭಾವಗಳಿಂದ ಉಂಟಾದ ಪರಿಣಾಮಗಳನ್ನು ಅವರೇ ದುರ್ಲಕ್ಷಿಸಿದರೆ ಪಾರು ಮಾಡಬಲ್ಲವರು ಇನ್ನಾರು? ದೇವರು. ನಿಜವಾಗಿ ಎಂದರೆ ನಿಜವಾಗಿ; ಇಲ್ಲವಾದರೆ ಧರ್ಮ ಸಂಕೇತವಾಗಿ; ಅಥವಾ ಮನುಷ್ಯ ಕಲ್ಪನೆಯಲ್ಲಿ. ಈ ಮೂರು ಲೋಕಗಳಲ್ಲಿ ಮೂರು ಬಗೆಯ ಧರ್ಮ, ಮೂರು ಬಗೆಯ ನಡತೆ, ವ್ಯವಹಾರ. ಮೂರೂ ಸರಿ.; ಮೂರೂ ಮೂರು ಮಟ್ಟಗಳು; ಮೂರೂ ಸೇರಿ ಜಗದ್ವ್ಯಾಪಾರದ ಕಲ್ಯಾಣದ ಅಂಗಗಳು. ಆಯಾ ಪ್ರಪಂಚದಲ್ಲಿ ಆಯಾ ನಿಯಮನೀತಿಗಳೇ ಕರ್ತವ್ಯಗಳು; ಆ ಕರ್ತವ್ಯನಿಷ್ಠೆಯನ್ನು ನಡಸಿಕೊಂಡರೆ, ಧರ್ಮ ಅವರನ್ನು ಕಾಪಾಡುವುದು. ಸ್ವಲ್ಪ ತಪ್ಪಿದರೂ ಪ್ರಮಾದದಿಂದಾಗಲಿ ಅಜ್ಞಾನದಿಂದಾಗಲಿ ಒಂದಿಷ್ಟು ಅಲುಗಿದರೂ ಆಯಿತು ತಪ್ಪು,–ಎರಗಿತು ಶಿಕ್ಷೆ. ಸರಿಯಾಗಿ ನಡೆದುಕೊಂಡಿತೋ ತಾಯಾಗಿ ಇಳಿದು ಬಂದು ಧರ್ಮ ಅದನ್ನು ಖಂಡಿತ ಕಾಪಾಡುವುದು ಎಂಬ ನಂಬಿಕೆಯ ಕಾಕು ಕೇಳುತ್ತದೆ ನಾಟಕದಲ್ಲಿ.

ಇದು ಕಥೆಯ ನೆಲಗಟ್ಟಿಗೆ ಸಹಜವೂ ಹೌದು. ಶಕುಂತಲೆ ಅಪ್ಸರೆಯ ಮಗಳು; ಒಬ್ಬ ರಾಜರ್ಷಿಯ ತಪೋಭಂಗ ಮಾಡಲು ಇಂದ್ರನು ಕಳಿಸಿದ ಮೇನಕೆಯ ಮಗಳು. ಅರ್ಧ ಭೂಮಿ ಅರ್ಧ ದೇವಲೋಕ ಈಕೆಯ ಹುಟ್ಟಿಗೆ ಕಾರಣ; ತಪೋಭೂಮಿಯಲ್ಲಿ ತಪೋಭಂಗದ ಫಲವಾಗಿ ಆಕೆ ಹುಟ್ಟಿದವಳು; ಕಾಮ ಪ್ರೇಮಗಳ ಸಹಜ ಶಿಶು, ಕ್ಷತ್ರಿಯ ಕನ್ಯೆ. ತಂದೆ ತಾಯಿಗಳು ಬಿಟ್ಟಿರಲು ನೀರ ಹಕ್ಕಿಗಳ ನಡುವೆ ಸಿಕ್ಕಿದ ಆಕೆಯನ್ನು ಒಂದು ಋಷ್ಯಾಶ್ರಮ ಸಾಕಿಕೊಂಡು ಬೆಳಸಿತು. ತನ್ನ ಮೃದು ಸಂಪತ್ತಿಯನ್ನೆಲ್ಲ ಊಡಿತು; ತನ್ನ ನಿಯಮದಲ್ಲಿ ಬೆಳಸಿತು. ಆ ನಿಯಮದ ಪ್ರಯೋಜನ ಇಲ್ಲದೆ ಹೋಗಲಿಲ್ಲ. ಆದರೆ ಇನ್ನೊಂದು ಕ್ಷತ್ರಿಯ ಪ್ರಭಾವವನ್ನು ಕಂಡ ಕೂಡಲೆ ಸ್ವಾಸ್ಥ್ಯ ಕೆಟ್ಟು ಅದಕ್ಕೆ ಬಂದಿ ಬಿದ್ದು ತನ್ನನ್ನು ಮಾರಿಕೊಂಡಿತು. ಆದ್ದರಿಂದ ಈ ಆಶ್ರಮದಲ್ಲಿ ಇನ್ನು ಮುಂದೆ ಅದಕ್ಕೆ ಎಡೆಯಿಲ್ಲ. ಅದರ ಗತಿ ಏನು ಮುಂದೆ? ತಾನಾಗಿ ಲೋಕದ ಕೈಗೆ ಸಿಕ್ಕಿಕೊಂಡ ಮೇಲೆ? ಪೆಟ್ಟು ತಿಂದ ಮೇಲೆ? ಎಂಬುದರ ವೃತ್ತಾಂತ ಬೆಳೆಯುವುದು. ತನ್ನ ಶುಚಿತ್ವವನ್ನೂ ಸತೀತ್ವವನ್ನೂ ಕಾಪಾಡಿಕೊಂಡು ಕಷ್ಟಪಟ್ಟ ಆಕೆಯ ಸ್ತ್ರೀಧರ್ಮ ಆಕೆಯನ್ನು ಮಹಾವ್ಯಕ್ತಿಯನ್ನಾಗಿ ಮಾಡಿತು. ಈ ವಿಧಾನದ ಚಿತ್ರವೂ ಅಂಕಗಳಲ್ಲಿ ರೂಪುಗೊಳ್ಳುವುದು.

ತತ್ವ ಒಂದನ್ನು ಮನಸ್ಸಿನಲ್ಲಿಟ್ಟುಕೊಂಡು ಕವಿ ನಾಟಕವನ್ನು ಬರೆದಿದ್ದರೆ ಹೇಗೆ ಅದನ್ನು ವಿಕಾಸಗೊಳಿಸುತ್ತಿದ್ದನೊ ಹಾಗಿದೆ ಅಂಕರಚನೆ ಎನ್ನುವವರುಂಟು. ಬಹುತರ, ಮಹಾಕವಿ ರವೀಂದ್ರನಾಥ ಠಾಕೂರರಂತಹವರು ಮಾಡಿರುವ ಸಮಾಲೋಚನೆಯಲ್ಲಿ ಈ ತತ್ವದೃಷ್ಟಿಗೇ ಬಲಕಾಣುತ್ತದೆ. ಈ ನಾಟಕದ ಸ್ವಾರಸ್ಯಕ್ಕೆ ತಲೆದೂಗಿದ ಜರ್ಮನ್ ಕವಿ ಗಯ್‌ಠೆ ಅವರು ಆಡಿದ ಮೆಚ್ಚನ್ನು ಅಕ್ಷರಶಃ ನಿಜವೆಂದು ವಾದಿಸಿ, ಅದನ್ನು ವಿಸ್ತರಿಸಿ ತಮ್ಮ ತತ್ವಮಂಡನೆಯನ್ನು ಮಾಡಿದ್ದಾರೆ ರವೀಂದ್ರರು. ಆತನು ಹೇಳಿರುವುದಾದರೂ ಏನು? ವರ್ಷಾರಂಭದಲ್ಲಿನ ಎಳತನದ ಹೂವಿಸರ ಬೇಕೆ? ಇಳಿ ವಯಸ್ಸಿನ ಫಲಸಂಪತ್ತಿ ಬೇಕೆ? ಆತ್ಮವು ಯಾವುದರಿಂದ ಮೋಹಗೊಳ್ಳುವುದೊ, ಉತ್ಸವವನ್ನನುಭವಿಸುವುದೊ, ಪೋಷಿತವಾಗುವುದೊ ಅವೆಲ್ಲ ಬೇಕೆ? ಭೂಮಿ ಆಕಾಶಗಳ ಸಮ್ಮಿಳನ ಬೇಕೆ? 'ಶಾಕುಂತಲ' ಎಂಬ ಒಂದು ಹೆಸರಲ್ಲಿ ಅವೆಲ್ಲ ಅಡಕವಾದಾವು ಎಂದು. ದೇಶ, ಕಾಲ, ಭಾಷೆ ಇವುಗಳಲ್ಲಿ ಬೇರೆ ಬೇರಾದ ಇಬ್ಬರು ಮಹಾಕವಿಗಳು ಮೂರನೆಯ ಮಹಾಕವಿಯ ಕೃತಿಯನ್ನು ಕುರಿತು ಈ ಮಾತನ್ನು ನುಡಿದಿರುವುದು ಸೌಹಾರ್ದದ ಒಂದು ಸುಗ್ಗಿ. ಹೌದು; ಇವೆಲ್ಲ ಅಲ್ಲಿವೆ! ವಸಂತ, ಯೌವನ, ಸಫಲತೆ, ತಪಸ್ಸು, ಪ್ರಪಂಚಧರ್ಮ, ಲೋಕೋತ್ತರ ಕವಿತಾ ಮಾಧುರ್ಯ, ಮಾನವ ಸ್ವಭಾವದ ನಯವಾದ ಮರ್ಮಸ್ಪರ್ಶಿಯಾದ ತಿಳಿವು, ಅಭಿವ್ಯಂಜನೆ ಇವೆಲ್ಲ ಸಿಕ್ಕುತ್ತವೆ ನಾಟಕದಲ್ಲಿ. ಠಾಕೂರರು ಹೇಳುವಂತೆ, ಕಾಮ, ಚಪಲತೆ, ಯೌವನಗಳಲ್ಲಿ ಅಲ್ಲ ಮಂಗಳ; ಜೀವನದ ಸಫಲತೆ. ಅದು ಧರ್ಮಕ್ಕೆ ಅಧೀನವಾಗಬೇಕು; ಲೋಕ ಕಲ್ಯಾಣಕ್ಕೆ ಸಾಧಕವಾಗಬೇಕು. ಕರ್ತವ್ಯ ಬುದ್ಧಿ ಸಂತತವಾಗಿ ಎಚ್ಚರಗೊಂಡೇ ಇರಬೇಕು. ಗಂಡು ಹೆಣ್ಣುಗಳ ಪ್ರೀತಿ ಎಷ್ಟು ಚೆಲುವಾದ್ದಾದರೂ ಅದಕ್ಕೆ ಭವ್ಯತೆ ಬರಬೇಕಾದರೆ ದೇಹ, ರೂಪ, ವಯಸ್ಸುಗಳ ಮತ್ತು ಮನಸ್ಸು ರಕ್ತಗಳ ಆಕರ್ಷಣೆ, ಕಾವು, ಸರಸಗಳಲ್ಲಿ ಅದು ಮುಗಿದರಾಗದು. ಎಷ್ಟು ಸುಂದರವಾಗಿ ಪ್ರಾಮಾಣಿಕವಾದರೂ ಆ ಒಲವು ನಶ್ವರ, ಕಡಮೆಯ ಮಟ್ಟದ್ದು; ನಿಜವಾದ ಪ್ರೇಮ ಪರಿಶುದ್ಧಿಗೆ ಸಂಬಂಧಿಸುವುದು; ವ್ಯವಹಾರ ವರಿತದ್ದು, ಅದಕ್ಕೆ ಅಲ್ಲಿ ತೀರದ್ದು, ಮೀರಿದ್ದು; ಲೋಕಕ್ಕೆ ಪರೀಕ್ಷೆ ಕೊಟ್ಟು, ತನ್ನ ಯೋಗ್ಯತೆಯನ್ನು ನೋವಿನ ಮೂಲಕ, ತಪಸ್ಸು ನಿಷ್ಠೆಗಳ ಮೂಲಕ, ಧರ್ಮಕರ್ಮದ ಮೂಲಕ ಸ್ಥಾಪಿಸಿಕೊಳ್ಳತಕ್ಕದ್ದು. ತಮ್ಮ ಮನಸ್ಸಿನ ಸಂತೋಷಗಳಿಗಾಗಿ ಅಥವಾ ರೂಪ ತೃಷೆಗಳನ್ನು ಆರಿಸಿಕೊಳ್ಳುವ ಸಲುವಾಗಿ ಸಡಿಲಗೊಂಡ ಅಥವಾ ಸೋತ ಹೃದಯಗಳು ಪ್ರಪಂಚದ ಎಲ್ಲ ಕಾಲದ ಸೌಭಾಗ್ಯವನ್ನಾಗಲಿ ಮಾನವನ ಜೀವಿತ ಧ್ಯೇಯವನ್ನಾಗಲಿ ಸಾಧಿಸಲಾರವು. ತನ್ನಿಂದ–ತನ್ನ ಪ್ರೀತಿಯಿಂದ ಕೂಡ ಸುತ್ತಲ ಪ್ರಪಂಚದ ಸಂತೋಷ ಸಾಧನಾ ಕಾರ್ಯ ನಿಲ್ಲದೆ ನಡೆಯಬೇಕು; ಲೋಕದ ಸೇವೆಯನ್ನೂ ಹೊಣೆಗಾರಿಕೆಯನ್ನೂ ಪ್ರೀತಿ ತನ್ನ ಏಕಾಂತಸುಖ

ಗಳಲ್ಲಿಯೊ ಅಲ್ಲಿನ ಆ ಕನಸುಗಳ ಮೋಹಕತೆಯಲ್ಲಿಯೊ ಮರತರೆ, ಲೋಕ ಅಂತಹ ಸ್ವಪ್ನಗಳನ್ನು ಮುರಿದೀತು; ಜನ ಕೆಟ್ಟಾರು; ಎಲ್ಲ ಕಾಲದ ಭಾಗ್ಯ ಬೆಳೆಯದೆ ಹೋದೀತು. ಹಾಗೆ ಸ್ವಾರ್ಥ ವಾದ್ದರಿಂದಲೇ ಶಕುನ್ತಲೆಯ ಪ್ರೇಮಕ್ಕೆ ನೋವು ತಟ್ಟದ್ದು. ಆಕೆ ವಿರಹದಲ್ಲಿ ಕ್ಲೇಶಪಡುತ್ತ, ವ್ರತಾಚಾರಿಯಾಗಿ ಬಹುಕಾಲ ತನ್ನ ಅಭೀಷ್ಟದ ನೆರವೇರಿಕೆಯಿಂದ ದೂರವಾಗಿರಬೇಕಾಗಿ ಬಂದದ್ದು. ದುಷ್ಯನ್ತ ಶಕುನ್ತಲೆಯರ ಪ್ರೇಮ ನಿಯಮನಿಷ್ಠವಾಗುವುದ ಕ್ಕಾಗಿಯೇ ಅದನ್ನು ಹೆಚ್ಚು ಗಂಭೀರವಾಗಿ ಧರ್ಮವಾಗಿ ಮಾಡುವ ಉದ್ದೇಶದಿಂದಲೇ ಕವಿ ಈ ನಾಟಕವನ್ನು ರಚಿಸಿದುದು ಎನ್ನು ವವರು ಹಾಗೆ ನೋಡಿದರೂ ಅಂಕ ವಿಭಾಗದಲ್ಲಿ ಈ ಅಂಶವನ್ನು ಕಾಣಬಹುದು. ಕವಿ ಹೀಗೆ ಯೋಚಿಸಿದ್ದನೊ ಇಲ್ಲವೊ, ಈ ಯೋಚನಾ ಮಾರ್ಗಕ್ಕೆ ಅವಕಾಶವುಂಟು ನಾಟಕದಲ್ಲಿ. ಈ ದೃಷ್ಟಿಯಿಂದ ನಾಟಕದ ರಸಾನುಭವ ಸೌಂದರ್ಯ ಕರುಣೆಗಳ ಪ್ರಪಂಚದ ಎಲ್ಲೆಯನ್ನು ಮೀರಿ ಮಹತ್ವಕ್ಕೂ ಭವ್ಯತೆಗೂ ಸೇರು ವುದು. ರೂಪಶೃಂಗಾರವಲ್ಲ: ಹದಗೊಂಡ, ದೃಢಗೊಂಡ, ಸ್ವಾರ್ಥವನ್ನು ತೊರೆದು ಶುದ್ಧವಾದ, ಬಹುಕಾಲ ಪಟ್ಟ ಪರಿತಾಪ ದಿಂದಲೂ ಬಹುವಾಗಿ ಕಾದ ಪ್ರೇಮದ ಸಹನೆಯಿಂದಲೂ ಪಕ್ವವಾದ ಪ್ರೇಮ ಇಲ್ಲಿ ಕಾಣುವುದು. ಆದುದರಿಂದಲೇ ಕವಿ ಮೊದಲ ನಾಲ್ಕಂಕಗಳಲ್ಲಿ ಮಧುರವಾದ ವಸಂತ ಅಥವಾ ಒಡ್ಡಿದ ಚೆಲುವಿನಂತಿರುವ ಪ್ರಪಂಚವನ್ನು ಒಲವು, ಸ್ನೇಹ, ಮೃದುತೆ, ಸರಳತೆ, ಕಪಟವರಿಯದ ಸ್ವಭಾವೋತ್ಥಾನದ ರೂಪ ವೈಭವ, ಯೌವನ ವಿಲಾಸ, ತಾಯ್ತನದ ಮೃದುವತ್ಸಲತೆ, ಮೋಹಕತೆ ಎಲ್ಲವನ್ನೂ ಕಾಣಿಸಿ ಅದು ಸಾಲದೆಂಬಂತೆ ಮುಂದಿನ ಮೂರಂಕಗಳ ಮಂದಿರವನ್ನು ಕಟ್ಟಿರುವುದು. ಈ ಅಂಕಗಳಲ್ಲಿ ಬದುಕು ಆರಂಭ ವಾಗುವುದು ಮಾತ್ರ; ಯೌವನ ವಿಕಸನದಲ್ಲಿಯಾಗಲಿ ಗಾಂಧರ್ವ ವಿವಾಹದಿಂದಲಾಗಲಿ ಬದುಕು ಮುಗಿಯಲಿಲ್ಲ; ಅಲ್ಲಿಂದ ಮೊದಲಾಗುವುದು. ಅದು ಲೋಕಕ್ಕೆ ಹೇಗೆ ಕಾಣುತ್ತದೆ ಎಂಬುದು ತರುವಾಯದ ಪ್ರಶ್ನೆ. ತನ್ನ–ತನ್ನಿ ನಿಯನ ಸಂಬಂಧ ವನ್ನು ಕಂಡಿದ್ದವರು ಎದುರಿಗಿಲ್ಲ; ಆದ್ದರಿಂದ ಅದಕ್ಕೆ ಸಾಕ್ಷಿ ಪ್ರಮಾಣಗಳಿಲ್ಲ. ನಿಜ, ಆಕೆಯ ದುರದೃಷ್ಟದಿಂದ ಪ್ರತಿವಾದಿಯೇ ನ್ಯಾಯಾಧೀಶನೂ ಆಗಿದ್ದಾನೆ. ಅದರೆ ಲೋಕಕ್ಕೆ ಅವರ ಬಾಂಧವ್ಯ ಸ್ಥಿರಪಡಬೇಕಾದರೆ ದೊರೆಯ ಕಡೆಯದಾದ ನಿರ್ಣಾಯಕ ಕುರುಹು ಒಂದು ಬೇಕು. ಎಚ್ಚರವಿಲ್ಲದೆ ಅದನ್ನು ಕಳೆದುಕೊಂಡಿದ್ದಳು ಆಕೆ; ಸಮಯಕ್ಕೆ ಉಂಗುರ ಸಿಕ್ಕದಾಯಿತು. ಆದುದರಿಂದ ಲೋಕ ಆಕೆಯನ್ನು ನಿರಾಕರಿಸಿತು; ಲೋಕದ ವ್ಯವಹಾರ ಶಾಸನಗಳ ಮಾತನ್ನು ರಾಜನು ಆಡಿದರೆ, ಶಾರ್ಙ್ಗರವನು ಸಾಮಾನ್ಯರ ಮಾತನ್ನು ಆಡಿ, ನಾಯಕ ನಾಯಿಕೆಯರಿಬ್ಬರ ಮೇಲೂ ದೋಷ ಹೊರಿಸಿ ಹೆಣ್ಣನ್ನು ಕೈಬಿಟ್ಟು ಹೋಗುತ್ತಾನೆ. ಲೋಕ ಕೈಬಿಟ್ಟ ಮೇಲೆ ಆಕೆಗೆ ಗತಿಯಾರು? ಆಕೆಯ ಭಾಗದ ದೈವ, ಧರ್ಮ. ಇವೆರಡೂ ಆಕೆಯನ್ನು ಹೇಗೆ ಕಾಪಾಡಿದವು, ತಾಪಗಳನ್ನು ಬೆಳಸಿ ಆ ಬೇಗೆಯಲ್ಲಿ ಒಳಕೊಳೆಗಳನ್ನು ಕಳೆದು ಕಡೆಗೆ ಹೇಗೆ ಅವು ಅನ್ಯೋನ್ಯ ಲಾಭಕ್ಕೆ ಇವರನ್ನು ಯೋಗ್ಯರನ್ನಾಗಿ ಮಾಡಿದವು, ಅವರು ಬಹುಕಾಲ ಹಂಬಲಿಸಿ, ಕಡೆಗೆ ಸೇರುವುದಕ್ಕೆ ಹೇಗೆ ಅವರ ಹೃದಯದ ಸಂಸ್ಕಾರ ಪರಿಪಾಕಗಳು ಪೂರ್ವಾವಶ್ಯಕತೆಗಳಾದವು ಎಂಬುದನ್ನು ಕವಿ ತೋರಿಸಿದ್ದಾನೆ. ಲೋಕ ಕೈಬಿಟ್ಟ ಜೀವವನ್ನು ದೇವರು, ಧರ್ಮ, ಧರ್ಮದ ಅಧಿಕಾರಿಗಳೆಂದು ಜನ ನಂಬಿ ಕೊಂಡಿರುವ ಇಂದ್ರಾದಿ ಋತನಾಯಕರು ಹೇಗೆ ಕಾಪಾಡಿದರು, ಅದಕ್ಕೆ ಪುನಃ ಸ್ವೀಕಾರ ಬರಿಸಿದರು ಎಂಬುದು ಕಡೆಯಂಕಗಳ ಕಥೆಯಾಗುತ್ತದೆ. ಭೂಮಿ ನಿರಸನ ಮಾಡಿ ದೂಡಿದುದನ್ನು ಸ್ವರ್ಗ ತಾನೇ ಕೂಡಿಸಬೇಕು? ಪರಿಣಯಗಳು ಆಗುವುದು ಸ್ವರ್ಗದಲ್ಲಿ ಎಂಬ ಪಾಶ್ಚಾತ್ಯರ ನಾಣ್ಣುಡಿ ಒಂದುಂಟು: ಶಕುನ್ತಲೆ ದುಷ್ಯನ್ತರ ಗಾಂಧರ್ವ ವಿವಾಹ ಕಣ್ವಾಶ್ರಮದಲ್ಲಿ ಆಗಿದ್ದರೂ, ಅದು ಆತ್ಮಗಳ ಪರಿಣಯವಲ್ಲ; ದೇಹಗಳದು; ಹೆಚ್ಚೆಂದರೆ ಮನಸ್ಸಿನ ಒಂದು ಮಟ್ಟದ್ದು; ಅವರ ಪುನಸ್ಸಮಾಗಮ ಆದಾಗಲೇ ಅವರ ಮದುವೆ ಧರ್ಮಕ್ಕೂ ದೇವತೆಗಳಿಗೂ ಒಪ್ಪಿತೆಂಬ ಸಂತೋಷ ತರತಕ್ಕದ್ದು; ಆ ಪ್ರೇಮದ ಸನ್ನಿವೇಶಕ್ಕೂ, ಅವರಿಬ್ಬರ ಸ್ವಭಾವ ಶೀಲಗಳಿಗೂ, ಸಂಬಂಧಿಸಿದಂತಹ ಕೊರತೆ ಒಂದು ಹುಟ್ಟಿಕೊಂಡು ಅಪೂರ್ಣವಾದುದನ್ನು ಪೂರ್ಣಮಾಡುವ ಸಾಧನವಾಯಿತು. ಈ ಸಾಧನ ದುರ್ವಾಸರ ಶಾಪದ ಪ್ರಸಂಗ. ನಾಟಕದ ನಟ್ಟ ನಡುವಿಗೆ ಬರುತ್ತದೆ. ಎರಡು ಭಾಗವಾಗಿ ಕಥೆಯನ್ನು ಕಡಿದು ತೂಗುತ್ತದೆ. ಬೇಗೆ, ನೋವು, ಹೊತ್ತಿಸುತ್ತದೆ. ಮುಖ್ಯವಾದ ಈ ಎರಡು ಪಾತ್ರಗಳಿಗೆ ಏಕೆಂದು ತಿಳಿಯದಂತೆ ಅವರ ಬದುಕಿಗೆ ತಲ್ಲಣ ತಳಮಳಗಳುಂಟಾಗುವಂತೆ ಮಾಡುತ್ತದೆ. ಕಥೆಯ ರಸವನ್ನು ಕದಡಿ ಕಡೆಗೆ ಅದರಲ್ಲಿ ಸವಿ, ಶಾಂತಿ, ತಿಳಿ, ತಿಳಿವಳಿಕೆಗಳನ್ನು ತುಂಬುತ್ತದೆ. ಬದುಕನ್ನು ಗಂಭೀರತೆಗೆ ಒಯ್ಯುತ್ತದೆ; ಕಾಮ ಪ್ರೇಮವನ್ನು ಲೌಕಿಕ ಬೆಲೆಗಳ ತಕ್ಕಡಿಯಲ್ಲಿ ತೂಗಿ, ಅಳತೆಗೆ ಸಾಲದೆಂದು ಎಸೆದು, ಕಾಟಕೊಟ್ಟು, ತಾಪಕೊಟ್ಟು ಕಡೆಗೆ ಸ್ವರ್ಗಕ್ಕೆ ತೆಗೆದುಕೊಂಡು ಹೋಗಿ ಸುಖ ಸಂಪಾದಿಸಿ ಕೊಡುತ್ತದೆ. ಪರಸ್ಪರ ಅಭಿಲಾಷೆ ಬಲಿತು ಧರ್ಮಕ್ಕೆ ಅಧೀನವಾದ್ದರಿಂದ ಲೋಕೋಪಕಾರದಲ್ಲಿ ನಿರತವಾದುದರಿಂದ ಸಫಲ ಮಾಡುತ್ತದೆ.

ಅಂಕರಚನೆ ಇದನ್ನೂ ರೂಪಿಸುತ್ತದೆ.

## ಮೈಸೂರು ಪ್ರಾಂತಸಮಿತಿ:

### ಸಂಗೀತ ಮತ್ತು ವೀಣಾವಾದನ

**೧೮–೩–೪೩ನೆಯ ಗುರುವಾರ ಸಾಯಂಕಾಲ ೬–೩೦ಕ್ಕೆ** ಪರಿಷನ್ಮಂದಿರದಲ್ಲಿ ಶ್ರೀ ಪುರಂದರ ದಾಸರ ಕೃತಿಗಳ ಹಾಡುಗಾರಿಕೆ ಮತ್ತು ವೀಣಾವಾದನ ನಡೆಯುವುದು.

ಗಾಯಕರು: **ವೈಣಿಕ ವಿದ್ವಾನ್ ಶ್ರೀ. ಎಲ್. ರಾಜಾರಾಯರು**
ಪಿಟೀಲು: **ವಿದ್ವಾನ್ ಶ್ರೀ. ಟಿ. ಎನ್. ರಾಮಚಂದ್ರರಾಯರು**
ಮೃದಂಗ: **ವಿದ್ವಾನ್ ಶ್ರೀ. ಎ. ಶಿವಪ್ಪನವರು.**

**ರಾಜಸೇವಾಪ್ರಸಕ್ತ ಶ್ರೀ. ಟಿ. ಜಿ. ರಾಮಯ್ಯರ್, ಬಿ.ಎ. ಅವರು** 'ಕರ್ನಾಟಕ ಸಂಗೀತ' ವಿಷಯವಾಗಿ ಮಾಡುವ ಉಪನ್ಯಾಸದ ದಿನವನ್ನು ಮುಂದೆ ಪ್ರಕಟಿಸಲಾಗುವುದು.

## ಸಾದರ ಸ್ವೀಕಾರ

**ಉಭಯನಂದೂರ ತೋಪಕಟ್ಟೆ ಸಂಸ್ಥಾನ ಹಿರೇಮಠದ ಚರ ಪಟ್ಟಾಧ್ಯಕ್ಷ ಶ್ರೀಮಲೆಯ ಶಾಂತೇಶ್ವರ ಪುರಾಣವು:** (ಷಟ್ಪದಿಯಲ್ಲಿ) ಗ್ರಂಥಕರ್ತರು: ಶ್ರೀ. ಶಾಲಾಮಠೀಯ ಬಸವಪ್ಪಶಾಸ್ತ್ರೀ ಮುಸಿಗಿ ಅವರು. ಪ್ರಕಾಶಕರು: ಶ್ರೀ. ಶರಣಪ್ಪಣ್ಣ ಪತ್ತೇಪುರ, ದುಬಲಗುಂಡಿ. ಪುಸ್ತಕ ದೊರೆ ಯುವ ಸ್ಥಳ: ತುಳಾರಾಮಭವಾನಿ ಕಾಶಿಕಾಪಡೆ, ಗುಲ್ಬರ್ಗಾ. ಡೆಮ್ಮೈ ಆಕಾರದ ಅಷ್ಟಪತ್ರ ಪುಟಗಳು ೬೨+೮. ಬೆಲೆ ೧ ರೂಪಾಯಿ.

**ಶ್ರೀ ಮಲೆಯ ಶಾಂತೇಶ್ವರಾಷ್ಟೋತ್ತರ ಶತ ನಾಮಾವಳೀ:** ಲೇಖಕರು: ಶ್ರೀ ಶ್ರೀ. ಪಟ್ಟಾಧ್ಯಕ್ಷ ಶಾಂತವೀರಸ್ವಾಮಿಗಳು, ಚೌದಾಪುರಿ ಹಿರೇಮಠ ಗುಲ್ಬರ್ಗ. ಪ್ರಕಾಶಕರು: ನಂದೂರು ಹಿರೇಮಠದ ಶಿಷ್ಯರಾದ ಶ್ರೀ. ನಂದಿಕೋಲ ಸಿದ್ರಾಮಯ್ಯನವರು ಪರುತಾಬಾದ. ಪುಟಗಳು ೬. ಬೆಲೆ ೨ ಆಣೆಗಳು.

**ಕನ್ನಡಮ್ಮನ ಕರೆ** (ನಾಟಕ): ಗ್ರಂಥಕರ್ತರು: ಶ್ರೀ. ನಾಗಪ್ಪಾ ಶಾಂತ ವೀರಪ್ಪಾ ಶೆಟ್ಟರ ಅವರು. ಪ್ರಕಾಶಕರು: ಕನ್ನಡ ಪ್ರಚಾರಕ ಸಂಘ, ಸೊಲ್ಲಾಪುರ. ಆಕಾರ ಫೂಲ್‌ಸ್ಕ್ಯಾಪ್ ಅಷ್ಟಪತ್ರ. ೧೧೨ ಪುಟಗಳು. ಬೆಲೆ ೧ ರೂ. (ಪುಸ್ತಕ ದೊರೆಯುವ ಸ್ಥಳ: ಕಲ್ಯಾಣ ಕರ್ನಾಟಕ ಪ್ರೆಸ್, ಗುಲ್ಬರ್ಗಾ).

೭೪೮—೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

ಪ್ರತಿ ಶುಕ್ರವಾರ ಹೊರಡುತ್ತದೆ

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧॥
ಬಿಡಿ ಪತ್ರಿಕೆ: ೬ ಕಾಸು



ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

Reg. No. M. 3975

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ'ಯನ್ನು ಸಂಸ್ಥಾನದ ಎಲ್ಲಾ ಹೈಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೨೧

ಬೆಂಗಳೂರು: ಶುಕ್ರವಾರ, ಮಾರ್ಚಿ ೧೯, ೧೯೪೩.

## ಪರಿಷತ್ತಿನ ಮುನ್ನಡೆ

೯

ಭರತವರ್ಷದ ಇತರ ಪ್ರಾಂತದ ಜೀವನ ಸಾಹಿತ್ಯಗಳನ್ನೂ ಭರತವರ್ಷ ಅಲ್ಲದೆ ಪರದೇಶಗಳ ಜೀವನ ಸಾಹಿತ್ಯಗಳನ್ನೂ ಕುರಿತ ಕೆಲವು ಮುಖ್ಯ ಅಂಶಗಳನ್ನಾದರೂ ನಮ್ಮ ಜನಕ್ಕೆ ಪರಿಚಯ ಮಾಡಿಕೊಡುವುದು ಕೇಂದ್ರ ಸಂಸ್ಥೆಯ ಒಂದು ಕರ್ತವ್ಯ. ನಮ್ಮ ಹೊಸ ಸಾಹಿತ್ಯದ ಆರಂಭದೆಶೆಯಲ್ಲಿ ಹಿರಿಯರು ಬಂಗಾಳ, ಮಹಾರಾಷ್ಟ್ರ ಇಂಗ್ಲೆಂಡಿನ ಸಾಹಿತ್ಯಗಳಿಂದ ಸಹಾಯವನ್ನು ಪಡೆದರು. ಅದೇ ರೀತಿಯ ಸಹಾಯ ಅಲ್ಲದಿದ್ದರೂ ಈ ಪ್ರಾಂತಗಳಿಂದಲೂ ಇತರ ಪ್ರಾಂತಗಳಿಂದಲೂ ಬೇರೆ ರೀತಿಯ ಸಹಾಯವನ್ನು ಈಗ ನಾವು ಪಡೆಯಬಹುದು. ಎಷ್ಟೇ ಉತ್ತಮ ಸ್ಥಿತಿಯನ್ನು ಮುಟ್ಟಿದರೂ ಒಂದು ದೇಶಕ್ಕೆ ಒಂದು ಸಾಹಿತ್ಯಕ್ಕೆ ಇತರ ದೇಶ ಸಾಹಿತ್ಯಗಳಿಂದ ಆಗುವ ಸಹಾಯ ಇದ್ದೇ ಇರುತ್ತದೆ. ಸಹಾಯವಷ್ಟೇ ಅಲ್ಲದೆ ಜನರ ಮನಸ್ಸಿನಲ್ಲಿ ಮೂಡಿರುವ ಅನೇಕ ಕಲ್ಪನೆಗಳನ್ನು ತಿದ್ದುವುದೂ ಆವಶ್ಯಕವಾಗಿರುತ್ತದೆ. ಸಾಹಿತ್ಯದ ಮಾತನ್ನು ತೆಗೆದುಕೊಳ್ಳೋಣ. ಬಂಗಾಳದ ಲೇಖಕರು, ಹಿಂದಿ ಲೇಖಕರು, ಗುಜರಾತಿ ಲೇಖಕರು ಇದನ್ನು ಅದನ್ನು ಮಾಡುತ್ತಿದಾರೆ, ನಮ್ಮ ಲೇಖಕರು ಇಂಥ ಉತ್ತಮ ಕೆಲಸವನ್ನು ಮಾಡುತ್ತಿಲ್ಲ, ಎಂದು ಹೇಳುವ ಮಹನೀಯರುಂಟು. ಇನ್ನು ಕೆಲವರು ಲೋಕಪ್ರಸಿದ್ಧರಾದ ಠಾಕೂರರನ್ನೇ ಒಪ್ಪಿಕೊಳ್ಳುವುದಿಲ್ಲ; ಷೇಕ್ಸ್‌ಪಿಯರ್, ಚೆಕೋವ್, ಪರ್ಲ್‌ಬಕ್ ಇಂಥವರ ಬರವಣಿಗೆಯಲ್ಲಿ ಇರುವ ಲಕ್ಷಣ, ಠಾಕೂರರಲ್ಲಿ ಇಲ್ಲವೆಂದು ಇವರಿಗೆ ಅತೃಪ್ತಿ. ನಿಜವಾಗಿ ಆಯಾ ಭಾಷೆಯಲ್ಲಿ ಆಗಿರುವ ಕೆಲಸವೇನು, ಆಯಾ ಲೇಖಕರ ಶಕ್ತಿ ಸಾಮರ್ಥ್ಯ ಎಷ್ಟು ಎನ್ನುವ ತಿಳಿವಳಿಕೆ ಇದ್ದೇ ಇಂಥ ಮಾತನ್ನು ನಾವು ಆಡುವುದಿಲ್ಲ. ಆ ತಿಳಿವಳಿಕೆ ಇಲ್ಲದೆ ಇಂಥ ಮಾತನ್ನು ಆಡಿ ಪ್ರಯೋಜನವಿಲ್ಲ.

ಇತ್ತೀಚೆಗೆ ಭರತವರ್ಷಕ್ಕೆಲ್ಲ ಒಂದು ಸಾಹಿತ್ಯ ಪರಿಷತ್ತು ಆಗಬೇಕೆಂಬ ಒಂದು ಸಲಹೆ ಮುಂದೆಬರುತ್ತಿದೆ. ಒಂದೊಂದು ಜಾತಿ ಮತ ನುಡಿಯ ಮಂದಿ ಒಂದೊಂದು ಸ್ಥಾನವಾಗಬೇಕೆಂದು ಬಯಸುತ್ತಿರುವ ಈ ಕಾಲದಲ್ಲಿ ಇಂಥ ಮಾತೊಂದು ಬರುವುದೇ ಸಂತೋಷಕ್ಕೆ ವಿಷಯ. ಇತಿಹಾಸದ ಅಭಿಮಾನಿ ದೈವ ಭರತವರ್ಷದ ಹಣೆಯಲ್ಲಿ ಏನು ಬರೆದಿದೆಯೋ ಹೇಳುವಂತಿಲ್ಲ. ಅದು ಏನೇ ಆಗಿದ್ದರೂ, ಭರತವರ್ಷದ ಜನವೆಲ್ಲ ಒಂದು ಜನವಾಗಿ ಬಾಳಬೇಕೆಂಬ ಆಸೆ ಉಳ್ಳವರು ಆ ಬಗ್ಗೆ ಆವಶ್ಯಕವಾದ ಪ್ರಯತ್ನವನ್ನು ನಡಸಬೇಕು. ಭರತವರ್ಷದ ನಾನಾ ಭಾಷೆಗಳ ಪ್ರಮುಖ ಲೇಖಕರು ಸೇವಕರು ಒಂದು ಕಡೆ ಕೂಡಿ ಒಂದು ಗುರಿಯನ್ನು ಸಾಧಿಸತೊಡಗುವುದು ಈ ಪ್ರಯತ್ನದಲ್ಲಿ ಸೇರಿದೆ. ಭರತವರ್ಷದ ಉಳಿದ ಭಾಷೆಗಳ ಪರಿಷತ್ತುಗಳ ವಿಚಾರ ನಮಗೆ ಸಾಕಾದಷ್ಟು ತಿಳಿದಿಲ್ಲ. ತಿಳಿದಿರುವುದರಲ್ಲಿ ನಮ್ಮ ಪರಿಷತ್ತೇ ತಕ್ಕಷ್ಟು ಕಾಲ ಬಾಳಿ ಅವಿಚ್ಛಿನ್ನವಾಗಿ ಕೆಲಸಮಾಡಿ ಸಮ್ಮೇಳನಗಳನ್ನು ಬಿಡದೆ ನಡಸಿ ಬುಡ ಭದ್ರವಾಗಿ ನಿಂತಿರುವ ಸಂಸ್ಥೆ. ಭರತವರ್ಷಕ್ಕೆಲ್ಲ ಒಂದು ಸಾಹಿತ್ಯ ಪರಿಷತ್ ಆಗುವುದು ಆದರೆ ಅದನ್ನು ರೂಪುಗೊಳಿಸುವುದರಲ್ಲಿ ನಮ್ಮ ಸಂಸ್ಥೆಯ ಹೊಣೆ ಹೆಚ್ಚು.

ಈ ದೃಷ್ಟಿಗಳಿಂದ ನಾವು ನಮ್ಮ ನಾಡಿನಲ್ಲಿ ಅನೇಕ ಭಾಷೆಗಳ ಅಭ್ಯಾಸಕ್ಕೆ, ಅವುಗಳ ಬೆಳವಣಿಗೆಯನ್ನು ಕುರಿತ ಪ್ರಚಾರಕ್ಕೆ, ಅವುಗಳಿಂದ ಉತ್ತಮ ಗ್ರಂಥಗಳನ್ನು ಭಾಷಾಂತರ ಮಾಡಿಕೊಳ್ಳುವುದಕ್ಕೆ ಸುವ್ಯವಸ್ಥಿತವಾದ ಸಮಿತಿಗಳನ್ನು ಏರ್ಪಡಿಸಬೇಕು. ಸದ್ಯದಲ್ಲಿ ಭರತವರ್ಷದ ಹತ್ತು ಭಾಷೆಗಳ ಪರವಾಗಿ ಕೆಲಸ ಮಾಡುತ್ತಿರುವ ಪಿ. ಇ. ಎನ್. (ಲೇಕನಿ) ಸಂಸ್ಥೆಯೊಂದಿಗೆ ಸಹಕರಿಸಬೇಕು. ಪರದೇಶಗಳ ಸ್ಥಿತಿಗಳನ್ನು ಕುರಿತ ಮುಖ್ಯ ವಿವರಗಳನ್ನು ನಮ್ಮ ಜನಕ್ಕೆ ತಿಳಿಸಬಲ್ಲ ಮಹನೀಯರನ್ನು ಬೇಡಿ ಅತಂತ್ರವಲ್ಲದ ಸಾಹಿತ್ಯವನ್ನು ಸೃಷ್ಟಿ ಮಾಡಲು ತೊಡಗಬೇಕು.

ಮಹಿಳೆಯರ ಏಳಿಗೆಗೆಂದು ಪರಿಷತ್ತು ಈಗ ಕೆಲವು ವರ್ಷಗಳಿಂದ ಒಂದು ಮಹಿಳಾ ಶಾಖೆಯನ್ನು ನಡೆಸಿದೆ. ಪರಿಷತ್ತು ನಡೆಯುವುದಕ್ಕೆ ಸಾಕಾದಷ್ಟು ಉತ್ತೇಜನ ಇಲ್ಲದಿರುವಾಗ ಮಹಿಳಾಶಾಖೆಯ ಕೆಲಸಕ್ಕೆ ಉತ್ತೇಜನ ಸಾಲದೆಂದು ಹೇಳುವುದೇನು? ಹೀಗಿದ್ದರೂ ನಮ್ಮ ಸೋದರಿಯರು ಈ ಶಾಖೆಯಲ್ಲಿ ತಕ್ಕಷ್ಟು ಕೆಲಸವನ್ನು ಮಾಡಿದಾರೆ. ಇದಕ್ಕಾಗಿ ನಾವು ಅವರನ್ನು ಅಭಿನಂದಿಸಬೇಕಾಗಿದೆ. ಮುಂದೆ ಈ ಶಾಖೆ ಇನ್ನೂ ಹೆಚ್ಚು ಕೆಲಸ ಮಾಡಿ ಕರ್ನಾಟಕದ ಮಹಿಳೆಯರ ಯೋಗಕ್ಷೇಮ ಸಂಬಂಧವಾದ ಎಲ್ಲ ಏರ್ಪಾಡನ್ನೂ ಒಳಗೊಳ್ಳುವಂತೆ ಮಾಡಬೇಕು.

ಪರಿಷತ್ತಿನಲ್ಲಿ ಈಗ ಇರುವ ಗ್ರಂಥ ಸಂಗ್ರಹ ಇಂಥ ಸಂಸ್ಥೆಗೆ ತೀರ ಸಾಲದು. ನಾಡಿನ ಲೇಖಕರು ತಮ್ಮ ಗ್ರಂಥಗಳ ಪ್ರತಿಗಳನ್ನು ಕಳುಹಿಸಿಕೊಟ್ಟು ಸಂಗ್ರಹವನ್ನು ಪೂರ್ಣಮಾಡಬೇಕು. ಹಳೆಯ ಪುಸ್ತಕಗಳು, ತಾಳೆಯಗರಿ ಗ್ರಂಥಗಳು ಇಂಥ ಕಡೆ ಸೇರಿದರೆ ಹತ್ತು ಜನರ ಕಣ್ಣಿಗೆ ಬಿದ್ದು ಪ್ರಯೋಜನಕ್ಕೆ ಬರುತ್ತವೆ. ಇಂಥ ಪುಸ್ತಕಗಳನ್ನು ಉಳ್ಳ ಮಹನೀಯರೂ ಅವನ್ನು ಪರಿಷತ್ತಿಗೆ ದಾನ ಮಾಡಬೇಕು. ಇದಕ್ಕಾಗಿ ಪರಿಷತ್ತಿನಿಂದ ಪ್ರಚಾರ ನಡೆಯಬೇಕಾಗಿದೆ.

ಪರಿಷತ್ತಿನ ಅಚ್ಚಿನ ಕೆಲಸ ಸುಗಮವಾಗಿ ನಡೆಯುವಂತೆ ಹಿರಿಯರಾದ ರಾಜಸೇವಾಸಕ್ತ ಶ್ರೀಮಾನ್ ಬೆಳ್ಳೂರು ಮೈಲಾರ ಶ್ರೀಕಂಠಯ್ಯನವರು ಒಂದು ಅಚ್ಚುಕೂಟವನ್ನು ಮಾಡಿಕೊಟ್ಟಿದ್ದಾರೆ. ಇದನ್ನು ವಿಸ್ತಾರ ಪಡಿಸಬೇಕು. ಪರಿಷತ್ತು ಈವರೆಗೆ ಸಾಧ್ಯವಾದಷ್ಟು ಪ್ರಕಟನ ಕಾರ್ಯವನ್ನು ನಡಸಿದೆ. ಇನ್ನು ಮುಂದೆ ಇದನ್ನು ಬೆಳಸಬೇಕು.

ಈ ಕೆಲಸವನ್ನೆಲ್ಲ ಕೇಂದ್ರ ಸಂಸ್ಥೆ ಮಾಡಬೇಕೆಂದು ಹೇಳಿದೆ. ಆದರೆ ಈ ಮೊದಲೆ ಸ್ಪಷ್ಟಪಡಿಸಿರುವಂತೆ ಸ್ಥಳೀಯ ಸಂಸ್ಥೆಗಳನ್ನು ಪ್ರಾಂತಸಮಿತಿಗಳನ್ನು ಬಿಟ್ಟು ಕೇಂದ್ರ ಸಂಸ್ಥೆ ಒಂದು ಸಂಸ್ಥೆಯಲ್ಲ. ಹತ್ತು ಜನದ ಮನಸ್ಸನ್ನು, ಹತ್ತು ಸಂಸ್ಥೆಗಳ ಮನಸ್ಸನ್ನು, ಪ್ರಾಂತ ಸಮಿತಿಗಳ ಮನಸ್ಸನ್ನು ತಿಳಿಯುವುದಕ್ಕೆ ಕೇಂದ್ರಸಂಸ್ಥೆ ತೊಡಗಬಹುದು. ಇಂಥ ಕೆಲಸ ಆಗಬೇಕು ಎಂದು ಎಲ್ಲರೂ ಮನಸ್ಸುಮಾಡಿದರೆ ಆಯಾ ಸಂಸ್ಥೆಗಳೊಂದಿಗೆ ಸಹಕರಿಸಬಹುದು. ಮುಖ್ಯವಾಗಿ ಒಂದೊಂದು ಪ್ರಾಂತದಲ್ಲಿ ಆಗಬೇಕಾಗಿರುವ ಎಲ್ಲ ಕಾರ್ಯವನ್ನು ಆಯಾ ಪ್ರಾಂತಸಮಿತಿಗಳು ಕೈಗೆ ತೆಗೆದುಕೊಳ್ಳಬೇಕು, ನಡಸಬೇಕು.

೧೦

ಪರಿಷತ್ತು ಮಾಡಬೇಕಾಗಿರುವ ಈ ಕೆಲಸ ಕನ್ನಡದ ಒಟ್ಟು ಜನವನ್ನು ಕುರಿತದ್ದು. ಜಾತಿ ಮತ ಕುಲ ಗೋತ್ರಗಳ ಭೇದಬುದ್ಧಿಗೆ ಇದರಲ್ಲಿ ಎಡೆಯಿಲ್ಲ. ಈ ಕೆಲಸವನ್ನೆಲ್ಲ ಎಲ್ಲರೂ ಮಾಡಬೇಕು; ಮಿಳಿತವಾಗಿ ಮಾಡಬೇಕು; ಒಕ್ಕಟ್ಟಾಗಿ ಮಾಡಬೇಕು. ಹಲವು ವೇಳೆ ಅಭಿಪ್ರಾಯಗಳು ಬೇರೆಯಾಗಬಹುದು. ಆದರೆ ಗುರಿ ಬೇರೆ

(ಮುಂದಿನ ಪುಟಕ್ಕೆ)

# ಕನ್ನಡ ನುಡಿ

**ಶುಕ್ರವಾರ, ಮಾರ್ಚಿ ೧೯, ೧೯೪೩**

## ಅಕ್ಷರ ಪ್ರಚಾರದ ಸಮಸ್ಯೆಗಳು

ಅಕ್ಷರಪ್ರಚಾರಕ್ಕೆ ಸಂಬಂಧಪಟ್ಟಂತೆ ಹಲವು ಸಮಸ್ಯೆಗಳಿವೆ. ಅಕ್ಷರ ಪ್ರಚಾರ ಕಾರ್ಯವನ್ನು ಸರ್ಕಾರವೇ ಕೈಗೊಂಡು ನಡಸಬೇಕೆ, ಇಲ್ಲವೆ ಸಾರ್ವಜನಿಕ ಮತ್ತು ಸ್ಥಳೀಯ ಸಂಸ್ಥೆಗಳು ನಡಸಬೇಕೆ, ಇಲ್ಲವೆ ಸಾರ್ವಜನಿಕರು ಮಾತ್ರ ನಡಸತಕ್ಕದ್ದೆ – ಎಂಬುದು ಒಂದು ಮುಖ್ಯವಾದ ಸಮಸ್ಯೆ. ಸದ್ಯದ ಪರಿಸ್ಥಿತಿಯಲ್ಲಿ ಈ ಮೂರೂ ಅಂಗಗಳು ಕೈಗೂಡಿಸಿ ಕೆಲಸ ನಡಸುವುದು ವಿಹಿತವಾದೀತೆಂಬುದು ಮೈಸೂರು ಸಂಸ್ಥಾನದಲ್ಲಿ ನಡೆಯುತ್ತಿರುವ ಕಾರ್ಯಪ್ರಯತ್ನದಿಂದ ನಿದರ್ಶನಕ್ಕೆ ಬರುತ್ತಿದೆ. ಈಗ ಮೈಸೂರು ಸಂಸ್ಥಾನದಲ್ಲಿ ಸರ್ಕಾರದ ಸಹಾಯದಿಂದ ಒಂದು ಸಮಿತಿ ಏರ್ಪಟ್ಟು ತಕ್ಕಮಟ್ಟಿನ ಪ್ರಾರಂಭ ಕಾರ್ಯ ಮಾಡಿದೆ. ಸಂಸ್ಥಾನದ ನಾನಾ ಕಡೆಗಳಲ್ಲಿ ಕೇಂದ್ರಗಳನ್ನು ತೆರೆದು ವಯಸ್ಕರಲ್ಲಿ ಅಕ್ಷರ ಪ್ರಚಾರ ಮಾಡುತ್ತಿದೆ; ಕೇಂದ್ರಸಮಿತಿ ಒಂದು ಪ್ರಚಾರ ಪುಸ್ತಕಮಾಲೆಯನ್ನೂ, ‘ಬೆಳಕು’ ಎಂಬ ವಾರಪತ್ರಿಕೆಯನ್ನೂ ನಡಸಿಕೊಂಡು ಬರುತ್ತಿದೆ; ಹೀಗೆ ಉತ್ಸಾಹದಿಂದ ಮಾಡುತ್ತಿರುವ ಸಮಿತಿಯ ಕಾರ್ಯಕರ್ತರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇವೆ.

ಮೈಸೂರಿನ ಅಕ್ಷರ ಪ್ರಚಾರ ಸಮಿತಿ ತನ್ನ ಕಾರ್ಯವನ್ನು ಇನ್ನೂ ವ್ಯಾಪಕವಾಗಿ ಮಾಡಲು ಯೋಜನೆ ಮಾಡಬೇಕಾಗಿದೆ. ಈ ಕಾರ್ಯದಲ್ಲಿ ಸರ್ಕಾರದ ಧನ ಸಹಾಯವೂ, ಜನತೆಯ ‘ತನು-ಮನ’ ಸಹಾಯವೂ ಈಗಿಗಿಂತ ಹೆಚ್ಚಿನ ಪ್ರಮಾಣದಲ್ಲಿ ದೊರಕಬೇಕಾದದ್ದು ಅವಶ್ಯಕ. ನಾಡಿನ ಸ್ಥಳೀಯ ಮತ್ತು ಕರ್ನಾಟಕ ಸಂಘಗಳೇ ಮುಂತಾದ ಇತರ ಸಂಸ್ಥೆಗಳು ಪ್ರಚಾರ ಕಾರ್ಯದಲ್ಲಿ ನೆರವಾಗಬಹುದಾಗಿದೆ.

ಮೊನ್ನೆ ನಡೆದ ಮೈಸೂರು ವಿಶ್ವವಿದ್ಯಾನಿಲಯದ ಸೆನೆಟ್ ಸಭೆಯಲ್ಲಿ ಶ್ರೀ. ಬಿ. ಆರ್. ಪುಟ್ಟನಂಜಪ್ಪನವರು, ವಿಶ್ವವಿದ್ಯಾನಿಲಯದ ಪ್ರತಿಯೊಬ್ಬ ವಿದ್ಯಾರ್ಥಿಯೂ ಪದವೀಧರನಾಗುವ ಅರ್ಹತೆ ಪಡೆಯಲು ಕಡೆಯ ಪಕ್ಷ ಹತ್ತು ಮಂದಿಯನ್ನಾದರೂ ಅಕ್ಷರಸ್ಥರನ್ನಾಗಿ ಮಾಡಬೇಕೆಂದು ಸೂಚಿಸಿದರು. ಈ ರೀತಿ ನಿರ್ಬಂಧ ಮಾಡುವುದು ಸರಿಯೆ ಎಂಬುದು ವಿಚಾರಣೀಯ. ಈ ಕಾರ್ಯದಲ್ಲಿ ವಿದ್ಯಾರ್ಥಿಗಳು ಬಹುಮಟ್ಟಿಗೆ ಸಹಕರಿಸಬಹುದಾಗಿದೆ. ವಿದ್ಯಾರ್ಥಿಗಳಾದವರು ತಾವು ಕಲಿತ ಅಕ್ಷರವನ್ನು ಅಕ್ಷರ ಬಾರದ ತಮ್ಮ ದುರದೃಷ್ಟಶಾಲಿಗಳಾದ ಸೋದರರಿಗೆ ಹೇಳಿಕೊಟ್ಟು ನಾಡಲ್ಲಿ ಅರಿವಿನ ಬೆಳಕು ಹರಡಿದರೆ ಅದೂ ಒಂದು ದೊಡ್ಡ ನಾಡ ಸೇವೆ. ಅಂತೆಯೇ, ಉಪಾಧ್ಯಾಯರುಗಳೂ (ಮುಖ್ಯವಾಗಿ ಹಳ್ಳಿಗಳಲ್ಲಿ) ಈ ಕಾರ್ಯದಲ್ಲಿ ಸಹಕರಿಸಬಹುದಾಗಿದೆ. ಹೀಗೆ ಯಾವ ಯಾವ ಬಗೆಗಳಲ್ಲಿ ಜನತೆಯ ನೆರವು ಪಡೆಯಬಹುದೆಂಬುವನ್ನು ವಿಚಾರ ಮಾಡಬೇಕಾದ್ದು ಸಮಿತಿಯ ಮುಂದಿರುವ ಮತ್ತೊಂದು ಸಮಸ್ಯೆ.

ಇನ್ನೊಂದು ಸಮಸ್ಯೆಯಿದೆ: ಇದು ಈಗಾಗಲೇ ಕೈಕೊಂಡಿರುವ ಕಾರ್ಯದ ರೀತಿನೀತಿಗೆ ಸಂಬಂಧಪಟ್ಟದ್ದು: ಅದೇನೆಂದರೆ, ಕನ್ನಡ ನಾಡಿನಲ್ಲಿ (ಅಥವಾ ಕನ್ನಡ ನಾಡಿನ ಭಾಗವಾದ ಮೈಸೂರು ಸಂಸ್ಥಾನದಲ್ಲಿ) ಅಕ್ಷರ ಪ್ರಚಾರ ಯಾವ ಯಾವ ಜನಕ್ಕೆ ಯಾವ ಯಾವ ನುಡಿಯಲ್ಲಿ ಆಗಬೇಕು ಎಂಬುದು. ಈ ದೃಷ್ಟಿಯಿಂದ ಈ ನಾಡಿನ ಅನಕ್ಷರಸ್ಥರನ್ನು ಎರಡು ಭಾಗಗಳಾಗಿ ವಿಂಗಡಿಸಬಹುದು: (೧) ಬಹುಕಾಲದಿಂದ ಇಲ್ಲಿಯೇ ನೆಲಸಿದ್ದು, ತಾಯ್ನುಡಿ ಕನ್ನಡವಾಗಿಲ್ಲದವರು; (೨) ಶಾಶ್ವತವಾಗಿ ಇಲ್ಲಿಯೇ ನೆಲಸಲೋಸುಗ ಬಂದಿದ್ದು, ತಾಯ್ನುಡಿ ಕನ್ನಡವಾಗಿಲ್ಲದವರು. ಬೆಂಗಳೂರು, ಮೈಸೂರು, ಕೋಲಾರ, ಮಂಡ್ಯ, ಭದ್ರಾವತಿ ಮುಂತಾದ ಸ್ಥಳಗಳಲ್ಲಿ ಇಂಥ ಜನ ಸಾವಿರಾರು ಮಂದಿ ಇದ್ದಾರೆ. ಈ ಜನರ ತಾಯ್ನುಡಿ ಯಾವುದೇ ಆಗಿರಲಿ, ಅವರು ಕನ್ನಡಿಗರ ನಡುವೆ ನೆಲಸಿ, ನಾಡಿನ ಜೀವನದಲ್ಲಿ ಬೆರೆಯಬೇಕಾದ್ದರಿಂದ, ನಾಡಿನ ಶ್ರೇಯಸ್ಸಿಗಾಗಿ ನಾಡನುಡಿಯ ಅಕ್ಕರದರಿವು ಅವರಲ್ಲಿ ಉಂಟಾಗಬೇಕಾದದ್ದು ಅತ್ಯಗತ್ಯ ಎಂದು ಒತ್ತಿ ಹೇಳಲಿಚ್ಛಿಸುತ್ತೇವೆ. ಸಂಸ್ಥಾನದ ಅಕ್ಷರಪ್ರಚಾರ ಸಮಿತಿಯವರು ಈ ಗುರಿಯನ್ನು ಲಕ್ಷ್ಯದಲ್ಲಿಟ್ಟುಕೊಂಡು ತಮ್ಮ ಕಾರ್ಯನೀತಿಯನ್ನು ರೂಪಿಸಿಕೊಳ್ಳಬೇಕೆಂದು ಸೂಚಿಸುತ್ತೇವೆ.

ಈ ಮಾತನ್ನು ಹೇಳುತ್ತಿರುವುದು ಕನ್ನಡದ ಪ್ರತಿಷ್ಠೆಯಿಂದಲ್ಲ. ಅಕ್ಕರಿಗರಾಗುವವರ ಹಿತ ಸೌಕರ್ಯದ ದೃಷ್ಟಿಯಿಂದ.

### ಪರಿಷತ್ತಿನ ಮುನ್ನಡೆ

(೧೧೧ನೆಯ ಪುಟದಿಂದ)

ಯಲ್ಲ. ಜೊತೆಯಾಗಿ ನಡೆಯುವವರಿಗೆ ಗುರಿ ಮುಖ್ಯ, ಅಭಿಪ್ರಾಯ ಗೌಣ. ಪ್ರಜಾಪ್ರಾಮುಖ್ಯದ ಈ ಯುಗದಲ್ಲಿ ಈ ತತ್ತ್ವ ಸದಾ ನಮ್ಮ ಕಣ್ಣಮುಂದೆ ಇರಬೇಕು. ವಿವರದಲ್ಲಿ ಯಾವ ಭೇದವಿದ್ದರೂ ಧ್ಯೇಯವನ್ನು ಕುರಿತು ಜೊತೆಯಾಗಿ ನಡೆಯುವುದೇ ಪ್ರಜಾಪ್ರಭುತ್ವದ ವಿಜಯಸೂತ್ರ. ಪರಿಷತ್ತು ಬೆಳೆಯುವುದಕ್ಕಾಗಿ, ತನ್ನ ಕೆಲಸದಲ್ಲಿ ಕೃತಕೃತ್ಯವಾಗುವುದಕ್ಕಾಗಿ ಮಾತ್ರವಲ್ಲದೆ ಕನ್ನಡದ ಜನ ಮುಂದುವರಿಯುವುದಕ್ಕೆ ಈ ಸೂತ್ರ ಸಾಧಕ. ಇದನ್ನು ಅನುಸರಿಸಿ ನಡೆಯುವುದನ್ನು ಈ ಸಂಸ್ಥೆಯಲ್ಲಿ ನಮ್ಮ ಜನರು ಅಭ್ಯಾಸ ಮಾಡಬೇಕು.

ಪರಿಷತ್ತಿನ ಈ ಕೆಲಸ ಸದಾ ನಡೆಯಬೇಕಾದದ್ದು. ರಾಜಕೀಯ ಸಾಮಾಜಿಕ ಅಥವಾ ಇತರ ಆಂದೋಲನದ ಕಾರಣದಿಂದ ಈ ಕೆಲಸಕ್ಕೆ ವಿಚ್ಛಿತ್ತಿ ಬರಬಾರದು. ಮೈಗೆ ಉಸಿರಂತೆ ರಕ್ತಚಲನದಂತೆ ನಮ್ಮ ಕಾರ್ಯಕ್ರಮ ಜನತೆ ಸಜೀವವಾಗಿರುವುದಕ್ಕೆ ಅವಶ್ಯಕ. ರಾಜಕೀಯವಾಗಿ ಕ್ಷೋಭೆ ಉಂಟಾದಾಗ ಪರಿಷತ್ತು ಉತ್ಸವಗಳನ್ನು ನಿಲ್ಲಿಸಬೇಕೆಂದು ಕೆಲಮಿತ್ರರು. ಹೇಳಿದ್ದನ್ನು ನಾವು ನೋಡಿದ್ದೇವೆ. ಮನಸ್ಸು ಕಳವಳಗೊಂಡಾಗ ಬಾಯಲ್ಲಿ ಇಂಥ ಮಾತು ಬರುವುದು ಸಹಜ. ಆದರೂ ಇಂಥ ಭಾವನೆ ಸರಿಯಲ್ಲವೆನ್ನುವುದು ಕ್ಷಣಮಾತ್ರದ ಆಲೋಚನೆಯಿಂದ ಸ್ಪಷ್ಟವಾಗುತ್ತದೆ. ಪರಿಷತ್ತಿನ ಉತ್ಸವ ಉತ್ಸವದ ದೃಷ್ಟಿಯಿಂದ ಏರ್ಪಾಡಾಗುವುದಿಲ್ಲ. ಬಾಳುವೆಯ ದೃಷ್ಟಿಯಿಂದ ಆಗಿರುತ್ತದೆ. ಮನೆಯಲ್ಲಿ ಯಾರು ಕಾಹಿಲೆ ಇದ್ದರೂ ದೇವರ ಮುಂದೆ ದೀಪ ಹಚ್ಚಿ ಗಂಟೆ ಬಾರಿಸುವುದನ್ನು ನಿಲ್ಲಿಸುವುದಿಲ್ಲ. ಪ್ರಾಯಶಃ ಕಾಹಿಲೆ ಇರುವಲ್ಲಿ ಹೆಚ್ಚು ದೀಪವನ್ನೇ ಹಚ್ಚುತ್ತಾರೆ. ಪರಿಷತ್ತಿನ ಉತ್ಸವಗಳು ಹೀಗೆಯೇ ನಾಡ ಸೌಮಂಗಲ್ಯದ ಸಾಧನಗಳು, ಲಕ್ಷಣಗಳು. ಇಂಥ ಕೆಲಸವನ್ನು ಯಾವ ಕಾರಣದಿಂದಲೂ ನಿಲ್ಲಿಸಬಾರದು.

ಪರಿಷತ್ತಿನ ಈ ಕೆಲಸ ಎನ್ನುವುದು ನಿಯತಕಾಲದಲ್ಲಿ ಮಾಡಿ ಮುಗಿಸತಕ್ಕದ್ದಲ್ಲ. ಅದನ್ನು ಎಂದಾದರೂ ತೊಡಗಬಹುದು; ಎಂದೂ ಮುಗಿಸಿದೆವೆನ್ನುವಂತಿಲ್ಲ. ಇದುವರೆಗೆ ಹೇಳಿರುವ ಹತ್ತಾರು ಕೆಲಸದ ವಿವರವನ್ನು ನಾವು ಸಾಧ್ಯವಾದಷ್ಟು ಬೇಗನೆ ಮೊಳೆಸಬೇಕು ಬೆಳಸಬೇಕು. ಕೆಲಸ ಎಂದಿಗೂ ಮುಗಿಯದ್ದು ಆದರೂ ಅದರ ಪ್ರಯೋಜನ ನಮಗೆ ಬಹುಬೇಗನೆ ಲಭಿಸುತ್ತದೆ. ಒಂದು ಜನದ ಜೀವನದಲ್ಲಿ ಮೂವತ್ತು ವರ್ಷ ಬಹುಕಾಲವಲ್ಲ. ಆದರೂ ಸಾವಿರದ ಒಂಬೈನೂರ ಹದಿಮೂರಕ್ಕೆ ಸಾವಿರದ ಒಂಬೈನೂರ ನಲವತ್ತಮೂರಕ್ಕೆ ಎಷ್ಟು ವ್ಯತ್ಯಾಸ! ಒಳ್ಳೆಯ ಗುರಿಯನ್ನಿಟ್ಟುಕೊಂಡು ಒಳ್ಳೆಯ ಮನಸ್ಸಿನಿಂದ ದುಡಿಯುವಂತೆ ನಮ್ಮ ಭಾಗ್ಯದೇವತೆ ನಮ್ಮಲ್ಲಿ ಅನುಗ್ರಹಿಸಿದರೆ ಸಾವಿರದ ಒಂಬೈನೂರ ನಲವತ್ತಮೂರರಿಂದ ಐವತ್ತಮೂರಕ್ಕೆ ಇನ್ನಿಷ್ಟು ಬೆಳವಣಿಗೆ ಸಿದ್ಧಿಸಬಹುದು. ಸಿದ್ಧಿಸದೆ ಹೋಗಬಹುದು ಎನ್ನುವ ಎಚ್ಚರಿಕೆಯ ಪ್ರತಿವಚನಕ್ಕೂ ನಾವು ಒಪ್ಪಿಗೆ ಕೊಡೋಣ. ಹಾಗಾದರೂ ಪ್ರಯತ್ನವೇ ಒಂದು ಪ್ರಯೋಜನ ಎಂಬ ಸತ್ಯವನ್ನು ನಾವು ಮರೆಯಲಾಗದು. ವ್ಯಾಯಾಮದ ಫಲ ಕಾಳಗದ ಕಣದಲ್ಲಿ ಮಾತ್ರ ಕಾಣುವುದಿಲ್ಲ, ದಿನದ ಆರೋಗ್ಯದಲ್ಲಿಯೂ ಸಾರ್ಥಕವಾಗುತ್ತದೆ. ಸಾಧ್ಯವಾದರೆ ಲೋಕದ ಕಣ್ಣನ್ನು ಸೆಳೆಯುವ ವಿಜಯದಲ್ಲಿ, ಆಗದಿದ್ದರೆ ದಿನದಿನದ ಸಮೀಚಿನ ಜೀವನದಲ್ಲಿ, ಫಲಕಾರಿಯಾಗುವಂತೆ ನಾಡಿಗೆ ನಾಡೇ ದುಡಿಯಬೇಕಾದ ಲಗ್ನ ಈಗ ಒದಗಿದೆ. ನಾಡೇ ಹೀಗೆ ದುಡಿಯಲಿ, ಶಾಶ್ವತವಾದ ಕಲ್ಯಾಣವನ್ನು ಪಡೆಯಲಿ.

ಸಿರಿ ಕನ್ನಡ ಗೆಲ್ಲಲಿ.

— ಮಾಸ್ತಿ ವೆಂ. ಅ.

## ಅಭಿಜ್ಞಾನ ಶಾಕುನ್ತಲ ನಾಟಕ

(ಮುಂದುವರಿದುದು)

### ಸಂವಿಧಾನ

ಬಿಲ್ಲಿಗೆ ಬಾಣ ತೊಡಿಸಿ ಸಾಕ್ಷಾತ್ ಪಿನಾಕಿಯ ಹಾಗೆ ದುಷ್ಯನ್ತನು ಜಿಂಕೆಯನ್ನು ಅಟ್ಟಿಕೊಂಡು ರಥದಲ್ಲಿ ಹೊರಟಿದ್ದಾನೆ. ತಾನು ಆಟ್ಟಿರುವಾಗ ಜಿಂಕೆ ಹೇಗೆ ಮುಂದೋಡೀತು ಎಂದು ಅದರ ವೇಗಕ್ಕೆ ಅಸಹನೆ ಪಡುತ್ತಿದ್ದಾನೆ. ಜಿಂಕೆ ಹೆದರಿ, ಎಗರಿ, ಜೀವಕ್ಕೆ ತೆಲ್ಲಣಿಸಿ ಓಡುತ್ತಿದೆ. ಮೈಯೆಲ್ಲ ಕಣ್ಣಾಗಿ ತಿರುಗಿತಿರುಗಿ ನೋಡುತ್ತ ಇದೆ. ಮನುಷ್ಯ ವಿನೋದಗಳ ಕ್ರೌರ್ಯವನ್ನು ಕಾಡಿನ ಈ ಶಿಶು ಬಲ್ಲದು. ಕಾಡಿನವೆಲ್ಲ ಬಲ್ಲುವಾದಾಗ ಆಶ್ರಮ ಶಿಶುವಾದ ಈ ಜಿಂಕೆ ಆರಿಯಿತೆಂದರೆ ಆಶ್ಚರ್ಯವೇನು? ಇದೋ ಇನ್ನೇನು ಅದು ಸಿಕ್ಕಿತು, ಬಾಣ ಪ್ರಯೋಗಿಸಿದನು ಎಂಬ ಸಮಯಕ್ಕೆ 'ಆಶ್ರಮದ ಮೃಗ ಇದು; ಕೊಲ್ಲಪಡತಕ್ಕದ್ದಲ್ಲ' ಎಂದು ಧ್ವನಿ ಕೇಳಿಸಿತು. ಒಡನೆಯೆ ರಾಜನ ಬಿಲ್ಲಿಳಿಯಿತು. ಧರ್ಮವನ್ನರಿತವನಾದ್ದರಿಂದ ಬೇಟೆಯ ಚಲ ರಕ್ತವನ್ನು ಕುದಿಸಿದ್ದರೂ ಆತನ ತೋಳು ತಗ್ಗಿತು. ಮೃಗದ ಬೇಟೆ ನಿಂತರೇನು? ಆಶ್ರಮದ ಬೇಟೆ ಬೇರೆ ಬಗೆಯಲ್ಲಿಯೂ ನಡೆಯಬೇಕಾಗಿದೆ. ಮತ್ತು ಸುತ್ತಲ ಜಿಂಕೆಗಳ ಕಣ್ಣನೋಟವುಳ್ಳ ಶಕುನ್ತಲೆಯನ್ನೇ ಗುರಿಯಾಗಿಸುತ್ತದೆ ಮುಂದಿನ ಬೇಟೆ. ಕಣ್ವರು ಆಶ್ರಮದಲ್ಲಿಲ್ಲ. ಶಕುನ್ತಲೆಗೆ ಏನೋ ಅಮಂಗಳವಾಗಲಿದೆಯೆಂದು ಅದರ ಪರಿಹಾರಾರ್ಥವಾಗಿ ಸೋಮತೀರ್ಥಕ್ಕೆ ಹೋಗಿದ್ದಾರೆ; ಆಶ್ರಮದಲ್ಲಿ ಅತಿಥಿಸತ್ಕಾರಕ್ಕಾಗಿ ಆಕೆಯನ್ನು ನಿಯಮಿಸಿ ಹೋಗಿದ್ದಾರೆ. ಬೇಟೆ ನಿಲ್ಲಿಸಿ ವಿನಯ ತೋರಿಸಿದ ರಾಜನಿಗೆ ವೈಖಾನಸರು ಕೃತಜ್ಞತೆ ಸಲ್ಲಿಸಿ ಚಕ್ರವರ್ತಿ ಪುತ್ರನನ್ನು ಪಡೆ ಎಂದು ಹರಸಿದರು. ತ್ವರೆಯ ಬೇರೆ ಕೆಲಸ ಒತ್ತದಿದ್ದರೆ ಆಶ್ರಮದಲ್ಲಿ ಆತಿಥ್ಯವನ್ನು ಸ್ವೀಕರಿಸಿ ಹೋಗು; ನಿನ್ನ ತೋಳ ಸಾಹಸದಿಂದ ಇಂತಹ ಧರ್ಮಾರಣ್ಯಗಳು ಎಷ್ಟು ಉಪಕೃತವಾಗಿ ನಿರುಪದ್ರವವಾಗಿವೆ, ಎಷ್ಟು ದೂರ ನಿನ್ನ ಸಹಾಯ ಹರಡಿದೆ ಎಂಬುದನ್ನು ನೋಡಿ ಹೋಗು— ಎಂದು ಹೇಳುವರು. ಹೀಗೆ ಮಾಲಿನೀ ತೀರದ ಆಶ್ರಮದೊಳಕ್ಕೆ ಹೋಗತಕ್ಕದ್ದೆಂದಾಯಿತು. ಋಷಿಗಳಿಗೆ ನಮಿಸಿ ಹೋಗುವುದು ಮರ್ಯಾದೆ. ಸೌಮ್ಯವೇಷದಲ್ಲಿ ಹೊರಟನು. ಶಾಂತವಾದ ಈ ಆಶ್ರಮಪದದಲ್ಲಿ ನನ್ನ ಬಲತೋಳು ಏಕೆ ಸ್ಫುರಿಸುತ್ತದೆ, ಇಲ್ಲಿ ಅದಕ್ಕೆ ಫಲ ಹೇಗೆ ಎಂದು ಚಿಂತಿಸುತ್ತ, ಅಥವಾ, ಭವಿತವ್ಯತೆಗೇನು— ಎಲ್ಲೆಲ್ಲಿಯೂ ಬಾಗಿಲೇ ಎಂದುಕೊಳ್ಳುತ್ತಿರುವಾಗಲೇ ದಾರಿಯಲ್ಲಿ ಹೆಣ್ಣುಗಳ ಕಲರವ ಕೇಳಿಸುತ್ತದೆ. ತಕ್ಷಣ ಮರೆಯಲ್ಲಿ ನಿಲ್ಲಬೇಕಾಗಿ ಬಂದು ಅವರನ್ನು ನೋಡುವ, ಅವರ ಸ್ವಚ್ಛಂದ ಸಲ್ಲಾಪವನ್ನು ಕೇಳುವ ಅವಕಾಶ ದೊರೆಯುತ್ತದೆ. ಅಂತಃಪುರಗಳ ಚೆಲುವನ್ನು ಧಿಕ್ಕರಿಸುವ ಆಶ್ರಮವಾಸಿ ಕನ್ಯೆಯರ ರೂಪು ಒಂದು ನಿಮಿಷದಲ್ಲಿ ಆತನಿಗೆ ವಿಸ್ಮಯವುಂಟುಮಾಡುತ್ತದೆ. ಸಮರೂಪ, ವಯಸ್ಸು, ಗುಣ ಉಳ್ಳ ಮೂವರಲ್ಲಿ, ಅಖಂಡಪುಣ್ಯದ ಫಲದಂತಿರುವ ಈ ಸ್ತ್ರೀ ರತ್ನದ ಸೃಷ್ಟಿ ಬೇರೆಯದು. ರತ್ನದಂತೆ ಅತಿಶಯ ಲಾವಣ್ಯಮಯಿಯಾದ ಶಕುನ್ತಲೆಯಮೇಲೆ ರಾಜನ ಅಭಿಲಾಷೆ ಹೂಡುತ್ತದೆ. ಬ್ರಾಹ್ಮಣ ಕನ್ಯೆಯಲ್ಲಿ ಅಭಿಲಾಷೆ ಅಯುಕ್ತವೆಂಬುದು ಆತನಿಗೆ ಗೊತ್ತು. ಆದರೆ ಆರ್ಯವಾದ ತನ್ನ ಮನಸ್ಸಿನಲ್ಲಿ ಆಕೆಗಾಗಿ ಅಭಿಲಾಷೆ ಹೀಗೆ ಕೆರಳಿದೆಯಾದ್ದರಿಂದ ಆಕೆ ಕ್ಷತ್ರಿಯ ಭೋಗ್ಯೆಯೇ ಸರಿ, ಅಸಂಶಯಂ, ಎಂದು ತನ್ನಲ್ಲಿ ಸಿದ್ಧಾಂತ ಮಾಡಿಕೊಂಡನು. ಆದರೂ ಬೇರೆ ಪ್ರಮಾಣಗಳಿಗೆ ಕಾಯದೆ ವಿಚಾರ ಮಾಡದೆ ದುಡುಕುವವನಲ್ಲ ಆತನು.

ಕನ್ಯೆಯರ ಮಾತಿನ ಪ್ರಪಂಚವಾದರೂ ಎಂಥದು? ಲತೆಗಳಿಗೆ ಗಿಡಗಳಿಗೆ ನೀರೆರೆಯುತ್ತ ಶ್ರಮದಿಂದ ರಸವೇರಿದ ಅವರ ಮುಖಕಾಂತಿ ರಂಜಿಸುತ್ತಿರುವಾಗ ಹೂಬಿಟ್ಟ ಲತೆಗಳದು; ಲತೆಯ ಬಳಿ ಹಾಗೆ ನಿಲ್ಲು, ನೀನೇ ಆ ಲತೆ ತೊಟ್ಟ ಕುಸುಮ ಕಂಡೆಯಾ ಎಂಬ ನುಡಿ; ಆಕೆಯ ಅಂಗದಲ್ಲಿ ಸನ್ನದ್ಧವಾದ ಲೋಭನೀಯ ಯೌವನ; ಗಿಡಗಳಿಗೆ ನೀರೆರೆಯಲು ಇಂಥ ಕೋಮಲೆಯನ್ನು ನೇಮಿಸಿದ ಕಣ್ವರ ವಿವೇಚನೆಯ ಮೇಲಿನ ಟೀಕೆ; ಸಹಕಾರ ವೃಕ್ಷಕ್ಕೆ ವನಜ್ಯೋತ್ಸ್ನೆಯನ್ನು ಹಬ್ಬಿಸಿ ಶಕುನ್ತಲೆ ಅವಕ್ಕೆ ಸಕಾಲದಲ್ಲಿ ಮಾಡಿದ್ದ ಮದುವೆಯ ಮಾತು; ಅಲ್ಲಿಂದ ಆಕೆಯ ಪರಿಣಯದ್ದೇ ಕೊಂಕು ನುಡಿ. ಹೀಗೆ ಚಿಗುರು, ಹೂ, ಬಳ್ಳಿ, ಶಕುನ್ತಲೆಯ ಯೌವನ, ಪರಿಣಯಗಳ ಮಾತು ಬೆಳೆಯುತ್ತಿರಲು ಆಕೆಗೆ ಭೃಂಗ ಬಾಧೆಯುಂಟಾಗುವುದು. ಶಕುನ್ತಲೆ ತೊಂದರೆಪಡುವಳು. 'ಹಲಾ, ಪರಿತ್ರಾಯಧ್ವಂ ಮಾಂ ಅನೇನ ದುರ್ವಿನೀತೇನ ದುಷ್ಟಮಧುಕರೇಣ ಅಭಿಭೂಯಮಾನಾಂ' — ಮರೆಯಲ್ಲಿ ಅತನೇ ಇದನ್ನೆಲ್ಲ ನೋಡುತ್ತಿದ್ದಾನೆ, ಕೇಳುತ್ತಿದ್ದಾನೆ ಎಂಬುದನ್ನರಿಯದ ಅವರು ರಾಜ ದುಷ್ಯನ್ತನಿಗೆ ಮೊರೆಯಿಡು, ಇಲ್ಲಿ ರಕ್ಷಣೆಯ ಅಧಿಕಾರಿ ಆತನು ಎಂದು ಕೀಟಲೆ ಮಾಡುತ್ತಿರುವ ಸಖಿಯರ ಮಾತು ಕೇಳುತ್ತಿದೆ. ಅದೇ ಪ್ರವೇಶಕ್ಕೆ ಒದಗಿದ ತಕ್ಷಣದ ಅಗತ್ಯ, ಅನುಕೂಲ. ಆದಷ್ಟು ಬೇಗ ಮಧುಕರನ ಪೀಡೆಯನ್ನು ನಿವಾರಿಸಲು ಆರ್ತತ್ರಾಣ ಪರಾಯಣನಾದ ಪೌರವನು ಅವರ ಬಳಿಗೆ ಹೋಗಿ ಪ್ರಕಾಶವಾಗುವಂತೆ ಮಾಡಿದ ರೂಪಕ ಸನ್ನಿವೇಶ. ಆ ದುಂಬಿಯ ಕಾಟ ನಿವಾರಿತವಾಯಿತು. ಚೆಲುವೆ ಶಕುನ್ತಲೆ ನವಕುಸುಮವಾದರೆ ರಾಜನು ಭೃಂಗವಾದ. ನಿಮಿಷದಲ್ಲಿ ಸಂಭ್ರಾಂತಿ ಮುಗಿದು ಆತನ ರೂಪವನ್ನು ನೋಡಿ ಶಕುನ್ತಲೆಯ ಸ್ಥೈರ್ಯ ಕಲಕಿತು. ತಪೋವನ ವಿರೋಧಿಯಾದ ವಿಕಾರವನ್ನು ಅನುಭವಿಸುವಂತಾಯಿತು. ಕನ್ಯಾಶ್ರಮ, ಋಷ್ಯಾಶ್ರಮ ಎರಡಕ್ಕೂ ವಿರೋಧವಾದದ್ದು ಆ ಅನುಭವ. ಮುಂದಿನ ಕ್ಷಣಗಳಲ್ಲಿ ಇವರಿಬ್ಬರ ಅಭಿಲಾಷೆಯನ್ನು ಇವರ ಹಾವ ನುಡಿ ಚರ್ಯೆಗಳಿಂದ ಕವಿ ಬಣ್ಣಿಸುತ್ತಾನೆ. ತಾನು ರಾಜನ ಅಧಿಕಾರಿ ಎಂದು ನುಡಿದರೂ ಆತನೇ ರಾಜನಿರಬೇಕೆಂದು ಸಖಿಯರಿಗೆ ಉಂಟಾದ ಅನುಮಾನ, ಉಂಗುರ ಕೊಟ್ಟು ಶಕುನ್ತಲೆಯ ಸಾಲಹರಿಸುವ ಸಮಯದಲ್ಲಿ ಸ್ಥಾಪಿತವಾಗುತ್ತದೆ. ಆಕೆಯ ಚರಿತ್ರೆಯನ್ನು ತಿಳಿವಾಗಲೂ, ವಿವಾಹವಾಗಲಿರುವ ಕನ್ಯೆ ಈಕೆ, ಅಪ್ಸರೆಯ ಮಗಳು, ಕ್ಷತ್ರಿಯಳು, ಕೆಂಡವೆಂದಳುಕಿದ್ದುದು ಬಯಸಿ ಮುಟ್ಟಬಹುದಾದ ರತ್ನ ಎಂಬುದನ್ನರಿತಾಗಲೂ ರಾಜನ ಮನಸ್ಸಿಗೆ ಆಸೆ ಉಂಟಾಯಿತು. ವ್ಯಾಜದಿಂದ ಆಕೆ ತೋರಿಸಿದ ಅನುರಾಗ ಚಿಹ್ನೆಗಳು, ಶೃಂಗಾರ ಲಜ್ಜೆ ಇವನ್ನು ಕಂಡ ಸಖಿಯರು ಕಣ್ವರು ಈಗ ಇಲ್ಲಿದ್ದಿದ್ದರೆ ತಮ್ಮ ಜೀವನಸರ್ವಸ್ವವನ್ನೆರೆದು ಈ ಅತಿಥಿಯನ್ನು ಕೃತಾರ್ಥನನ್ನಾಗಿಸುತ್ತಿದ್ದರು ಎಂದ ಮಾತಿನ ಸೂಚನೆ ಮುಂತಾದ್ದರಲ್ಲಿ ಅನುರಾಗದ ಪ್ರಕರಣ ಮುಂದುವರಿಯುತ್ತದೆ. ಉತ್ತರಕ್ಷಣದಲ್ಲಿ ರಾಜನೇ ಬೇಟೆಗೆ ಬಂದಿದ್ದಾನೆಂಬ ಸಂಗತಿ ಆಶ್ರಮವಾಸಿಗಳಿಗೆ ಕೇಳಿಸಿ ಎಲ್ಲ ಸಂಶಯ ಪರಿಹಾರವಾಗುವುದು. ಜೊತೆಗೆ ಆಶ್ರಮದವರು ತಪೋವನದ ಸತ್ವರಕ್ಷಣೆಗೆ ಸಿದ್ಧವಾಗಿ: 'ಪ್ರತ್ಯಾಸನ್ನಃ ಕಿಲ ಮೃಗಯಾವಿಹಾರೀ ಪಾರ್ಥಿವೋ ದುಷ್ಯನ್ತಃ' ಎಂಬ ಎಚ್ಚರಿಕೆಯ ಮಾತು ಕೇಳಿಸುವುದು. ತಪೋವನದ ಸತ್ವಗಳಲ್ಲಿ ರಕ್ಷಿತವಾಗಬೇಕಾದ್ದು – ಎಲ್ಲಕ್ಕೂ ಮೀರಿ – ಶಕುನ್ತಲೆಯ ಜೀವ ಎಂಬುದನ್ನು ಆಗ ಯಾರೂ ಅರಿಯಲಿಲ್ಲ. ಇನ್ನೊಂದು ನಿಮಿಷದಲ್ಲಿ ತಪೋವಿಘ್ನವೇ ಮೂರ್ತಿವೆತ್ತಂತೆ ರಥ, ಸೈನ್ಯಗಳಿಗೆ ಹೆದರಿ ಆಶ್ರಮದ ಗಿಡ ಲತೆಗಳನ್ನು ಮುರಿದು ಕಾಡಾನೆಯೊಂದು ನುಗ್ಗಿ ಆಶ್ರಮದೊಳಕ್ಕೆ ಬರುವ ಕೋಲಾಹಲ ಎಲ್ಲೆಲ್ಲಿಯೂ ಶಾಂತಿ ಭಂಗಮಾಡುತ್ತದೆ. ಆಶ್ರಮವನ್ನು ಮುತ್ತಿಬಂಧಿದ್ದುದು ಯಾವ ಪ್ರಭಾವ? ರಾಜ; ಬೇಟೆ; ತಪೋವಿಘ್ನಮೂರ್ತಿ ಮದಗಜ; ಕಾಮ.

ರಾಜನ ಮನಸ್ಸು ಶಕುನ್ತಲೆಯ ಧ್ಯಾನದಲ್ಲಿರುತ್ತ ಆಶ್ರಮದೊಳಕ್ಕೆ ಹೋಗುವ ಬಗೆ ಹೇಗೆ ಎಂದು ಚಿಂತಿಸುತ್ತಿರುವಾಗ ತಪಸ್ವಿಗಳೇ ಅದರ ರಕ್ಷಣೆಗಾಗಿ ಸಹಾಯ ಬೇಡುವರು. "ಕತಿಪಯ ರಾತ್ರಂ ಸಾರಥಿ ದ್ವಿತೀಯೇನ ಭವತಾ ಸನಾಥೀ ಕ್ರಿಯತಾಂ ಆಶ್ರಮಃ" ಎಂದು ಬೇಡಲು ಕರ್ತವ್ಯ ಧರ್ಮ, ಇಷ್ಟ ಎರಡಕ್ಕೂ

ಒಂದರಲ್ಲಿಯೇ ಸಮಾವೇಶವಾಗಿ ಸಂತೋಷವಾಯಿತು. ಇನ್ನೊಂದು ಬಗೆಯಲ್ಲಿಯೂ ಅನುಕೂಲ ಏರ್ಪಡುವುದು. ಪ್ರೇಮ ಏಕಾಂತದಲ್ಲಿ ಸಾಧಿತವಾಗಬೇಕಾದ್ದು. ರಾಜನ ಕಡೆಯ ಇತರಾರೇ ಆಗಲಿ ಇರುವುದು ಬೇಕಿಲ್ಲ. ಈ ಏಕಾಂತವನ್ನು ರಾಜನ ತಾಯಿಯ ಕರೆ ಸಾಧಿಸಿ ಕೊಡುವುದು. ಋಷಿಕಾರ್ಯವನ್ನು ಕೈಕೊಂಡಿರುವುದರಿಂದ ತಾಯ ಸೇವೆಗೆ ಆತನು ಊರಿಗೆ ಸ್ವಂತವಾಗಿ ಹಿಂತಿರುಗುವ ಹಾಗಿಲ್ಲ. ಆದ್ದರಿಂದ ಪುತ್ರನಂತೆಯೇ ತಾಯಿ ಎಣಿಸಿದ್ದ ಮಾಣವಕನನ್ನು ಪರಿವಾರದೊಡನೆ ಕಳಿಸಿಕೊಡುವ ಏರ್ಪಾಡು ಇದಕ್ಕೆ ನೆರವಾಗುತ್ತದೆ.

ಪ್ರಿಯರ ಆಕಾಂಕ್ಷೆ, ತೀವ್ರಾಭಿಲಾಷೆಗಳು ಹೇಗೆ ಹೊರಬಿದ್ದವು, ರಾಜನಿಗೆ ಆಕೆಯ ಮನಸ್ಸು ಹೇಗೆ ಸ್ಥಿರಪಟ್ಟಿತು, ಆಕೆಯ ಪ್ರಣಯ ಸಂದೇಶ ಬರೆದಾದ ಬಳಿಕ ಆತನು ಬಳಿಸಲ್ಲಲು ಅವಿಲಂಬಿಯಾದ ಮನೋರಥಕ್ಕೆ ಹೇಗೆ ಸ್ವಾಗತ ದೊರೆಯಿತು; ಅವರ ಸಮಾಗಮ ಹೇಗೆ ಫಲಿಸಿತು ಎಂಬ ಪ್ರಕರಣದಲ್ಲಿ ಶೃಂಗಾರದ ಭೋಗಭಾಗ ಮುಗಿವುದು. ಒಂದು ಸಂತೋಷದ ಕಾರ್ಯಸಾಧನೆ ಆಗುವುದು. ಇನ್ನು ನಾಟಕ ಮುಗಿವವರೆಗೂ ಸಂತೋಷವಿಲ್ಲ. ಇಲ್ಲಿಯವರೆಗೆ ಎಷ್ಟು ಕೆಲೆತವೋ ಅಷ್ಟೇ ಹರ್ಷ, ನಗು; ಮುಂದಿನದೆಲ್ಲ ಆಳ, ಗಂಭೀರ.

ಶಾಪ ವಿಚಾರ

ಮಾತು ಕೊಟ್ಟು ಊರಿಗೆ ಹೋದ ದುಷ್ಯಂತನು ಶಕುಂತಲೆಯನ್ನು ನೆನಸಿಕೊಳ್ಳುವನೊ ಇಲ್ಲವೊ, ಆಶ್ರಮಕ್ಕೆ ಹಿಂತಿರುಗಿದ ಕಣ್ವರು ಮಗಳ ವಿವಾಹವನ್ನೂ ಗರ್ಭಧಾರಣೆಯನ್ನೂ ಕೇಳಿ ಏನೆನ್ನುವರೋ ಎಂದು ಚಿಂತಿಸುತ್ತ, ಸಮಾಧಾನ ಮಾಡಿಕೊಳ್ಳುತ್ತ, ಆಕೆಯ ಸೌಭಾಗ್ಯ ದೇವತೆಗಳನ್ನು ಆರಾಧಿಸುತ್ತಿರುವ ಸಖಿಯರ ಕೆಳೆತನ ಸಾಧಾರಣ ಸಜ್ಜನಿಕೆಗೆ ನಿಲುಕದುದು. ಶಕುಂತಲೆಯ ಅವಸ್ಥೆಯೋ ಕರುಣೆ ತರುವಂಥಾದ್ದಾಗಿದೆ. ಆಕೆಗೆ ರಾಜನ ಧ್ಯಾನವೇ ಎಲ್ಲ; ಆ ಬಗೆಗೆ ಕನಸು, ಮನಸು, ಕಲ್ಪನೆ ತಿತ್ತಾಗಿದೆ. ದೇಹ ಆಶ್ರಮದಲ್ಲಿದ್ದರೂ ಹೃದಯ ಬೇರೆ ಎಡೆ ಇದೆ; ಸುತ್ತಲಿನ ಯಾವುದೂ ಬೇಕಿಲ್ಲ; ಏನು ನಡೆಯುತ್ತಿದೆ ಎಂಬುದನ್ನರಿಯದೆ ಇದ್ದಾಳೆ. ಇಂತಹ ಸಮಯದಲ್ಲಿ ದುರ್ವಾಸರು ಅಲ್ಲಿಗೆ ಅತಿಥಿಯಾಗಿ ಬರಬೇಕೆ? 'ನಾನು ಬಂದಿದ್ದೇನೆ' ಎಂದು ಅವರು ಕೂಗಿ ಹೇಳಿದರೂ ಆಕೆಗೆ ಕೇಳಿಸಲಿಲ್ಲ. ಮುಂಗೋಪಿಯಾದ ಆತನಿಗೆ ಇಷ್ಟು ಸಾಕಾಯಿತು. ಈ ಅತಿಥಿ ಪರಿಭಾವನೆಗೆ ಕಾರಣವೂ ಗೊತ್ತಾಯಿತು. 'ಅನನ್ಯ ಮಾನಸಳಾಗಿ ಯಾವನನ್ನು ಕುರಿತು ಚಿಂತಿಸುತ್ತ ಬಳಿಗೆ ಬಂದ ತಪೋಧನನನ್ನು ಕೂಡ ಅರಿಯದೆ ಇದ್ದೀಯೊ ಅಂಥ ನಿನ್ನನ್ನು ನೀನೆಷ್ಟೇ ತಿಳಿವಳಿಕೆ ಕೊಟ್ಟರೂ ಅವನು ಸ್ಮರಿಸದಂತಾಗಲಿ' ಎಂದು ಶಾಪ ಕೊಟ್ಟು ಹೊರಟುಬಿಟ್ಟನು. ಗೆಳತಿಯರು ನಡಸಿದ ತಕ್ಷಣದ ಉಪಶಮ ವೃತ್ತಿ ಶಕುಂತಲೆಯನ್ನು ಕಾಯದಿದ್ದರೆ ಸರ್ವಕಾಲಕ್ಕೂ ಶಾಪ ದುರ್ವಾರ್ಯವಾಗುತ್ತಿತ್ತು. ಪ್ರಿಯಂವದೆಯ ಉಪಕಾರದ ಪುಣ್ಯದಿಂದ ಋಷಿ ಕರಗಿ ವಿಮೋಚನೆಯ ಮಾರ್ಗವನ್ನು ತಿಳಿಸಿಹೋದನು. ಅಭಿಜ್ಞಾನ ಆಭರಣ ದರ್ಶನದಿಂದ ಶಾಪ ನಿವೃತ್ತಿ ಆಗುವುದು ಎಂಬುದನ್ನು ಕೇಳಿದ ಅವರಿಗೆ ನೆಮ್ಮದಿ ಉಂಟಾಯಿತು.* ನೆನಪಿಗೆಂದು ರಾಜನು ಶಕುಂತಲೆಗೆ ಕೊಟ್ಟು ಹೋಗಿದ್ದ ಉಂಗುರ ಆಕೆಯ ಕೈಯಲ್ಲಿದ್ದುದನ್ನು ಅವರು ಬಲ್ಲರಾಗಿ ಶಕುಂತಲೆ ಸ್ವಾಧೀನೋಪಾಯೆಯೆಂದು ತೃಪ್ತಿಪಟ್ಟರು. ಏನು ಬಲ್ಲರು, ಪಾಪ, ವಿಧಿ ವ್ಯಾಪಾರವನ್ನು? ಆಕೆ ಇದಾವುದನ್ನೂ ಕಾಣಳು. ಅದಕ್ಕೆ ತಕ್ಕಂತೆ ಗೆಳತಿಯರೂ, ಈ ಸಂಗತಿಯನ್ನು ಆಕೆಗೆ ತಿಳಿಸಿ ವ್ಯಥೆಯುಂಟುಮಾಡತಕ್ಕದ್ದಲ್ಲವೆಂದು ಮರೆಮಾಚಿಬಿಟ್ಟರು. ನವಮಾಲಿಕೆಗೆ ಬಿಸಿನೀರೆರೆಯಬಹುದೆ? ಎಂದು ಒಬ್ಬಳು, ಸ್ವಭಾವ ಕೋಮಲೆಯಾದ ಪ್ರಿಯಸಖಿಯನ್ನು ಈ ಕರ್ಕಶ ವೃತ್ತಾಂತದಿಂದ ರಕ್ಷಿಸಬೇಕು ಎಂದು ಇನ್ನೊಬ್ಬಳು ಗುಟ್ಟು ಮಾಡಿದರು. ಅವರ ಸೌಮನಸ್ಯ, ದಾಕ್ಷಿಣ್ಯಗಳೇ ಆಕೆಗೆ ಕಷ್ಟ ತಂದುವು.

ಈಗ ಒಂದು ಪ್ರಶ್ನೆ ಏಳುತ್ತದೆ. ಶಕುಂತಲೆ ಮಾಡಿದ ತಪ್ಪೇನು? ಪ್ರೇಮ ಸಹಜವಲ್ಲವೆ? ಎಷ್ಟು ಗಾಢವಾದರೆ ಅಷ್ಟು ಶ್ಲಾಘ್ಯವಲ್ಲವೆ ಅದು? ಪತಿಯನ್ನು ಪ್ರೀತಿಸುವುದು ಸತಿಗೆ ತಪ್ಪೆ? ಅದಕ್ಕಿಂತ ಮೇಲಾದ ಕರ್ತವ್ಯ, ಧರ್ಮ ಹೆಂಗಸಿಗೆ ಬೇರೆ ಇನ್ನಾವುದಿದೆ? ಯಾವುದಕ್ಕೆ ಬಹುಮತಿಸಬೇಕೊ ಅದನ್ನು ನೆವಮಾಡಿ ಶಿಕ್ಷಿಸುವುದು ಯಾವ ನ್ಯಾಯ? ಅರಿತರಿತು ಹಿರಿಯರಿಗೆ ಅಪಚಾರ ಮಾಡಿದ್ದಿದ್ದರೆ, ಕರ್ತವ್ಯಭ್ರಷ್ಟಳಾಗಿದ್ದಿದ್ದರೆ ಆ ಮಾತು ಬೇರೆ. ಪ್ರಿಯಂವದೆ ಋಷಿಗೆ "ಭಗವನ್, ಪ್ರಥಮಂ ಇತಿ ಪ್ರೇಕ್ಷ್ಯ ಅವಿಜ್ಞಾತ ತಪಃಪ್ರಭಾವಸ್ಯ ದುಹಿತೃ ಜನಸ್ಯ ಭಗವತ್ಯೈಕೋऽಪರಾಧೋಮರ್ಷಯಿತವ್ಯಃ"–ಎಂದು ಹೇಳಿದ್ದು ನಿಜವಲ್ಲವೆ? ನಿಜ. ಇದೆಲ್ಲ ಸರಿಯೆ; ಆದರೆ ಇದಕ್ಕೂ ಮೀರಿದ ನಯ ರಹಸ್ಯ ಬೇರೊಂದುಂಟು: ಪ್ರೇಮ, ಗಂಡ ಹೆಂಡಿರಿಗೆ ಮಾತ್ರ ಸಂಬಂಧಿಸಿದ್ದು; ಲೋಕದ ರೀತಿ, ನೀತಿ, ಅಗತ್ಯಗಳು ಬೇರೆ. ತಮ್ಮ ಸುಖಸ್ವಾರ್ಥ ಸಾಧನಗಳಲ್ಲಿ, ಚಿಂತೆಯಲ್ಲಿ ಮುಳುಗಿ ದಿನದಿನದ ಕೆಲಸ, ನಿಯುಕ್ತ ಕರ್ಮ, ಅತಿಥಿ ಧರ್ಮ ಇವನ್ನು ಮರೆತರೆ ಲೋಕ ಸುಮ್ಮನಿರದು; ಧರ್ಮಕ್ಕೆ ಅಪಚಾರವಾಗುವುದು. ಬಂದಿದ್ದವರು ಯಾರು? ದುರ್ವಾಸರಂತಹ ತಪೋಧನರು. ಆಕೆ ಮರೆತುದು ಕೇವಲ ತನ್ನನ್ನು ಮಾತ್ರವೇ ಆಗಿ ಮುಗಿದಿದ್ದರೆ ತೊಂದರೆ ಇರುತ್ತಿರಲಿಲ್ಲವೇನೊ. ಸಮಾಜದಲ್ಲಿ ಒಬ್ಬಳಾಗಿ ಅದನ್ನೂ ತನ್ನ ಮಾನವೀ ಧರ್ಮವನ್ನೂ ಮರೆತಳು. ಆಶ್ರಮದಲ್ಲಿ ಆಗ ಆಕೆ ಕಣ್ವರ ಪ್ರತಿನಿಧಿ; ಅತಿಥಿ ಸತ್ಕಾರಕ್ಕಾಗಿ ಆಕೆಯನ್ನು ಅವರು ನೇಮಿಸಿ ಹೋಗಿದ್ದಾರೆ. ಪ್ರೇಮ ಎಷ್ಟೇ ಮೃದು ಭಾವವಾಗಿ ಸುಂದರವಾದದ್ದಾದರೂ ಲೋಕನಿಯಮ, ಧರ್ಮನಿಯಮಗಳನ್ನು ಪಾಲಿಸಬೇಕು; ಮೀರಬಾರದು. ನಮ್ಮ ಕಷ್ಟನಿಷ್ಠುರ ಏನೇ ಇರಲಿ ಅದನ್ನು ಕಟ್ಟಿಕೊಂಡು ಲೋಕಕ್ಕಾಗಬೇಕಾದ್ದೇನು? ಅದನ್ನು ತಾಳಿಕೊಂಡು ಸಮಾಜದ ಮತ್ತು ನೀತಿಯ ಹೊಣೆಗಳನ್ನು ಪಾಲಿಸತಕ್ಕದ್ದು ಎಲ್ಲರಿಗೂ, ಎಲ್ಲ ಕಾಲದ ಕರ್ತವ್ಯ. ಅರಿಯದೆ ಆಯಿತೆಂದರೆ ಸಲ್ಲದು; ಅಥವಾ ಅದು ಸಾಕಾದಷ್ಟು ಕಾರಣವಲ್ಲ. ಅಂತಹ ಸ್ಥಿತಿಗೆ ಯಾರೇ ಆಗಲಿ ತಮ್ಮನ್ನು ತಂದುಕೊಳ್ಳಬಾರದು. ಸಹಜವಾದುದೆಲ್ಲ ನ್ಯಾಯವಲ್ಲ; ಉತ್ತಮ ನಡತೆಯಲ್ಲ. ವ್ಯಕ್ತಿಗಳ ಖಾಸಗಿ ಸಂಬಂಧದ ಕಾರಣದಿಂದ ಸಾರ್ವಜನಿಕವಾಗಿ ನಡೆಯಬೇಕಾಗಿರುವ ನಡತೆಯನ್ನು ನಡೆಯದಿದ್ದರೆ ಧರ್ಮ ಲೋಪವಾಗುವುದು. ಅದಕ್ಕೆ ಶಿಕ್ಷೆ ಅನುಭವಿಸಲೇಬೇಕು. ಇದು ನಿಯಮ. ಇನ್ನು ಶಿಕ್ಷೆಯೊ? ಈ ಬಗೆಯ ತಪ್ಪಿಗೆ ಪ್ರಿಯನು ಆಕೆಯನ್ನು ತೊರೆಯುವಂಥ ದಾರುಣವಾದುದೇ ಆಗಬೇಕು. ದುಃಖಾನುಭವ ಆಗಿ ತಿಳಿವು ಬರಬೇಕು. ಹೀಗೆ ಶಾಪ, ಶಕುಂತಲೆಯ ಕರ್ತವ್ಯ ಲೋಪದಿಂದ ಉಂಟಾದ್ದು. ಸನ್ನಿವೇಶದಲ್ಲಿಯೂ ಪಾತ್ರ ಸ್ವಭಾವಗಳಲ್ಲಿಯೂ ನಟ್ಟದ್ದಾಗಿದೆ ಅದು. ಕೇವಲ ಹೊರಗಿಂದ ಎರಗಿ ಬಂದುದೇ ಅಲ್ಲ. ದುರ್ವಾಸರು ನೆಪಮಾತ್ರ. ದುರ್ವಾಸರಿಗೇ ಆತಿಥ್ಯ ಈಗತಿಯಾದರೆ ಆಶ್ರಮಕ್ಕೆ ಸಂಬಂಧಿಸಿದ ಇತರ ಕಾರ್ಯಗಳಲ್ಲಿ ಆಕೆ ಇನ್ನೆಷ್ಟು ಮೈಮರೆತಿದ್ದಿರಲಾರಳು? ಎನ್ನಿಸುತ್ತದೆ. ಅಭಿಜ್ಞಾನ ಆಭರಣದ ಮಾತು ಬಿಡುಗಡೆಯ ಸಂಬಂಧದಲ್ಲಿ ಋಷಿಗಳ ಬಾಯಲ್ಲೇ ಬರುವುದರಿಂದ ಮರವಿಗೂ ಉಂಗುರಕ್ಕೂ ಗಂಟುಬಿದ್ದಿತು. ಆಕೆ ಅದನ್ನಾದರೂ ಜೋಪಾನವಾಗಿ ಕಾದಿಟ್ಟುಕೊಂಡಳೆ? ಇಲ್ಲ. ಸಖಿಯರು ಎಚ್ಚರವೆಂದು ಸ್ಪಷ್ಟವಾಗಿ ಹೇಳದಿದ್ದರೂ ಕಠಿನ ಹಾಯಿಸದೆ ಕೊಟ್ಟಿದ್ದ ಎಚ್ಚರ ಕೂಡ ಆಕೆಯನ್ನು ಜಾಗರೂಕಳನ್ನಾಗಿಸಲಿಲ್ಲ. ಆಕೆಯ ಮನಸ್ಸು

* ರಾಜನು ಶಕುಂತಲೆಯನ್ನು ಮರೆಯುವುದು ಮೂಲ ಕಥೆಗೂ ನಾಟಕಕ್ಕೂ ಸಮಾನಾಂಶವಾದರೂ ಶಾಪಗ್ರಸ್ತಳಾದ ಶಕುಂತಲೆ ಅಭಿಜ್ಞಾನದ ಆಭರಣವನ್ನು ತೋರಿಸಿದ ಹೊರತು ಆತನ ನೆನಪು ಮರಳದು; ಈಕೆಯ ಶಾಪ ಇಳಿಯದು ಎಂಬುದೇ ಈ ನಾಟಕದಲ್ಲಿ ಕಾರ್ಯಕಾರಿಯಾಗುವ ವಿಶೇಷ ಎಂಬುದನ್ನು ನಾಟಕದ ಹೆಸರು ತೋರಿಸುತ್ತದೆ.

ಅಷ್ಟು ಬೇರೆಕಡೆ ಇತ್ತು. ತನ್ನ ಆಕಾಂಕ್ಷೆಯಲ್ಲಿ ಸ್ವಪ್ನಗಳಲ್ಲಿ ಬಹು ದೂರಗತೆಯಾಗಿ ಲೋಕವನ್ನು ಮರೆತಳು; ಕರ್ತವ್ಯಧರ್ಮ ಮರೆತಳು; ರಾಜನು ಕೊಟ್ಟಿದ್ದ ಉಂಗುರವನ್ನು, ಶಾಪನಿಸ್ತಾರಯಿತೃವಾದ ಒಂದೇ ಸಾಧನವನ್ನು ಕಳೆದುಕೊಂಡಳು. ಇನ್ನಾಕೆಗೆ ಲೋಕ ಯಾವ ನೆರವು ಪ್ರಮಾಣವನ್ನು ಒದಗಿಸೀತು? ಪರಿಣಯವನ್ನು ಬಲ್ಲ ಸಖಿಯರಿಲ್ಲ, ರಾಜನಿಗೆ ನೆನಪು ಕೊಡುವುದಕ್ಕೆ. ಇದ್ದಿದ್ದರೂ ಶಕುನ್ತಲೆಯ ಗುರುತೇ ಮರೆತಿದ್ದವನಿಗೆ ಅವರ ಗುರುತು ಹೇಗೆ ಆಗುತ್ತಿತ್ತು? ಪ್ರೇಮಸಂಬಂಧ ಅಲ್ಪಸ್ವಲ್ಪ ತಿಳಿದಿದ್ದ ಮಾಣವಕನ ಮಣ್ಣುಮುದ್ದೆಯಂತಹ ಬುದ್ಧಿಗೆ ಎರಡನೆಯಂಕದ ಕೊನೆಯಲ್ಲಿ ಹೇಳಿದ ಮಾತು ತಥ್ಯವೆಂಬ ನಂಬಿಕೆಯಲ್ಲಿ ಐದರ ಹೊತ್ತಿಗೆ ಮಂಕುಬಡಿದು ಹೋಗಿತ್ತು. ಆತನು ಆ ಮಾತನ್ನೆತ್ತಲಿಲ್ಲ. ರಾಜನ ಮಾತನ್ನು ಪರಿಹಾಸ್ಯವೆಂದೇ ನಂಬಿದ್ದನಾದ್ದರಿಂದ ಶಾಪದ ಪ್ರಭಾವ ದಾರುಣವಾಗಿ ಕವಿಯಿತು. ಶಕುನ್ತಲೆಯನ್ನು ದಹಿಸಿತು. ಐದನೆಯ ಅಂಕದ ಕಠಿನತೆ, ದೌರ್ಜನ್ಯ, ನಿಸ್ಸಹಾಯತೆಗಳಿಗೆ ಮೂಲವಾಯಿತು; ಪರಿಸ್ಥಿತಿ ಅರಿಯದ ಹೆಣ್ಣು ದುಃಖದಲ್ಲಿ ತೊಳಲಬೇಕಾಗಿ ಬಂದಿತು.

### ಲೋಕ ಸ್ವರೂಪ

ನಾಲ್ಕನೆಯ ಅಂಕದಲ್ಲಿ ಏಕಮುಖವಾದ ಸುಂದರತಮ ರಸಸ್ಥಾನದಲ್ಲಿ ದೊರೆತಿದ್ದ ಪ್ರೀತಿಯ ಸೌಭಾಗ್ಯವೆಲ್ಲ ಒಂದೇ ಕ್ಷಣಕ್ಕೆ ಮುರಿಯಿತು ಇಲ್ಲಿ. ನಾಟಕೀಯತೆಯಲ್ಲಿ ಐದನೆಯ ಅಂಕ ಪ್ರಚಂಡವಾದ್ದು. ಎಲ್ಲಿನ ಎಂಥವರೂ ವ್ಯವಹಾರ ಲೋಕದ ಅಂಕೆ ತೂಕಗಳಲ್ಲಿ ಪರೀಕ್ಷೆ ಕೊಟ್ಟೇ ತೇರ್ಗಡೆ ಹೊಂದಬೇಕು. ಇಲ್ಲವಾದರೆ ಬೆಲೆ ಸಲ್ಲದು ಎಂಬ ತತ್ವದ ಜೊತೆಗೆ ಲೋಕ ಧರ್ಮದ ಮರ್ಮ ವಿವರಣೆಯಾಗುತ್ತದೆ ಇಲ್ಲಿ. ಎಷ್ಟು ಪ್ರೀತಿಯಿಂದ ಕಣ್ವರು ಆಕೆಯನ್ನು ಹರಸಿದ್ದರು; ತಪಸ್ವಿಗಳು ಆಶೀರ್ವಚನ ಹೇಳಿದ್ದರು; ಸಖಿಯರು ಬೀಳ್ಕೊಂಡಿದ್ದರು; ಗರ್ಭಿಣಿ ಜಿಂಕೆಯನ್ನು ಈ ಗರ್ಭಿಣಿ ಎಷ್ಟು ಪ್ರೀತಿಯಿಂದ ಹಿರಿಯರಿಗೊಪ್ಪಿಸಿ ಬಂದಿದ್ದಳು; ಕೃತಕ ಪುತ್ರನಾದ ಚಿಗರಿಯೂ ತನ್ನಹಾಗೆಯೇ ಪರಭೃತವಾದ ಕೋಗಿಲೆಯೂ ಸೆರೆಗು ಸೆಳೆದು ನಿಲ್ಲಿಸಿ, ಕೊರಲೆತ್ತಿ ಕೂಗಿ ಕಳಿಸಿಕೊಟ್ಟವು; ವನದೇವತೆಗಳು ಹೇಗೆ ಆಭರಣಗಳನ್ನು ಒದಗಿಸಿ ಅಶರೀರವಾಣಿಯಿಂದ ಶುಭಾಕಾಂಕ್ಷೆ ಕೋರಿದ್ದವು!

ರಮ್ಯಾನ್ತರಃ ಕಮಲಿನೀ ಹರಿತೈಃ ಸರೋಭಿಃ
ಛಾಯಾದ್ರುಮೈಃ ನಿಯಮಿತ ಅರ್ಕಮಯೂಖ ತಾಪಃ
ಭೂಯಾತ್ ಕುಶೇಶಯ ರಜೋಮೃದುರೇಣುಃ ಅಸ್ಯಾಃ
ಶಾನ್ತ ಅನುಕೂಲ ಪವನಶ್ಚ ಶಿವಶ್ಚ ಪನ್ಥಾಃ

ಎಂದಲ್ಲವೇ ಹೇಳಿದ್ದದ್ದು? ಅದೆಲ್ಲ ಎಲ್ಲಿ? ಆಕೆಯು ಈಗ ನಡೆವ ದಾರಿಗಳಲ್ಲಷ್ಟೇ ಅಲ್ಲ; – ಎರಡೂ ಕಡೆ ಕಣ್ಣಿಗೆ ಕಟ್ಟಬೇಕಾದ ಹೊನ್ದಾವರೆ ಕೊಳಗಳು ಇರಬೇಕಾದ್ದು: ಹಸ್ತಿನಾಪುರದ ಈ ದಾರಿಯ ಎರಡೂ ಕಡೆಯಲ್ಲಿ ಮಾತ್ರವೇ ಅಲ್ಲ, ಎತ್ತರದ ಸಾಲ್ಮರ ಬೆಳೆದು ಸೂರ್ಯ ತಾಪವನ್ನು ಆಕೆಗೆ ನಿವಾರಿಸಬೇಕಾದ್ದು; ಆ ದಾರಿಯಲ್ಲಿ ಬೀಸಿಬರುವ ಗಾಳಿಯು ತಾವರೆಯ ಪರಿಮಳ ಕಣಗಳೇ ಅಲ್ಲ, ತುಂಬಿ ಸೌಗಂಧ ಬೀರಿ ಆಮೋದವುಂಟುಮಾಡುತ್ತಿರಬೇಕಾದ್ದು; ಶಾನ್ತವೂ, ಅನುಕೂಲವೂ ಆಗಿ ಬೀಸುವ ಗಾಳಿಗಳಿಂದ ಕೂಡಿ ಮಂಗಳಕರವಾಗಬೇಕಾದ್ದು. ಆಕೆಯ ಬಾಳಬಟ್ಟೆಗಳೆಲ್ಲ ಆ ಚೆಲುವು ಸೌಗಂಧ, ವಿಗತತಾಪ, ಶಾನ್ತಿ ಅನುಕೂಲತೆ, ಶಿವತ್ವಗಳಿಂದ ತುಂಬಿದರೆಯೇ ಈ ದೇವತೆಗಳಿಗೆ ತೃಪ್ತಿ. ಬೀಳ್ಕೊಡುವ ಎಲ್ಲ ತಾಯಿ ಕರುಳೂ, ಎಲ್ಲ ಗೆಳೆಯಲೋಕವೂ ತಮ್ಮಪ್ರೀತಿಯ ವಸ್ತುವಿಗೆ ಇದೇ ಹರಕೆ ಮಾಡುತ್ತಿದೆ ಸಂತತವಾಗಿ. ಆದರೆ ಇದು ಮನಸ್ಸಿನ ಆಸೆ; ಇದು ಫಲಿಸಬೇಕಾದರೆ ಇಂಥ ಹರಕೆ ಹೊತ್ತ ಜೀವಕ್ಕೆ ಕೂಡ ಲೋಕದ ಸಹಾಯಬೇಕು. ಲೋಕ ವಿರೋಧವಾದರೇನು ಗತಿ? ಲೋಕದ ಈ ಸ್ವಭಾವವನ್ನು ಅರಿತೇ ಏನೊ ಪ್ರೀತಿಯ ಕರುಳು ಇಂತಹ ಹರಕೆ ಹರಸುವುದು? ಅದನ್ನು ತುಂಬಿಕೊಂಡೋಣವೆಂದು? ಅದಕ್ಕೆ ವಿಮೆಗೆಂದು? ಬೇರೊಂದು ಕಡೆ 'ಬಿರುಗಾಳಿ ಪೊಡೆಯಲ್ಕೆ ಕಂಪಿಸಿ ಫಲಿತ ಕದಳಿ ಮುರಿ'ವಂತೆ ಸೀತೆ ಹಮ್ಮೈಸಿದಳು; ಇಲ್ಲಿ ಶಕುನ್ತಲೆಯ ಭಾಗ್ಯ ಮುರಿದು ಈಕೆ ಹೆಮ್ಮೈಸಿದಳು. ಈಕೆಯನ್ನು ನಿರಸನ ಮಾಡಿದ್ದು ಲೋಕ ಮಾತ್ರ ಅಲ್ಲ. ಮನುಷ್ಯರು, ಕೈಹಿಡಿದ ಗಂಡ– ರಾಜ ಮಾತ್ರವೇ ಅಲ್ಲ. ಆತನು ಚಕ್ರವರ್ತಿಯಾದ ರಾಜ್ಯದಲ್ಲಿ ಆತನೇ ಧರ್ಮ ವ್ಯವಸ್ಥೆಯ ಮೇಲ್ಪಟ್ಟ ಅಧಿಕಾರಿ; ಆ ಧರ್ಮಸ್ಥಾನದಲ್ಲಿ ನ್ಯಾಯ ದೊರೆಯದೆ ಹೋದರೆ ಧರ್ಮ ಇನ್ನೆಲ್ಲಿ ದೊರೆತೀತು ಭೂಮಿಯ ಮೇಲೆ? ಆದ್ದರಿಂದಲೇ ಆಕೆಗೆ ಸ್ವರ್ಗ ಪ್ರವಾಸ ಆಗಬೇಕಾದ್ದು. ದೇವರೇ ಇನ್ನು ಆಕೆಯನ್ನು ಉದ್ಧರಿಸಬೇಕು. ಅದು ಆಕೆಗೆ ಎರಡನೆಯ ತವರೂ ಹೌದು. ಅಲ್ಲಿ ಪುನಃ ಜನ್ಮ; ಪುನಃ ಪರಿಣಯ ಇಲ್ಲಿ ಅಪೂರ್ಣವಾದ್ದು ಅಲ್ಲಿ ಪೂರ್ಣಗೊಳ್ಳಬೇಕು. Broken arcs on Earth In Heaven the perfect round ಎಂಬುದು ಈ ಅರ್ಥಕ್ಕೂ ಹೊಂದಬಲ್ಲ ಸತ್ಯವಾಕ್ಯ.

ಈ ಕಡೆ ಹೀಗಾದರೆ ದುಷ್ಯನ್ತನ ಸ್ವಭಾವ ಕೂಡ ದೋಷರಹಿತವಾದ್ದಲ್ಲ. ಐದನೆಯ ಅಂಕ ಮೊದಲಾಗುವುದೇ ತಡ, ಆತನ ಅಂತಃಪುರದ ಚಿತ್ರ ವಿರಸಸೂಚನೆಯಲ್ಲಿ ಕಾಣುತ್ತದೆ. ಆ ಅರಮನೆಯಲ್ಲಿ ಆತನ ಪ್ರೇಮದಿಂದ ಸದ್ಯಃ ವಂಚಿತಳಾಗಿದ್ದ ಅಥವಾ ಉದಾಸೀನಕ್ಕೆ ಈಡಾದ ಹಂಸಪದಿಕೆ ಮೃದುವ್ಯಂಗ್ಯದಿಂದ ಆತನನ್ನು ಹಂಗಿಸುತ್ತಿದ್ದಾಳೆ. ವಸುಮತಿಯಂತಹ ಇನ್ನೊಬ್ಬಳಲ್ಲಿ ಇರುತ್ತ ತನ್ನನ್ನು ಮರೆತನೆಂಬುದೇ ಆಕೆಯ ಆಕ್ಷೇಪಣೆ. ಶಕುನ್ತಲೆಯ ಸಖಿಯರಿಗೆ ಆತನು ಕೊಟ್ಟುಬಂದಿದ್ದ ಮಾತೇನು? ಇಲ್ಲಿ ಅಂತಃಪುರದ ರಾಜನ ವ್ಯವಹಾರವೇನು? ಅವರು, 'ರಾಜರಿಗೆ ಬಹು ವಲ್ಲಭೆಯರಂತೆ, ಬಂಧುಗಳಿಗೆ ಯಾವ ರೀತಿಯಲ್ಲಿಯೂ ಈಕೆಯ ಕಾರಣದಿಂದ ಶೋಕವುಂಟಾಗದಂತೆ ನಿರ್ವಹಿಸಬೇಕು' ಎನ್ನಲು ಆತನು ಆಡಿದ್ದ ಮಾತಿನ ಧೋರಣೆ ಎಂಥದು! ಪರಿಗ್ರಹದವರು ಬಹುವಾದರೂ ನನ್ನ ಕುಲಕ್ಕೆ ಪ್ರತಿಷ್ಠೆ (ಉತ್ಕರ್ಷ) ತರುವವರು ಇಬ್ಬರೇ: ಸಮುದ್ರರಸನೆಯಾದ ಉರ್ವೀ; ನಿಮ್ಮಿಬ್ಬರ ಸಖಿಯಾದ ಈಕೆ, ಎಂಬ ಧಾರಾಳದಲ್ಲಿ ಎಂತಹ ಧೈರ್ಯವಿದೆ, ಹೇಳುವವರಿಗೆ? ಕೇಳಿ, ನಂಬಿ, ಆಶೆಪಡುವವರಿಗೆ? ಅದಕ್ಕೆ ಸಾರ್ಥಕತೆ ಹೇಗೆ ಬಂದೀತು, ಇಂತಹ ಆವರಣದಲ್ಲಿ? ಇದೇನು ಅನಾರ್ಯಕಾರ್ಯ ಮಾಡಿದನು? 'ಅಸತ್ಯಸಂಧೇ ಜನೇ ಶುದ್ಧಹೃದಯಾ ಸಖೀ ಪದಂ ಕಾರಿತಾ' ಉಂಗುರವನ್ನಾದರೂ ಕಳಿಸಿ ಆತನಿಗೆ ಸ್ಮರಣೆ ಉಂಟುಮಾಡಲಿ? ಎಂದು ತಲ್ಲಣಿಸಿದ ಅನಸೂಯೆಯ ಕಾರ್ಯವಾದರೂ ಫಲಿಸಬಾರದಾಗಿತ್ತೆ? ಆದಕ್ಕೂ ಅಡ್ಡಿಬಂದಿತು. ಪ್ರಿಯಂವದೆಯ ಭಯ ನಿವಾರಿತವಾಗಿ ತಂದೆ ಕಣ್ವರಿಗೆ ಅಶರೀರವಾಕ್ಕು ಶಕುನ್ತಲೆಯ ಸಂಗತಿಯನ್ನೆಲ್ಲ 'ಉರ್ವೀ ಸಂತೋಷಾರ್ಥಂ' ಎಂದು ವಿವರಿಸಿ ಅವರಿಗಿದ್ದ ಒಂದು ಹೊರೆಯನ್ನು ಇಳಿಸಿತ್ತು. ಸಂಭ್ರಮ ಒಡ್ಡಿ ಎಲ್ಲರೂ ಶಕುನ್ತಲೆಯ ಪತಿಗೃಹ ಪ್ರಸ್ಥಾನ ಮಂಗಳಕ್ಕೆ ಸಡಗರದಲ್ಲಿದ್ದರು. ಅನಸೂಯೆಯ ಕಾರ್ಯ ಆಗ ಅನಾವಶ್ಯಕವಾಯಿತು. ಇದೂ ಶಕುನ್ತಲೆಯ ದೌರ್ಭಾಗ್ಯಕ್ಕೇ ಪೋಷಕವಾಗಬೇಕೇಕೆ? ಆಶ್ರಮ ಆಶ್ರಮವೇ ತನ್ನ ಬೆಳಸಿನ ಭಾಗ್ಯವೊಂದನ್ನು ಹೊರಕ್ಕೆ ಕಳಿಸಿ ಶೂನ್ಯವಾಯಿತೆಂಬಂತೆ ಹಾರೈಸಿ, ಹರಸಿ ಆಕೆಯನ್ನು ಸಾಗುಗಳಿಸಿತು. ನಾಲ್ಕನೆಯ ಅಂಕದ ಸ್ನೇಹ ಸಂಪತ್ತಿಗೆ ಸಾಟಿಯಾದ ಭಾವರಸಪೂರ್ಣತೆ ನಾಟಕದ ಇತಿಹಾಸದಲ್ಲಿ ಬೇರೆಡೆ ಸಿಕ್ಕದೆಂಬುದು ಪ್ರಸಿದ್ಧ. ಇಂತಹ ಆವರಣದಿಂದ ನೇರ ಐದನೆಯ ಅಂಕದ ತೀವ್ರದಾರುಣ, ಕಠಿನತೆಗೆ, ಲೌಕಿಕತೆಗೆ ಎಷ್ಟು ಬೇಗ ಗಮನ! ಅದು ಮುಗಿದೊಡನೆಯೆ ಇದು ಹರಡುವ ವಿಷಮತೆ ನಮ್ಮ ನೋವನ್ನು ದುರ್ಭರವಾಗಿ ಮಾಡುತ್ತದೆ.

ದುಷ್ಯನ್ತನಿಗೆ ಶಾಪಕಾರಣದಿಂದ ಶಕುನ್ತಲೆಯ ಸಂಗತಿ ಪೂರ್ಣ ಮರೆತಿದೆ; ರಕ್ತದ ಮೂಕಕೆರೆಯೇನೊ ಪರ್ಯುತ್ಸುಕನನ್ನಾಗಿ ಮಾಡುವುದು. ತಕ್ಷಣದಲ್ಲಿ ಯಾವ ವಿರಹವೂ ನೋವಿನ ಕಾರಣವೂ ಕಾಣದಾದರೂ ಹಂಸಪದಿಕೆಯ ಗೀತೆಯಿಂದಾಗಿ

ಆತನಲ್ಲಿ ಮೃದುಭಾವ ಉದ್ರೇಕಗೊಂಡಿತ್ತು. ಒಂದು ನಿಮಿಷ ಚಿಂತಿಸಿ ಇದಕ್ಕೆ ಬಹುಶಃ ಜನನಾಂತರ ಸೌಹಾರ್ದ ಯಾವುದೋ ಕಾರಣವಿರಬೇಕೆಂದು ತೀರ್ಮಾನಿಸಿದನು.* ಜನ್ಮಾಂತರದಷ್ಟು ಹಿಂದೆಯಲ್ಲ, ಶಾಪಕ್ಕೆ ಹಿಂದಿನದು. ಇನ್ನೂ ಒಂದು ವರ್ಷ ಕೂಡ ಮುಗಿದಿಲ್ಲ. ಅಂತಹ ಸವಿ ಬೆಳೆದ ಸಂದರ್ಭಕ್ಕೆ ಸಂಬಂಧಿಸಿದುದು ಅರಿವಾಗದೆ ಹೋಯಿತು. ಋಷಿಗಳು ಹೇಳಿದರು; ಗೌತಮಿಯ ಸಲಹೆಯಂತೆ ಅವಗುಂಠನವನ್ನು ತೆಗೆದು ಶಕುನ್ತಲೆ ಮುಖದ ಗುರುತು ಕಾಣಿಸಿದಳು; ಪ್ರಮಾಣ ತೋರಿಸುತ್ತೇನೆಂದು ಹೇಳಿ ಬೆರಳು ನೋಡಿಕೊಂಡು ಉಂಗುರ ಕಾಣದಿರಲು ಅಪಮಾನವನ್ನೂ ತಿರಸ್ಕಾರವನ್ನೂ ಸಹಿಸಿದಳು. ಏಕಾಂತ ಪ್ರಣಯದ ಸಂಗತಿಗಳನ್ನು ತುಂಬಿದ ಸಭೆಯಲ್ಲಿ ನಿರೂಪಿಸಬೇಕಾಯಿತು. ಆದರೆ ಋಷಿ ಶಾಪ ವಿಧಿಯಾಗಿತ್ತು. ಆತನ ಅವಹೇಳನವನ್ನು ಕೇಳಿ ಸಂಭಾವಿತಳೂ ನಿಷ್ಕಪಟವೃತ್ತಿಯವಳೂ ಆದ ಆಕೆ ಆತನನ್ನು ಅನಾರ್ಯನೆಂದು ಧಿಕ್ಕರಿಸಬೇಕಾದ ಅಗತ್ಯ ಬಂತು. ಶಾರ್ಙ್ಗರವ ಶಾರದ್ವತರ ಆಗ್ರಹದ ಸಾಂತ್ವನದ ಮಾತು ಮುರಿದವು. ಆಕೆಯನ್ನು ಆಕೆಯ ಗತಿಗೆ ಬಿಟ್ಟು ಕ್ರುದ್ಧರಾಗಿ ಹಿಂದಕ್ಕೆ ಹೊರಡುತ್ತಿರಲು ಶಕುನ್ತಲೆಯನ್ನು ಜೊತೆಗೆ ಕರೆದುಕೊಂಡು ಹೋಗಿರೆಂದು ಕೇಳಿದ ರಾಜನನ್ನೂ ಶಕುನ್ತಲೆಯನ್ನೂ ಕಡೆಗಣಿಸಿ ಅವರು ಹೊರಟದ್ದಾಯಿತು. ವಿಧಿಯ ಕರುಣೆ ಮೂಡಲಿಲ್ಲ. ರಾಜನ ವಿಶ್ವಾಸ ತಿರುಗಲಿಲ್ಲ. ಪುರೋಹಿತ ಸೋಮರಾತರ ಮಧ್ಯಸ್ಥದ ನುಡಿಯಿಂದ ಆಕೆಗೆ ಉದ್ಧಾರದ ದಾರಿ ಕಂಡೀತೆಂದು ಹೇಳುವಾಗ್ಗೆ ಶಕುನ್ತಲೆಯ ದುಃಖದ ಬಟ್ಟಲು ತುಂಬಿ ಕೋಡಿಹರಿಯಿತು. ಪುರೋಹಿತನ ಮನೆಯಲ್ಲಿ ಮಗನನ್ನು ಹೆತ್ತು ಪರೀಕ್ಷೆ ಕೊಡುವುದಕ್ಕಾಗಿಯೇ ಇಷ್ಟು ಚೆಲುವು ಪ್ರೇಮ ಬೆಳೆದದ್ದು? ಆಕೆಯ ಆಕಾಂಕ್ಷೆ ಅಷ್ಟು ದೂರ ಏರಿದ್ದದ್ದು? ಕಂಗಾಲಾಗಿ 'ಭಗವತಿ ವಸುಧೇ ದೇಹಿ ಮೇ ವಿವರಂ' ಎಂದು ಬೇಡಿಕೊಂಡು ಸಭೆಯಿಂದ ಹೊರಟು ಪಾರಾಗಬೇಕಾಯಿತು.†

ರಾಜನಿಗೆ ಒದಗಿದ್ದದ್ದು ಧರ್ಮಸಂಕಟ. ಇನ್ನಾವ ವಿಧದಲ್ಲಿ ನೋಡಿದರೂ ಅಂತಹ ಸ್ವಭಾವ, ಧರ್ಮಭೀರುತೆ, ಲೋಕಹಿತ ನಿರತತೆ, ಕರ್ತವ್ಯ ಬುದ್ಧಿ, ವಿನಯ ಶೀಲತೆಉಳ್ಳ ಮನುಷ್ಯನು ಈ ರೀತಿ ಕೈಹಿಡಿದ ಹೆಂಡತಿಯನ್ನು ನಿರಾಕರಿಸಲಾರ. ತಪೋವನದಲ್ಲಿಯೆ? ಧರ್ಮ ಪೀಠದಲ್ಲಿಯೆ? ಹಿರಿಯರಿಗೆ ಸಲ್ಲಿಸುವ ಮರ್ಯಾದೆಯಲ್ಲಿಯೆ? ಹೆಂಗಸರಿಗೆ ತೋರಿಸುವ ಮೃದುಸೇವೆಯಲ್ಲಿಯೆ? ಅಭಯಪ್ರದಾನ ರಕ್ಷಕತೆ ದಾಕ್ಷಿಣ್ಯಗಳಲ್ಲಿಯೆ? ಸ್ವಂತ ಸುಖ ದುಃಖಗಳನ್ನು ಎಣಿಸದೆ ರಾಜಕಾರ್ಯ ನಿರ್ವಹಿಸುತ್ತ ಪ್ರಜಾವತ್ಸಲನಾಗಿ ಬಂಧುವಾಗಿರುವುದರಲ್ಲಿಯೆ? ಶಾಸನಗಳನ್ನು ವಿಶಾಲಾರ್ಥದಲ್ಲಿ ಅನ್ವಯಿಸುವ ಔದಾರ್ಯದಲ್ಲಿಯೆ? ಸದ್ಯಕ್ಕೆ ಪ್ರೀತಿ ಇಲ್ಲವಾದರೂ ಒಂದು ಸಲ ಒಲಿದ ಹೆಣ್ಣುಗಳಿಗೆ ತೋರಿಸುವ ದಾಕ್ಷಿಣ್ಯದಲ್ಲಿಯೆ? ಎಲ್ಲಿ ತನ್ನ ದುರದೃಷ್ಟದಿಂದ ಅಪಚಾರ ಬಂದು ತಾಪಸರಿಗೆ–ತಪೋವನಗಳಿಗೆ ಕೇಡಾಯಿತೊ ಎಂದು ಪಡುವ ಶಂಕೆಯಲ್ಲಿಯೆ? ಸ್ವಕಾರ್ಯ ವಿಮರ್ಶೆಯಲ್ಲಿಯೆ? ವಂದಿಮಾಗಧರು, ಕಂಚುಕಿ, ಪರಿವಾರದವರು, ಪ್ರತೀಹಾರಿ ಇವರು ಹೋಗಲಿ,–ಪುರಜನ, ತಪಸ್ವಿ ಜನ, ಅನಸೂಯೆ ಪ್ರಿಯಂವದೆಯರು, ಕಣ್ವರು, ಮಾತಲಿ, ಮಾರೀಚ ದಾಕ್ಷಾಯಣಿಯರು, ಸಾನುಮತಿ ಎಲ್ಲರೂ ಆತನ ಗುಣ, ಕುಲ, ರೂಪ, ಗಾಂಭೀರ್ಯಗಳ ಮತ್ತು ಸಾನುಕ್ರೋಶತೆ ಯೋಗ್ಯತೆ ರಾಜರ್ಷಿತ್ವಗಳ ವಿಚಾರದಲ್ಲಿ ಆಡುವ ಮೆಚ್ಚಿಕೆಯಲ್ಲಿಯೆ? ಸಿಡಿಲೆರಗಿದಂತೆ ಮೇಲೆ ಭರ್ತ್ಸನೆಯೂ, ಅಪವಾದವೂ ಹೊರುತ್ತಿದ್ದರೂ ತಡೆದುಕೊಂಡು ಮರ್ಯಾದೆ ಮೀರದೆ ಉತ್ತರ ಕೊಡುತ್ತಿದ್ದ ಸಂಯಮದಲ್ಲಿಯೆ?–ಎಲ್ಲಿಯೂ ರಂಧ್ರವಿಲ್ಲ ಆತನನಡತೆಯಲ್ಲಿ. ಆಕೆಯನ್ನು ಒಪ್ಪಿಕೊಂಡಿದ್ದರೆ ಏನು ನಷ್ಟವಾಗುತ್ತಿತ್ತು? ಅಂತಃಪುರದಲ್ಲಿ ಹಂಸಪದಿಕೆಯಂಥವರು ಹಲವರು ಈಗಾಗಲೇ ಇದ್ದಾರೆ. ಇವಳಿನ್ನೊಬ್ಬಳು* ಹೆಚ್ಚಾಗಿ; ಅಷ್ಟೇ ಅಲ್ಲವೆ? ಈಕೆಯ ರೂಪೊ, ಅಕ್ಲಿಷ್ಟ ಕಾಂತಿಯುಳ್ಳದ್ದು. ಚೆಲುವೆ ತಾನಾಗಿ ಹೇಳಿಕೊಳ್ಳುತ್ತಿದ್ದಾಳೆ, ತನ್ನಿಂದ ಭೋಗ್ಯೆಯೆಂದು. ಬೇರೆ ಸಾಕ್ಷಿ ಒದಗದಿರಲು ಏಕಾಂತದ ಸರಸವನ್ನು ನೆನಪು ಮಾಡಿಕೊಡುತ್ತಿದ್ದಾಳೆ. ಆಗ್ರಹ, ಆಸೆ, ನಿರಾಸೆ, ದುಃಖ ಒತ್ತಿಬಂದು ಪುರುವಂಶದಲ್ಲಿ ಹುಟ್ಟಿದವನು–ಧರ್ಮ ಕಂಚುಕ ತೊಟ್ಟು ಬಂದವನು ಎಂದು ವಿಶ್ವಾಸವಿಟ್ಟರೆ, ಅನಾರ್ಯನಾದ ಇವನ ಕೈಗೆ ಸಿಕ್ಕಿಕೊಂಡೆನೇ? ಇವನ ಕಿತವದಿಂದ ಸ್ವಚ್ಛಂದ ಚಾರಿಣಿಯಾದೆನೇ? ತಾಯಿ, ಭೂದೇವಿ ನನ್ನನ್ನು ನಿನ್ನೊಳಕ್ಕೆ ಕರೆದುಕೊ, ಈ ಅಪವಾದ ತಾಳಲಾರೆ ಎನ್ನುತ್ತಿರುವಾಗ ಅದಕ್ಕಿಂತ ನೈಜವಾದ ದುರ್ದೆಶೆಯ ಪ್ರಮಾಣ ಏನು ಕೊಡಲಾದೀತು–ಸಾಮಾನ್ಯವಾಗಿ? ಹೃದಯಕ್ಕೆ ಆ ಪ್ರಮಾಣ ಸ್ಫುಟವಾಗಿ ಬೋಧೆಯಾಗುತ್ತಿದೆ. ಬುದ್ಧಿ, ನೇಮ ಒಪ್ಪದು. ಆತನು ಅಂತಃಕರಣ ಪ್ರವೃತ್ತಿಗೆ ಬೆಲೆ ಕೊಡುವವನಾದರೂ ಹಿಂದಿನಂತೆಯೇ ಈಗಲೂ,–ಈಗ ಇನ್ನೂ ಮೇಲಾಗಿ–ಅನ್ಯ ಪ್ರಮಾಣ ಬೇಕೆನ್ನುತ್ತಾನೆ. ಧರ್ಮಾಧಿಕಾರಿಯಾದ, ಲೋಕವ್ಯವಹಾರ ವಿಮರ್ಶಕನೂ ನಿರ್ಣಾಯಕನೂ ಆದ ಆತನಿಗೆ ಇಷ್ಟು ಪ್ರಮಾಣ ಸಾಲದು. ಆಕೆಯನ್ನು ಆತನು ಒಪ್ಪಿದ್ದರೆ ಜನ ಅಸಮಾಧಾನ ಪಡದಿರಬಹುದೇನೊ; ಕಣ್ವರಂತಹವರು ಸಂದೇಶ ಕಳಿಸಿ 'ಸಾಮಾನ್ಯಪ್ರತಿಪತ್ತಿ ಪೂರ್ವಕಂ ಇಯಂ ದಾರೇಷು ದೃಶ್ಯಾ ತ್ವಯಾ' ಕಾಪಾಡಿಕೋ ಎಂದು ತಿಳಿಸಿರುವಾಗ, ತಾನು ಇಂತಹ ಇನ್ನು ನೂರು ಮಂದಿಗಾದರೂ ಅಂತಃಪುರದಲ್ಲಿ ಸ್ಥಾನಕೊಡಲು ಶಕ್ತನಾಗಿರುವಾಗ, ಒಂದು ನಿಮಿಷಕಾಲ ತಾನೇ 'ಭ್ರಮರ ಇವ ವಿಭಾತೇ ಕುಂದಂ ಅಂತಸ್ತುಷಾರಂ ನ ಚ ಖಲು ಪರಿಭೋಕ್ತುಂ ನೈವ ಶಕ್ನೋಮಿ ಹಾತುಂ'— ಎಂಬ ಸಂದಿಗ್ಧತೆಯಲ್ಲಿದ್ದರೂ ಧರ್ಮವನ್ನೇ ಹಿಡಿವನು. ಈಕೆಯನ್ನು ತಿರಸ್ಕರಿಸಿ ನನಗೆ ಆಗುವ ಲಾಭವೇನು? ಎಂದು ಕೇಳಿ 'ವಿನಿಪಾತಃ' ಎಂದು ಋಷಿಗಳು ಕೊಟ್ಟ ಉತ್ತರಕ್ಕೆ ಕನಲಿ ಪುರುವಂಶದ ಅರಸರು ಅರಿತರಿತು ಸರ್ವನಾಶವನ್ನು ಎಂದಿಗೂ ಬಯಸರು ಎಂಬ ಆತ್ಮಗೌರವವನ್ನೇ ನುಡಿದಾನು. ವಶಿಗಳಾದವರು ಪರಪರಿಗ್ರಹ ಸಂಪರ್ಕಮಾಡರು ಎನ್ನುವನೇ ಹೊರತು ತನ್ನವಳೆಂದು ಹೇಗೂ ಬೋಧೆಯಾಗದ ಆಕೆಯನ್ನು ಅನುಕೂಲವಾಗಿ ದೊರೆತಳೆಂದು ಸ್ವೀಕರಿಸಲು ಒಪ್ಪಲಿಲ್ಲ. ಮನಸ್ಸಿಗೆ ವೇದನೆಯೇನೊ ಇದೆ. ಏನು ಮಾಡುವುದಕ್ಕೂ ತೋಚದೆ 'ಸ್ವಾಮಿ ತಾವೇ ಇಲ್ಲಿಗುರುಲಾಘವವನ್ನು ತಿಳಿಸಿ: ಈಕೆ ನುಡಿವುದು ದಿಟವಾದರೆ ನಾನು ದಾರತ್ಯಾಗಿಯಾಗುತ್ತೇನೆ; ಸಟೆಯಾದರೆ ಪರಸ್ತ್ರೀಸ್ಪರ್ಶಪಾಂಸುಲನಾಗುತ್ತೇನೆ. ಎರಡೂ ಬಗೆಯಲ್ಲಿ ಪಾಪ. ನಿಜವೋ ಸುಳ್ಳೋ ಗೊತ್ತಿಲ್ಲದ ಉಭಯ ಸಂಕಟಕ್ಕೆ ಸಿಕ್ಕಿದ್ದೇನೆ ಎನ್ನುವನು. ಅಂಕಾಂತದಲ್ಲಿ ಕೂಡ ಆತನ ಹೃದಯ ಆಕೆಯನ್ನು ನಂಬಬೇಕೆನ್ನಿಸುತ್ತದೆ. ಆದರೆ ಸರ್ವಥಾ ನೆನಪಿಲ್ಲದ, ಪರಿಣಯದಲ್ಲೇ ಸಂದೇಹವಿರುವ ಗರ್ಭಧಾರಿಣಿ ಹೆಂಗಸನ್ನು ಹೇಗೆ ಸ್ವೀಕರಿಸಬಲ್ಲನು? ನೆನಪಿಲ್ಲದುದಕ್ಕೆ ಕಾರಣ ಈತನ ಸ್ತ್ರೈಣತೆ ಅಲ್ಲ, ಖಂಡಿತ. ಆಕೆಯದು ಮರೆ

* ಈ ವಾದ ನಮ್ಮ ಜನಕ್ಕೆ ಬಹು ಉಪಕಾರ ಮಾಡಿದೆ. ಅದರಿಂದ ಬುದ್ಧಿಗೆ ಹಿಡಿವ ಗ್ರಹಣ ಆವಾದ ಮುರಿದುಬೀಳುವವರೆಗೂ ಬಿಡುಗಡೆಯಿಲ್ಲದ್ದು.

† ರಾಮಾಯಣದ ಉತ್ತರ ಕಾಂಡದಲ್ಲಿ ಸೀತೆ ಇಟ್ಟ ಕಣ್ಣಹನಿ, ನುಡಿದ ಮಾತು ಒಂದೇ ಇದಕ್ಕೆ ಸಾಟಿಯಾದ್ದು.

ಸೀತಾ :—ಅಬ್ರವೀತ್ ಪ್ರಾಂಜಲಿಃ ವಾಕ್ಯಂ ಅಧೋದೃಷ್ಟಿಃ ಅವಾಂಗ್ಮುಖೀ
ಯಥಾಹಂ ರಾಘವಾತ್ ಅನ್ಯಂ ಮನಸ್ಯಾಽಪಿ ನ ಚಿನ್ತಯೇ
ತಥಾ ಮೇ ಮಾಧವೀ ದೇವೀ ವಿವರಂ ದಾತು ಮರ್ಹತಿ

ಹಾಗೆಯೇ ಇದರ ಮಾರ್ದನಿಯನ್ನು ಶಾಕುನ್ತಲಕ್ಕೆ ಈಚೆಯ ಉತ್ತರರಾಮ ಚರಿತ್ರೆಯ ಗರ್ಭನಾಟಕದ ಈ ಮಾತುಗಳಲ್ಲಿಯೂ ಕೇಳಬಹುದು.

ನಯತು ಮಾಂ ಆತ್ಮನೋ ಅಂಗೇಷುವಿಲಯಂ ಅಂಬಾ
ನ ಸಹಿಷ್ಯಾಮಿ ಈದೃಶಂ ಜೀವಲೋಕಸ್ಯ ಪರಿಭವಂ ಅನುಭವಿತುಂ

* ಇವಳನ್ನು ಇಂಥ ಇನ್ನೊಬ್ಬಳಾಗಿ ಮುಗಿಯುವಂತೆ ಮಾಡುವುದು ಕವಿಗಾಗಲಿ ರಾಜನ ಕುಲದೇವತೆಗಳಿಗಾಗಲಿ ಇಷ್ಟವಿಲ್ಲ. ಹೆಚ್ಚು ಸಂಸ್ಕಾರಗೊಳಿಸಿ ಪುಟವಿಟ್ಟು ಇವರ ಪ್ರೇಮವನ್ನು ಉದಾತ್ತವಾಗಿ ಮಾಡುವುದೇ ಅವರ ಉದ್ದೇಶ.

ವಂತಹರೂಪವೆ? ನುಡಿ ಸಾಮಾನ್ಯ ನೆನಪಿನ ಮಾತೆ? ಆಕೆಯ ಪ್ರೇಮದ ಸವಿ ಕಂಡಿದ್ದ ಠಕ್ತದಲ್ಲಿ ಅದರ ಮಿಡಿತ ಅರೆನಿಮಿಷ ಚಿಮ್ಮಿ ಮಾಯುವಾಗತಕ್ಕದ್ದೆ?* ಮತ್ತಿನ್ನೇನು? ಯಾವುದೋ ಶಾಪವೇ ಇರಬೇಕು. ಗ್ರಹಣ ಹಿಡಿದ ಹಾಗೆ ಅದು ಹಿಡಿದಿದೆ; ಬಿಂಬವನ್ನು ಗ್ರಹಣ, ದೀಪವನ್ನು ಮರೆ ಮುಸುಕುವಂತೆ ಮುಸುಕಿದೆ. ಮರೆ ತೆರೆದರೆ ಬೆಳಕು; ಗ್ರಹಣ ಬಿಟ್ಟರೆ ಮಾತ್ರ ಬಿಂಬ ಸ್ವಚ್ಛವಾಗಿ ಕಾಣಿಸೀತು. ಅದಕ್ಕೆ ಇನ್ನೂ ಕಾಲ ಬಂದಿಲ್ಲ, ವಿಲಂಬ ಇದೆ.

ವರ್ಷಗಳು ಕಳೆದುವು. ಮಾರೀಚಾಶ್ರಮದಲ್ಲಿ ಶಕುನ್ತಲೆ ನವೆಯುತ್ತಿದ್ದಾಳೆ. ಆಕೆ ಈಗ ವ್ರತಚಾರಿಣಿ. ಮಗನನ್ನು ಹೆತ್ತು, ಅತನಲ್ಲಿ ಜೀವವಿಟ್ಟು ಗುರುಸೇವೆಯಲ್ಲಿ ನಿರತಳಾಗಿದ್ದಾಳೆ. ಎಷ್ಟು ಭಂಗಪಟ್ಟಿದ್ದರೂ ಗಂಡನಲ್ಲಿ ಕೋಪ ಉಂಟಾಗಿಲ್ಲ. ಕಣ್ವರು ಆಕೆಗೆ ಹಿಂದೆ ಹೇಳಿದ್ದ 'ಭರ್ತುಃ ವಿಪ್ರಕೃತಾಪಿ ರೋಷಣತಯಾ ಮಾ ಸ್ಮ ಪ್ರತೀಪಂ ಗಮಃ' ಎಂಬುದನ್ನು ಆಕೆ ಮರೆತಿಲ್ಲ. ಆತನ ವಿರಹ ದುಃಖವನ್ನು ಅನುಭವಿಸಿದ್ದಾಳೆ. ಇದನ್ನು ನೋಡಿ ತಾಯಿ ಇಲ್ಲಿ ಕಣ್ಣೀರಿಟ್ಟರೆ ಧ್ಯಾನದಿಂದ ಅರಿತ ಕಣ್ವರೂ ಆಶ್ರಮದವರೂ ಇನ್ನೆಷ್ಟು ಕೊರಗಿದರೋ? ಕವಿ ಕಾಣಿಸಿಲ್ಲ. ಈ ಸಂಗತಿ ಅರಿತ ಆಶ್ರಮದಲ್ಲಿ ಎಂತಹ ಅಂತಸ್ತಾಪ ಉಂಟಾಯಿತೊ ಕಲ್ಪನೆಗೇ ಬಿಟ್ಟಿದ್ದಾನೆ ಕವಿ. ಎದುರಿಗೆ ಕರೆತಂದು ಶಕುನ್ತಲೆಯ ತಾಪವನ್ನೂ ವಿವರಿಸಲಿಲ್ಲ. ಈ ಮೌನವೇ ಕಥೆಗೆ ವ್ಯಾಖ್ಯಾನ. ಆದರ ದಾರುಣವಾದ ಈ ಯಾತನೆ ಮುಗಿಯಬೇಕು ಬೇಗ. ಆದ್ದರಿಂದ ಶಾಪದ ಬಿಡುಗಡೆಯ ಕಾಲವನ್ನು ವಿಧಿ, ಧರ್ಮ ಅಥವಾ ದೇವತೆಗಳು ತ್ವರೆಗೊಳಿಸುತ್ತಾರೆನ್ನೋಣ.

ಯಾವ ಸಮಯದಲ್ಲಿ ದಿಕ್ಕೆಟ್ಟ ಮಗಳನ್ನು ಮೇನಕೆ ಸ್ವರ್ಗಕ್ಕೆ ಎತ್ತಿಕೊಂಡು ಹೋದಳೋ ಆ ಕಾರ್ಯದಲ್ಲಿಯೇ ಇನ್ನು ಈಕೆಯ ಭಾಗ್ಯ ತಿರುಗಲು ಮೊದಲಾಯಿತು. ಸ್ವಲ್ಪ ತಡವಾದರೂ ಖಂಡಿತ ತಿರುಗುತ್ತದೆ ಎಂಬ ಆಶ್ವಾಸನೆ ದೊರೆಯುತ್ತದೆ. ರಾತ್ರಿಯ ಗಾಢತೆ ಊರಿ ಬೆಳೆದಷ್ಟೂ ಮುಂದಿನ ಬೆಳಗ್ಗೆಗೆ ಹತ್ತಿರವಾಗುವಂತೆ ಅಲ್ಲವೆ? If Winter comes can Spring be far behind? (ಶಿಶಿರ ಬಂದರೆ, ಮಧುಮಾಸ ಇನ್ನೆಷ್ಟು ದೂರ ಹಿಂದೆ ಉಳಿದೀತು?) ಬಂತು ಇನ್ನೊಂದು ನಂಬಿಕೆಯ ಕುರುಹು, – ಅವರ ಪ್ರೇಮಾನುಬಂಧಕ್ಕೆ ಸಾಕ್ಷಿಯಾಗಿ. ಪುನಃ ಸಿಕ್ಕಿದ ಶಾಪಾಂತಕಾರಿ ಉಂಗುರ; ಅದು ಸಿಕ್ಕಿದ್ದು ಆಕೆ ಸಿಕ್ಕಿದಂತೆಯೇ ಒಂದು ರೀತಿ. ಏಕೆಂದರೆ ಆತನ ಪಶ್ಚಾತ್ತಾಪ ತೆರೆಯುವುದು; ಚಿಂತೆ, ಆಸೆ ಬಲಿಯುವುವು; ಇನ್ನಾರಿಗಾದರೂ ಸಿಕ್ಕಿದ್ದರೆ ಎಷ್ಟು ನಷ್ಟವಾಗುತ್ತಿತ್ತು ಎಂಬ ಸೂಚನೆ ಏಳುವುದು; ತಾಯಿ ತಂದೆಯರು ಹೆಣ್ಣು ಮಕ್ಕಳ ಕೊರಗನ್ನು ಕಳೆಯಲು ತಡಮಾಡುವುದಿಲ್ಲ ಎಂಬ ಲೋಕಾಚಾರವನ್ನು ವಾದಿಸುವುದು. ಅದರ ಜೊತೆಗೆ, ಪುನಃ ಹೆದರಿ ಹೆದರಿ ವಸಂತ ತೆರೆಯುತ್ತದೆ. ರಾಜನು ಪ್ರತಿಬಂಧಾಜ್ಞೆ ಮಾಡಿ ತಡೆದರೂ ಉತ್ಸವಗಳನ್ನು ನಿಲ್ಲಿಸಿದ್ದರೂ ಅದರ ಜೀವಸರ್ವಸ್ವವಾದ ಆ ತಾಮ್ರ ಹರಿತ ಪಾಂಡುರ ಚೂತ ಕೋರಕಕ್ಕೆ ವನಪಾಲಿನಿಯರು ಪ್ರೇಮದ ಸ್ವಾಗತ ಕೊಟ್ಟೇ ಕೊಡುತ್ತಾರೆ; ಆ ಕೋಗಿಲೆ, ಕೋರಕ, ಕುಸುಮ, ಕುಸುಮಾಯುಧರಿಗೆ ಹೆದರಿಕೆಯಾದರೇನು? ಈ ಮಧುಕರಿಕೆ ಝುಂಕಾರ ಮಾಡಿಯೇ ಮಾಡಿದಳು; ಈ ಪರಭೃತಿಕೆ ಕೊರಲೆತ್ತಿಯೇ ಎತ್ತಿದಳು; ಪಂಚೇಷುವಿನ ಅಧಿಕಾಯುಧವಾಗೆಂದು ಮನ್ಮಥನಿಗೆ ಪೂಜೆ ಅರ್ಪಿಸಿಯೇ ಬಿಟ್ಟಳು. ಎಲ್ಲಿಯೂ ಆಕೆಯ ಚಿತ್ರವೇ ಕಣ್ಣಲ್ಲಿ, ಬಗೆಯಲ್ಲಿ; ಆಕೆಯ ಮಾತೇ ಬಾಯಲ್ಲಿ. ಆಕೆಯ ಚಿತ್ರರೇಖೆಗಳೇ ಕೈಯಲ್ಲಿ, ಭಗೆಯಲ್ಲಿ. ಅನ್ನ, ನಿದ್ರೆ, ಅಲಂಕಾರ, ರಾಜಕಾರ್ಯ, ಪ್ರಜೆಗಳಲ್ಲಿ ಆದರ ಯಾವುವೂ ಬೇಡ.

* ಈ ಪ್ರಮಾಣಗಳಿಗಿಂತ ಉಂಗುರದ ಕೋಡು ತಾನೇ ಏನು? ಎಂದರೆ, ಅದೊಂದೇ ಅವನ ಮೇಲೆ ಆಪಾದನೆ ಹೊರಿಸಿ ಬಿಗಿಸುವ ಸಾಕ್ಷಿ ಪ್ರಮಾಣ.

## ಕಡೆಯ ಎರಡಂಕ

ಅಂಕಾರಂಭ ಸಾನುಮತಿ ಪ್ರವೇಶಗಳಿಗೆ ಮುಂಚೆಯೇ ರಾಜನು ಶಕುನ್ತಲೆಯ ಚಿತ್ರವನ್ನು ಬರೆದಿಟ್ಟಿದ್ದಾನೆ. ಆಕೆಯಿದುರು ಚಿತ್ರವನ್ನು ಮಾರ್ಪಡಿಸುತ್ತಿರುವಾಗ ಎದುರಿಗೇ ಶಕುನ್ತಲೆ ಇರುವಳೆಂಬ ಸತ್ಯಭ್ರಾಂತಿ ಎಲ್ಲರಿಗೂ ಕವಿಯುತ್ತದೆ; ವಿದೂಷಕನು ಈ ಭ್ರಾಂತಿಯನ್ನು ಒಡೆಯುವವರೆಗೂ ಅದರ ಆಧಿಪತ್ಯವೇ. ವಿಪ್ರಲಂಭದಲ್ಲಿ ವರ್ಣಿಸುವ ಉನ್ಮಾದ ಶೃಂಗಾರ ಮೊನೆಗೊಂಡು ಆತನನ್ನು ನಿರ್ವಿಣ್ಣನನ್ನಾಗಿ ಮಾಡಿದೆ. ಪ್ರಪಂಚದಲ್ಲಿ ಆಸಕ್ತಿಯಿಲ್ಲದೆ ಏಕಾಂತವನ್ನಾರಿಸಿಕೊಂಡು ಚಿತ್ರಗತೆಯಾದವಳಲ್ಲಿ ಪೂರ್ವಾಪರ ವಿರೋಧಿ ನಡತೆ, ನುಡಿತ ತೋರಿಸುತ್ತ ಜಡನಾಗಿರುವ ಆತನ ಬಹುಮುಖವಾದ ಪ್ರಣಯವನ್ನು ಎಲ್ಲರೂ ಕಂಡಿದ್ದಾರೆ. ಇವನ ಮನಸ್ಸು, ತನ್ನ ಗೆಳತಿಯ– ಅಥವಾ ಗೆಳತಿಯ ಮಗಳ ಪರವಾಗಿ ಹೇಗೆ ಇದೆಯೋ, ಆಕೆಯ ಆಸೆ ಫಲಿಸೀತೋ ಇಲ್ಲವೋ ಎಂದು ನೋಡಿಕೊಂಡು ಹೋಗ್ಗೋಣವೆಂದೇ ಆಕೆ ರಾಜೋಪವನಕ್ಕಿಳಿದು, ಅಲ್ಲಿನ ನಿರುತ್ಸವತೆಗೆ ಆಶ್ಚರ್ಯಪಟ್ಟು, ಗೆಳತಿಯ ಕಷ್ಟ ಇನ್ನು ನಿವಾರಿತವಾಯಿತು, ಬಂದ ಕೆಲಸ ನೆರವೇರಿತು, ಶುಭ ಸಮಾಚಾರ ತೆಗೆದುಕೊಂಡುಹೋಗಿ ಗಂಡನ ಬಹುಮಾನವನ್ನು ತಿಳಿಸಿ ಆಕೆಯನ್ನು ಸಂತೋಷಪಡಿಸುತ್ತೇನೆಂದು, ತಾಯಿ ಮಗಳ ಪರವಾಗಿ ದೇವಲೋಕದಿಂದ ಖಾಸಗಿಯಾಗಿ ಬಂದ ಮುಂತಿಳಿವಿನ ಸುದ್ದಿಕಾರಳು ಆಕೆ. ತಿರಸ್ಕರಿಣೀ ವಿದ್ಯಾ ಬಲದಿಂದ ತಾನು ಯಾರಿಗೂ ಕಾಣಿಸದೆ, ಇತರರಿಗೆ ಕಾಣದಂತೆ ಎಲ್ಲವನ್ನೂ ಕಾಣುತ್ತಿದ್ದು, ಅಲ್ಲಿನ ನಡತೆಯ ಮೇಲೆ ವ್ಯಾಖ್ಯಾನ ಮಾಡುತ್ತ ಮೆಚ್ಚುತ್ತ ತಾನು ಕೂಡ ಆ ದುಃಖದಲ್ಲಿ ಬೆರೆತು ಮೈಮರೆವಷ್ಟರಮಟ್ಟಿಗೆ ಆಕೆಗೆ ಸಹಾನುಭೂತಿ ಬರುತ್ತದೆ. 'ಸಂರೋಪಿತೇ ಅಪಿ ಆತ್ಮನಿ ಧರ್ಮಪತ್ನೀ ! ತ್ಯಕ್ತಾ ಮಯಾ ನಾಮ ಕುಲಪ್ರತಿಷ್ಠಾ' ಎಂದು ಮುಂತಾಗಿ ಸಂತತಿಯಿಲ್ಲದ ದುಃಖದಲ್ಲಿ ಕೊರಗುವ ಆತನಿಗೆ ನಿಶ್ಚಯಜ್ಞಾನ ಕೊಡಲೆ? 'ಅಹಂ ಇದಾನೀಂ ಏವ ನಿರ್ವೃತಂ ಕರೋಮಿ' ಎಂದು ಒಡನೆಯೇ ತಡೆದುಕೊಳ್ಳುತ್ತಾಳೆ. ದೇವಲೋಕದವರು ಇದಕ್ಕೆ ಮುಂಚೆಯೇ ಅಧಿಕಾರಯುತವಾಗಿ ಪರಿಹಾರವನ್ನು ಯೋಚನೆ ಮಾಡಿರುವುದು ಆಕೆಗೆ ಗೊತ್ತು. ಖಾಸಗಿಯಾಗಿ ಬಂದ ಆಕೆಯ ಭಾಗದ ಕೆಲಸವಲ್ಲ ಸ್ವರ್ಗಲೋಕದ ಸಂಗತಿಯನ್ನು ಆತನಿಗೆ ತಿಳಿಸುವುದು. ಹೆಣ್ಣಿನ ಕಡೆಯ ಒಬ್ಬ ಬಂಧು ಮಾತ್ರ ಆಕೆ. ಸಕಲವೂ ಪ್ರತ್ಯಕ್ಷವಾದ ಸ್ವರ್ಗಲೋಕದ ಒಡೆಯರಿಗೆ ಪರೋಕ್ಷವಾದುದು ಯಾವುದು? ದೇವೇಂದ್ರನ ಪ್ರಿಯ ಸಹಾಯಕನಾದ ಆತನಿಗೆ ಈ ಸ್ಥಿತಿ ಬರುವುದಕ್ಕೆ ಮುಂಚಿತವಾಗಿಯೇ ಯಜ್ಞಭೋಗದಲ್ಲಿ ಉತ್ಸುಕರಾಗಿರುವ ದೇವತೆಗಳೇ ಶಕುನ್ತಲೆಯ ಗಂಡನು ತನ್ನ ಧರ್ಮಪತ್ನಿಯನ್ನು ಬೇಗನೆ ಸಂತೋಷಗೊಳಿಸುವನು ಎಂಬ ಆಶ್ವಾಸನೆಯನ್ನು ಮಹೇಂದ್ರನ ತಾಯಿ ಆಕೆಗೆ ಕೊಟ್ಟಳೆಂದು ಕೇಳಿದ್ದಳಂತೆ. ಆದ್ದರಿಂದ ಇಲ್ಲಿ ಕಾಣಿಸಿಕೊಳ್ಳಲಿಲ್ಲ. ಹೇಮಕೂಟಕ್ಕೆ ಹಿಂತಿರುಗಿ ಮೇನಕೆ ಶಕುನ್ತಲೆಯರಿಗೆ ನಡೆದುದನ್ನೆಲ್ಲ ವರದಿ ಮಾಡಿದಳು.

ಇದು ಆರನೆಯ ಅಂಕದ ಕೆಲಸವಾದರೆ, ಸ್ವರ್ಗಾಧಿಕಾರಿಗಳೇ ಮುಂದೆ ಕಾರ್ಯಭಾರವನ್ನು ನೇರವಾಗಿ ಕೈಕೊಳ್ಳುವರು. ಅವನ ಗೆಳೆಯನ ಕುತ್ತಿಗೆ ಹಿಸುಕಿ, ಕೈಯಲ್ಲಾದರೆ ದುಷ್ಯನ್ತನು ನಿನ್ನನ್ನು ಬಿಡಿಸಿಕೊಳ್ಳಲಿ, ನಿನ್ನ ನೆತ್ತರು ಹೀರುತ್ತೇನೆ ಎಂದು ನುಡಿದು ರೋಷಗೊಳಿಸಿ, ತಣ್ಣಗಾಗಿದ್ದ ರಾಜನ ರಕ್ತವನ್ನು ಕುದಿಸಿ ರಕ್ಷಣಾ ಕಾರ್ಯದಲ್ಲಿ ಪುನಃ ಪ್ರವೃತ್ತಿ ಉಂಟಾಗುವಂತೆ ಮಾತಲಿ ಮಾಡುತ್ತಾನೆ. ಆಯಿತು; ಇಂದ್ರಲೋಕಕ್ಕೆ ಹೋಗಿ ದೇವ ಸೇವೆ ಸಲ್ಲಿಸಿ ಅರ್ಧಾಸನದ ಮರ್ಯಾದೆಯನ್ನೂ ಸ್ವಂತವಾಗಿ ಧರಿಸಿದ ಮಂದಾರ ಹರಿಚಂದನದ ಮಾಲೆಯನ್ನೂ ಬಹುಮಾನವಾಗಿ ಪಡೆದು ಜಯನ್ತನು ಆಸೆಪಟ್ಟು ಪಡೆಯದ ಗೌರವವನ್ನು ಪಡೆದಾಯಿತು. ಈ ದೇವಕಾರ್ಯವನ್ನು ಮಾಡಿಸಿಕೊಂಡಾದ ಮೇಲೆ ಆತನಿಗೆ ಹೆಚ್ಚು

ಆಪ್ತವಾದ ಸಂತೋಷಭೋಗ ಉಂಟುಮಾಡಿ ಕೊಡಬೇಡವೆ? ಪತ್ನೀ ಪುತ್ರಲಾಭವನ್ನು ಮಾಡಿಕೊಡಬೇಕೆಂದೇ ದೇವರು ಈ ವ್ಯಾಪಾರ ಹೂಡಿದ್ದರೂ, ಮಾತಲಿಗೆ ಈ ಮರ್ಮ ತಿಳಿದಿದ್ದರೂ ಒಂದು ಮಾತು ಕೂಡ ಆತನು ಆಡಲಿಲ್ಲ. ಹೇಮಕೂಟದ ದಿವ್ಯ ಮೋಹಕತೆಯನ್ನು ರಾಜನೇ ಮೆಚ್ಚಿ ಅಲ್ಲಿ ಇಂದ್ರಗುರು ಇರುವರೆಂದು ತಿಳಿದಕೂಡಲೆ 'ತೇನ ಹಿ ಅನತಿಕ್ರಮಣೀಯಾನಿ ಶ್ರೇಯಾಂಸಿ; ಪ್ರದಕ್ಷಿಣೀ ಕೃತ್ಯ ಭಗವನ್ತಂ ಗನ್ತುಂ ಇಚ್ಛಾಮಿ' ಎನ್ನುವಂತೆ ಕವಿ ಮಾಡಿಸಿದ್ದಾನೆ. ಈ ದರ್ಶನ ಆತನ ಶ್ರೇಯೋಭಿಲಾಷೆ ವಿನಯಗಳಲ್ಲಿ ನೆಲಸಿದೆಯೇ ಹೊರತು ಸ್ವಾರ್ಥದಿಂದ ಉಂಟಾದುದಲ್ಲ– ಇದು ಅನಿರೀಕ್ಷಿತಲಾಭ ಎಂಬಂತೆ ಕವಿ ವರ್ಣಿಸಿರುವುದು ಗಮನಿಸಬೇಕಾದ ಸಂಗತಿ. ಬಲ ತೋಳು ಪುನಃ ಅದುರಿದರೂ ಮೊದಲನೆಯ ಅಂಕದಲ್ಲಿನಂತೆ 'ಭವಿತವ್ಯಾನಾಂ ದ್ವಾರಾಣಿ ಭವನ್ತಿ ಸರ್ವತ್ರ' ಎಂದು ಆತನು ವಿಶ್ವಾಸವನ್ನಾಗಲಿ ಅಭಿಮಾನವನ್ನಾಗಲಿ ನುಡಿಯಲಿಲ್ಲ. ಕುತಃ ಫಲಂ ಇಹ ಅಸ್ಯ? ಅಂದುಕೊಂಡು ಅದೇ ಹಿಂದಿನ ಉತ್ತರ ಕೊಟ್ಟುಕೊಳ್ಳಬಹುದಾಗಿದ್ದಾಗ ತಡೆದನು; ಸಂಕೋಚಪಟ್ಟನಾದ್ದರಿಂದಲೇ ಈಗ ಪರಮಸಂತೋಷ ಲಾಭ ತಾನಾಗಿ ಆಯಿತು; ದೈವಾನುಗ್ರಹದಿಂದ. ಕಿಂಪುರುಷಪರ್ವತವಾದ ಹೇಮಕೂಟವು ಇಂದ್ರನ ತಾಯಿ ತಂದೆಯರ ಆಶ್ರಮ. ಎಲ್ಲ ತಪಸ್ಸಿದ್ಧಿಗಳ ಸ್ಥಾನ. ಇತ್ತ ಶಕುನ್ತಲೆ ದುಷ್ಯನ್ತರ ತಪಸ್ಸುಗಳಿಗೂ ಸಿದ್ಧಿ ಇಲ್ಲಿ ಆಗುವುದು ಒಂದು ಮಹೋನ್ನತ ಸನ್ನಿವೇಶ. ರಾಜನ ಮನೋಪರಿಶುದ್ಧಿ ಎಷ್ಟುಮಟ್ಟಿಗೆ ಆಗಿದೆಯೆಂಬುದನ್ನೂ ಆಗಲೇ ಕವಿ ತಿಳಿಸಿದ್ದಾನೆ. ತನ್ನ ಸಾಹಸದಿಂದ ಇಂದ್ರನ ವೈರಿಗಳನ್ನು ಸೋಲಿಸಿ ಆತನ ವಜ್ರಾಯುಧಕ್ಕೆ ಕೆಲಸದ ಅಗತ್ಯವಿಲ್ಲದೆ ಅದರ ಕೊನೆಮೊನೆ ಕೆಡದಂತೆ ಆಭರಣವನ್ನಾಗಿ ಮಾತ್ರ ಮಾಡಿ, ಇಂದ್ರನಿಂದ ಪ್ರಶಸ್ತವಾದ ಬಹುಮಾನ ಪಡೆದ ಇಂದ್ರಸಖನೆಂದು ಇತರರೆಲ್ಲ ಹೇಳುತ್ತಿದ್ದರೂ ಈ ಇಂದ್ರಭೃತ್ಯ ತಾನೆಂದುಕೊಂಡ ಈತನಿಗೆ ಮರ್ಯಾದೆ ಹೆಚ್ಚಂತೆ. ಸ್ವರ್ಗದಲ್ಲಿ ದೊರೆತ ಸಂತೋಷ ಉತ್ಕರ್ಷಗಳಿಗಿಂತ ಈ ಸ್ಥಳ:

'ಸ್ವರ್ಗಾತ್ ಅಧಿಕತರ ನಿರ್ವೃತಿ ಸ್ಥಾನಂ. ಅಮೃತಹ್ರದಮಿವ ಅವಗಾಢೋಽಸ್ಮಿ' ಎಂದು ಈ ಶುಚಿಸ್ಥಾನಕ್ಕೆ ಒಲವು ಪಕ್ಷಪಾತ ತೋರಿಸಿದ್ದಾನೆ. ಆದ್ದರಿಂದ ಸರ್ವಥಾ ಈತನು ಭರತನ ಮಾತೆಗೆ ತಕ್ಕಂತಹ ಗಂಡನಾಗಿದ್ದಾನೆ, ಈಗ.

## ಪುನಸ್ಸಮಾಗಮ

ಶಕುನ್ತಲೆ ದುಷ್ಯನ್ತರನ್ನೂ ತಂದೆ ಮಕ್ಕಳನ್ನೂ ಕವಿ ಸೇರಿಸುವ ಸನ್ನಿವೇಶ ಗಂಭೀರವಾದ್ದು: ಮೊದಲು ನಾಯಕ ನಾಯಿಕೆಯರು ಅನುರಕ್ತರಾದ್ದು ಕಣ್ವಾಶ್ರಮದಲ್ಲಿ; ಈಗ ಪುನಸ್ಸಮಾಗಮವಾಗುವುದು ಮಾರೀಚಾಶ್ರಮದಲ್ಲಿ. ಅದು ಧರ್ಮಾರಣ್ಯ; ಇದು ತಪಸ್ಸಿದ್ಧಿ ಸ್ಥಾನ. ಅದು ಚೆಲುವು ಸೌಕುಮಾರ್ಯ ಪ್ರೀತಿಗಳ ಮಧುರ ವಿಲಾಸದ ಸ್ಥಾನ; ಇದು ಉನ್ನತ ತಪಸ್ಸುಗಳ ಬೀಡು. ಅದು ಭೂಮಿಯ ಮೇಲಿರುವದು; ಕುಲಪತಿಗಳ ವಿದ್ಯಾದಾನ, ಬ್ರಹ್ಮಚರ್ಯೆ ಕನ್ಯಾಚರ್ಯೆಗಳ ಸ್ಥಾನ; ಗಿರಿಸಾನು, ಸರೋವರ; ಮರಳಲ್ಲಾಡುವ ಹಂಸೆ, ಒದ್ದೆಬಟ್ಟೆ ಒಣಗಹಾಕಿರುವ ಮರಗಳು, ಲತೆ, ಚಿಗುರು, ಹೂ, ಚೆಲುವೆ ಕನ್ನೆಯರು, ಹೋಮಧೂಮ, ಚಿಗರಿ, 'ಹರಿಣ ಶೃಂಗದೆ ತನ್ನಯ ವಾಮನೇತ್ರಮಂ ತುರಿಸುತುಮಿರ್ಪ ಪೆಣ್ಮೃಗ'ಗಳು, ಆ ಕೋಗಿಲೆಗಳ ಸೌಂದರ್ಯ ಇನ್ನೂ ಲೌಕಿಕವಾದ್ದು; ಅಲ್ಲಿಗೆ ಬಾಧೆ ಬಾರದಂತೆ, ಯಜ್ಞಯಾಗರಕ್ಷೆಯಾಗುವಂತೆ ಆ ತಪೋಧನರ ಶಾಂತಿಗೆ ಹೊರಗಿಂದ ಭಂಗಬಾರದಂತೆ ರಾಜನು ಅದನ್ನು ಕಾಯಬೇಕಾಗಿದೆ; ಇಲ್ಲಿ, ಇಂದ್ರಗುರು ಲೋಕದ ಕಣ್ಣು ಮುಟ್ಟದ ಕಡೆ ಪೂರ್ವ ಪಶ್ಚಿಮ ಸಾಗರಾಂತವಾದ 'ಕನಕ ರಸ ನಿಸ್ಯಂದಿ'ಯಾದ ಸಂಜೆಯಂತೆ 'ಮೇಘಪರಿಘ ಸಾನುಮಾನ್' ಅಲೌಕಿಕ ಕಿಂಪುರುಷ ಪರ್ವತ; ಸಾರ್ವಭೌಮರ ಆಸೆಗೆ ನಿಲುಕದ ತಾಣ: ಅಲ್ಲಿ ಗಿಡ, ವನಶೋಭೆ; ಆಶ್ರಮದ ಎಲೆಮನೆಯ ಸಾರಣೆ ಕಾರಣೆ, ಭಯವರಿಯದೆ ಪ್ರೀತಿಯಿಂದ ಲಾಲಿತವಾದ ಹುಲ್ಲೆಯ ಸಂಚಾರ, ಕಾಡು, ಇಂಗುದಿ ಹಣ್ಣು, ಅವನ್ನು ಚಚ್ಚಿದ ಕಲ್ಲುಗಳು, ಗಿಳಿಗೂಡುಗಳು, ಗಿಡದ ಪಾತಿಗಳಿಗೆ ನೀರೆರೆಯುವ ಚೆಲುವ ಹೆಣ್ಣು ಮಕ್ಕಳ ಪ್ರಪಂಚ; ನೀರಲ್ಲಿ ಇಳಿದು ಕುಡಿಯುತ್ತ ಕೋಡು ಕುಟ್ಟುತ್ತಿರುವ ಕಾಡುಕೋಣಗಳು; ನೆಳಲನ್ನಾಶ್ರಯಿಸಿ ಮೆಲುಕು ಹಾಕುತ್ತ ನಿರ್ಭೀತವಾಗಿರುವ ಮೃಗಕುಲ, ಕೆಸರು ಕೊಳಗಳಲ್ಲಿ ಮುಸ್ತೆಯನ್ನು ಬಗಿದು ಕೀಳುತ್ತಿರುವ ವರಾಹತತಿ, ತಪಸ್ವಿಗಳು ನೀರಿಳಿದೆದ್ದು ಆಶ್ರಮಕ್ಕೆ ಬರುವ ದಾರಿಯಲ್ಲಿ ಉದ್ದಕ್ಕೆ ಅವರ ನಾರು ಬಟ್ಟೆಯ ಕೊನೆ ನೀರು ತೊಟ್ಟಿಟ್ಟ ಸಾಲು, ಸ್ವಚ್ಛಂದತೆ, ಅತಿಥಿ ಸತ್ಕಾರ, ಪ್ರೇಮಾಲಾಪ, ಪ್ರಕೃತಿಯ ಸುಮಧುರ ಪ್ರೇಮಬಾಂಧವ್ಯ; ಪ್ರಿಯವಾಗಿ ನುಡಿವವರೂ ಅಸೂಯೆಯಿಲ್ಲದವರೂ ಅನುಕೂಲರೂ ಆದ ಹೆಣ್ಣು ಮಕ್ಕಳ ಗೆಳೆತನ; ಅವರನ್ನು ಸಾಕಿದಂತೆ ಆಶ್ರಮದ ಜೀವಜನ್ತುಗಳನ್ನೆಲ್ಲ ಸಾಕಿ ಆತ್ಮೀಯವಾಗಿ ಮಾಡಿಕೊಂಡು ಬಂದ ಸಮರಸದಲ್ಲಿ ಬೆಳೆದ ಜೀವನ ಚಿತ್ರ ಅಲ್ಲಿ; ಇಲ್ಲಿಯೋ, ಅರೆಮೈ ಹುತ್ತದಲ್ಲಿ ಹೂತಿದೆ; ಎದೆಯಲ್ಲಿ ಹಾವಿನ ಪರೆ ಯಜ್ಞೋಪವೀತದಂತೆ ಬಿದ್ದಿದೆ; ಕಂಠವನ್ನು ಒಣಗಿದ ಬಳ್ಳಿಗಳು ಸುತ್ತಿಕೊಂಡು ಬಿಗಿದು ಹಿಡಿಸಿವೆ; ಹೆಗಲ ವರೆಗೂ ಇಳಿದ ಜಡೆಗಳಲ್ಲಿ ಹಕ್ಕಿಗಳು ಗೂಡುಕಟ್ಟಿವೆ; ನಡುವೆ ಸ್ಥಾಣುವಿನಂತೆ ಅಚಲನಾಗಿ ಸೂರ್ಯಬಿಂಬಕ್ಕೆದಿರಾಗಿ ಕಷ್ಟ ತಪಸ್ಸುಮಾಡುವ ಮುನಿಗಳು; ಅದಿತಿದೇವಿ ನಟ್ಟು ಬೆಳಸಿದ ಮಂದಾರ ವೃಕ್ಷಗಳ ನಡುವೆ ಮಾರೀಚರ ಆಶ್ರಮ; ಸರಸತೆ, ಮಧುರತೆ, ಅಲಂಕಾರ, ಸಲ್ಲಾಪ ಯಾವುದೂ ಇಲ್ಲ; ಎಲ್ಲರೂ ವ್ರತಿಗಳು; ಮನುಷ್ಯರು ಯಾವಯಾವ ಸುಖಭೋಗಕ್ಕಾಗಿ ಪ್ರಯತ್ನಿಸುತ್ತ ಧರ್ಮ ಕರ್ಮ ತಪಸ್ಸು-ಯಜ್ಞ ಮಾಡುವರೋ, ಯಾವ ಸ್ವರ್ಗಕ್ಕೆ ಬಂದು ಈ ಸುಖಗಳನ್ನನುಭವಿಸಲು ಬಯಸುವರೋ ಅಂಥವೆಲ್ಲ ಕೈಸೇರಿ ಎದುರಿಗಿದ್ದರೂ ಅವನ್ನೊಲ್ಲದೆ ಬೇರೆ ಏನನ್ನೊ ಸಾಧಿಸುವ ವಿರಕ್ತರು; ಬೇಕಾದ್ದನ್ನು ಕೊಡುವ ಕಲ್ಪವೃಕ್ಷ ಆವರಿಸಿರಲು ಗಾಳಿ ಕುಡಿದು ಜೀವಿಸುವವರು! 'ಕಾಂಚನಪದ್ಮರೇಣು'ವಿಂದ ಕಪಿಶವಾದ ನೀರು ಇರುವಲ್ಲಿ ಪುಣ್ಯಾಭಿಷೇಕ; ರತ್ನ ಶಿಲಾಪಟ್ಟ, ದೇವಸ್ತ್ರೀಸನ್ನಿಧಿಯಲ್ಲಿ ಸರಿಯಮ– ಇದು ಇಲ್ಲಿನ ಚಿತ್ರ. ಇಲ್ಲಿ ಚಿಗರಿ ಕೋಗಿಲೆಗಳಿಲ್ಲ; ಕೇಸರ, ಶಿರೀಷ, ನವಮಾಲಿಕಾದಿ ಕುಸುಮಗಳಿಲ್ಲ; ಸಹಕಾರವೃಕ್ಷ ಲತಾಕುಂಜ ಚೂತಾಂಕುರಗಳಿಲ್ಲ. ಸಿಂಹಗಳು ಮಕ್ಕಳಂತೆ ಓಡಿಯಾಡುತ್ತಿವೆ; ಕೋಗಿಲೆಗೆ ಪ್ರತಿಯಾಗಿ ನವಿಲು! ತಾಪಸಿಯೊಬ್ಬಳ ಹೆಸರು 'ಸುವ್ರತೆ'. ಆಶ್ರಮ ಸನ್ನಿಧಿಗೆ ಬಂದಾಗ್ಗೆ ವೃದ್ಧ ಶಾಕಲ್ಯನನ್ನು ಕುರಿತು ಮಾತಲಿ ಕೇಳಿದರೆ ಆತನು ಹೇಳುವುದೇನು? ಮಹರ್ಷಿ ಪತ್ನಿಯರೊಡನೆ ಇದ್ದು ದಾಕ್ಷಾಯಣಿ ಬೇಡಲು 'ಪತಿವ್ರತಾಪುಣ್ಯ'ವನ್ನು ಕುರಿತು ಮಾರೀಚರು ಉಪದೇಶ ಮಾಡುತ್ತಿದ್ದಾರೆ. ಇಂಥಾ ವಿಸದೃಶವಾದ ಹಿನ್ನೆಲೆ, ಆವರಣ ಇವೆ ಈ ಎರಡಕ್ಕೆ. ಅಲ್ಲಿನ ರಂಗು ರಮಣೀಯತೆ ಉಲ್ಲಾಸ ಉತ್ಸಾಹಗಳು, ಎಳಯೌವನ, ಹೊಸ ಅಚ್ಚರಿಗಣ್ಣು, ಚಿತ್ರಕರ್ಮ, ಕೀಟಲೆಯ ಮಾತು ಇಲ್ಲಿಲ್ಲ; ಇಲ್ಲಿನ ಉನ್ನತಿ, ಪೂಜ್ಯತೆ, ಲೋಕೋತ್ತರತೆ ಅಲ್ಲಿಲ್ಲ. ಅದು ಮೃದು ಸರಸತೆ ಸಲ್ಲಾಪದ ಸೀಮೆಯಾದರೆ ಇಲ್ಲಿ ವ್ರತನಿಷ್ಠೆ ತಪಸ್ಸಿನ ಉಗ್ರತೆ.

ಅದಕ್ಕೆ ತಕ್ಕಂತೆ ಇಲ್ಲಿ ಶಕುನ್ತಲೆಯ ಸಂದರ್ಶನವಾಗುತ್ತದೆ. ಅಲ್ಲಿ ಆಶ್ರಮವನ್ನು ತುಂಬಿದ್ದ ಚೆಲುವೂ ಪ್ರಾಧಾನ್ಯತೆಯೂ ಆಕೆಯವು. ಕಣ್ವರು ಸೋಮತೀರ್ಥಕ್ಕೆ ಹೊರಟ ಕಾರಣದಿಂದ ಹಿಡಿದು, ಆಕೆಯದೇ ಯಾಜಮಾನ್ಯ, ಸಖಿಯರಲ್ಲಿ ಗಣ್ಯತೆ. ಆಶ್ರಮಕ್ಕೆ ಜೀವಪ್ರಾಯಳು, ಲಲಾಮಳು; ಆಕೆಯ ಸುಖಸಾಧನೆ ಅನಿಷ್ಟನಿವಾರಣೆಗಾಗಿಯೇ ಹುಟ್ಟಿ ಬದುಕಿದ್ದಾರೆಯೊ ಎಂಬಂತಿರುವ ಸಖಿಯರಿಂದ ಕೂಡಿ ಪ್ರಣಯ ಕಥೆಯಲ್ಲಿ ಮುಖ್ಯಳಾಗುವಳು;

ಆಶ್ರಮ ವಿರೋಧವಿಕಾರ ಅಲ್ಲಿ ಹುಟ್ಟಿದ್ದುದು ಆಕೆಯಲ್ಲಿ. ಇಲ್ಲಿ ಆಕೆ ತಪಸ್ವಿನಿ. ಆಕೆಯ ಮಗನಾದ 'ಅಬಾಲಸತ್ವ'ನಾದ ಬಾಲ ಸರ್ವದಮನನ ಕಾರಣದಿಂದ ಇಲ್ಲಿ ತಪೋವನ ವಿರೋಧಿಯಾದ ಕಾರ್ಯ ನಡೆಯುತ್ತಿದೆ. ಆತನ ಕ್ಷತ್ರಿಯಸತ್ವ ಇಲ್ಲಿಗೆ ಹೊಂದದು, ಅವನು ಇಲ್ಲಿ ಬಹುಕಾಲ ನಿಲ್ಲಲಾರ. ಕ್ಷತ್ರಿಯ ಪ್ರಪಂಚಕ್ಕೆ ಹೋಗ ಬೇಕಾದವನು ಎಂಬ ಸೂಚನೆಯೇ ಬರುತ್ತದೆ. ಇಲ್ಲಿ ಶಕುನ್ತಲೆ ಯನ್ನು ಕಾಣುವ ಹಂತಗಳೂ ಆವರಣಕ್ಕೆ ತಕ್ಕಹಾಗಿವೆ: ಅಲ್ಲಿನ ಧೈರ್ಯ ಹುರುಪು ರಸೋದ್ವೇಗ ಇಲ್ಲಿಲ್ಲ; ಶಾಂತಿ, ಅಧೈರ್ಯ, ಹಿಡಿತ, ಗೌರವ ಮತ್ತು ಶುಚಿಬುದ್ಧಿಯೇ ಎಲ್ಲೆಲ್ಲಿಯೂ. ರಾಜನ ಸಮಯ ವನ್ನು ಕಾದು ಕೆಲಸಮಾಡಿಕೊಳ್ಳಬೇಕು ಲೋಕದ ಜನ. ಕಣ್ವಾ ಶ್ರಮದಲ್ಲಿಯೂ ಆತನಿಗೆ ಮಾನ್ಯತೆ; ಪ್ರಶಂಸೆ. ಇಂದ್ರಸಖನೆಂದು ಹಿರಿಮೆ. ಇಂತಹ ರಾಜನು ಮಾರೀಚರ ಆಶ್ರಮದಲ್ಲಿ ಅವರ ಅವ ಕಾಶಕ್ಕೆ ಕಾದು ಅಶೋಕದಡಿಯಲ್ಲಿ ನಮ್ರನಾಗಿ ಕುಳಿತಿದ್ದಾನೆ. ಆ ಸಮಯದಲ್ಲಿ ಸರ್ವದಮನನ್ನು ಮೊದಲು ಕಾಣುತ್ತಾನೆ. ತನ್ನ, ಶಕು ನ್ತಲೆಯ ಮಗನನ್ನು ಮೊದಲು (ಇದೇ ಫಲಭಾಗ) ಕಂಡು ಆತನ ಮೂಲಕ ಈಗ ಶಕುನ್ತಲೆಯ ದರ್ಶನವಾಗಬೇಕಾಗಿದೆ. ಆ ಮಗು ವನ್ನು ಕಂಡ ಕ್ಷಣದಿಂದ ರಾಜನಿಗೆ ಮಮತೆ, ಮೆಚ್ಚುಗೆ ಉಂಟಾ ದವು; ಅವನ ದುಷ್ಟತನವೇ ಆಕರ್ಷಕವಾಯಿತು; ಯಾರ ಮಗ ನೆಂದು ತಿಳಿಯುವ ಮುಂಚೆ ತಾಪಸಿಯರು ಆತನಲ್ಲಿ ಮೊರೆಯಿ ಟ್ಟರು. ಋಷಿಕುಮಾರನಲ್ಲ, ಪೌರವನೆಂದು ತಿಳಿಯಿತು. ಪೌರವನು ಅಲ್ಲಿಗೆ ಹೇಗೆ ಬಂದಾನು? ಅವನ ತಾಯಿ ಅಪ್ಸರೆ. ಧರ್ಮಪತ್ನಿಯನ್ನು ನಿರಾಕರಿಸಿದ ಅವನ ವಿಚಾರವೇಕೆ ಎಂಬ ಚುಚ್ಚು ನುಡಿಯೋ ತನ್ನನ್ನೇ ಮೂದಲಿಸುವಂತೆ ಇದೆ. ಹುಡುಗನ ರೂಪು ರಾಜನನ್ನೇ ಹೋಲುತ್ತದೆ. ಇವನ ಬಳಿಯಲ್ಲಿ ಸಮಾಧಾನವಾಗಿ ನಡೆದು ಕೊಳ್ಳುತ್ತಿದ್ದಾನೆ. ದುರ್ದಮನಾದ ಬಾಲಕ. ಇದು ಇನ್ನೂ ಹತ್ತಿರ ಸಂಬಂಧದ ಸೂಚನೆ. ಆತನ ಸ್ಪರ್ಶಸುಖ ಮಮತೆಯನ್ನು ಹೆಚ್ಚಿಸಿ ಇವನನ್ನು ಮಗನಾಗಿ ಪಡೆದ ತಂದೆ ಇನ್ನೆಷ್ಟು ಸುಕೃತಿಯೋ ಎಂಬ ಆಕಾಂಕ್ಷೆಯ ಹಂಬಲ. ಆಗತಾನೇ ತಾಯ ಮೊಲೆಯನ್ನು ಅರ್ಧ ಕುಡಿದಿದ್ದ ಸಿಂಹದ ಮರಿಯನ್ನು ಬಲಾತ್ಕಾರದಿಂದ ಎಳೆದು ತಂದು ಹಿಂಸಿಸುತ್ತ (ಆಶ್ರಮವಿರೋಧ ವ್ಯಾಪಾರ) 'ಏ, ಸಿಂಹ, ಆಕಳಿಸು ನೋಡೋಣ, ನಿನ್ನ ಹಲ್ಲುಗಳನ್ನು ಎಣಿಸುತ್ತೇನೆ' ಎನ್ನುವ, ತಾಯಿ ಸಿಂಹ ನಿನ್ನನ್ನು ಶಿಕ್ಷಿಸುತ್ತದೆಯೆಂದರೆ 'ಹೋ ನನಗೆ ಬಹಳ ಹೆದರಿಕೆ' ಎಂದು ಕೆಳತುಟಿ ಮುಂದೆ ಚಾಚಿ ಅಣಕಿಸುವುದನ್ನು ನೋಡಿ ಇನ್ನಷ್ಟು ಮಮತೆಯೇ ಉಂಟಾಗುತ್ತದೆ; ಅದಕ್ಕೆ ಬದಲು ಬಣ್ಣದ ನವಿಲನ್ನು ತಂದುಕೊಡುವಾಗ ಮಗು, ಈ ಶಕುಂತಲಾವಣ್ಯವನ್ನು ನೋಡು, ಎನ್ನುವಾಗ ಆ ಮಾತಿನಲ್ಲಿ ಶಕುನ್ತಲಾ ಹೆಸರು ಕೇಳಿ ಎಲ್ಲಿ ನಮ್ಮಮ್ಮ ಎಂದುದರಿಂದ ರಾಜನಿಗೆ ಆದ ಮೈಜುಮ್ಮು; ಆದರೆ ಒಡನೆಯೇ ಎಷ್ಟು ಮಂದಿಯ ಹೆಸರು ಶಕುನ್ತಲೆ ಎಂದಿರಬಾರದು ಎಂದು ಉತ್ತರ ಕ್ಷಣದ ಉತ್ಸಾಹಭಂಗ; (ಸುಟ್ಟ ಕೈ ಹಿಂಜರಿಯು ವುದೆಂಬಂತೆ); ಆದರೆ ನೆಲದಮೇಲೆ ಬಿದ್ದುಹೋಗಿದ್ದ ರಕ್ಷಾಯಂತ್ರ ವನ್ನು ಎತ್ತಿಕೊಟ್ಟು ಅದು ತನ್ನನ್ನು ಹಾವಾಗಿ ಕಚ್ಚದಿದ್ದ ನಿರ್ಣಾ ಯಕ ಪ್ರಮಾಣ ಒಂದು ಕಡೆ, 'ನೀನಾರು? ನನ್ನ ತಂದೆ ದುಷ್ಯಂತ' ಎಂದ ಮಗುವಿನ ವಿವಾದ ನುಡಿಯ ಸತ್ಯಸ್ಥಾಪಕತೆ ಇನ್ನೊಂದು ಕಡೆ – ಈ ಹೆಜ್ಜೆಗಳಲ್ಲಿ ಪುತ್ರಲಾಭವಾಗುತ್ತದೆ. ರಾಜ ನಿಗೆ. ಹೆಜ್ಜೆ ಹೆಜ್ಜೆಗೂ ಕುತೂಹಲ, ಉತ್ಕಂಠೆ ಬಲಿಯುತ್ತವೆ. ಆಮೇಲೆ ಶಕುನ್ತಲೆಯೇ ಬಂದಾಗ ಆ ಚಿತ್ರವೇನು!

ವಸನೇ ಪರಿಧೂಸರೇ ವಸಾನಾ
ನಿಯಮ ಕ್ಷಾಮಮುಖೀ ಧೃತ ಏಕವೇಣೀ

ಮೊದಲಂಕಗಳ ಕಿಸಲಯಕುಸುಮಕೋಮಲೆಯಾದ, ಲತಾ ಭಗಿನಿ ಯಾದ, ನವಮಾಲಿಕೆಯಂತಿದ್ದ, ತಾವರೆಯೆಲೆಯ ಬೀಸಣಿಗೆ ಯಿಂದ ಶೈತ್ಯೋಪಚಾರಗೊಳ್ಳುತ್ತಾ ಪ್ರಿಯನಿಗೆ ಶುಕೋದರದಂತೆ ಮೃದುವಾದ ನಲಿನೀಪತ್ರದಲ್ಲಿ ಪ್ರಣಯಸಂದೇಶ ಬರೆದು ಕಳಿಸಿದವ ಳೆಲ್ಲಿ? ಸಖಿಯರಿಂದ ಸಿಂಗರಗೊಂಡು ವನದೇವತೆಯರಿತ್ತ ದುಕೂಲ, ಲಾಕ್ಷಾರಸ, ಆಭರಣ ಮುಂತಾದುವನ್ನು ಧರಿಸಿ, ಅವಗುಂಠನವತಿ ಯಾಗಿ ರಾಜಸಭೆಯಲ್ಲಿ ಹಣ್ಣೆಲೆಗಳ ನಡುವೆ ಕಿಸಲಯದಂತೆ ಕಂಡ ಆ ಶಕುನ್ತಲೆಯೆಲ್ಲಿ! ರಾಜನ ಕಠಿನತೆಗೆ ಬಾಡಿ ಕೊರಗಿ ಬದುಕು ಬೇಸರವೆನಿಸಿ ಭೂತಾಯಿಗೆ ಪ್ರಾರ್ಥನೆ ಮಾಡಿಕೊಡು ಅಪ್ಸರಸ್ಸನ್ನಿ ಧಿಯ ಮಡಿಲಲ್ಲಿ ಆಕಾಶಕ್ಕೇರಿದಾಕೆಯೆಲ್ಲಿ? ವಿಷಶಲ್ಯದಂತೆ ರಾಜ ನನ್ನು ದಹಿಸುತ್ತಿದ್ದ ಶಕುನ್ತಲೆಯ ಆ ಕಲ್ಪನಾಚಿತ್ರವೆಲ್ಲಿ? ಏಕವೇಣಿ ಯಾಗಿ ವ್ರತನೇಮಗಳಿಂದ ಕಂದಿದ ಮುಖವುಳ್ಳವಳಾಗಿ, ಮಲಿ ನಾಂಬರವುಟ್ಟ ಈ ತಪಸ್ವಿನಿಯೆಲ್ಲಿ? ಆದರೂ ಸ್ಥೈರ್ಯ ಸಂಯಮ, ಪ್ರೇಮಗಳಲ್ಲಿ ಎಂದೂ ಒಂದೇರೀತಿ ಪರಿಶುದ್ಧಳು, ಕ್ಷಮಾವಂತಳು ಈಕೆ. ಎಂದೂ ವಿನಯವನ್ನು ಪರಿಪಾಲಿಸತಕ್ಕವಳೇ. ಇಂದೂ ಅದಕ್ಕೆ ಬಾಗಿದವಳೇ. ಅದೇ ಅಭಿಮಾನಶಾಲಿನಿ. ತನಗೆ ಮೋಸ ಮಾಡಿದ ಉಂಗುರವನ್ನು ನಂಬಳು; ಮುಟ್ಟಳು. ಗುರುಸನ್ನಿಧಿಗೆ ಹೋದರೆ ಸನ್ನಿಧಿಯ ಗೌರವಕ್ಕೆ ತಕ್ಕಂತೆ ನಡೆಯುವವಳೇ. ಐಶ್ವರ್ಯದಲ್ಲಿಂತೋ ಬೇರೆ ಎಲ್ಲ ಸಂದರ್ಭದಲ್ಲಿಯೂ ಅಂತೇ ಗುಣವತಿಯೇ. ಇಷ್ಟೆಲ್ಲ ಆದರೂ ಒಟ್ಟು ಅವಳ ಹೆಸರಿನ, ಬಾಳಿನ, ಭಾಗ್ಯದ ನಾಟಕದಲ್ಲಿ ಅವಳೇ ಆಡುವ ಮಾತೆಷ್ಟು? ಒತ್ತಾಗಿ ಅಚ್ಚು ಮಾಡಿದರೆ ನಾಲ್ಕು ಪುಟಗಳಷ್ಟಾದೀತೆ? ಅದರಲ್ಲಿ, ಸ್ವಗತದಲ್ಲಿ ಮುಳುಗಿ ಅಥವಾ ನುಂಗಿ ಹೋದವೆಷ್ಟು, ಪ್ರಕಾಶ ವಾದುದೆಷ್ಟು? ಆಶ್ಚರ್ಯ. ಏಕಾಂತ ಪ್ರಣಯದಲ್ಲಿ ಆಸೆ ಜಯಿಸು ತ್ತಿರುವಾಗ 'ಮದನ ಸಂತಪ್ತೆ'ಯಾದರೂ ನ ಖಲು ಆತ್ಮನಃ ಪ್ರಭ ವಾಮಿ; ಪೌರವ, ರಕ್ಷವಿನಯಂ, ಹಿರಿಯರಿಗೆ ಅವಿಧೇಯಳಾಗಿ ವರ್ತಿಸಲಾರೆ. ತಾಳಿಕೊ – ಎಂದವಳ ಗುಣದಲ್ಲಿ ಎಂತಹ ಸಂ ಯಮ ದೃಷ್ಟಿ ಇದೆ ಎಂಬುದು ಹಿಂದಿನಂತೆಯೇ ಈ ಏಳನೆಯ ಅಂಕದಲ್ಲಿಯೂ. ಮಾರೀಚರು ರಾಜನ ಪ್ರಶ್ನೆಗೆ ಉತ್ತರ ಕೊಟ್ಟು ಶಾಪದಿಂದ ನಿರಾಕರಣೆಯಾಯಿತೆಂದು ತಿಳಿದು ಎಷ್ಟು ಬೇಗ ಉದಾರವಾಗಿ ಅರ್ಥಮಾಡಿಕೊಂಡಳು? ತನ್ನ ಸ್ಥಿತಿ ಕೂಡ ಅಂದು ಹೇಗಿತ್ತು; ಏನೊಂದು ನಡೆಯಿತೊ ಶೂನ್ಯ ಹೃದಯಳಾದ ಆಕೆಗೆ ಪರಿವೆಯಿರಲಿಲ್ಲ. ಸಖಿಯರು ಹೇಳಿದ್ದು ಕೂಡ ಎಚ್ಚರ ತಪ್ಪಿದ್ದೆ; ಆರ್ಯಪುತ್ರನದೇನು ತಪ್ಪು ಎನ್ನುವ ಸೌಜನ್ಯ ಹಿರಿದು. ಆತನಿಗೆ ಕೂಡ ತಾನು ಅನ್ಯಾಯದಿಂದ ವರ್ತಿಸಲಿಲ್ಲ, ಮುಕ್ತ ನಾದೆ ಎಂದು ತಿಳಿದಾಗ ಮನಸ್ಸಿನ ಮೇಲಿದ್ದ ದೊಡ್ಡ ಭಾರವಿಳಿ ಯಿತು. ಒಂದು ಹೊಸ ತಿಳಿವಿನ ಬೆಳಕಿನಲ್ಲಿ ಶುಚಿವ್ರತೆಯಾದ ಆಕೆಯನ್ನು ದೇವಪಿತೃಗಳ ಸನ್ನಿಧಿಯಲ್ಲಿ ಅವರಿಂದ ಪಡೆದ ಸನ್ನಿ ವೇಶ ಭವ್ಯವಾದ್ದು.

ನಾಟಕದಲ್ಲಿನ ಎಲ್ಲ ವ್ಯಕ್ತಿ ಚಿತ್ರಗಳನ್ನಾಗಲಿ, ಎಲ್ಲ ರಮ ಣೀಯತೆಯನ್ನಾಗಲಿ, ಕವಿತೆಯ ಮಾಧುರ್ಯ, ಭಾವಾರ್ಥ, ಪುಷ್ಟಿ, ಔಚಿತ್ಯ, ಕಾರ್ಯ ಸಾಧನಾಶಕ್ತಿ, ರಸದರ್ಶನಗಳನ್ನಾಗಲಿ ಇಲ್ಲಿ ವಿವರಿಸಲು ಅವಕಾಶವಿಲ್ಲ. ನಮ್ಮ ದೇಶದ ಸಾಹಿತ್ಯದಲ್ಲಿ ಸಂಸ್ಕೃತ ಸಾಹಿತ್ಯ ಅತಿ ಹಿರಿಯದು. ಅದರ ಚರಿತ್ರೆಯಲ್ಲಿ ಕಾಳಿ ದಾಸನ ಕೃತಿಗಳ ಮೇಲ್ಮೆ ಹಿರಿಯದು. ಆತನ ಶಾಕುನ್ತಲ ನಾಟಕ ನಮ್ಮ ನಾಡಿಗೆ ಭೂಷಣವಾಗಿದೆ. ಯಾವುದನ್ನು ಒಂದು ಕಾಲದಲ್ಲಿ ಆರ್ಯ ವೃತ್ತಿ, ಆರ್ಯ ಧರ್ಮ, ಆರ್ಯ ವಿಚಕ್ಷಣೆ, ವ್ಯವಸ್ಥೆ ಎಂದು ನಮ್ಮ ಸಂಸ್ಕೃತಿ ಒಪ್ಪಿತೋ ಅದರ ಒಂದು ರಸ ಚಿತ್ರ ಈ ನಾಟಕದಲ್ಲಿ ವರ್ಣಿತವಾಗಿದೆ. ಆಶ್ರಮದಲ್ಲಿ, ಹೆಣ್ಣು ಹೆಣ್ಣುಗಳಲ್ಲಿ ಹೆಣ್ಣು ಗಂಡುಗಳ ಏಕಾಂತದಲ್ಲಿ, ಅತಿಥಿ ಸತ್ಕಾರಗಳಲ್ಲಿ, ವ್ಯವಹಾರ ನಯಗಳಲ್ಲಿ, ಸಭೆ ಉಪವನ ರಾಜಾಲಯಗಳಲ್ಲಿ, ಹಿರಿಕಿರಿಯ ರಲ್ಲಿ, ಒಡೆಯ ಭೃತ್ಯರಲ್ಲಿ, ಅಧಿಕಾರದಲ್ಲಿ, ಪಶು ಪಕ್ಷಿ ಪ್ರಾಣಿಗಳ ಸಂಬಂಧದ ನಡತೆಯಲ್ಲಿ, ಯಾವುದು ಹಸನಾದ ವೃತ್ತಿ ಯಾವು ದಲ್ಲ, ಯಾವುದು ವಶಿತ್ವ ಯಾವುದು ಚಪಲ, ಯಾವುದು ಕಾಮ ಯಾವುದು ಪ್ರೇಮ, ಯಾವುದು ಇವೆಲ್ಲಕ್ಕೂ ಮೀರಿದ ಜೀವನದ ತಪಸ್ಸು, ಸಿದ್ಧಿ ಎಂಬುದರ ರಂಜಕ ಚಿತ್ರಗಳು ನಾಟಕದ ತುಂಬ ಇವೆ. ಇಂಥ ಕೃತಿಗಳು ಒಂದು ನಾಡಿನ ಬೆಳಕು; ದಾರಿಯ ದೀವಿಗೆ; ಸರಸ ಜೀವನದ ಸ್ಫೂರ್ತಿಯಾಗಿ ಸಂಸ್ಕೃತಿ ಸಾಧನೆಯ ಸಂಕೇತವೂ ಪತಾಕೆಯೂ ಆಗಿರುತ್ತವೆ.

ವಿ.ಸೀ.

## ಪರಿಷತ್ತಿನ ಸುದ್ದಿ

### ಮೈಸೂರಿನಲ್ಲಿ ನಡೆದ ಗಮಕ ಪರೀಕ್ಷೆಯ ಫಲಿತಾಂಶ

ಪರಿಷತ್ತಿನ ಪರವಾಗಿ ಗಮಕ ಪರೀಕ್ಷೆ ಮೈಸೂರಿನಲ್ಲಿ ವನಿತಾ ಸದನದಲ್ಲಿ (ಫೆಬ್ರವರಿ ೨೮) ನಡೆಯಿತು. ಶ್ರೀ.ಗಳಾದ ವಿದ್ವಾನ್ ರಾಳ್ಲಪಲ್ಲಿ ಅನಂತಕೃಷ್ಣಶರ್ಮ ಅವರು, ಮೈಸೂರು ಆಕಾಶವಾಣಿಯ ಶ್ರೀಮತಿ ರಾಜಮ್ಮನವರು, ಗಮಕ ವಿದ್ವಾನ್ ಶ್ರೀ. ಕೆ. ಕೃಷ್ಣರಾಯರು ಪರೀಕ್ಷಕರಾಗಿ ಸಹಕರಿಸಿ ಉಪಕಾರ ಮಾಡಿದರು.

**ಮೊದಲನೆಯ ತರಗತಿ**

ಶ್ರೀಮತಿಗಳಾದ ೧. ಆರ್. ಕಪಿಲಾಬಾಯಿ, ೨. ಎಚ್. ಭಾಗೀರಥಮ್ಮ, ೩. ಜಿ. ಎಚ್. ಕಮಲ.

**ಎರಡನೆಯ ತರಗತಿ**

ಶ್ರೀಮತಿಗಳಾದ ೧. ಆರ್. ಸೋನಾಮುಖಿ, ೨. ಕೃಷ್ಣವೇಣಿ, ೩. ಕೆ. ಆರ್. ಜಯಮ್ಮ, ೪. ಎಚ್. ಚಾಯಮ್ಮ, ೫. ಜಿ. ಎಚ್. ಕೃಷ್ಣವೇಣಿ, ೬. ಬಿ. ಎನ್. ಪದ್ಮ.

### ಪರಿಷತ್ತಿನ ಸದಸ್ಯರ ಬೆಳವಣಿಗೆ

(ತಾ. ೧೧-೩-೪೩ರಿಂದ ೧೮-೩-೪೩ರ ವರೆಗೆ)

**ಸಹಾಯಕ ಸದಸ್ಯರು (೧೦೦ ರೂ.):** ಶ್ರೀ.ಗಳಾದ ೧. ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ., ಕನ್ನಡ ಪ್ರೊಫೆಸರು, ಮಹಾರಾಜ ಕಾಲೇಜ್, ಮೈಸೂರು (ಆಜೀವ ಸದಸ್ಯತ್ವದಿಂದ ಬದಲಾವಣೆ). ೨. ಸಿ. ಚಿಕ್ಕಣ್ಣ ಶೆಟ್ಟಿಯವರು, ಬಿ.ಎ., ಡಿಸ್ಟ್ರಿಕ್ಟ್ ಎಕ್ಸೈಜ್ ಆಫೀಸರು, ಬೆಂಗಳೂರು (ಸಾಮಾನ್ಯ ಸದಸ್ಯತ್ವದಿಂದ ಬದಲಾವಣೆ). ೩. ರಾಜಮಂತ್ರಪ್ರವೀಣ ಕೆ. ವಿ. ಅನಂತರಾಮನ್, ಬಿ.ಎ. ಅವರು, ಮೈಸೂರು ಸಂಸ್ಥಾನದ ಅರ್ಥ ಸಚಿವರು, ಬೆಂಗಳೂರು. ೪. ಆರ್. ಪಿ. ಮಲ್ಲಪ್ಪನವರು, ಬಿ.ಎ., ಎಲ್ ಎಲ್.ಬಿ. ಜಿಲ್ಲಾಧಿಕಾರಿಗಳು, ಚಿತ್ರದುರ್ಗ. ೫. ದಿವಾನ್ ಬಹದ್ದೂರ್ ಟಿ. ಭುಜಂಗರಾಯರು, ಎಂ.ಎ., ಬಿ.ಎಲ್., ನಿವೃತ್ತ ಡಿಸ್ಟ್ರಿಕ್ಟ್ ಜಡ್ಜರು, ಬಸವನಗುಡಿ, ಬೆಂಗಳೂರು. ೬. ಎನ್. ಮಾಧವರಾಯರು, ಬಿ.ಎ., ಮೈಸೂರು ಸರಕಾರದ ಜನರಲ್ ಸೆಕ್ರೆಟರಿಯವರು, ಶಂಕರಪುರ, ಬೆಂಗಳೂರು. ೭. ಬಿ.ಜಿ. ಅಪ್ಪಾದೊರೆ ಮೊದಲಿಯಾರರು, ಬಿ.ಎ., ಬಿ.ಎಸ್‌ಸಿ., ಡೈರೆಕ್ಟರ್ ಆಫ್ ಇಂಡಸ್ಟ್ರೀಸ್ ಅಂಡ್ ಕಾಮರ್ಸ್, ಬೆಂಗಳೂರು (ಸಾಮಾನ್ಯ ಸದಸ್ಯತ್ವದಿಂದ ಬದಲಾವಣೆ). ೮. ಬಿ. ಶಂಕರರಾಯರು, ಬಿ.ಎ., ಎಲ್ ಎಲ್.ಬಿ., ಅಡ್ವೊಕೇಟರು, ಬೆಂಗಳೂರು ದಂಡು.

**ಸಾಮಾನ್ಯ ಸದಸ್ಯರು (೩ ರೂ.):** ಶ್ರೀಗಳಾದ ೧. ಎಚ್. ಎಸ್. ಸತ್ಯನಾರಾಯಣರಾಯರು, ಬಿ.ಎ., ಲಕ್ಷ್ಮೀವಿಲಾಸ ಅಗ್ರಹಾರ, ಮೈಸೂರು. ೨. ಎಂ.ಎನ್. ಆಚಾರ್ಯರು, ಮೋಟಾರು ವಾಹನಗಳ ಇನ್ಸ್‌ಪೆಕ್ಟರು, ಮಡಕೇರಿ.

## ೧೯೪೩ನೆಯ ಜನವರಿ ತಿಂಗಳಿನಲ್ಲಿ ನಡೆದ ಸಾಹಿತ್ಯ ಪರೀಕ್ಷೆಗಳ ಫಲಿತಾಂಶ

### ಜಾಣ (ಣೆ) ಪರೀಕ್ಷೆ

ತೇರ್ಗಡೆಯಾದ ವಿದ್ಯಾರ್ಥಿಗಳ ರಿಜಿಸ್ಟರು ನಂಬರುಗಳನ್ನು ಈ ಕೆಳಗೆ ಕೊಟ್ಟಿದೆ:

**ಮೊದಲನೆಯ ತರಗತಿ:** ಯಾರೂ ಇಲ್ಲ.

**ಎರಡನೆಯ ತರಗತಿ**

ಮೈಸೂರು: ೧, ೩, ೪, ೬, ೭, ೮.
ಹುಬ್ಬಳ್ಳಿ: ೯, ೧೦, ೧೧, ೧೨.
ಧಾರವಾಡ: ೧೩, ೧೪, ೧೫, ೧೬, ೧೭, ೧೮, ೨೦, ೨೧, ೨೨, ೨೭, ೨೮, ೨೯, ೩೦, ೩೧, ೩೨, ೭೨.
ಬೆಳಗಾಂವಿ: ೩೫, ೬೫.
ಬಿಜಾಪುರ: ೩೬, ೬೭.
ಕಲಬುರ್ಗಿ: ೩೪, ೩೯, ೪೧.
ಯಾದಗಿರಿ: ೪೫, ೪೬.
ಕೊಪ್ಪಳ: ೪೭, ೪೮, ೫೦, ೫೧.
ರಾಯಿಚೂರು: ಯಾರೂ ಇಲ್ಲ.
ಹೈದರಾಬಾದ್: ೬೧, ೬೩.
ಬೆಂಗಳೂರು: ೬೮.

### ಕಾವ (ವೆ) ಪರೀಕ್ಷೆ

**ಮೊದಲನೆಯ ತರಗತಿ: ೫.**

**ಎರಡನೆಯ ತರಗತಿ**

ಮೈಸೂರು: ೧, ೨, ೩, ೪, ೬, ೭.
ಹುಬ್ಬಳ್ಳಿ: ೮, ೯, ೧೧, ೧೨, ೧೩, ೧೪, ೧೬, ೧೭, ೧೮, ೧೯, ೨೦, ೨೧, ೨೩, ೨೫.
ಧಾರವಾಡ: ೨೭, ೨೮, ೨೯, ೩೦, ೩೧, ೩೨, ೩೪, ೩೫, ೩೬, ೩೭, ೩೮, ೧೮೪.
ಬಿಜಾಪುರ: ೪೦, ೪೧, ೪೨, ೪೩, ೪೪, ೪೬, ೪೭, ೪೮, ೫೦, ೫೧, ೫೨, ೫೩, ೫೪, ೫೫, ೬೨, ೬೩, ೬೪, ೬೬, ೬೭, ೬೮, ೬೯, ೭೦, ೭೧, ೭೨, ೧೮೩.
ಬನಹಟ್ಟಿ: ೭೭, ೭೮, ೭೯, ೮೧, ೮೨.
ಶಿರಸಿ: ೮೩, ೮೭, ೮೯, ೯೧, ೯೨, ೯೩, ೯೪.
ಕಲಬುರ್ಗಿ: ೯೭, ೧೧೪, ೧೧೭, ೧೧೮, ೧೨೧, ೧೨೩, ೧೨೪, ೧೮೯, ೧೯೦.
ಯಾದಗಿರಿ: ೧೨೬, ೧೨೯, ೧೩೦, ೧೩೧, ೧೩೨.
ಕುಕನೂರು: ೧೩೩, ೧೩೪, ೧೩೫.
ಕೊಪ್ಪಳ: ೧೩೭, ೧೩೮, ೧೩೯, ೧೪೪, ೧೪೬, ೧೫೦, ೧೫೨, ೧೫೩, ೧೫೫, ೧೫೭, ೧೫೮, ೧೫೯, ೧೬೦, ೧೬೧, ೧೬೨, ೧೬೩, ೧೬೪, ೧೬೫, ೧೬೬.
ರಾಯಿಚೂರು: ೧೭೦, ೧೭೧.
ಹೈದರಾಬಾದ್: ೧೭೩, ೧೭೪, ೧೮೧.

ಅಂಕಗಳನ್ನು ತಿಳಿದುಕೊಳ್ಳಬಯಸುವವರು **ಎಂಟು ಆಣೆ** ಕಳಿಸಿ ತರಿಸಿಕೊಳ್ಳಬಹುದು.

**ಅಣುಗ ಪರೀಕ್ಷೆಯ ಫಲಿತಾಂಶವನ್ನು ಮುಂದಿನವಾರ** ಪ್ರಕಟಿಸಲಾಗುವುದು.

## ಕನ್ನಡ ಸುದ್ದಿ

ಕನ್ನಡ ಗ್ರಂಥಗಳಿಗೆ ದ್ರವ್ಯ ಸಹಾಯ:

ಮದ್ರಾಸಿನ ಸ್ಕೂಲ್ ಬುಕ್ ಅಂಡ್ ಲಿಟರೇಚರ್ ಸೊಸೈಟಿಯ ವಾರ್ಷಿಕ ಸಭೆ ಕಳೆದ ಫೆಬ್ರವರಿ ತಾ॥ ೨೨ನೆಯ ಸಾಯಂಕಾಲ ನಡೆಯಿತು; ಮತ್ತು ಇತರ ಭಾಷೆಗಳ ಪುಸ್ತಕಗಳೊಂದಿಗೆ, ಈ ಕೆಳಗಣ ೫ ಕನ್ನಡ ಪುಸ್ತಕಗಳಿಗೂ ರೂ. ೨೫೫ ಸಹಾಯ ದ್ರವ್ಯವಾಗಿ ಕೊಡಲ್ಪಟ್ಟಿತು:—

೧. ಸಂಸ್ಕೃತ ಕವಿಚರಿತೆ (ಶ್ರೀ. ಶ್ರೀನಿವಾಸಯ್ಯಂಗಾರ್) ಭಾಗ ೩, ರೂ. ೧೦೦; ೨. ಸಮಾಜ ವಿಕಾಸಕ್ರಮ (ಶ್ರೀ. ನೆಗಳೂರು ಶ್ರೀನಿವಾಸ) ರೂ. ೫೦; ೩. ಶೈಕ್ಷಣಿಕ ಮನಶ್ಶಾಸ್ತ್ರ (ಶ್ರೀ. ವಿ. ಕೆ. ಜಾವಲಿ) ರೂ. ೫೦; ೪. ಕರ್ಣಾಟಕ ದೂತ ವಾಕ್ಯ (ಶ್ರೀ. ಪಂಡಿತ ಎಚ್. ಶೇಷಯ್ಯಂಗಾರ್) ರೂ. ೩೦; ೫. ರೈತನ ಏಳಿಗೆ (ಶ್ರೀ. ಡಿ. ಕೃಷ್ಣಯ್ಯಂಗಾರ್) ರೂ. ೨೫.

೧೯೪೩. ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧೨
ಬಿಡಿ ಪತ್ರಿಕೆ: ೬ ಕಾಸು




ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೨೨
ಬೆಂಗಳೂರು: ಶುಕ್ರವಾರ, ಮಾರ್ಚಿ ೨೬, ೧೯೪೩

# ಕನ್ನಡ ಸಾಹಿತ್ಯ ಪರಿಷತ್
## (ಮೈಸೂರು ಪ್ರಾಂತಸಮಿತಿ)

# ವಸಂತ ಸಾಹಿತ್ಯೋತ್ಸವ—೧೯೪೩

ಮಹಾಶಯರಲ್ಲಿ ವಿಜ್ಞಾಪನೆಗಳು:

ಪರಿಷತ್ತು ಕಳೆದ ಒಂಬತ್ತು ವರ್ಷಗಳಿಂದಲೂ ವಸಂತ ಸಾಹಿತ್ಯೋತ್ಸವವನ್ನು ನಡಸಿಕೊಂಡು ಬರುತ್ತಿರುವುದು ತಮಗೆ ತಿಳಿದ ವಿಷಯವೇ ಆಗಿದೆ. ಈ ವರ್ಷ **ಏಪ್ರಿಲ್ ೧೭ ರಿಂದ ೨೦ರ** ಪೂರ್ತ ನಾಲ್ಕು ದಿನಗಳು ಈ ಉತ್ಸವವನ್ನು ನಡಸುವಂತೆ ಗೊತ್ತಾಗಿದೆ. ದಿನವೂ ಬೆಳಗ್ಗೆ ಸಾಯಂಕಾಲ—ಎರಡು ಹೊತ್ತೂ ಉತ್ಸವ ನಡೆಯುವಂತೆಯೂ, ಕಾರ್ಯಕ್ರಮದಲ್ಲಿ ಸಾಹಿತ್ಯ ಉಪನ್ಯಾಸ, ವಿಜ್ಞಾನ ಉಪನ್ಯಾಸ, ನಾಟಕ, ಸಂಗೀತ, ಕಾವ್ಯವಾಚನ, ಲಾವಣಿ ಹಾಡಿಕೆ ಮುಂತಾದುವು ಸೇರಿರುವಂತೆಯೂ ಏರ್ಪಾಡಾಗಿದೆ.

ಆರೋಗ್ಯಶಾಖೆಯ ಮತ್ತು ಸ್ಥಳೀಯ ಸಂಸ್ಥೆಗಳ ಮಂತ್ರಿಗಳಾದ **ಶ್ರೀಮಾನ್ ಎಚ್. ಬಿ. ಗುಂಡಪ್ಪ ಗೌಡ, ಬಿ.ಎ., ಬಿ.ಎಲ್.** ಅವರು ಪ್ರಾರಂಭೋತ್ಸವವನ್ನು ನೆರವೇರಿಸಲು ದಯಮಾಡಿ ಒಪ್ಪಿರುತ್ತಾರೆ.

ಇದೇ ಸಂದರ್ಭದಲ್ಲಿ **ಪುಸ್ತಕ ಭಂಡಾರ ವಿಚಾರ ಗೋಷ್ಠಿ**ಯನ್ನು ಕೂಡಿಸಲು ಏರ್ಪಾಟಾಗಿದೆ.

ಈ ಉತ್ಸವ ಸಮಾರಂಭಕ್ಕಾಗಿ ಕನ್ನಡ ನಾಡಿನ ಹಲವೆಡೆಗಳಿಂದ ಪ್ರಸಿದ್ಧ ವಿದ್ವಾಂಸರೂ ಕಲಾವಿದರೂ ದಯಮಾಡಿಸುವವರಿದ್ದಾರೆ.

ಈ ದೊಡ್ಡ ಕಾರ್ಯಕ್ರಮದ ನಿರ್ವಾಹಕ್ಕಾಗಿ ಕಡೆಯಪಕ್ಷ ೧,೦೦೦ ರೂ. ವೆಚ್ಚವಾಗುತ್ತದೆಂದು ಅಂದಾಜು ಮಾಡಿದೆ. ಪ್ರತಿವರ್ಷವೂ ಈ ಉತ್ಸವ ಸಾರ್ವಜನಿಕರ ಸಹಾಯ ಸಹಕಾರಗಳಿಂದಲೇ ನಡೆದು ಬರುತ್ತಿದೆ. ವರ್ಷವರ್ಷವೂ ಪರಿಷತ್ತಿಗೆ ದೊರೆಯುತ್ತ ಬಂದಿರುವ ಜನರ ಉದಾರ ಸಹಾಯವನ್ನು ಇಲ್ಲಿ ವಂದನೆ ಕೃತಜ್ಞತೆಗಳಿಂದಲೂ ಹೆಮ್ಮೆ ಸಂತೋಷಗಳಿಂದಲೂ ನೆನೆಯುವುದು ನಮ್ಮ ಕರ್ತವ್ಯ. ಈ ವರ್ಷವೂ ಅದೇ ಸಹಾಯ ಸಹಕಾರವೂ ಔದಾರ್ಯವೂ ದೊರೆಯುತ್ತದೆಂಬ ನಚ್ಚಿಕೆಯ ಮೇಲೆ ಉತ್ಸವದ ಯೋಜನೆಯನ್ನು ಕೈಕೊಂಡಿದೆ. ಪರಿಷತ್ತಿನ ಅಭಿಮಾನಿಗಳೂ ಕನ್ನಡದ ಪ್ರೇಮಿಗಳೂ ಆದ ತಮ್ಮಂತಹ ಉದಾರಿಗಳು ಕೈಯಲ್ಲಾದಮಟ್ಟಿಗೆ ಸಹಾಯಮಾಡಿ ಉತ್ಸವವನ್ನು ಯಶಸ್ವಿಯಾಗಿ ನಡಸಿಕೊಡುವ ಉಪಕಾರಮಾಡಬೇಕೆಂದು ಪ್ರಾರ್ಥಿಸುತ್ತೇವೆ.

| | | |
|---|---|---|
| ಮಾಸ್ತಿ ವೆಂಕಟೇಶ ಅಯ್ಯಂಗಾರ್ (ಕಾರ್ಯಸಮಿತಿ) | ಬಿ. ವೆಂಕೋಬರಾವ್ (ಕಾರ್ಯಸಮಿತಿ) | ಕೋ. ಸಂಪದ್ಗಿರಿರಾವ್ |
| ಸಿ. ಕೆ. ವೆಂಕಟರಾಮಯ್ಯ (ಪ್ರಾಂತಸಮಿತಿ) | ಕೆ. ಅಂಬ್ರೋಸ್ ಆನಂದ (ಪ್ರಾಂತಸಮಿತಿ) | ವಿ. ಸೀತಾರಾಮಯ್ಯ |
| ಅಧ್ಯಕ್ಷರು | ಕಾರ್ಯದರ್ಶಿಗಳು | ವ್ಯವಸ್ಥಾಪಕರು |

# ಕನ್ನಡ ನುಡಿ

**ಶುಕ್ರವಾರ, ಮಾರ್ಚಿ ೨೬, ೧೯೪೩**

## ರಾಜದಂಪತಿಗಳಿಗೆ ಶುಭಾಶಂಸನೆ

ಪರಿಷತ್ತಿನ ಮಹಾಪೋಷಕರಾದ ಶ್ರೀಮನ್ಮಹಾರಾಜರು ಶ್ರೀ ಜಯಚಾಮರಾಜ ಒಡೆಯರವರ ಸೋದರಿಯರಾದ ಶ್ರೀ ಸುಜಯಕ್ರಾಂತಮ್ಮಣ್ಣಿಯವರನ್ನು ಸಾನಂದ ಸಂಸ್ಥಾನದ ಯುವ ರಾಜ ಕುಮಾರರಾದ ನಾಮದಾರ್ ಶ್ರೀ ರುದ್ರದತ್ ಸಿಂಗ್ ಅವರಿಗೆ ಕೊಟ್ಟು ೨೫-೩-೧೯೪೩ ನೆಯ ಗುರುವಾರ ರಾಜಧಾನಿಯಲ್ಲಿ ಬೆಳೆದ ವಿವಾಹ ಮಹೋತ್ಸವ ಬಹಳ ವಿಜೃಂಭಣೆಯಿಂದ ನಡೆಯಿತು. ಇದು ನಮ್ಮ ನಾಡಿಗೇ ಒಸಗೆ. ಭಗವಂತನು ಶ್ರೀಮನ್ಮಹಾರಾಜರವರಿಗೂ ರಾಜದಂಪತಿಗಳಿಗೂ ರಾಜಮನೆತನಕ್ಕೂ ಸರ್ವ ಮಂಗಳವನ್ನೂ ದಯಪಾಲಿಸಲಿ ಎಂದು ಪ್ರಾರ್ಥಿಸುತ್ತೇವೆ.

" ಮನೆ ಬೆಳಗಿ, ಸಿರಿ ಬೆಳಗಿ, ಮಕ್ಕಳೈಸಿರಿ ಬೆಳಗಿ
ಭರತವರ್ಷದ ಮುಡಿಯ ಸಾಲಿನಲಿ ಮೇಲ್‌ಬೆಳಗಿ
ಸವಿಯುತಿರಿ ನಾಡೆಲ್ಲ ಹರಸುವ ಸುಖಂಗಳಂ.
ಮಂಗಳಂ : ಕನ್ನಡದ ದೊರೆತನಕೆ ಮಂಗಳಂ."

## ಕರ್ನಾಟಕ ಫಿಲ್ಮ್ಸ್ ಲಿಮಿಟೆಡ್

ವಿನೋದ ರತ್ನಾಕರ ನಾಟಕರತ್ನ ಶ್ರೀ ಗುಬ್ಬಿ ವೀರಣ್ಣನವರ ನೇತೃತ್ವದಲ್ಲಿ ಕರ್ನಾಟಕ ಫಿಲ್ಮ್ಸ್ ಲಿಮಿಟೆಡ್, ಬೆಂಗಳೂರು, ಎಂಬ ಕನ್ನಡ ಚಲಚ್ಚಿತ್ರ ಸಂಸ್ಥೆಯೊಂದು ಈಚೆಗೆ ಸ್ಥಾಪಿತವಾಗಿದೆ. ಕನ್ನಡ ಚಿತ್ರಗಳ ಏಳಿಗೆಯೇ ಸಂಸ್ಥೆಯ ಮುಖ್ಯವಾದ ಗುರಿ. ಕನ್ನಡನಾಡಿನ ಹಲವರು ಧನಿಕರೂ ಕಲಾವಿದರೂ ಈ ಸಂಸ್ಥೆಗೆ ಸಹಾಯ ಸಹಕಾರಗಳನ್ನು ನೀಡಿದ್ದಾರೆ. ಮೈಸೂರು ಸರಕಾರದವರು ಸಂಸ್ಥೆಯ ಉಪಯೋಗಕ್ಕಾಗಿ ೧೦೦ ಎಕರೆ ಭೂಮಿಯನ್ನು ಉಚಿತವಾಗಿ ಕೊಟ್ಟಿರುವರಲ್ಲದೆ ಇತರ ಬಗೆಯಲ್ಲೂ ಸಹಕರಿಸುವುದಾಗಿ ಆಶ್ವಾಸನ ಕೊಟ್ಟಿದ್ದಾರೆಂದು ತಿಳಿಯ ಬಂದಿದೆ.

ಈ ಸಂಸ್ಥೆಯ ಕಾರ್ಯ ಯಶಸ್ವಿಯಾಗಿ ನಡೆದು ಕನ್ನಡ ಚಲಚ್ಚಿತ್ರಗಳು ಪ್ರಗತಿ ಸಾಧಿಸಲೆಂದು ಹಾರೈಸುತ್ತೇವೆ,

## ಮೈಸೂರು ನಾಟಕ ಸಂಘ

### ಸ್ಪರ್ಧೆಯ ಯೋಜನೆ

ಮೈಸೂರು ನಾಟಕ ಸಂಘದ ಮೂರನೆಯ ವಾರ್ಷಿಕೋತ್ಸವ ಕಳೆದ ಶುಕ್ರವಾರ ಮೈಸೂರಿನಲ್ಲಿ ದಳವಾಯಿ ಹೈಸ್ಕೂಲಿನಲ್ಲಿ ನಡೆಯಿತು. ಶ್ರೀಮನ್ಮಹಾರಾಜರವರ ದರ್ಬಾರು ಭಕ್ಷಿಯವರಾದ ಶ್ರೀ. ಎಚ್. ಎಲ್. ದೇವರಾಜೇ ಅರಸಿನವರು ಅಧ್ಯಕ್ಷರಾಗಿದ್ದರು. ಕಾರ್ಯದರ್ಶಿಗಳಾದ ಆಸ್ಥಾನ ವಿದ್ವಾನ್ ನಂಜನಗೂಡು ಶ್ರೀಕಂಠಶಾಸ್ತ್ರಿಗಳಿಂದ ವರದಿಯ ಓದು ಆದಮೇಲೆ ಪ್ರೊ|| ಸಿ. ಆರ್. ನರಸಿಂಹಶಾಸ್ತ್ರಿಗಳಿಂದ 'ಸಂಸ್ಕೃತ ನಾಟಕಗಳ ಸ್ಥಾನಮಾನಗಳು' ಎಂಬ ವಿಷಯದ ಮೇಲೆ ಭಾಷಣವೂ, ಶ್ರೀ ವೈ. ಎನ್. ಶ್ರೀನಿವಾಸಮೂರ್ತಿಗಳಿಂದ ಸಂಗೀತವೂ ನಡೆದುವು.

ಕರ್ನಾಟಕದ ಎಲ್ಲಾ ನಾಟಕ ಸಂಘಗಳಿಗೂ ಅನ್ವಯಿಸುವಂತೆ ಒಂದು ಸ್ಪರ್ಧೆಯನ್ನು ಮೇತಿಂಗಳ ೨ನೆಯ ವಾರದಲ್ಲಿ ನಡಸಬೇಕೆಂದು ತೀರ್ಮಾನವಾಯಿತು. ಸ್ಪರ್ಧೆಯ ಸಮಿತಿಯಲ್ಲಿ ಶ್ರೀಗಳಾದ ಎಚ್. ಎಲ್. ದೇವರಾಜೇ ಅರಸಿನವರು, ಡಾ|| ಎಂ. ಎಚ್. ಕೃಷ್ಣ ಅವರು, ಪ್ರೊ|| ಸಿ. ಆರ್. ನರಸಿಂಹಶಾಸ್ತ್ರಿಗಳು, ಶ್ರೀ. ದೇವೋತ್ತಮ ಜೋಯಿಸರು, ಶ್ರೀ. ನಂಜನಗೂಡು ಶ್ರೀಕಂಠಶಾಸ್ತ್ರಿಗಳು ಮುಂತಾದ ಮಹನೀಯರು ಇದ್ದಾರೆ.

## ಕಂಬನಿ

ಪರಿಷತ್ತಿನ ಸದಸ್ಯರೂ ಸಮಾಜ ಸೇವೆಗೆ, ಮುಖ್ಯವಾಗಿ ಹರಿಜನರ ಉದ್ಧಾರ ಕಾರ್ಯಕ್ಕೆ, ಬಾಳನ್ನು ಮುಡಿಪಾಗಿರಿಸಿ ದುಡಿದು ನಾಡಿಗೆ ಉಪಕಾರ ಮಾಡಿದವರೂ ಆದ ಶ್ರೀ. ಆರ್. ಗೋಪಾಲಸ್ವಾಮಿ ಅಯ್ಯರ್ ಅವರು ಕಳೆದ ವಾರದ ಕೊನೆಯಲ್ಲಿ ದೈವಾಧೀನರಾದರೆಂದು ತಿಳಿಸಲು ವಿಷಾದವಾಗುತ್ತದೆ. ಶ್ರೀಯುತರು ಅನೇಕ ಸಂಸ್ಥೆಗಳಲ್ಲಿ ಸೇರಿ ನಾಡ ಸೇವೆ ಮಾಡಿದ್ದಾರೆ. ಹರಿಜನರ ಏಳಿಗೆಗಾಗಿ ಅವರು ತೋರಿಸಿದ ಆಸಕ್ತಿಯಂತೂ ಆದರ್ಶವಾದುದು. ಅವರದು ಸರಳ ಜೀವನ; ಸೇವೆಯೇ ಉಸಿರಾಗಿದ್ದ ಜೀವನ. ಅವರ ನಿಧನದಿಂದ ಸಾರ್ವಜನಿಕ ಸೇವಾರಂಗಕ್ಕೆ ಅಪಾರವಾದ ನಷ್ಟವಾಗಿದೆ.

ಭಗವಂತನು ಮೃತರ ಆತ್ಮಕ್ಕೆ ಸದ್ಗತಿ ನೀಡಲಿ.

### ಹೊಯ್ಸಳ ಸಾಮ್ರಾಜ್ಯ ಸ್ಮಾರಕೋತ್ಸವ

(ಬರೆದವರು: ಶ್ರೀ. ಬೇಲೂರ ಕೇಶವದಾಸರು)

ಹೊಯ್ಸಳ ಸಾಮ್ರಾಜ್ಯ ಸ್ಥಾಪನೆಯಾದ ಒಂದು ಸಾವಿರ ವರುಷಗಳು ಕಳೆದಿರುವ ಈಗಲಾದರೂ ಆ ಮಹಾಸಾಮ್ರಾಜ್ಯೋತ್ಸವದ ಸ್ಮಾರಕವನ್ನು ನೆರವೇರಿಸಲು ಇದು ಸುಸಮಯವಾಗಿದೆ. ಹೊಯ್ಸಳ ಸಾಮ್ರಾಜ್ಯವು ಮಹೋನ್ನತಿಯಿಂದ ಬಾಳಿ ೩೫೦ ವರ್ಷಗಳ ನಂತರ ಅಸ್ತಮಿಸಿದರೂ, ಅದೇ ಸಾಮ್ರಾಜ್ಯವು ಮತ್ತೆ ವಿಜಯನಗರದಲ್ಲುದಯಿಸಿ ೨೦೦ ವರ್ಷಗಳಷ್ಟು ಕಾಲ ಪ್ರಭಾವಶಾಲಿಯಾಗಿ ಬಾಳಿದೆ. ಪ್ರತ್ಯೇಕ ಹೆಸರುಗಳಿಂದ ಕೃಷ್ಣಾನದಿಯಿಂದ ರಾಮೇಶ್ವರದ ವರೆಗೆ ಬಾಳಿ ಬದುಕಿದ ೫೫೦ ವರ್ಷಗಳ ಸಂಸ್ಕೃತಿಯ ಫಲವನ್ನು ನಿಖಿಲ ಕರ್ಣಾಟಕಸ್ಥರು ಮಾತ್ರವಲ್ಲದೆ ತಮಿಳು ಮಲೆಯಾಳ ತುಳು ನಾಡಿನ ಪ್ರಜೆಗಳೂ ಅನುಭವಿಸುತ್ತಿರುವರೆಂಬುದಕ್ಕೆ ಬಲವತ್ತರ ಇತಿಹಾಸವೇ ಪ್ರಮಾಣವಾಗಿರುತ್ತದೆ. ಅಷ್ಟೇ ಅಲ್ಲ, ಅದೇ ಹೊಯ್ಸಳ ಗೋತ್ರೋದ್ಭವರಾದ ಮೈಸೂರಿನ ಒಡೆಯರು ೧೬೧೦ರಿಂದ ಮಹಾರಾಜ ಪದವಿಗೇರಿ, ಹೊಯ್ಸಳರೂ ವಿಜಯನಗರದ ಅರಸರೂ ಅಲಂಕರಿಸಿದ್ದ ರತ್ನ ಸಿಂಹಾಸನವನ್ನು ೧೬೫೯ರಲ್ಲಿ ಸಂಪಾದಿಸಿ, ಕನ್ನಡ ಸಂಸ್ಕೃತಿಯ ರಕ್ಷಕರಾಗಿ ಕನ್ನಡ ಕುಲಕ್ಕೇ ಅಲಂಕಾರಪ್ರಾಯರಾಗಿರುತ್ತಾರೆ. ಹೊಯ್ಸಳರ ವಿಷ್ಣುವರ್ಧನ ಚಕ್ರವರ್ತಿಯಿಂದ ನಿರ್ಮಿತವಾದ ಬೇಲೂರು ಹಳೇಬೀಡು ದೇವಾಲಯಗಳ ಜೀರ್ಣೋದ್ಧಾರ ಮಾಡಿ ದಿವಂಗತ ನಾಲ್ವಡಿ ಕೃಷ್ಣರಾಜ ಪ್ರಭುಗಳು ಕೀರ್ತಿಕಾಯರಾಗಿರುತ್ತಾರೆ.

ವಿಷ್ಣುವರ್ಧನ ಮಹಾರಾಜರ ಮತ್ತು ದಿವಂಗತ ನಾಲ್ವಡಿ ಕೃಷ್ಣರಾಜ ಪ್ರಭುಗಳವರ ದಿವ್ಯ ಪ್ರತಿಮೆಗಳನ್ನು ಬೇಲೂರು ದೇವಾಲಯದ ಒಳಪ್ರಾಕಾರದ ಕಲ್ಯಾಣಿಯ ಬಳಿಯಲ್ಲಿ ಮಂಟಪದಲ್ಲಿ ಪ್ರತಿಷ್ಠಿಸಬೇಕೆಂದು ಜೀರ್ಣೋದ್ಧಾರ ಸಮಿತಿಯವರು ತೀರ್ಮಾನಿಸಿರುತ್ತಾರೆ. ಈ ಮಹಾ ಪ್ರತಿಷ್ಠಾಪನ ಕಾರ್ಯಕ್ಕೆ ನಮ್ಮನ್ನಾಳುವ ಶ್ರೀಮನ್ಮಹಾರಾಜರವರೇ ಬರುವ ಮೇ ತಿಂಗಳಲ್ಲಿ ದಯಮಾಡಿಸುವರೆಂಬ ಸದ್ವಾರ್ತೆಯು ಜನತೆಯಲ್ಲಿ ಹರಡಿ ಪರಮಾನಂದವನ್ನುಂಟುಮಾಡಿದೆ. ಮಹಾಪ್ರಭುಗಳು ದಯಮಾಡುವ ಸಮಯದಲ್ಲೇ ಅವರ ಸಮ್ಮುಖದಲ್ಲಿ ಹೊಯ್ಸಳ ಸಾಮ್ರಾಜ್ಯ ಸ್ಮಾರಕ ಮಹೋತ್ಸವವನ್ನಾಚರಿಸುವುದು ಬಹಳ ಸೂಕ್ತವಾಗಿ ಕಂಡು ಬರುತ್ತಿದೆ. ಇಂಥ ಸಮಯ ಸನ್ನಿವೇಶಗಳು ಮತ್ತೆ ದೊರಕುವುದು ಸಾಧ್ಯವಿಲ್ಲ.

ಆದ್ದರಿಂದ ನಿಖಿಲ ಕರ್ಣಾಟಕಸ್ಥರೂ ಮಹೋತ್ಸವದಲ್ಲಿ ಭಾಗಿಗಳಾಗಿ ೧೯೩೬ರಲ್ಲಿ ನಡೆದ ವಿಜಯನಗರ ಸಾಮ್ರಾಜ್ಯ ಸ್ಮಾರಕೋತ್ಸವವನ್ನು ಯಶಸ್ಕರವಾಗಿ ನಡಸಿದಂತೆ ಇದನ್ನೂ ನಡಸಿ, ಪುಣ್ಯಕೀರ್ತಿಗಳಿಗೆ ಭಾಜನರಾದಾರೆಂದು ನಿರೀಕ್ಷಿಸಲಾಗುತ್ತಿದೆ.

ಕನ್ನಡನಾಡಿನ ಸಾಹಿತಿಗಳು, ಇತಿಹಾಸವೇತ್ತರು, ಕಲಾವಿದರು, ಗಾಯಕರು ಮೊದಲಾದವರೆಲ್ಲ ಮಹೋತ್ಸವದಲ್ಲಿ ಭಾಗವಹಿಸಬೇಕೆಂದು ಸವಿನಯ ಪ್ರಾರ್ಥನೆ. ಉತ್ಸವಕ್ಕೆ ಗೊತ್ತಾದ ಸ್ವರೂಪ ದೊರೆತೊಡನೆ ಕಾಲಕಾಲದಲ್ಲಿ ವರ್ತಮಾನ ಪತ್ರಗಳಲ್ಲಿ ಹೆಚ್ಚಿನ ಸಂಗತಿಗಳನ್ನು ಪ್ರಕಟಿಸಲಾಗುತ್ತದೆ.

### ಸಾಹಿತ್ಯ ಪರೀಕ್ಷೆಗಳು

(ಶ್ರೀ. ರಾ. ಗು. ಜೋಶಿಯವರು, ರಾಯಿಚೂರು)

ಕನ್ನಡ ಸಾಹಿತ್ಯ ಪರಿಷತ್ತು ಪ್ರಾರಂಭಿಸಿದ ಸಾಹಿತ್ಯ ಪರೀಕ್ಷೆಗಳಿಂದ ಜನತೆಯಲ್ಲಿ ಕನ್ನಡ ಓದುವ ರುಚಿ ಮತ್ತು ಕನ್ನಡದ ಕಡೆಗೆ ಒಲವು ಬೆಳೆಯುತ್ತಲಿದೆ. ಪರೀಕ್ಷೆಗೆ ಕೂಡುವವರ ಸಂಖ್ಯೆ ದಿನೇ ದಿನೇ ಹೆಚ್ಚಾಗುತ್ತಿರುವುದೇ ಇದಕ್ಕೆ ಪ್ರಮಾಣ. ಈ ಪರೀಕ್ಷೆಗಳನ್ನು ಪ್ರಾರಂಭಮಾಡಿ ಜನತೆಯ ಒಲವನ್ನು ಕನ್ನಡದ ಕಡೆಗೆ ತಿರುಗಿಸುವ ಹಾದಿಯೊಂದನ್ನು ಹಾಕಿಕೊಟ್ಟದ್ದಕ್ಕಾಗಿ ಪರಿಷತ್ತು ಅಭಿನಂದನೀಯ. ಈಗ ಪರಿಷತ್ತು ಏರ್ಪಡಿಸಿದ ಪರೀಕ್ಷೆಗಳು ಮೂರು ತರಗತಿಯಲ್ಲಿ. ಒಂದನೆಯದು 'ಅಣುಗ', ಎರಡನೆಯದು 'ಕಾವ', ಮೂರನೆಯದು 'ಜಾಣ'. ಈ ಪರೀಕ್ಷೆಯ ತರಗತಿಗಳಲ್ಲಿ ಸ್ವಲ್ಪ ಸುಧಾರಣೆಯಾಗುವುದು ಅವಶ್ಯವೆನಿಸುತ್ತಿದೆ.

ಓದುಗರಿಗೆ ಒಂದೊಂದು ತರಗತಿ ಒಂದೊಂದು ಮೆಟ್ಟಲು. ಒಂದು ಮೆಟ್ಟಲಿನಿಂದ ಮತ್ತೊಂದು ಮೆಟ್ಟಲಿಗೆ ಏರಲು ಮೆಟ್ಟಲುಗಳು ಅಳತೆಯೊಳಗಿರಬೇಕು. ಮೆಟ್ಟಲುಗಳು ಒಂದಕ್ಕಿಂತ ಒಂದು ಎತ್ತರವಾಗಿದ್ದರೆ ಏರಲು ಅನುಕೂಲವಾಗುವುದಿಲ್ಲ. ನನ್ನ ವಿಚಾರಕ್ಕೆ ಹೊಳೆದಂತೆ ಈಗಿನ ಸಾಹಿತ್ಯ ಪರೀಕ್ಷೆಯ ತರಗತಿಗಳು ಒಂದಕ್ಕಿಂತ ಒಂದು ಎತ್ತರವಾಗಿರುವ ಮೆಟ್ಟಲುಗಳಂತೆ ಇವೆ. ಅಣುಗ ತರಗತಿಯಲ್ಲಿ ತೇರ್ಗಡೆಯಾದವರು ಮುಂದೆ ನಡೆಯುವ ಕಾವ ಪರೀಕ್ಷೆಗೆ ಕೂಡುವದಂತೂ ಸಾಧ್ಯವೇ ಇಲ್ಲ. ಅಣುಗಕ್ಕಾಗಿ ಕೇವಲ ನಾಲ್ಕನೆಯ ತರಗತಿಯ ಕ್ರಮಿಕ ಪುಸ್ತಕವನ್ನು ಓದುವದಿದೆ. ಮುಂದೆ ಆರು ತಿಂಗಳಲ್ಲಿಯೇ ಕಾವ್ಯ, ನಾಟಕ ಮುಂತಾದ ಗಹನವಾದುವುಗಳನ್ನು ಓದಿ ತಿಳಿದುಕೊಂಡು ಬರೆಯುವಷ್ಟು ಶಕ್ತಿ ಬರಬಲ್ಲುದೆ ಹೇಗೆಂಬುದು ವಿಚಾರ ಮಾಡತಕ್ಕದ್ದಾಗಿದೆ. 'ಅಣುಗ' ಆದ ಕೂಡಲೆ 'ಕಾವ'ಕ್ಕೆ ಕೂಡಲು ಯತ್ನಿಸುವದೆಂದರೆ ತಪ್ಪುಹೆಜ್ಜೆ ಇಡುವ ಮಗುವಿಗೆ ತಿರುಪತಿ ಬೆಟ್ಟ ಏರಲು ಹೇಳಿದಂತಾಗುವದಿಲ್ಲವೆ! ಆದುದರಿಂದ 'ಅಣುಗ ಮತ್ತು 'ಕಾವ' ತರಗತಿಗಳ ನಡುವೆ ಇನ್ನು ಎರಡು ತರಗತಿಗಳಾದರೂ ಅವಶ್ಯಕವಾಗಿ ಬೇಕೆಂದಿನಿಸುತ್ತಿದೆ. ಇಲ್ಲವಾದರೆ ಅನೇಕರು ಅಣುಗ ಪರೀಕ್ಷೆ ಮಾತ್ರ ಕೊಟ್ಟು ಮುಂದಿನ ಅಭ್ಯಾಸ ನೋಡಿ ಅಸಾಧ್ಯವೆಂದು ಓದುವದನ್ನೇ ಬಿಡುವ ಪ್ರಸಂಗವಿದೆ. ಒಂದು ತರಗತಿಯಿಂದ ಮತ್ತೊಂದು ತರಗತಿಗೆ ಏರಲು ಮಧ್ಯೆ ಸರಿಯಾದ ಜೋಡಣೆ (Link) ಬೇಕೇಬೇಕು. ಅಣುಗ ಮತ್ತು ಕಾವದ ಮಧ್ಯೆ ಇರಬೇಕಾದ ಎರಡು ತರಗತಿಗಳನ್ನು ಸಾಧಾರಣವಾಗಿ ಈ ಮಟ್ಟದವುಗಳಾಗಿ ಏರ್ಪಡಿಸಬಹುದು.

ಅಣುಗ ಪರೀಕ್ಷೆ ಆದಕೂಡಲೆ ಇರಬೇಕಾದ ಅಭ್ಯಾಸಕ್ರಮದಲ್ಲಿ ಸಾಲಿಯವರ ಬಾಲಕಾಂಡ ರಾಮಾಯಣದಮಟ್ಟಿನ ಹೊಸಗನ್ನಡದ ಕಾವ್ಯದ ಭಾಗ ಸ್ವಲ್ಪ ಅದ್ಭುತ ರಾಮಾಯಣ ಅಥವಾ ಅದರಮಟ್ಟಿನ ಹಳಗನ್ನಡದ ಭಾಗ ಸ್ವಲ್ಪ, ಒಂದು ಅಥವಾ ಎರಡು ನಾಟಕ, ಐದಾರು ಕತೆಗಳು, ದಾಸ ಮತ್ತು ವಚನ ಸಾಹಿತ್ಯದ ಸ್ವಲ್ಪ ಭಾಗ, ಕನ್ನಡ ನಾಡಿನ ಭೂಗೋಲ ಜ್ಞಾನ, ಕರ್ನಾಟಕ ವೀರರತ್ನಗಳಲ್ಲಿಯ ಅಥವಾ ಅದೇ ಬಗೆಯ ಕನ್ನಡ ವೀರರ ಚರಿತೆ ಮತ್ತು ವ್ಯಾಕರಣದಲ್ಲಿ ಕನ್ನಡ ನುಡಿಗನ್ನಡಿ (ಮ.ಪ್ರ. ಪೂಜಾರಕೃತ) ಯಲ್ಲಿಯ ಕೆಲವು ಭಾಗ ಹಾಗೂ ಜನಪದ ಸಾಹಿತ್ಯದ ಬಗ್ಗೆ ಸ್ವಲ್ಪ ಮಾಹಿತಿ, ಇದಾದನಂತರ ಮತ್ತೊಂದು ತರಗತಿ ಇದಕ್ಕೂ ಸ್ವಲ್ಪ ಹೆಚ್ಚು ಮಟ್ಟದ್ದಿದ್ದು 'ಕಾವ'ದಕ್ಕಿಂತ ಸ್ವಲ್ಪ ಕಡಮೆ ಮಟ್ಟದ್ದಿರಬೇಕು. ಇದರಲ್ಲಿ ನಡುಗನ್ನಡದ ಕಾವ್ಯ ಅಂದರೆ ಗದುಗಿನ ಭಾರತ ಅಥವಾ ಅದರಮಟ್ಟದ ಇತರ ಕಾವ್ಯ, ಹಳಗನ್ನಡದ ಕಾವ್ಯಭಾಗ, ಸಾಹಿತ್ಯ ಮತ್ತು ವಿಮರ್ಶೆಯಂತಹ ಕೆಲವು ಪ್ರಬಂಧ ಲೇಖನಗಳು, ನಾಟಕ, ಕತೆ, ಕನ್ನಡ ನಾಡಿನ ಚರಿತೆ, ಕನ್ನಡ ನುಡಿಗನ್ನಡಿ ಮತ್ತು ಛಂದೋಮಂಜರಿ ಎಂಬ ವ್ಯಾಕರಣ ಮುಂತಾದವು.

ಹೀಗೆ ಈಗಿರುವ ಪರೀಕ್ಷೆಯ ಅಭ್ಯಾಸ ಕ್ರಮದಲ್ಲಿ ಸೌಲಭ್ಯವನ್ನು ಮಾಡಿದಲ್ಲಿ ಪರೀಕ್ಷೆಗೆ ಕೂಡುವ ಜನಸಂಖ್ಯೆ ಇನ್ನೂ ಹೆಚ್ಚು ಹೆಚ್ಚಾಗಿ ಬೆಳೆಯಬಹುದಲ್ಲದೆ ಓದುಗರಿಗೂ ಓದು ಹೇಳುವವರಿಗೂ ಬಹಳ ಅನುಕೂಲವಾಗುವದು. ಇದರಂತೆಯೇ 'ಕಾವ' ಮತ್ತು 'ಜಾಣ'ದ ನಡುವೆಯೂ ಒಂದು ತರಗತಿಯ ಆವಶ್ಯಕವಿದೆಯೆಂದು ಅನಿಸುತ್ತಿದೆ. ಇದರ ಬಗ್ಗೆ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಕಾರಿ ಮಂಡಲ ಹೆಚ್ಚು ಗಮನಕೊಡುವುದೆಂದೂ ಮತ್ತು ಮುಂದೆ ಜೂನ್‌ನಲ್ಲಿ ನಡೆಯುವ ಪರೀಕ್ಷೆಗಳ ಜೊತೆಗೆ ಈ ನಡುವಿನ ಎರಡು ಪರೀಕ್ಷೆಗಳು ನಡೆಯುವಂತೆ ಅದಷ್ಟು ತೀವ್ರ ಅಭ್ಯಾಸದ ಪಠ್ಯಪುಸ್ತಕಗಳನ್ನು ಗೊತ್ತುಪಡಿಸಿ ಜನತೆಯಲ್ಲಿ ಕನ್ನಡ ಓದುವ ಒಲವು ಇಮ್ಮಡಿಯಾಗುವಂತೆ ಮಾಡುವದೆಂದೂ ಆಶಿಸಲಾಗಿದೆ.

## ಸಾದರ ಸ್ವೀಕಾರ

**ಕನ್ನಡಿಗ:** ಬೆಂಗಳೂರು ದಂಡಿನ ಸೆಯ್ಂಟ್ ಜೋಸೆಫ್ಸ್ ಕಾಲೇಜಿನ ಕನ್ನಡ ಸಂಘದ ವರ್ಷ ಪತ್ರಿಕೆ. ಇದು ನಾಲ್ಕನೆಯ ವರ್ಷದ ಸಂಚಿಕೆ. ಹಿಂದಿನ ವರ್ಷಗಳಂತೆ ಈ ವರ್ಷವೂ, ಕಾಗದದ ಬೆಲೆ ಹೆಚ್ಚಾಗಿದ್ದರೂ, ಬಹು ಅಂದವಾಗಿ ಪ್ರಕಟವಾಗಿದೆ. ಹಿರಿಯರ ಮತ್ತು ಕಾಲೇಜಿನ ವಿದ್ಯಾರ್ಥಿಗಳ ಬೆಲೆಯುಳ್ಳ ಲೇಖನಗಳು ಹಲವು ಇವೆ.

ಸಂಘದ ಚಟುವಟಿಕೆಗಳು ವರ್ಷ ವರ್ಷವೂ ವಿಸ್ತಾರಗೊಂಡು, ಅದು ಎಲ್ಲ ಮುಖದಿಂದಲೂ ಏಳಿಗೆ ಪಡೆಯಲೆಂದು ಹಾರೈಸುತ್ತೇವೆ.

**TRIVENI** (ತ್ರಿವೇಣಿ) ಸಂಪುಟ ೧೪. ಸಂಚಿಕೆ ೪. ಸಂಪಾದಕರು: ಶ್ರೀ.ಗಳಾದ ಕೆ. ರಾಮಕೋಟೀಶ್ವರರಾಯರು ಮತ್ತು ಕೋಲಾರದ ಸಂಪದ್ಗಿರಿ ರಾಯರು. ವಾರ್ಷಿಕ ಚಂದಾ ೫.

ಈ ಪತ್ರಿಕೆ ಕಳೆದ ೧೨ ವರ್ಷಗಳಿಂದ ಭಾರತದ ವಿವಿಧ ಪ್ರಾಂತಗಳ ಭಾಷೆ ಸಾಹಿತ್ಯಗಳ ಸೊಗಸನ್ನೂ ಇತಿಹಾಸವನ್ನೂ ಇಂಗ್ಲಿಷಿನ ಮೂಲಕ ಪ್ರಚಾರ ಮಾಡುತ್ತ ಅಂತರ ಪ್ರಾಂತೀಯ ಸೌಹಾರ್ದಕ್ಕೆ ಬಹಳ ಸಹಾಯಕವಾಗಿದೆ. ನಾಡಿನ ವಿದ್ವಾಂಸರು ಹಲವರ ಲೇಖನಗಳನ್ನೊಳಗೊಂಡು ಬಹಳ ಆಕರ್ಷಕವಾಗಿಯೂ ವಿಚಾರಪೂರ್ಣವಾಗಿಯೂ ಪ್ರಕಟವಾಗುತ್ತಿದೆ.

ಪ್ರಸಕ್ತ ಸಂಚಿಕೆಯಲ್ಲಿಯೂ ಎಂದಿನಂತೆ ಅಮೂಲ್ಯವಾದ ಲೇಖನಗಳಿವೆ. ವಿದ್ವತ್ತು, ಕಲೆ, ಸಾಹಿತ್ಯ, ಸಂಸ್ಕೃತಿಗಳ ಪ್ರೇಮಿಗಳು ಖಂಡಿತವಾಗಿ ಪ್ರೋತ್ಸಾಹ ನೀಡಬೇಕಾದ ಪತ್ರಿಕೆ ಇದು.

ವಿಳಾಸ: 'ತ್ರಿವೇಣಿ' ಕಾರ್ಯಾಲಯ, ಕೋಟೆ, ಬೆಂಗಳೂರು.

## ಪುಸ್ತಕಾವಲೋಕನ

'**ವ್ಯವಸಾಯದ ಮಣ್ಣುಗಳು:** ಅವುಗಳಿಂದ ಸಂಪೂರ್ಣ ಫಲವನ್ನು ಹೊಂದುವ ಬಗೆ: ಮೈಸೂರು ವಿಶ್ವವಿದ್ಯಾನಿಲಯದ ಸರ್ ಕೆ. ಪಿ. ಪುಟ್ಟಣ್ಣ ಚೆಟ್ಟರ ಪುದುವಟ್ಟಿನ ಪ್ರಕಟನ ಮಾಲೆ-೪. ಶ್ರೀ. ಕೂರಪಾಡು ಗುಂಡಪ್ಪ, ಬಿ.ಎ., ಸೀನಿಯರ್ ಅಸಿಸ್ಟೆಂಟ್ ಡೈರೆಕ್ಟರ್ ಆಫ್ ಅಗ್ರಿಕಲ್ಚರ್, ಕೋಲಾರ ಸರ್ಕಲ್, ಕೋಲಾರ, ಅವರಿಂದ. ಬೆಂಗಳೂರು ಸಾಹಿತ್ಯ ಪರಿಷತ್ತಿನ ಅಚ್ಚುಕೂಟದಲ್ಲಿ ಅಚ್ಚಾದದ್ದು. ಫೂಲ್‌ಸ್ಕ್ಯಾಪ್ ಅಷ್ಟಪತ್ರ, ಪುಟಗಳು ೭೯+೧೦+೩. ಬೆಲೆ ೨ ಆಣೆ.

ಶಾಸ್ತ್ರೀಯವಾದ ವ್ಯವಸಾಯವೆಂದರೇನು ಎಂಬುದನ್ನು ೮೦ ಸಣ್ಣ ಹಾಳೆಗಳ ಈ ಹೊತ್ತಗೆಯಲ್ಲಿ, ಸುಲಭವಾಗಿ ಸಮಂಜಸವಾಗಿ ಹೇಳಿದ್ದಾರೆ. ವ್ಯವಸಾಯವು ಶಾಸ್ತ್ರವೇ, ಕಲೆಯೇ, ಉದ್ಯೋಗವೇ ಎಂಬುದು ದೊಡ್ಡ ವಿಚಾರ. ಎಲ್ಲವೂ ಹೌದು ಎಂದು ಉತ್ತರ ಹೊರಡುತ್ತದೆ. ಈ ಪುಸ್ತಕವನ್ನು ಮೊದಲಿನಿಂದ ಕೊನೆಯವರೆಗೆ ಓದಿದರೆ ವ್ಯವಸಾಯದಲ್ಲಿಯೂ ಒಂದು ಶಾಸ್ತ್ರವಿದೆ ಎಂಬುದು ಮನದಟ್ಟಾಗುತ್ತದೆ. ವ್ಯವಸಾಯದಲ್ಲಿ ಅಡಕವಾಗುವ ಅನೇಕ ವಿಷಯಗಳನ್ನು ಒಂದು ಕಡೆ ಸೇರಿಸಿ ಅದರ ತಳಹದಿಯಿಂದ ಒಂದು ಶಾಸ್ತ್ರವನ್ನು ಓದುಗರಿಗೆ ತೊಡಕಿಲ್ಲದಂತೆ ಪರಿಚಯಮಾಡಿಸಿಕೊಡುವುದು ಆ ಶಾಸ್ತ್ರದ ಹಿಡಿತವಿರುವವರಿಗೇ ಸಾಧ್ಯ. ಆ ಸೌಲಭ್ಯ ಇಲ್ಲಿ ಸಾಧಿಸಿದೆ.

ವ್ಯವಸಾಯದ ಮಣ್ಣುಗಳು ಎಂದು ಹೆಸರಿದ್ದರೂ ಮಣ್ಣಿನ ವಿಚಾರ ಮಿತಿಯಾಗಿ, ವ್ಯವಸಾಯದ ವಿಚಾರ ತಕ್ಕಷ್ಟು ಬೆಳೆದಿದೆ. ಪುಸ್ತಕವನ್ನು 'ಭೂ ವ್ಯವಸಾಯ' ಎಂದು ಕರೆಯಬಹುದಾಗಿತ್ತು. ವಿಷಯ ವೈವಿಧ್ಯ ಅಷ್ಟಿದೆ. ಆದರೆ ವ್ಯವಸಾಯ ಎಂಬ ಒಂದು ವಿಷಯವನ್ನು, ಆಯಾ ವಿಚಾರಕ್ಕೆ ಪ್ರಾಶಸ್ತ್ಯ ಕೊಟ್ಟು ಮಣ್ಣಿನ ದೃಷ್ಟಿಯಿಂದಾದರೂ ವಿಮರ್ಶಿಸಬಹುದು, ಅದರ ಮೇಲೆ ಬೆಳೆಯುವ ಬೆಳೆಗಳ ದೃಷ್ಟಿಯಿಂದಲಾದರೂ ವಿಮರ್ಶಿಸಬಹುದು ಅಥವಾ ವ್ಯವಸಾಯ ಮಾಡುವ ಜನಗಳ ಆರ್ಥಿಕ ದೃಷ್ಟಿಯಿಂದಲಾದರೂ ವಿಮರ್ಶಿಸಬಹುದು. ಇಲ್ಲಿ ಎಲ್ಲಕ್ಕೂ ತಳಹದಿಯಾದ ಮಣ್ಣುಗಳ ದೃಷ್ಟಿಯಿಂದ ವಿಚಾರ ಬೆಳಸಿರುವುದರಿಂದ ವ್ಯವಸಾಯದ ಮಣ್ಣುಗಳು ಎಂಬ ಹೆಸರು ಹೊಂದುತ್ತದೆ. ಪುಸ್ತಕದ ವಿಷಯವನ್ನು 'ಅವುಗಳಿಂದ ಸಂಪೂರ್ಣ ಫಲವನ್ನು ಹೊಂದುವ ಬಗೆ' ಎಂದು ಪೂರ್ಣ ಮಾಡಿಕೊಳ್ಳಬೇಕು.

೩೧ನೆಯ ಪುಟದಲ್ಲಿ ಕೊಟ್ಟಿರುವ ಸಸ್ಯಚಕ್ರ ಬಹಳ ಸ್ವಾರಸ್ಯವಾಗಿದೆ. ಇಂತಹ ಚಿತ್ರಗಳನ್ನು ಇನ್ನಷ್ಟು ಸೇರಿಸಬಹುದಾಗಿತ್ತು. ಈ ಪುಸ್ತಕವನ್ನೂ, ಈ ಪುಸ್ತಕಕ್ಕೆ ರಾಜಸೇವಾಸಕ್ತ ಬೆಳ್ಳಾವೆ ವೆಂಕಟನಾರಣಪ್ಪನವರು ಬರೆದಿರುವ ಮುನ್ನುಡಿಯನ್ನೂ ನೋಡಿ ಒಂದು ವಿಚಾರ ನೆನಪಾಗುತ್ತದೆ. ವಿದೇಶಗಳಲ್ಲಿ ಗ್ರಾಮಾಂತರ ಸಂಘಗಳಿಗೆ ಅನುಕೂಲವಾಗುವಂತೆ ಇಂಗ್ಲೀಷಿನಲ್ಲಿ ಬರೆದ ಇಂತಹ ಪುಸ್ತಕಗಳುಂಟು. ಅಲ್ಲಿಯ ಸಂಘಗಳವರು ತಮ್ಮ ಉದ್ಯೋಗಕ್ಕೆ ಸಂಬಂಧಪಟ್ಟ ಪುಸ್ತಕಗಳನ್ನು ಪರಸ್ಪರ ಓದಿಕೊಂಡು ವಿಚಾರ ಮಾಡುವುದನ್ನು ಒಂದು ಕೆಲಸವಾಗಿ ಇಟ್ಟುಕೊಂಡಿರುತ್ತಾರೆ. ನಮ್ಮ ದೇಶದಲ್ಲೂ ಗ್ರಾಮಾಂತರಗಳಲ್ಲಿ ಹಾಗೆ ಓದುಗಾರಿಕೆಗಾಗಿ ಜನ ಒಟ್ಟುಗೂಡಬಹುದು. ಹಾಗೆ ಸೇರಿದ ಕಡೆ 'ಇಗೋ, ವ್ಯವಸಾಯದ ವಿಚಾರವಾಗಿ ಒಂದು ಸಣ್ಣ ಪುಸ್ತಕ ಕನ್ನಡದಲ್ಲಿ ಬಂದಿದೆ. ಇದನ್ನು ನೀವು ಕ್ರಮವಾಗಿ ಓದತಕ್ಕದ್ದು' ಎಂದು ಅವರಿಗೆ ಸಂಕೋಚವಿಲ್ಲದೆ ಸಿಫಾರಸು ಮಾಡಬಹುದು.

ಇಷ್ಟು ಬೇಕಾದರೆ ದೊಡ್ಡ ಅಕ್ಷರದಲ್ಲಿ ತೋರಿಸಬಹುದಾದ ವಿಷಯ. ಇನ್ನು ಸಣ್ಣ ಅಕ್ಷರದಲ್ಲಿ ತೋರಿಸಬಹುದಾದ ಎರಡು ಮಾತುಗಳು. ಪುಸ್ತಕದ ತಿರುಳಿನ ವಿಚಾರವೇನೂ ಅಲ್ಲ. ಇಂಗ್ಲೀಷ್ ಮಾತುಗಳನ್ನು ಕನ್ನಡದಲ್ಲಿ ಹೇಳುವಾಗ ತೊಡಕು ಸ್ವಲ್ಪ ಉಂಟು, ನೋಡಿಕೊಳ್ಳಬೇಕು. ೩೩ನೆಯ ಪುಟದಲ್ಲಿ ಚಿಲಿಯನ್ ಸ್ಪಾಲ್‌ಪೀಟರ್ ಎಂದಿದೆ. ಸಾಲ್ಟ್ ಪೀಟರ್ ಎಂದಿರಬೇಕು. ಸ್ವಲ್ಪ ಅಚ್ಚಿನ ವ್ಯತ್ಯಾಸ ಎನ್ನಬಹುದು. ಆದರೆ ಅಚ್ಚಿನ ವ್ಯತ್ಯಾಸವಿಲ್ಲದೆಯೂ ಬಾಯಿಮಾತಿನಲ್ಲಿ ಕೆಲವು ಪದಗಳ ಹೊರಳೆಯಾಗುವುದುಂಟು. ಶಾಸ್ತ್ರ ವಿಚಾರಗಳಲ್ಲಿ ಈ ಹಾವಳಿ ಬಹಳ. Hm 320 ಕಬ್ಬು, H 22 ರಾಗಿ ಎಂಬ ಸಂಕೇತಗಳು ಕೆಲವು ಕಡೆ ಬರುತ್ತವೆ. 320, 22 ಈ ಅಂಕಿಗಳು ಹೀಗಾದರೂ

ಇರಬಹುದು, ೩೨೦, ೨೨ ಹೀಗಾದರೂ ಇರಬಹುದು, ಆಕ್ಷೇಪಣೆ ಇಲ್ಲ. ಆದರೆ ಕನ್ನಡ ಓದುವವರಿಗೆ Hm ಮತ್ತು H ಸಂಕೇತಗಳು ಬರಿಯ ಗೆರೆಗಳು. ಎಚ್. ಎಂ. ಮತ್ತು ಎಚ್. ಎಂದು ಬರೆದರೆ ಉಚ್ಚಾರವಾದರೂ ಹೊರಟೀತು. ಅದಕ್ಕಿಂತ ಹೆಬ್ಬಾಳ ಕಬ್ಬು, ಹೆಬ್ಬಾಳ ರಾಗಿ ಮುಂತಾಗಿ ಹೇಳಿದರೆ ಉಚ್ಚಾರಣೆಯ ಜೊತೆಗೆ ಸ್ವಲ್ಪ ಅರ್ಥವೂ ಆಗಬಹುದು. 'Dry Farming' (ಡ್ರೈ ಫಾರ್ಮಿಂಗ್) ಒಣ ವ್ಯವಸಾಯವಾಗಿದೆ. ಡ್ರೈ ಎಂದರೆ ಒಣ ಸರಿ. ಆದರೆ ಇದನ್ನು ಕುಷ್ಕಿ ವ್ಯವಸಾಯವೆಂದಾಗಲಿ, ಮಳೆ ಕಡಮೆಯಾದೆಡೆ ನಡಸಬಹುದಾದ ವ್ಯವಸಾಯವೆಂದಾಗಲಿ ಕರೆದರೆ ಅನುಕೂಲವೆಂದು ಕಾಣುತ್ತದೆ. ಉಪಕಸಬುಗಳು, ರೈತನ ನೆರೆಹೊರೆ ಇವು ದೊಡ್ಡ ವಿಷಯಗಳು. ಅವು ವ್ಯವಸಾಯದ ಶಾಸ್ತ್ರಕ್ಕೆ ಸೇರುವುದಿಲ್ಲ; ಅವನ್ನು ಬಿಟ್ಟರೆ ವ್ಯವಸಾಯದಲ್ಲಿ ಸ್ವಾರಸ್ಯವಿರುವುದಿಲ್ಲ. ಅವುಗಳ ವಿಷಯದಲ್ಲಿ ಒಂದು ಮಾತು ಕಡಮೆ ಹೇಳಿದರೆ ಪ್ರಗತಿಗೆ ಮಾರ್ಗವಿರುವುದಿಲ್ಲ; ಒಂದು ಮಾತು ಹೆಚ್ಚು ಹೇಳಿದರೆ ಗಡುಸಾಗಿ ಕಾಣುತ್ತದೆ. ಪುಸ್ತಕದ ಕಡೆಯ ಎರಡು ಅಧ್ಯಾಯಗಳಲ್ಲಿ ಈ ತೊಡಕು ಹಾಗೆಯೇ ಉಳಿದಿರುತ್ತದೆ. ಬಹುಶಃ ಈ ವಿಷಯಗಳಲ್ಲಿ ಸಾಕಷ್ಟು ವಿಚಾರ ಹೊರಗೆಡವಬೇಕಾದರೆ ಬೇರೆ ಪುಸ್ತಕವೇ ಬೇಕಾದೀತು. ಇದು ದೊಡ್ಡ ಪ್ರಶ್ನೆ ಎಂದು ಲೇಖಕರೇ ಹೇಳಿಬಿಟ್ಟಿದ್ದಾರೆ.

— ಎಂ. ವಾಸುದೇವಮೂರ್ತಿ.

## ಪರಿಷತ್ತಿನ ಸುದ್ದಿ

### ಪರಿಷತ್ತಿನ ಸದಸ್ಯರ ಬೆಳವಣಿಗೆ

(ತಾ. ೧೮-೩-೪೩ರಿಂದ ೨೪-೩-೪೩ರ ವರೆಗೆ)

**ಸಹಾಯಕ ಸದಸ್ಯರು (೧೦೦ ರೂ.):** ಶ್ರೀ.ಗಳಾದ ೧. ಡಾ|| ಎಸ್. ರಾಜು ಅಯ್ಯಂಗಾರ್, ಎಲ್.ಎಂ.ಎಸ್., ಎಲ್.ಆರ್.ಸಿ.ಪಿ. ಅಂಡ್ ಎಸ್., ಛೀಫ್ ಮೆಡಿಕಲ್ ಇನ್‌ಸ್ಪೆಕ್ಟರು, ಚಾಮರಾಜಪೇಟೆ, ಬೆಂಗಳೂರು. ೨. ಶ್ರೀಮತಿ ಪಂಕಜಮ್ಮ ವೆಂಕಟೇಶ ಅಯ್ಯಂಗಾರ್ ಅವರು, ಗವೀಪುರ, ಬೆಂಗಳೂರು. (ಸಾಮಾನ್ಯ ಸದಸ್ಯತ್ವದಿಂದ ಬದಲಾವಣೆ). ೩. ಎಂ. ವಿ. ಕೃಷ್ಣಮೂರ್ತಿ, ಬಿ.ಎ., ಅವರು, ವಿಶ್ವೇಶ್ವರಪುರ, ಬೆಂಗಳೂರು. (ಆಜೀವ ಸದಸ್ಯತ್ವದಿಂದ ಬದಲಾವಣೆ). ೪. ಶ್ರೀ. ಎಸ್. ಆರ್. ಲೋಕೂರ್ ಅವರು, ಶ್ರೀರಾಮ ಸಿಲ್ಕ್ ಮಿಲ್ಸ್, ಬೆಂಗಳೂರು, ೫. ಮೋತಮದ್-ಉಲ್-ಮುಲ್ಕ್ ಎಂ. ಜಿ. ಮೇಖ್ರಿ ಅವರು, ಬಿ.ಎ., ಎಲ್‌ಎಲ್.ಬಿ., ರೆವೆನ್ಯೂ ಕಮಿಷನರ್, ಬೆಂಗಳೂರು. (ಆ. ಸ.ದಿಂದ ಬದಲಾವಣೆ).

**ಸಾಮಾನ್ಯ ಸದಸ್ಯರು (೩ ರೂ.):** ಶ್ರೀಮತಿಗಳಾದ ೧. ಬಿ. ಗಂಗಾಬಾಯಿಯವರು, ವಿಶ್ವೇಶ್ವರಪುರ, ೨. ಬಿ. ಇಂದಿರಾಬಾಯಿ ವಾಸುದೇವಮೂರ್ತಿಗಳು, ಬಸವನಗುಡಿ, ಬೆಂಗಳೂರು.

### ಮಹಿಳಾಶಾಖೆ

### ನಾಟಕವಾಚನ ಮತ್ತು ಹಾಡುಗಾರಿಕೆ

**೨೭-೩-೧೯೪೩ನೆಯ ಶನಿವಾರ ಸಂಜೆ ೫-೩೦ ಗಂಟೆಗೆ** ಪರಿಷನ್ಮಂದಿರದಲ್ಲಿ 'ಸಾವಿನ ಸಮಸ್ಯೆ', 'ಯಶೋಧರಾ', 'ತಾಳೀ ಕಟ್ಬೋಕ್ ಕೂಲೀನೇ' ಮತ್ತು 'ಜಲಗಾರ' ಈ ನಾಟಕಗಳ ಕೆಲವು ಭಾಗಗಳನ್ನಾಯ್ದು ಶ್ರೀ. ಎಂ. ಪುಟ್ಟತಾಯಮ್ಮನವರು ಮತ್ತು ಶ್ರೀಮತಿ ಎಂ. ಎಸ್. ಶಾರದಮ್ಮನವರು ವಾಚಿಸುವರು. ಶ್ರೀಮತಿ ಸೌ. ಇಂದಿರಾಬಾಯಿ ವಾಸುದೇವಮೂರ್ತಿ ಅವರು ಅಧ್ಯಕ್ಷತೆ ವಹಿಸುವರು.

**೩೦-೩-೧೯೪೩ನೆಯ ಮಂಗಳವಾರ ಸಂಜೆ ೫-೩೦ ಗಂಟೆಗೆ** ಪರಿಷನ್ಮಂದಿರದಲ್ಲಿ ಶ್ರೀಮತಿ ರಂಗನಾಯಕಮ್ಮ ಮಂಡ್ಯಂ, ಬಿ.ಎ., ಅವರ ಅಧ್ಯಕ್ಷತೆಯಲ್ಲಿ ಶ್ರೀಮತಿ ಸೌ|| ಚಾಮಮ್ಮ ತಿಮ್ಮಯ್ಯ ಅವರ ಹಾಡುಗಾರಿಕೆಯೂ ಶ್ರೀಮತಿ ಸೌ|| ತುಲಸೀಬಾಯಿ ಶ್ಯಾಮರಾಯರ ಪಿಟೀಲು ತನಿ ಕಛೇರಿಯೂ ನಡೆಯುವುವು.

## ಕನ್ನಡ ಸಾಹಿತ್ಯ ಪರಿಷತ್

**ಬೆಂಗಳೂರು**

### ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ

**೨೮-೩-೧೯೪೩ನೆಯ ಭಾನುವಾರ ಸಂಜೆ ೬ ಗಂಟೆಗೆ**

**ಶ್ರೀ. ಚ. ವಾಸುದೇವಯ್ಯನವರ**

**ರಾಜಸೇವಾಸಕ್ತ**

**ಶ್ರೀ. ಬೆಳ್ಳಾವೆ ವೆಂಕಟನಾರಾಯಣಪ್ಪ, ಎಂ.ಎ. ಅವರ**

ಮತ್ತು

**ಶ್ರೀ. ಬೆನಗಲ್ ರಾಮರಾವ್, ಎಂ.ಎ., ಎಲ್‌ಎಲ್.ಬಿ. ಅವರ**

## ಭಾವಚಿತ್ರಗಳ ಅನಾವರಣ

**ಮೈಸೂರು ಸಂಸ್ಥಾನದ ದಿವಾನರಾದ**

**ಪ್ರಧಾನಶಿರೋಮಣಿ**

**ಶ್ರೀ. ಎನ್. ಮಾಧವರಾವ್, ಬಿ.ಎ., ಬಿ.ಎಲ್., ಸಿ.ಐ.ಇ. ಅವರು**

ಅಧ್ಯಕ್ಷತೆ ವಹಿಸಲು ದಯವಿಟ್ಟು ಒಪ್ಪಿರುತ್ತಾರೆ

### ಮೈಸೂರು ಪ್ರಾಂತಸಮಿತಿ

### ಉಪನ್ಯಾಸ

**೩೧-೩-೪೩ನೆಯ ಬುಧವಾರ ಸಂಜೆ ೬-೩೦ಕ್ಕೆ** ಪರಿಷನ್ಮಂದಿರದಲ್ಲಿ ಶ್ರೀ. ಎಂ. ಎ. ಗೋಪಾಲಸ್ವಾಮಿ ಅಯ್ಯಂಗಾರ್, ಎಂ.ಎ., ಎಲ್‌ಎಲ್.ಬಿ. ಅವರು, "ಮೈಸೂರಿನ ಸ್ಥಳೀಯ ಸರಕಾರ ಪದ್ಧತಿ" ಎಂಬ ವಿಷಯವಾಗಿ ಭಾಷಣ ಮಾಡುತ್ತಾರೆ.

ಬೆಂಗಳೂರು ಪೌರಸಭೆಯ ಅಧ್ಯಕ್ಷರಾದ ಶ್ರೀ. ವಿ. ಕೆ. ಗೋವಿಂದರಾಜುಲು, ಬಿ.ಎ., ಎಲ್‌ಎಲ್.ಬಿ. ಅವರು ಅಧ್ಯಕ್ಷತೆ ವಹಿಸುತ್ತಾರೆ.

### ಭಾರತವಾಚನ

**೩-೪-೪೩ನೆಯ ಶನಿವಾರ ಸಂಜೆ ೬-೩೦ಕ್ಕೆ** ಪರಿಷನ್ಮಂದಿರದಲ್ಲಿ ಗಮಕವಿದ್ವಾನ್ ಶ್ಲೋಕಸಂಗೀತ ಶ್ರೀ. ಕಳಲೆ ಸಂಪತ್ಕುಮಾರಾಚಾರ್ಯ, ಬಿ.ಎ., ಬಿ.ಟಿ. ಅವರು ಭಾರತವಾಚನ ಮಾಡುವರು,

## ಕನ್ನಡ ಸುದ್ದಿ

### ಇನ್ನೊಂದು ಕನ್ನಡ ಚಲಚ್ಚಿತ್ರ

ಮದರಾಸಿನ ನ್ಯೂಟೋನ್ ಸ್ಟುಡಿಯೊ ತಯಾರಿಸಿರುವ 'ರಾಧಾರಮಣ' ಎಂಬ ಕನ್ನಡ ಪೌರಾಣಿಕ ಚಿತ್ರ ಮುಂದಿನ ತಿಂಗಳಲ್ಲಿ ಪ್ರದರ್ಶನಕ್ಕೆ ಬರುತ್ತದೆಯೆಂದು ಗೊತ್ತಾಗಿದೆ.

೨೦-೩-೪೩ನೆಯ ಶನಿವಾರ ಮದರಾಸು ಬಾನ್‌ದನಿ ಕೇಂದ್ರದಿಂದ ಸಂಜೆ ೫-೧೫ರಿಂದ ೬) ಈ ಚಿತ್ರದ ಹಾಡುಗಳನ್ನು ಪ್ರಸಾರ ಮಾಡಿದರು.

ಚಿತ್ರದಲ್ಲಿ ನಟಿಸಿರುವ ಶ್ರೀಮತಿ ಎಂ. ವಿ. ರಾಜಮ್ಮ, ಶ್ರೀ. ಕಾಳಿಂಗರಾವ್, ಶ್ರೀ. ಬಿ. ಆರ್. ಪಂತಲು ಮೊದಲಾದವರು ಹಾಡಿದರು.

**ಸಂತೆಬೆನ್ನೂರು: ಸುಗ್ಗಿಹಬ್ಬ**

ತಾ|| ೧೯-೩-೪೩ರಲ್ಲಿ ಸಂತೆಬೆನ್ನೂರು ಮಾಧ್ಯಮಿಕ ಶಾಲೆಯ ಕರ್ನಾಟಕ ಸಂಘದ 'ಸುಗ್ಗಿಹಬ್ಬ' ಶ್ರೀ. ಸಂಪಂಗಿರಾಮಯ್ಯ, ಎಂ.ಎ., ಎಲ್‌ಎಲ್.ಬಿ. (ಭದ್ರಾವತಿ ಸಬ್‌ಡಿವಿಜನ್ ಆಫಿಸರ್) ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಊರಿನ ಕರ್ನಾಟಕ ಸಂಘದವರು ಈ ಕಾರ್ಯ ಯಶಸ್ವಿಯಾಗಿ ನಡೆಯಲು ಸಹಾಯ ಮಾಡಿದರು. ಕಾವ್ಯವಾಚನ ಉಪನ್ಯಾಸಗಳು ನಡೆದಮೇಲೆ ಅಧ್ಯಕ್ಷರು ಮುಕ್ತಾಯ ಭಾಷಣದಲ್ಲಿ ಕನ್ನಡದ ಹಿರಿಮೆ, ಅದರ ಸೊಬಗು, ಕರ್ನಾಟಕ ಸಂಘಗಳ ಸತ್ಕಾರ್ಯ ಇವುಗಳನ್ನು ಹೇಳಿ ಬಾಲಕರು ಈ ಸಂಘವನ್ನು ಅಭಿವೃದ್ಧಿಪಡಿಸಬೇಕೆಂದೂ ಆಗಾಗ ಕನ್ನಡ ಸ್ಪರ್ಧೆಗಳಲ್ಲಿ ಭಾಗವಹಿಸಬೇಕೆಂದೂ ಹೇಳಿದರು.

೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧॥
ಬಿಡಿ ಪತ್ರಿಕೆ: ೬ ಕಾಸು



ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈ ಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೨೩

ಬೆಂಗಳೂರು: ಶುಕ್ರವಾರ, ಏಪ್ರಿಲ್ ೨, ೧೯೪೩

## ಕನ್ನಡ ಸಾಹಿತ್ಯ ಪರಿಷತ್
(ಮೈಸೂರು ಪ್ರಾಂತಸಮಿತಿ)

# ವಸಂತ ಸಾಹಿತ್ಯೋತ್ಸವ—೧೯೪೩

**ಮಹಾಶಯರಲ್ಲಿ ವಿಜ್ಞಾಪನೆಗಳು:**

ಪರಿಷತ್ತು ಕಳೆದ ಒಂಬತ್ತು ವರ್ಷಗಳಿಂದಲೂ ವಸಂತ ಸಾಹಿತ್ಯೋತ್ಸವವನ್ನು ನಡಸಿಕೊಂಡು ಬರುತ್ತಿರುವುದು ತಮಗೆ ತಿಳಿದ ವಿಷಯವೇ ಆಗಿದೆ. ಈ ವರ್ಷ **ಏಪ್ರಿಲ್ ೧೭ ರಿಂದ ೧೯ರ** ಪೂರ್ತ ಮೂರು ದಿನಗಳು ಈ ಉತ್ಸವವನ್ನು ನಡಸುವಂತೆ ಗೊತ್ತಾಗಿದೆ. ದಿನವೂ **ಬೆಳಗ್ಗೆ** ಸಾಯಂಕಾಲ– ಎರಡು ಹೊತ್ತೂ ಉತ್ಸವ ನಡೆಯುವಂತೆಯೂ, ಕಾರ್ಯಕ್ರಮದಲ್ಲಿ ಸಾಹಿತ್ಯ ಉಪನ್ಯಾಸ, ವಿಜ್ಞಾನ ಉಪನ್ಯಾಸ, ನಾಟಕ, ಸಂಗೀತ, ಕಾವ್ಯವಾಚನ, ಲಾವಣಿ ಹಾಡಿಕೆ ಮುಂತಾದುವು ಸೇರಿರುವಂತೆಯೂ ಏರ್ಪಾಡಾಗಿದೆ.

ಆರೋಗ್ಯಶಾಖೆಯ ಮತ್ತು ಸ್ಥಳೀಯ ಸಂಸ್ಥೆಗಳ ಮಂತ್ರಿಗಳಾದ **ಶ್ರೀಮಾನ್ ಎಚ್. ಬಿ. ಗುಂಡಪ್ಪ ಗೌಡ, ಬಿ.ಎ., ಬಿ.ಎಲ್.** ಅವರು ಪ್ರಾರಂಭೋತ್ಸವವನ್ನು ನೆರವೇರಿಸಲು ದಯಮಾಡಿ ಒಪ್ಪಿರುತ್ತಾರೆ.

ಇದೇ ಸಂದರ್ಭದಲ್ಲಿ **ಪುಸ್ತಕ ಭಂಡಾರ ವಿಚಾರ ಗೋಷ್ಠಿ**ಯನ್ನು ಕೂಡಿಸಲು ಏರ್ಪಾಟಾಗಿದೆ.

ಈ ಉತ್ಸವ ಸಮಾರಂಭಕ್ಕಾಗಿ ಕನ್ನಡ ನಾಡಿನ ಹಲವೆಡೆಗಳಿಂದ ಪ್ರಸಿದ್ಧ ವಿದ್ವಾಂಸರೂ ಕಲಾವಿದರೂ ದಯಮಾಡಿಸುವವರಿದ್ದಾರೆ.

ಈ ದೊಡ್ಡ ಕಾರ್ಯಕ್ರಮದ ನಿರ್ವಾಹಕ್ಕಾಗಿ ಕಡೆಯಪಕ್ಷ ೧,೦೦೦ ರೂ. ವೆಚ್ಚವಾಗುತ್ತದೆಂದು ಅಂದಾಜು ಮಾಡಿದೆ. ಪ್ರತಿವರ್ಷವೂ ಈ ಉತ್ಸವ ಸಾರ್ವಜನಿಕರ ಸಹಾಯ ಸಹಕಾರಗಳಿಂದಲೇ ನಡೆದು ಬರುತ್ತಿದೆ. ವರ್ಷವರ್ಷವೂ ಪರಿಷತ್ತಿಗೆ ದೊರೆಯುತ್ತ ಬಂದಿರುವ ಜನರ ಉದಾರ ಸಹಾಯವನ್ನು ಇಲ್ಲಿ ವಂದನೆ ಕೃತಜ್ಞತೆಗಳಿಂದಲೂ ಹೆಮ್ಮೆ ಸಂತೋಷಗಳಿಂದಲೂ ನೆನೆಯುವುದು ನಮ್ಮ ಕರ್ತವ್ಯ. ಈ ವರ್ಷವೂ ಅದೇ ಸಹಾಯ ಸಹಕಾರವೂ ಔದಾರ್ಯವೂ ದೊರೆಯುತ್ತದೆಂಬ ನಚ್ಚಿಕೆಯ ಮೇಲೆ ಉತ್ಸವದ ಯೋಜನೆಯನ್ನು ಕೈಕೊಂಡಿದೆ. ಪರಿಷತ್ತಿನ ಅಭಿಮಾನಿಗಳೂ ಕನ್ನಡದ ಪ್ರೇಮಿಗಳೂ ಆದ ತಮ್ಮಂತಹ ಉದಾರಿಗಳು ಕೈಯಲ್ಲಾದಮಟ್ಟಿಗೆ ಸಹಾಯಮಾಡಿ ಉತ್ಸವವನ್ನು ಯಶಸ್ವಿಯಾಗಿ ನಡಸಿಕೊಡುವ ಉಪಕಾರಮಾಡಬೇಕೆಂದು ಪ್ರಾರ್ಥಿಸುತ್ತೇವೆ.

| | | |
|---|---|---|
| **ಮಾಸ್ತಿ ವೆಂಕಟೇಶ ಅಯ್ಯಂಗಾರ್**<br>(ಕಾರ್ಯಸಮಿತಿ) | **ಬಿ. ವೆಂಕೋಬರಾವ್**<br>(ಕಾರ್ಯಸಮಿತಿ) | **ಕೋ. ಸಂಪದ್ಗಿರಿರಾವ್** |
| **ಸಿ. ಕೆ. ವೆಂಕಟರಾಮಯ್ಯ**<br>(ಪ್ರಾಂತಸಮಿತಿ) | **ಕೆ. ಅಂಬ್ರೋಸ್ ಆನಂದ**<br>(ಪ್ರಾಂತಸಮಿತಿ) | **ವಿ. ಸೀತಾರಾಮಯ್ಯ** |
| ಅಧ್ಯಕ್ಷರು | ಕಾರ್ಯದರ್ಶಿಗಳು | ವ್ಯವಸ್ಥಾಪಕರು |

# ಕನ್ನಡ ನುಡಿ

**ಶುಕ್ರವಾರ, ಏಪ್ರಿಲ್ ೨, ೧೯೪೩**

## ವಯಸ್ಕರ ಶಿಕ್ಷಣದ ಕೆಲಸಗಾರರ ಸಮ್ಮೇಳನ

ಮೈಸೂರು ಮತ್ತು ಮಂಡ್ಯ ಜಿಲ್ಲೆಗಳ ವಯಸ್ಸಿನ ಶಿಕ್ಷಣದ ಕೆಲಸಗಾರರ ಸಮ್ಮೇಳನ ಮಾರ್ಚಿ ತಿಂಗಳು ೨೭–೨೮ನೆಯ ತಾರೀಖುಗಳಲ್ಲಿ ಮೈಸೂರು ನಗರದಲ್ಲಿ ನಡೆಯಿತು. ಆರೋಗ್ಯ ಶಾಖೆಯ ಮತ್ತು ಸ್ಥಳೀಯ ಸಂಸ್ಥೆಗಳ ಮಂತ್ರಿಗಳಾದ ಶ್ರೀ. ಎಚ್. ಬಿ. ಗುಂಡಪ್ಪಗೌಡ ಅವರು ಸಮ್ಮೇಳನವನ್ನು ಪ್ರಾರಂಭಿಸಿ ಕೊಟ್ಟು ತಮ್ಮ ಭಾಷಣದಲ್ಲಿ ಹೀಗೆ ಅಪ್ಪಣೆ ಕೊಡಿಸಿದರು:

ನಮ್ಮ ದೇಶದಲ್ಲಿ ೧೦೦ರಲ್ಲಿ ೧೩ಮಂದಿ ಮಾತ್ರ ವಿದ್ಯಾವಂತರಿದ್ದಾರೆ. ಈ ೧೩ ಮಂದಿಯಲ್ಲಿ ಇಂಗ್ಲಿಷ್ ಬಲ್ಲವರಿಂದ ಹಿಡಿದು ಕೇವಲ ರುಜು ಮಾಡಲು ಬಲ್ಲವರ ವರೆಗೆ ಸೇರಿದಾರೆ. ತಾಯಿತಂದೆಗಳು ವಿದ್ಯಾವಂತರಾಗುವವರೆಗೆ ನಮ್ಮ ದೇಶದಲ್ಲಿ ಅಕ್ಷರಸ್ಥರ ಸಂಖ್ಯೆ ಹೆಚ್ಚಲಾರದು.

ಪ್ರಜೆಗಳನ್ನೆಲ್ಲ ವಿದ್ಯಾವಂತರನ್ನಾಗಿ ಮಾಡುವುದು ಸರ್ಕಾರದ ಪ್ರಥಮ ಕರ್ತವ್ಯ. ನೀರು ಸುರಿದಂತೆ ಹಣ ಸುರಿದು ನಮ್ಮ ವಯಸ್ಕರನ್ನೆಲ್ಲ ಅಕ್ಷರಸ್ಥರನ್ನಾಗಿ ಮಾಡಬೇಕು. ನಮ್ಮ ಜನ ತಮ್ಮ ಜವಾಬ್ದಾರಿಯನ್ನು ತಿಳಿದುಕೊಂಡರೆ ಶಿಕ್ಷಣದ ಕೆಲಸ ಬೇಗ ನಡೆಯುತ್ತದೆ. ಸರ್ಕಾರದವರು ಎಷ್ಟೇ ಸಹಾಯ ಮಾಡಿದರೂ ಯಾವ ಕೆಲಸವನ್ನು ನಡಸಿದರೂ ಜನ ಅದನ್ನು ಉಪಯೋಗಿಸಿಕೊಳ್ಳುವ, ತಿಳಿದುಕೊಳ್ಳುವ ಶಕ್ತಿಯುಳ್ಳವರಾಗಿರಬೇಕು.

ವಿದ್ಯೆ ಪಡೆದವರು ಹಳ್ಳಿಗಳಿಗೆ ಹೋಗಿ ಜನಸಾಮಾನ್ಯರ ಹಣದಿಂದ ಪಡೆದ ವಿದ್ಯೆಯ ಋಣವನ್ನು ತಮಗಿಂತಲೂ ಅದೃಷ್ಟಹೀನರಾದ ತಮ್ಮ ಸೋದರ ಸೋದರಿಯರಿಗೆ ವಿದ್ಯೆ ಹೇಳುವುದರಿಂದ ತೀರಿಸಬೇಕು. ವಿದ್ಯಾರ್ಥಿಗಳಾದವರು ಒಬ್ಬೊಬ್ಬರೂ ಹತ್ತು ಜನರನ್ನಾದರೂ ಅಕ್ಷರಸ್ಥರನ್ನಾಗಿ ಮಾಡಿದರೆ ದೇಶ ಎಷ್ಟೋ ಮುಂದುವರಿಯುತ್ತದೆ.

ಅಕ್ಷರ ಪ್ರಚಾರವನ್ನು ಯಾವ ಭಾಷೆಯಲ್ಲಿ ಮಾಡಬೇಕು ಎಂಬ ವಿಷಯದಲ್ಲಿ ಪ್ರಶ್ನೆ ಇದೆ. ಈ ಸಂಸ್ಥಾನದ ಜನರ ದಿನದಿನದ ವ್ಯವಹಾರಕ್ಕೆ ಅನುಕೂಲವಾದ ಶಾಸನಗಳನ್ನೂ ಉಪಯುಕ್ತ ವಿಚಾರಗಳನ್ನೂ ಜನಸಾಮಾನ್ಯರು ಅರಿತುಕೊಳ್ಳಲು ಅನುಕೂಲವಾದ, ಜನರ ಭಾಷೆಯಾದ ಕನ್ನಡದಲ್ಲಿ ಅಕ್ಷರಪ್ರಚಾರ ನಡೆಯಬೇಕು.

ರಾಷ್ಟ್ರದ ಅಭಿವೃದ್ಧಿ ಯೋಜನೆಯಲ್ಲಿ ಅಕ್ಷರ ಪ್ರಚಾರ ಬಹು ಮುಖ್ಯವಾದ ಭಾಗ.

ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದ ಪರಿಷತ್ತಿನ ಉಪಾಧ್ಯಕ್ಷರೂ ಮೈಸೂರು ಸಂಸ್ಥಾನದ ಎಕ್ಸೈಜ್ ಕಮಿಷನರೂ ಆದ ರಾಜಸೇವಾಪ್ರಸಕ್ತ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರರು ತಮ್ಮ ಭಾಷಣದಲ್ಲಿ ಹೀಗೆ ಅಪ್ಪಣೆ ಕೊಡಿಸಿದರು:

ವಯಸ್ಕರಲ್ಲಿ ಅಧಿಕಾರದ ಜೊತೆಗೆ ತಿಳಿವೂ ಹರಡಬೇಕು. ಇಂಗ್ಲೆಂಡಿನಲ್ಲಿ 'To educate our Masters' ಎಂಬ ಉದ್ದೇಶದಿಂದ ವಯಸ್ಕರ ಶಿಕ್ಷಣ ಪ್ರಾರಂಭವಾಯಿತು. ನಮ್ಮ ಯಜಮಾನರಿಗೆ ತಿಳಿವಳಿಕೆ ಕೊಡುವುದು ನಮ್ಮಲ್ಲಿಯೂ ಅಗತ್ಯವಾಗಿದೆ.

ಅಕ್ಷರ ಪ್ರಚಾರ ಸಮಿತಿ ಇದುವರೆಗೆ ಮಾಡಿರುವ ಕೆಲಸಗಳೂ, ನಡಸಿರುವ ತರಗತಿಗಳೂ, ಪ್ರಕಟಿಸಿರುವ ಪುಸ್ತಕಗಳೂ ದೇಶದ ಏಳಿಗೆಯ ಪ್ರಸ್ಥಾನತ್ರಯ ಎಂದು ಭಾವಿಸುತ್ತೇನೆ.

ಗ್ರಾಮದ ಬೆಳವಣಿಗೆಯ ಕಾರ್ಯವನ್ನು ಮಂತ್ರಿವರ್ಯರು ಕೈಕೊಂಡಿದ್ದಾರೆ. ಅದರ ಒಂದು ಮುಖ್ಯ ಅಂಗವಾಗಿ ವಯಸ್ಕರ ಶಿಕ್ಷಣವನ್ನು ನಡಸುವುದಾಗಿ ಭರವಸೆ ಕೊಟ್ಟಿರುತ್ತಾರೆ. ಇದರಿಂದ ನಮ್ಮ ಕೆಲಸ ಬಹಳ ಸುಸೂತ್ರವಾಗಿ ನಡೆಯುವುದು.

ವಯಸ್ಕರ ಶಾಲೆಯಲ್ಲಿ ಶಿಕ್ಷಣದ ಭಾಗವಾಗಿ ವೃತ್ತಪತ್ರಿಕೆಗಳನ್ನು ಓದುವುದನ್ನೂ, ಪದ್ಯಗಳನ್ನು ಓದುವುದನ್ನೂ ಹೇಳಿಕೊಡಬೇಕು. ಅಕ್ಷರ ಪ್ರಚಾರ ಕನ್ನಡದಲ್ಲೇ ನಡೆಯಬೇಕು. ಕನ್ನಡ ಉಪಕೃತದ ಭಾಷೆ. ಕನ್ನಡ ದೇಶದಲ್ಲಿರುವ ಎಲ್ಲ ಜನರೂ ಕನ್ನಡವನ್ನು ಕಲಿಯುವುದು ಆವಶ್ಯಕ. ಹೊಸಕಾಲ ಆರಂಭವಾಗಿದೆ ಎಂದು ಜನ ಹೇಳುತ್ತಾರೆ. ಹೊಸ ಕಾಲದಲ್ಲಿ ಬಾಳಿ ಜನರ ಸೇವೆ ಸಲ್ಲಿಸುವುದೇ ಸುಖ.

ಸಮ್ಮೇಳನದ ಅಂಗವಾಗಿ ಶ್ರೀ. ಸಿ. ರಂಗಾಚಾರ್ಯರ ಅಧ್ಯಕ್ಷತೆಯಲ್ಲಿ ನಡೆದ ಕೆಲಸಗಾರರ ಸಭೆಯಲ್ಲಿ ವಯಸ್ಕರ ಶಿಕ್ಷಣಕ್ಕೆ ಸಂಬಂಧಪಟ್ಟ ಅನೇಕ ವಿಷಯಗಳು ಚರ್ಚೆಯಾಗಿ ನಿರ್ಣಯಗಳಾದವು. ವಿವರಗಳನ್ನು ಮುಂದೆ ಕೊಡಲಾಗುವುದು.

ಮೈಸೂರು ನಗರದಲ್ಲೂ ಮೈಸೂರು ಮಂಡ್ಯ ಜಿಲ್ಲೆಗಳ ಹಲವು ತಾಲ್ಲೂಕು ಪ್ರದೇಶಗಳಲ್ಲೂ ನಡೆದಿರುವ ಕೆಲಸದ ವಿವರಗಳನ್ನು ಆಯಾ ವ್ಯವಸ್ಥಾಪಕರು ವಿವರಿಸಿದರು. ಮೈಸೂರು ನಗರ ಸಮಿತಿ ಇದುವರೆಗೆ ೩೦೦ಕ್ಕೆ ಮೇಲ್ಪಟ್ಟು ತರಗತಿಗಳನ್ನು ನಡಸಿ, ಸು. ೨,೦೦೦ ಕನ್ನಡಿಗರು, ೪೦ ತಮಿಳರು, ೪೦ ಮಹಿಳೆಯರನ್ನು ಅಕ್ಷರಸ್ಥರನ್ನಾಗಿ ಮಾಡಿದೆ. ಈಗ ೪೫ ತರಗತಿಗಳು ನಡೆಯುತ್ತಿವೆ. ಮೈಸೂರು ಜಿಲ್ಲೆಯ ನಾನಾ ಭಾಗಗಳಲ್ಲಿ ೭೦ ತರಗತಿಗಳು ನಡೆಯುತ್ತಿವೆ. ಮಂಡ್ಯ ಜಿಲ್ಲೆಯಲ್ಲಿ ಮೂರು ತಿಂಗಳ ಹಿಂದೆ ಸಮಿತಿ ರೂಪಗೊಂಡು ಕೆಲಸವನ್ನಾರಂಭಿಸಿದೆ. ಮೈಸೂರು ಜಿಲ್ಲೆಗೆ ೩,೦೦೦ ರೂ.ಗಳೂ ಮಂಡ್ಯ ಜಿಲ್ಲೆಗೆ ೨,೪೦೦ ರೂ.ಗಳೂ ಸ್ಥಳೀಯ ಸಂಸ್ಥೆಗಳಿಂದ ಸಹಾಯ ದೊರೆತಿದೆ.

ಸಂಸ್ಥಾನದ ಇತರ ಕಡೆಗಳಲ್ಲೂ ವಯಸ್ಕರ ಶಿಕ್ಷಣ ನಡೆಯುತ್ತಿದೆ. ಇತರ ಜಿಲ್ಲೆಗಳಲ್ಲೂ ಸಮ್ಮೇಳನಗಳು ನಡೆದು, ಕೆಲಸಗಾರರು ತಮ್ಮ ಕೆಲಸದ ಮುನ್ನಡೆಯನ್ನು ಅಳೆದು ಅದನ್ನು ಮುಂದುವರಿಸುವ ಕಾರ್ಯದಲ್ಲಿ ತೊಡಗುವರೆಂದು ಹಾರೈಸುತ್ತೇವೆ.

## ಭಾವಚಿತ್ರಗಳ ಅನಾವರಣೋತ್ಸವ

೨೮-೩-೧೯೪೩ನೆಯ ಭಾನುವಾರ ಸಂಜೆ ಪರಿಷನ್ಮಂದಿರದಲ್ಲಿ, ಕನ್ನಡ ನಾಡು ನುಡಿಗಳಿಗೆ ಅಮೋಘವಾಗಿ ಸೇವೆ ಸಲ್ಲಿಸಿರುವ ಜ್ಞಾನವೃದ್ಧರೂ, ವಯೋವೃದ್ಧರೂ ಆದ ಶ್ರೀ.ಗಳಾದ ಚ. ವಾಸುದೇವಯ್ಯನವರು, ರಾಜಸೇವಾಸಕ್ತ ಬೆಳ್ಳಾವೆ ವೆಂಕಟನಾರಾಯಣಪ್ಪನವರು ಮತ್ತು ಬೆನಗಲ್ ರಾಮರಾಯರು – ಈ ಮೂವರು ಮಹನೀಯರ ಭಾವಚಿತ್ರಗಳ ಅನಾವರಣೋತ್ಸವ ನಡೆಯಿತು. ಮೈಸೂರು ಸಂಸ್ಥಾನದ ದಿವಾನರಾದ ಪ್ರಧಾನಶಿರೋಮಣಿ ಶ್ರೀ. ಎನ್. ಮಾಧವರಾಯರವರು ಅಧ್ಯಕ್ಷತೆ ವಹಿಸಿದ್ದರು. ಸಭೆಗೆ ಅನೇಕ ಮಂದಿ ಕನ್ನಡ ಅಭಿಮಾನಿಗಳು ದಯಮಾಡಿಸಿದ್ದರು.

ಶ್ರೀ. ಟಿ. ಆರ್. ಜಯರಾಯರಿಂದ ಪ್ರಾರ್ಥನೆ ಆದಮೇಲೆ ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಪ್ರಸಕ್ತ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರರು ಎಲ್ಲರನ್ನೂ ಸ್ವಾಗತಿಸುತ್ತ, ಪರಿಷತ್ತಿನ ಕಾರ್ಯಕಲಾಪಗಳು ಸರಕಾರದ ಮತ್ತು ಮಹಾಜನರ ಪ್ರೋತ್ಸಾಹ ಸಹಕಾರಗಳಿಂದ ನಡೆದುಬರುತ್ತಿದೆಯೆಂದು ಕೃತಜ್ಞತೆಯಿಂದ ಸ್ಮರಿಸಿ, ಸಂಸ್ಥೆಯ ಕೆಲಸಗಳನ್ನು ವಿಸ್ತರಿಸಲು ಈ ಪ್ರೋತ್ಸಾಹ ಸಹಕಾರಗಳು ಇನ್ನೂ ಹೆಚ್ಚಬೇಕಾಗಿದೆಯೆಂದು ಬಿನ್ನವಿಸಿದರು. ಪರಿಷತ್ತಿನ ಸದಸ್ಯಸಂಪತ್ತು ಹೆಚ್ಚಬೇಕು; ಸಂಸ್ಥೆಯ ಸೇವೆ ಜನಕ್ಕೆ ಬೇಕಾಗಿದೆ; ಆ ಸೇವೆ ತಕ್ಕಂತೆ ನಡೆಯಲು ಸರಕಾರದ ಪ್ರತಿನಿಧಿಗಳೂ ಮಹಾಜನರ ಆಗಾಗ್ಗೆ ಪರಿಷತ್ತಿಗೆ ಭೇಟಿಯನ್ನು ದಯಪಾಲಿಸಿ, ಸ್ಥಳದ ಪರಿಚಯವನ್ನೂ ಕೆಲಸದ ಪರಿಚಯವನ್ನೂ ಮಾಡಿಕೊಂಡು ಕೆಲಸ ಮಾಡುವವರಿಗೆ ಪ್ರೋತ್ಸಾಹ ನೀಡುತ್ತ, ಉತ್ಸಾಹ ತುಂಬುತ್ತ, ದ್ರವ್ಯಸಹಾಯವನ್ನು ಕೃಪೆಮಾಡುತ್ತ ನೆರವಾಗಬೇಕೆಂದು ಪ್ರಾರ್ಥಿಸಿದರು.

ಬಳಿಕ ಸಂಸ್ಥೆಯ ಕೃತಜ್ಞತೆಯನ್ನೂ ಗೌರವವನ್ನೂ ಸಲ್ಲಿಸಿಕೊಳ್ಳುತ್ತಿರುವ ಮೂವರು ಮಹನೀಯರ ಹಿರಿಯ ಕನ್ನಡ ಸೇವೆಯನ್ನೂ ವ್ಯಕ್ತಿಮಹತ್ವವನ್ನೂ ಕೊಂಡಾಡಿ, ದಿವಾನರವರನ್ನು ಅಧ್ಯಕ್ಷತೆ ವಹಿಸಿ ಸಭೆಯ ಕಾರ್ಯಕಲಾಪಗಳನ್ನು ನಡಸಿಕೊಡಬೇಕೆಂದು ಪ್ರಾರ್ಥಿಸಿದರು.

ಅನಂತರ ಗಮಕ ವಿದ್ವಾನ್ ಶ್ಲೋಕಸಂಗೀತ ಶ್ರೀ. ಕೆ. ಜಿ. ಸಂಪತ್ಕುಮಾರಾಚಾರ್ಯರ ಇಂಪಾದ ಹಾಡುಗಾರಿಕೆ ನಡೆಯಿತು. ಇವರಿಗೆ ನೆರವಾಗಿ ಶ್ರೀ.ಗಳಾದ ರಾಜಶೇಖರ ಅವರ ಹಾರ್ಮೋನಿಯಂ ವಾದನವೂ ಗೋಡಬೋಲೆ ಅವರ ತಬಲ ವಾದನವೂ ನಡೆಯಿತು.

ಅನಂತರ ಅಧ್ಯಕ್ಷರು ಈ ಕೆಳಗಿನಂತೆ ಮಾತನಾಡಿ ಭಾವಚಿತ್ರಗಳನ್ನು ಅನಾವರಣಮಾಡಿದರು.

### ಅಧ್ಯಕ್ಷರ ಭಾಷಣ

ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರು ಕೆಲವು ದಿನಗಳ ಹಿಂದೆ ನನ್ನನ್ನು ಇಂದಿನ ಉತ್ಸವದಲ್ಲಿ ಅಧ್ಯಕ್ಷತೆ ವಹಿಸಬೇಕೆಂದು ಆಹ್ವಾನಿಸಿದಾಗ ನಾನು ಸಂತೋಷದಿಂದ ಒಪ್ಪಿಕೊಂಡೆನು. ನಮ್ಮ ದೇಶದ ಜ್ಞಾನಪ್ರಸಾರ ಕಾರ್ಯಕ್ರಮದಲ್ಲಿ ಮುಖ್ಯವಾದ ಒಂದು ಭಾಗವನ್ನು ಈ ಪರಿಷತ್ತು ಕೈಗೊಂಡಿದೆ. ಈ ಕೆಲಸಕ್ಕೆ ಆವಶ್ಯಕವಾದ ಸಹಾಯದಲ್ಲಿ ಸಾಧ್ಯವಾದಷ್ಟನ್ನು ಸರಕಾರದವರು ನೀಡುತ್ತಿದಾರೆ.

ಹೀಗಿರುವಲ್ಲಿ ಅವಕಾಶ ದೊರೆತಾಗ ಬಂದು ತಮ್ಮ ಮಧ್ಯೆ ಕೆಲವು ವೇಳೆ ಇದ್ದು ತಾವು ಮಾಡುತ್ತಿರುವ ಸೇವೆಯ ವಿಷಯದಲ್ಲಿ ಸರ್ಕಾರದವರಿಗೆ ಇರುವ ಸಹಾನುಭೂತಿಯನ್ನು ಪ್ರಕಟ ಮಾಡುವುದು ಉಚಿತವೆಂದು ನನ್ನ ಭಾವನೆ. ಇದರ ಮೇಲೆ ಇಂದಿನ ಉತ್ಸವದ ಉದ್ದೇಶವೂ ನನ್ನ ಮನಸ್ಸನ್ನು ಆಕರ್ಷಿಸಿತು. ಪರಿಷತ್ತಿನಂಥ ಒಂದು ಸಂಸ್ಥೆ ಚೆನ್ನಾಗಿ ನಡೆಯಬೇಕಾದರೆ ಹತ್ತಾರು ಜನ ನಿಸ್ಸ್ವಾರ್ಥಬುದ್ಧಿಯಿಂದ ಅದರ ಕೆಲಸದಲ್ಲಿ ತೊಡಗಬೇಕು. ಹೀಗೆ ಬಹುಕಾಲ ದುಡಿದ ಭಾಷಾಸೇವಕರಿಗೆ ಸಾಹಿತ್ಯಮಂದಿರ ಮರ್ಯಾದೆ ಮಾಡಬೇಕೆಂದು ಆಶಿಸುವುದು ಸಹಜವಾಗಿದೆ. ಅಂಥ ಮರ್ಯಾದೆ ಮಾಡುವುದರಲ್ಲಿ ಭಾಗಿಯಾಗಿರಲು ನನಗೆ ವಿಶೇಷ ಆಸಕ್ತಿ ಉಂಟು. ಈ ಕಾರಣದಿಂದಲೂ ನನಗೆ ಈ ದಿನ ತಮ್ಮೊಡನೆ ಸಹಕರಿಸುವುದರಲ್ಲಿ ತುಂಬ ಸಂತೋಷ.

ಈ ಉತ್ಸವಕ್ಕೂ ನಮ್ಮ ಗೌರವಕ್ಕೂ ಕಾರಣರಾದ ಮೂವರು ಮಹನೀಯರೂ ಪರಿಷತ್ತು ಆರಂಭವಾದಾಗಿನಿಂದ ಅದಕ್ಕೆ ಸೇವೆ ಸಲ್ಲಿಸಿದಾರೆ. ಅಷ್ಟೇ ಅಲ್ಲ. ಈ ಸಂಸ್ಥೆ ಆರಂಭವಾಗುವುದಕ್ಕೆ ಕಾರಣರಾದವರಲ್ಲಿ ಇವರು ಸೇರಿದಾರೆಂದು ನಾನು ಕೇಳಿದೇನೆ. ಪರಿಷತ್ತು ಒಂದು ಸಂಸ್ಥೆಯೆಂದು ರೂಪುಗೊಳ್ಳುವುದಕ್ಕೆ ಎಷ್ಟೋ ಮೊದಲು ಇವರು ಕನ್ನಡದ ಸೇವೆಗೆ ಬದ್ಧಕಂಕಣರಾದರು. ಹತ್ತಾರು ವರುಷದ ಇವರ ಕೆಲಸದ ಫಲವಾಗಿ ಜನರಲ್ಲಿ ಉತ್ಸಾಹ ಹುಟ್ಟಿ, ಅಖಿಲ ಕರ್ನಾಟಕಕ್ಕೆ ಒಂದು ಕೇಂದ್ರಸಂಸ್ಥೆ ಇರಬೇಕೆಂಬ ಅಪೇಕ್ಷೆಯಿಂದ ಈ ಪರಿಷತ್ತು ಸ್ಥಾಪಿತವಾಯಿತು. ಇವರಲ್ಲಿ ವೃದ್ಧರಾದ ಶ್ರೀ. ಚೆನ್ನಪಟ್ಟಣದ ವಾಸುದೇವಯ್ಯನವರು ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಪಿತಾಮಹ ಭೀಷ್ಮರಾಗಿದಾರೆ. ಈಗ ಕನ್ನಡದಲ್ಲಿ ಹೆಸರುಗಳಿಸಿರುವ ಹಿರಿವಯಸ್ಸಿನ ಲೇಖಕರೂ ಮೊದಲಾಗಿ ಶ್ರೀ ವಾಸುದೇವಯ್ಯನವರ ಬಾಲಬೋಧೆಯಿಂದ ವಿದ್ಯಾರಂಭಮಾಡಿರಬೇಕು. ಈ ವಿಷಯದಲ್ಲಿ ನಮಗೆ ಆಶ್ಚರ್ಯ ಅನಾವಶ್ಯಕ. ಶ್ರೀಯುತರಿಗೆ ದೇವರ ಕೃಪೆಯಿಂದ ಈಗ ತೊಂಬತ್ತೆರಡನೆಯ ವರುಷ ನಡೆಯುತ್ತಿದೆ. ಇವರ ಗದ್ಯಗ್ರಂಥಗಳು ಅತ್ಯುತ್ತಮ ತರಗತಿಯ ಸಾಹಿತ್ಯವೆಂದು ಕೇಳಿದೇನೆ. ರಾಜಸೇವಾಸಕ್ತ ಶ್ರೀ. ಬೆಳ್ಳಾವೆ ವೆಂಕಟನಾರಾಯಣಪ್ಪನವರು ಅನೇಕ ವರ್ಷ ಪರಿಷತ್ತಿನ ಕಾರ್ಯದರ್ಶಿಗಳಾಗಿಯೂ ಕೋಶರಕ್ಷಕರಾಗಿಯೂ ಕೆಲಸ ಮಾಡಿದವರು. ಆರಂಭದ ಆ ವರ್ಷಗಳಲ್ಲಿ ಇವರೂ ಇವರ ಸಹಉದ್ಯೋಗಿಗಳೂ ಶ್ರದ್ಧೆಯಿಂದ ಪೋಷಿಸಿದ್ದರಿಂದಲೇ ಪರಿಷತ್ತು ಈಗ ಇಷ್ಟರಮಟ್ಟಿನ ಸಂಸ್ಥೆ ಆಗಿದೆ. ಇವರು ಈಗ ಇಂಗ್ಲಿಷ್–ಕನ್ನಡ ನಿಘಂಟಿನ ರಚನೆಯಲ್ಲಿ ತೊಡಗಿದಾರೆ. ಶ್ರೀ. ಬೆನಗಲ್ ರಾಮರಾಯರು ಮಂಗಳೂರು ಪ್ರಾಂತದಲ್ಲಿ ಜನಿಸಿ ಕರ್ನಾಟಕವೆಲ್ಲ ಸಂಸ್ಕೃತಿಯ ದೃಷ್ಟಿಯಿಂದ ಒಟ್ಟುಗೂಡಬೇಕೆಂದು ಬಹುಹಿಂದೆ ಮನಗಂಡವರಲ್ಲಿ ಒಬ್ಬರು. ಆ ಉದ್ದೇಶದಿಂದ ಈ ಪರಿಷತ್ತನ್ನು ಸ್ಥಾಪಿಸುವುದಕ್ಕೆ ಕೈಕೂಡಿಸಿದವರಲ್ಲಿ ಒಬ್ಬರು. ಉದ್ಯೋಗದಿಂದ ವಿಶ್ರಾಂತರಾದ ಮೇಲೆ ಇವರು ಬೆಂಗಳೂರಲ್ಲಿ ನೆಲಸಿ ಪರಿಷತ್ತಿನ ಕಾರ್ಯಕಲಾಪಗಳಲ್ಲಿ ಉತ್ಸಾಹದಿಂದ ಸಹಕರಿಸಿದಾರೆ. ಕೆಲವು ಕಾಲ ಪರಿಷತ್ತಿನ ಮೈಸೂರು ಪ್ರಾಂತಸಮಿತಿ ಮತ್ತು ಕರ್ನಾಟಕ ಏಕೀಕರಣ ಸಮಿತಿಗಳ ಅಧ್ಯಕ್ಷರಾಗಿದ್ದು ಉತ್ಕೃಷ್ಟವಾದ ಸೇವೆಯನ್ನು ಸಲ್ಲಿಸಿದಾರೆ.

ಈ ಮೂವರು ಮಹನೀಯರ ವಿಷಯದಲ್ಲಿ ಕನ್ನಡಿಗರು ಹೆಮ್ಮೆ ಪಡುವುದು ನ್ಯಾಯ. ಇವರ ಭಾವಚಿತ್ರಗಳು ಪರಿಷನ್ಮಂದಿರವನ್ನು ಬೆಳಗಬೇಕೆಂಬುದೂ ಸರಿಯೇ. ತಮ್ಮ ಸೇವೆಯಿಂದ ತಾವೂ ಉನ್ನತಿಯನ್ನೈದಿ ದೇಶವನ್ನೂ ಭಾಷೆಯನ್ನೂ ಉನ್ನತಿಗೆ ತಂದ ಶ್ರೀ.ಗಳಾದ ವಾಸುದೇವಯ್ಯನವರು, ರಾಜಸೇವಾಸಕ್ತ ಬೆಳ್ಳಾವೆ ವೆಂಕಟನಾರಾಯಣಪ್ಪನವರು, ರಾಮರಾಯರು ಇವರನ್ನು ನಾನು ಹೃತ್ಪೂರ್ವಕ ಅಭಿನಂದಿಸುತ್ತೇನೆ. ಇಂಥ ಉತ್ತಮ ಸೇವಕರನ್ನು ಪಡೆದಿರುವ ಭಾಷೆ, ಇವರನ್ನು ನಾಯಕರೆನ್ನುವ ಸಾಹಿತ್ಯ ಸೇವಾದಳ – ಇವು ಅಭಿನಂದನೆಗೆ ಅರ್ಹ. ಈಗ ಈ ಮಹನೀಯರ ಚಿತ್ರಗಳನ್ನು ನಾನು ಬಹು ಸಂತೋಷದಿಂದ ಅನಾವರಣ ಮಾಡುತ್ತೇನೆ.

ಮೂವರೂ ದೈವಕೃಪೆಯಿಂದ ಇನ್ನೂ ಬಹುಕಾಲ ನಮ್ಮೊಂದಿಗೆ ಇದ್ದು ಕಿರಿಯರಿಗೆ ಮಾರ್ಗದರ್ಶಕರಾಗಿ ಅವರನ್ನು ಪ್ರೋತ್ಸಾಹಿಸುತ್ತ ಹರಸುತ್ತ ಇರಲಿ ಎಂದು ನಾನು ಅನನ್ಯಭಾವದಿಂದ ಪ್ರಾರ್ಥಿಸುತ್ತೇನೆ.

ಅಧ್ಯಕ್ಷರಿಗೆ ಹಾರತುರಾಯಿಗಳನ್ನರ್ಪಿಸಲಾಯಿತು.

ಬಳಿಕ ಕೆಳಗಿನಂತೆ ಅಭಿನಂದನ ಪರ ಭಾಷಣಗಳು ನಡೆದುವು.

## ಶ್ರೀ. ಚೆನ್ನಪಟ್ಟಣದ ವಾಸುದೇವಯ್ಯನವರು

(ಶ್ರೀ. ಎಸ್. ಜಿ. ಶಾಸ್ತ್ರಿಗಳಿಂದ)

ಯಥಾ ಚಿತ್ತಂ ತಥಾ ವಾಚಃ ಯಥಾ ವಾಚಃ ತಥಾ ಕ್ರಿಯಾ ||
ಚಿತ್ತೇವಾಚಿ ಕ್ರಿಯಾಯಾಂ ಚ ಸಾಧೂನಾಮೇಕರೂಪತಾ ||೧||
ವದನಂ ಪ್ರಸಾದಸದನಂ
ಸದಯಂ ಹೃದಯಂ ಸುಧಾಮುಚೋ ವಾಚಃ ||
ಕರಣಂ ಪರೋಪಕರಣಂ
ಯೇಷಾಂ ಕೇಷಾಂ ನ ತೇ ವಂದ್ಯಾಃ ||೨||

೧೮೯೮ನೆಯ ಇಸವಿಯಲ್ಲಿ ಒಂದು ದಿನ ನನ್ನ ತಂದೆಯವರು ನನ್ನನ್ನು ಮ|| ರಾ|| ಚ. ವಾಸುದೇವಯ್ಯನವರ ಬಳಿಗೆ ಒಂದು ಕಾಗದದೊಡನೆ ಕಳುಹಿಸಿಕೊಡುವ ಮೊದಲು ನನಗೆ ಬುದ್ಧಿವಾದವನ್ನು ಹೇಳಿದರು ಈ ಪ್ರಕಾರವಾಗಿ– "ವಾಸುದೇವಯ್ಯನವರು ನಿನ್ನನ್ನೇನಾದರೂ ಕೇಳಿದರೆ, ಅವರು ಯಾವ ರೀತಿ ನಿಧಾನವಾಗಿ ಮೃದುವಾಗಿ ಮಾತನ್ನಾಡುವರೋ ಹಾಗೆಯೇ ನೀನೂ ಉತ್ತರವನ್ನು ಮರ್ಯಾದೆಯಿಂದಲೂ, ವಿನಯದಿಂದಲೂ ಕೊಡು." ಮೈಸೂರಿನಲ್ಲಿ ಆಗ್ಗೆ ವಿದ್ಯಾಭ್ಯಾಸದ ಇಲಾಖೆಯಲ್ಲಿ ವಾಸುದೇವಯ್ಯನವರಿಗೆ ನೌಕರಿಯಿತ್ತು. ಆ ದಿನವನ್ನು ನಾನು ಎಂದಿಗೂ ಮರೆಯುವುದಿಲ್ಲ. ಚಿಕ್ಕ ಹುಡುಗನಾಗಿದ್ದಾಗ್ಯೂ ನನ್ನನ್ನು ಆದರದಿಂದ ಬರಮಾಡಿಕೊಂಡು ಮೃದುವಾಕ್ಯಗಳಿಂದ ನನ್ನ ಯೋಗಕ್ಷೇಮವನ್ನು ವಿಚಾರಿಸಿ ನನ್ನ ತಲೆಯನ್ನು ಸವರಿ ಹಸನ್ಮುಖದಿಂದ ನನ್ನ ತಂದೆಯವರ ಕಾಗದಕ್ಕೆ ಉತ್ತರ ಬರೆದುಕೊಟ್ಟರು. ಮಲ್ಲೇಶ್ವರದಲ್ಲಿ ನಿನ್ನೆಯ ದಿನ ನಾನು ಅವರ ದರ್ಶನಕ್ಕೆ ಹೋದಾಗ್ಗೆ ಎಂದಿನಂತೆಯೇ ಸಾದರದಿಂದ ಬರಮಾಡಿಕೊಂಡು ಮಾತನ್ನಾಡಿದರು. ಈಗ ಅವರಿಗೆ ೯೨ ವಯಸ್ಸು. ನೇತ್ರಪಾಟವ ಕರ್ಣಪಾಟವಗಳು ಸ್ವಲ್ಪ ಕುಗ್ಗಿರುವುವು. ದೇಹವು ಸ್ವಲ್ಪ ಕೃಶವಾಗಿರುವುದು. ಆದರೆ ಮಾತುಕತೆಗಳಲ್ಲಿ ಎಂದಿನಂತೆಯೇ ಮೃದುಮಧುರ ಭಾವಗಳು ವಿನಯದೊಡನೆ ತುಂಬಿ ತುಳುಕುತ್ತಿವೆ. ಚಿನ್ನವು ಎಂದೆಂದಿಗೂ ಚಿನ್ನವೆ. ಸದ್ಗುಣಗಳಿಗೆ ಮುಪ್ಪುಂಟೆ?

ವಾಸುದೇವಯ್ಯನವರ ಗುಣಕಥನವನ್ನು ಸಂಕ್ಷೇಪವಾಗಿ ಮಾಡುವ ಸುಯೋಗವು ನನಗೆ ದೊರೆತಿದೆ. ಒಂದು ವಿಧದಲ್ಲಿ ಇದು ಸುಲಭವಾದ ಕಾರ್ಯವಲ್ಲ. ಮತ್ತೊಂದು ವಿಧದಲ್ಲಿ ಅತಿ ಸುಲಭ. ಅವರು ಆಧುನಿಕ ಮಹನೀಯರ ಗುಂಪಿಗೆ ಒಂದು ರೀತಿಯಲ್ಲಿ ಸೇರಿಲ್ಲ. ಅಂದರೆ ಅವರು ಯಾವುದಾದರೂ ಒಂದು ನಿರ್ದಿಷ್ಟವಾದ ಗುಂಪಿಗೆ ಸೇರಿಕೊಂಡು ಯಾವ ಗೊಂದಲಕ್ಕೂ ಸೇರಲಿಲ್ಲ. ಚರ್ಚಾಸ್ಪದ ವಿಚಾರಗಳನ್ನು ಕಡೆಗಣ್ಣಿಂದಲೂ ನೋಡಲಿಲ್ಲ. ಟೊಂಕವನ್ನು ಕಟ್ಟಿಕೊಂಡು ವಾದವಿವಾದಗಳಲ್ಲಿ ಭಾಗವಹಿಸಲಿಲ್ಲ. ಅವರಿಗೆ ಎಲ್ಲರೂ ಬೇಕು, ಸರ್ವರಲ್ಲೂ ಪ್ರೀತಿ, ಅಜಾತಶತ್ರು; ಶಾಂತಮೂರ್ತಿ. ತಮ್ಮ ಶಕ್ತ್ಯನುಸಾರ ಮಕ್ಕಳ ಸೇವೆಯೇ ದೇವರ ಸೇವೆಯೆಂದು ನಂಬಿದಾರೆ. ಮಕ್ಕಳ ವಿಷಯ ಮಾತನ್ನಾಡುವುದರಲ್ಲಿ ಅವರಿಗೆ ಪರಮಾನಂದ. ಅವರ ಮುಖವನ್ನು ನೋಡಿದೊಡನೆಯೇ ಅವರ ಸರಳ ಹೃದಯ ಮತ್ತು ಶಾಂತ ಸ್ವಭಾವವು ಗೋಚರವಾಗುತ್ತಿರುತ್ತವೆ. ಅವರು ಮಾತನ್ನಾಡಿದೊಡನೆ ಕರ್ಣಾನಂದವಾಗುವುದು. ಮಿತಭಾಷಿ. ಇಂಥಾ ಸತ್ಪುರುಷರನ್ನು ನೋಡುವ ಭಾಗ್ಯವು ನಮಗೆ ಒದಗಿದೆಯಲ್ಲಾ! ಎಂದು ನಮಗೆ ಸಂತೋಷ. ತಮ್ಮ ಸುಗುಣಗಳಿಂದ ಎಲ್ಲರನ್ನೂ ಜಯಿಸಿಬಿಡುವ ಒಂದು ಅನಿರ್ವಾಚ್ಯವಾದ ಶಕ್ತಿ ಅವರಲ್ಲಿದೆ.

ಕನ್ನಡ ಭಾಷೆಯನ್ನು ಆಧುನಿಕ ಸಮಯೋಚಿತವಾಗಿ ಬೆಳಸಿದವರ ಸಮೂಹದಲ್ಲಿ ಉಚ್ಚಸ್ಥಾನವನ್ನು ವಾಸುದೇವಯ್ಯನವರು ಪಡೆದಿದಾರೆ. ವಿಷಯ ಗ್ರಹಣವನ್ನು ಸಂಪೂರ್ಣವಾಗಿ ಮಾಡಿ ಅಪ್ರತಿಮ ಶೈಲಿಯಲ್ಲಿ ಅವರು ರಚಿಸಿರುವ 'ಆರ್ಯಕೀರ್ತಿ'ಯ ಎರಡು ಭಾಗಗಳು ಮತ್ತು 'ಭೀಷ್ಮ ಚರಿತ್ರೆ' ಇವುಗಳೇ ಉದಾಹರಣೆಗಳು. ಈ ಪುಸ್ತಕಗಳನ್ನು ಆಮೂಲಾಗ್ರವಾಗಿ ಅನೇಕಾವರ್ತಿ ಓದಿದ ಪಂಡಿತರೊಬ್ಬರು ವಾಸುದೇವಯ್ಯನವರನ್ನು 'ವಶ್ಯವಾಕ್' ಎಂಬದಾಗಿ ಹೇಳಿದರು. ಐವತ್ತು ವರ್ಷಗಳ ಹಿಂದೆ 'ಸರಳಾರೋಗ್ಯ'ವೆಂಬ ಒಳ್ಳೆಯ ಪುಸ್ತಕವನ್ನು ಬರೆದರು.

ಕನ್ನಡ ನಾಡಿನಲ್ಲಿ ಪ್ರತಿಯೊಬ್ಬ ಕನ್ನಡಿಗನ ಮನೆಯಲ್ಲೂ ವಾಸುದೇವಯ್ಯನವರ ಹೆಸರು ಶಾಶ್ವತವಾಗಿರುವುದು ಅವರ ಕನ್ನಡ ಬಾಲಬೋಧೆಯಿಂದ. ಇದನ್ನು ಬರೆದು ಅರವತ್ತು ವರ್ಷಗಳ ಮೇಲಾಯಿತು. "ನಾನು ಓದಿದ ಬಾಲಬೋಧೆಯನ್ನು ನನ್ನ ಮರಿಮಗುವೂ ಓದುತ್ತಿದೆ"ಯೆಂದು ಹಿಗ್ಗಿದ ಮಹನೀಯರನೇಕರನ್ನು ನಾನು ನೋಡಿದೇನೆ. ನಾನು ನಿನ್ನೆಯ ದಿನ ವಾಸುದೇವಯ್ಯನವರ ದರ್ಶನ ಮಾಡಿದಾಗಲೂ "ಮಕ್ಕಳಿಗೆ ಸುಲಭವಾಗಿ ತಿಳಿಯುವ ನೀತಿ ಪುಸ್ತಕಗಳನ್ನು ಬರೆಯಬೇಕು ನೀವು" ಎಂದು ನನಗೆ ಹೇಳಿದರು. ಅವರಿಗೆ ಸದಾ

ಕಾಲವಲ್ಲೂ ಮಕ್ಕಳ ಯೋಚನೆಯೇ. ಮಕ್ಕಳಿಗೋಸ್ಕರ ತಮ್ಮ ತನುಮನ ಧನಗಳನ್ನು ಧಾರೆ ಎರೆದು ತನ್ಮೂಲಕ ಭಗವತ್ಸೇವೆಯನ್ನು ಮಾಡಿ ತಮ್ಮ ಪೂಜಾ ಫಲವನ್ನು ಕಣ್ಣಾರ ನೋಡಿ ಆನಂದಪಟ್ಟು ಕೃತಾರ್ಥರಾಗಿ ತೃಪ್ತರಾಗಿರುವ ಮಹಾನುಭಾವರಿವರು. ಸ್ವರ್ಗದ ಗುಂಪಿಗೆ ಸೇರಿ ಅಲ್ಲಿ ಉನ್ನತಸ್ಥಾನವನ್ನು ಪಡೆದು ಸರ್ವರ ಮನ್ನಣೆಗೂ ಪಾತ್ರರಾಗಿರುವರು ನಮ್ಮ ವಾಸುದೇವಯ್ಯನವರು. ಎಲ್ಲಿದ್ದರೂ ಅವರ ಸುತ್ತ ಮಕ್ಕಳು; ಆನಂದಭರಿತನಾದ ಅವರ ಸೌಮ್ಯ ಮುಖ. ಇದು ಪರಮಾತ್ಮನ ಒಂದು ಲೀಲೆಯ ದೃಶ್ಯ. ಈ ಮಹನೀಯರು ಸತ್ಪುರುಷರಾಗಿ ಬಾಳಿ, ಇತರರಿಗಾಗಿ ಜೀವನವನ್ನು ಮಧುರಗೊಳಿಸಿರುವರು. (He was a God's Good Man and he sweetened life for others.)

ರಾಜಸೇವಾಸಕ್ತ ಶ್ರೀ. ಬೆಳ್ಳಾವೆ ವೆಂಕಟನಾರಾಯಣಪ್ಪನವರ ವಿಷಯವಾಗಿ ಶ್ರೀ. ತಿ. ತಾತಾಚಾರ್ಯಶರ್ಮರೂ, ಶ್ರೀ. ಬೆನಗಲ್ ರಾಮರಾಯರ ವಿಷಯವಾಗಿ ಶ್ರೀ. ಡಿ. ಕೆ. ಭಾರದ್ವಾಜರವರೂ ಮಾಡಿದ ಭಾಷಣಗಳ ಸಾರಾಂಶವನ್ನು ಮುಂದಿನ ವಾರ ಕೊಡಲಾಗುವುದು.

ಶ್ರೀ. ಸಿ. ಕೆ. ವೆಂಕಟರಾಮಯ್ಯನವರಿಂದ ಅಧ್ಯಕ್ಷರಿಗೂ, ಭಾಷಣಕಾರರಿಗೂ, ಸಂಗೀತಗಾರರಿಗೂ ಧನ್ಯವಾದ ಸಮರ್ಪಣೆಯಾಗಿ ಉತ್ಸವ ಮುಗಿಯಿತು.

ಭಾವಚಿತ್ರಗಳನ್ನು ರಾಜಸೇವಾಪ್ರಸಕ್ತ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರರೂ ಶ್ರೀ. ಸಿ. ಕೆ. ವೆಂಕಟರಾಮಯ್ಯನವರೂ ಪರಿಷತ್ತಿಗೆ ದಾನ ಮಾಡಿ ಉಪಕಾರ ಮಾಡಿದ್ದಾರೆ.

## ಪರಿಷತ್ತಿನ ಸುದ್ದಿ

### ಪರಿಷತ್ತಿನ ಸದಸ್ಯರ ಬೆಳವಣಿಗೆ

(ತಾ. ೨೭-೩-೪೩ರಿಂದ ೧-೪-೪೩ರ ವರೆಗೆ)

**ಸಹಾಯಕ ಸದಸ್ಯರು (೧೦೦ ರೂ.):** ಶ್ರೀ.ಗಳಾದ ೧. ಎಚ್. ಎಸ್. ಗೋವಿಂದರಾಯರು, ಬಿ.ಎ. ಸ್ಪೆಷಲ್ ಆಫೀಸರು, ಫಿಲೇಚರ್ ಎಕ್ಸ್‌ಪ್ಯಾನ್ಷನ್ ಸ್ಕೀಮ್, ಕಾಂತರಾಜ ರಸ್ತೆ, ಮೈಸೂರು. ೨. ಎನ್. ಸುಬ್ಬರಾಯರು, ಬಿ.ಎ., ಸಿ.ಇ. ನಿವೃತ್ತ ಸೂಪರಿಂಟೆಂಡಿಂಗ್ ಇಂಜನಿಯರು, ಬಸವನಗುಡಿ.

**ಸಾಮಾನ್ಯ ಸದಸ್ಯರು (೬ ರೂ.):** ಶ್ರೀ. ಕೆ. ವಿ. ಕೃಷ್ಣ ಭಟ್ಟ, ಬಿ.ಎ., ಬಿ.ಓ.ಎಲ್. ಕನ್ನಡ ಅಧ್ಯಾಪಕರು, ಗೌರ್ನಮೆಂಟ್ ಕಾಲೇಜು, ಮಂಗಳೂರು.

### ಮಹಿಳಾಶಾಖೆ

ಶ್ರೀ. ಸೌ. ಇಂದಿರಾಬಾಯಿ ವಾಸುದೇವಮೂರ್ತಿ ಇವರ ಅಧ್ಯಕ್ಷತೆಯಲ್ಲಿ ೨೭-೩-೧೯೪೩ನೆಯ ಶನಿವಾರ ಸಂಜೆ ಶ್ರೀ. ಎಂ. ಪುಟ್ಟತಾಯಮ್ಮನವರು, ಶ್ರೀ. ಎಂ. ಎಸ್. ಶಾರದಮ್ಮನವರು ನಾಟಕ ವಾಚನ ಮಾಡಿದರು.

'ಸಾವಿನ ಸಮಸ್ಯೆ'ಯಿಂದ ಹಣ ಸಂಪಾದನೆ ಮಾಡಲು ಗೌರಿ ರಾಮಕೃಷ್ಣ ಹೊಸ ಉಪಾಯವನ್ನು ಯೋಚಿಸುವ ಭಾಗವನ್ನೂ, 'ಯಶೋಧರಾ' ನಾಟಕದಿಂದ ಬುದ್ಧ ಯಶೋಧರಾ ಸಂಭಾಷಣೆಯನ್ನೂ, 'ತಾಳೀಕಟ್ಟೋಕ್ ಕೂಲೀನೇ' ಇದರಿಂದ ನಾಗತ್ತೆ ಪಾತುನ ತವರು ಮನೆಗೆ ಬಿಡುವ ವರೆಗೆ ನಡೆದ ಮಾತುಕತೆಯನ್ನೂ, 'ಜಲಗಾರ' ನಾಟಕದಿಂದ ಶಿವಸಾಕ್ಷಾತ್ಕಾರ ಭಾಗವನ್ನೂ— ಈ ನಾಟಕಗಳ ಸೊಗಸು ಸಭಿಕರ ಮನಸ್ಸಿಗೆ ತಿಳಿಯುವಂತೆ ಶ್ರೀ ಪುಟ್ಟತಾಯಮ್ಮನವರೂ, ಶ್ರೀ. ಶಾರದಮ್ಮನವರೂ ಭಾವಪೂರ್ಣವಾಗಿ ಬಹಳ ಕುಶಲತೆಯಿಂದ ವಾಚನ ಮಾಡಿದರು.

ಅಧ್ಯಕ್ಷರು ಕಾವ್ಯವಾಚನ ಮಾಡಿದವರಿಬ್ಬರಿಗೂ ಮೆಚ್ಚಿಕೆಯ ಮಾತುಗಳನ್ನು ತಿಳಿಸಿ, "ನಾವೇ ಕಾವ್ಯ ಓದುವುದಕ್ಕಿಂತಲೂ ಬುದ್ಧಿವಂತರಿಂದ ಕಾವ್ಯವನ್ನು ಓದಿಸಿ ಕೇಳುವುದು ಹಿತಕರ, ಹೆಚ್ಚು ಪ್ರಯೋಜನಕರ. ಹಿಂದೆ ನಮ್ಮಲ್ಲಿ ಈ ಪದ್ಧತಿ ಬಹಳ ಆಚರಣೆಯಲ್ಲಿತ್ತು. ಈಗ ಈ ಅಭ್ಯಾಸ ಕ್ಷೀಣಿಸಿದೆ. ನಾವು ಈ ವಾಡಿಕೆಯನ್ನು ಕೈ ಬಿಡದೆ ಪದೇ ಪದೇ ಉತ್ತಮ ಕಾವ್ಯಗಳನ್ನು ಉತ್ತಮ ವಾಚಕರಿಂದ ಓದಿಸಿ ಕೇಳಿ ನಮ್ಮ ಜ್ಞಾನ, ಆನಂದವನ್ನು ಬೆಳೆಯಿಸಿಕೊಳ್ಳಬೇಕು" ಎಂದು ಹೇಳಿದರು.

### ಮೈಸೂರು ಪ್ರಾಂತಸಮಿತಿ

೩೧-೩-೧೯೪೩ನೆಯ ಬುಧವಾರ ಸಂಜೆ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಬೆಂಗಳೂರಿನ ಪ್ರಸಿದ್ಧ ಅಡ್ವೋಕೇಟರೂ, ಪೌರ ಸಭೆಯ ಸದಸ್ಯರೂ ಆದ ಶ್ರೀಮಾನ್ ಎಂ. ಎ. ಗೋಪಾಲಸ್ವಾಮಿ ಅಯ್ಯಂಗಾರ್, ಎಂ.ಎ., ಎಲ್‌ಎಲ್.ಬಿ. ಇವರು "ಮೈಸೂರಿನ ಸ್ಥಳೀಯ ಸರಕಾರ ಪದ್ಧತಿ" ಎಂಬ ವಿಷಯವಾಗಿ ವಿಚಾರಪೂರ್ಣವಾದ ಉಪನ್ಯಾಸ ಕೊಟ್ಟರು. (ಉಪನ್ಯಾಸದ ಸಾರಾಂಶವನ್ನು ಮುಂದಿನ ವಾರ ಕೊಡಲಾಗುವುದು.) ಪೌರ ಸಭೆಯ ಅಧ್ಯಕ್ಷರಾದ ಶ್ರೀಮಾನ್ ವಿ. ಕೆ. ಗೋವಿಂದರಾಜುಲು, ಬಿ.ಎ., ಬಿ.ಎಲ್. ಇವರು ಅಧ್ಯಕ್ಷತೆ ವಹಿಸಿದ್ದರು.

ಅಧ್ಯಕ್ಷರು ಪೌರ ಸಭೆಗಳು ಮುಂತಾದ ಸ್ಥಳೀಯ ಸಂಸ್ಥೆಗಳ ಸ್ಥಾಪನೆ, ಅವುಗಳ ಕಾರ್ಯಕಲಾಪಗಳು ಮುಂದೆ ಜವಾಬ್ದಾರಿ ಸರ್ಕಾರವನ್ನು ಪಡೆಯಲು ಸಾಧಕವೆಂದು ಹೇಳಿ, ಪೌರ ಸಭೆಗಳ ಕೆಲಸ ಯಾವುದು ನಡೆಯಬೇಕಾದರೂ ಸರಕಾರದವರ ಸೌಹಾರ್ದ, ಸಹಾಯ ಇಲ್ಲದೆ ನಡೆಯಲಾರದೆಂದೂ, ಪೌರ ಸಭೆಗೆ ಸದಸ್ಯರನ್ನು ಚುನಾಯಿಸಿ ಕಳಿಸಿಕೊಟ್ಟರೆ ತಮ್ಮ ಕರ್ತವ್ಯ ಅಲ್ಲಿಗೇ ಪೂರೈಸಿತೆಂದು ಮಹಾಜನರು ಸುಮ್ಮನಾಗದೆ, ಪೌರ ಸಭೆಯ ಕಾರ್ಯಕಲಾಪಗಳಲ್ಲಿ ಹೆಚ್ಚು ಆಸಕ್ತಿ ವಹಿಸಿ ಅದರ ಕೆಲಸ ತಮ್ಮದೆಂದು ಭಾವಿಸಿ, ಅದರಿಂದ ಹೆಚ್ಚಿನ ಪ್ರಯೋಜನ ಪಡೆದುಕೊಳ್ಳಬೇಕೆಂದೂ ಮನದಟ್ಟಾಗುವಂತೆ ವಿವರಿಸಿದರು.

ಮೈಸೂರು ಪ್ರಾಂತ ಸಮಿತಿ ಕಾರ್ಯದರ್ಶಿಗಳಾದ ಶ್ರೀ. ಕೆ. ಅಂಬ್ರೋಸ್ ಆನಂದ ಅವರಿಂದ ವಂದನಾರ್ಪಣೆಯಾದಮೇಲೆ ಸಭೆ ಮುಕ್ತಾಯವಾಯಿತು.

**೨-೪-೪೩ನೆಯ ಶುಕ್ರವಾರ ಸಂಜೆ ೬-೩೦ಕ್ಕೆ** ಪರಿಷನ್ಮಂದಿರದಲ್ಲಿ ಶ್ರೀ. ದೇವುಡು ನರಸಿಂಹಶಾಸ್ತ್ರಿಗಳು, ಎಂ.ಎ., ಅವರು "ಮಹಾಭಾರತ" ಎಂಬ ವಿಷಯವಾಗಿ ಉಪನ್ಯಾಸ ಮಾಡುವರು.

## ಕಂಬನಿ

### ದಿವಂಗತ ಟಿ. ಆರ್. ರಾಮರಾಯರು

ಪರಿಷತ್ತಿನ ಆಜೀವಸದಸ್ಯರೂ ಉಸ್ಮಾನಿಯಾ ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಪ್ರೊಫೆಸರೂ ಆಗಿದ್ದ ಶ್ರೀ. ಟಿ. ಆರ್. ರಾಮರಾಯರು ೧೪-೩-೧೯೪೩ನೆಯ ಭಾನುವಾರ ರಾತ್ರಿ ನ್ಯೂಮೋನಿಯಾ ಬೇನೆಯಿಂದ ತಮ್ಮ ೭೪ನೆಯ ವಯಸ್ಸಿನಲ್ಲಿ ಕಾಲವಾದರೆಂದು ತಿಳಿಸಲು ವ್ಯಥೆಯಾಗುತ್ತದೆ.

ದಿವಂಗತರು ಹೈದರಾಬಾದು ಕರ್ನಾಟಕ ಪ್ರದೇಶದಲ್ಲಿ ಕನ್ನಡದ ಯೋಗಕ್ಷೇಮವನ್ನು ಬಹಳ ಶ್ರದ್ಧೆಯಿಂದ ನೋಡಿಕೊಳ್ಳುತ್ತಿದ್ದ ಹಿರಿಯರು. ಪರಿಷತ್ತಿನ ಕಾರ್ಯಕಲಾಪಗಳಲ್ಲಿ, ಮುಖ್ಯವಾಗಿ ಅಕ್ಷರ ಸಂಸ್ಕರಣ ಸಮಿತಿಯ ಕಾರ್ಯದಲ್ಲಿ (೧೯೩೬) ತುಂಬಾ ನೆರವಾಗಿದ್ದವರು. ಶ್ರೀ.ಗಳಾದ ಡಿ. ಕೆ. ಭೀಮಸೇನರಾಯರು, ಮಾನ್ವಿ ನರಸಿಂಗರಾಯರು ಮುಂತಾಗಿ ಹಲವರು ಸಾಹಿತಿಗಳೂ ವಿದ್ವಾಂಸರೂ ಶ್ರೀ. ರಾಮರಾಯರ ಶಿಷ್ಯವರ್ಗಕ್ಕೆ ಸೇರಿದವರು.

ಕೆಲವು ವರ್ಷಗಳ ಹಿಂದೆ ಅಧ್ಯಾಪಕ ಪದವಿಯಿಂದ ಅವರು ನಿವೃತ್ತರಾಗಿ, ಆಮೇಲೆ ಕನ್ನಡದ ಹಿತಚಿಂತನೆಗೂ ನಾನಾಬಗೆಯ ದಾನ ಧರ್ಮ ಕಾರ್ಯಗಳಿಗೂ ಮನಸ್ಸು ಕೊಟ್ಟು ಶಾಂತಿ ತುಷ್ಟಿಗಳಿಂದ ಬದುಕು ನಡಸುತ್ತಿದ್ದರು.

ಇವರ ಮರಣದಿಂದ ನಾಡಿಗೆ ದೊಡ್ಡ ನಷ್ಟವಾಗಿದೆ. ಇವರ ಆತ್ಮಕ್ಕೆ ಸದ್ಗತಿಯುಂಟಾಗಲಿ.

೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧೨
ಬಿಡಿ ಪತ್ರಿಕೆ: ೬ ಕಾಸು




ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿ ಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೨೮

ಬೆಂಗಳೂರು: ಶುಕ್ರವಾರ, ಏಪ್ರಿಲ್ ೯, ೧೯೪೩

# ಕನ್ನಡ ಸಾಹಿತ್ಯ ಪರಿಷತ್

(ಮೈಸೂರು ಪ್ರಾಂತಸಮಿತಿ)

ಬೆಂಗಳೂರು

# ವಸಂತ ಸಾಹಿತ್ಯೋತ್ಸವ—೧೯೪೩

(೧೯೪೩ನೆಯ ಏಪ್ರಿಲ್ ೧೭-೧೯)

೧೭-೪-೧೯೪೩ನೆಯ ಶನಿವಾರ ಬೆಳಗ್ಗೆ ೯-೩೦ಕ್ಕೆ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ

ಮೈಸೂರು ಸಂಸ್ಥಾನದ
ಆರೋಗ್ಯಶಾಖೆಯ ಮತ್ತು ಸ್ಥಳೀಯ ಸಂಸ್ಥೆಗಳ ಮಂತ್ರಿಗಳಾದ
**ಶ್ರೀಮಾನ್ ಎಚ್. ಬಿ. ಗುಂಡಪ್ಪಗೌಡ, ಬಿ.ಎ., ಬಿ.ಎಲ್. ಅವರಿಂದ**

**ಪ್ರಾರಂಭೋತ್ಸವ**

[ಉಪನ್ಯಾಸಾದಿ ಕಾರ್ಯಕ್ರಮವನ್ನು ತಾತ್ಕಾಲಿಕವಾಗಿ ಹೀಗೆ ನಿರ್ಧರಿಸಿದೆ]

## ಏಪ್ರಿಲ್ ೧೭ನೆಯ ಶನಿವಾರ

ಬೆಳಗ್ಗೆ ೯-೩೦ ಗಂಟೆಗೆ
(೧) ಪ್ರಾರ್ಥನೆ
(೨) ಸ್ವಾಗತ ಭಾಷಣ: ರಾಜಸೇವಾಪ್ರಸಕ್ತ
ಶ್ರೀಮಾನ್ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು
(೩) ಪ್ರಾರಂಭ ಭಾಷಣ: ಶ್ರೀಮಾನ್ ಎಚ್. ಬಿ. ಗುಂಡಪ್ಪಗೌಡ ಅವರು
(೪) ಸಂಗೀತ: ಶ್ರೀಮತಿ ಕೆ. ಗೋಮತಿ ದೇವಿಯವರು
(೫) ಧನ್ಯವಾದ: ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯನವರು

ಮಧ್ಯಾಹ್ನ ೩ರಿಂದ
೧. **ಮಹಿಳಾಗೋಷ್ಠಿ** (ಮಹಿಳೆಯರಿಗೆ ಮಾತ್ರ)
ಅಧ್ಯಕ್ಷರು: ಶ್ರೀಮತಿ ಶಾಂತಕ್ಕಾ ಮಳೀಮಠ ಅವರು, ಧಾರವಾಡ
೨. **ಪುಸ್ತಕಭಂಡಾರ ವಿಚಾರ ಗೋಷ್ಠಿ**

ಸಂಜೆ ೬-೩೦
ಸಂಗೀತ: ಸಂಗೀತವಿದುಷಿ ಶ್ರೀಮತಿ ಜಿ. ಚೆನ್ನಮ್ಮನವರು

## ಏಪ್ರಿಲ್ ೧೮ನೆಯ ಭಾನುವಾರ

ಬೆಳಗ್ಗೆ ೯-೩೦ ರಿಂದ
(೧) ಉಪನ್ಯಾಸ (ಪ್ರಾಣಿಶಾಸ್ತ್ರವೂ ಮಾನವ ಜೀವನವೂ):
ಶ್ರೀಮಾನ್ ಎ. ನಾರಾಯಣರಾಯರು
(೨) ಕಾವ್ಯವಾಚನ.
(೩) ಉಪನ್ಯಾಸ: ಶ್ರೀಮಾನ್. ಜಿ. ಎಸ್. ಕೃಷ್ಣಮೂರ್ತಿಗಳು

ಸಂಜೆ ೫-೩೦ ರಿಂದ
(೧) ಭಾರತ ವಾಚನ: ಗಮಕವಿದುಷಿ ಶ್ರೀಮತಿ ಲಲಿತಮ್ಮನವರು
(೨) ಉಪನ್ಯಾಸ.
(೩) ನಾಟಕ.

## ಏಪ್ರಿಲ್ ೧೯ನೆಯ ಸೋಮವಾರ

ಬೆಳಗ್ಗೆ ೯-೩೦ ರಿಂದ
(೧) ಕಾವ್ಯವಾಚನ.
(೨) ಉಪನ್ಯಾಸ.

ಸಂಜೆ ೫-೩೦ ರಿಂದ
(೧) ಭಾರತವಾಚನ (ದೂರ್ವಾಸಾತಿಥ್ಯ):
ಗಮಕ ವಿದ್ವಾನ್ ಶ್ಲೋಕ ಸಂಗೀತ
ಶ್ರೀಮಾನ್ ಕೆ. ಜಿ. ಸಂಪತ್ಕುಮಾರಾಚಾರ್ಯರು
(೨) ಉಪನ್ಯಾಸ (ಭಗವದ್ಗೀತೆಯ ಭವ್ಯತೆ):
ಶ್ರೀಮಾನ್ ಹನುಮಂತರಾವ್ ಮಾಂಜರೇಕರ ಅವರು
(೩) ಉಪಸಂಹಾರ.

## ಸೂಚನೆ

೧. ಉತ್ಸವ ಕಾರ್ಯಕ್ರಮಗಳಿಗೆ ಉಚಿತ ಪ್ರವೇಶ ಪತ್ರಗಳ ಮೂಲಕ ಪ್ರವೇಶ.

೨. ಪರಿಷತ್ತಿನ ಸದಸ್ಯರೂ ಅಭಿಮಾನಿಗಳೂ ೧೬-೪-೧೯೪೩ನೆಯ ಶುಕ್ರವಾರದೊಳಗಾಗಿ ಪ್ರವೇಶ ಪತ್ರಗಳನ್ನು ಪರಿಷನ್ಮಂದಿರದಲ್ಲಿ ಪಡೆಯಬೇಕಾಗಿ ಪ್ರಾರ್ಥನೆ.

೩. ಸ್ಥಳ ಸಂಕೋಚದಿಂದ ಮಹಾಜನರಿಗಾಗಿ ಮಿತ ಸಂಖ್ಯೆಯಲ್ಲಿ ಮಾತ್ರ ಪ್ರವೇಶ ದೊರಕಿಸಿಕೊಡಬಹುದಾಗಿದೆ. ಮಹಾಜನರು ೧೪-೪-೧೯೪೩ನೆಯ ಬುಧವಾರದೊಳಗಾಗಿ ಪ್ರವೇಶ ಪತ್ರಗಳನ್ನು ಪಡೆಯಬೇಕಾಗಿ ಪ್ರಾರ್ಥನೆ.

# ಕನ್ನಡ ನುಡಿ

ಶುಕ್ರವಾರ, ಏಪ್ರಿಲ್ ೯, ೧೯೪೩

## ಅಭಿನಂದನೆ

### ಇಬ್ಬರು ಹೊಸ ಮಂತ್ರಿಗಳು

ಮೈಸೂರು ಸಂಸ್ಥಾನದ ಮಂತ್ರಿಮಂಡಲದಲ್ಲಿ, ರಾಜಮಂತ್ರ ಪ್ರವೀಣ ಶ್ರೀ. ಎ. ವಿ. ರಾಮನಾಥನ್ ಅವರು ಭರತಪುರ ಸಂಸ್ಥಾನದ ದಿವಾನರಾಗಿ ನೇಮಕವಾಗಿ ತೆರಳಿದ ಪ್ರಯುಕ್ತ ತೆರಪಾದ ಸ್ಥಾನಕ್ಕೆ, ಶ್ರೀ. ಎಂ.ಎ. ಶ್ರೀನಿವಾಸನ್, ಎಂ.ಎ. ಅವರನ್ನು ಶ್ರೀಮನ್ಮಹಾರಾಜರವರು ನೇಮಿಸಿರುತ್ತಾರೆ. ಈಗ ನಡೆಯುತ್ತಿರುವ ಯುದ್ಧಕಾರಣದಿಂದ ಆಹಾರ ಪದಾರ್ಥಗಳ ಪೂರಯಿಕೆಗೆ ಸಂಬಂಧಪಟ್ಟ ಕೆಲಸಗಳು ಹೆಚ್ಚಾಗಿರುವ ಪ್ರಯುಕ್ತ, ಇದುವರೆಗೆ ಮಂತ್ರಿಮಂಡಲದಲ್ಲಿದ್ದ ನಾಲ್ಕು ಮಂತ್ರಿ ಸ್ಥಾನಗಳ ಜೊತೆಗೆ ಐದನೆಯ ಸ್ಥಾನವನ್ನು ನಿರ್ಮಿಸಿ, ಆ ಸ್ಥಾನಕ್ಕೆ ಸದ್ಯಕ್ಕೆ ಒಂದು ವರ್ಷದ ಮಟ್ಟಿಗೆಂದು ಶ್ರೀ.ಜೆ. ಅಪ್ಪಾಜಿಗೌಡ, ಎಂ.ಎ. ಅವರನ್ನು ಶ್ರೀಮನ್ಮಹಾರಾಜರವರು ನೇಮಿಸಿರುತ್ತಾರೆ.

ಈ ಇಬ್ಬರು ಹೊಸ ಮಂತ್ರಿಗಳನ್ನೂ ನಾವು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇವೆ. ಕನ್ನಡದ ಏಳಿಗೆಯೇ ಗುರಿಯಾಗಿರುವ ಪರಿಷತ್ತಿನ ಚಟುವಟಿಕೆಗಳಿಗೆ ಇತರ ಮಂತ್ರಿವರ್ಯರಂತೆಯೇ ಈ ಮಹನೀಯರಿಂದಲೂ ಪ್ರೋತ್ಸಾಹ ಬೆಂಬಲಗಳು ಲಭಿಸುವುವೆಂದು ಪರಿಷತ್ತು ಹಾರೈಸುತ್ತದೆ.

### ಇಬ್ಬರು ಕನ್ನಡ ಅಸಿಸ್ಟೆಂಟ್ ಪ್ರೊಫೆಸರುಗಳು

ಮಾರ್ಚಿ ತಿಂಗಳ ಕೊನೆಯ ವಾರದಲ್ಲಿ, ಮೈಸೂರು ಸರಕಾರದವರು ವಿಶ್ವವಿದ್ಯಾನಿಲಯದಲ್ಲಿ ಕನ್ನಡದ ಸ್ಥಾನಮಾನಗಳು ಸ್ವಲ್ಪ ಉತ್ತಮಗೊಳ್ಳುವುದಕ್ಕೆ ಆಸ್ಪದಕೊಡುವ ನಿರೂಪವೊಂದನ್ನು ಹೊರಡಿಸಿ ಕನ್ನಡಿಗರ ಕೃತಜ್ಞತೆಗೂ ಸಂತೋಷಕ್ಕೂ ಕಾರಣ ಮಾಡಿಕೊಟ್ಟು ಅಭಿನಂದನೀಯರಾಗಿದ್ದಾರೆ. ಹೀಗೆಯೇ ಸರಕಾರದ ಮುಂದಿರುವ ಕನ್ನಡ ಅಧ್ಯಾಪಕ ವರ್ಗದ ಸ್ಥಾನಮಾನವನ್ನು ಉತ್ತಮಗೊಳಿಸುವ ಇನ್ನೊಂದು ಪ್ರಶ್ನೆಗೆ ಸಂಬಂಧಿಸಿದ ನಿರೂಪವನ್ನೂ ನಾವು ಅತ್ಯಾಸಕ್ತಿಯಿಂದ ನಿರೀಕ್ಷಿಸುತ್ತಿದ್ದೇವೆ.

ಹೊಸದಾಗಿ ಕನ್ನಡ ಅಸಿಸ್ಟೆಂಟ್ ಪ್ರೊಫೆಸರುಗಳಾಗಿ ನೇಮಕವಾಗಿರುವ ಶ್ರೀ. ವಿ. ಸೀತಾರಾಮಯ್ಯ, ಎಂ ಎ. ಅವರನ್ನೂ ಶ್ರೀ. ತೀ. ನಂ. ಶ್ರೀಕಂಠಯ್ಯ, ಎಂ.ಎ. ಅವರನ್ನೂ ನಾವು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇವೆ.

ಈ ಸಂದರ್ಭದಲ್ಲಿ ಪರಿಷತ್ತು ವಿದ್ಯಾ ಮಂತ್ರಿಗಳಲ್ಲಿಯೂ ವಿಶ್ವವಿದ್ಯಾನಿಲಯದ ಸ್ಥಾನಪತಿಗಳಲ್ಲಿಯೂ ನಿಯೋಗಹೋಗಿದ್ದ ಅಂಶವನ್ನು 'ನುಡಿ'ಯ ವಾಚಕರಿಗೆ ನೆನಪು ಕೊಡಲು ಬಯಸುತ್ತೇವೆ. ಪರಿಷತ್ತಿಗೆ ಬೆಂಬಲವಾಗಿ ಸೆನೆಟ್ ಸಭೆಯ ಮಾನ್ಯಸದಸ್ಯರೂ ಸಾರ್ವಜನಿಕ ಮಾನ್ಯಮುಖಂಡರೂ ಕನ್ನಡ ಅಧ್ಯಾಪಕ ವರ್ಗದ ಸ್ಥಾನಮಾನಗಳು ಉತ್ತಮಗೊಳ್ಳುವಂತೆ ಈ ಮುಖ್ಯ ಪ್ರಶ್ನೆಗಳನ್ನು ಮುಂದೊತ್ತಿ ಉಪಕಾರ ಮಾಡಿದುದಕ್ಕಾಗಿ ಪರಿಷತ್ತು ಕೃತಜ್ಞವಾಗಿದೆ.

## ಸಾಹಿತ್ಯ ಸಂಚಿಕೆ

### ಕನ್ನಡ ನಾಡಿನ ಗ್ರಂಥಕರ್ತರು ಪ್ರಕಾಶಕರಲ್ಲಿ ಬಿನ್ನಹ

ಪರಿಷತ್ತಿನ ವಾರ ಪತ್ರಿಕೆಯಾದ "ಕನ್ನಡ ನುಡಿ"ಯ ಪ್ರತಿ ತಿಂಗಳ ಎರಡನೆಯ ವಾರದ ಸಂಚಿಕೆಯನ್ನು **ಸಾಹಿತ್ಯ ಸಂಚಿಕೆ**ಯಾಗಿ ಮಾರ್ಪಡಿಸಿ ನಮ್ಮ ವಾಚಕರಿಗೆ ಕೊಡಬಯಸಿದ್ದೇವೆ. ಮೊದಲನೆಯ ಸಂಚಿಕೆ ೧೯೪೩ರ ಮೇ ೧೪ನೆಯ ತಾರೀಖು "ಕನ್ನಡ ನುಡಿ"ಯೊಂದಿಗೆ ಪ್ರಕಟವಾಗುವುದು. ಎಲ್ಲ ಗ್ರಂಥಕರ್ತರೂ ಪ್ರಕಟನಕಾರರೂ ತಮ್ಮ ಗ್ರಂಥಗಳು ಹೊರಬಿದ್ದ ಕೂಡಲೆ ಪರಿಷತ್ತಿಗೆ ಕಳಿಸಿಕೊಟ್ಟಲ್ಲಿ, ಅವುಗಳ ಅವಲೋಕನವನ್ನೂ ವಿಮರ್ಶೆಯನ್ನೂ ಮಾಡಿ ನುಡಿಯ ವಾಚಕರ ಮುಂದಿಡಲು ಸಾಧ್ಯವಾಗುವುದು.

ನಾಡಿನ ಎಲ್ಲ ಲೇಖಕರೂ ಪ್ರಕಟನಕಾರರೂ ತಾವು ಇತ್ತೀಚೆಗೆ ಪ್ರಕಟಿಸಿರುವ ಪುಸ್ತಕಗಳನ್ನು ಕಳಿಸಿಕೊಟ್ಟು ಈ ನಮ್ಮ ಉದ್ಯಮದಲ್ಲಿ ಸಹಕರಿಸಬೇಕೆಂದು ಪ್ರಾರ್ಥಿಸುತ್ತೇವೆ.

### ಅಕ್ಷರ ಪ್ರಚಾರ ಸಮಿತಿ, ಬೆಂಗಳೂರು

#### ವ್ಯಾಸಂಗ ಕೇಂದ್ರ

ಬೆಂಗಳೂರು ನಗರದಲ್ಲಿ ವಯಸ್ಕರ ಶಿಕ್ಷಣದ ಸಂಬಂಧದಲ್ಲಿ ಒಂದು ವ್ಯಾಸಂಗ ಕೇಂದ್ರ (Study Circle) ವನ್ನು ನಡಸುವ ಯೋಚನೆ ಇದೆ.

ಈ ಕೇಂದ್ರ ಸುಮಾರು ಏಪ್ರಿಲ್ ೧೫ನೆಯ ತಾರೀಖಿನಿಂದ ಪ್ರಾರಂಭವಾಗಬಹುದು. ಮೈಸೂರು ಶಿಕ್ಷಣ ಖಾತೆಯ ಶ್ರೀಮಾನ್ ಕೆ. ಶ್ರೀನಿವಾಸ ಆಚಾರ್ಲು, ಎಂ.ಎ., ಬಿ.ಟಿ. ಅವರ ನೇತೃತ್ವದಲ್ಲಿ ಬಸವನಗುಡಿ ದೇಶೀಯ ವಿದ್ಯಾಶಾಲೆಯಲ್ಲಾಗಲಿ ಅಥವಾ ಕನ್ನಡ ಸಾಹಿತ್ಯ ಪರಿಷನ್ಮಂದಿರದಲ್ಲಾಗಲಿ ವ್ಯಾಸಂಗ ನಡೆಯುವಂತೆ ಏರ್ಪಡಿಸಲಾಗುತ್ತದೆ.

ಈ ವ್ಯಾಸಂಗ ಕೇಂದ್ರಕ್ಕೆ ಸೇರಲು ಇಷ್ಟವುಳ್ಳವರು ವ್ಯವಸ್ಥಾಪಕರಿಗೆ ಈ ತಿಂಗಳು ೧೨ನೇ ತಾರೀಖಿನೊಳಗಾಗಿ ತಮ್ಮ ವಿಳಾಸದೊಂದಿಗೆ ದಯೆಯಿಟ್ಟು ತಿಳಿಸಬೇಕಾಗಿ ಪ್ರಾರ್ಥನೆ. ಬೇಸಗೆಯಲ್ಲಿ ಬೆಂಗಳೂರಿನಲ್ಲಿರುವ ಅಧ್ಯಾಪಕರೂ ಕಾಲೇಜು ವಿದ್ಯಾರ್ಥಿಗಳೂ ಈ ವಿಷಯದಲ್ಲಿ ಹೆಚ್ಚು ಆಸಕ್ತಿ ವಹಿಸಿ, ಕೇಂದ್ರದ ವ್ಯಾಸಂಗದಲ್ಲಿ ಭಾಗಿಗಳಾಗುತ್ತಾರೆಂದು ನಂಬಿದೆ.

ಸಿ. ಎನ್. ರತ್ನಾಬಾಯಿ,
ಬಿ. ಸುಂದರೇಶ್ವರ,
ವ್ಯವಸ್ಥಾಪಕರು, ವ್ಯಾಸಂಗ ಕೇಂದ್ರ
ಬೆಂಗಳೂರು ಅಕ್ಷರ ಪ್ರಚಾರ ಸಮಿತಿ,
ಕನ್ನಡ ಸಾಹಿತ್ಯ ಪರಿಷತ್ತಿನ ಕಟ್ಟಡ, ಚಾಮರಾಜಪೇಟೆ.

## ಭಾವಚಿತ್ರಗಳ ಅನಾವರಣೋತ್ಸವ

ಪರಿಷನ್ಮಂದಿರದಲ್ಲಿ ೨೮-೩-೧೯೪೩ನೆಯ ದಿನ ನಡೆದ ಉತ್ಸವದಲ್ಲಿ ಮಾಡಿದ ಇನ್ನೆರಡು ಭಾಷಣಗಳ ಸಾರಾಂಶ :

### ರಾಜಸೇವಾಸಕ್ತ ಶ್ರೀ. ಬೆಳ್ಳಾವೆ ವೆಂಕಟನಾರಾಯಣಪ್ಪನವರು

(ಶ್ರೀ. ತಿ. ತಾತಾಚಾರ್ಯಶರ್ಮ ಅವರಿಂದ)

ಪರಿಷತ್ತು ಹುಟ್ಟಿದ ಬಳಿಕ ಅವರು ಕಾರ್ಯದರ್ಶಿಗಳಾಗಿದ್ದಾಗ ನಾನು ಕಾರ್ಯ ಸಮಿತಿಯ ಸದಸ್ಯನಾಗಿ ಅವರ ಪರಿಚಯ ಪಡೆಯುವ ಭಾಗ್ಯ ಒದಗಿತು. ಅವರ ಜೀವನ ಕರ್ತವ್ಯ ಸಾಧನಾಮಯವಾದುದು. ಅಂಚೆಗೆ ಕಾಗದ ಬರೆಯಲು ಆಫೀಸಿನ ಕಾಲ ಮಿಂಚಿಹೋಗಿದ್ದರೆ, ಆಳನ್ನು ಹೊತ್ತಾಯಿತು, ನೀನು ಮನೆಗೆ ಹೋಗಪ್ಪಾ ಎಂದು ಕಳಿಸಿ, ಅಂದು ಬರೆಯಬೇಕಾದ ಕಾಗದವನ್ನು ಅಂದೇ ಬರೆದು ಮುಗಿಸಿ, ತಾವೇ ಅಂಟಿಸಿ, ಅಂಚೆ ಚೀಟಿ ಹತ್ತಿಸಿ, ಅಂಚೆ ಕಚೇರಿಗೆ ಹಾಕಿ ಬರುತ್ತಿದ್ದರು. ಅಂಥಾ ಕರ್ತವ್ಯನಿಷ್ಠೆ ಅವರದು. ಒಂದು ದಿನ ಪರಿಷತ್ತಿನ ಕಚೇರಿಗೆ ಒಂದು ಮನಿಯಾರ್ಡರು (ಕನ್ನಡ) ಫಾರಂ ಬಂತು. ಅಕ್ಷರ ಕನ್ನಡದಲ್ಲಿದ್ದರೂ ಆದರಲ್ಲಿ ಮುದ್ರಿತವಾದ ಭಾಷೆ ನಾಡಿನಲ್ಲಿ ಬಳಕೆಯಲ್ಲಿರುವ ಯಾವ ಕನ್ನಡ ಪ್ರಭೇದಕ್ಕೂ ಹೋಲುವಂತಿರಲಿಲ್ಲ. ಅದನ್ನು ನೋಡಿ ನಾನು ಇದೇನು ಅಧ್ವಾನ, ಅಂಚೆ ಅಧಿಕಾರಿಗಳಿಗೆ ಈ ವಿಚಾರ ಬರೆದು ಭಾಷೆ ಸರಿಯಾಗಿ ಬರೆಯುವಂತೆ ತಿಳಿಸಬೇಕು ಅಂದೆ. ಸರಿ, ಕೂಡಲೆ ಅವರು ಬರೆದುಬಿಟ್ಟರು. ಎಂಟು ದಿನಗಳ ನಂತರ ಸಿಮ್ಲಾದ ಅಂಚೆ ಕಚೇರಿಯಿಂದ ನೂರಾರು ಬಗೆಯ ಒಂದು ದೊಡ್ಡ ಕಟ್ಟೇ ಬಂತು. ಅದರ ಜತೆಗೆ ಒಂದು ಕಾಗದ, ಅದರಲ್ಲಿ 'ಕನ್ನಡ ಭಾಷೆ ಚೆನ್ನಾಗಿ ತಿಳಿದವರು ನಮ್ಮಲ್ಲಿಲ್ಲವಾದ್ದರಿಂದ ಈ ಫಾರಂಗಳಿಗೆ ಕನ್ನಡದಲ್ಲಿ ಸರಿಯಾದ ಭಾಷಾಂತರ ಮಾಡಿ ದಯೆಯಿಟ್ಟು ಕಳಿಸಿ' ಎಂದು ಬರೆದಿದ್ದರು. ಅದನ್ನು ನನಗೆ ತೋರಿಸಿ, 'ನೀವು ಬಂದುಬಿಡಿ, ನಾಲ್ಕಾರು ದಿನಗಳಲ್ಲಿ ಭಾಷಾಂತರ ಕಳಿಸಿಬಿಡೋಣ' ಎಂದರು. ಆಗಲಿ ಎಂತ ನಾನೂ ಬಂದೆ. ದಿನವೂ ೩-೪ ಗಂಟೆ ಕಾಲ ಕೆಲಸಮಾಡುತ್ತಿದ್ದೆವು. ಪದಗಳ ವಿಚಾರ ಚರ್ಚೆಯೆ ಹೆಚ್ಚು ಕಾಲ ತೆಗೆದುಕೊಳ್ಳುತ್ತಿತ್ತು. ನಾನು 'ಇದಕ್ಕೆಲ್ಲಾ ಇಷ್ಟು ಚರ್ಚೆ ಏಕೆ? ಎಲ್ಲರಿಗೂ ತಿಳಿಯುವ ಹಾಗೆ ಬರೆದು ಕಳಿಸಿದರಾಯಿತು' ಎಂದೆ. ಅವರು 'ಹಾಗಲ್ಲಪ್ಪಾ, ನಾವು ಮಾಡಿದ ಕೆಲಸಕ್ಕೆ ಇನ್ನೊಬ್ಬರು ಏನೂ ಅನ್ನಬಾರದು, ಹಾಗಿರಬೇಕು ನಾವು ಮಾಡಿದ ಕೆಲಸ' ಎಂದು ಕೊನೆಗೆ ಅವರು ನಿಯತ ಕಾಲದಲ್ಲಿ ಕೆಲಸಮಾಡಿ ಪೂರೈಸಿದರು. ಅಂಥಾ ಕರ್ತವ್ಯನಿಷ್ಠೆ ಅವರದು. ಅವರ ಜೀವನದಲ್ಲಿ ತಾವು ನಿಶ್ಚಯಿಸಿಕೊಂಡಿರುವ ಕರ್ತವ್ಯನಿಷ್ಠೆಯಿಂದಲೆ, ಅವರು ತಮ್ಮ ಆರೋಗ್ಯವನ್ನು ಕಾಪಾಡಿಕೊಂಡು, ನುಡಿಗೆ ಇನ್ನೂ ಸೇವೆ ಸಲ್ಲಿಸುತ್ತಿದ್ದಾರೆ. ಅವರ ಪರಿಚಯವಿಲ್ಲದವರಿಗೆ ಅವರ ಹೊರ ರೂಪ ಸ್ವಲ್ಪ ಉಗ್ರವಾಗಿ, ಅನಾನಸ್ ಹಣ್ಣಿನ ಹೊರಭಾಗದಂತೆ, ಕಾಣಬಹುದು. ಆದರೆ ಅದರೊಳಗಿನ ತಿರುಳು ಸವಿಯಾಗಿರುವಂತೆ, ಅವರ ಹೃದಯವೂ ಅಷ್ಟು ಸರಳವಾಗಿ ಮೃದುವಾಗಿರುವುದು.

(೧೨೬ನೆಯ ಪುಟಕ್ಕೆ)

# ಮೈಸೂರಿನ ಸ್ಥಳೀಯ ಸರಕಾರ ಪದ್ಧತಿ*

(ಶ್ರೀ. ಎಂ. ಎ. ಗೋಪಾಲಸ್ವಾಮಿ ಅಯ್ಯಂಗಾರ್, ಎಂ.ಎ., ಬಿ.ಎಲ್. ಅವರು, ವಕೀಲರು ಮತ್ತು ಪೌರಸಭಾ ಸದಸ್ಯರು, ಬೆಂಗಳೂರು)

## ಸ್ಥಳೀಯ ಸಂಸ್ಥೆಗಳ ಸಾಮಾನ್ಯ ಸ್ವರೂಪ

ಸ್ಥಳೀಯ ಸಂಸ್ಥೆಗಳ ಸಂಬಂಧವಾಗಿ ಮೈಸೂರು ದೇಶವನ್ನು ಎರಡು ಭಾಗ ಮಾಡಬಹುದು. (೧) ಗ್ರಾಮ ಪ್ರಾಂತ ಮತ್ತು (೨) ನಗರ ಪ್ರಾಂತ.

ಗ್ರಾಮ ಪ್ರಾಂತಗಳಲ್ಲಿ ಎರಡು ಬಗೆಯ ಸ್ಥಳೀಯ ಸಂಸ್ಥೆಗಳಿವೆ: (೧) ಗ್ರಾಮಪಂಚಾಯಿತಿಗಳು ಮತ್ತು (೨) ಜಿಲ್ಲೆಯ ಸಮಿತಿಗಳು.

ನಗರ ಪ್ರಾಂತಗಳಲ್ಲಿ ಮೂರು ಬಗೆಯ ಸಂಸ್ಥೆಗಳಿರುವುವು:

(೧) ನಗರ ಸಮಿತಿಗಳು; (೨) ಪಟ್ಟಣ ಸಮಿತಿಗಳು ಮತ್ತು (೩) ಉಪಪಟ್ಟಣ ಸಮಿತಿಗಳು.

ಗ್ರಾಮಪಂಚಾಯಿತಿಗಳು ೧೯೨೬ ನೆಯ ಸಂವತ್ಸರದ ಗ್ರಾಮ ಪಂಚಾಯಿತಿ ಶಾಸನದ ಮೇರೆಯೂ ಜಿಲ್ಲೆಯ ಸಮಿತಿಗಳು ಅದೇ ವರ್ಷದ ಜಿಲ್ಲೆ ಸಮಿತಿ ಶಾಸನದ ಮೇರೆಯೂನಗರ, ಪಟ್ಟಣ ಮತ್ತು ಉಪಪಟ್ಟಣಗಳ ಸಮಿತಿಗಳು ೧೯೩೩ನೆಯ ಸಂವತ್ಸರದ ನಗರ, ಪಟ್ಟಣ ಮತ್ತು ಉಪಪಟ್ಟಣ ಶಾಸನಗಳಮೇರೆಯೂ ಸ್ಥಾಪಿತವಾಗಿವೆ.

ಕೋಲಾರದ ಚಿನ್ನದಗಣಿ ಪ್ರದೇಶದಲ್ಲಿ ಗಣಿ ಶಾಸನದ ಮೇರೆ ಒಂದು ಸ್ಥಳೀಯ ಸಮಿತಿಯು ಸ್ಥಾಪಿತವಾಗಿದೆ.

ಮೈಸೂರು ಸಂಸ್ಥಾನದಲ್ಲಿ ಈಗ ಸುಮಾರು ೧೨,೧೫೦ ಗ್ರಾಮ ಪಂಚಾಯಿತಿಗಳೂ ಒಂಬತ್ತು ಜಿಲ್ಲೆ ಸಮಿತಿಗಳೂ ನಲವತ್ತು ಪಟ್ಟಣ ಸಮಿತಿಗಳೂ ಅರುವತ್ತನಾಲ್ಕು ಉಪಪಟ್ಟಣ ಸಮಿತಿಗಳೂ ಇರುತ್ತವೆ.

ಒಂದು ಲಕ್ಷಕ್ಕೆ ಮೇಲ್ಪಟ್ಟು ಜನಸಂಖ್ಯೆಯುಳ್ಳ ಪ್ರದೇಶವನ್ನು ನಗರ, ೫,೦೦೦ಕ್ಕೆ ಮೇಲ್ಪಟ್ಟು ಒಂದು ಲಕ್ಷದೊಳಗೆ ಜನಸಂಖ್ಯೆಯುಳ್ಳ ಪ್ರದೇಶವನ್ನು ಪಟ್ಟಣ, ೩,೦೦೦ಕ್ಕೆ ಮೇಲ್ಪಟ್ಟು ೫,೦೦೦ದೊಳಗೆ ಜನ ಸಂಖ್ಯೆಯುಳ್ಳ ಪ್ರದೇಶವನ್ನು ಉಪಪಟ್ಟಣ ಎಂದು ಕರೆಯಲಾಗಿದೆ.

ಸ್ಥಳೀಯ ಸಂಸ್ಥೆಗಳೆಲ್ಲಾ ಶಾಸನ ಕಲ್ಪಿತ ಸಂಸ್ಥೆಗಳು. ಶಾಸನ ಪ್ರಾಪ್ತವಾದ ಅಧಿಕಾರಗಳನ್ನೂ ಕರ್ತವ್ಯಗಳನ್ನೂ ಮಾತ್ರ ಪಡೆದಿರುವುವು. ಇವು ಕೇಂದ್ರ ಸರಕಾರದಿಂದ ಸ್ಥಾಪಿತವಾಗಿ ಅದರ ಮೇಲ್ವಿಚಾರಣೆಗೊಳಪಟ್ಟು ಕೆಲಸ ಮಾಡುತ್ತವೆ. ಯಾವ ಶಾಸನದಿಂದ ಕಲ್ಪಿತವಾಗಿವೆಯೋ ಆ ಶಾಸನವನ್ನು ಬಿಟ್ಟು ಅದಕ್ಕೆ ವಿರೋಧವಾಗಿ ಕೆಲಸ ಮಾಡಲು ಇವುಗಳಿಗೆ ಅಧಿಕಾರವಿಲ್ಲ.

ಸ್ಥಳೀಯ ಸಂಸ್ಥೆಗಳು ಹುಟ್ಟಲು ಎರಡು ಮುಖ್ಯಕಾರಣಗಳನ್ನು ಸೂಚಿಸಬಹುದು :

(೧) ಸ್ಥಳೀಯ ವಿಷಯಗಳನ್ನು ನಿರ್ವಹಿಸಲು ಕೇಂದ್ರ ಸರಕಾರಕ್ಕೆ ಸೌಕರ್ಯಗಳು ಕಡಮೆ. (೨) ಪ್ರಜೆಗಳ ರಾಜಕೀಯ ಶಿಕ್ಷಣಕ್ಕೆ ಸ್ಥಳೀಯ ಸಂಸ್ಥೆಗಳು ಉತ್ತಮ ಸಾಧನಗಳು.

ಸ್ಥಳೀಯ ಸಂಸ್ಥೆಗಳ ಪರಿಶೀಲನೆಯನ್ನು ನಾಲ್ಕು ಭಾಗ ಮಾಡಬಹುದು: (೧) ಸ್ಥಳೀಯ ಸಂಸ್ಥೆಗಳ ರಚನೆ; (೨) ಕರ್ತವ್ಯಗಳು; (೩) ಹಣಕಾಸಿನ ವಿಚಾರಗಳು ಮತ್ತು (೪) ಕೇಂದ್ರ ಸರ್ಕಾರದ ಮೇಲ್ವಿಚಾರಣೆ ಮತ್ತು ಅಧಿಕಾರ.

ಒಂದೊಂದು ಭಾಗಕ್ಕೆ ಸೇರಿದ ವಿಷಯಗಳನ್ನೂ ಸ್ಥೂಲವಾಗಿ ಈ ಉಪನ್ಯಾಸದಲ್ಲಿ ಪರಿಶೀಲಿಸಲಾಗುವುದು.

## ಸ್ಥಳೀಯ ಸಂಸ್ಥೆಗಳ ರಚನೆ

ಪ್ರತಿ ಗ್ರಾಮಪಂಚಾಯಿತಿಯ ಸದಸ್ಯರ ಸಂಖ್ಯೆ ಒಕ್ಕೆ ಮೀರಿ ೧೨ರೊಳಗೆ ಇರಬೇಕು. ಇತರ ಸಂಸ್ಥೆಗಳ ಸದಸ್ಯರ ಸಂಖ್ಯೆಯನ್ನು ನಿರ್ಧರಿಸುವ ಅಧಿಕಾರವು ಕೇಂದ್ರ ಸರ್ಕಾರಕ್ಕೆ ಸೇರಿದೆ. ಆದರೆ ಚುನಾಯಿತರಾದ ಸದಸ್ಯರ ಪ್ರಮಾಣವು ನಗರ ಸಮಿತಿಯಲ್ಲಿ ಐದರಲ್ಲಿ ನಾಲ್ಕುಭಾಗಕ್ಕೆ ಕಡಮೆಯಿಲ್ಲದೆಯೂ ಪಟ್ಟಣ ಸಮಿತಿಯಲ್ಲಿ ನಾಲ್ಕರಲ್ಲಿ ಮೂರು ಭಾಗಕ್ಕೆ ಕಡಮೆಯಿಲ್ಲದೆಯೂ ಜಿಲ್ಲೆ ಸಮಿತಿ ಮತ್ತು ಉಪಪಟ್ಟಣ ಸಮಿತಿಗಳಲ್ಲಿ ಮೂರರಲ್ಲಿ ಎರಡು ಭಾಗಕ್ಕೆ ಕಡಮೆಯಿಲ್ಲದೆಯೂ ಗ್ರಾಮಪಂಚಾಯಿತಿಯಲ್ಲಿ ಅರ್ಧಕ್ಕೆ ಕಡಮೆಯಿಲ್ಲದೆಯೂ ಇರಬೇಕು.

ಈಗ ಪ್ರತಿ ನಗರ ಸಮಿತಿಯಲ್ಲಿ ಮೂವತ್ತು ಸದಸ್ಯರೂ ಪ್ರತಿ ಪಟ್ಟಣ ಸಮಿತಿಯಲ್ಲಿ ಸುಮಾರು ಇಪ್ಪತ್ತು ಸದಸ್ಯರೂ ಪ್ರತಿ ಉಪ ಪಟ್ಟಣ ಸಮಿತಿಯಲ್ಲಿ ಹದಿನೈದು ಸದಸ್ಯರೂ ಪ್ರತಿ ಜಿಲ್ಲೆ ಸಮಿತಿಯಲ್ಲಿ ಸುಮಾರು ಮೂವತ್ತು ಸದಸ್ಯರೂ ಇರುತ್ತಾರೆ.

ಚಿನ್ನದ ಗಣಿ ಸಮಿತಿಯಲ್ಲಿ ಇಪ್ಪತ್ತು ಸದಸ್ಯರಿದ್ದರೆ, ಇವರಲ್ಲಿ ಆರು ಜನ ಮಾತ್ರ ಚುನಾಯಿತರಾದ ಸದಸ್ಯರು. ಗ್ರಾಮ ಮತ್ತು ಉಪಪಟ್ಟಣಗಳಲ್ಲಿ ಇಪ್ಪತ್ತೊಂದು ವರ್ಷಕ್ಕೆ ಮೇಲ್ಪಟ್ಟ ನಿವಾಸಿಗಳೆಲ್ಲರೂ ಮತ ಸೂಚಿಸುವ (ಅಂದರೆ ಓಟು ಮಾಡುವ) ಅಧಿಕಾರ ಪಡೆದಿರುತ್ತಾರೆ. ಆದರೆ ನಗರ ಪಟ್ಟಣ ಮತ್ತು ಜಿಲ್ಲೆಗಳಲ್ಲಿ ಶೇಕಡ ನಾಲ್ಕು ಅಥವಾ ಐದುಜನ ಮಾತ್ರ ಈ ಅಧಿಕಾರವನ್ನು ಪಡೆದಿರುತ್ತಾರೆ.

ಪ್ರತಿ ಸ್ಥಳೀಯ ಸಂಸ್ಥೆಯ ಕಾಲಾವಧಿ ಮೂರು ವರ್ಷಗಳು. ಆದರೆ ಕೇಂದ್ರ ಸರ್ಕಾರವು ಇವುಗಳ ಜೀವಮಾನವನ್ನು ಒಂದು ವರ್ಷದ ವರೆಗೆ ಮುಂದುವರಿಸಬಹುದು.

ಪ್ರತಿ ಸ್ಥಳೀಯ ಸಂಸ್ಥೆಯೂ ಒಬ್ಬ ಅಧ್ಯಕ್ಷನನ್ನು ಪಡೆದಿರಬೇಕು. ಆದರೆ ಅಧ್ಯಕ್ಷನನ್ನು ಚುನಾವಣೆಯ ಮೂಲಕ ಆರಿಸಬೇಕೇ ಇಲ್ಲವೇ, ನಾಮಕರಣದ ಮೂಲಕ ನಿಯಮಿಸಬೇಕೇ ಎಂಬುದನ್ನು ನಿರ್ಧರಿಸುವ ಅಧಿಕಾರ ಕೇಂದ್ರ ಸರ್ಕಾರಕ್ಕೆ ಸೇರಿದೆ. ಸದ್ಯದಲ್ಲಿ ಒಂದು ನಗರ ಸಮಿತಿಯೂ ಸುಮಾರು ಹತ್ತು ಪಟ್ಟಣ ಮತ್ತು ಉಪ ಪಟ್ಟಣ ಸಮಿತಿಗಳೂ ಒಂಬತ್ತು ಜಿಲ್ಲೆಸಮಿತಿಗಳೂ ಸು. ೫೦೦ ಗ್ರಾಮ ಪಂಚಾಯಿತಿಗಳೂ ಮಾತ್ರ ಅಧ್ಯಕ್ಷನನ್ನು ಚುನಾಯಿಸುವ ಅಧಿಕಾರವನ್ನು ಪಡೆದಿರುವುವು. ಪ್ರತಿ ಅಧ್ಯಕ್ಷನ ಚುನಾವಣೆಯನ್ನೂ ಕೇಂದ್ರ ಸರ್ಕಾರ ಒಪ್ಪಬೇಕು. ಅದರ ಒಪ್ಪಿಗೆಯನ್ನು ಪಡೆಯದ ಯಾವ ಚುನಾವಣೆಯೂ ಊರ್ಜಿತವಾಗುವುದಿಲ್ಲ.

ಪ್ರತಿ ಸ್ಥಳೀಯ ಸಂಸ್ಥೆಯೂ ಒಬ್ಬ ಉಪಾಧ್ಯಕ್ಷನನ್ನು ನಿಯಮಿಸಿಕೊಳ್ಳಬಹುದು. ಎಲ್ಲ ಸಂಸ್ಥೆಗಳಲ್ಲಿಯೂ ಸಾಮಾನ್ಯವಾಗಿ ಚುನಾಯಿತರಾದ ಉಪಾಧ್ಯಕ್ಷರಿರುತ್ತಾರೆ.

ಕಾರ್ಯ ಸೌಕರ್ಯಕ್ಕಾಗಿ ಸ್ಥಳೀಯ ಸಂಸ್ಥೆಗಳು ಉಪಸಮಿತಿಗಳನ್ನು ನಿಯಮಿಸಬಹುದು. ಪ್ರತಿ ಸಂಸ್ಥೆಯಲ್ಲಿಯೂ ಸಾಮಾನ್ಯವಾಗಿ ಒಂದು ಕಾರ್ಯನಿರ್ವಾಹದ ಉಪಸಮಿತಿ ಇರುತ್ತದೆ.

ಪ್ರತಿ ಸ್ಥಳೀಯ ಸಂಸ್ಥೆಯ ಮುಖ್ಯ ನೌಕರರನ್ನು ಕೇಂದ್ರ ಸರಕಾರವು ನಿಯಮಿಸುತ್ತದೆ. ಕೆಳ ತರಗತಿಯ ನೌಕರರೆಲ್ಲರೂ ಸರಕಾರಿ ನೌಕರರ ಶಾಸನದ ಮೇರೆ ನಿಯಮಿಸಲ್ಪಡುತ್ತಾರೆ. ಈ ನೌಕರರನ್ನು ಒಂದು ಸಂಸ್ಥೆಯಿಂದ ಮತ್ತೊಂದು ಸಂಸ್ಥೆಗಾಗಲಿ ಸರಕಾರದ ಶಾಖೆಯೊಂದಕ್ಕಾಗಲಿ ವರ್ಗಮಾಡುವ ಅಧಿಕಾರವನ್ನು ಕೇಂದ್ರ ಸರಕಾರವು ಪಡೆದಿರುತ್ತದೆ.

ಪ್ರತಿ ಸ್ಥಳೀಯ ಸಂಸ್ಥೆಯಲ್ಲಿಯೂ ಸಾಮಾನ್ಯವಾಗಿ ಒಬ್ಬ ಮುಖ್ಯಾಧಿಕಾರಿಯು ಇರುತ್ತಾನೆ. ಆ ಸಂಸ್ಥೆಯ ಇತರ ನೌಕರರೆಲ್ಲರೂ ಇವನ ಆಜ್ಞಾನುಸಾರ ಕೆಲಸ ಮಾಡಬೇಕು. ಕಾರ್ಯನಿರ್ವಾಹ ಶಾಖೆಯು ಸಂಪೂರ್ಣವಾಗಿ ಅವನ ಅಧೀನದಲ್ಲಿರುತ್ತದೆ. ಸಂಸ್ಥೆಯು ಮಾಡಬಹುದಾದ ಕೆಲವು ಕರ್ತವ್ಯಗಳನ್ನು ಅವನು ಸ್ವತಂತ್ರವಾಗಿ ನಿರ್ವಹಿಸುತ್ತಾನೆ. ಜಿಲ್ಲೆ ಸಮಿತಿಗಳಲ್ಲಿ ಅಧ್ಯಕ್ಷನೇ ಈ ಮುಖ್ಯಾಧಿಕಾರಿಯ ಕೆಲಸವನ್ನು ನಿರ್ವಹಿಸುತ್ತಾನೆ. ಸರಕಾರದಿಂದ ನಿಯಮಿತನಾದ ಅಧ್ಯಕ್ಷನಿರುವ ಸಂಸ್ಥೆಗಳಲ್ಲೆಲ್ಲಾ ಸಾಮಾನ್ಯವಾಗಿ ಎರಡು ಉದ್ಯೋಗಗಳನ್ನೂ ಒಬ್ಬ ವ್ಯಕ್ತಿಯೇ ನಿರ್ವಹಿಸುತ್ತಾನೆ. ನಗರ ಪ್ರಾಂತಗಳಲ್ಲಿ ಚುನಾಯಿತರಾದ ಅಧ್ಯಕ್ಷರುಗಳಿರುವ ಸಂಸ್ಥೆಗಳಲ್ಲೆಲ್ಲಾ ಪ್ರತ್ಯೇಕವಾದ ಮುಖ್ಯಾಧಿಕಾರಿಯು ಇರುತ್ತಾನೆ.

## ಕರ್ತವ್ಯಗಳು

ಶಾಸನ ದೃಷ್ಟಿಯಿಂದ ಪ್ರತಿ ಸ್ಥಳೀಯ ಸಂಸ್ಥೆಯ ಕರ್ತವ್ಯಗಳನ್ನು ಮೂರು ಭಾಗ ಮಾಡಬಹುದು.

(೧೩೭ನೆಯ ಪುಟಕ್ಕೆ)

* ಪ್ರಾಂತ ಸಮಿತಿಯ ಆಶ್ರಯದಲ್ಲಿ ೩೧-೩-೧೯೪೩ನೆಯ ಬುಧವಾರ ಪರಿಷನ್ಮಂದಿರದಲ್ಲಿ ಮಾಡಿದ ಉಪನ್ಯಾಸ.

## ಶ್ರೀ. ಬೆನಗಲ್ ರಾಮರಾಯರು

(ಶ್ರೀ. ಡಿ. ಕೆ. ಭಾರದ್ವಾಜ ಅವರಿಂದ)

ನನ್ನ ಮಾನ್ಯ ಮಿತ್ರರಾದ ಶ್ರೀ. ಬೆನಗಲ್ ರಾಮರಾಯರ ಪರಿಚಯವನ್ನು ಕನ್ನಡನುಡಿಯಲ್ಲಿ ಈ ಮೊದಲೆ ಮಾಡಿಕೊಟ್ಟಿದ್ದೇನೆ. ಈಗ ಇವರಿಗೆ ೬೬ ವರುಷ. ಇವರ ತಂದೆಯವರು ವಕೀಲರಾಗಿದ್ದರು. ಮಗನೂ ತನ್ನಂತೆ ವಕೀಲರಾಗಿ ಹೇರಳ ವಾಗಿ ಧನಾರ್ಜನೆ ಮಾಡಲೆಂಬ ಉದ್ದೇಶದಿಂದಲೊ ಏನೊ ಇವರಿಗೆ ವಕೀಲ ವಿದ್ಯೆಯನ್ನು ಕಲಿಯಲು ಹೇಳಿದರು. ಆದರೆ ನ್ಯಾಯವಿದ್ಯಾಪಾರಂಗತರಾಗಿದ್ದರೂ ಕನ್ನಡನುಡಿಯ ಸೇವೆಗಾಗಿ ತಮ್ಮ ಜೀವನವನ್ನು ಮುಡಿಪಾಗಿಟ್ಟ ಪೂಜ್ಯರಾದ 'ಶ್ರೀ' ಗಳು, 'ಸಿ. ಕೆ. ವೆ.' ಅವರುಗಳಂತೆ, ಇವರೂ ಮೊದಲಿನಲ್ಲಿಯೆ ತಮ್ಮ ಜೀವನವನ್ನು ಕನ್ನಡನುಡಿ ಸೇವೆಗಾಗಿ ಮುಡಿಪಾಗಿಟ್ಟರು. ಇವರು ಬಿ.ಎ.ಗೆ ಭೂಗರ್ಭಶಾಸ್ತ್ರ ಕಲಿತದ್ದು. ಬಿ.ಎ. ಆದ ಬಳಿಕ ಮದ್ರಾಸಿನ ಪ್ರೆಸಿಡೆನ್ಸಿ ಕಾಲೇಜ್ ಮತ್ತು ಕ್ರಿಶ್ಚಿಯನ್ ಕಾಲೇಜುಗಳೆರಡರಲ್ಲಿಯೂ ಕನ್ನಡ ಪಂಡಿತರಾಗಿದ್ದರು. ಮೈಸೂರು ನಾರ್ಮಲ್ ಸ್ಕೂಲಿನಲ್ಲಿಯೂ ಕನ್ನಡ ಪಂಡಿತರಾಗಿ ಕೆಲಸಮಾಡಿದರು. ಮುಂದೆ ಇವರು ಮದ್ರಾಸಿನಲ್ಲಿ ಎಂ.ಎ.ಗೆ ಕನ್ನಡ ಮತ್ತು ತೆಲುಗು ಭಾಷೆಗಳನ್ನು ಪ್ರಧಾನ ವಿಷಯವಾಗಿ ತೆಗೆದುಕೊಂಡು ಡಿಗ್ರಿ ಪಡೆದರು. ಮುಂಬೈಯಲ್ಲಿ ಸರಕಾರದ ಕನ್ನಡ ಭಾಷಾಂತರಕಾರರಾಗಿ ಕೆಲಕಾಲ ಕೆಲಸಮಾಡಿದರು. ಅಲ್ಲಿರು ವಾಗಲೆ ಎಲ್.ಎಲ್.ಬಿ. ಪರೀಕ್ಷೆಯಲ್ಲೂ ತೇರ್ಗಡೆಯಾದರು. ಅನಂತರ ಇವರು ಮದ್ರಾಸು ಸರ್ಕಾರದ ಸೀನಿಯರ್ ಕನ್ನಡ ಟ್ರಾನ್ಸ್‌ಲೇಟರಾಗಿ ವಿರಾಮಕಾಲದ ವರೆಗೆ ಕೆಲಸಮಾಡಿದರು. ಇವರು ಮದ್ರಾಸಿನಲ್ಲಿದ್ದಾಗ, ಕನ್ನಡನುಡಿ ಸೇವೆ ಮಾಡುವ ಪ್ರತಿಯೊಬ್ಬರಿಗೂ ಇವರಿಂದ ಸಹಾಯವು ದೊರೆಯಿತು. ಅಪಾರವಾದ ಅವರ ನುಡಿ ಪ್ರೇಮದಿಂದಲೆ ಅವರು ಅವರ ಭಾವಮೈದುನರಾದ ದಿವಂಗತ ಶ್ರೀ. ಮಂಗೇಶರಾಯರೊಂದಿಗೆ, ಹಿಂದೆ 'ಸುವಾಸಿನಿ' ಎಂಬ ಮಾಸಪತ್ರಿಕೆಗೆ ಸಂಪಾದಕರೂ ಆಗಿದ್ದರು. ಮೈಸೂರಿನಲ್ಲಿ 'ಶ್ರೀನಿವಾಸರ' ಮೊದಲ ಕತೆಗಳು ಪ್ರಕಟವಾದ, ದಿವಂಗತ ಮಿತ್ರ ಶ್ರೀ. ಹನುಮಾನ್‌ದಾಸರ ಸಂಪಾದಕತ್ವದಲ್ಲಿ ಹೊರಟ 'ಮಧುರವಾಣಿ' ಎಂಬ ಮಾಸಪತ್ರಿಕೆಯೂ ಇವರ ಪ್ರೋತ್ಸಾಹದಿಂದಲೆ ಹೊರಟು ಕೆಲಕಾಲ ನುಡಿಸೇವೆ ಮಾಡಿತು. 'ಬಂಗಾಳಿ, ಮರಾಠಿ, ಸಂಸ್ಕೃತ ಮೊದಲಾದ ಭಾಷೆಗಳಿಂದ ಇವರು 'ರಮಾಮಾಧವ' 'ಕೃಷ್ಣಕುಮಾರಿ' ಮೊದಲಾದ ಗ್ರಂಥಗಳನ್ನೂ ಚರಿತ್ರಾರ್ಹವಾದ ಅನೇಕ ಸ್ಥಳಗಳ ಕೈಫಿಯತ್ತು ಗಳನ್ನೂ, ರಂಗಭೂಮಿಯಲ್ಲಿ ಪ್ರಕಟವಾದ ಅನೇಕ ನಾಟಕಗಳನ್ನೂ ಬರೆದಿರುವರು. ಅಷ್ಟು ಮಾತ್ರವಲ್ಲದೆ ಇವರು ಮದ್ರಾಸಿನ ಸುಗುಣವಿಲಾಸ ಸಭೆಯ ನಾಟಕಗಳಲ್ಲಿಯೂ ಪಾತ್ರವಹಿಸುತ್ತಿದ್ದರು. ಕನ್ನಡ ನಾಡಿನ ಏಕೀಕರಣ, ಕನ್ನಡ ವಿಶ್ವವಿದ್ಯಾಲಯ ಸ್ಥಾಪನೆಗಳ ವಿಚಾರದಲ್ಲಿ ಇವರು ವಿಶೇಷ ಉತ್ಸಾಹ ಗೊಂಡಿದ್ದರು. ಈಗ ಉತ್ತರ ಭಾರತದಲ್ಲಿ ಹಿಂದೀ ಸಾಹಿತ್ಯ ಸಮ್ಮೇಳನವೆಂಬುದು ಹಿಂದೀ ವಿಶ್ವವಿದ್ಯಾಲಯವಾಗಿದೆ. ಆ ಹಿಂದೀವಿಶ್ವವಿದ್ಯಾಲಯದ ಪರೀಕ್ಷೆಗಳಿಗೆ ಬೇರೆ ಯೂನಿವರ್ಸಿಟಿ ಮೆಟ್ರಿಕ್, ಇಂಟರ್, ಬಿ.ಎ. ಪದವಿಗಳವರಿಗೆ ಸಮಾನವಾದ ಗೌರವವನ್ನು (ಉದ್ಯೋಗಕ್ಕೆ ಸೇರಲು) ಸಂಯುಕ್ತಪ್ರಾಂತ, ಬಿಹಾರ, ಮಧ್ಯ ಪ್ರಾಂತ ಸರಕಾರಗಳು ಕೊಟ್ಟಿವೆ. ಈಗ ಕನ್ನಡ ಪರಿಷತ್ತು ತನ್ನ ಬಾಂಧವ್ಯ ವನ್ನು ಕನ್ನಡ ನಾಡಿನ ಎಲ್ಲಾ ಭಾಗಗಳಲ್ಲಿಯೂ ಬೆಳೆಸಿಕೊಂಡಿದೆ. ಈಗ ಅದು ಅನೇಕ ಪರೀಕ್ಷೆಗಳನ್ನೂ ನಡೆಸುತ್ತಿದೆ. ಈ ಪರೀಕ್ಷೆಗಳ ಮಟ್ಟವು ಇನ್ನೂ ಮೇಲ ಕ್ಕೇರಿ, ಈ ಪರಿಷತ್ತೇ ಕನ್ನಡ ವಿಶ್ವವಿದ್ಯಾನಿಲಯವಾಗಿ, ಸರಕಾರದ ಮತ್ತು ಸಾರ್ವ ಜನಿಕರ ಗೌರವಾದರಗಳಿಗೆ ಪಾತ್ರವಾಗಲೆಂದು ನಾನು ಹಾರೈಸುವೆನು. ಈ ಪರಿಷತ್ತು ವಿಶ್ವವಿದ್ಯಾನಿಲಯವಾಗಿ ಬೆಳೆದುದನ್ನು ತಮ್ಮ ಕಣ್ಣುಗಳಿಂದಲೇ ನೋಡಿ, ನಲಿವಂತೆ, ಈ ದಿನ ಯಾವ ಮೂವರು ಮಹನೀಯರ ಭಾವಚಿತ್ರ ಅನಾವರಣ ಮಾಡಿದೆಯೊ ಆ ಮೂವರಿಗೂ ಭಗವಂತನು ಆಯುರಾರೋಗ್ಯ ಭಾಗ್ಯವನ್ನೀಯಲೆಂದು ನಾನು ಪ್ರಾರ್ಥಿಸುವೆನು.

## ಪರಿಷತ್ತಿನ ಸುದ್ದಿ

### ಪರಿಷತ್ತಿನ ಸದಸ್ಯರ ಬೆಳವಣಿಗೆ

(ತಾ. ೧-೪-೪೩ರಿಂದ ೮-೪-೪೩ರ ವರೆಗೆ)

**ಸಹಾಯಕ ಸದಸ್ಯರು (೧೦೦ ರೂ.):** ಶ್ರೀ. ಗಳಾದ ೧. ಜಿ. ವೆಂಕಟಕೃಷ್ಣರಾಯರು, ಬಿ.ಎಸ್‌ಸಿ. (ಆನರ್ಸ್), ಡಿ॥ ಟ್ರೆಜರಿ ಆಫೀಸರು, ಕೋಲಾರ. ೨. ಸಿ. ಭಾಸ್ಕರಯ್ಯನವರು, (ಇಂಡಿಯನ್ ಆಡಿಟ್ ಮತ್ತು ಅಕೌಂಟ್ಸ್ ಸರ್ವಿಸ್), ಗವರ್ನ ಮೆಂಟ್ ಎಕ್ಸಾಮಿನರ್ ಆಫ್ ಅಕೌಂಟ್ಸ್, ಎಂ.ಎಸ್.ಎಂ. ರೈಲ್ವೆ, ಮದರಾಸು. ೩. ಎಂ. ಜೆ. ನರಸಿಂಹನ್, ಬಿ.ಎ. ಅವರು, ಡೈರೆಕ್ಟರ್ ಆಫ್ ಅಗ್ರಿಕಲ್ಚರ್, ಬೆಂಗಳೂರು.

**ಸಾಮಾನ್ಯ ಸದಸ್ಯರು (೩ ರೂ.):** ಶ್ರೀಮತಿ ಹೊನ್ನಮ್ಮ ನವರು, ಶಂಕರಪುರ, ಬೆಂಗಳೂರು.

### ಮೈಸೂರು ಪ್ರಾಂತಸಮಿತಿ

**೧೦-೪-೧೯೪೩ನೆಯ ಶನಿವಾರ** ಸಂಜೆ ೬-೩೦ ಗಂಟೆಗೆ ಪರಿಷನ್ಮಂದಿರದಲ್ಲಿ ವೇ॥ ಕೀರ್ತನಕೇಸರಿ ಬಿ. ಶಿವಮೂರ್ತಿಶಾಸ್ತ್ರಿ ಗಳವರು **ಇಂದ್ರಕೀಲ ವಿಜಯ** ಎಂಬ ವಿಷಯವನ್ನು ಕುರಿತು ಕೀರ್ತನ ನಡಸುವರು.

### ಮಹಿಳಾ ಶಾಖೆ

೩೦-೩-೧೯೪೩ನೆಯ ಮಂಗಳವಾರ ಸಂಜೆ ಮಹಿಳೆಯರ ಸಭೆ ಯಲ್ಲಿ ಶ್ರೀಮತಿ ಸೌ. ಛಾಯಮ್ಮ ತಿಮ್ಮಯ್ಯನವರು ಒಂದು ಗಂಟೆ ಕಾಲ ವರ್ಣ, ಕೃತಿ, ದೇವರ ನಾಮ, ಇವನ್ನು ಬಹಳ ಇಂಪಾಗಿ ಹಾಡಿದರು. ಶ್ರೀಮತಿ ಸೌ. ತುಲಸೀಬಾಯಿ ಶ್ಯಾಮರಾಯರು ಬಹು ನಯವಾಗಿ ಪಿಟೀಲು ವಾದನ ಮಾಡಿದರು.

ಅಂದಿನ ಸಭೆಯ ಅಧ್ಯಕ್ಷಿಣಿಯರಾದ ಶ್ರೀಮತಿ ಸೌ. ರಂಗ ನಾಯಕಮ್ಮ ಮಂಡ್ಯಂ, ಬಿ.ಎ., ಅವರು 'ಸಂಗೀತ ಎಲ್ಲರಿಗೂ ಪ್ರಿಯ ವಾದ ಕಲೆ, ಇಂಥಾ ಜನಾದರಣೆಗೆ ಪಾತ್ರವಾದ ಸಂಗೀತ ಕಛೇರಿ ಗಳನ್ನು ಮಹಿಳಾ ಶಾಖೆ ಆಗಾಗ್ಗೆ ನಡಸಿ, ಅದಕ್ಕೆ ಮಹಿಳೆಯರ ನೆರವು ಹೆಚ್ಚು ಹೆಚ್ಚಾಗಿ ದೊರೆತು, ಅದು ಬೇಗ ಅಭಿವೃದ್ಧಿಯಾಗಲಿ' ಎಂದು ಹಾರೈಸಿದರು.

## ಕನ್ನಡ ಸುದ್ದಿ

### ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ

#### ಶ್ರೀ ಶಾಂತಕವಿಗಳ ಪುಣ್ಯತಿಥಿಯ ಆಚರಣೆ

೧-೪-೧೯೪೩ರ ಸಂಜೆ ಕರ್ನಾಟಕ ವಿದ್ಯಾವರ್ಧಕ ಸಂಘ ಹಾಗೂ ಶ್ರೀ ಶಾಂತೇಶ ವಾಚನಾಲಯ ಇವುಗಳ ಪರವಾಗಿ ಕೈ. ವಾ. ಬಾಳಾಚಾರ್ಯ ಸಕ್ಕರಿ ಶ್ರೀ ಶಾಂತಕವಿ ಅವರ ಪುಣ್ಯತಿಥಿಯನ್ನು ಆಚರಿಸಲಾಯಿತು.

ಶ್ರೀ. ದ. ರಾ. ಬೇಂದ್ರೆ ಅವರು, ಶ್ರೀ ಶಾಂತಿಕವಿಗಳಿಂದ ೫೩ ವರುಷಗಳ ಹಿಂದೆಯೇ ರಚಿತವಾದ, ಆದರೆ ಬೆಳಕನ್ನು ಕಾಣದೆ ಉಳಿದ, ಕಾಳಿದಾಸ ಕವಿಯ 'ಋತು ಸಂಹಾರ' ಖಂಡಕಾವ್ಯದ ಕನ್ನಡ ಭಾಷಾಂತರದ ಕೆಲವು ಭಾಗವನ್ನು ಓದಿ ಶ್ರೀ ಶಾಂತಕವಿಗಳ ಜೀವನದ ಹಲವು ಸಂಗತಿಗಳನ್ನೂ ಅವರ ಕನ್ನಡದ ಅಭಿಮಾನವನ್ನೂ ಹೊಗಳಿದರು. ಆಮೇಲೆ ಶ್ರೀ. ಬೇಂದ್ರೆ ಅವರು ಕವಿ ಲಕ್ಷ್ಮೀಶನ 'ಜೈಮಿನಿ ಭಾರತ'ದ ತೀರ ಪುರಾತನ ಪ್ರತಿಯೊಂದನ್ನು ಸಭಿಕರಿಗೆ ತೋರಿಸಿ, ಹೆಸರಾಂತ ಈ ಕನ್ನಡ ಕವಿಯ ಬಗ್ಗೆ, ಹಿರಿದಾದ ಅವನ ಕನ್ನಡ ಕಾವ್ಯದ ಅಭ್ಯಸನದ ಬಗೆಗೆ ಹಲವು ಮುಖ್ಯ ಮಾತುಗಳನ್ನು ಹೇಳಿದರು. ಕವಿ ಲಕ್ಷ್ಮೀಶನ ಕಥನ ಕೌಶಲವನ್ನೂ ಕವಿತಾ ಸಾಮರ್ಥ್ಯವನ್ನೂ ಸೋದಾಹರಣವಾಗಿ ವಿವರಿಸಿದರು. ಭಾರತದ ಕಥಾವಸ್ತು ಹೊಸದೇನಲ್ಲ. ಆದರೆ ಕವಿ ಲಕ್ಷ್ಮೀಶನು ಆದನ್ನ ಜೈಮಿನಿಯಿಂದ ಎರವಾಗಿ ತೆಗೆದುಕೊಂಡು ಮೂಲಕವಿಗಿಂತ ಕನ್ನಡ ಭಾರತವನ್ನು ಅದೆಷ್ಟೋ ಚೆನ್ನಾಗಿ ನಿರೂಪಿಸಿದ್ದಾನೆ ಎನ್ನಬಹುದು ಎಂದು ಹೇಳಿ ದರು. "ಕವಿ ಲಕ್ಷ್ಮೀಶನ ಕಥಾನಿರೂಪಣೆ-ರಸಪೋಷಣೆ ಮತ್ತು ಪದಜೋಡಣೆ ಅಸದೃಶವಾಗಿವೆ. ನಾನು ಮರಾಠಿಭಾಷೆಯಲ್ಲಿ ಮಹಾಭಾರತವನ್ನು ಓದಿದ್ದೇನೆ. ತೆಲುಗಿನಲ್ಲಿಯ ಭಾರತದ ಹಲವು ಭಾಗವನ್ನು ಮಿತ್ರರೊಬ್ಬರಿಂದ ಓದಿಸಿ ತಿಳಿದು ಕೊಂಡಿದ್ದೇನೆ; ನನಗೆ ತಿಳಿದಮಟ್ಟಿಗೆ ಇವುಗಳಿಗಿಂತ ಲಕ್ಷ್ಮೀಶನ ಕನ್ನಡ ಭಾರತವು ಮಿಗಿಲಾದುದು; ಇಂತಹ ಕವಿ ಕನ್ನಡದಲ್ಲಿ ಜನಿಸಿದುದು ಒಂದು ಭಾಗ್ಯವೇ. ಮಹಾಭಾರತವು ಜೀವನದ ವಿವಿಧಾಂಗಗಳನ್ನೊಳಗೊಂಡ ಮಹಾ ಕಾವ್ಯ. ಅದು ಭಾರತೀಯ ಜೀವನ ಕೋಶವೇ ಆಗಿದೆ. ಜೀವನಕ್ಕೆ ಅಷ್ಟು ನಿಕಟವಾಗಿ ಹೊಂದಿರುವ ಮಹಾಭಾರತ ಕಾವ್ಯದ ಅಭ್ಯಸನ ಕನ್ನಡದಲ್ಲಿ ಇನ್ನೂ ಬೆಳೆಯಲೆಂದು ಹಾರೈಸುವೆ" ಎಂದು ಹೇಳಿ ತಮ್ಮ ರಸವತ್ತಾದ ಭಾಷಣವನ್ನು ಮುಗಿಸಿದರು.

ಮೇಲಿನ ಉಪನ್ಯಾಸ ಮುಗಿದನಂತರ, ಶ್ರೀ. ಪಾಂಡೇಶ್ವರ ಗಣಪತಿರಾಯರು 'ಜೀವನವೂ ಸಾಹಿತ್ಯವೂ' ಎಂಬ ವಿಷಯದ ಮೇಲೆ ಕೆಲಹೊತ್ತು ಮಾತನಾಡಿ ದರು. ಮಾನವರಲ್ಲಿ ಹರಡಿಕೊಂಡಿರುವ ಅಂಧಕಾರವನ್ನು ಹೊಡೆದೋಡಿಸಿ ಬೆಳಕನ್ನು ಬೀರಿ ಜೀವನಕ್ಕೆ ನೈಜವಾದ ಸುಖವನ್ನು ಬೆರಸುವುದೇ ಸಾಹಿತ್ಯದ ಗುರಿ ಎಂದು ಅವರು ತಿಳಿಸಿದರು.

ಕಾರ್ಯದರ್ಶಿಗಳಾದ ಶ್ರೀ. ಡಾ. ಕಾಂತೇಶ ಕಮಲಾಪೂರ ಅವರು ಉಪನ್ಯಾಸಕರಿಬ್ಬರನ್ನೂ ಮನ್ನಿಸಿದನಂತರ ಸಭೆಯ ಕಾರ್ಯ ಮುಗಿಯಿತು.

೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

## ಮೈಸೂರಿನ ಸ್ಥಳೀಯ ಸರಕಾರ ಪದ್ಧತಿ

(೧೨೫ನೆಯ ಪುಟದಿಂದ)

(೧) ಅವರ್ಜ್ಯ ಕರ್ತವ್ಯಗಳು, (೨) ಐಚ್ಛಿಕ ಕರ್ತವ್ಯಗಳು, (೩) ನಿಯೋಜಿತ ಕರ್ತವ್ಯಗಳು. ಈ ಕರ್ತವ್ಯಗಳೆಲ್ಲ ಸಾಮಾನ್ಯವಾಗಿ ಮೂರು ಮುಖ್ಯ ವಿಷಯಗಳಿಗೆ ಸಂಬಂಧಪಡುವುವು:—

(೧) ಸಾರ್ವಜನಿಕ ಆರೋಗ್ಯ, (೨) ಸಾರ್ವಜನಿಕ ರಕ್ಷಣೆ, (೩) ಸಾರ್ವಜನಿಕ ಸೌಕರ್ಯ.

ವೈದ್ಯ ಸಹಾಯ, ರೋಗ ನಿವಾರಣೆ, ಶಿಡಬು ಹಾಕುವುದು, ಜನನ ಮರಣಗಳ ಪಟ್ಟಿಯ ಏರ್ಪಾಟು, ನೈರ್ಮಲ್ಯ ಕಾರ್ಯ, ಕಶ್ಮಲ ವಿಸರ್ಜನೆ, ಒಳ ಚರಂಡಿ ವ್ಯವಸ್ಥೆ, ಶುದ್ಧವಾದ ನೀರಿನ ಸರಬರಾಜು, ಆಹಾರ ಮಿಶ್ರಣ ನಿರೋಧ, ಆಹಾರ ಮಂದಿರಗಳ ಹತೋಟಿ, ಶವ ಸಂಸ್ಕಾರದ ಏರ್ಪಾಟು, ಮುಂತಾದವು ಸಾರ್ವಜನಿಕ ಆರೋಗ್ಯಕ್ಕೆ ಸಂಬಂಧಪಟ್ಟ ಕಾರ್ಯಗಳು.

ಮಾರ್ಗಗಳ ಏರ್ಪಾಟು, ಮಾರ್ಗಗಳಲ್ಲಿ ದೀಪ ಹಚ್ಚುವುದು, ಮಾರ್ಗಗಳಲ್ಲಿ ಅತಿಕ್ರಮಣಾದಿಗಳನ್ನು ನಿರೋಧಿಸುವುದು, ಬೆಂಕಿ ಆರಿಸುವ ಏರ್ಪಾಟು, ಅಪಾಯಕರವಾದ ಕೈಗಾರಿಕೆ ಮತ್ತು ವ್ಯಾಪಾರಗಳ ಹತೋಟಿ, ಹುಚ್ಚುನಾಯಿಗಳ ನಾಶನ, ಕಟ್ಟಡಗಳ ಹತೋಟಿ ಮುಂತಾದುವು ಸಾರ್ವಜನಿಕ ರಕ್ಷಣೆಗೆ ಸಂಬಂಧಪಟ್ಟ ಕಾರ್ಯಗಳು.

ಸಾರ್ವಜನಿಕ ಆರೋಗ್ಯಕ್ಕೂ ಸಾರ್ವಜನಿಕ ರಕ್ಷಣೆಗೂ ಸಂಬಂಧಪಟ್ಟ ಕಾರ್ಯಗಳೆಲ್ಲ ಸಾಮಾನ್ಯವಾಗಿ ಸ್ಥಳೀಯ ಸಂಸ್ಥೆಗಳ ಅವರ್ಜ್ಯ ಕರ್ತವ್ಯಗಳೆಂದು ಹೇಳಬಹುದು.

ಆಟದ ಬೈಲುಗಳು, ಉದ್ಯಾನವನಗಳು, ಸ್ನಾನಘಟ್ಟಗಳು, ಶೌಚ ಕೂಪಗಳು, ಸಾರ್ವಜನಿಕ ಸಭಾ ಮಂಟಪಗಳು, ವಸ್ತುಪ್ರದರ್ಶನ ಶಾಲೆಗಳು, ಪುಸ್ತಕ ಭಂಡಾರಗಳು, ವಾಚನಾಲಯಗಳು, ಕಲಾಶಾಲೆಗಳು, ಸಾರ್ವಜನಿಕ ಮಾರಾಟ ಸ್ಥಳಗಳು, ಸಾರ್ವಜನಿಕ ಪ್ರಯೋಜನವುಳ್ಳ ಕೈಗಾರಿಕೆ ಮತ್ತು ವ್ಯಾಪಾರಗಳ ನಿರ್ವಹಣ ಇವೇ ಮುಂತಾದವುಗಳ ಏರ್ಪಾಟುಗಳು ಸಾರ್ವಜನಿಕ ಸೌಕರ್ಯಕ್ಕೆ ಸಂಬಂಧಪಟ್ಟ ಕಾರ್ಯಗಳು.

ಸುಮಾರು ೫೦ ನಗರ ಪ್ರಾಂತದ ಸ್ಥಳೀಯ ಸಂಸ್ಥೆಗಳು ಶುದ್ಧವಾದ ಕುಡಿಯುವ ನೀರಿನ ವ್ಯವಸ್ಥೆಯನ್ನು ಮಾಡಿರುತ್ತವೆ. ಸುಮಾರು ೧೩,೦೦೦ ಗ್ರಾಮಗಳಲ್ಲಿ ಕುಡಿಯುವ ನೀರಿನ ಬಾವಿಗಳು ಏರ್ಪಟ್ಟಿರುವುವು. ಸುಮಾರು ೧೫೦ ಗ್ರಾಮಗಳೂ ೬೦ ಪಟ್ಟಣಗಳೂ ವಿದ್ಯುಚ್ಛಕ್ತಿ ದೀಪಗಳನ್ನು ಪಡೆದಿರುತ್ತವೆ.

ನೂತನ ಪ್ರಾಥಮಿಕ ವಿದ್ಯಾಭ್ಯಾಸ ಶಾಸನದ ಮೇರೆ ಪ್ರಾಥಮಿಕ ವಿದ್ಯಾಭ್ಯಾಸ ಕಾರ್ಯ ಕೇಂದ್ರ ಸರಕಾರದ ಅಧಿಕಾರಕ್ಕೆ ವಹಿಸಲಾಗಿದೆ.

### ಹಣಕಾಸಿನ ವಿಚಾರಗಳು

ತೆರಿಗೆಗಳು ಎರಡು ವಿಧ : (೧) ಅವರ್ಜ್ಯ, ಮತ್ತು (೨) ಐಚ್ಛಿಕ. ಯಾವ ಬಗೆಯ ತೆರಿಗೆಯನ್ನು ಎತ್ತಬೇಕಾದರೂ ಪ್ರತಿ ಸ್ಥಳೀಯ ಸಂಸ್ಥೆಯೂ ಕೇಂದ್ರ ಸರಕಾರದ ಅನುಮತಿಯನ್ನು ಪಡೆಯಬೇಕು.

ಮನೆಗಂದಾಯ, ಅಂಗಡಿ ತೆರಿಗೆ, ವಾಹನ ತೆರಿಗೆ, ಬಾಲ ತೆರಿಗೆ, ವೃತ್ತಿ ತೆರಿಗೆ, ಸುಂಕ, ಗಡಿ ಸುಂಕ, ನೀರಿನ ತೆರಿಗೆ, ದೀಪದ ತೆರಿಗೆ, ಶೌಚ ತೆರಿಗೆ, ಅಪ್ಪಣೆ ಚೀಟಿಯ ತೆರ ಅಥವಾ ಶುಲ್ಕ — ಇವು ಸ್ಥಳೀಯ ಸಂಸ್ಥೆಗಳು ಎತ್ತಬಹುದಾದ ಮುಖ್ಯ ತೆರಿಗೆಗಳು.

ಪ್ರತಿ ಸ್ಥಳೀಯ ಸಂಸ್ಥೆಯೂ ಕೇಂದ್ರ ಸರಕಾರವು ವಿಧಿಸಬಹುದಾದ ನಿಬಂಧನೆಗಳ ಮೇರೆ ಅದರ ಲೆಕ್ಕಗಳನ್ನು ಇಡಬೇಕು. ಪ್ರತಿ ವರ್ಷವೂ ಅದರ ಆಯವ್ಯಯಗಳ ಅಂದಾಜನ್ನು ತಯಾರು ಮಾಡಬೇಕು. ಯಾವ ಅಂದಾಜೂ ಸರಕಾರದ ಅಂಗೀಕಾರವನ್ನು ಪಡೆಯದೆ ಊರ್ಜಿತವಾಗುವುದಿಲ್ಲ. ಪ್ರತಿ ಸ್ಥಳೀಯ ಸಂಸ್ಥೆಯೂ ಕಳುಹಿಸುವ ಅಂದಾಜನ್ನು ಸರಕಾರವು ಅದರ ಇಷ್ಟಾನುಸಾರ ಬದಲಾವಣೆಮಾಡಿ ಒಪ್ಪಬಹುದು. ಸರಕಾರದಿಂದ ಅಂಗೀಕೃತವಾದ ಅಂದಾಜಿಗೆ ವಿರೋಧವಾಗಿ ವೆಚ್ಚಮಾಡಲು ಯಾವ ಸಂಸ್ಥೆಗೂ ಅಧಿಕಾರವಿಲ್ಲ.

ಗ್ರಾಮ ಪಂಚಾಯಿತಿಗಳ ಪರ ತೆರಿಗೆಗಳನ್ನು ನಿಗದಿ ಮಾಡಿ ವಸೂಲು ಮಾಡುವ ಅಧಿಕಾರವು ಅವುಗಳಿಗೆ ಸಂಬಂಧಪಟ್ಟ ಅಮಲ್ದಾರರುಗಳಿಗೆ ವಹಿಸಲಾಗಿದೆ.

ಪ್ರತಿ ಸ್ಥಳೀಯ ಸಂಸ್ಥೆಯೂ ಸೂಚಿಸತಕ್ಕ ಅಧಿಕ ವೆಚ್ಚದ ಬಾಬುಗಳಿಗೆಲ್ಲಾ ಅದು ಕೇಂದ್ರ ಸರಕಾರದ ಒಪ್ಪಿಗೆಯನ್ನು ಪಡೆಯಬೇಕು. ಪ್ರತಿವರ್ಷವೂ ಸರಕಾರವು ನಿಯಮಿಸುವ ಅಧಿಕಾರಿಗಳಿಂದ ಸ್ಥಳೀಯ ಸಂಸ್ಥೆಗಳ ಲೆಕ್ಕಗಳು ಪರಿಶೋಧಿಸಲ್ಪಡುತ್ತವೆ. ಪ್ರತಿ ಸಂಸ್ಥೆಯೂ ಅದರ ವಾರ್ಷಿಕ ವರದಿಯನ್ನೂ ಲೆಕ್ಕವನ್ನೂ ಕೇಂದ್ರ ಸರಕಾರಕ್ಕೆ ಕಳುಹಿಸಬೇಕು.

ಮೈಸೂರಿನ ಸ್ಥಳೀಯ ಸಂಸ್ಥೆಗಳ ಸಾಮಾನ್ಯ ವಾರ್ಷಿಕಾದಾಯ ಸುಮಾರು ೮೦ ಲಕ್ಷ ರೂಪಾಯಿಗಳು. ನಗರ ಸಮಿತಿಗಳ ಆದಾಯ ಸುಮಾರು ೨೫ ಲಕ್ಷ; ಪಟ್ಟಣ ಮತ್ತು ಉಪಪಟ್ಟಣಗಳ ಆದಾಯ ಸುಮಾರು ೨೦ ಲಕ್ಷ; ಜಿಲ್ಲೆ ಸಮಿತಿಗಳ ಉತ್ಪತ್ತಿ ಸುಮಾರು ೧೭ ಲಕ್ಷ; ಚಿನ್ನದ ಗಣಿ ಸಮಿತಿಯ ಆದಾಯ ಸುಮಾರು ೨ ಲಕ್ಷ; ಗ್ರಾಮ ಪಂಚಾಯಿತಿಗಳ ಆದಾಯ ಸುಮಾರು ೧೬ ಲಕ್ಷ. ಸರಕಾರವು ಕೊಡತಕ್ಕ ಹಣ ಮತ್ತು ಇತರ ವಿಶೇಷ ವರಮಾನಗಳು ಸೇರಿ ಪ್ರತಿ ವರ್ಷವೂ ಸ್ಥಳೀಯ ಸಂಸ್ಥೆಗಳು ಸುಮಾರು ಒಂದು ಕೋಟಿ ರೂಪಾಯಿಗಳವರೆಗೂ ಸಾರ್ವಜನಿಕ ಕ್ಷೇಮ ಕಾರ್ಯಗಳಿಗಾಗಿ ವೆಚ್ಚಮಾಡುತ್ತವೆ.

### ಕೇಂದ್ರ ಸರಕಾರದ ಮೇಲ್ವಿಚಾರಣೆ

ಸಾಮಾನ್ಯ ವ್ಯಕ್ತಿಗಳು ಹೇಗೆ ನ್ಯಾಯಸ್ಥಾನಗಳ ಅಧಿಕಾರಕ್ಕೊಳಪಟ್ಟಿರುವರೋ ಹಾಗೆಯೇ ಸ್ಥಳೀಯ ಸಂಸ್ಥೆಗಳೂ ಅವುಗಳ ಅಧಿಕಾರಕ್ಕೊಳಪಟ್ಟಿರುತ್ತವೆ.

ಸ್ಥಳೀಯ ಸಂಸ್ಥೆಗಳು ಶಾಸನ ಕಲ್ಪಿತ ಸಂಸ್ಥೆಗಳಾದುದರಿಂದ ಅವು ಕೇಂದ್ರ ಸರಕಾರದ ಶಾಸನಾಂಗದ ಅಧಿಕಾರಕ್ಕೂ ಒಳಪಟ್ಟಿರುವುವು. ಶಾಸನಾಂಗವು ಮಾಡಿರುವ ಶಾಸನಗಳ ಮೇರೆ ಅವು ಸ್ಥಾಪಿತವಾಗಿವೆ. ಈ ಶಾಸನಗಳನ್ನು ತಿದ್ದುವ ಅಧಿಕಾರವು ಶಾಸನಾಂಗಕ್ಕೆ ಮಾತ್ರ ಸೇರಿದೆ.

ಸ್ಥಳೀಯ ಸಂಸ್ಥೆಗಳ ಮೇಲೆ ಕೇಂದ್ರ ಸರಕಾರದ ಕಾರ್ಯ ನಿರ್ವಾಹಾಂಗದ ಅಧಿಕಾರವು ಸರ್ವವ್ಯಾಪಕವಾಗಿದೆ. ಸ್ಥಳೀಯ ಸಂಸ್ಥೆಗಳನ್ನು ಕುರಿತು ಸರಕಾರವು ಉಪಶಾಸನಗಳನ್ನೂ ಆಜ್ಞೆಗಳನ್ನೂ ಮಾಡಬಹುದು. ಸ್ಥಳೀಯ ಸಂಸ್ಥೆಗಳು ಮಾಡುವ ಉಪನಿಬಂಧನೆಗಳು ಸರಕಾರದ ಅಂಗೀಕಾರವನ್ನು ಪಡೆಯದೆ ಊರ್ಜಿತವಾಗಲಾರವು. ಚುನಾವಣಾ ಕ್ಷೇತ್ರಗಳನ್ನು ನಿರ್ಧರಿಸುವ ಅಧಿಕಾರವೂ ಮತದಾರರ ಯೋಗ್ಯತೆಯನ್ನು ಗೊತ್ತುಮಾಡುವ ಅಧಿಕಾರವೂ ಕೇಂದ್ರ ಸರಕಾರಕ್ಕೆ ಸೇರಿವೆ. ಒಂದು ಸ್ಥಳೀಯ ಸಂಸ್ಥೆಯ ಅಧ್ಯಕ್ಷನನ್ನಾಗಲಿ ಉಪಾಧ್ಯಕ್ಷನನ್ನಾಗಲಿ ಸದಸ್ಯನನ್ನಾಗಲಿ ಅವಿವೇಕ ನಡತೆಗೋಸ್ಕರ ಸರಕಾರವು ನಿವೃತ್ತಿಮಾಡಬಹುದು.

ಪ್ರತಿ ಸಂಸ್ಥೆಯ ಅಧಿಕಾರಿಗಳನ್ನು ಕೇಂದ್ರ ಸರಕಾರವು ನಿಯಮಿಸುತ್ತದೆ. ಮುಖ್ಯಾಧಿಕಾರಿಗಳೂ ಆರೋಗ್ಯ ಶಾಖೆಯ ಅಧಿಕಾರಿಗಳೂ ಇಂಜನಿಯರಿಂಗ್ ಶಾಖೆಯ ಅಧಿಕಾರಿಗಳೂ ಸರಕಾರದಿಂದ ನಿಯಮಿತರಾದ ಸರಕಾರಿ ಅಧಿಕಾರಿಗಳು. ಕೆಳ ತರಗತಿಯ ನೌಕರರೆಲ್ಲರೂ ಸರಕಾರಿ ನೌಕರರ ಶಾಸನದ ಮೇರೆ ನಿಯಮಿಸಲ್ಪಡುತ್ತಾರೆ. ಈ ನೌಕರರನ್ನು ಸರಕಾರವು ಒಂದು ಸಂಸ್ಥೆಯಿಂದ ಮತ್ತೊಂದು ಸಂಸ್ಥೆಗೆ ವರ್ಗಮಾಡಬಹುದು. ಸ್ಥಳೀಯ ಸಂಸ್ಥೆಗಳ ನೌಕರರ ಕೇಂದ್ರೀಕರಣ ಯೋಜನೆಯು ಆಚರಣೆಗೆ ಬಂದ ತರುವಾಯ ಕೇಂದ್ರ ಸರಕಾರದ ಅಧಿಕಾರವು ಇನ್ನೂ ಹೆಚ್ಚಲು ಅವಕಾಶವುಂಟಾಗಿದೆ.

ಸರಕಾರವು ಆಜ್ಞೆಮಾಡುವ ರೀತಿಯಲ್ಲಿ ಪ್ರತಿ ಸ್ಥಳೀಯ ಸಂಸ್ಥೆಯೂ ಅದರ ಲೆಕ್ಕಗಳನ್ನು ಇಡಬೇಕು. ಸರಕಾರವು ನಿಯಮಿಸುವ ಲೆಕ್ಕ ಪರಿಶೋಧಕರಿಂದ ಅದರ ಲೆಕ್ಕಗಳು ತನಿಖೆ ಮಾಡಲ್ಪಡುತ್ತವೆ. ಸರಕಾರದ ಅನುಮತಿಯನ್ನು ಪಡೆಯದೆ ಯಾವ ಸಂಸ್ಥೆಯೂ ಹೊಸ ತೆರಿಗೆಯನ್ನು ಎತ್ತಲಾಗುವುದಿಲ್ಲ. ಪ್ರತಿ ಸಂಸ್ಥೆಯೂ ಅದರ ಆಯವ್ಯಯಗಳ ಅಂದಾಜನ್ನು ಸರಕಾರಕ್ಕೆ ಒಪ್ಪಿಸಿ, ಅದರ ಒಪ್ಪಿಗೆಯನ್ನು ಪಡೆಯಬೇಕು. ಸರಕಾರದ ಅನುಮತಿಯನ್ನು ಪಡೆಯದೆ ಯಾವ ಸಂಸ್ಥೆಯೂ ಸಾಲವನ್ನು ತೆಗೆಯಲು ಅಧಿಕಾರವುಂಟಾಗಿಲ್ಲ.

ಯಾವುದಾದರೊಂದು ಸಂಸ್ಥೆಯು ಕರ್ತವ್ಯ ಲೋಪ ಮಾಡಿದರೆ ಸರಕಾರವು ಅಂತಹ ಕರ್ತವ್ಯವನ್ನು ಸ್ವತಂತ್ರವಾಗಿ ನಡಸಿ ಅದರ ವೆಚ್ಚವನ್ನು ಸಂಸ್ಥೆಯ ನಿಧಿಯಿಂದ ತೆಗೆದುಕೊಳ್ಳಬಹುದು. ಸ್ಥಳೀಯ ಸಂಸ್ಥೆಯೊಂದು ಅದರ ಆಡಳಿತವನ್ನು ಸರಿಯಾಗಿ ನಡಸದಿದ್ದಲ್ಲಿ

ಸರಕಾರವು ಅದನ್ನು ತಾತ್ಕಾಲಿಕವಾಗಿ ತಳ್ಳಿಹಾಕಬಹುದು ; ಇಲ್ಲವೆ ಅದನ್ನು ಸಂಪೂರ್ಣವಾಗಿ ರದ್ದುಪಡಿಸಬಹುದು.

ಈ ವಿಧವಾದ ಅಧಿಕಾರ ವ್ಯಾಪ್ತಿಯ ದೆಸೆಯಿಂದ ಸ್ಥಳೀಯ ಸಂಸ್ಥೆಗಳ ಕೆಲವು ಕರ್ತವ್ಯಗಳು ತತ್ಸಂಬಂಧವಾದ ಸರಕಾರದ ಶಾಖೆಗಳ ಆಡಳಿತಕ್ಕೆ ಸೇರಿ ಹೋಗಿರುತ್ತವೆ. ನೀರು, ವಿದ್ಯುಚ್ಛಕ್ತಿ ದೀಪ, ಒಳಚರಂಡಿ ಮತ್ತು ಆಸ್ಪತ್ರೆ–ಇವುಗಳಿಗೆ ಸಂಬಂಧಪಟ್ಟ ಆಡಳಿತವು ಸಾಮಾನ್ಯವಾಗಿ ಸರಕಾರದ ಅಧೀನದಲ್ಲಿರುತ್ತದೆ. ಈ ವಿಚಾರದಲ್ಲಿ ಸ್ಥಳೀಯ ಸಂಸ್ಥೆಗಳು ತೆರಿಗೆ ಎತ್ತಿ ಸರಕಾರಕ್ಕೆ ಹಣವೊದಗಿಸುವ ಸಂಸ್ಥೆಗಳಾಗಿ ಪರಿಣಮಿಸಿರುವುವು.

**ಸ್ಥಳೀಯ ಸಂಸ್ಥೆಗಳ ಭವಿಷ್ಯ**

ಸ್ಥಳೀಯ ಸಂಸ್ಥೆಗಳಲ್ಲಿ ಸ್ವಯಂಪ್ರಭುತ್ವವು ಬೆಳೆಯಬೇಕಾದರೆ ಕೇಂದ್ರ ಸರಕಾರದಲ್ಲಿ ಜವಾಬ್ದಾರಿ ರಾಜ್ಯಭಾರಕ್ರಮವು ಸ್ಥಾಪಿತವಾಗಬೇಕಾದುದು ಅತ್ಯಾವಶ್ಯಕ. ಪ್ರಜಾಪ್ರತಿನಿಧಿ ಪ್ರಭುತ್ವ ತತ್ವದ ಮೇರೆ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳೂ ನೌಕರರ ಪ್ರಾಬಲ್ಯ ತತ್ವದ ಮೇರೆ ಸ್ಥಾಪಿತವಾಗಿರುವ ಕೇಂದ್ರ ಸರಕಾರವೂ ಅನ್ಯೋನ್ಯವಾಗಿ ಕೆಲಸ ಮಾಡಲೂ ಆಗುವುದಿಲ್ಲ, ಮುಂದುವರಿಯಲೂ ಆಗುವುದಿಲ್ಲ.

ಸ್ಥಳೀಯ ಸಂಸ್ಥೆಗಳ ಸ್ವಯಂ ಪ್ರಭುತ್ವವು ಬೆಳೆಯಬೇಕಾದರೆ ಜವಾಬ್ದಾರಿ ಸರ್ಕಾರವೊಂದೇ ಸಾಲದು, ಇತರ ಸುಧಾರಣೆಗಳೂ ಆವಶ್ಯಕ. ನಾಮಕರಣ ಪದ್ಧತಿ ಹೋಗಬೇಕು. ಪ್ರತಿ ಸಂಸ್ಥೆಯ ಸದಸ್ಯರೆಲ್ಲರೂ ಚುನಾವಣೆಯ ಮೂಲಕ ಆರಿಸಲ್ಪಡಬೇಕು. ಪ್ರತಿ ನಗರ, ಪಟ್ಟಣ ಅಥವಾ ಜಿಲ್ಲೆಯಲ್ಲಿರುವ ವಯಸ್ಕರೆಲ್ಲರೂ ಮತ ಸೂಚಿಸುವ ಹಕ್ಕನ್ನು ಪಡೆಯಬೇಕು. ಯೋಗ್ಯನಾದ ಪ್ರತಿವಯಸ್ಕನೂ ಪ್ರಜಾಧಿಕಾರವನ್ನು ಪಡೆದಿರಬೇಕು. ಹಾಗಿಲ್ಲದಿದ್ದರೆ ನಿಜವಾದ ಪ್ರಜಾಧಿಪತ್ಯವು ಪ್ರಾಪ್ತವಾಗುವುದಿಲ್ಲ.

ಸ್ಥಳೀಯ ಸಂಸ್ಥೆಗಳ ದಿನಗಟ್ಟಲೆಯ ಆಡಳಿತದಲ್ಲಿ ಕೇಂದ್ರ ಸರ್ಕಾರ ಪ್ರವೇಶಮಾಡಲು ಅಧಿಕಾರವನ್ನು ಪಡೆದಿರಕೂಡದು. ಕೇಂದ್ರ ಸರಕಾರದ ಮೇಲ್ವಿಚಾರಣೆಯ ಉದ್ದೇಶ ಕೇವಲ ಅಧಿಕಾರ ಪ್ರದರ್ಶನವಲ್ಲ ; ಶಾಸನಕ್ಕೂ ನೀತಿಗೂ ಆಡಳಿತದ ಮೇಲುತರದ ಮಟ್ಟಕ್ಕೂ ವಿರೋಧವಾಗಿ ಯಾವ ಸ್ಥಳೀಯ ಸಂಸ್ಥೆಯೂ ಕೆಲಸ ಮಾಡದಂತೆ ತಿದ್ದುವುದು.

ಸ್ಥಳೀಯ ಸಂಸ್ಥೆಗಳ ಕೇಂದ್ರ ಸಮಿತಿಯೊಂದನ್ನು ಸ್ಥಾಪಿಸುವುದರಿಂದ ಪ್ರಜಾಧಿಪತ್ಯವು ಬೆಳೆಯಲು ಅವಕಾಶವುಂಟಾಗುವುದು. ಈ ಸಮಿತಿಯಲ್ಲಿ ಪ್ರಜೆಗಳಿಂದ ಚುನಾಯಿತರಾದ ಪ್ರತಿನಿಧಿಗಳಿರಬೇಕು. ಸ್ಥಳೀಯ ಸರಕಾರ ಶಾಖೆಯ ಮಂತ್ರಿಯು ಈ ಸಮಿತಿಯ ಸಲಹೆ ಮೇರೆ ಕೆಲಸ ಮಾಡಬೇಕು. ಸರ್ಕಾರ ಮಾಡತಕ್ಕ ಉಪಶಾಸನವೂ ಆಜ್ಞೆಗಳೂ ಸಮಿತಿಯಿಂದ ಪರಾಂಬರಿಸಲ್ಪಡಬೇಕು. ಆಡಳಿತ ವಿಚಾರದಲ್ಲಿ ಸರಕಾರಕ್ಕೂ ಒಂದು ಸ್ಥಳೀಯ ಸಂಸ್ಥೆಗೂ ವಿವಾದವುಂಟಾದಲ್ಲಿ ಅಂತಹ ವಿವಾದವನ್ನು ಇತ್ಯರ್ಥ ಮಾಡಲು ಸಮಿತಿಯು ಅಧಿಕಾರವನ್ನು ಪಡೆದಿರಬೇಕು.

ಪಾಶ್ಚಾತ್ಯ ದೇಶಗಳಲ್ಲಿ ಸ್ಥಳೀಯ ಸಂಸ್ಥೆಗಳು ಸಾರ್ವಜನಿಕ ಪ್ರಯೋಜನವುಳ್ಳ ಕೈಗಾರಿಕೆ ಮತ್ತು ವ್ಯಾಪಾರಗಳನ್ನು ನಡಸುತ್ತಿರುವುವು. ಇದರಿಂದ ಜನರಿಗೆ ಸುಲಭ ಬೆಲೆಗೆ ವಸ್ತುಗಳನ್ನು ಒದಗಿಸಲು ಅವಕಾಶವಾಗುವುದು; ಲಭ್ಯವಾದ ಲಾಭವನ್ನು ಪ್ರಜೆಗಳ ಕ್ಷೇಮ ಸಾಧನೆಗಾಗಿ ವಿನಿಯೋಗಿಸಬಹುದು. ಮೈಸೂರಿನ ಸ್ಥಳೀಯ ಸಂಸ್ಥೆಗಳೂ ಇಂತಹ ಕಾರ್ಯಗಳಿಗೆ ಹೆಚ್ಚುಹೆಚ್ಚಾಗಿ ಗಮನಕೊಡಬೇಕಾದುದು ಆವಶ್ಯಕ. ಹೀಗೆ ಮಾಡುವುದರಿಂದ ಅವುಗಳ ಆದಾಯವೂ ಹೆಚ್ಚುವುದು; ಜನೋಪಯುಕ್ತವಾದ ಕೈಗಾರಿಕೆಗಳನ್ನು ಅಭಿವೃದ್ಧಿಪಡಿಸಲು ಸಹಾಯಮಾಡಿದಂತಾಗುವುದು. ಹಾಲಿನ ಸರಬರಾಜು, ವಾಹನಗಳ ಏರ್ಪಾಟು, ಗೃಹನಿರ್ಮಾಣ ಮುಂತಾದ ಸಾರ್ವಜನಿಕ ಕ್ಷೇಮಕಾರ್ಯಗಳನ್ನು ಅವು ಕೂಡಲೇ ಕೈಕೊಳ್ಳಬಹುದು.

ನಮ್ಮ ದೇಶದ ಸ್ಥಳೀಯ ಸಂಸ್ಥೆಗಳು ಪ್ರಜಾ ಸಂಸ್ಕೃತಿ ಕಾರ್ಯಗಳಲ್ಲಿ ಅಧಿಕವಾಗಿ ಆಸಕ್ತಿಯನ್ನು ತೋರಿಸುತ್ತಿಲ್ಲ. ನಯ ಕಲೆಗಳು, ವಸ್ತುಪ್ರದರ್ಶನಶಾಲೆಗಳು, ಪುಸ್ತಕ ಭಂಡಾರಗಳು, ವಾಚನಾಲಯಗಳು, ಉಪನ್ಯಾಸಗಳು, ಹರಿಕಥೆಗಳು, ಸಾಮಾಜಿಕ ಶಾಸ್ತ್ರ ಪರಿಶೋಧನೆಗಳು, ವಯಸ್ಕರ ಶಿಕ್ಷಣ ಇವೇ ಮುಂತಾದ ವಿಷಯಗಳಿಗೆ ಸಂಬಂಧಪಟ್ಟ ಕಾರ್ಯಗಳಲ್ಲಿ ಸ್ಥಳೀಯ ಸಂಸ್ಥೆಗಳು ಪ್ರವೇಶಿಸಿ, ಪ್ರಜೆಗಳು ಆದರ್ಶ ಜೀವನವನ್ನು ನಡಸಲು ಸಹಾಯ ಮಾಡಬೇಕು.

ಪಾಶ್ಚಾತ್ಯ ದೇಶಗಳಲ್ಲಿ ಪಟ್ಟಣ ನಿರ್ಮಾಣ ಕಾರ್ಯವು ಈಚೆಗೆ ಪ್ರಾಮುಖ್ಯತೆ ಪಡೆದಿದೆ. ಪಟ್ಟಣ ನಿರ್ಮಾಣ ಯೋಜನೆಯನ್ನು ಕುರಿತು ಅನೇಕ ಗ್ರಂಥಗಳು ಹುಟ್ಟಿರುವುವು. ನಮ್ಮ ದೇಶದ ಸ್ಥಳೀಯ ಸಂಸ್ಥೆಗಳೂ ಈ ವಿಚಾರದಲ್ಲಿ ಅಧಿಕಶ್ರದ್ಧೆ ವಹಿಸುವುದು ಅತ್ಯಾವಶ್ಯಕವಾಗಿದೆ. ಪಟ್ಟಣಗಳು ಒಂದು ಜನಾಂಗದ ನಾಗರಿಕತೆಯ ಮಟ್ಟಕ್ಕೆ ನಿದರ್ಶನಗಳಾಗಿರುವುವು. ಆದುದರಿಂದ ಅವುಗಳ ನಿರ್ಮಾಣ ಕಾರ್ಯದಲ್ಲಿ ಕೇಂದ್ರ ಸರ್ಕಾರವೂ ಸ್ಥಳೀಯ ಸಂಸ್ಥೆಗಳೂ ವಿಶೇಷವಾದ ಆಸಕ್ತಿಯನ್ನು ತೋರಿಸಬೇಕಾಗಿದೆ. ಕಾರ್ಖಾನೆಗಳನ್ನು ಪ್ರತ್ಯೇಕ ಮಾಡುವುದು, ವೃತ್ತಿಗನುಸಾರವಾಗಿ ಗೃಹವಸತಿಯನ್ನು ಕಲ್ಪಿಸುವುದು ರಸ್ತೆ, ಆಟದ ಬಯಲು ಮತ್ತು ಕ್ರೀಡಾವನಗಳ ರಚನೆ ಮುಂತಾದ ನೂತನ ನಗರರಚನಾಕ್ರಮಗಳನ್ನು ಅನುಸರಿಸುವುದರಿಂದ ನಗರದ ಸೌಂದರ್ಯವನ್ನೂ ಪ್ರಜಾಸೌಕರ್ಯವನ್ನೂ ಸಾಧಿಸಬಹುದು.

ಸ್ಥಳೀಯ ಸಂಸ್ಥೆಗಳು ಪರ್ಯಾಲೋಚಿಸಬೇಕಾದ ಮತ್ತೊಂದು ವಿಷಯವೇನೆಂದರೆ ನೌಕರರ ಶಾಖೆಯ ಕೇಂದ್ರೀಕರಣ. ಕೇಂದ್ರ ಸರಕಾರದ ನೌಕರರ ಶಾಖೆಗೂ ಸ್ಥಳೀಯ ಸಂಸ್ಥೆಗಳ ನೌಕರರ ಶಾಖೆಗೂ ಇರುವ ಪ್ರಭೇದಗಳು ಹೋಗಬೇಕು. ಉಭಯ ಶಾಖೆಗಳೂ ರಾಜಕೀಯ ವಾದವಿವಾದಗಳಿಂದ ದೂರವಾಗಿರಬೇಕು : ಒಂದೇ ವಿಧವಾದ ಯೋಗ್ಯತೆಯ ಮಟ್ಟವನ್ನು ಪಡೆದಿರಬೇಕು. ಸರ್ವ ಸ್ವತಂತ್ರವಾದ ಸಾರ್ವಜನಿಕ ನೌಕರಿ ಸಮಿತಿಯೊಂದು ಸ್ಥಾಪಿತವಾಗಿ ಉಭಯ ಶಾಖೆಗಳ ಅಧಿಕಾರಿಗಳನ್ನು ನಿಯಮಿಸುವ ಅಧಿಕಾರವನ್ನು ಅದು ಪಡೆದಿರಬೇಕು. ಒಂದು ಶಾಖೆಯ ಅಧಿಕಾರಿಗಳನ್ನೂ ನೌಕರರನ್ನೂ ಮತ್ತೊಂದು ಶಾಖೆಗೆ ವರ್ಗಮಾಡಲು ಅವಕಾಶವಿರಬೇಕು.

ಸ್ಥಳೀಯ ಸಂಸ್ಥೆಗಳ ಅಭಿವೃದ್ಧಿಯನ್ನು ಕುರಿತು ಮತ್ತೊಂದು ಸಲಹೆಯನ್ನು ಸೂಚಿಸಬಹುದು. ಸ್ಥಳೀಯ ಸಂಸ್ಥೆಗಳ ಸಂಘವೊಂದು ಇರಬೇಕಾದುದು ಆವಶ್ಯಕ. ಅವುಗಳ ಹಕ್ಕುಗಳನ್ನು ಕಾಪಾಡಿಕೊಳ್ಳುವುದಕ್ಕೂ ಸ್ಥಳೀಯ ಸರಕಾರಕ್ಕೆ ಸಂಬಂಧಪಟ್ಟ ವಿಷಯಗಳನ್ನು ಚರ್ಚಿಸಿ, ಸೂಚನೆ ಕೊಡುವುದಕ್ಕೂ ಇಂತಹ ಸಂಘವು ಉತ್ತಮ ಸಾಧನವಾಗಿದೆ. ಬ್ರಿಟಿಷ್ ಇಂಡಿಯದ ಕೆಲವು ಪ್ರಾಂತಗಳಲ್ಲಿ ಇಂಥ ಸಂಘಗಳು ಸ್ಥಾಪಿತವಾಗಿವೆ. ಮೈಸೂರು ಸಂಸ್ಥಾನದಲ್ಲಿ ಇದನ್ನು ಕೂಡಲೇ ಸ್ಥಾಪಿಸುವುದು ಅತ್ಯಾವಶ್ಯಕವಾಗಿದೆ. ಸರಕಾರವೂ ಸ್ಥಳೀಯ ಸಂಸ್ಥೆಗಳೂ ಇದರ ಸ್ಥಾಪನೆಯಲ್ಲಿ ನೆರವಾಗುವುವೆಂದು ಕೋರಿದೆ.

ಸ್ಥಳೀಯ ಸಂಸ್ಥೆಗಳು ಬೆಳೆಯಬೇಕಾದರೆ ಪ್ರಜೆಗಳೂ ಪ್ರಜಾಪ್ರತಿನಿಧಿಗಳೂ ಶಕ್ತಿ ಮತ್ತು ಶ್ರದ್ಧೆಯುಳ್ಳವರಾಗಿರಬೇಕು. ಉತ್ಸಾಹ ಮಾತ್ರವಲ್ಲದೆ ಕರ್ತವ್ಯ ಬುದ್ಧಿಯೂ ಪ್ರಜಾಭಿಮಾನವೂ ಅವರಲ್ಲಿರಬೇಕು. ಬುದ್ಧಿಶಕ್ತಿಯೊಂದಲ್ಲದೆ, ಕಾರ್ಯಶಕ್ತಿಯೂ ಗುಣಶಕ್ತಿಯೂ ಅವರಲ್ಲಿ ಪ್ರಕಾಶಿಸುತ್ತಿರಬೇಕು. ಪ್ರಜೆಗಳ ರಾಜಕೀಯ ಶಿಕ್ಷಣ ಕಾರ್ಯದಲ್ಲಿ ಇಂತಹ ಸಂಘವು ಉತ್ತಮ ಸಾಧನವಾಗಿರುವುದು.

ನಮ್ಮ ದೇಶದಲ್ಲಿ ಸ್ಥಳೀಯ ಸಂಸ್ಥೆಗಳು ಇನ್ನೂ ಹೆಚ್ಚಾಗಿ ಮುಂದುವರಿದು, ನೂತನ ಕಾಯಗಳನ್ನು ಕೈಕೊಳ್ಳಲು ಅವಕಾಶವಿದೆ. ಪ್ರಜೆಗಳ ರಾಜಕೀಯ ಜೀವನದಲ್ಲಿ ಇವು ಬಹು ಮುಖ್ಯ ಸ್ಥಾನವನ್ನು ಪಡೆದಿರುತ್ತವೆ. ಇವುಗಳ ಪುರೋಭಿವೃದ್ಧಿಯಲ್ಲಿ ಎಲ್ಲ ರಾಜಕೀಯ ಪಕ್ಷಗಳೂ ಆಸಕ್ತಿಯುಳ್ಳವರಾಗಿದ್ದಾರೆ.

ಆದರೆ ಇವುಗಳ ಅಭಿವೃದ್ಧಿಗೂ ವಿಸ್ತರಣಕ್ಕೂ ಪ್ರಜಾಸತ್ತಾತ್ಮಕ ಸನ್ನಿವೇಶವು ಮುಖ್ಯವಾಗಿ ಮೂರು ಲಕ್ಷಣಗಳನ್ನು ಪಡೆದಿರಬೇಕು. ಪ್ರತಿ ಸ್ಥಳೀಯ ಸಂಸ್ಥೆಯ ಸದಸ್ಯರು ಅದಕ್ಕೆ ಸಂಬಂಧಪಟ್ಟ ಪ್ರದೇಶದ ಪ್ರಜೆಗಳಿಂದ ಆರಿಸಲ್ಪಡಬೇಕು ; ಅದು ಅವರಿಗೆ ಉತ್ತರವಾದಿಯಾಗಿರಬೇಕು. ಆ ಸಂಸ್ಥೆಯ ಕಾರ್ಯಗಳಲ್ಲಿ ಭಾಗವಹಿಸಲು ಪ್ರತಿ ಪ್ರಜೆಗೂ ಅವಕಾಶವಿರಬೇಕು. ಪ್ರಜೆಗಳು ವಾಕ್ ಸ್ವಾತಂತ್ರ್ಯವನ್ನು ಪಡೆದಿರಬೇಕು. ಸಾರ್ವಜನಿಕ ವಿಷಯಗಳನ್ನು ನಿರಾತಂಕವಾಗಿ ಚರ್ಚಿಸುವುದಕ್ಕೂ ವಿಮರ್ಶೆ ಮಾಡುವುದಕ್ಕೂ ಅವರಿಗೆ ಅವಕಾಶವಿರಬೇಕು.

ಏಕನಾಯಕನ ನಿರಂಕುಶ ಪ್ರಭುತ್ವದ ಆಶ್ರಯದಲ್ಲಿ ಸ್ಥಳೀಯ ಸಂಸ್ಥೆಗಳು ಜೀವಿಸಲಾರವು. ಕೇಂದ್ರ ಸ್ಥಾನದಲ್ಲಿ ಸ್ವಾತಂತ್ರ್ಯವು ಇಲ್ಲದಿದ್ದಲ್ಲಿ ಗ್ರಾಮಗಳಲ್ಲಾಗಲಿ ಪಟ್ಟಣಗಳಲ್ಲಾಗಲಿ ಸ್ವಾತಂತ್ರ್ಯವು ಇರಲಾರದು. ಆದುದರಿಂದ ಉಭಯ ಕ್ಷೇತ್ರಗಳಲ್ಲಿಯೂ ಪ್ರಜಾಸತ್ತಾತ್ಮಕ ಪ್ರಭುತ್ವ ಕ್ರಮವು ಸ್ಥಾಪಿತವಾಗಿರಬೇಕಾದುದು ಅತ್ಯಾವಶ್ಯಕವಾಗಿದೆ. ಹಾಗಿಲ್ಲದಿದ್ದರೆ ಸ್ಥಳೀಯ ಸಂಸ್ಥೆಗಳ ಭವಿಷ್ಯವು ಆಶಾದಾಯಕವಾಗಿರಲಾರದು.

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧–೮–೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧೨
ಬಿಡಿ ಪತ್ರಿಕೆ: ೬ ಕಾಸು



ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮–೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈ ಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೨೫
ಬೆಂಗಳೂರು: ಶುಕ್ರವಾರ, ಏಪ್ರಿಲ್ ೧೭, ೧೯೪೩

## ಬೇಡಿಕೆ

ಸತ್ಯವನೆ ನುಡಿಯಲ್ಲಿ ನಡೆಯಲ್ಲಿ ಹೊಮ್ಮಿಸಿ,
ಮೇಣಹಿಂಸೆಯ ಮನದೆ ಚಿತ್ರಿಸಿ, ರೂಪಿಸಿ,
ನಿತ್ಯನೇಮದೆ ಶಾಂತಿ ಸಂಪೂರ್ಣ ಬೇರೂರಿ
ನಿಲುವಂತೆ ಪ್ರೀತಿಯಲಿ ಹಾಲೂಡು ತಾಯಿ
ಎಳೆಯರನು ಬೆಳಸಿಂತು ತಾಯಿ
ಬೇಡುವೆನು ವರವ ನೀಡಮ್ಮಾ. ೧

ಪಾರ್ವತಿಯೆ ತಾ ತಾಯಿ, ಪರಶಿವನೆ ತಂದೆ,
ಪರಶಿವನ ಭಕ್ತರಿಂ ಬೇರಿಲ್ಲ ಬಂಧುವರ್ಗ;
ಮೂರುಲೋಕವೆ ಮತ್ತೆ ತಾಯ್ನಾಡು ನನಗೆಂಬ
ಗಾಂಧಿಯಾ ಮೆಚ್ಚಿನೀ ನುಡಿಯ ಕಲಿಸು;
ಇದೆ ಭಾವ ಬೆಳೆದು ಬರಲೆಂದು
ಬೇಡುವೆನು ವರವ ನೀಡಮ್ಮಾ. ೨

ಮೆರೆದುದೀ ತಾಯ್ನಾಡು ಗುಣದ ವೈಭವದಲ್ಲಿ;
ದೊರಕದೆಂದಿಗು ಕೀರ್ತಿ ಪಾಶವೀಬಲಕೆ;
ಸರಿಯಿಲ್ಲವಾತ್ಮದೀ ಸ್ವರ್ಗೀಯಶಕ್ತಿಗೆ;
ಹಿರಿದು ಸಾಧನೆಯಿಂದ ಶೀಲವನು ಗಳಿಸಿ
ತಾಯ್ಗಾಗಿ ಸವೆಯಬೇಕೆಂದು
ಬೇಡುವೆನು ವರವ ನೀಡಮ್ಮಾ ೩

ದುರ್ಬಲತೆಗೆಡೆಗೊಡಲು ಪರತಂತ್ರಳಾನಾದೆ;
ದುರ್ಬಲತೆ ಮೀರಿದೆನೊ ಸ್ವಾತಂತ್ರ್ಯವೆನ್ನದೇ;
ತನ್ನೊಳಿದ ತಾ ತಿಳಿದು ತನ್ನ ತಾನುದ್ಧರಿಸೆ
ತುಂಬಿ ತುಳುಕುವುದಂದು ಜಗವೆಲ್ಲ ಸುಖದಿಂದ;
ಸುಖಕಾಗಿ ದಾರಿ ಬೇರಿಲ್ಲ;
ಬೇಡುವೆನು ವರವ ನೀಡಮ್ಮಾ. ೪

ಸತ್ಯವೇ ಬಿಳಿಯ ಬಾವುಟವದನು ಹಾರಿಸುವ,
ತಾಯ ಮುಖದಲಿ ಮುಗುಳುಶಾಂತಿಯನು ಬಿರಿಯಿಸುವ,
ಆ ಅಹಿಂಸೆಯ ಪರಮಶಕ್ತಿಯನು ತೋರಿಸುವ,
ಜಗದಲೀ ಹೊಸದೊಂದು ಸ್ವರ್ಗವನು ಪ್ರೇರಿಸುವ
ಸ್ವಾತಂತ್ರ್ಯವೆಮಗಾಗಲೆಂದು
ಬೇಡುವೆನು ವರವ ನೀಡಮ್ಮಾ. ೫

ಆತ್ಮಶಕ್ತಿಯ ಬಿಡದೆ ಸಾಧಿಸಿ, ಗಳಿಸಿ,
ಸತ್ಯ ಶಾಂತಿಗಳಂಗರಕ್ಷೆಯಲಿ ನಡೆದು,
ಆ ಅಹಿಂಸೆಯ ಚತುರಸಾರಥಿಯ ಸೇನೆಯಲಿ
ಮಿಥ್ಯೆಯನು, ಹಿಂಸೆಯನು ಗೆಲುವುದೇ ಗೆಲುವದೇ
ನಿಜದೇಶಪ್ರೇಮವದಕಾಗಿ
ಬೇಡುವೆನು ವರವ ನೀಡಮ್ಮಾ. ೬

— ಎಚ್. ಎಸ್. ಕಾತ್ಯಾಯಿನಿ.

## ನಕ್ಷತ್ರ ವೀಕ್ಷಣೆ

ಎನ್ನ ಕಣ್ಣೆದುರಿರುವ ಬಾನತಳದಂಚಿನಲಿ
ಬೆಳಗಿ ಮಿನುಮಿನುಗುತಿಹ ಲೆಕ್ಕವಿಲ್ಲದ ತಾರೆ
ಶ್ರೀಹರಿಯ ಸೃಷ್ಟಿರಚನೆಯ ಸೊಬಗ ಚೆಲ್ಲುತಿವೆ,
ಭೂವ್ಯೋಮ ಬ್ರಹ್ಮಾಂಡಗಳನೆಲ್ಲ ಬೆಳಗುತಿವೆ.

ತೆರತೆರದ ರಂಗುಗಳ ತೆರತೆರದ ತಾರೆಗಳು,
ಕೆಂಪು ಬಿಳಿ ನೀಲಿ ಹಳದಿಯ ಬಣ್ಣದವು ಹಲವು.
ಆಕಾಶದಾದ್ಯಂತವಾವರಿಸಿ ಹೊಳೆಯುತಿವೆ.
ಇದೆ ಮೀನ ಅದೆ ಮಕರ ಅದೂ ಅಲ್ಲಿ ರೋಹಿಣಿ
ಕೃತ್ತಿಕೆಯ ಲುಬ್ಧತೆಯ ನಕ್ಷತ್ರಗಳ ಮಾಲೆ.
ಇದುವೆ ಧ್ರುವ ತಾರಗೆಯು, ಮೇಣದುವೆ ಸಪ್ತರ್ಷಿ
ಮಂಡಲಂ!

ಅದೊ ಅಲ್ಲಿ ಅಂತರಿಕ್ಷದ ನಡುವೆ
ಬೆಳ್ನೊರೆಯ ತೊರೆಯಂತೆ, ಬೆಳ್ಮುಗಿಲ ಸಾಲಂತೆ,
ಬೆಳಗುತಿದೆ ಧವಳ ಮಂದಾಕಿನಿಯ ತೆರೆಗಳೆನೆ
ಆಕಾಶಗಂಗೆ. ನಡುನಡುವೆ ಹೊಸ ಹೊನ್ನ ತುಣು-
ಕುಗಳಂತೆ ಮಿಣುಕುತಿವೆ ನೂರಾರು ನಕ್ಷತ್ರ.
ಬಲಪಾರ್ಶ್ವದಂಚಿನಲಿ ಸ್ಥಿರವಾಗಿ ಉರಿಯುತಿಹ
ದೀಪಗಳ ಸಾಲಂತೆ ರಾಜಿಸಿವೆ ಬೃಹಸ್ಪತಿ
ಶನಿ ಶುಕ್ರ ಕುಜ ಚಂದ್ರ ಮೊದಲಾದ ಗ್ರಹರಾಜಿ.
ಅಲ್ಲಲ್ಲಿ ಹೂಬಾಣ ಬಿಟ್ಟಂತೆ, ನಕ್ಷತ್ರ
ಸಿಡಿದಂತೆ, ಹಾರುತಿವೆ ಆರುತಿವೆ ಉಲ್ಕೆಗಳು.

ವಿಶ್ವಶಿಲ್ಪಿಯ ಕಲೆಯ ಅದ್ಭುತ ಪವಾಡವೆನೆ,
ಸುರಕಲಾವಿದನಾದ ದೇವದೇವನ ಕಲೆಯ
ಸೌಂದರ್ಯದುತ್ತಮ ಪ್ರದರ್ಶನಶಾಲೆಯೆನೆ,
ಭುವನ ಮೋಹನ ಕವಿಯ ಕೋಟಿ ಸಂಖ್ಯೆಯ ಕವನ
ಬರೆದಿರುವ ಹೊತ್ತಿಗೆಯೊ ಏನೆ, ಮೇಲೆ
ತೋರುತಿದೆ ನಕ್ಷತ್ರ ಖಚಿತವಾದೀ ವ್ಯೋಮ
ಆಲೋಚಿಸುತ್ತಿಂತು ಆಸ್ವಾದಿಸಿದೆನಂದು
ನಕ್ಷತ್ರ ವೀಕ್ಷಣೆಯ ಅಮೃತ ರಸ ನಿಮಿಷಮಂ.

— ವೈ. ಎಸ್. ಲೂಯಿಸ್.

# ಕನ್ನಡ ನುಡಿ

**ಶುಕ್ರವಾರ, ಏಪ್ರಿಲ್ ೧೬, ೧೯೪೩**

## ಸ್ತುತ್ಯ ಉಪಕ್ರಮ

ಪುಣೆಯ ಡೆಕ್ಕನ್ ಎಜ್ಯುಕೇಷನ್ ಸೊಸೈಟಿಯವರು ಬರುವ ಜೂನ್ ತಿಂಗಳಲ್ಲಿ ಹೊಸ ಕಾಮರ್ಸ್ ಕಾಲೇಜನ್ನು ಆರಂಭಿಸುವವರಿದ್ದು ಅದಕ್ಕೆ ಮುಂಬಯಿ ಯೂನಿವರ್ಸಿಟಿಯ ಮನ್ನಣೆ ದೊರೆತಿದೆ. ಈ ಕಾಲೇಜಿನಲ್ಲಿ ಅವಶ್ಯವಾದ ಉಳಿದ ವಿಷಯಗಳ ಜೊತೆಗೆ ಕನ್ನಡವನ್ನು ಕಲಿಸುವ ಏರ್ಪಾಡು ಆಗಿದೆ. ಈ ಸ್ತುತ್ಯವಾದ ಉಪಕ್ರಮವನ್ನು ಮಾಡಿದ್ದಕ್ಕಾಗಿ ನಾವು ಸೊಸೈಟಿಯವರನ್ನು ತುಂಬ ಅಭಿನಂದಿಸುತ್ತೇವೆ.

ಮುಂಬಯಿಯಲ್ಲಿರುವ ಸರಕಾರದ ಕಾಮರ್ಸ್ ಕಾಲೇಜಿನಲ್ಲಿ ಕನ್ನಡ ವಿದ್ಯಾರ್ಥಿಗಳು ಇದ್ದರೂ, ಕನ್ನಡ ಓದಬೇಕೆಂದು ಅಪೇಕ್ಷೆಪಟ್ಟರೂ ಅದಕ್ಕೆ ತಕ್ಕ ಸೌಕರ್ಯಗಳನ್ನು ಆ ಕಾಲೇಜಿನವರು ಒದಗಿಸಿಕೊಟ್ಟಿಲ್ಲ. ಮೊತ್ತಮೊದಲನೆಯ ಸಲ ಮರಾಠಿ ಮತ್ತು ಗುಜರಾಥಿಗಳೊಡನೆ ಕನ್ನಡ ಸೋದರರಿಗೂ ಅವಕಾಶವನ್ನು ಒದಗಿಸಿಕೊಟ್ಟ ಸೊಸೈಟಿಯ ಭಾಷಾಬಾಂಧವ್ಯದೃಷ್ಟಿ ಶ್ಲಾಘ್ಯವಾಗಿದೆ. ಪುಣೆಯಲ್ಲಿಯ ಬೇರೆ ಆರ್ಟ್ಸ್ ಕಾಲೇಜುಗಳಲ್ಲಿ ಈಗ ಕನ್ನಡದಲ್ಲಿ ಪಾಠ ಹೇಳುವ ವ್ಯವಸ್ಥೆ ಇಲ್ಲ. ಕಳೆದ ಕೆಲವು ವರುಷಗಳಲ್ಲಿ ಆಗಾಗ ಎಸ್. ಪಿ. ಕಾಲೇಜಿನವರು ಕನ್ನಡದ ಏರ್ಪಾಟುಮಾಡಿ ವಿದ್ಯಾರ್ಥಿಗಳಿಗೆ ಅನುಕೂಲ ಮಾಡಿಕೊಟ್ಟು ಈಚೆಗೆ ಆ ಏರ್ಪಾಡನ್ನು ತ್ಯಾಜ್ಯ ಮಾಡಿದ್ದಾರೆ. ಜಮುಖಂಡಿಯ ಹಲವಾರು ವಿದ್ಯಾರ್ಥಿಗಳು ಅಪರಿಹಾರ್ಯವಾಗಿ ಆ ಕಾಲೇಜಿಗೆ ಪ್ರತಿವರ್ಷವೂ ಹೋಗುತ್ತಿರಲು ಅಲ್ಲಿ ಕನ್ನಡದ ಅಧ್ಯಾಪನ ವ್ಯವಸ್ಥೆ ಇರಬೇಕಾದದ್ದು ಸಮಂಜಸ. ಆದರೆ ಅಲ್ಲಿಯ ಅಧಿಕಾರಿಗಳಲ್ಲಿ ಈ ಸಮಂಜಸ ದೃಷ್ಟಿ ಉದಯವಾಗಿಲ್ಲ. ಇಂಥ ಪರಿಸ್ಥಿತಿಯಲ್ಲಿ ಪುಣೆಯ ಶಿಕ್ಷಣ ಸಂಸ್ಥೆಗಳಿಗೆ ಮಾರ್ಗದರ್ಶಕರಾಗಿ ಕನ್ನಡಿಗರ ಸಲುವಾಗಿ ಅವಶ್ಯ ಸೌಕರ್ಯವೊಂದನ್ನು ಕಲ್ಪಿಸಿಕೊಟ್ಟಿರುವ ಡಿ. ಇ. ಸೊಸೈಟಿಯವರು ಅಭಿನಂದನಾರ್ಹರು.

ಅಲ್ಲದೆ, ಕನ್ನಡ ಅಧ್ಯಾಪಕರ ಜಾಗಕ್ಕೆ ಪ್ರಸಿದ್ಧ ಕವಿಗಳೂ ವಿದ್ವಾಂಸರೂ ಆದ ಶ್ರೀ. ದ. ರಾ. ಬೇಂದ್ರೆಯವರನ್ನು ನೇಮಕ ಮಾಡಲಾಗಿದೆ. ಅವರು ನಾಡಿಗೆಲ್ಲ ಅತ್ಯಂತ ಪರಿಚಿತರು, ವಿದ್ಯಾರ್ಥಿವರ್ಗಕ್ಕೆ ಬೇಕಾದವರು. ಈ ಸಂಧಿಯ ಲಾಭವನ್ನು ಹೊಂದಿ ಕನ್ನಡ ವಿದ್ಯಾರ್ಥಿಗಳು ಹೊಸ ಕಾಮರ್ಸ್ ಕಾಲೇಜಿನಲ್ಲಿ ಕನ್ನಡ ಓದನ್ನು ನಡಸುವರೆಂದು ನಾವು ನಂಬಿರುತ್ತೇವೆ. ಮುಂಬಯಿ ಯೂನಿವರ್ಸಿಟಿಯ ಅಭ್ಯಾಸಕ್ರಮದಲ್ಲಿ ದೇಶೀಯ ಭಾಷೆಗಳೊಂದಿಗೆ ಇಂಗ್ಲಿಷೂ ಐಚ್ಛಿಕವಾಗಿದೆ. ಹೀಗಾಗಿ ಕನ್ನಡವನ್ನು ಓದುವುದರ ಬದಲು ಇಂಗ್ಲಿಷನ್ನು ತೆಗೆದುಕೊಳ್ಳಲು ಅವಕಾಶವಿರುತ್ತದೆ. ಆದರೆ ವಿದ್ಯಾರ್ಥಿಗಳು ಮನಸ್ಸು ಮಾಡಿದರೆ ಐಚ್ಛಿಕವಾದುದನ್ನು ಅವಶ್ಯಕವಾಗಿ ಮಾಡಿಕೊಳ್ಳಬಹುದು. ಆರ್ಟ್ಸ್ ಕಾಲೇಜುಗಳಲ್ಲಿ ಕನ್ನಡ ದೃಷ್ಟಿ ಬೆಳೆಯುತ್ತಿದೆ. ಅದು ಇಲ್ಲಿಯೂ ತೋರುವುದೆಂದು ಆಶಿಸಬಹುದಾಗಿದೆ.

ಹೊಸ ಕಾಮರ್ಸ್ ಕಾಲೇಜಿನಲ್ಲಿ ಶ್ರೀ. ಬೇಂದ್ರೆಯವರಿಗೆ ಕೆಲಸದ ಒತ್ತಡ ಅಷ್ಟು ಹೆಚ್ಚಾಗಿರದೆ ಸ್ವಲ್ಪ ಬಿಡುವೂ ಇರುವುದೆಂದು ನಿರೀಕ್ಷಿಸುತ್ತೇವೆ. ಹಾಗಿದ್ದಲ್ಲಿ ಪುಣೆಯ ಇತರ ಕಾಲೇಜುಗಳಲ್ಲಿ ಡಿಗ್ರಿ ಪರೀಕ್ಷೆಗಳಿಗೆ ಕನ್ನಡವನ್ನು ಪಾಠ ವಿಷಯವಾಗಿ ಸೇರಿಸಿಕೊಂಡು, ಶ್ರೀ. ಬೇಂದ್ರೆಯವರಂತಹ ಅರಿತ ನುರಿತ ಅಧ್ಯಾಪಕರ ವಿದ್ವತ್ತನ್ನು ಉಪಯೋಗಿಸಿಕೊಳ್ಳಬಹುದಾದ ಅವಕಾಶವನ್ನು ಆಯಾ ಅಧಿಕಾರಿಗಳು ಪರ್ಯಾಲೋಚಿಸಿ, ಕನ್ನಡ ವಿದ್ಯಾರ್ಥಿಗಳಿಗೆ ಕನ್ನಡ ಅಧ್ಯಯನದ ಸೌಕರ್ಯವನ್ನು ಕಲ್ಪಿಸಿಕೊಡುತ್ತಾರೆಂದು ನಂಬಿದ್ದೇವೆ.

## ತಾಯ್ನುಡಿಯ ಮೂಲಕ ಶಿಕ್ಷಣ

"ಬ್ರಿಟಿಷರ ಸಂಕುಚಿತ ಮನೋಭಾವ, ಅವರಲ್ಲೂ ಯಾವುದು ತಮಗೆ ಶ್ರೇಯಃಪ್ರದವೋ ಅದೇ ಇತರರಿಗೂ ಶ್ರೇಯಸ್ಸನ್ನು ಕೊಡಬಲ್ಲದು ಎಂಬ ಗಾಢವಾದ ನಂಬಿಕೆ - ಇವಕ್ಕಿಂತ ಸೋಜಿಗದ ಸಂಗತಿ ಪ್ರಪಂಚದಲ್ಲಿ ಇನ್ನಾವುದೂ ಇಲ್ಲ. ಸಿಂಹಳ ವಿಶ್ವವಿದ್ಯಾಲಯದ ಸ್ಥಾನಪತಿಗಳಾದ ಮತ್ತು ರಾಜ್ಯಾಂಗ ಶಾಸನ ಶಾಸ್ತ್ರದಲ್ಲಿ ಪ್ರವೀಣರೆನಿಸಿಕೊಂಡಿರುವ ಡಾಕ್ಟರ್ ಐವರ್ ಜೆನ್ನಿಂಗ್ಸ್ ಅವರು ಈಚೆಗೆ ರತ್ನಪುರದಲ್ಲಿ ಮಾಡಿದ ಒಂದು ಭಾಷಣದ ವರದಿ ಮೇಲೆ ಹೇಳಿದ ಬ್ರಿಟಿಷರ ಒಂದು ಮನೋಧರ್ಮವನ್ನು ನೆನಪಿಗೆ ತರುತ್ತದೆ.

ಡಾಕ್ಟರ್ ಜೆನ್ನಿಂಗ್ಸ್ ಅವರು ಮಾತನಾಡುತ್ತಿದ್ದುದು ಒಂದು ವಿದ್ಯಾಶಾಲೆಯ ಉತ್ಸವ ಸಂದರ್ಭದಲ್ಲಿ. ಮಾತನಾಡುತ್ತಾ 'ನನಗೆ ತಾಯಿನುಡಿಯ ಶಿಕ್ಷಣದಲ್ಲಿ ನಂಬಿಕೆ ಇಲ್ಲ' ಎಂದು ಹೇಳಿದರು. 'ನಾನು ತಾಯಿನುಡಿಯೆಂಬೊಂದು ಭಾಷೆಯನ್ನು ಚಿಕ್ಕಂದಿನಲ್ಲಿ ಕಲಿಯಲಿಲ್ಲ. ಬರ್ನಾರ್ಡ್ ಷಾ ಅವರ ತಾಯ್ನುಡಿ ಯಾವುದೆಂದು ನಮ್ಮ ಶಿಕ್ಷಣದ ವಿಶೇಷ ಸಮಿತಿಯನ್ನು ಕೇಳಬೇಕೆನಿಸುತ್ತದೆ ನನಗೆ. ಅವರದು ಐರಿಷ್ ಕುಲ; ಹೆಸರಿನಲ್ಲಿ ಸ್ಕಾಚ್ ಭಾಷೆಯ ಪ್ರಭಾವ; ಆದ್ದರಿಂದ ಅವರ ತಾಯ್ನುಡಿ ಗೆಯ್ಲಿಕ್ ಆಗಿರಬೇಕು. ಆದರೆ ಅವರ ಶಿಕ್ಷಣ ಪರಭಾಷೆಯಾದ ಇಂಗ್ಲಿಷಿನಲ್ಲಿ ನಡೆಯಿತು.' ಹೀಗೆ ಹೇಳಿ ಡಾ॥ ಜೆನ್ನಿಂಗ್ಸರು ಮಾತನ್ನು ಮುಂದುವರಿಸುತ್ತ, ತಮಿಳು ಸಿಂಹಳಿ ಭಾಷೆಗಳನ್ನು ಶಿಕ್ಷಣದ ಮಾಧ್ಯಮವನ್ನಾಗಿ ಮಾಡಿದ ಸಂದರ್ಭದಲ್ಲಿ, ಷೇಕ್ಸ್‌ಪಿಯರ್ ಮತ್ತು ಇತರ ಸಾಹಿತಿಗಳ ಕೃತಿಗಳನ್ನು ತಮ್ಮ ತಮ್ಮ ಭಾಷೆಗಳಿಗೆ ತರ್ಜುಮೆ ಮಾಡಲು ಜನರನ್ನು ಹುಡುಕಬೇಕಾಗುವುದೆಂದೂ, ಈ ಭಾಷಾಂತರ ಕಾರ್ಯಕ್ಕೆ ದೀರ್ಘ ಕಾಲಾವಧಿಯನ್ನು ಕೊಡಬೇಕಾಗುವುದೆಂದೂ ಹೇಳಿದರು. ನಿಜವಾದ ಸಂಗತಿ ಎಂದರೆ ಬರ್ನಾರ್ಡ್ ಷಾ ಅವರು ಚಿಕ್ಕವರಾಗಿದ್ದಾಗ ಐರ್ಲೆಂಡು ಇಂಗ್ಲೆಂಡಿಗೆ ಬಹುಮಟ್ಟಿಗೆ ಅಧೀನವಾದ ನಾಡಾಗಿತ್ತು. ರಾಷ್ಟ್ರೀಯ ಪುನರುಜ್ಜೀವನ ಕಾರ್ಯ ಅಲ್ಲಿ ಇನ್ನೂ ಸರಿಯಾಗಿ ಪ್ರಾರಂಭವಾಗಿರಲಿಲ್ಲ. ಈ ಸನ್ನಿವೇಶವನ್ನು ಷಾ ಅವರೇ ಸೂಚಿಸಿ, 'ಇಮ್ಮೆಚೂರಿಟಿ' (Immaturity) ಎಂಬ ತಮ್ಮ ಗ್ರಂಥದಲ್ಲಿ ಹೀಗೆ ಬರೆದಿದ್ದಾರೆ: 'ಆ ಕಾಲದಲ್ಲಿ ಐರ್ಲೆಂಡಿನಲ್ಲಿ ಗೆಯ್ಲಿಕ್ ಸಂಘವಾವುದೂ ಇರಲಿಲ್ಲ; ನಾಡ ಸತ್ವಗಳನ್ನು ಬೆಳಸುವ ಸಂಸ್ಕೃತಿಯ ಬೀಜವಾಪನವಾಗಿದೆಯೆಂಬುದೂ ಗೋಚರಿಸಲಿಲ್ಲ. ಸಾಂಸ್ಕೃತಿಕ ಉದ್ಯೋಗಗಳ ಮೇಲು ಮಟ್ಟದ ಬದುಕು ನಡಸಬೇಕೆಂದು ಇಷ್ಟವಾದ ಪ್ರತಿಯೊಬ್ಬ ಐರಿಷ್ ಪ್ರಜೆಗೂ ಲಂಡನ್ನಿನಂಥ ಬೃಹನ್ನಗರವಾಸದ ಪ್ರಜೆತನವೂ ಅಂತರರಾಷ್ಟ್ರೀಯ ಸಂಸ್ಕೃತಿಯೂ ಅವಶ್ಯಕವೆಂಬ ಭಾವನೆಯುಂಟಾಯಿತು. ನಾನು ಕೂಡ ಹಾಗೆಯೆ ಭಾವಿಸಿದೆ. ಲಂಡನ್ ನಗರವನ್ನಾಗಲಿ ಇಂಗ್ಲೆಂಡನ್ನಾಗಲಿ ಅವುಗಳ ಪ್ರತಿಷ್ಠೆಯ ಕಾರಣಕ್ಕಾಗಿ ನಾನು ಕಣ್ಣೆಗೊತ್ತಿಕೊಳ್ಳಲಿಲ್ಲ. ನಾನು ವಿಜ್ಞಾನವನ್ನೊ ಸಂಗೀತವನ್ನೊ ಪಾಠ ವಿಷಯವಾಗಿ ಆರಿಸಿದ್ದರೆ ಬರ್ಲಿನ್ ನಗರಕ್ಕೊ ಲೀಪ್ಸಿಕ್ ಪಟ್ಟಣಕ್ಕೊ ಹೋಗಬೇಕಾಗಿತ್ತು. ಆದ್ದರಿಂದ ಅಭಿಮಾನದ ಪ್ರಶ್ನೆ ಇಲ್ಲೇನೂ ಇಲ್ಲ."

ಷಾ ಅವರು ಇಂಗ್ಲಿಷಿನಲ್ಲಿ ತಮ್ಮ ಲೇಖನ ವ್ಯವಸಾಯವನ್ನು ಉತ್ತಮಗೊಳಿಸಿಕೊಳ್ಳಬೇಕೆಂದು ಬಗೆದರಾಗಿ, ಅದಕ್ಕೋಸ್ಕರ ಲಂಡನ್ನಿಗೆ ಹೋದರು.

ಸಿಂಹಳದ್ವೀಪದಿಂದಲೂ ಭರತಖಂಡದಿಂದಲೂ ಬದುಕಿನಲ್ಲಿ ಉತ್ತಮ ಸ್ಥಿತಿಗೆ ಬರಬೇಕೆಂಬ ಆಕಾಂಕ್ಷೆಯಿಂದ ಲಂಡನ್ನಿಗೆ ಪ್ರತಿ ವರ್ಷವೂ ಯುವಕರು ತೀರ್ಥಯಾತ್ರೆ ಬೆಳಸುತ್ತಿದ್ದಾರೆ, ನಿಜ. ಅವರಲ್ಲಿ ಯಾರೂ ತಮ್ಮ ಇಂಗ್ಲಿಷ್ ಬರವಣಿಗೆಯಿಂದ ಆಂಗ್ಲ ಸಾಹಿತ್ಯ ಪ್ರಪಂಚವನ್ನು ಸ್ಫೂರ್ತಿಗೊಳಿಸಿಲ್ಲವೆಂಬುದೂ ನಿಜ. ವ್ಯವಹಾರತಃ ಇಂಗ್ಲಿಷನ್ನು ತಾಯಿನುಡಿಯಾಗಿ ಮಾಡಿಕೊಂಡ ಜಿ. ಬಿ. ಎಸ್. ಅವರೊಡನೆ ಸಹಪಂಕ್ತಿಯನ್ನು ಪಡೆಯದಿರುವವರು ಇವರು. ಡಾ॥ ಜೆನ್ನಿಂಗ್ಸ್ ಅವರಿಗೆ (ಪ್ರಾಯಶಃ ಇವರು ವೆಲ್ಷ್ ಕುಲಕ್ಕೆ ಸೇರಿದವರಾಗಿರಬೇಕು) ಮಾತೃಭಾಷೆ ಯಾವುದೊ ಗೊತ್ತಿಲ್ಲ ಎಂಬ ಅಂಶದಲ್ಲಿ ಮಾತೃ ಭಾಷಾ ಶಿಕ್ಷಣದ ಸಮಸ್ಯೆಯನ್ನು ಬಗೆಹರಿಸುವಷ್ಟು ಶಕ್ತಿಯೇನೂ ಕಂಡುಬರುವುದಿಲ್ಲ.

ಬ್ರಿಟಿಷ್ ದ್ವೀಪಗಳು (ಭೌಗೋಲಿಕ ದೃಷ್ಟಿಯಿಂದ ನೋಡಿದರೆ) ಭರತಖಂಡದ ಮೇಲೆ ತೇಪೆ ತೇಪೆಯಾಗಿಯೇನೂ ಹರಡಿಕೊಂಡಿಲ್ಲ ಮತ್ತು ತಮಿಳೂ ಸಿಂಹಳಿಯೂ ಉಜ್ವಲ ಸಾಹಿತ್ಯ ಕೃತಿಗಳನ್ನೊಳಗೊಂಡ ಜೀವಂತ ಭಾಷೆಗಳು. ವಿದ್ಯಾವಂತರಾದ ಜನ ಈ ಭಾಷೆಗಳನ್ನು ಉಪೇಕ್ಷೆ ಮಾಡುವುದೆಂದರೆ, ಅವರು ತಮ್ಮ ನಾಡಿನ ಚರಿತ್ರೆ ಸಂಸ್ಕೃತಿಗಳಿಂದ ಮಾತ್ರವಲ್ಲದೆ ಈ ಭಾಷೆಗಳನ್ನು ಆಡುವ ಪ್ರಜಾಕೋಟಿಯಿಂದಲೂ ದೂರವಾಗಿ ಪ್ರತ್ಯೇಕತೆಯ ಜೀವನವನ್ನು ನಡಸಬೇಕಾಗುವುದು. ಸ್ಥಾನಪತಿ ಡಾ॥ ಜೆನ್ನಿಂಗ್ಸ್ ಅವರು ದೇಶಭಾಷೆಗಳನ್ನು ಶಿಕ್ಷಣ ಮಾಧ್ಯಮಗಳನ್ನಾಗಿ ಮಾಡಿದರೆ ಷೇಕ್ಸ್‌ಪಿಯರಿನ ಕೃತಿಗಳನ್ನು ಭಾಷಾಂತರಿಸುವುದಕ್ಕೆ ದೀರ್ಘ ಕಾಲಾವಧಿ ಕೊಡಬೇಕಾಗುವುದೆಂದಿರುವ ಮಾತಂತೂ ಅಷ್ಟೇ ಅರ್ಥವಿಲ್ಲದ್ದು. ವಾಸ್ತವವಾಗಿ ತಮಿಳಿನಲ್ಲಿ ಷೇಕ್ಸ್‌ಪಿಯರಿನ ನಾಟಕಗಳ ಅನುವಾದಗಳುಂಟು. ಆದರೆ 'ಹ್ಯಾಮ್ಲೆಟ್' ನಾಟಕದಿಂದ ಸಾಮಾನ್ಯವಾಗಿ ಉದ್ಧಾರಮಾಡುವ ಸಾಲುಗಳನ್ನು ತಿಳಿಯದಿರುವವನು, – ಅಂಥವನಿಗೆ ರೆಸಿನ್, ಗಯಟೆ, ಕಾಳಿದಾಸ ಅಥವಾ ಕಂಬರ್ ಇವರ ಹೆಸರೂ ತಿಳಿಯದಿದ್ದರೂ

ಪರವಾ ಇಲ್ಲ – ಹೇಗೆತಾನೆ ವಿದ್ಯಾವಂತನೆನ್ನಿಸಿಕೊಳ್ಳುವನು ಎಂಬ ಬ್ರಿಟಿಷರ ವ್ಯಕ್ತಿ ವಿಶಿಷ್ಟವಾದ ಪ್ರತಿಷ್ಠೆಯ ಭಾವನೆಯಂತೂ ನಗುವಂತೆ ಮಾಡುವ ಸಂಗತಿ. ಷೇಕ್ಸ್‌ಪಿಯರನ್ನಾಗಲಿ ಷಾ ಅವರನ್ನಾಗಲಿ ಬೀಳುಗಳೆಯುವ ಇಷ್ಟ ನಮಗಿಲ್ಲ. ಆದರೆ ಇಂಗ್ಲೆಂಡು ಮಾತ್ರ ಸಾಹಿತ್ಯ ಮಹತಿಯ ಗುತ್ತಿಗೆಯನ್ನು ಪಡೆದಿಲ್ಲವೆಂಬುದೂ ಪೂರ್ವ ರಾಷ್ಟ್ರಗಳಲ್ಲಿಯೂ ಕವಿಗಳೂ ಋಷಿಗಳೂ ಹುಟ್ಟಿದ್ದಾರೆಂಬುದೂ ಸತ್ಯ. ಡಾ॥ ಜೆನ್ನಿಂಗ್ಸ್ ಅವರೂ ಅವರೊಂದಿಗೆ ಇತರ ದೇಶಾಭಿಮಾನಿಗಳೂ ಈ ಪೂರ್ವ ರಾಷ್ಟ್ರಗಳ ಕವಿ ಋಷಿಗಳ ಕೃತಿಗಳನ್ನು ಅಧ್ಯಯನ ಮಾಡಲು ಸ್ವಲ್ಪ ಹೊತ್ತನ್ನು ಮೀಸಲಾಗಿಡುವುದು ಶ್ರೇಯಃಪ್ರದವಲ್ಲವೆ?"

(ಮದ್ರಾಸಿನ 'ಹಿಂದೂ' ೧೧-೪-೪೩)

ಮೇಲೆ ಕೊಟ್ಟಿರುವ ಹಿಂದೂ ಪತ್ರಿಕೆಯ ಅಗ್ರಲೇಖನವನ್ನು ಸ್ಥೂಲವಾಗಿ ಅನುವಾದ ಮಾಡಿ 'ನುಡಿ'ಯ ವಾಚಕರ ಮುಂದಿಟ್ಟಿದೆ. ತಾಯಿನುಡಿಯ ಮೂಲಕ ಶಿಕ್ಷಣದ ಪ್ರಶ್ನೆ ಈಚೆಗೆ ಮುನ್ನೆಲೆಗೆ ಬಂದು, ಪರವಾಗಿಯೂ ವಿರೋಧವಾಗಿಯೂ ಅದನ್ನು ವಿದ್ವಾಂಸರು ಪರಿಶೀಲಿಸುತ್ತಿದ್ದಾರೆ. ಕನ್ನಡ ನಾಡಿನಲ್ಲಿ ಕನ್ನಡವನ್ನು ಶಿಕ್ಷಣ ಭಾಷೆಯಾಗಿ ಮಾಡುವ ವಿಷಯದಲ್ಲಿ ಕೆಲವು ಮಹನೀಯರಲ್ಲಿ ಇನ್ನೂ ಅಷ್ಟಾಗಿ ಉತ್ಸಾಹ ಕಂಡುಬರುತ್ತಿಲ್ಲ. ಅಂಥವರು ಮೇಲೆ ಕೊಟ್ಟಿರುವ ಲೇಖನದಲ್ಲಿ ತಮಿಳು ಸಿಂಹಳಿಗಳಂತೆ ಜೀವಂತ ಭಾಷೆಯಾದ ಕನ್ನಡ ನುಡಿಯನ್ನೂ ಅದರ ಸಾರಸಂಪತ್ತನ್ನು ಹೆಚ್ಚಿಸಿರುವ ಕನ್ನಡ ಕವಿಗಳನ್ನೂ ನೆನೆದು, ನಮ್ಮ ನಾಡಿನಲ್ಲಿ ಕನ್ನಡ ಭಾಷೆಯನ್ನು ಶಿಕ್ಷಣದ ಮಾಧ್ಯಮವನ್ನಾಗಿ ಮಾಡದೆ ಇಂಗ್ಲಿಷನ್ನೇ ಏಕೈಕಮಾಧ್ಯಮವಾಗಿ ಇನ್ನೂ ಸ್ವೀಕರಿಸಿರುವುದು ಲೇಸೆ ಎಂಬುದನ್ನು ಚೆನ್ನಾಗಿ ಪರ್ಯಾಲೋಚಿಸಬೇಕೆಂದು ಬೇಡುತ್ತೇವೆ.

## ಇಂಗ್ಲಿಷಿನ 'ಫೇಟ್'
### ಮತ್ತು
## ಪರ್ಷಿಯನ್ನಿನ 'ಫತಹ'

ಇಂಗ್ಲಿಷಿನ 'ಫೇಟ್' ಎಂಬ ಶಬ್ದಕ್ಕೆ ಜನರು ಅಷ್ಟು ಗಮನ ಕೊಟ್ಟಿರುವುದಕ್ಕೆ ಕಾರಣ, ಆ ಮಾತಿನ ಭಾವನೆಗೆ ಪೌರ್ವಾತ್ಯರು ಗೌರವ ಸೂಚಿಸಿರುವುದೇ ಆಗಿರಬಹುದು. 'ಫೇಟ್' ಎಂದರೆ 'ದೈವ', 'ಕಿಸ್ಮತ್'. ಇದನ್ನು ಹೆಚ್ಚಾಗಿ ವಿವರಿಸಬೇಕಾಗಿಲ್ಲ. 'ಶನಿ' ಎಂದರೆ, ಆ ಗ್ರಹದ ವಿಚಾರ ಅಷ್ಟು ಗೊತ್ತಿಲ್ಲದಿದ್ದರೂ, ಅದರ ಗ್ರಹಚಾರ ಎಲ್ಲರಿಗೂ ತಿಳಿದಿರುವ ಹಾಗೆ, 'ಕಿಸ್ಮತ್' ಎಂದರೆ ಒಬ್ಬರಿಗಿಂತಲೂ ಇನ್ನೊಬ್ಬರು ಹೆಚ್ಚು ಹೇಳುವರೇ ಹೊರತು ಕೊಂಚ ಹೇಳಿ ಸಾಕು ಮಾಡುವವರು ಕಡಮೆಯೇ ಸರಿ.

ಸರಿ, ಒಂದು ಸಲ 'ಕಿಸ್ಮತ್' ಎನ್ನುವುದಕ್ಕೂ 'ಫೇಟ್' ಎನ್ನುವುದಕ್ಕೂ ಉಚ್ಚಾರಣೆಯ ಸಾಮ್ಯ ಏತಕ್ಕೆ ಇಲ್ಲ ಎಂಬ ಸಮಸ್ಯೆ ತಲೆದೋರಿತು. ಹಾಗಾದರೆ 'ಫೇಟ್' ಎನ್ನುವುದಕ್ಕೆ ಹತ್ತಿರ ಹತ್ತಿರ ಬರುವ ಪೌರ್ವಾತ್ಯ ಶಬ್ದ ಯಾವುದು? ಹಾಗೇ ನೋಡುತ್ತನೋಡುತ್ತ 'ಫತಹ' ಶಬ್ದ ತಲೆಹಾಕಿತು. ಆದರೆ ಅದರ ಅರ್ಥ ಬೇರೆ. 'ಫತಹ' ಎಂದರೆ 'ಜಯ'.

ಈಗ 'ಕಿಸ್ಮತ್' ವಿವರಣೆಯಲ್ಲಿ ಜಯ, ಲಾಭಗಳ ಭಾವನೆ ಒಂದು ಕಡೆ ಅಡಕವಾಗಿದೆ. ಗೀತೆಯಲ್ಲಿ 'ಲಾಭಾಲಾಭೌ, ಜಯಾಜಯೌ' ಎಂಬ ಮಾತು ಬರುತ್ತದೆ. ಲಾಭವಾಗಲಿ ನಷ್ಟವಾಗಲಿ, ಜಯವಾಗಲಿ ಸೋಲಾಗಲಿ, ಹೆದರದೆ ಕೆಲಸ ಮಾಡಬೇಕು ಎಂಬ ಎದೆಗಾರಿಕೆ ಎಲ್ಲಿ, ಹೊರಲಾರದ ಹೊರೆಯ ಕೆಳಗೆ ಕುಗ್ಗಿಸುವ 'ಕಿಸ್ಮತ್ತಿ'ನ ಭಾವನೆ ಎಲ್ಲಿ? ಅಥವಾ 'ಮಾಡುವುದು ಮಾಡಿದೆವು, ಆಗುವುದು ಆಯಿತು, ಅದು ನಮ್ಮ ತಪ್ಪಲ್ಲ' ಎಂದೋ 'ಅದಕ್ಕೆ ಕಾರಣ ನಮಗೆ ಮೇಲಿರುವ ಫೇಟ್ - ಕಿಸ್ಮತ್' ಎಂದೊ ಅರ್ಥ ಮಾಡ್ಠೋಣ ಎಂಬ ದಿನಚರಿಯ ಪ್ರಯೋಗವನ್ನೊಪ್ಪಿದರೆ 'ಫೇಟ್ - ಕಿಸ್ಮತ್' ಎನ್ನುವುದು 'ದೈವ'ದ ಪಟ್ಟಕ್ಕೆ ಏರುತ್ತದೆ.

ದೈವದಲ್ಲಿ ಎರಡು ವಿಧ: 'ದುರ್ದೈವ', 'ಸುದೈವ' – 'ಫೇಟ್-ಫಾರ್ಚೂನ್' – ಇದ್ದಹಾಗೆ. 'ಫೇಟ್'ಗೂ 'ಸುದೈವ'ಕ್ಕೂ ಹೀಗೆ ಸಂಬಂಧ ಕಲ್ಪಿಸಿದರೆ, ಆಗ 'ಫತಹ'ದ ಕಡೆಗೆ 'ಫೇಟ್' ಸರಿದು ಬರುತ್ತದೆ.

ನಮ್ಮಲ್ಲಿ 'ಫೇಟ್'ನ ದಾಂಧಲೆ ಬಹಳ. 'This is my fate - ದಿಸ್ ಈಸ್ ಮೈ ಫೇಟ್', 'What is your fate? - ವಾಟ್ ಈಸ್ ಯುವರ್ ಫೇಟ್!', 'Oh, what a fate fell to his lot! - ಓ ವಾಟ್ ಎ ಫೇಟ್ ಫೆಲ್ ಟು ಹಿಸ್ ಲಾಟ್!' ಇಂತಹ ಉದ್ಗಾರಗಳು ನಮ್ಮ ದಿನಚರಿಯ ಬಳಕೆಯಲ್ಲಿವೆ. ಈ ದುರ್ದೈವದ ಸ್ಮರಣೆಯಿಂದ 'ಅಡಿಯ ಮುಂದಿಡೆ ಸಗ್ಗ' ಎಂಬ ಕನ್ನಡ ಮಾತಿನ ಸವಿ ಭಾವನೆ ಎಲ್ಲಿಯೋ ಮೂಲೆಗುಂಪಾಗಿ ಹೋಗುವುದೇ ಫಲಿತಾಂಶ. ಆದುದರಿಂದ 'ಫೇಟ್'ನ ಪಾತಾಳದಿಂದ ನಾವು ಮೇಲಕ್ಕೆ ಏಳಬೇಕೆಂದಿರುವೆವಾದರೆ 'ಫತಹ'ದ ಭಾವನೆಗೂ ಸ್ವಲ್ಪ ಎಡೆಗೊಡಬೇಕು.

ಇದಕ್ಕೆ ಒಂದೇ ಒಂದು ಸಣ್ಣ ಪ್ರಯತ್ನ. ನಾವು ಒಬ್ಬರನ್ನೊಬ್ಬರು ನೋಡಿದಾಗ 'ಆಜ್ ಕ್ಯಾ ಫತಹ ಪಾಯೆ!' ಎಂದು ಒಂದು ಹೊಸ ಮಾತನ್ನು ಕೇಳುವುದಕ್ಕಾರಂಭಿಸಬೇಕು. 'ಈ ಹೊತ್ತು ಏನು ಜಯ' ಎಂದಿಷ್ಟೇ ಅದರ ಅರ್ಥ.. ವಿಧಿಯ ನಿಷ್ಕರುಣೆಗೆ ಈಡಾಗಿರುವವನಿಗೆ ಈ ಪ್ರಶ್ನೆಯನ್ನು ಹಾಕಿದರೂ ತಪ್ಪಾಗದು. ಏಕೆಂದರೆ ಅವನಿಗೆ 'ಲಾಭಾಲಾಭೌ ಜಯಾಜಯೌ' ಎಂಬ ದೊಡ್ಡ ಉಪದೇಶ ವಾಕ್ಯದ ಒಂದು ದೂರದ ದನಿ ಮನಸ್ಸಿಗೆ ತಟ್ಟಿದರೂ ಕೂಡ ಅವನು ಒಂದು 'ಫತಹ' ಗಳಿಸಿದ ಹಾಗೆಯೇ ಸರಿ. ಅಂತೂ ಏನೋ ಒಂದು ಬಂದು ನಮ್ಮನ್ನು ಮೆಟ್ಟಿಕೊಂಡಿದೆ ಎಂಬ ಭಾವನೆ ಹೋಗಬೇಕು.

ಎಂ. ವಾಸುದೇವಮೂರ್ತಿ

## ಕನ್ನಡ ಸುದ್ದಿ

**ಕೋಲಾರ: ಕರ್ನಾಟಕ ಸಂಘ**

**ಯುಗಾದಿಯ ಕಾರ್ಯಕ್ರಮ:** ತಾ॥ ೫-೪-೪೩ರ ಸಂಜೆ ೭ ರಿಂದ ೮ರವರೆಗೆ ಕೋಲಾರ ನಗರದ ಚಿಂದಲೂರರ ಛತ್ರದಲ್ಲಿ ಸಭೆ ಸೇರಿದ್ದಿತು. ಸೀ॥ ಸಿರಿಕಲ್ಚರಲ್ ಇನ್ಸ್‌ಪೆಕ್ಟರಾದ ಶ್ರೀ. ಎಂ. ಎಸ್. ಮುತ್ತಣ್ಣನವರಿಂದ ಜೈಮಿನಿ ಭಾರತ ವಾಚನ (ಸುಧನ್ವನು ಯುದ್ಧಕ್ಕೆ ಹೊರಡಲು ಅನುವಾದುದು) ಮತ್ತು ವೇ. ಬ್ರ. ಶ್ರೀ. ಸಾಲಿಗ್ರಾಮ ಕೃಷ್ಣಶಾಸ್ತ್ರಿಗಳವರಿಂದ ಪಂಚಾಂಗ ಶ್ರವಣವೂ ನಡೆದುವು. ಕಾರ್ಯದರ್ಶಿ ಶ್ರೀ. ಎಂ. ವೆಂಕಟಕೃಷ್ಣಪ್ಪನವರು ಅಧ್ಯಕ್ಷತೆ ವಹಿಸಿದ್ದ ಸೀನಿಯರ್ ಅ. ಡೈರೆಕ್ಟರ್ ಆಫ್ ಅಗ್ರಿಕಲ್ಚರ್ ಶ್ರೀ. ಕೂರುಪಾಡ್ ಗುಂಡಪ್ಪ, ಬಿ. ಎ. ಅವರು ಸಂಘಕ್ಕೆ ಮಾಡಿದ್ದ ಅನೇಕ ಉಪಕಾರಗಳನ್ನು ಸ್ಮರಿಸಿ ಮೈಸೂರಿಗೆ ವರ್ಗವಾಗಿರುವ ಅವರಿಗೆ ಸಕಲ ಶ್ರೇಯೋಭಿವೃದ್ಧಿಯನ್ನು ಕೋರಿದರು.

## ಸಾದರ ಸ್ವೀಕಾರ

**ತಂತ್ರಗಾರ ಕರಟಕರಾಯ ನರಿಯಣ್ಣನ ಕತೆ:** ಮಕ್ಕಳ ಹಿಗ್ಗು – ೧. ಬರೆದವರು: ಶ್ರೀ. 'ನಾ' ಅವರು. ಪ್ರಕಾಶಕರು: ಕನ್ನಡ ಸರಸ್ವತಿ ಭಂಡಾಗಾರ, ಧಾರವಾಡ. ಕಿರೀಟಾಕಾರದ ಅಷ್ಟಪತ್ರ. ಪುಟಗಳು ೬೭ + ೭. ಬೆಲೆ ೧೨ ಆಣೆ.

"ಒಳಗಿನ ಸವಿಗಾಗಿ ಹುಡುಗರು ತಾವಾಗಿಯೇ ಓದಬೇಕು. ಇಂತಹ ಪುಸ್ತಕಗಳು ಮಕ್ಕಳ ಕಣ್ಣಿಗೆ ಬೀಳುವಂತೆ, ಕೈಗೆ ಸಿಗುವಂತೆ ಶಿಕ್ಷಕರೂ, ಪಾಲಕರೂ ಯಾವಾಗಲೂ ಪ್ರಯತ್ನಪಡಬೇಕು. ಹಿಗ್ಗಿನಿಂದ ಓದಿದುದು ಮನಸ್ಸನ್ನು ಹಿಗ್ಗಿಸದೆ ಇರದು; ಆದರೆ ಕನ್ನಡದಲ್ಲಿ ಇಂತಹ ಪುಸ್ತಕಗಳು ಇನ್ನೂ ಸಾಕಷ್ಟು ಪ್ರಕಟವಾಗಿಲ್ಲ. ಈ ಕೊರತೆಯನ್ನು ಹೋಗಲಾಡಿಸುವುದಕ್ಕಾಗಿಯೇ 'ಮಕ್ಕಳ ಹಿಗ್ಗು' ಎಂಬ ಈ ಮಾಲೆಯನ್ನು ಹೊರಡಿಸಿದ್ದಾಗಿದೆ." ಇದು ಈ ಮಾಲೆಯ ಉದ್ದೇಶ. ಈ ಉದ್ದೇಶ ಕೈಗೂಡಿ ಮಕ್ಕಳಲ್ಲಿ ತಿಳಿವು ಹರಡಲೆಂದು ಹಾರೈಸುತ್ತೇವೆ. ನಮ್ಮ ಮಕ್ಕಳ ಕೈಗೆ ಇಂಥ ಪುಸ್ತಕಗಳು ಹೆಚ್ಚು ಹೆಚ್ಚಾಗಿ ಸಿಕ್ಕಬೇಕು. ಶಿಶು ಸಾಹಿತ್ಯಕ್ಕಾಗಿ ದುಡಿಯುವವರ ಸಂಖ್ಯೆ ಇನ್ನೂ ಹೆಚ್ಚಬೇಕು.

**ಮರದೆದುರಿನಲ್ಲಿ:** ಅಳಿಲು ಸೇವಾಗ್ರಂಥಮಾಲೆಯ ೧೩ನೆಯ ಕುಸುಮ. ಗ್ರಂಥಕರ್ತರು: ಶ್ರೀ. ಜಿ. ವಾಮನಭಟ್ಟ, ಬಿ.ಎ., ಎಲ್.ಟಿ. ಅವರು. ಪ್ರಕಾಶಕರು: ಮಿತ್ರಮಂಡಳಿ ಮಂಗಳೂರು. ಕಿರೀಟಾಕಾರದ ಅಷ್ಟಪತ್ರ ಪುಟಗಳು ೮ + ೫೪. ಬೆಲೆ ೮ ಆಣೆ.

**ಖಗೇಂದ್ರಮಣಿದರ್ಪಣ** — ಮದ್ರಾಸ್ ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆಯ ೯ನೆಯ ಗ್ರಂಥ. ಗ್ರಂಥಕರ್ತೃ: ಮಂಗರಾಜ. ಪ್ರಧಾನ ಸಂಪಾದಕ: ಶ್ರೀ. ಎಂ. ಮರಿಯಪ್ಪಭಟ್ ಅವರು ಎಂ.ಎ., ಎಲ್.ಟಿ. ಸಂಪಾದಕರು: ಎ. ವೆಂಕಟರಾವ್ ಬಿ.ಎ., ಎಲ್.ಟಿ., ಅವರು ಮತು ಪಂಡಿತ ಎಚ್. ಶೇಷ ಅಯ್ಯಂಗಾರ್ ಅವರು. ರಾಜಾಕಾರದ ಅಷ್ಟಪತ್ರ ಪುಟಗಳು ೨೭+೩೩೩ ಬೆಲೆ ರೂ. ೫—೦—೦.

**Report on the Administration of Mysore** for the Year 1941-42 (Ending 30th June 1942).

## ಪರಿಷತ್ತಿನ ಸುದ್ದಿ

### ಶ್ರೀಮನ್ಮಹಾರಾಜರವರ ಉದಾರ ದ್ರವ್ಯಸಹಾಯ

೧೭-೪-೪೩ ರಿಂದ ೨೦-೪-೪೩ ರ ವರೆಗೆ ಪರಿಷನ್ಮಂದಿರದಲ್ಲಿ ನಡೆಯುವ ವಸಂತ ಸಾಹಿತ್ಯೋತ್ಸವಕ್ಕೆ ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರೂ ಪರಿಷತ್ತಿನ ಮಹಾಪೋಷಕರೂ ಆದ **ಶ್ರೀ ಜಯಚಾಮರಾಜ ಒಡೆಯರವರು ಒಂದು ನೂರು (೧೦೦) ರೂಪಾಯಿ ದ್ರವ್ಯಸಹಾಯವನ್ನು** ಅನುಗ್ರಹಿಸಿರುತ್ತಾರೆ.

### ಪರಿಷತ್ತಿನ ಸದಸ್ಯರ ಬೆಳವಣಿಗೆ

(ತಾ|| ೯-೪-೪೩ ರಿಂದ ೧೫-೪-೪೩ ರ ವರೆಗೆ)

**ಸಹಾಯಕ ಸದಸ್ಯರು (೧೦೦ ರೂ.) :** ಶ್ರೀ.ಗಳಾದ ೧. ಡಾ|| ಬಿ. ಎಲ್. ಮಂಜನಾಥ್ ಅವರು, ಹೊಸದೆಹಲಿ. ೨. ಒಬ್ಬರು ಮಾನ್ಯ ಮಹಿಳೆಯರು. ೩. ಬಿ. ಎನ್. ದಾತಾರ ಅವರು, ಎಂ.ಎ. ಪ್ಲೀಡರು, ಬೆಳಗಾಂವಿ.

**ಸಾಮಾನ್ಯ ಸದಸ್ಯರು (೬ ರೂ.):** ೧. ಶ್ರೀ. ಡಿ. ಕೃಷ್ಣರಾಯರು, ಬಿ.ಇ. ರಿ|| ಎಕ್ಸಿಕ್ಯೂಟಿವ್ ಇಂಜಿನಿಯರು, ಬಸವನಗುಡಿ ಬೆಂಗಳೂರು. ೨. ಶ್ರೀ. ಕೆ. ರೇವಣ್ಣ, ಬಿ.ಎ. ಅವರು, ರಿ|| ಡಿಸ್ಟ್ರಿಕ್ಟ್ ಫಾರೆಸ್ಟ್ ಆಫೀಸರು, ಬೆಂಗಳೂರು. (ಬದಲಾವಣೆ)

**ಸಾಮಾನ್ಯ ಸದಸ್ಯರು (೩ರೂ.) :** ಶ್ರೀಗಳಾದ ೧. ಪೆಮ್ಮನಹಳ್ಳಿ ರಾಘವೇಂದ್ರಾಚಾರ್ಯರು, ವಿಶ್ವೇಶ್ವರಪುರ, ಬೆಂಗಳೂರು. ೨. ಟಿ. ಆರ್. ಸೇತುಮಾಧವರಾಯರು, ಜಮೀನುದಾರರು, ಬಸವನಗುಡಿ, ಬೆಂಗಳೂರು. ೩. ವೈ.ಎಸ್. ಲೂಯಿಸ್ ಅವರು, ಬಿ.ಎಸ್‌ಸಿ. ಕೆಮಿಸ್ಟ್ರಿ ಅಧ್ಯಾಪಕರು ಇಂಟರ್‌ಮೀಡಿಯೆಟ್ ಕಾಲೇಜು, ತುಮಕೂರು ೪. ಸಿ. ಡಿ. ಗೋವಿಂದರಾಯರು, ಉಪಾಧ್ಯಾಯರು, ಶಂಕರಪುರ, ಬೆಂಗಳೂರು.

### ವಸಂತ ಸಾಹಿತ್ಯೋತ್ಸವ

ಕಾರ್ಯಕ್ರಮ

### ಏಪ್ರಿಲ್ ೧೭ನೆಯ ಶನಿವಾರ

ಬೆಳಗ್ಗೆ ೯-೩೦ ರಿಂದ

ಪ್ರಾರಂಭೋತ್ಸವ

(೧) ಪ್ರಾರ್ಥನೆ
(೨) ಸ್ವಾಗತ ಭಾಷಣ
(೩) ಪ್ರಾರಂಭ ಭಾಷಣ : ಶ್ರೀಮಾನ್ ಎಚ್. ಬಿ. ಗುಂಡಪ್ಪಗೌಡ ಅವರು ಆರೋಗ್ಯ ಮತ್ತು ಸ್ಥಳೀಯ ಸಂಸ್ಥೆಗಳ ಮಂತ್ರಿಗಳು
(೪) ಸಂಗೀತ : ಶ್ರೀಮತಿ ಕೆ. ಗೋಮತಿ ದೇವಿಯವರು
(೫) ಧನ್ಯವಾದ

ಮಧ್ಯಾಹ್ನ ೩ ರಿಂದ

೧. ಮಹಿಳಾಗೋಷ್ಠಿ (ಮಹಿಳೆಯರಿಗೆ ಮಾತ್ರ)
ಅಧ್ಯಕ್ಷಿಣಿಯರು : ಶ್ರೀಮತಿ ಶಾಂತಕ್ಕಾ ಮಳೀಮಠ ಅವರು, ಧಾರವಾಡ

೧. ಪ್ರಾರ್ಥನೆ: ಶ್ರೀಮತಿ ಕಾಂತಿಮತಿ
೨. ಸ್ವಾಗತ ಭಾಷಣ: ಶ್ರೀಮತಿ ಎ. ಶೇಷಮ್ಮನವರು
೩. ಅಧ್ಯಕ್ಷಿಣಿಯರ ಭಾಷಣ
೪. ಪಿಟೀಲು ವಾದನ: ಶ್ರೀಮತಿಗಳಾದ ಸೌ|| ಸಿ. ತುಲಸೀಬಾಯಿ ಮತ್ತು ಪ್ರಮಿಳಾ
೫. 'ವರಪರೀಕ್ಷೆ' ನಾಟಕ: ಮಹಿಳಾ ಶಾಖೆಯ ಅಭಿಮಾನಿಗಳು
೬. ದೇವರ ನಾಮ: ಶ್ರೀಮತಿ ರಾಧಾ
೭. ಅಭಿನಯ ಗೀತೆ: ಶ್ರೀಮತಿ ಲೀಲಾ
೮. ನೃತ್ಯ
೯. ಸಂಗೀತ: ಶ್ರೀಮತಿ ಎಸ್. ವೇಂಗಡಮ್ಮನವರು
೧೦. ವಂದನಾರ್ಪಣೆ
೧೧. ಮಂಗಳ

೨. ಪುಸ್ತಕಭಂಡಾರ ವಿಚಾರ ಗೋಷ್ಠಿ
ಅಧ್ಯಕ್ಷರು : ಶ್ರೀಮಾನ್ ಎಸ್. ಬಾಲಕೃಷ್ಣಯ್ಯನವರು, ಬಿ.ಎ., ಎಲ್‌ಎಲ್.ಬಿ., ಬೆಂಗಳೂರು

ಸಂಜೆ ೬-೩೦ ರಿಂದ

**ಸಂಗೀತ :** ಸಂಗೀತವಿದುಷಿ ಶ್ರೀಮತಿ ಜಿ. ಚೆನ್ನಮ್ಮನವರು
ವಿದ್ವಾನ್ ಎಂ. ಪುಟ್ಟಯ್ಯನವರು – ಪಿಟೀಲು
ವಿದ್ವಾನ್ ಆಂಜನೇಯಲು ಅವರು – ಮೃದಂಗ

### ಏಪ್ರಿಲ್ ೧೮ನೆಯ ಭಾನುವಾರ

ಬೆಳಗ್ಗೆ ೯-೩೦ ರಿಂದ

(೧) ಉಪನ್ಯಾಸ : ಪ್ರಾಣಿಶಾಸ್ತ್ರವೂ ಮಾನವ ಜೀವನವೂ
ಶ್ರೀಮಾನ್ ಎ. ನಾರಾಯಣರಾಯರು
(೨) ಕಾವ್ಯವಾಚನ
ಶ್ರೀಮಾನ್ ಎಸ್. ಎಸ್. ವೆಂಕಟಸುಬ್ಬರಾಯರು
(೩) ಉಪನ್ಯಾಸ : ಭರತಖಂಡದ ವ್ಯಾಪಾರ
ಶ್ರೀಮಾನ್ ಜಿ. ಎಸ್. ಕೃಷ್ಣಮೂರ್ತಿಯವರು

ಸಂಜೆ ೫-೩೦ ರಿಂದ

(೧) ಭಾರತ ವಾಚನ: ಗಮಕವಿದುಷಿ ಶ್ರೀಮತಿ ಲಲಿತಮ್ಮನವರು
(೨) ಉಪನ್ಯಾಸ: ಮೈಸೂರು ದೇಶದ ವಾಸ್ತುಶಿಲ್ಪ
ಶ್ರೀಮಾನ್ ಬಿ. ವೆಂಕೋಬರಾಯರು
(೩) ಭರತನಾಟ್ಯ : ಶ್ರೀಮಾನ್ ಎಸ್. ಎಸ್. ಸ್ವಾಮಿಯವರು

### ಏಪ್ರಿಲ್ ೧೯ನೆಯ ಸೋಮವಾರ

ಬೆಳಗ್ಗೆ ೯-೩೦ ರಿಂದ

(೧) ಕಾವ್ಯವಾಚನ
(೨) ಉಪನ್ಯಾಸ: ಗುಜರಾಥಿ ಸಾಹಿತ್ಯದ ಬೆಳವಣಿಗೆ
ಶ್ರೀಮಾನ್ ಎ. ನಾರಾಯಣಸ್ವಾಮಿ ಅಯ್ಯರ್ ಅವರು

ಸಂಜೆ ೫-೩೦ ರಿಂದ

(೧) ಭಾರತ ವಾಚನ: ದೂರ್ವಾಸಾತಿಥ್ಯ
ಗಮಕವಿದ್ವಾನ್ ಕೆ. ಜಿ. ಸಂಪತ್ಕುಮಾರಾಚಾರ್ಯರು
(೨) ಉಪನ್ಯಾಸ: ಭಗವದ್ಗೀತೆಯ ಭವ್ಯತೆ
ಶ್ರೀಮಾನ್ ಹನುಮಂತರಾವ್ ಮಾಂಜರೇಕರ ಅವರು
(೩) ನಾಟಕ : 'ಸೌಭಾಗ್ಯ'

ಪಾತ್ರಗಳು :
ಸುಬ್ಬನರಸಿಂಹಯ್ಯ (ಬಡಗೃಹಸ್ಥ)
– ಶ್ರೀ. ಸಿ. ಕೆ. ನಾಗರಾಜರಾಯರು
ಸುಬ್ಬಲಕ್ಷ್ಮಮ್ಮ (ಬಡಗೃಹಸ್ಥನ ಪತ್ನಿ)
– ಎಸ್. ನಾಗೇಶರಾವ್, ಬಿ.ಎ.
ಸುಬ್ಬಕೃಷ್ಣ (ಇವರ ಮಗ)
– ಶ್ರೀ. ಸಿ. ಕೆ. ಶಂಕರನಾರಾಯಣರಾವ್
ಸಂಗರಾಮಯ್ಯ (ಇವರಿರುವ ಮನೆಯ ಮಾಲಿಕ)
– ಶ್ರೀ. ಜಿ. ಸದಾಶಿವಯ್ಯ.

### ಏಪ್ರಿಲ್ ೨೦ನೆಯ ಮಂಗಳವಾರ

ಬೆಳಗ್ಗೆ ೯-೩೦ ರಿಂದ

**ಯುವಜನ ಗೋಷ್ಠಿ :**
ಬೆಂಗಳೂರು ಮಿತ್ರ ಸಂಘದ ಸಹಕಾರದೊಂದಿಗೆ

ಸಂಜೆ ೬-೩೦ ರಿಂದ

**ವಿವಿಧ ವಿನೋದಾವಳಿ :** ಬೇರೆ ಬೇರೆ ಭಾಷೆಯಲ್ಲಿ.

**ಸೂಚನೆ:**—ಉತ್ಸವ ಕಾರ್ಯಕ್ರಮಗಳಿಗೆ ಬರುವವರು ಪ್ರವೇಶಪತ್ರವನ್ನು ದಯಮಾಡಿ ಜೊತೆಯಲ್ಲಿ ತರದಿರಬೇಕು.

೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧॥
ಬಿಡಿ ಪತ್ರಿಕೆ: ೬ ಕಾಸು




ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿ ಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೨೬

ಬೆಂಗಳೂರು: ಶುಕ್ರವಾರ, ಏಪ್ರಿಲ್ ೨೩, ೧೯೪೩

# ಬೆಂಗಳೂರಿನಲ್ಲಿ ವಸಂತ ಸಾಹಿತ್ಯೋತ್ಸವ - ೧೯೪೩

## ಕಾರ್ಯಕಲಾಪಗಳ ವರದಿ

ಈ ಸಲದ ವಸಂತ ಸಾಹಿತ್ಯೋತ್ಸವ ಪರಿಷತ್ತಿನ ಮೈಸೂರು ಪ್ರಾಂತಸಮಿತಿಯ ಆಶ್ರಯದಲ್ಲಿ ೧೭-೪-೪೩ನೆಯ ಶನಿವಾರದಿಂದ ೨೦-೪-೪೩ನೆಯ ಮಂಗಳವಾರ ಪೂರ್ತ ನಾಲ್ಕು ದಿನ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಅತ್ಯಂತ ವಿಜೃಂಭಣೆಯಿಂದ ನಡೆಯಿತು.

ಮೈಸೂರು ಸಂಸ್ಥಾನದ ಸ್ಥಳೀಯ ಸಂಸ್ಥೆಗಳ ಮಂತ್ರಿಗಳಾದ ಶ್ರೀ. ಎಚ್. ಬಿ. ಗುಂಡಪ್ಪ ಗೌಡ ಅವರು ಪ್ರಾರಂಭೋತ್ಸವವನ್ನು ನಡಸಿಕೊಟ್ಟರು. ಮೊದಲೆ ಪ್ರಕಟಿಸಿದ್ದಂತೆ ಅನೇಕ ಮಹನೀಯರು ಆಯಾ ದಿನದ ಸಂಗೀತ, ಕಾವ್ಯವಾಚನ, ಉಪನ್ಯಾಸಗಳನ್ನೂ ಭರತ ನಾಟ್ಯ, ನಾಟಕ ವಿನೋದಪ್ರದರ್ಶನಗಳನ್ನೂ ನಡಸಿಕೊಟ್ಟು ಉಪಕಾರ ಮಾಡಿದರು.

ಮೈಸೂರು ಪ್ರಾಂತಸಮಿತಿಯ ಅಧ್ಯಕ್ಷರಾದ ಶ್ರೀ. ಸಿ. ಕೆ. ವೆಂಕಟರಾಮಯ್ಯನವರೂ ಕಾರ್ಯದರ್ಶಿಗಳಾದ ಶ್ರೀ. ಕೆ. ಅಂಬ್ರೋಸ್ ಆನಂದ ಅವರೂ, ವ್ಯವಸ್ಥಾಪಕರಾದ ಶ್ರೀ. ಕೆ. ಸಂಪದ್ಗಿರಿರಾಯರು ಶ್ರೀ. ವಿ. ಸೀತಾರಾಮಯ್ಯನವರೂ ಮತ್ತು ಕೋಶಾಧಿಕಾರಿಗಳಾದ ಶ್ರೀ. ಎಂ. ಎ. ನರಸಿಂಹಾಚಾರ್ಯರೂ ಬಹಳ ಶ್ರಮವಹಿಸಿ ಉತ್ಸವವನ್ನು ಯಶಸ್ವಿಯನ್ನಾಗಿ ಮಾಡಿದ್ದಾರೆ. ಕಲಾವಿದರ, ಸ್ವಯಂಸೇವಕರ ಪ್ರೋತ್ಸಾಹ ಸಹಕಾರಗಳು ಉತ್ಸವಕ್ಕೆ ಕಾಂತಿ ತಂದುವು. ಹೀಗೆ ನೆರವಾಗಿರುವವರ ಸಂಖ್ಯೆ ಹತ್ತಲ್ಲ ನೂರು. ತನು ಮನ ಧನಗಳಿಂದ ಸಹಾಯ ಮಾಡಿರುವ ಇವರೆಲ್ಲರಿಗೂ ಪರಿಷತ್ತು ಅತ್ಯಂತ ಕೃತಜ್ಞತೆಯನ್ನು ವ್ಯಕ್ತಪಡಿಸುತ್ತದೆ.

### ೧೭-೪-೪೩ನೆಯ ಶನಿವಾರ

**ಪ್ರಾರಂಭೋತ್ಸವ:** ಗಮಕ ವಿದ್ವಾನ್ ಶ್ರೀ. ಎಂ. ಎಸ್. ಚಂದ್ರಶೇಖರಯ್ಯನವರು 'ಉದಯವಾಗಲಿ ಚೆಲುವ ಕನ್ನಡ ನಾಡು' ಎಂಬ ಗೀತೆಯನ್ನು ಹಾಡಿ ಪ್ರಾರ್ಥಿಸಿದಮೇಲೆ ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಪ್ರಸಕ್ತ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರರು ಉತ್ಸವಕ್ಕೆ ಎಲ್ಲರಿಗೂ ಸಂತೋಷದ ಸ್ವಾಗತವನ್ನು ಬಯಸಿದರು. ಅವರು ತಮ್ಮ ಭಾಷಣದಲ್ಲಿ,

"ಒಂಬತ್ತು ವರ್ಷಗಳ ಹಿಂದೆ ಪ್ರಾರಂಭವಾದ ಉತ್ಸವ ಬೆಂಗಳೂರು ಪಟ್ಟಣದಲ್ಲಿ ನಡೆಯುತ್ತಿದ್ದುದು ಕ್ರಮವಾಗಿ ಹಳ್ಳಿಗಳಿಗೂ ಹರಡಿದೆ. ಜನದಲ್ಲಿ ತಿಳಿವಳಿಕೆ ಹರಡುವುದೇ ಉತ್ಸವದ ಉದ್ದೇಶವಾಗಿದೆ. ಉತ್ಸವಕ್ಕೆ ಎಲ್ಲೆಲ್ಲಿಯೂ ಪ್ರೋತ್ಸಾಹ ಧನ ರೂಪದಲ್ಲಿ, ಕೆಲಸದ ರೂಪದಲ್ಲಿ ಒದಗಿಬಂದು ಉಪಕಾರವಾಗುತ್ತಿದೆ. ಅರಮನೆ ಗುರುಮನೆಯ ಅನುಗ್ರಹ ಆಶೀರ್ವಾದಗಳ ಜೊತೆಗೆ ಮಹಾಜನರ ವಿಶ್ವಾಸ ಪ್ರೋತ್ಸಾಹಗಳು ಸೇರಿ ಉತ್ಸವ ವರ್ಷ ವರ್ಷವೂ ಜನಪ್ರಿಯವಾಗುತ್ತಿದೆಯೆಂದು ತಿಳಿಸಲು ಸಂತೋಷವಾಗುತ್ತದೆ.

ಇತಿಹಾಸದಲ್ಲಿ ಒದಗಿದ ಒಂದು ದುರದೃಷ್ಟದಿಂದ ಕನ್ನಡ ನಾಡು ಹತ್ತಾರು ಅರಸು ಆಳಿಕೆಯಲ್ಲಿ ಸೇರಿಹೋಗಿದೆ. ಒಡೆದ ಕನ್ನಡಿಯ ಚೂರುಗಳಲ್ಲಿ ಮುಖ ಕಾಣಿಸುವಂತೆ ಇಂದು ಕನ್ನಡಿಗನ ಅವಸ್ಥೆಯಾಗಿದೆ. ನಾಡು ಬೇರೆ ಬೇರೆ ಎಂಬ ಭ್ರಾಂತಿಯ ಭಾವನೆ ಮೂಡಿ ನಾಡಿನ ಮುನ್ನಡೆ ತಡೆಯಿತು. ಈಚೆಗೆ ಈ ಭ್ರಾಂತಿ ಹೋಗುತ್ತಿದೆ, ಇನ್ನೂ ಹೋಗಬೇಕು. ನಮ್ಮ ನಾಡು ಹಿಂದೆ ಗಳಿಸಿದ್ದ ಹಿರಿಮೆಯನ್ನು, ಇನ್ನೂ ಹೆಚ್ಚಿನ ವೈಭವವನ್ನು ಮತ್ತೆ ಗಳಿಸುವಂತೆ ಕೆಲಸ ನಡೆಯಬೇಕು.

ನಾಡಿನ ನಾನಾಮುಖವಾದ ಏಳಿಗೆಯನ್ನೇ ಪರಿಷತ್ತು ತನ್ನ ಮುಂದಿಟ್ಟುಕೊಂಡಿದೆ. ಈ ಏಳಿಗೆಗೆ ಸಾಹಿತ್ಯ ಸಾಧನವಾಗಿದೆ. ಆದ್ದರಿಂದಲೇ ಸಾಹಿತ್ಯೋತ್ಸವ. ಉತ್ಸವದ ಫಲವಾಗಿ ನಾಡಿನ ಬಾಳುವೆ ದೊಡ್ಡದಾಗಬೇಕೆಂಬುದೇ ಪರಿಷತ್ತಿನ ಹೆಬ್ಬಯಕೆಯಾಗಿದೆ.

ಕಷ್ಟ ಕಾಲವೆಂದು ಈ ಬಗೆಯ ಉತ್ಸವಗಳನ್ನು ನಿಲ್ಲಿಸುವುದು ಸರಿಯಲ್ಲ. ಕಷ್ಟ ಕಾಲವಾದ್ದರಿಂದಲೇ ನಾಡ ಮೇಲ್ಮೆಗಾಗಿ ಇಂಥ ಉತ್ಸವ ಇನ್ನೂ ಹೆಚ್ಚಾಗಿ, ಹೆಚ್ಚು ಕಡೆ ನಡೆಯಬೇಕು, ವಿಲಾಸಕ್ಕಾಗಲಿ ಆಟಿಕ್ಕಾಗಲಿ ಅಲ್ಲ" ಎಂದು ಹೇಳಿ, ಉತ್ಸವವನ್ನು ಪ್ರಾರಂಭ ಮಾಡಿಕೊಡಲು ಕೃಪೆಮಾಡಿ ಒಪ್ಪಿದ ಮಂತ್ರಿವರ್ಯರಾದ ಶ್ರೀ. ಎಚ್. ಬಿ. ಗುಂಡಪ್ಪ ಗೌಡರವರ ಕನ್ನಡ ಪ್ರೇಮವನ್ನು ಕೊಂಡಾಡಿ, ಕನ್ನಡ ಭಾಷೆ ಶಿಕ್ಷಣ ಭಾಷೆಯೂ ಆಡಳಿತದ ಭಾಷೆಯೂ ಆಗಬೇಕೆಂದೂ ನಾಡಿನ ಎಲ್ಲಾ ಬಗೆಯ ವ್ಯವಹಾರಕ್ಕೆ ಒದಗಬೇಕಾದದ್ದು ಕನ್ನಡವೇ ಎಂದೂ ದೃಢವಾಗಿ ನಂಬಿ, ಈ ಮಾತನ್ನು ಪದೇ ಪದೇ ಒತ್ತಿ ಹೇಳುತ್ತಿರುವ ಶ್ರೀ. ಗುಂಡಪ್ಪಗೌಡರು ಉತ್ಸವಕ್ಕೆ ದಯಮಾಡಿಸಿದುದು ನಮ್ಮ ಸುಯೋಗ ಎಂದು ಹೇಳಿದರು.

### ಪ್ರಾರಂಭ ಭಾಷಣ

ಬಳಿಕ ಮಂತ್ರಿವರ್ಯರು ಪ್ರಾರಂಭ ಭಾಷಣವನ್ನು ಅಪ್ಪಣೆ ಕೊಡಿಸುತ್ತ ೧೯೩೪ನೆಯ ವರ್ಷದಿಂದ ಈ ಉತ್ಸವಗಳನ್ನು ಪರಿಷತ್ತು ನಡಸಿಕೊಂಡು ಬರುತ್ತಿರುವುದಕ್ಕಾಗಿ ಹರ್ಷಿಸಿ, ಈ ಉತ್ಸವಗಳಿಂದ ನಾಡಿಗೆ ಮಹತ್ತರವಾದ ಪ್ರಯೋಜನವಾಗಿದೆಯೆಂದು ಹೇಳಿ, ಈ ಉತ್ಸವಗಳು ಸಂಸ್ಥಾನದ ಮೂಲೆ ಮೂಲೆಯಲ್ಲಿರುವ ಹಳ್ಳಿಗಳಲ್ಲಿಯೂ ಹಬ್ಬದೋಪಾದಿಯಲ್ಲಿ ಪ್ರತಿವರ್ಷವೂ ನಡೆಯುವ ಕಾಲ ಬಳಿಸಾರಲೆಂದು ಹಾರೈಸಿದರು.

ಇಪ್ಪತ್ತೆಂಟು ವರ್ಷಗಳ ಕೆಳಗೆ ಸ್ಥಾಪಿತವಾದ ಕನ್ನಡ ಸಾಹಿತ್ಯ ಪರಿಷತ್ತು ಕನ್ನಡನಾಡಿನ ಮತ್ತು ಭಾಷೆಯ ಪುನರುಜ್ಜೀವನಕ್ಕಾಗಿ ದುಡಿಯುತ್ತ ಬಂದಿದೆ. ಕನ್ನಡನಾಡಿನಲ್ಲಿ ಇಂದುಂಟಾಗಿರುವ ಭಾಷಾಭಿಮಾನ ಮತ್ತು ಸ್ಫೂರ್ತಿಗೆ ಕನ್ನಡ ಸಾಹಿತ್ಯ ಪರಿಷತ್ತು ಮುಖ್ಯ ಕಾರಣವಾಗಿದೆಯೆನ್ನಬಹುದು. ಕನ್ನಡಕ್ಕಾಗಿ ನಿಸ್ವಾರ್ಥದಿಂದ ಸೇವೆಮಾಡುತ್ತಿರುವ ರಾಜಸೇವಾಸಕ್ತ ಶ್ರೀ. ಬಿ. ಎಂ. ಶ್ರೀಕಂಠಯ್ಯ, ರಾಜಸೇವಾಪ್ರಸಕ್ತ ಶ್ರೀ. ಮಾಸ್ತಿ ವೆಂಕಟೇಶಯ್ಯಂಗಾರ್ ಮೊದಲಾದ ಮಹನೀಯರಿಗೆ ಕನ್ನಡನಾಡಿನ ಪ್ರಜೆಗಳೆಲ್ಲರೂ ಚಿರಋಣಿಗಳಾಗಿರಬೇಕಾಗಿದೆ.

ಕನ್ನಡ ಸಾಹಿತ್ಯ ಪರಿಷತ್ತೊಂದರಿಂದಲೇ ಕನ್ನಡದ ಪುರೋಭಿವೃದ್ಧಿಯನ್ನು ಸಾಧಿಸಲು ಸಾಧ್ಯವಿಲ್ಲ. ಮಹಾಜನರ ಸಂಪೂರ್ಣ ಸಹಕಾರವೂ ಬೆಂಬಲವೂ ಅಗತ್ಯವಾಗಿ ಬೇಕು. ಪರಿಷತ್ತಿನ ಕಾರ್ಯಕಲಾಪಗಳು ದೇಶದಾದ್ಯಂತವೂ ವ್ಯಾಪಿಸಬೇಕಾದರೆ ಅದಕ್ಕೆ ತಕ್ಕ ದ್ರವ್ಯ ಸಹಾಯವು ಮುಖ್ಯವಾಗಿ ಬೇಕು.

[೧೩೪ನೆಯ ಪುಟಕ್ಕೆ]

# ಕನ್ನಡ ನುಡಿ

**ಶುಕ್ರವಾರ, ಏಪ್ರಿಲ್ ೨೩, ೧೯೪೩**

## ವಸಂತ ಸಾಹಿತ್ಯೋತ್ಸವ

ಬೆಂಗಳೂರಿನಲ್ಲಿ ವಸಂತ ಸಾಹಿತ್ಯೋತ್ಸವ ಅತ್ಯಂತ ವಿಜೃಂಭಣೆಯಿಂದ ನಡೆಯಿತು. ಉತ್ಸವದ ನಾಲ್ಕು ದಿನಗಳೂ ಕನ್ನಡ ಸೇವೆ ಬಹು ಉತ್ಸಾಹದಿಂದ ಜರುಗಿತು. ಉಪನ್ಯಾಸಾದಿ ಕಾರ್ಯಕ್ರಮಗಳ ಸಂಗ್ರಹ ವರದಿಯನ್ನು ಬೇರೆ ಕಡೆ ಕೊಟ್ಟಿದೆ. ಬೆಂಗಳೂರಿನ ಉತ್ಸವದಂತೆ ನಾಡಿನ ಇತರ ಭಾಗಗಳಲ್ಲಿ ಉತ್ಸವ ನಡೆಯುವ ನಿರೀಕ್ಷೆಯಿದೆ.

ಉತ್ಸವವನ್ನು ಪ್ರಾರಂಭಿಸಿಕೊಟ್ಟ ಮಂತ್ರಿವರ್ಯರಾದ ಶ್ರೀ. ಎಚ್. ಬಿ. ಗುಂಡಪ್ಪಗೌಡ ಅವರು ಅಪ್ಪಣೆ ಕೊಡಿಸಿದಂತೆ, ಅದನ್ನು ಹಬ್ಬದಂತೆ ಹೆಚ್ಚಾಗಿ ಹಳ್ಳಿಗಳಲ್ಲಿ ನಡಸಿ ಅದರ ಉದ್ದೇಶವನ್ನು ಸಾಧಿಸಬೇಕಾಗಿದೆ. ಹಳ್ಳಿಗಳ ಅಭಿವೃದ್ಧಿಗಾಗಿ ಮೈಸೂರು ಸರಕಾರದವರು ಪಂಚವಾರ್ಷಿಕ ಯೋಜನೆಯೊಂದನ್ನು ತಯಾರಿಸಿ ಅದನ್ನು ಆಚರಣೆಗೆ ತಂದಿದ್ದಾರೆ. ಶ್ರೀಮಾನ್ ಗುಂಡಪ್ಪಗೌಡರು ಈ ಅಂಶವನ್ನು ತಮ್ಮ ಭಾಷಣದಲ್ಲಿ ಪ್ರಸ್ತಾವಿಸಿ, ಈ ಕಾರ್ಯಸಾಧನೆಗೆ ಸಾಹಿತ್ಯ ಪರಿಷತ್ತಿನ ನೆರವು ಅಗತ್ಯವಾಗಿ ಬೇಕಾಗಿದೆ ಎಂದು ಕೋರಿದ್ದಾರೆ. ಪರಿಷತ್ತಿನ ಉದ್ದೇಶವಾದರೂ ಸಾಹಿತ್ಯವನ್ನು ಒಂದು ಸಾಧನವಾಗಿ ಬಳಸಿಕೊಂಡು ನಾಡಿನ ಏಳಿಗೆಯನ್ನು ಸಾಧಿಸುವುದೇ ಆಗಿದೆ. ಕಾವ್ಯವಾಚನ, ಸಂಗೀತ, ಕೀರ್ತನ, ನಾಟಕ, ಉಪನ್ಯಾಸ ಮುಂತಾದ, ತಿಳಿವನ್ನೂ ನಲಿವನ್ನೂ ಬೀರುವ, ಆಕರ್ಷಕ ಕಾರ್ಯಕ್ರಮಗಳನ್ನು ಏರ್ಪಡಿಸಿ ಗ್ರಾಮ ನಿವಾಸಿಗಳ ಬಾಳಿನ ಐಶ್ವರ್ಯವನ್ನು ಹೆಚ್ಚಿಸಬಹುದಾಗಿವೆ. ಇದು ಬಹಳ ಅಗತ್ಯವಾಗಿ ನಡೆಯಬೇಕಾದ ಕೆಲಸ. ಆದ್ದರಿಂದಲೇ ಶ್ರೀ. ಗುಂಡಪ್ಪಗೌಡರು ಪರಿಷತ್ತು ಯಾವುದಾದರೂ ಒಂದು ಹಳ್ಳಿಯಲ್ಲಿ ವಸಂತ ಸಾಹಿತ್ಯೋತ್ಸವವನ್ನು ನಡಸುವ ವೆಚ್ಚಕ್ಕಾಗಿ ೨೫ ರೂ.ಗಳನ್ನು ದಾನಮಾಡಿ ಪ್ರೋತ್ಸಾಹಿಸಿರುವುದು. ಈ ಬಗೆಯ ಪ್ರೋತ್ಸಾಹ ನೂರ್ಮಡಿಯಾಗಿ ಒದಗಿ ಬಂದು, ಹಳ್ಳಿಗಳ ನಾಡಾದ ನಮ್ಮ ದೇಶದಲ್ಲಿ ಯಾವ ಮೂಲೆಯಲ್ಲೂ ಜ್ಞಾನಾನಂದಗಳ ಮತ್ತು ತುಷ್ಟಿಪುಷ್ಟಿಗಳ ಕೊರತೆ ಇರದಂತೆ ಮಾಡುವ ಕೆಲಸ ಸಂತತವಾಗಿ ನಡೆಯುವಂತಾಗಲೆಂದು ಹಾರೈಸುತ್ತೇವೆ.

## ಕಂಬನಿ

ಅರವಿಂದ ಗ್ರಂಥಮಾಲೆಯ ಸಂಚಾಲಕರೊಬ್ಬರೂ ಹಲಸಂಗಿಯ ಗೆಳೆಯರೂ ಆದ ಸಾಹಿತಿ, ಕಲಾವಿದ ಶ್ರೀ. ಕಾಪಸೆ ರೇವಪ್ಪನವರು ತಮ್ಮ ೩೫ನೆಯ ವಯಸ್ಸಿನಲ್ಲಿ ತಾರೀಖು ೭-೪-೪೩ರಲ್ಲಿ ಮಲೇರಿಯಾ ಬೇನೆಯಿಂದ ಕಾಲವಾದರೆಂದು ತಿಳಿಸಲು ವ್ಯಥೆಯಾಗುತ್ತದೆ. ಶ್ರೀಯುತರು ಚಿತ್ರಕಲೆಯಲ್ಲಿ ನೈಪುಣ್ಯವನ್ನು ಸಂಪಾದಿಸಿದ್ದರು. ಜನಪದಸಾಹಿತ್ಯ ಸಂಗ್ರಹದಲ್ಲಿಯೂ ಪ್ರಚಾರದಲ್ಲಿಯೂ ತೊಡಗಿದ್ದರು. ಅವರ 'ನಂದನ ವನ' ಮತ್ತು 'ಸನ್ಯಾಸಿ' ಎಂಬ ಕಥಾ ಸಂಗ್ರಹಗಳು ಅರವಿಂದ ಗ್ರಂಥಮಾಲೆಯಲ್ಲಿ ಪ್ರಕಾಶಗೊಂಡುವು. ಅವರ ಇನ್ನೂ ಕೆಲವು ಗ್ರಂಥಗಳು ಬೆಳಕಿಗೆ ಬರಬೇಕಾಗಿವೆ. ಭಾಷಾ ಸೇವೆಯಲ್ಲೂ ದೇಶಸೇವೆಯಲ್ಲೂ ತೊಡಗಿದ್ದ ಶ್ರೀ. ರೇವಪ್ಪನವರ ಅಕಾಲ ಮರಣದಿಂದ ದೊಡ್ಡ ನಷ್ಟವಾಗಿದೆ. ಜೊತೆಯಲ್ಲಿ ದುಡಿಯುತ್ತಿದ್ದ ಶ್ರೀ.ಗಳಾದ ಮಧುರಚೆನ್ನ, ಸಿಂಪಿ ಲಿಂಗಣ್ಣ ಮೊದಲಾದ ಗೆಳೆಯರಿಗಂತೂ ಈ ನೋವು ದುಸ್ಸಹವಾದುದು.

ದಿವಂಗತರ ಆತ್ಮಕ್ಕೆ ಸದ್ಗತಿಯುಂಟಾಗಲಿ.

## ವಸಂತ ಸಾಹಿತ್ಯೋತ್ಸವ – ವರದಿ

[೧೩೩ನೆಯ ಪುಟದಿಂದ]

ಪರಿಷತ್ತಿನ ಹಿಂದಿನ ವರದಿಗಳನ್ನು ನೋಡಿದರೆ, ಅದಕ್ಕೆ ನಿರೀಕ್ಷಿಸಿದಷ್ಟು ದ್ರವ್ಯ ಸಹಾಯವು ದೊರೆತಿಲ್ಲವೆಂದೂ, ಆದರಿಂದ ಪರಿಷತ್ತಿನ ಕೆಲಸ ಕಾರ್ಯಗಳು ಸರಾಗವಾಗಿ ನಡೆಯುವುದಕ್ಕೆ ಸಾಧ್ಯವಾಗಿಲ್ಲವೆಂದೂ ವ್ಯಕ್ತಪಡುವುದು. ಮಹಾಜನರು ಆಸ್ಪತ್ರೆ ವಗೈರೆ ಧರ್ಮಕಾರ್ಯಗಳಿಗೆ ಹೇಗೆ ಉದಾರ ದ್ರವ್ಯ ಸಹಾಯ ಮಾಡಲು ಮುಂದೆ ಬರುವರೋ, ಹಾಗೆಯೇ ಭಾಷಾ ಸೇವೆಯೂ ಒಂದು ಪುಣ್ಯ ಕಾರ್ಯವೆಂದೂ ದೇಶ ಸೇವೆಗೆ ಸಮಾನವೆಂದೂ ಅರಿತು ಉದಾರವಾದ ದ್ರವ್ಯ ಸಹಾಯ ಮಾಡಲು ಮುಂದೆ ಬರಬೇಕೆಂದು ನಾನು ಈ ಸಂದರ್ಭದಲ್ಲಿ ಒತ್ತಿ ಹೇಳಲು ಬಯಸುತ್ತೇನೆ.

ಕನ್ನಡ ಪುರೋಭಿವೃದ್ಧಿಯ ವಿಚಾರದಲ್ಲಿ ನಮ್ಮ ವಿದ್ಯಾವಂತ ತರುಣರ ಜವಾಬ್ದಾರಿಯು ಇಂದು ಬಹಳ ಹೆಚ್ಚಿನದಾಗಿದೆ. ವಿದ್ಯಾವಂತರಲ್ಲಿ ಬಹು ಮಂದಿ ಪರಭಾಷಾ ವ್ಯಾಮೋಹಕ್ಕೆ ಸಿಕ್ಕಿ ತಮ್ಮ ಮಾತೃಭಾಷೆಯನ್ನೇ ಮರೆತಿದ್ದಾರೆ. ಕನ್ನಡದಲ್ಲಿ ಮಾತನಾಡುವುದು ಕೂಡ ಅವಮಾನಕರವೆಂದು ಭಾವಿಸುವವರೂ ನಮ್ಮಲ್ಲಿ ಅನೇಕ ಮಂದಿ ಇದ್ದಾರೆ. ಮನೆಗಳಲ್ಲಿ ತಮ್ಮ ತಾಯಿ ತಂದೆಗಳು, ಅಕ್ಕ ತಂಗಿಯರೊಡನೆ ಮಾತನಾಡುವಾಗಲೂ ಕೂಡ ಪರಭಾಷೆಯ ಶಬ್ದಗಳನ್ನೇ ಉಪಯೋಗಿಸುವುದು ಬಹಳ ವಾಡಿಕೆಯಲ್ಲಿದೆ... ಈ ವ್ಯಾಮೋಹದಿಂದ ಕನ್ನಡಿಗರಾದ ನಾವು ಎಷ್ಟು ಬೇಗ ದೂರವಾದರೆ ಅಷ್ಟು ಒಳ್ಳೆಯದು. ಈ ವಿಚಾರದಲ್ಲಿ ನಾವು ಬಂಗಾಳಿಗಳು, ಆಂಧ್ರರು ತಮಿಳರು ಇವರೇ ಮೊದಲಾದವರ ಮಾರ್ಗವನ್ನು ಅನುಸರಿಸಿ ಮಾತೃಭಾಷೆಗೆ ಹೆಚ್ಚು ಪುರಸ್ಕಾರವನ್ನು ಕೊಡುವುದನ್ನು ಕಲಿತುಕೊಳ್ಳಬೇಕು.

ಕನ್ನಡ ಸಾಹಿತ್ಯ ಪರಿಷತ್ತಿನ ಉದ್ದಿಶ್ಯವು ನೆರವೇರಿ ಪರಿಷತ್ತಿನ ಕೆಲಸ ಕಾರ್ಯಗಳು ದೇಶದಾದ್ಯಂತವೂ ವ್ಯಾಪಿಸಬೇಕಾದರೆ ಕನ್ನಡ ಸಾಹಿತ್ಯದ ಸವಿಯನ್ನು ದೇಶದ ಪ್ರಜೆಗಳೆಲ್ಲರೂ ಅನುಭವಿಸಬೇಕಾದರೆ, ಜನರು ವಿದ್ಯಾವಂತರಾಗಿರಬೇಕು. ಆದರೆ ನಮ್ಮ ಸಂಸ್ಥಾನದಲ್ಲಿ ಶೇಕಡ ೧೩ರಷ್ಟು ಮಂದಿಗೆ ಮಾತ್ರ ಅಕ್ಷರಜ್ಞಾನವಿದೆಯೆಂದು ಗೊತ್ತಾಗಿದೆ. ಜನರಲ್ಲಿ ಹೆಚ್ಚಾಗಿ ತಲೆಹಾಕಿರುವ ಈ ಅಜ್ಞಾನವನ್ನು ಹೋಗಲಾಡಿಸಲು ಸರ್ಕಾರದವರು ವಯಸ್ಕರ ಅಕ್ಷರ ಪ್ರಚಾರ ಕಾರ್ಯವನ್ನು ಕೈಗೊಂಡಿರುವರು. ಅದಕ್ಕಾಗಿ ಒಂದು ಸಮಿತಿಯನ್ನು ಕೂಡ ರಚಿಸಲಾಗಿದೆ. ಈ ಸಮಿತಿಯವರು ನಡಸುತ್ತಿರುವ ಕೆಲಸಕಾರ್ಯಗಳಿಗೆ ಸರ್ಕಾರದವರು ದ್ರವ್ಯ ಸಹಾಯ ಮಾಡುತ್ತಿದ್ದಾರೆ. ಈ ಅಕ್ಷರ ಪ್ರಚಾರ ಕಾರ್ಯಕ್ಕೆ ಸಂಸ್ಥಾನದ ನಾನಾ ಕಡೆಗಳಲ್ಲಿರುವ ಕನ್ನಡ ಸಂಘಗಳು ನೆರವಾಗಬೇಕೆಂದು ನಾನು ಈ ಸಮಯದಲ್ಲಿ ಪ್ರಾರ್ಥಿಸುತ್ತೇನೆ.

ಮೈಸೂರು ಸಂಸ್ಥಾನವು ಹಳ್ಳಿಗಳ ನಾಡು. ಹಳ್ಳಿಗಳು ಅಭಿವೃದ್ಧಿಯಾಗದೆ ಹೋದರೆ ದೇಶವು ಅಭಿವೃದ್ಧಿಯಾಗುವುದಿಲ್ಲವೆಂದರಿತು ಮೈಸೂರು ಸರ್ಕಾರದವರು ಗ್ರಾಮಾಭಿವೃದ್ಧಿ ಕಾರ್ಯಗಳನ್ನು ತೀವ್ರವಾಗಿ ನಡಸಲು ಒಂದು ಪಂಚವಾರ್ಷಿಕ ಯೋಜನೆಯನ್ನು ತಯಾರಿಸಿ ಅದನ್ನು ಆಚರಣೆಗೆ ತಂದಿದ್ದಾರೆ. ಈ ಕಾರ್ಯಸಾಧನೆಗೆ ಸಾಹಿತ್ಯಪರಿಷತ್ತಿನ ನೆರವು ಅಗತ್ಯವಾಗಿ ಬೇಕಾಗಿದೆ. ಗ್ರಾಮೋದ್ಧಾರ ಕಾರ್ಯಗಳನ್ನು ಕೈಗೊಳ್ಳುವ ಹಳ್ಳಿಗಳಲ್ಲಿ ಪರಿಷತ್ತಿನವರು ಈ ಬಗೆಯ ವಸಂತ ಸಾಹಿತ್ಯೋತ್ಸವಗಳನ್ನು ಏರ್ಪಡಿಸಿ ಅವರಲ್ಲಿ ಜಾಗೃತಿಯನ್ನುಂಟುಮಾಡಬೇಕು. ಅವರ ಸಾಮಾಜಿಕ, ಆರ್ಥಿಕ ಮತ್ತು ನೈತಿಕ ಉನ್ನತಿಗೆ ಸಹಾಯಮಾಡಬೇಕು. ರಾಮಾಯಣ, ಭಾರತ ಮೊದಲಾದ ನಮ್ಮ ಮಹಾಗ್ರಂಥಗಳಲ್ಲಿ ಅವರಿಗೆ ಅಭಿರುಚಿಯುಂಟಾಗುವಂತೆ ಮಾಡಬೇಕು. ಈ ಉತ್ಸವಕ್ಕೆ ಬಂದಿರುವವರಲ್ಲಿ ಹಳ್ಳಿಗಾಡುಗಳಿಂದ ಬಹು ಮಂದಿ ಉಪಾಧ್ಯಾಯರು ಬಂದಿದ್ದಾರೆಂದು ಭಾವಿಸಿದ್ದೇನೆ. ಅವರು ಈ ವಸಂತ ಸಾಹಿತ್ಯೋತ್ಸವವನ್ನು ಮುಗಿಸಿಕೊಂಡು ತಮ್ಮ ಹಳ್ಳಿಗಳಿಗೆ ಹಿಂತಿರುಗಿದ ಮೇಲೆ ಈ ಬಗೆಯ ಉತ್ಸವಗಳನ್ನು ತಮ್ಮ ಹಳ್ಳಿಗಳಲ್ಲಿ ಏರ್ಪಡಿಸಿ ಹಳ್ಳಿಗಾಡಿನವರಿಗೆ ವಿಷಯಗಳನ್ನು ಬೋಧಿಸಿ ಅವರಲ್ಲಿ ನವಚೈತನ್ಯ ಉಂಟುಮಾಡಬೇಕೆಂದು ನಾನು ಸಲಹೆ ಮಾಡುತ್ತೇನೆ.

ಕನ್ನಡ ಸಾಹಿತ್ಯವು ಬೆಳೆಯುತ್ತಾ ಬಂದಿರುವುದಾದರೂ, ಬಂಗಾಳಿ, ತೆಲುಗು, ತಮಿಳು, ಹಿಂದಿ ಮೊದಲಾದ ಭಾಷೆಗಳ ಬೆಳವಣಿಗೆಯ ಪ್ರಮಾಣದಲ್ಲಿ ಬೆಳೆಯುತ್ತ ಬಂದಿಲ್ಲವೆಂದು ಈ ಸಂದರ್ಭದಲ್ಲಿ ನಾನು ಹೇಳಬಯಸುತ್ತೇನೆ. ಆಧುನಿಕ ಪ್ರಗತಿಗೆ ಸಾಧಕವಾದ ಆರ್ಥಿಕ, ಸಾಮಾಜಿಕ, ನೈತಿಕ ಮತ್ತು ವೈಜ್ಞಾನಿಕ ವಿಷಯಗಳನ್ನು ಕುರಿತು ಆಂಗ್ಲ ಮೊದಲಾದ ವಿದೇಶಿ ಭಾಷೆಗಳಲ್ಲಿ ಬರೆದಿರುವ ಗ್ರಂಥಗಳನ್ನು ಕನ್ನಡ ಭಾಷೆಯಲ್ಲಿ ಜನಸಾಮಾನ್ಯರಿಗೆ ಉಪಯೋಗವಾಗುವಂತೆ ಸಾಕಾದಷ್ಟು ಮಟ್ಟಿಗೆ ಭಾಷಾಂತರಗಳು ನಡೆದಿಲ್ಲ. ಇದರಿಂದ ನಮ್ಮ ಭಾಷೆಯು ಬಹಳ ಹಿಂದೆ ಬಿದ್ದಿದೆ. ಈ ಭಾಷಾಂತರ ವಿಚಾರದ ಕಡೆಗೆ ಕನ್ನಡಿಗರು ಹೆಚ್ಚು ಗಮನ ಕೊಡಬೇಕಾಗಿದೆ. ಈ ಸಂದರ್ಭದಲ್ಲಿ ನಾನು ಒಂದು ವಿಶೇಷ ಮನವಿಮಾಡಿಕೊಳ್ಳಬೇಕಾಗಿದೆ. ಪ್ರಾಚೀನ ಕಾಲದಿಂದಲೂ ಬಹಳ ಉನ್ನತಸ್ಥಿತಿಯಲ್ಲಿದ್ದುಕೊಂಡು ಬರುತ್ತಿರುವ ಆಯುರ್ವೇದ ಶಾಸ್ತ್ರದ ಸಂಸ್ಕೃತ ಗ್ರಂಥಗಳನ್ನು ಕನ್ನಡಕ್ಕೆ ಭಾಷಾಂತರ ಮಾಡಿ ಜನಸಾಮಾನ್ಯರಿಗೆ ಅನುಕೂಲ ಮಾಡಿಕೊಡಬೇಕಾದುದು ಅತ್ಯಾವಶ್ಯಕವಾಗಿರುತ್ತದೆ. . .

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡದ ಮೂಲಕವೇ ಶಿಕ್ಷಣವನ್ನು ಕೊಡಬೇಕೆಂಬುದಾಗಿ ಜನರು ಬಯಸುತ್ತಿರುವದೂ, ವ್ಯವಹಾರ ಸ್ಥಾನ ಮತ್ತು ಕಚೇರಿಗಳಲ್ಲಿ ವ್ಯವಹಾರವು ಕನ್ನಡದ ಮೂಲಕವೇ ನಡೆಯಬೇಕೆಂಬ ಬೇಡಿಕೆಯೂ ಸರ್ಕಾರದ ಗಮನಕ್ಕೆ ಬಂದಿದೆ. ಮಹಾಜನರ ಈ ಆಕಾಂಕ್ಷೆಯು ಸಹಜವೇ ಸರಿ. ಕನ್ನಡದ ವಿಚಾರದಲ್ಲಿ ಮಹಾಜನರು ಹೆಚ್ಚು ಹೆಚ್ಚಾಗಿ ಆದರ ವಿಶ್ವಾಸಗಳನ್ನು ತೋರಿಸುತ್ತ ಬಂದಂತೆಲ್ಲ ಅವರ ಆಕಾಂಕ್ಷೆಯು ಬೇಗನೆ ಈಡೇರುವುದರಲ್ಲಿ ಸಂದೇಹವಿಲ್ಲ.

"ಹರಿದು ಹಂಚಿಹೋಗಿರುವ ಕನ್ನಡ ನಾಡು ಒಂದಾಗಬೇಕು; ಕನ್ನಡಿಗರೆಲ್ಲರೂ ಐಕ್ಯಮತ್ಯದಿಂದ ವರ್ತಿಸಬೇಕು" ಎಂಬ ಉಜ್ವಲಾಕಾಂಕ್ಷೆಯು ಇಂದು ಕನ್ನಡಿಗರ ಹೃದಯದಲ್ಲಿ ಮೂಡುತ್ತಿರುವುದು ಶುಭ ಚಿಹ್ನೆ ಎಂದು ನಾನು ಭಾವಿಸುತ್ತೇನೆ. ಈ ರೀತಿ ಹಂಚಿರುವ ಕನ್ನಡ ನಾಡಿನಲ್ಲಿರುವ ಒಂದೂವರೆ ಕೋಟಿ ಮಂದಿ ಕನ್ನಡಿಗರ ಸಂಘಟನೆಯಾಗುವುದಾದರೆ ಕನ್ನಡ ಉದ್ಧಾರವು ಬೇಗನೆ ಆಗುವುದರಲ್ಲಿ ಸಂದೇಹವಿಲ್ಲ. ಈ ಸಂಘಟನೆಯನ್ನು ಸಾಧಿಸುವುದಕ್ಕೆ ಪ್ರಯತ್ನ ಪಡಬೇಕಾದುದು ಪ್ರತಿಯೊಬ್ಬ ಕನ್ನಡಿಗನ ಕರ್ತವ್ಯವೆಂದು ನಾನು ಭಾವಿಸುತ್ತೇನೆ. ರಾಜಕೀಯ ದೃಷ್ಟಿಯಿಂದ ಕನ್ನಡ ನಾಡು ಒಂದುಗೂಡುವುದಕ್ಕಿಂತ ಪೂರ್ವಭಾವಿಯಾಗಿ ಸಾಂಸ್ಕೃತಿಕ ದೃಷ್ಟಿಯಿಂದಲಾದರೂ ಒಂದುಗೂಡುವುದಾದರೆ ಮಹತ್ತರವಾದ ಕೆಲಸವನ್ನು ಸಾಧಿಸಿದಂತಾಗುವುದು. ಈ ದೃಷ್ಟಿಯಿಂದಲೇ ಇಂದು ಕರ್ಣಾಟಕ ವಿಶ್ವವಿದ್ಯಾನಿಲಯ ಸ್ಥಾಪನೆಗೆ ಪ್ರಯತ್ನಗಳನ್ನು ಮಹಾಜನರು ನಡೆಸಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯದವರು ಹೊರಗಿರುವ ವಿದ್ಯಾಸಂಸ್ಥೆಗಳು ಈ ಈ ವಿಶ್ವವಿದ್ಯಾನಿಲಯಕ್ಕೆ ಸೇರಲು ಅವಕಾಶವನ್ನು ಕಲ್ಪಿಸಿಕೊಟ್ಟಿರುವುದು ಮೇಲಿನ ವಿಶಾಲಭಾವನೆಯನ್ನು ಸೂಚಿಸುತ್ತದೆ. ಇದರಿಂದ ಸಾಂಸ್ಕೃತಿಕ ಭಾವನೆಯು ಬಲಪಡುವುದಕ್ಕೆ ಅನುಕೂಲವಾಗಿ ಕನ್ನಡ ನಾಡಿನಲ್ಲಿ ಸಾಂಸ್ಕೃತಿಕ ಐಕ್ಯಮತ್ಯವು ನೆಲಸುವುದೆಂದು ನಾನು ಭಾವಿಸಿದ್ದೇನೆ.

ಎಂದು ಹೇಳಿ ಉತ್ಸವ ಕಾರ್ಯಗಳು ಜಯಪ್ರದವಾಗಲೆಂದು ಹಾರೈಸಿದರು.

ಬಳಿಕ ಶ್ರೀಮತಿ ಕೆ. ಗೋಮತಿದೇವಿಯವರಿಂದ ಸುಶ್ರಾವ್ಯವಾದ ಸಂಗೀತ ನಡೆಯಿತು.

ಪ್ರಾಂತ ಸಮಿತಿಯ ಅಧ್ಯಕ್ಷರಾದ ಶ್ರೀ. ಸಿ. ಕೆ. ವೆಂಕಟರಾಮಯ್ಯನವರು ಮಂತ್ರಿವರ್ಯರಿಗೂ ಉತ್ಸವಕ್ಕೆ ದಯಮಾಡಿಸಿದ ಎಲ್ಲರಿಗೂ ಧನ್ಯವಾದಗಳನ್ನು ಸಮರ್ಪಿಸಿದರು.

ಶ್ರೀ. ಗುಂಡಪ್ಪಗೌಡರು ಪರಿಷತ್ತಿಗೆ ಸಹಾಯಕರಾಗಿ ೧೦೦ ರೂ.ಗಳನ್ನೂ ವಸಂತ ಸಾಹಿತ್ಯೋತ್ಸವವನ್ನು ಯಾವುದಾದರೊಂದು ಹಳ್ಳಿಯಲ್ಲಿ ನಡಸುವುದಕ್ಕಾಗಿ ೨೫ ರೂ. ಗಳ ದ್ರವ್ಯ ಸಹಾಯವನ್ನೂ ನೀಡಿರುವುದನ್ನು ಕೃತಜ್ಞತೆಯಿಂದ ಸಭೆಗೆ ತಿಳಿಸಿದರು.

ಮಧ್ಯಾಹ್ನ ೩–೩೦ಕ್ಕೆ ಪರಿಷನ್ಮಂದಿರದಲ್ಲಿ ಮಹಿಳಾ ಗೋಷ್ಠಿಯೂ ಶ್ರೀ ಚಾಮರಾಜೇಂದ್ರ ಸಂಸ್ಕೃತ ಪಾಠಶಾಲೆಯ ಸಭಾ ಮಂದಿರದಲ್ಲಿ ಪುಸ್ತಕ ಭಂಡಾರ ವಿಚಾರ ಗೋಷ್ಠಿಯೂ ನಡೆದುವು. (ವರದಿಗಳನ್ನು ಬೇರೆ ಕಡೆ ಕೊಟ್ಟಿದೆ.)

ಸಂಜೆ ೬–೩೦ಕ್ಕೆ ಸಂಗೀತವಿದುಷಿ ಶ್ರೀಮತಿ ಜಿ. ಚೆನ್ನಮ್ಮನವರಿಂದ ಸುಶ್ರಾವ್ಯವಾದ ಸಂಗೀತ ನಡೆಯಿತು. ಅವರಿಗೆ ಸಹಾಯವಾಗಿ ವಿದ್ವಾನ್ ಪುಟ್ಟಯ್ಯನವರಿಂದ ಪಿಟೀಲು ವಾದನವೂ, ವಿದ್ವಾನ್ ಆಂಜನೇಯಲು ಅವರಿಂದ ಮೃದಂಗ ವಾದನವೂ ನಡೆದುವು.

### ೧೮–೪–೪೩ ಭಾನುವಾರ

ಎರಡನೆಯ ದಿನ ಬೆಳಗ್ಗೆ ಶ್ರೀ. ಎ. ನಾರಾಯಣರಾಯರು 'ಪ್ರಾಣಿ ಶಾಸ್ತ್ರವೂ ಮಾನವ ಜೀವನವೂ' ಎಂಬ ವಿಷಯವಾಗಿಯೂ ಶ್ರೀ. ಜಿ. ಎನ್. ಕೃಷ್ಣಮೂರ್ತಿಗಳು 'ಭರತಖಂಡದ ವ್ಯಾಪಾರ' ಎಂಬ ವಿಷಯವಾಗಿಯೂ ವಿಚಾರಪೂರ್ಣವಾದ ಉಪನ್ಯಾಸಗಳನ್ನು ಮಾಡಿದರು. ಶ್ರೀ. ಎನ್. ಎಸ್. ವೆಂಕಟಸುಬ್ಬರಾಯರು ಹಲವು ಆಧುನಿಕ ಕನ್ನಡ ಕವಿತೆಗಳನ್ನು ಸುಶ್ರಾವ್ಯವಾಗಿ ಪಠಿಸಿದರು.

ಸಂಜೆ ಗಮಕವಿದುಷಿ ಶ್ರೀಮತಿ ಲಲಿತಮ್ಮನವರು 'ಜೈಮಿನಿ ಭಾರತ' ದಿಂದ 'ಸೀತಾ ವನವಾಸ' ಭಾಗವನ್ನು ಇಂಪಾಗಿ ಪಠಿಸಿದರು. ಅನಂತರ ಶ್ರೀ. ಬಿ. ವೆಂಕೋಬರಾಯರು 'ಮೈಸೂರು ದೇಶದ ವಾಸ್ತು ಶಿಲ್ಪ' ಎಂಬ ವಿಷಯವಾಗಿ ದೀಪಚಿತ್ರ ಸಹಿತ ಉಪನ್ಯಾಸ ಮಾಡಿದರು. ಆಮೇಲೆ, ಮೈಸೂರಿನ ಪ್ರಸಿದ್ಧ ಕಲಾವಿದರಾದ ಶ್ರೀ ಎಸ್. ಎನ್. ಸ್ವಾಮಿಯವರಿಂದ 'ಭರತ ನಾಟ್ಯ' ಪ್ರದರ್ಶನ ನಡೆಯಿತು. ಶ್ರೀಯುತರು ತಮ್ಮ ಸ್ವಾರಸ್ಯವಾದ ಕಾರ್ಯಕ್ರಮದಲ್ಲಿ ಒಂದೆರಡು ಸಂಸ್ಕೃತ ಶ್ಲೋಕಗಳನ್ನೂ ಶ್ರೀ ಪುರಂದರದಾಸರ 'ಅಮ್ಮಾ ನಿಮ್ಮ ಮನೆಗಳಲ್ಲಿ' ಎಂಬ ಕೃತಿಯನ್ನೂ ಅಭಿನಯ ಸಹಿತ ಹಾಡಿದರು. ಅವರ ನಾಟ್ಯಾಭಿನಯಗಳಿಗೆ ಸಭೆ ತಲೆದೂಗಿತು.

ಪರಿಷತ್ತಿನ ಉಪಾಧ್ಯಕ್ಷರು ಕಲಾವಿದ ಸ್ವಾಮಿಯವರನ್ನು ಸಭೆಗೆ ಪರಿಚಯ ಮಾಡಿಕೊಡುತ್ತ, ಅವರ ಬಹುಮುಖವಾದ ಕಲಾನೈಪುಣ್ಯವನ್ನು ಶ್ಲಾಘಿಸಿದರು.

ಶ್ರೀ. ಸ್ವಾಮಿಯವರು ಪ್ರಸಿದ್ಧ ಕಲಾವಿದರು. ಇವರು ಜಗತ್ತಿನ ಮಹಾ ಪುರುಷರನೇಕರ ಭಾವಚಿತ್ರಗಳನ್ನು ಬರೆದು ಆಯಾ ಮಹನೀಯರಿಗೆ ಕಳಿಸಿಕೊಟ್ಟು ಅವರ ಮೆಚ್ಚುಗೆಯನ್ನು ಪಡೆದು ಅವರಿಂದ ಚಿತ್ರಗಳ ಮೇಲೆ ಅವರ ಸ್ವಹಸ್ತದಿಂದ ರುಜುಗಳನ್ನು ಪಡೆದಿಟ್ಟುಕೊಂಡಿದ್ದಾರೆ. ಅವು ಸಾವಿರಾರು ರೂಪಾಯಿಗಳ ಬೆಲೆಯುಳ್ಳವಾಗಿವೆ. ಇವರು ಹೀಗೆಯೆ, ಮೈಸೂರು ಸರಕಾರದ ಉನ್ನತ ಅಧಿಕಾರ ಸ್ಥಾನಗಳನ್ನಲಂಕರಿಸಿ, ಮುಂಬಯಿ ಸಮ್ಮೇಳನದ ಅಧ್ಯಕ್ಷರಾಗಿಯೂ ಇದ್ದು ಕನ್ನಡದ ಮುನ್ನಡೆಗೆ ಬಹಳವಾಗಿ ದುಡಿದಿರುವ ರಾಜಕಾರ್ಯಪ್ರವೀಣ ಶ್ರೀ. ಎಸ್. ಎಸ್. ಸುಬ್ಬರಾಯರವರ ಭಾವಚಿತ್ರವನ್ನು ಬರೆದು ಪರಿಷತ್ತಿಗೆ ಉತ್ಸವದ ನೆನಪಾಗಿ ಕೊಟ್ಟಿದ್ದಾರೆ. ಪರಿಷತ್ತು ಅದನ್ನು ವಂದನೆಗಳೊಡನೆ ಸ್ವೀಕರಿಸಿದೆ.

### ೧೯–೪–೪೩ ಸೋಮವಾರ

ಮೂರನೆಯ ದಿನ ಬೆಳಗ್ಗೆ ಶ್ರೀ. ಎ. ನಾರಾಯಣಸ್ವಾಮಿ ಅಯ್ಯರ್ ಅವರು 'ಗುಜರಾತಿ ಸಾಹಿತ್ಯದ ಬೆಳವಣಿಗೆ' ಯನ್ನು ಕುರಿತು ಸ್ವಾರಸ್ಯವಾಗಿ ಉಪನ್ಯಾಸ ಮಾಡಿದರು. ಆಮೇಲೆ ಶ್ರೀ. ಬಿ. ಎಸ್. ರಾಮಾಚಾರ್ಯರು ಆಧುನಿಕ ಕನ್ನಡಕವಿತೆಗಳನ್ನೂ ಭಾವಗೀತೆಗಳನ್ನೂ ಸುಶ್ರಾವ್ಯವಾಗಿ ಹಾಡಿದರು. ಶ್ರೀ. ಜಿ. ಪಿ. ರಾಜರತ್ನಂ ಅವರು ಕನ್ನಡದ ಅಣಕವಾಡುಗಳನ್ನೂ, ತಾವು ಕನ್ನಡಕ್ಕೆ ಅನುವಾದಿಸಿರುವ ಕೈಲಾಸಂ ಅವರ 'ನಮ್ಮ ಬಾಪೂ' ಎಂಬ ಕವಿತೆಯನ್ನೂ ಹೃದಯಂಗಮವಾಗಿ ವಾಚಿಸಿದರು.

ಸಂಜೆ, ಕಾರವಾರದಿಂದ ದಯಮಾಡಿಸಿದ್ದ ಶ್ರೀ. ಹನುಮಂತ ರಾವ್ ಮಾಂಜರೇಕರ ಅವರು 'ಭಗವದ್ಗೀತೆಯ ಭವ್ಯತೆ' ಯನ್ನು ಪ್ರತಿಪಾದಿಸಿ ಮಾತನಾಡಿದರು. ಬಳಿಕ ಗಮಕವಿದ್ವಾನ್ ಕೆ. ಜಿ. ಸಂಪತ್ಕುಮಾರಾಚಾರ್ಯರು ಕುಮಾರವ್ಯಾಸ ಭಾರತದಿಂದ 'ದೂರ್ವಾಸಾತಿಥ್ಯ' ಎಂಬ ಭಾಗವನ್ನು ಹೃದಯಂಗಮವಾಗಿ ಪಠಿಸಿದರು.

ಆಮೇಲೆ 'ಸೌಭಾಗ್ಯ' ಎಂಬ ನಾಟಕ ಬಹು ಯಶಸ್ವಿಯಾಗಿ ಅಭಿನಯಿಸಲ್ಪಟ್ಟಿತು. ನಾಟಕ ಬರೆದವರು ಶ್ರೀ ಚಿ. ಸದಾಶಿವಯ್ಯನವರು. ಇದೊಂದು 'ಆಶು ನಾಟಕ' ಮನೋಹರ ಗ್ರಂಥಮಾಲೆಯ ಸಾಹಿತ್ಯೋತ್ಸವ ಕಾಲದಲ್ಲಿ ಬರೆದು ಮೊದಲು ಪ್ರದರ್ಶಿಸಿದುದು.

ಈ ಪ್ರದರ್ಶನದಲ್ಲಿ ಶ್ರೀ.ಗಳಾದ ಚಿ. ಸದಾಶಿವಯ್ಯನವರು, ಎಸ್. ನಾಗೇಶರಾಯರು, ಬಿ.ಎ., ಸಿ.ಕೆ. ನಾಗರಾಜರಾಯರು ಮತ್ತು ಸಿ.ಕೆ. ಶಂಕರನಾರಾಯಣರಾಯರು ಪಾತ್ರವಹಿಸಿ ಪ್ರೇಕ್ಷಕರ ಮೆಚ್ಚುಗೆಗೆ ಪಾತ್ರರಾದರು.

### ೨೦–೪–೪೩ ಮಂಗಳವಾರ

ನಾಲ್ಕನೆಯ ದಿನ ಬೆಳಗ್ಗೆ ಯುವಜನ ಗೋಷ್ಠಿ ಬೆಂಗಳೂರು ಮಿತ್ರಸಂಘದ ಸಹಕಾರದೊಂದಿಗೆ ನಡೆಯಿತು. ಶ್ರೀ. ಬಿ. ಶ್ರೀ. ಪಾಂಡುರಂಗರಾಯರು ಅಧ್ಯಕ್ಷತೆ ವಹಿಸಿದ್ದರು. 'ಯುವಕರಿಂದ ಆಗಬಹುದಾದ ಸಾಹಿತ್ಯಸೇವೆ' ಎಂಬ ವಿಷಯವಾಗಿ ಶ್ರೀ.ಗಳಾದ ಸಿ. ಕೃಷ್ಣ ಅವರೂ, ಪೆಮ್ಮನಹಳ್ಳಿ ರಾಘವೇಂದ್ರ ಅವರೂ ಭಾಷಣ ಮಾಡಿದರು. ಆಮೇಲೆ ನೃತ್ಯ, ಕಾವ್ಯವಾಚನ, ಸಂಗೀತ ಮತ್ತು ಅಭಿನಯಗಳು ರಂಜನೀಯವಾಗಿ ನಡೆದುವು.

ಮಧ್ಯಾಹ್ನ ೪ ಗಂಟೆಗೆ ಶ್ರೀ. ಮತಿಘಟ್ಟ ಕೃಷ್ಣಮೂರ್ತಿಯವರ ಅಧ್ಯಕ್ಷತೆಯಲ್ಲಿ ಯುವಜನ ಸಮ್ಮೇಳನ ನಡೆಯಿತು. ಹನ್ನೊಂದು ಸಂಘಗಳು ಭಾಗವಹಿಸಿದ್ದುವು. ಯುವಕರಿಂದ ಅಕ್ಷರ ಪ್ರಚಾರ,

ಪುಸ್ತಕ ಪ್ರಕಟನೆ ಮುಂತಾದ ವಿಷಯಗಳನ್ನು ಕುರಿತ ನಿರ್ಣಯಗಳು ಅಂಗೀಕಾರವಾದುವು.

ರಾತ್ರಿ ಭರತಖಂಡದ ವಿವಿಧ ಭಾಷೆಗಳಲ್ಲಿ ಕಾವ್ಯವಾಚನ, ವಾದ್ಯವಾದನ, ದೃಶ್ಯಾಭಿನಯಗಳು ಬಹು ಯಶಸ್ವಿಯಾಗಿ ನಡೆದುವು. ಈ ಏರ್ಪಾಟನ್ನು ಹೊಸದಾಗಿ ಈ ವರ್ಷ ಪ್ರಯೋಗಾರ್ಥವಾಗಿ ಕೈಕೊಳ್ಳಲಾಯಿತು. ಬೆಂಗಳೂರಿನಲ್ಲಿರುವ ಹಿಂದೀ, ಬಂಗಾಳಿ, ಆಂಧ್ರ, ತಮಿಳು, ಮರಾಠಿ ಭಾಷಾಬಾಂಧವರು ಪರಿಷತ್ತಿನ ಪ್ರಾರ್ಥನೆಯನ್ನು ಮನ್ನಿಸಿ ದಯಮಾಡಿಸಿ ಬಹು ಉತ್ಕೃಷ್ಟವಾಗಿ ಕಾರ್ಯಕ್ರಮಗಳನ್ನು ನಡಸಿಕೊಟ್ಟು ಉಪಕಾರ ಮಾಡಿದ್ದಕ್ಕಾಗಿ ಅವರಿಗೆ ಕೃತಜ್ಞತೆಗಳು ಸಲ್ಲತಕ್ಕವಾಗಿವೆ.

ನಾಲ್ಕು ದಿನಗಳ ಉತ್ಸವ ಹೀಗೆ ಸಾಂಗವಾಗಿ ನೆರವೇರಿತು. ಪ್ರಾಂತ ಸಮಿತಿಯ ಅಧ್ಯಕ್ಷರಾದ ಶ್ರೀ. ಸಿ. ಕೆ. ವೆಂಕಟರಾಮಯ್ಯನವರು ಉತ್ಸವಕ್ಕೆ ತನು ಮನ ಧನರೂಪವಾಗಿ ನೆರವಾದ ಸಮಸ್ತರಿಗೂ ಹೃತ್ಪೂರ್ವಕವಾದ ಕೃತಜ್ಞತೆಗಳನ್ನು ಸಲ್ಲಿಸಿದರು.

## ವಸಂತಸಾಹಿತ್ಯೋತ್ಸವ - ೧೯೪೩

ಬೆಂಗಳೂರಿನ ಉತ್ಸವಕ್ಕಾಗಿ ಈ ಕೆಳಗಿನ ಸಹಾಯ ದ್ರವ್ಯಗಳನ್ನು ಕೃತಜ್ಞತೆಯಿಂದ ಸ್ವೀಕರಿಸಿದೆ.

ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರು
**ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರರವರು ರೂ. ೧೦೦-೦-೦**

ಶ್ರೀ.ಗಳಾದ

| | | |
|---|---|---|
| ೧. | ಸರ್ ಡಿ. ಅರ್ಬಿ ರೈಲಿ ಅವರು | ೨೫-೦-೦ |
| ೨. | ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯನವರು | ೨೫-೦-೦ |
| ೩. | ಸಿ. ಸುಬ್ರಹ್ಮಣ್ಯ ಅಯ್ಯರ್ ಅವರು | ೨೫-೦-೦ |
| ೪. | ರಾಜಸೇವಾಪ್ರಸಕ್ತ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು | ೨೫-೦-೦ |
| ೫. | ರಾಜಧರ್ಮಪ್ರಸಕ್ತ ಟಿ. ಶಿಂಗಾರವೇಲು ಮೊದಲಿಯಾರರು | ೨೦-೦-೦ |
| ೬. | ಎಲ್. ಎ. ಎಚ್. ವಿಂಕ್ಲೇರ್ ಅವರು | ೨೦-೦-೦ |
| ೭. | ಒ. ಎಚ್. ಕೋನಿಗ್ಸ್‌ಬರ್ಗರ್ ಅವರು | ೧೫-೦-೦ |
| ೮. | ಅದಲ್-ಉಲ್-ಮುಲ್ಕ್ ಸಿ. ಅಬ್ದುಲ್ ಘನಿ ಅವರು | ೧೫-೦-೦ |
| ೯. | ಸಿ. ಕೆ. ವೆಂಕಟರಾಮಯ್ಯನವರು | ೧೫-೦-೦ |
| ೧೦. | ಡಿ. ಎಚ್. ಚಂದ್ರಶೇಖರಯ್ಯನವರು | ೧೫-೦-೦ |
| ೧೧. | ಎ. ಸಿ. ನಿರ್ವಾಣೆಗೌಡರವರು | ೧೦-೦-೦ |
| ೧೨. | ಎಂ. ಸುಲ್ತಾನ್ ಮೊಹಿಯುದ್ದೀನ್ ಅವರು | ೧೦-೦-೦ |
| ೧೩. | ಎಂ. ರಾಮಚಂದ್ರರಾವ್ ಸಿಂಧ್ಯ ಅವರು | ೧೦-೦-೦ |
| ೧೪. | ಜೆ. ಅಪ್ಪಾಜಿಗೌಡರವರು | ೧೦-೦-೦ |
| ೧೫. | ಅಬ್ದುಲ್ ಅಜೀಜ್‌ಖಾನ್ ಅವರು | ೧೦-೦-೦ |
| ೧೬. | ಬಿ. ಜಿ. [illegible] ಮೊದಲಿಯಾರರು | ೧೦-೦-೦ |
| ೧೭. | ಬಿ. ಎನ್. ಶ್ರೀನಿವಾಸಯ್ಯನವರು | ೧೦-೦-೦ |
| ೧೮. | ರಾಜಧರ್ಮಪ್ರಸಕ್ತ ಎ. ಆರ್. ನಾಗೇಶ್ವರ ಅಯ್ಯರ್ ಅವರು | ೧೦-೦-೦ |
| ೧೯. | ಸಿ. ನಾರಾಯಣಸ್ವಾಮಿನಾಯ್ಡು ಅವರು | ೧೦-೦-೦ |
| ೨೦. | ಎಂ. ನರಸಿಂಹಯ್ಯನವರು | ೧೦-೦-೦ |
| ೨೧. | ಎನ್. ಸುಬ್ಬರಾಯರು | ೧೦-೦-೦ |
| ೨೨. | ಟಿ. ರಂಗಸ್ವಾಮಿ ಅವರು | ೧೦-೦-೦ |
| ೨೩. | ರಾವ್‌ಸಾಹೆಬ್ ಎಂ. ರಾಮರಾಯರು | ೧೦-೦-೦ |
| ೨೪. | ಮೈಸೂರು ಪ್ರೊ॥ ಕೋ-ಆಪರೇಟಿವ್ ಅಪೆಕ್ಸ್ ಬ್ಯಾಂಕ್ | ೧೦-೦-೦ |
| ೨೫. | ಶ್ರೀಮತಿ ಡಿ. ಚಂಪಾಬಾಯಿಯವರು | ೫-೦-೦ |
| ೨೬. | ಬಿ. ಪುಟ್ಟಯ್ಯನವರು | ೫-೦-೦ |
| ೨೭. | ಡಿ. ಎ. ಹುಕ್ಕೇರಿ ಅವರು | ೫-೦-೦ |
| ೨೮. | ಸಿ. ನಾರಾಯಣಸ್ವಾಮಿಶೆಟ್ಟಿ ಅವರು | ೫-೦-೦ |
| ೨೯. | ಆರ್. ರಾಮಚಂದ್ರರಾವ್ ಬೊಂಭೋರೆ ಅವರು | ೫-೦-೦ |
| ೩೦. | ಡಿ. ಸಿ. ಸುಬ್ಬರಾಯಪ್ಪನವರು | ೫-೦-೦ |
| ೩೧. | ಎಚ್. ವಿ. ಶ್ರೀಕಂಠಯ್ಯನವರು | ೫-೦-೦ |
| ೩೨. | ಸಿ. ಲಕ್ಷ್ಮಣಗೌಡ ಅವರು | ೫-೦-೦ |
| ೩೩. | ಕೆ. ಎಸ್. ಗಂಗಾಧರ ಅವರು | ೫-೦-೦ |
| ೩೪. | ಎ. ಶೇಷಗಿರಿರಾಯರು | ೫-೦-೦ |
| ೩೫. | ಎಸ್. ನಾಗಪ್ಪನವರು | ೫-೦-೦ |
| ೩೬. | ಬೆಂಗಳೂರು ಸಿಟಿ ಕೋ-ಆಪರೇಟಿವ್ ಸೊಸೈಟಿ | ೫-೦-೦ |
| ೩೭. | ಬೆಂಗಳೂರು ಸಿಟಿ ಕೋ-ಆಪರೇಟಿವ್ ಹೌಸಿಂಗ್ ಸೊಸೈಟಿ | ೫-೦-೦ |
| ೩೮. | ಶ್ರೀನಿವಾಸರಾವ ಕಾಗಲಕರ ಅವರು | ೫-೦-೦ |
| ೩೯. | ಟಿ. ರಂಗಸುಬ್ಬಯ್ಯನವರು | ೩-೦-೦ |
| ೪೦. | ಬಿ. ಕೆ. ರಾಮಕೃಷ್ಣಯ್ಯನವರು | ೩-೦-೦ |
| ೪೧. | ವೈ. ಸುಬ್ರಹ್ಮಣ್ಯಂ ಅವರು | ೩-೦-೦ |
| ೪೨. | ಬಿ. ವಿ. ರಾಮಯ್ಯಂಗಾರ್ ಅವರು | ೩-೦-೦ |
| ೪೩. | ಕೆ. ಫಿರೋಜ್ ಷಾ ಪೂಣೇಗಾರ್ ಅವರು | ೩-೦-೦ |
| ೪೪. | ಕೆ. ಎಂ. ನರಸಿಂಹಯ್ಯನವರು | ೩-೦-೦ |
| ೪೫. | ರಾವ್‌ಬಹದ್ದೂರ್ ಡಾ॥ ಸಿ. ಬಿ. ರಾಮರಾಯರು | ೩-೦-೦ |
| ೪೬. | ಬಿ. ಎನ್. ವೆಂಕಟರಾಮಯ್ಯನವರು | ೩-೦-೦ |
| ೪೭. | ಇಂಡಸ್ಟ್ರಿಯಲ್ ಅಂಡ್ ಕಮರ್ಷಿಯಲ್ ಕೋ-ಆ॥ ಸೊಸೈಟಿ | ೩-೦-೦ |
| ೪೮. | ಸಿ. ಜಿ. ರಾಮಯ್ಯ ಅವರು | ೨-೦-೦ |
| ೪೯. | ಅ. ನಾರಾಯಣಸ್ವಾಮಿ ಅಯ್ಯರ್ ಅವರು | ೨-೦-೦ |
| ೫೦. | ಸಿ. ನರಸಿಂಹಮೂರ್ತಿ ಅವರು | ೨-೦-೦ |
| ೫೧. | ದಿವಾನ್‌ಬಹದ್ದೂರ್ ಟಿ. ಭುಜಂಗರಾಯರು | ೨-೦-೦ |
| ೫೨. | ಬೆನಗಲ್ ರಾಮರಾಯರು | ೨-೦-೦ |
| ೫೩. | ಎಸ್. ಕೆ. ವೆಂಕಟರಮಣ ಅಯ್ಯರ್ ಅವರು | ೨-೦-೦ |
| ೫೪. | ಪಂಡಿತ ಎಚ್. ಹನುಮಂತರಾಯರು | ೨-೦-೦ |
| ೫೫. | ಬಿ. ಎಸ್. ರಾಮಾಚಾರ್ಯರು | ೧-೦-೦ |
| ೫೬. | ಎ. ವಿ. ಲಕ್ಷ್ಮೀನರಸಿಂಹಯ್ಯನವರು | ೧-೦-೦ |
| ೫೭. | ಮಿಸೆಸ್ ಎಚ್. ವ್ಯಾಸರಾಯರು | ೧-೦-೦ |
| ೫೮. | ಅನಂತರಾಮರಾಯರು | ೧-೦-೦ |
| ೫೯. | ಶ್ರೀಮತಿ ಸಿ. ಪದ್ಮಾವತಮ್ಮನವರು | ೧-೦-೦ |
| ೬೦. | ಎಂ. ಆರ್. ಅಣ್ಣಾಜಿರಾಯರು | ೦-೮-೦ |
| | ಒಟ್ಟು ರೂ. | ೫೫೬-೮-೦ |

### ಕೊಡಗಿನಲ್ಲಿ ವಸಂತ ಸಾಹಿತ್ಯೋತ್ಸವ

ಏಪ್ರಿಲ್ ೧೦ ಮತ್ತು ೧೧ರಲ್ಲಿ ಮಡಕೇರಿಯಲ್ಲೂ, ೧೨ರಲ್ಲಿ ನಾಪೋಕ್ಲಿನಲ್ಲೂ, ೧೩ರಲ್ಲಿ ಮೂರ್ನಾಡಿನಲ್ಲೂ ವಸಂತ ಸಾಹಿತ್ಯೋತ್ಸವ ಜರುಗಿತು. ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಪ್ರಸಕ್ತ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್, ಎಂ.ಎ. ಅವರು ಆರಂಭೋತ್ಸವವನ್ನು ನೆರವೇರಿಸಿದರು.

## ಪರಿಷತ್ತಿನ ಸುದ್ದಿ

### ಪರಿಷತ್ತಿನ ಸದಸ್ಯರ ಬೆಳವಣಿಗೆ

**ಸಹಾಯಕ ಸದಸ್ಯರು:** ಶ್ರೀ.ಗಳಾದ ೧. ಜಿ. ಎಂ. ಮಂಜನಾಥಯ್ಯನವರು, ಕಾಫಿ ಪ್ಲಾಂಟರ್, ಸುಂಟಿಕೊಪ್ಪ, ಕೊಡಗು, ೨. ಸಿ. ರಂಗಾಚಾರ್ಯರು, ಹೈಕೋರ್ಟು ವಕೀಲರು, ಸಿಕಂದರಾಬಾದು, ೩. ಎಲ್. ಎಸ್. ವೆಂಕಾಜಿರಾಯರು, ಪ್ರೊಪ್ರೈಟರು, ಲೋಕೂರ್ ಅಂಡ್ ಕೊ, ಬೆಂಗಳೂರು, ೪. ಎಂ. ಸುಬ್ಬರಾಯರು ರಿಜಿಸ್ಟರ್ಡ್ ಅಕೌಂಟೆಂಟರು, ಕೆಂಪೇಗೌಡ ರಸ್ತೆ, ಬೆಂಗಳೂರು, ೫. ಬಿ. ಬಾಳಾಜಿರಾಯರು, ಬಸವನಗುಡಿ, ಬೆಂಗಳೂರು.

**ಸಾಮಾನ್ಯ ಸದಸ್ಯರು (೬ ರೂ.):** ಶ್ರೀ.ಗಳಾದ ೧. ಶೇಷಗಿರಿರಾವ ಕುಲಕರ್ಣಿಯವರು, ಸಾಧನ ಮುದ್ರಣಾಲಯ, ಧಾರವಾಡ, ೨. ಡಾ॥ ಎಂ. ವಿ. ನಾಯ್ಡು ಅವರು, ಮಡಕೇರಿ.

**ಸಾಮಾನ್ಯ ಸದಸ್ಯರು (೩ ರೂ.):** ಶ್ರೀಗಳಾದ ೧. ಪಿ. ಎಸ್. ನಾರಾಯಣಭಟ್ಟ ಅವರು, ಹಿಂದೀ ಪ್ರಚಾರಕರು, ಮಡಕೇರಿ, ೨. ಸಿ. ಡಿ. ಗೋವಿಂದರಾಯರು, ಬಿ.ಎ., ಬಿ.ಟಿ., ಶಂಕರಪುರ, ಬೆಂಗಳೂರು, ೩. ವಿ. ಕುಪ್ಪೂರಾಯರು, ರಿ॥ ಅ॥ ಇಂಜಿನಿಯರು, ಬಸವನಗುಡಿ, ೪. ಕೆ. ಎಸ್. ನಂಜುಂಡಯ್ಯನವರು, ಉತ್ತರಾದಿಮಠದ ರಸ್ತೆ, ಶಂಕರಪುರ, ಬೆಂಗಳೂರು, ೫. ಎಸ್. ಗುಂಡಪ್ಪನವರು, ಬಿ.ಎ., ಎಲ್‌ಎಲ್.ಬಿ., ಅಡ್ವೊಕೇಟರು, ಗಾಂಧಿನಗರ, ಬೆಂಗಳೂರು.

### ದ್ರವ್ಯ ಸಹಾಯ

ಹೈದರಾಬಾದಿನ ಪ್ರಸಿದ್ಧ ಮುಖಂಡರೂ ಕನ್ನಡದ ಅಭಿಮಾನಿಗಳೂ ಆದ ದಿವಾನ್ ಬಹದ್ದೂರ್ ಶ್ರೀ. ಎಸ್. ಅರಾವಮುದ ಅಯ್ಯಂಗಾರ್ ಅವರು ಪರಿಷತ್ತಿಗೆ ನೀಡಿರುವ **೨೫** ರೂ.ಗಳ ಸಹಾಯ ದ್ರವ್ಯವನ್ನು ಕೃತಜ್ಞತೆಯಿಂದ ಸ್ವೀಕರಿಸಿದೆ.

೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

## ಮಹಿಳಾ ಗೋಷ್ಠಿ

೧೮-೪-೧೯೫೩ನೆಯ ಶನಿವಾರ ಸಂಜೆ ಪರಿಷತ್ತಿನ ಮಹಿಳಾ ಶಾಖೆಯು ಈ ವರ್ಷದ ವಸಂತ ಸಾಹಿತ್ಯೋತ್ಸವದ ಅಂಗವಾಗಿ ಮಹಿಳಾ ಗೋಷ್ಠಿಯೊಂದನ್ನು ಏರ್ಪಡಿಸಿತ್ತು. ಧಾರವಾಡದ ಮಹಿಳಾ ಮಂಡಲದ ಅಧ್ಯಕ್ಷರಾದ ಶ್ರೀಮತಿ ಶಾಂತಕ್ಕ ಮಳೀಮಠ ಅವರು ಅಧ್ಯಕ್ಷತೆ ವಹಿಸಿದ್ದರು.

ಶ್ರೀಮತಿ ಕಾಂತಿಮತಿ ಅವರು ಪ್ರಾರ್ಥನೆ ಮಾಡಿದ ಮೇಲೆ ಮಹಿಳಾ ಶಾಖೆಯ ಅಧ್ಯಕ್ಷರಾದ ಶ್ರೀಮತಿ ಶೇಷಮ್ಮನವರು ಎಲ್ಲರಗೂ ಸ್ವಾಗತ ಬಯಸಿ, "ಕನ್ನಡ ನಾಡು ನುಡಿ ನಡೆಗಳ ಅಭಿಮಾನ ಮಮತೆ ನಮ್ಮ ಹೆಣ್ಣು ಮಕ್ಕಳ ಹೃದಯದಲ್ಲಿ ಬೇರೂರಿ ಬೆಳೆಯಲು ಮಹಿಳಾ ಶಾಖೆಯು ದುಡಿಯತ್ತಿದೆ. ಶಾಖೆಯ ಧ್ಯೇಯಗಳು ಸಫಲವಾಗಲು ಎಲ್ಲ ಮಹಿಳೆಯರ ನೆರವು ಅತ್ಯಗತ್ಯ. ಅದು ಹೆಚ್ಚು ಹೆಚ್ಚಾಗಿ ಬೇಗ ನಮಗೆ ಒದಗಲಿ" ಎಂದು ತಿಳಿಸಿ ಗೋಷ್ಠಿಯ ಮಾನ್ಯ ಅಧ್ಯಕ್ಷರನ್ನು ಸಭೆಯ ಕಾರ್ಯ ಕಲಾಪಗಳನ್ನು ನಡಸಿಕೊಡಬೇಕೆಂದು ಪ್ರಾರ್ಥಿಸಿದರು.

ಅಧ್ಯಕ್ಷರು ತಮ್ಮ ಭಾಷಣದಲ್ಲಿ ಈ ರೀತಿ ತಿಳಿಸಿದರು.

ಭೋಗದ ಬೀಡಾದ ತೆಂಕಲು ನಾಡಿನವರು ಸೃಷ್ಟಿಯ ಸೊಬಗಿನ ಸುಗ್ಗಿಯ ಈ ಕಾಲದಲ್ಲಿ ನನ್ನನ್ನು ಸಾಹಿತ್ಯದ ರಸದೂಟಕ್ಕೆ ಇಲ್ಲಿಗೆ ಬರಮಾಡಿಕೊಂಡದ್ದು ನಿಮ್ಮ ಪ್ರೇಮಾದರವನ್ನು ತೋರಿಸುತ್ತದೆ. ನನಗೆ ಈ ಸುಸಂಧಿಯನ್ನು ಒದಗಿಸಿ ಕೊಟ್ಟ ನಿಮ್ಮೆಲ್ಲರಿಗೆ ತಲೆ ಬಾಗುವೆನು.

ಈ ಸಾಹಿತ್ಯೋತ್ಸವದಲ್ಲಿ ಮಹಿಳೆಯರಿಗಾಗಿ ಸ್ವತಂತ್ರ ಗೋಷ್ಠಿ ಏರ್ಪಾಡು ಮಾಡಿದ್ದು ಉಚಿತವೇ ಸರಿ. ಸಾಹಿತ್ಯಕ್ಕೂ ಮಹಿಳೆಯರಿಗೂ ನಿಕಟವಾದ ಸಂಬಂಧ ವಿದೆ. ಅನೇಕ ಹೆಂಗಸರು ಸಾಹಿತ್ಯ ಕ್ಷೇತ್ರದಲ್ಲಿ ಸೇವೆ ಮಾಡಿ ಹೆಸರುವಾಸಿಯಾಗಿ ಇರುವರು. ಅಲ್ಲದೆ ಹೆಣ್ಣು ತನ್ನ ರೂಪ ಲಾವಣ್ಯ ಲಾಲಿತ್ಯ ಬೆಡಗು ಬಿನ್ನಾಣ ಇವೆಲ್ಲಕ್ಕೂ ಮಿಗಿಲಾದ ತನ್ನ ಸದ್ಗುಣದಿಂದ ಕವಿಗಳಿಗೆ ಸ್ಫೂರ್ತಿ ಒದಗಿಸಿರುವಳು. ಶ್ರೀ. ಮಾಸ್ತಿಯವರು ಮನಕರಗುವಂತೆ ಚಿತ್ರಿಸಿರುವ ಮಾಸದ ಕೀರ್ತಿ ಮಲ್ಲಮ್ಮನಂತಹ ನಾರಿಯರನೇಕರು ಕರ್ನಾಟಕದಲ್ಲಿ ಬಾಳಿರುವರು, ಬಾಳುತ್ತಲೂ ಇರುವರು. ನುಡಿ ಚಿತ್ರ, ಕಲ್ಲುಚಿತ್ರ, ಬಣ್ಣ ಚಿತ್ರಗಳಿಗೆ ಹೆಣ್ಣು ಮುಖ್ಯ ವಸ್ತುವಾಗಿ ಇರುವಳು.

ಪ್ರೌಢ ಕಾವ್ಯಗಳನ್ನು ಬರೆದ ಹೆಂಗಸರು ಕಡಮೆ ಇರಬಹುದು. ಆದು ತಮ್ಮ ನಿತ್ಯ ಜೀವನದ ನೋವು ನಲಿವುಗಳನ್ನು ನೇರವಾಗಿ ನವುರಾಗಿ ರಸಮಯವಾಗಿ ಕವನಕಟ್ಟಿ ಹಾಡುವುದರಲ್ಲಿ ಕರ್ನಾಟಕದ ಹೆಣ್ಣು ಮಕ್ಕಳು ಬಹಳ ಜಾಣ್ಮೆಯನ್ನೂ ರಸಿಕತೆಯನ್ನೂ ತೋರಿರುವರು.

ಅಳುವ ಕಂದನ ತುಟಿಯು ಹವಳದಾ ಕುಡಿಹಂಗೆ
ಕುಡಿ ಹುಬ್ಬು ಬೇವಿನೆಸಳ್ಹಂಗೆ– ಕಣ್ನೋಟ
ಶಿವನ ಕೈ ಅಲಗು ಹೊಳೆದ್ಹಂಗೆ ||

ಈ ತೆರದ ರಸಗಬ್ಬಗಳು ಕನ್ನಡ ನಾಡಿನಲ್ಲಿ ರಾಸಿ ರಾಸಿಯಾಗಿ ದೊರೆಯುತ್ತವೆ. ಅವು ಮನೆಮನೆಗೂ ಹುಟ್ಟಿವೆ. ಅವನ್ನು ಕಟ್ಟಿದವರು ಓದ ಬರಹ ಬರದ ಹೆಣ್ಣುಮಕ್ಕಳು. ಬೀಸುವಾಗ ಕುಟ್ಟುವಾಗ ಮನೆಯಲ್ಲಿ ಮಂಗಳ ನಡೆಯುವಾಗ ಈ ಕವನಗಳನ್ನು ಚೆಂದ ಚೆಂದರಾಗದಲ್ಲಿ ಅವರು ಹಾಡಿಕೊಳ್ಳುವರು. ಆದರೆ ನಮ್ಮ ನವನಾಗರಿಕತೆಯು ಬಂದು ಈ ಹಳೆಯ ಹಾಡಿನ ಸಂಪ್ರದಾಯವನ್ನು ಬೀಳುಗಳೆಯುವ ವಾಡಿಕೆ ಬಂದಿದೆ. ಈ ಅವಸ್ಥೆ ತಪ್ಪಿ ಈ ಭಾಗ್ಯದ ಕಣಿಯನ್ನು ಎಲ್ಲ ಹೆಣ್ಣು ಮಕ್ಕಳು ಅಭಿಮಾನದಿಂದ ಆದರದಿಂದ ಕಾಪಾಡಿಕೊಂಡು ಬೆಳಸಬೇಕು.

ಈ ಸರಳವಾದ ಕವನಗಳಲ್ಲಿ ಭಾಷೆ ಸುಲಿದ ಬಾಳೆಯ ಹಣ್ಣಿನಂತಹ ಲಲಿತವಾದ ಕನ್ನಡ. ಅಲ್ಲೊಂದು ಇಲ್ಲೊಂದು ಸಕ್ಕದ ಹರಳು ಹುಡುಕಿದರೆ ಸಿಕ್ಕಬಹುದು. ಈ ಸೊಗಸು ಕಬ್ಬಗಳಲ್ಲಿ ಹೆಣ್ಣುಮಕ್ಕಳು ಅಚ್ಚ ಕನ್ನಡ ಪ್ರಯೋಗಗಳನ್ನು ಕಾಪಾಡಿರುವರು. ಪರನಾಡಿನವರ ಕೂಡ ಬಳಕೆಯಿಂದ ಗಂಡಸರು ತಮ್ಮ ನುಡಿಯಲ್ಲಿ ಪರ ಭಾಷೆಯನ್ನು ತುಂಬಿ ಬಿಟ್ಟಿರುವರು. ಹೀಗಾಗಿ ಕನ್ನಡದಲ್ಲಿ ಸಂಸ್ಕೃತ ಮರಾಠಿ ಹಿಂದೂಸ್ಥಾನಿ ಇಂಗ್ಲೀಷ್ ಶಬ್ದಗಳು ಸೇರಿಕೊಂಡು ಬಳಕೆಯ ಕನ್ನಡವು ಬೆರಕೆಯ ಭಾಷೆಯಾಗಿದೆ. ಇಷ್ಟೇ ಅಲ್ಲದೆ ಕನ್ನಡ ಶಬ್ದಗಳು ಪ್ರಯೋಗಗಳು ಮರೆಯಹತ್ತಿವೆ. ಕನ್ನಡ ಭಾಷೆ ಒಂದು ನೋಟದಿಂದ ಬಡವಾಗುತ್ತಿದೆ. ಪರಭಾಷೆ ಪರಸಂಸ್ಕೃತಿಗಳ ಸೆಳತಕ್ಕೆ ಗಂಡಸರ ಮನವು ಎಳೆಯಲ್ಪಡುವಂತೆ ಹೆಂಗಸರ ಮನವು ಎಳೆಯಲ್ಪಡುವುದಿಲ್ಲ. ಅವರು ತಮ್ಮ ನಡೆನುಡಿಗಳನ್ನು ಬಿಡದೆ ಕಾಪಾಡಿಕೊಳ್ಳಲು ಬಲ್ಲಿದರಿರುವರು. ಆದುದರಿಂದ ಅಚ್ಚ ಕನ್ನಡದ ಬೆಳವಣಿಗೆಗೆ ಹೆಂಗಸರು ನೆರವಾದರೆ ಕನ್ನಡಕ್ಕೆ ಬೇಗ ಕಲ್ಯಾಣವಾಗುವುದು. 'ಹರಿದು ಹಂಚಿ ಹೋಗಿರುವ ನಮ್ಮ ಮುದ್ದು ಕನ್ನಡ ನಾಡು ಒಂದಾಗಿ ಕನ್ನಡ ನುಡಿ ಸಂಸ್ಕೃತಿ ಬೇಗ ಮುಂದಾಗಲು ಹೆಣ್ಣುಮಕ್ಕಳು ಹುರುಪಿನಿಂದ ಕೆಲಸ ಮಾಡಲೆಂದು ನಾನು ಹಾರೈಸುತ್ತೇನೆ.

ಅಧ್ಯಕ್ಷರ ಕೆಚ್ಚಿನ ಭಾಷಣವಾದ ನಂತರ ಮಹಿಳಾ ಶಾಖೆಯ ಅಭಿಮಾನಿಗಳು ಸೊಗಸಾಗಿ 'ವರ ಪರೀಕ್ಷೆ' ನಾಟಕವನ್ನು ಅಭಿನಯಿಸಿದರು. ಶ್ರೀಮತಿಗಳಾದ ತುಲಸೀಬಾಯಿ, ಪ್ರಮಿಳಾ ಅವರು ಸುಶ್ರಾವ್ಯವಾಗಿ ಪಿಟೀಲು ನುಡಿಸಿದರು. 'ಹುತ್ತರಿ ಹಾಡು' ಕವನವನ್ನು ಶ್ರೀಮತಿ ಲೀಲಾ ಅವರು ಭಾವಮಯವಾಗಿ ಪಠಿಸಿದರು. ಶ್ರೀಮತಿ ಎಸ್. ವೇಂಗಡಮ್ಮನವರು ಒಂದು ಗಂಟೆಕಾಲ ಇಂಪಾಗಿ ಹಾಡಿದರು. ಈ ಕಾರ್ಯಕ್ರಮಗಳಾದ ತರುವಾಯ ಅಧ್ಯಕ್ಷರ ಕುಮಾರಿ ಶ್ರೀಮತಿ ವಿಮಲ ಮಳೀಮಠ ಅವರು ಎಲ್ಲರೂ ಆನಂದಪರವಶರಾಗುವಂತೆ ಬಹಳ ಮನೋಹರವಾಗಿ ನರ್ತನ ಮಾಡಿದರು. ಮಂಗಳ ಹಾಡಿದ ಮೇಲೆ ಗೋಷ್ಠಿ ಮುಕ್ತಾಯವಾಯಿತು.

## ಪುಸ್ತಕ ಭಂಡಾರ ವಿಚಾರಗೋಷ್ಠಿ

ಈ ಗೋಷ್ಠಿ ಬೆಂಗಳೂರಿನ ಪ್ರಸಿದ್ಧ ನ್ಯಾಯವಾದಿಗಳಾದ ಮತ್ತು ಹಿಂದೆ ಪೌರಸಭೆಯ ಅಧ್ಯಕ್ಷರಾಗಿದ್ದ ಶ್ರೀ. ಎನ್. ಬಾಲಕೃಷ್ಣಯ್ಯ, ಬಿ.ಎ., ಬಿ.ಎಲ್. ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಈ ಗೋಷ್ಠಿಯನ್ನು ಮೈಸೂರು ಸಂಸ್ಥಾನದ ಅಕ್ಷರಪ್ರಚಾರ ಸಮಿತಿಯ ಕೋರಿಕೆಯಂತೆ ವಸಂತ ಸಾಹಿತ್ಯೋತ್ಸವದ ಅಂಗವಾಗಿ ಏರ್ಪಡಿಸಿತ್ತು.

ಅಕ್ಷರ ಪ್ರಚಾರ ಸಮಿತಿಯ ವ್ಯವಸ್ಥಾಪಕ ಕಾರ್ಯದರ್ಶಿಗಳಾದ ಶ್ರೀ. ಎಸ್. ವಿ. ಶ್ರೀನಿವಾಸರಾಯರು ಗೋಷ್ಠಿಗೆ ಬಂದಿದ್ದವರಿಗೆಲ್ಲಾ ಸುಸ್ವಾಗತವನ್ನು ಬಯಸಿದರು.

ಶ್ರೀ. ಶ್ರೀನಿವಾಸರಾಯರು ತಮ್ಮ ಸ್ವಾಗತ ಭಾಷಣದಲ್ಲಿ ವಯಸ್ಕರ ಶಿಕ್ಷಣಕ್ಕಾಗಿ ಸಮಿತಿಯ ನೇತೃತ್ವದಲ್ಲಿ ನಡೆಯುತ್ತಿರುವ ಕಾರ್ಯಕಲಾಪಗಳನ್ನು ವಿವರಿಸಿ, ಇದುವರೆಗೆ ಮೂರು ಸಾವಿರದ ಜನ ಅಕ್ಷರಸ್ಥರಾಗಿದಾರೆಂದೂ ಮುಂದೆ ಪ್ರತಿ ಹೋಬಳಿಯಲ್ಲಿಯೂ ಈ ಕಾರ್ಯ, ಐದು ವರ್ಷಗಳ ಗ್ರಾಮೋಭಿವೃದ್ಧಿ ಕಾರ್ಯದ ಯೋಜನೆ ಅಂಗವಾಗಿ ನಡೆದು ಹೆಚ್ಚು ವ್ಯಾಪಕವಾಗುವ ಶುಭಚಿಹ್ನೆ ಇದೆಯೆಂದೂ ಹೇಳಿದರು.

ಹೊಸದಾಗಿ ಅಕ್ಷರ ಕಲಿತ ಜನ ತಮ್ಮ ಅಕ್ಷರ ಜ್ಞಾನವನ್ನು ಮರೆಯದೆ ಉಳಿಸಿಕೊಂಡು ಬೆಳಸಿಕೊಳ್ಳುವುದಕ್ಕೆ ಪುಸ್ತಕ ಭಂಡಾರಗಳು ಆವಶ್ಯಕ. ಅಕ್ಷರವನ್ನು ಕಲಿಯಲು ನಮ್ಮ ವಯಸ್ಕರ ಶಿಕ್ಷಣ ತರಗತಿಗೆ ಸೇರಿದವರಲ್ಲಿ ನೂರಕ್ಕೆ ನಲವತ್ತು ಮಂದಿ ಹಿಂದೆ ಪ್ರಾಥಮಿಕ ಶಾಲೆಗಳಿಗೆ ಹೋಗುತ್ತಿದ್ದವರು. ಓದುಬರಹ ಮರೆತು ಇವರು ಮತ್ತೆ ಅಕ್ಷರಾಭ್ಯಾಸ ಮಾಡಬೇಕಾಯಿತು. ಪುಸ್ತಕ ಭಂಡಾರಗಳ ಏರ್ಪಾಟು ಇದ್ದಿದ್ದರೆ ಅವರು ಕಲಿತ ಓದುಬರಹ ನಿರರ್ಥಕವಾಗುತ್ತಿರಲಿಲ್ಲ.

ಪುಸ್ತಕ ಭಂಡಾರಗಳ ವ್ಯವಸ್ಥೆ ಹೇಗಿರಬೇಕು, ಗ್ರಾಮ ಗ್ರಾಮಕ್ಕೂ ಪುಸ್ತಕ ಭಂಡಾರವಿರಬೇಕೆ, ಹೋಬಳಿಯಲ್ಲಿ ಕೇಂದ್ರವಾಗಿ ಒಂದು ಪುಸ್ತಕ ಭಂಡಾರವನ್ನಿಟ್ಟು ಹಳ್ಳಿಗಳಿಗೆ ಸಂಚಾರ ಪುಸ್ತಕ ಭಂಡಾರಗಳ ವ್ಯವಸ್ಥೆ ಮಾಡಬೇಕೆ, ಪುಸ್ತಕ ಭಂಡಾರದಲ್ಲಿ ಇಡುವ ಪುಸ್ತಕಗಳು ಯಾವ ಬಗೆಯವು, ರಾಮಾಯಣ ಭಾರತ ಮುಂತಾದ ಹಿಂದಿನ ಗ್ರಂಥಗಳ ಜೊತೆಗೆ ಆಧುನಿಕ ವಿಷಯಗಳನ್ನು ತಿಳಿಸುವ ಪುಸ್ತಕಗಳನ್ನು ಇಡುವುದು ಅಗತ್ಯವಲ್ಲವೇ ಮುಂತಾದ ವಿಷಯಗಳು ಈ ದಿನದ ಉಪನ್ಯಾಸಗಳು, ವಿಷಯ ಚರ್ಚೆ ಮತ್ತು ಗೊತ್ತುವಳಿಗಳ ವಸ್ತುವಾಗಿದೆಯೆಂದು ತಿಳಿಸಿ, "ಪುಸ್ತಕ ಭಂಡಾರದ ಯೋಜನೆಯನ್ನು ಕಾರ್ಯರೂಪಕ್ಕೆ ತರಬೇಕಾದರೆ ಹಣವಂತರ ಬೆಂಬಲವೂ, ಗಮಕ ಕೀರ್ತನ ಮುಂತಾದ ನಾಡಿನ ವಿದ್ಯಾ ವಿನೋದ ಸಾಧನವೂ, ವಿದ್ಯಾಭ್ಯಾಸದಲ್ಲಿಯೂ ದೇಶದ ಯೋಗಕ್ಷೇಮದಲ್ಲಿಯೂ ಆಸಕ್ತಿಯುಳ್ಳ ಪ್ರಜಾ ಮುಖಂಡರ ಪ್ರೋತ್ಸಾಹ ಸಹಕಾರಗಳೂ ಅತ್ಯಗತ್ಯ. ಅಂತಹ ಮುಖಂಡರೊಬ್ಬರು ಈ ದಿನ ನಮ್ಮ ಗೋಷ್ಠಿಗೆ ಅಧ್ಯಕ್ಷರಾಗಿ ದೊರೆತಿರುವುದು ನಮ್ಮ ಭಾಗ್ಯ" ಎಂದು ಹೇಳಿದರು.

ಬಳಿಕ ಅಧ್ಯಕ್ಷರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು :

"ಸದ್ಯದಲ್ಲಿ ನಮ್ಮ ಸಂಸ್ಥಾನದ ವಿದ್ಯಾಶಾಲೆಗಳಲ್ಲಿರುವ ಪುಸ್ತಕ ಭಂಡಾರಗಳಿಗೆ ತಕ್ಕ ಪುಸ್ತಕವನ್ನು ಒದಗಿಸಿಲ್ಲ. ಇರುವ ಅಲ್ಪ ಸ್ವಲ್ಪ ಪುಸ್ತಕಗಳಿಂದ ಬೋಧಕರಿಗೆ ಉಪಯೋಗವಿಲ್ಲ, ವಿದ್ಯಾರ್ಥಿಗಳಿಗೆ ಸಾಲದು, ಹೊರಗಿನವರಿಗೆ ಬಳಸಲು ಅವಕಾಶವಿಲ್ಲ. ಅಲ್ಲದೆ, ಶಾಲೆಯ ಪುಸ್ತಕ ಭಂಡಾರದ ಶೆರವನ್ನು (ಫೀಜನ್ನು) ಬಡ್ಡಿಗೆ ಹಾಕಿ ಅನೇಕ ಕಡೆ ಶೇವಣಿ ಇಟ್ಟಿದ್ದಾರೆ. ಈ ಸ್ಥಿತಿಯನ್ನು ತಪ್ಪಿಸಿ ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಹಣವನ್ನು ಪೂರ್ತಾ ಖರ್ಚುಮಾಡಬೇಕು. ಸಾರ್ವಜನಿಕ ಪುಸ್ತಕ ಭಂಡಾರಗಳಲ್ಲಿ ಕನ್ನಡ ಪುಸ್ತಕಗಳ ಸಂಖ್ಯೆ ಹೆಚ್ಚಿಸಬೇಕು. ಗ್ರಾಮಾಭಿವೃದ್ಧಿ ಕಾರ್ಯಯೋಜನೆಯ ಅಂಗವಾಗಿ ಪುಸ್ತಕ ಭಂಡಾರಗಳನ್ನು ಸ್ಥಾಪಿಸಬೇಕು. ಪ್ರಾರಂಭದಲ್ಲಿ ದೊಡ್ಡ ಹಳ್ಳಿಗಳಲ್ಲಾದರೂ ಅವನ್ನು ಸ್ಥಾಪಿಸಿ ಕ್ರಮವಾಗಿ ಚಿಕ್ಕ ಹಳ್ಳಿಗಳಿಗೆ ಹರಡುವಂತೆ ಮಾಡಬೇಕು. ಓದುಕಲಿತು ಹೊಸದಾಗಿ ಅಕ್ಷರಸ್ಥರಾದವರಿಗೆ ಒಂದು ವಿಭಾಗವೂ, ಅಲ್ಲಿಂದಾಚೆಗೆ ಕಲಿತ ವಿದ್ಯೆಯನ್ನು ಕ್ರಮವಾಗಿ ಬೆಳಸಿಕೊಳ್ಳುವಂತೆ ಅನುಕೂಲಿಸುವ ಪುಸ್ತಕಗಳನ್ನೊಳಗೊಂಡ ಇನ್ನೊಂದು ಭಾಗವೂ ಇದ್ದು, ಜನರಲ್ಲಿ ಸದಾ ಓದುವ ಅಭಿರುಚಿ ನೆಲಸುವಂತೆ ಮಾಡುವ ಶಕ್ತಿ ಪುಸ್ತಕ ಭಂಡಾರಕ್ಕೆ ಇರುವ ಹಾಗೆ ವ್ಯವಸ್ಥೆ ಮಾಡುವುದರಿಂದ ನಾಡಿಗೆ ಶ್ರೇಯಸ್ಸು ಲಭಿಸುವುದು. ಈ ಪುಸ್ತಕ ಭಂಡಾರ ಯೋಜನೆಗೆ ೨ ಲಕ್ಷ ರೂಪಾಯಿಗಳು ಹಿಡಿಯಬಹುದು. ದೇಶದ ಅವಶ್ಯಕತೆಯ ದೃಷ್ಟಿಯಿಂದ ಈ ಹಣವೇನೂ ಹೆಚ್ಚಲ್ಲ. ಎಂಥ ಪುಸ್ತಕಗಳನ್ನು ಸಂಗ್ರಹಿಸಿಡಬೇಕೆಂಬ ಬಗ್ಗೆ ತಜ್ಞರ ಒಂದು ಸಮಿತಿಯನ್ನು ರಚಿಸುವುದು ಒಳ್ಳೆಯದು."

ಆಮೇಲೆ ಕೆಳಗೆ ಕಂಡಂತೆ ಉಪನ್ಯಾಸಗಳು ನಡೆದುವು :

### ೧. ಪುಸ್ತಕ ಭಂಡಾರವು
### ಸಮಾಜ ಮತ್ತು ಶಿಕ್ಷಣಗಳ ಒಂದು ಕೇಂದ್ರ

ಈ ವಿಷಯವಾಗಿ ಶ್ರೀ. ಜಿ. ಹನುಮಂತರಾಯರು ಮಾತನಾಡಿದರು : ಹಳ್ಳಿಗಳಲ್ಲಿ ಪುಸ್ತಕ ಭಂಡಾರಗಳನ್ನು ವ್ಯವಸ್ಥೆಗೊಳಿಸುವುದೇ ಈ ಗೋಷ್ಠಿಯ ಉದ್ದೇಶ. ಈ ಏರ್ಪಾಡು ಸಫಲವಾಗಬೇಕಾದರೆ ಅದು ಹಳ್ಳಿಯ ಜೀವನಕ್ಕೆ ಹೊಂದಿಕೊಂಡಿರಬೇಕು. ಗ್ರಾಮ ಜೀವನಕ್ಕೆ ಅಗತ್ಯವಾದ ಸಂಸ್ಥೆಯಾದರೆಯೆ ಪುಸ್ತಕ ಭಂಡಾರದ ಸ್ಥಾಪನೆಯ ಉದ್ದೇಶ ಸಿದ್ಧಿಸುವುದು. ತಕ್ಕ ಆವರಣವೂ ಇರಬೇಕು—ಮೂರು ಅಂಕಣದ ಒಂದು ಕೋಣೆ, ಪಕ್ಕದಲ್ಲಿ ಒಂದು ಅರಳಿಮರ, ಒಂದು ಬಾವಿ, ಕೈದೋಟ, ಜನ ಸೇರಲು ಚಪ್ಪರ. ವೃತ್ತಪತ್ರಿಕೆಗಳ ಓದು ನಿತ್ಯದ ಕೆಲಸವಾಗಬೇಕು. ಜನರಲ್ಲಿ ಓದುವ ಅಭಿರುಚಿಯನ್ನು ಬೆಳಸಬೇಕು. ಕಾವ್ಯಗಾಯನ, ಹರಿಕಥೆ, ಪುರಾಣ ಶ್ರವಣಾದಿ ಮನರಂಜನೆ ಕಾರ್ಯಕ್ರಮಗಳನ್ನು ಆಗಾಗ್ಗೆ ಏರ್ಪಡಿಸಬೇಕು.

### ೨. ಪರದೇಶಗಳಲ್ಲಿ ಪುಸ್ತಕ ಭಂಡಾರಗಳು

ಈ ವಿಷಯವನ್ನು ಕುರಿತು ಶ್ರೀ. ಕೆ. ಎಸ್. ಆಚಾರ್ಲು ಅವರು ಮಾತನಾಡುತ್ತ ಹೀಗೆ ಹೇಳಿದರು : ಪರದೇಶಗಳಲ್ಲಿ ಪುಸ್ತಕ ಭಂಡಾರ ವ್ಯವಸ್ಥೆ ಅಕ್ಷರ ಪ್ರಚಾರದ ಅಂಗವಲ್ಲ. ಪುಸ್ತಕ ಭಂಡಾರಗಳಿಗೆ ಹಣ ಒದಗಿಸಲು ಅಲ್ಲಿ ಸ್ಥಳೀಯ ಸಂಸ್ಥೆಗಳು ಮುಂದೆ ಬರುತ್ತವೆ. ಅವರ ಆಯಕ್ಕೆ ಅನಿರೀಕ್ಷಿತವಾಗಿ ಬಂದ ದ್ರವ್ಯವನ್ನು ಪುಸ್ತಕ ಭಂಡಾರಗಳಿಗೆ ಕೊಟ್ಟುಬಿಡುತ್ತಾರೆ. ನಮ್ಮಲ್ಲಿಯಾದರೂ ಹಣವಂತರನ್ನು ಯಾಚಿಸಬೇಕಾಗಿದೆ.

ಪುಸ್ತಕ ಭಂಡಾರದಲ್ಲಿ ಇಡುವ ಪುಸ್ತಕಗಳಾವುವೆಂಬ ಬಗ್ಗೆ ಗೊತ್ತುಹಚ್ಚಲು ಅಮೆರಿಕದಲ್ಲಿ ಒಂದು ಸಂಶೋಧನ ಸಂಸ್ಥೆ ಇದೆ. ನಾವೂ ಹಾಗೆಯೇ ಸಂಶೋಧನ ನಡಸಿ, ಜನರ ಮನೋಗತವನ್ನು ತಿಳಿದುಕೊಳ್ಳಲು ಪ್ರಯತ್ನಪಟ್ಟು ಅವರು ಬಯಸುವ ಪುಸ್ತಕಗಳನ್ನು ಇಡಬಹುದು. ಕೇಂದ್ರ ಸಂಸ್ಥೆಯೊಂದು ನಿರ್ವಹಿಸಬೇಕಾದ ಜವಾಬ್ದಾರಿ ಇದು. ಸಂಚಾರ ಪುಸ್ತಕ ಭಂಡಾರ, ಅದಕ್ಕೆ ಸಾರಥಿಯಾಗಿ ಒಬ್ಬ ಭಂಡಾರಿ ಇದ್ದು, ಜ್ಞಾನವನ್ನು ಎಲ್ಲರ ಬಾಗಿಲಿಗೂ ಬೀರುತ್ತ ಸುತ್ತಬೇಕು.

### ೩. ಮಕ್ಕಳಿಗೆ ಪುಸ್ತಕ ಭಂಡಾರ

ಈ ವಿಷಯವನ್ನು ಕುರಿತು ಶ್ರೀ. ಬಿ. ಎಸ್. ಕೇಶವನ್ ಅವರು ಮಾತನಾಡುತ್ತ, ಹಳ್ಳಿಯ ಜನರಿಗೆ ಜೀವನದಲ್ಲಿ ಆಸಕ್ತಿ ಹುಟ್ಟುವಂತೆ ಮಾಡಲು ಪುಸ್ತಕ ಭಂಡಾರಗಳು ಬಹಳ ಸಹಾಯವಾಗುವುದು. ಮಕ್ಕಳು ಪುಸ್ತಕಗಳನ್ನು ಮುಟ್ಟಿದರೆ ಮುನಿಯಬಾರದು. ಹೆದರಿಸಿದರೆ ಮಕ್ಕಳು ಪುಸ್ತಕಗಳಿಂದ ದೂರವಾಗುವರು. ಅವರಿಗಾಗಿ ಭಂಡಾರದಲ್ಲಿ ಮುದ್ದಾಗಿ, ಆಕರ್ಷಕವಾಗಿ ಅಚ್ಚಾದ ಪುಸ್ತಕಗಳನ್ನಿಟ್ಟು ಅವರ ಜ್ಞಾನದ ಹಸಿವನ್ನು ತೃಪ್ತಿಪಡಿಸಬೇಕು.

### ೪. ಗ್ರಾಮಾಂತರ ಪುಸ್ತಕ ಭಂಡಾರಗಳ ಯೋಜನೆ

ಈ ವಿಷಯವಾಗಿ ಶ್ರೀ. ಜಿ. ಆರ್. ರಂಗಸ್ವಾಮಿಯವರು ಮಾತನಾಡುತ್ತ ಸರ್ಕಾರದವರು ಕೈಗೊಂಡಿರುವ ಗ್ರಾಮೋದ್ಧಾರದ ಪಂಚ ವಾರ್ಷಿಕ ಯೋಜನೆಯ ಅಂಗವಾಗಿ ಹಳ್ಳಿಗಳಲ್ಲಿ ಪುಸ್ತಕ ಭಂಡಾರಗಳನ್ನು ಹರಡುವ ಏರ್ಪಾಟನ್ನೂ ಸಂಸ್ಥಾನದ ಅಕ್ಷರ ಪ್ರಚಾರ ಸಮಿತಿಯವರು ರಚಿಸಿರುವ ಹಂಚಿಕೆಯನ್ನೂ ಅಂಕಿ ಅಂಶಗಳೊಡನೆ ವಿವರಿಸಿದರು.

ಬಳಿಕ ವಿಷಯ ಚರ್ಚೆಯಲ್ಲಿ ಮೇಲ್ಕಂಡ ಭಾಷಣಕಾರರೂ ಶ್ರೀ. ಎ. ನಾರಾಯಣಸ್ವಾಮಿ ಅಯ್ಯರ್ ಅವರೂ, ಶ್ರೀ. ಎ. ಎನ್. ಸುಬ್ಬರಾಯರೂ ಭಾಗವಹಿಸಿ ತಮ್ಮ ಅನುಭವಗಳನ್ನೂ ಅಭಿಪ್ರಾಯಗಳನ್ನೂ ತಿಳಿಸಿದಮೇಲೆ ಕೆಳಗೆ ಕಂಡಂತೆ ಗೊತ್ತುವಳಿಗಳು ಅಂಗೀಕಾರವಾದುವು.

### ನಿರ್ಣಯಗಳು

೧. ಪುಸ್ತಕ ಭಂಡಾರಗಳ ಸ್ಥಾಪನೆಯನ್ನು ಐದು ವರ್ಷಗಳ ಗ್ರಾಮಾಭಿವೃದ್ಧಿ ಯೋಜನೆಯ ಅಂಗವಾಗಿ ಮಾಡಿರುವುದಕ್ಕಾಗಿ ಈ ಗೋಷ್ಠಿ ಸರಕಾರಕ್ಕೆ ತನ್ನ ಕೃತಜ್ಞತೆಯನ್ನು ಸೂಚಿಸುತ್ತದೆ.

ಅಲ್ಲದೆ ಈ ಐದು ವರ್ಷ ಅವಧಿಯಲ್ಲಿ ಕಡೆಯ ಪಕ್ಷ ಪ್ರತಿ ತಾಲ್ಲೂಕಿನಲ್ಲೂ ಐದು ಹಳ್ಳಿಗಳಿಗೆ ಅಥವಾ ಕನಿಷ್ಠ ಪಕ್ಷ ೧,೦೦೦ ಜನಸಂಖ್ಯೆಗೆ ಮೇಲ್ಪಟ್ಟ ಪ್ರತಿ ಹಳ್ಳಿಯಲ್ಲಾದರೂ ಒಂದು ಪುಸ್ತಕ ಭಂಡಾರದಂತೆ ಸಂಸ್ಥಾನಾದ್ಯಂತ ಏರ್ಪಡುತ್ತದೆಯೆಂದು ಈ ಗೋಷ್ಠಿ ಆಶಿಸುತ್ತದೆ. — **ಸಭಾಧ್ಯಕ್ಷರಿಂದ**

೨. ಸಂಸ್ಥಾನದಲ್ಲಿ ಅಕ್ಷರ ಪ್ರಚಾರವನ್ನು ಕೈಕೊಂಡಿರುವುದರ ಫಲವಾಗಿ ಜನರು ಹೆಚ್ಚು ಹೆಚ್ಚಾಗಿ ಓದು ಬರಹ ಕಲಿಯುತ್ತಿದ್ದಾರೆ. ಅವರು ಕಲಿತ ಓದು ಮರೆಯದಿರುವಂತೆಯೂ, ಶಾಲೆಗಳಲ್ಲಿ ಕಲಿತ ಬಾಲಕರ ಓದು ಮರೆಯದಿರುವಂತೆಯೂ ಅವರು ಓದಿಕೊಳ್ಳತಕ್ಕ ಪುಸ್ತಕಗಳನ್ನು ಒದಗಿಸುವುದು ಅಗತ್ಯವಾದ್ದರಿಂದ ಸಂಸ್ಥಾನದಲ್ಲಿ ಪುಸ್ತಕ ಭಂಡಾರಗಳನ್ನು ಸ್ಥಾಪಿಸುವ ಯೋಜನೆಯೊಂದನ್ನು ತಯಾರಿಸಬೇಕಾದ್ದು ಆವಶ್ಯಕ. **—ಶ್ರೀ. ಕೆ. ಎ. ಆನಂದ**

೩. ಮೈಸೂರು ಸಂಸ್ಥಾನದ ಅಕ್ಷರ ಪ್ರಚಾರ ಸಮಿತಿಯವರು ತಯಾರಿಸಿರುವ ಪುಸ್ತಕ ಭಂಡಾರದ ಯೋಜನೆ ಸಹಾನುಭೂತಿಯಿಂದ ಪರಿಶೀಲಿಸಲು ತಕ್ಕದ್ದೆಂದು ಈ ಗೋಷ್ಠಿ ಅಭಿಪ್ರಾಯಪಡುತ್ತದೆ. **— ಶ್ರೀ. ಕೆ. ಎ. ಆನಂದ**

೪. ಕರ್ನಾಟಕ ಸಂಘಗಳು ಮತ್ತು ಈ ವಿಚಾರದಲ್ಲಿ ಆಸಕ್ತಿಯುಳ್ಳ ಇತರ ಸಂಸ್ಥೆಗಳು ಸಾಧ್ಯವಾದ ಕಡೆಗಳಲ್ಲೆಲ್ಲ ಪುಸ್ತಕ ಭಂಡಾರಗಳನ್ನು ಸ್ಥಾಪಿಸುವ ಯೋಜನೆಯಲ್ಲಿ ಸಹಕರಿಸಬೇಕಾಗಿ ಈ ಗೋಷ್ಠಿ ಕೋರುತ್ತದೆ.

**— ಶ್ರೀ. ಬಿ. ವೆಂಕೋಬರಾವ್**

೫. ವಿಶೇಷ ವಿದ್ಯಾವಂತರಲ್ಲದವರಿಗೆ ಸುಲಭವಾಗಿ ಅರ್ಥವಾಗುವಂತೆ ಆಧುನಿಕ ವಿಷಯಗಳನ್ನು ಕುರಿತು ಅಂದವಾದ ಪುಸ್ತಕಗಳು ಪ್ರಕಟವಾಗುವುದು ಅಗತ್ಯವಾಗಿರುವುದರಿಂದ ಕನ್ನಡ ಲೇಖಕರೂ ಪ್ರಕಾಶಕರೂ ಈ ರೀತಿಯ ಪುಸ್ತಕಗಳನ್ನು ಬರೆಯುವುದರಲ್ಲಿಯೂ ಪ್ರಕಟಿಸುವುದರಲ್ಲಿಯೂ ವಿಶೇಷ ಆಸಕ್ತಿ ವಹಿಸುವುದು ಆವಶ್ಯಕವೆಂದು ಈ ಗೋಷ್ಠಿ ಅಭಿಪ್ರಾಯಪಡುತ್ತದೆ.

**— ಶ್ರೀ. ಬಿ. ಸುಂದರೇಶ್ವರ**

ಧನ್ಯವಾದ ಸಮರ್ಪಣೆಯೊಂದಿಗೆ ಗೋಷ್ಠಿಯ ಕಾರ್ಯ ಕಲಾಪಗಳು ಮುಗಿದುವು.

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧೨
ಬಿಡಿ ಪತ್ರಿಕೆ: ೬ ಕಾಸು



ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈ ಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೨೭

ಬೆಂಗಳೂರು: ಶುಕ್ರವಾರ, ಏಪ್ರಿಲ್ ೩೦, ೧೯೪೩

## ಕೈಲಾಸಂ ಅವರ 'ಕೊಳ'

ಕವಿಯ ಇಲ್ಲವೆ ಕಲಾವಿದನ ಕೃತಿ ಎಂದರೆ ಸೌಂದರ್ಯದ ಪ್ರದರ್ಶನಕ್ಕೂ ರಸದ ಅನುಭವಕ್ಕೂ ಮೀಸಲಾದ ಮನೆ ಎನ್ನಲಡ್ಡಿಯಿಲ್ಲ. ಮಿಂಚಿನಂತೆ ಒಂದು ನಿಮಿಷದಲ್ಲಿ ಈ ರಸಾನುಭವದ ಅರಿವು ಮೂಡಿ ಮಾಯವಾಗಬಹುದು. ಆದರೆ ಕವಿಯ, ಕಲಾವಿದನ ಹೃದಯದಲ್ಲಿ ಆಗತಕ್ಕ ಪ್ರತಿಕ್ರಿಯೆ ಈ ರಸಾನುಭವಕ್ಕೆ ಒಂದು ಮೆರುಗನ್ನು ಕೊಡುತ್ತದೆ. ಕಾವ್ಯವಾಗಲಿ ಕಲಾಕೃತಿಯಾಗಲಿ ಈ ಮಿಂಚಿನ ಅನುಭವಕ್ಕೆ ಕೊಟ್ಟ ರೂಪಗಳೇನೊ ನಿಜ. ಪ್ರತಿಭೆಯ ಆ ದರ್ಶನಕ್ಕೆ ಪ್ರತಿಭಾವಂತವಾದ ತೊಡಸಿದ್ದರೆ ಕಲಾಕೃತಿಯ ಮಹತ್ವ ಇನ್ನೂ ಹೆಚ್ಚುತ್ತದೆ. ಅಗೆದಷ್ಟೂ ಆಳವಾದ ಬಾಳಿನ ತತ್ವ ಹೊರಹೊಮ್ಮುತ್ತದೆ.

ಕೈಲಾಸಂ ಅವರ 'ಕೊಳ' (The Lake) ಈ ಮಾದರಿಯ ಕೃತಿ. ಈ ಕೃತಿ ಹೊರಬಿದ್ದ ಬಗೆಯೂ ವಿಚಿತ್ರವೇ! ಶ್ರೀ. ವಿ. ಕೃ. ಗೋಕಾಕರು ತಮ್ಮ 'ರಸ ನಿಮಿಷ'ಗಳಲ್ಲಿ ಇದನ್ನು ಸುಂದರವಾಗಿ ವರ್ಣಿಸಿದ್ದಾರೆ. ಒಂದು ಸಲ ಕೈಲಾಸಂ ಅವರಿಗೆ ಹರೀಂದ್ರನಾಥ ಚಟ್ಟೋಪಾಧ್ಯಾಯರ ಭೇಟಿಯಾಯಿತು. ಇಬ್ಬರೂ ಪ್ರತಿಭಾವಂತರೇ! ಇಬ್ಬರೂ ದಾರ್ಶನಿಕರೇ! ಆ ಮಾತು ಈ ಮಾತು ಆಡುತ್ತ 'ಹರಿನ್' ಅವರು ತಮ್ಮ ಕವಿತೆಯಲ್ಲಿಯದೊಂದು 'ಉಪಮಾ' ಕೊಟ್ಟು ಹೇಳಿದರಂತೆ. ಅದಕ್ಕೆ ಪ್ರತಿಯಾಗಿ ಕೈಲಾಸಂ ತಮ್ಮದೊಂದು ಉಪಮೆಯನ್ನು ಹೇಳಿದರು. ಕೈಲಾಸಂ ಪ್ರತಿಭೆಗೆ ಅವಾಕ್ಕಾದರು ಹರಿನ್. 'ಏನು ನೀವೂ ಕವಿತೆ ಬರೆಯುತ್ತೀರಾ' ಎಂದು ಹರಿನ್ ಕೇಳಿದರಂತೆ. ಅದಕ್ಕೆ ಕೈಲಾಸಂ 'Brother, the call has not yet come' ಎಂದು ಹೇಳಿದರಂತೆ. ಮುಂದೆ ಕೆಲವು ದಿನಗಳನಂತರ ಒಂದು ರಾತ್ರಿ ವಿಚಾರ ಮಾಡುತ್ತಿದ್ದಾಗ 'ಕೈಲಾಸಂ' ಅವರಿಗೆ 'ದರ್ಶನ ಯೋಗ' ಒದಗಿತು. ಒಮ್ಮೆಲೆ ಎದುರಿನ ಮೇಜಿನ ಮೇಲೆ ಮುಷ್ಟಿಗಳನ್ನಪ್ಪಳಿಸಿ, ಮೇಜನ್ನು ಬಲವಾಗಿ ಗುದ್ದಿ, 'Brother, the call has come' ಎಂದು ಕೂಗುತ್ತಾ ನಗಹತ್ತಿದರಂತೆ. ನೆರೆಮನೆಯಲ್ಲಿದ್ದ ದಂಪತಿಗಳು ಬಂದು 'ಏನಾಯಿತು' ಎಂದು ಕೇಳಿದರು. 'ಒಂದು ಕವಿತೆ ಬರೆಯುತ್ತಿದ್ದೇನೆ'– ಎಂದು ಹೇಳಿ ಅವರನ್ನು ಸಂತೈಸಿ ಕಳುಹಬೇಕಾದರೆ ಬಹಳ ತೊಂದರೆ ಪಡಬೇಕಾಯಿತು. ಈ 'ದರ್ಶನಯೋಗ' ಕಾವ್ಯದ ಮುಖ್ಯ ಜೀವಾಳ. ಆಗ ಬರೆದ ಕವಿತೆಯೇ 'The Lake' (ಕೊಳ) ಎಂಬುದು. ಕೈಲಾಸಂ ಅವರಿಗೆ ಈ ದರ್ಶನಯೋಗದ ಅರಿವಿದೆ. ಕಲಾವಿದನಿಗೂ ಕವಿಗೂ ಸೂಕ್ಷ್ಮವಾದ ಒಂದು ಹೃದಯವು ಬೇಕು. ಅದರ ಜೊತೆಗೆ ಈ ದರ್ಶನಯೋಗದ ಸಹಕಾರವೂ ಇದ್ದರೆ, ಕಲಾಕೃತಿ ಹೆಚ್ಚು ಸುಂದರವಾಗುವುದು. ಇದನ್ನೆ 'ವಿನಾಯಕ'ರು 'ಯಕ್ಷಕಿರಣ' ಎಂದು ಕರೆದಿದ್ದಾರೆ. ಕಲಾತನ್ಮಯತೆಯೂ ರಸತನ್ಮಯತೆಯೂ ಒಂದುಗೂಡಿದಾಗ ಹೊರಹೊಮ್ಮುವುದು 'ಅಮರ ಕಲಾಕೃತಿ'. ಕೈಲಾಸಂ ಅವರ ಕೃತಿಗಳಲ್ಲಿ ಇದರ ಉತ್ತಮ ಉದಾಹರಣೆಯಿದೆ. ಕಲೆಗಾಗಿ ಜೀವವನ್ನೇ ಮೀಸಲಿಟ್ಟ ಜಾತಿಯಲ್ಲಿ ಕೈಲಾಸಂ ಒಬ್ಬರು. ಇದ್ದಕ್ಕಿದ್ದಂತೆಯೇ ಕನಸನ್ನು ಕಾಣುವುದು, ಅವರ ವೈಶಿಷ್ಟ್ಯ.

ಒಂದು ಸಲ ನಾನು ವಿ. ಕೃ. ಗೋಕಾಕರೊಡನೆ ಮಾತನಾಡುತ್ತಿದ್ದಾಗ ಅವರು ಈ ರೀತಿ ಹೇಳಿದರು: "ನಾನೂ ಕೈಲಾಸಂ–ಒಂದು ದಿನ ಊಟವಾದ ಮೇಲೆ ಮಾತನಾಡುತ್ತ ಕುಳಿತಿದ್ದೆವು. ಕಾವ್ಯದ ವಿಷಯವಾಗಿ ಚರ್ಚೆ ನಡೆದಿತ್ತೆಂದು ಕಾಣುತ್ತದೆ. ಒಮ್ಮೆಲೇ ಕೈಲಾಸಂ 'Look There' ಎಂದು ಕೂಗಿದರು. 'ಏನು' ಎಂದೆ. ಕೈಲಾಸಂ ಕುಳಿತ ಕುರ್ಚಿಯಿಂದೆದ್ದು ಭರತನು ಕೈಕೆಯಿಗೆ ಭೆಟ್ಟಿಯಾದ ದೃಶ್ಯವನ್ನು ಅಲ್ಲಿಂದಲ್ಲಿಯೇ ಆಡಿ ತೋರಿಸಿದರು. 'When he cried 'Look there' – his eyes were full streaming."

ಇಂತಹದಕ್ಕೇ ಕಾವ್ಯಸಿದ್ಧಿ - ಕಲಾಸಿದ್ಧಿ ಎಂದು ಹೆಸರು. ಇದು ಪ್ರತಿಭೆಯ ಹೆಗ್ಗುರುತು.

ಕೈಲಾಸಂ ಅವರ 'ಕೊಳ' ಎಂಬ ಕವಿತೆ ಪ್ರತಿಭೆಯ ಕಲಾಕೃತಿ ಎಂದಮೇಲೆ ಕೇಳುವುದೇನು? ಆ ಕೃತಿಯನ್ನು ಓದಿದ ದಿನವನ್ನು ಇಂದಿಗೂ ಆನಂದದಿಂದ ನೆನೆಯುತ್ತೇನೆ. ಯಾವುದಕ್ಕಾಗಿ ನಾನು ಹಂಬಲಿಸುತ್ತಿದ್ದೆನೋ ಅಂಥದೊಂದು ಆಳವಾದ ಶಾಂತಿ ಸುಖಗಳು ನನಗೆ 'ಕೊಳ'ವನ್ನು ಓದಿದಾಗ ಸಿಕ್ಕವು. ಕಾಲೇಜಿಗೆ ಹೋಗುವ ಗಡಿಬಿಡಿ ಬಹಳವಾಗಿದ್ದರೂ ಮಿರಜಿನ ನಿಲ್ದಾಣದ Book Stall ನಲ್ಲಿ 'Asiatic Digest' ಪತ್ರಿಕೆಯಲ್ಲಿ ಆ ಕವನ ಅಚ್ಚಾಗಿತ್ತು. ಅಂದು ನನ್ನ ಕಾಲೇಜಿಗೆ 'ಚಕ್ರ' ಕೊಟ್ಟರೂ ಬದುಕಿನಲ್ಲಿಯೇ ಒಂದು ಅಪರೂಪವಾದ ಅನುಭವ ಆ ಕೃತಿಯನ್ನೋದಿದಾಗ ನನಗಾಯಿತು. 'The existence of all great art is, not material - but Spiritual' ಎಂದು ವಿಮರ್ಶಕ ಆಬರ್‌ಕ್ರಾಂಬಿ ಹೇಳಿದ್ದಾನೆ. ಆ ಅನುಭವ ಅಂದು ನನಗಾಯಿತು.

'ಕೊಳ'ದ ಕಥೆ ಬಹಳ ಚಿಕ್ಕದು. ಒಂದು ರಾತ್ರಿ ಬೆಳುದಿಂಗಳಿನ ಕಿರಣಗಳು ಹಾಯಾಗಿ ಬಂದು 'ಕೊಳ'ದ ನೀರಿನ ಅಲೆಗಳ ಮೇಲೆ ಕುಣಿದಾಡಿ ನಲಿಯುತ್ತವೆ. 'ಕೊಳ'ದ ಮುಖ ಸಪ್ಪಗೆ ಇದ್ದದ್ದನ್ನು ಕಂಡು – 'ಹೀಗೇಕೆ?' ಎಂದು ಅವು ಕೇಳಿದಾಗ "ಅಯ್ಯೋ! ನಾನು ದಿನ ದಿನಕ್ಕೆ ಕಡಿಮೆಯಾಗುತ್ತ ನಡೆದಿದ್ದೇನೆ" ಎಂದು ಕೊಳ ಶೋಕಪಡುತ್ತದೆ. 'ಕಾರಣವೇನು?' ಎಂದು ಬೆಳದಿಂಗಳಿನ ಕಿರಣಗಳು ಕೇಳುತ್ತವೆ. ಕೊಳ 'ನಾನು ಸೂರ್ಯನನ್ನು ಪ್ರೀತಿಸುತ್ತಿದ್ದೇನೆ' ಎಂದು ಹೇಳುತ್ತದೆ. ಕಿರಣಗಳು ನಕ್ಕು 'ಅಯ್ಯೋ ಮಂಕೇ! ನಿನ್ನ ನಲ್ಲನು ನಿನ್ನನ್ನು ಮರ್ತ್ಯದ ಸೆರೆಯಿಂದ ಬಿಡಿಸಿ ನಿನಗೆ ಇನ್ನೂ ಹೆಚ್ಚಿನ ಸ್ಥಾನವನ್ನು ದೊರಕಿಸುತ್ತಾನೆ. ಹೇಗೆಂದರೆ ನೀನು ಉಗಿಯಾಗಿ – ಮೋಡವಾಗಿ – ಮಳೆಯಾಗಿ – ಒಂದು ಕಡಲನ್ನು ಸೇರುವಿ' ಎಂದು ಹೇಳುತ್ತವೆ. ಕಥೆ ಬಹಳ ಚಿಕ್ಕದು. ತುಂಬ ಸರಳವಾದದ್ದು. ಉಪನಿಷತ್ತುಗಳಲ್ಲಿ ಮಾಂಡೂಕ್ಯವಿದ್ದಂತೆ. ಎಷ್ಟು ಕಿರಿದೋ ಅಷ್ಟೇ ಹಿರಿದಾದ ಜೀವನ ತತ್ವವೂ ಇಲ್ಲಿದೆ. ಮನೋರಂಜನೆಗಾಗಿ ಕಥೆ ಇದೆ. ಅನುಭವಕ್ಕೆ ಸುಂದರವಾದ ಮಾತುಗಳಿವೆ. ಆ ಅನುಭವಕ್ಕೆ ಇಲ್ಲಿ ಆಳ್ಮೆ ಇದೆ. ಈ ಕವನ ಆನಂದ ಅನುಭವ ಅನುಭಾವಗಳ ಎರಕ. ತೊಡಿಗೆಯಲ್ಲಿ ಕಥನ ಕವನವಿದ್ದರೂ, ನಡಿಗೆಯಲ್ಲಿ ಋಷಿಯ ಗಾಂಭೀರ್ಯ. ಗೋವಿನ ಕಥೆಯಂತೆ ಬಹಳ ಸರಳ. ಆದರೆ, 'ಮುಳುಗಿದವರಿಗೆ ಇಲ್ಲಿ ಮುತ್ತುಗಳಿವೆ.' ಈ ಕೃತಿಯ ಸಂದೇಶ ಅಗಾಧವಾದದ್ದು.

[೧೪೧ನೆಯ ಪುಟಕ್ಕೆ]

# ಕನ್ನಡ ನುಡಿ

**ಶುಕ್ರವಾರ, ಏಪ್ರಿಲ್ ೩೦, ೧೯೪೩**

## ಯುವಜನರ ಕರ್ತವ್ಯ

ಇಂದಿನ ಯುವಜನರೇ ನಾಳಿನ ಜನಾಂಗ. ನಾಡಿನ ಭವಿಷ್ಯ ಅವರನ್ನು ಅವಲಂಬಿಸಿದೆ. ನಾಡು ತನ್ನ ಜೀವನದ ಎಲ್ಲ ಕ್ಷೇತ್ರಗಳ ಬಹುಮುಖವಾದ ಚಟುವಟಿಕೆಗಳಲ್ಲೂ ಅವರ ಉತ್ಸಾಹ ಪೂರ್ವಕವಾದ ಸಹಕಾರವನ್ನು ನಿರೀಕ್ಷಿಸುತ್ತಿದೆ. ಬರಿಯ ವಿದ್ಯಾರ್ಜನೆಯೊಂದೇ ಯುವಜನರ ಕರ್ತವ್ಯ ಎಂಬ ಮಾತು ನಾಡಿನ ಇಂದಿನ ಪರ್ವಕಾಲದಲ್ಲಿ ಸಲ್ಲದು. ಯುವಜನರು ತಮ್ಮ ಬಿಡುವು ಹೊತ್ತನ್ನು ಸಂಪೂರ್ಣವಾಗಿ ವಿನೋದ ಕ್ರೀಡೆಗಳಿಗೆ ಮೀಸಲಾಗಿಡುತ್ತಿದ್ದ ಕಾಲವೂ ಇತ್ತು; ಈಗ ಆ ಕಾಲವಲ್ಲ. ಅವರು ನಾಡಿನ ಏಳಿಗೆಯನ್ನು, ಅದರ ಆಗು ಹೋಗುಗಳನ್ನು, ಏರು ಇಳಿತಗಳನ್ನು ಸುಖದುಃಖಗಳನ್ನು, ವ್ಯಾಸಂಗ ದೃಷ್ಟಿಯಿಂದ ಮಾತ್ರ ನಿರೀಕ್ಷಿಸುತ್ತ ಕುಳಿತಿದ್ದು, ಜನಜೀವನ ರೂಪಣ ಕಾರ್ಯ ವನ್ನು ವಯಸ್ಕರಾದ ಕಾರ್ಯಕರ್ತರಿಗೇ ಬಿಟ್ಟುಬಿಡುತ್ತಿದ್ದ ಕಾಲವೂ ಇತ್ತು; ಈಗ ಆ ಕಾಲವಲ್ಲ. ನಾಡಿಗೆ ನಾಡೇ ಎಚ್ಚತ್ತಿರುವ ಈ ಕಾಲದಲ್ಲಿ ಯುವಜನರು ಕಾರ್ಯರಂಗಕ್ಕೂ ಇಳಿಯ ಬೇಕಾಗಿದೆ.

ನಾಡಿನ ಪುಣ್ಯದಿಂದ ಯುವಜನರು ತಮ್ಮ ಈ ಕರ್ತವ್ಯ ಭಾರವನ್ನು ಅರಿತುಕೊಂಡು ಎಲ್ಲ ಕ್ಷೇತ್ರಗಳಲ್ಲೂ ಕಾರ್ಯೋತ್ಸಾಹಿ ಗಳಾಗಿ ಮುನ್ನುಗ್ಗುತ್ತಿರುವುದು ಶುಭಸೂಚನೆಯೇ. ಸಾಹಿತ್ಯ ಕ್ಷೇತ್ರದಲ್ಲಿ ಯುವಜನರ, ಕಿರಿಯರ, ಸೇವೆ ಹಿರಿದಾಗಿಯೇ ಇದೆ; ಸಾಹಿತ್ಯ ಸೇವಕರಲ್ಲಿ, ಸಾಹಿತಿಗಳಲ್ಲಿ, ಬಹುಮಂದಿ ಯುವಜನರೇ ಆಗಿದ್ದಾರೆ. ಹಿರಿಯರು ಹರಸಿಕೊಟ್ಟ ಕನ್ನಡ ಬಾವುಟವನ್ನು ಅವರು ಕೈಯಲ್ಲಿ ಹಿಡಿದುಕೊಂಡು ಕನ್ನಡ ನಾಡಿನ ಮೇಲ್ಮೆಯ ಸಾಧನೆಗೆ ತೊಡಗಿದ್ದಾರೆ; ತಮ್ಮ ಕಣ್ಣಮುಂದೆ ಅವರು ಗೆಲವು ಪಡೆಯುವುದಕ್ಕಿಂತ ಹೆಚ್ಚಿನ ಸಂತೋಷ ಯಾವುದು ಹಿರಿಯರಿಗೆ?

ಕನ್ನಡದ ಒಟ್ಟು ಹಿತಚಿಂತನೆ, ಹಿತಸಾಧನೆ, ಪರಿಷತ್ತಿನ ಕರ್ತವ್ಯ; ಇದನ್ನು ನೆರವೇರಿಸುವುದು ಎಲ್ಲ ಕನ್ನಡಿಗರನ್ನೂ ಕೂಡಿದ್ದು. ಇದರಲ್ಲಿ ಪ್ರಾಂತಭಾವನೆಗಾಗಲಿ ಜಾತಿ ಮತ ಭೇದ ಭಾವನೆಗಾಗಲಿ ಸ್ತ್ರೀಪುರುಷ ಭೇದಭಾವನೆಗಾಗಲಿ ಹೇಗೆ ಎಡೆ ಯಿಲ್ಲವೋ ಹಾಗೆಯೇ ವಯೋಭೇದಕ್ಕೂ ಎಡೆಯಿಲ್ಲ. ಹಿರಿಯರು ಕಿರಿಯರು ಎಂಬ ಮಾತು ಸಾಂಪ್ರದಾಯಿಕವಾದ ಉಪಚಾರದ ಮಾತು. ಹಿರಿಯತನ ಕಿರಿಯತನ ಎಂಬುದು ವಯಸ್ಸಿನಿಂದ ಅನುಲಕ್ಷಿತವಲ್ಲ. 'ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ' ಎಂಬ ಮಹಾವಾಕ್ಯವನ್ನು 'ಎನಗಿಂತ ಕಿರಿಯರಿಲ್ಲ, ಕನ್ನಡ ಭಕ್ತರಿಗಿಂತ ಹಿರಿಯರಿಲ್ಲ' ಎಂಬ ಕನ್ನಡಿಗರ ಆದರ್ಶ ಸೂತ್ರವಾಗಿ ಮಾರ್ಪಡಿಸಿ 'ಹಿರಿಯ'ರೊಬ್ಬರು ನಮ್ಮ ಮುಂದಿಟ್ಟಿದ್ದಾರೆ. ಅದನ್ನು ಎಲ್ಲರೂ ತಮ್ಮ ಬಾಳಿನಲ್ಲಿ ಅನುಷ್ಠಾನಕ್ಕೆ ತಂದು ಕೊಳ್ಳುವುದಾದರೆ ಕನ್ನಡದ ಮೇಲ್ಮೆ ಕೈಗೆ ಬಂದೆ ಫಲ.

ಪರಿಷತ್ತಿನ ಉದ್ದೇಶ ಸಾಧನೆಯಲ್ಲಿ, ಅದರ ಬೇರೆ ಬೇರೆ ಕೆಲಸ ಕಾರ್ಯಗಳಲ್ಲಿ, ಉತ್ಸವಗಳಲ್ಲಿ, ಯುವಜನರು ಎಂದಿನಿಂದಲೂ ಬಹುಮಟ್ಟಿಗೆ ನೆರವಾಗುತ್ತಿದ್ದಾರೆ. ಈಗ ಅವರು ಒಂದು ತಂಡವಾಗಿ ಬಂದು ಪರಿಷತ್ತಿನ ಕಾರ್ಯನಿರ್ವಾಹದಲ್ಲಿ ಹೆಗಲು ಕೊಡಲು ಬಂದಿದ್ದಾರೆ. ಮೊನ್ನೆ ಪರಿಷತ್ತಿನ ವಸಂತ ಸಾಹಿತ್ಯೋತ್ಸವದ ಅಂಗವಾಗಿ ಯುವಜನ ಗೋಷ್ಠಿ ಸಮ್ಮೇಳನಗಳು ನಡೆದು, ಅವರು ಯಾವ ಯಾವ ರೀತಿಯಲ್ಲಿ ಪರಿಷತ್ತಿಗೆ ನೆರವಾಗಬಹು ದೆಂಬುದನ್ನು ಕಂಡುಕೊಂಡು ಕೆಲವು ಗೊತ್ತುಪಾಡುಗಳಿಗೆ ಬಂದಿದ್ದಾರೆ. ಹೀಗೆ ಪರಿಷತ್ತಿಗೆ ನೆರವಾಗಲು ಮುಂದೆ ಬಂದಿರುವ ಯುವಜನಕ್ಕೆ ಸಂತೋಷದಿಂದ ಸ್ವಾಗತವೀಯುತ್ತೇವೆ, ವಂದನೆ ಸಲ್ಲಿಸುತ್ತೇವೆ. ಕನ್ನಡ ನಾಡಿನ ಎಲ್ಲ ಭಾಗಗಳಲ್ಲೂ ಪರಿಷತ್ತಿನ ಸಹಾಯಕ್ಕಾಗಿ ಯುವಜನರು ತಂಡೋಪತಂಡವಾಗಿ ಮುಂದೆ ಬಂದು, ಪರಿಷತ್ತು ಇನ್ನೂ ದೊಡ್ಡದಾಗಿ ಬೆಳೆದು, ಅದರ ಧ್ಯೇಯ ಗಳು ಬೇಗನೆ ನೆರವೇರಲೆಂಬುದೇ ನಮ್ಮೆಲ್ಲರ ಹಾರೈಕೆ.

## ಕವಿ ರವೀಂದ್ರನಾಥ ಠಾಕೂರರು

### ತಾಯ್ನುಡಿಯಲ್ಲೆ ಗ್ರಂಥ ಪ್ರಕಟನೆ ಮಾಡಿದ್ದರೆ....

ಕವಿ ರವೀಂದ್ರನಾಥ ಠಾಕೂರರು ತಮ್ಮ 'ಗೀತಾಂಜಲಿ' ಮೊದಲಾದ ಆಂಗ್ಲ ಕೃತಿಗಳನ್ನು ಇಂಗ್ಲೆಂಡಿನಲ್ಲಿ ಪ್ರಕಟನಕ್ಕಾಗಿ ಸಿದ್ಧಗೊಳಿಸಿದಾಗ ನೆರವಾಗಿದ್ದ ಸರ್ ವಿಲಿಯಂ ರೋದೆನ್‌ಸ್ಟೀನ್ ಅವರು ಈಚೆಗೆ 'ಮ್ಯಾಂಚೆಸ್ಟರ್ ಗಾರ್ಡಿಯನ್' ಪತ್ರಿಕೆಯಲ್ಲಿ ಒಂದು ಲೇಖನ ಬರೆದಿದ್ದಾರೆ.

'ಗೀತಾಂಜಲಿ'ಯನ್ನು ಇಂಗ್ಲಿಷ್ ಭಾಷೆಯಲ್ಲಿ ಪ್ರಕಟಿಸಿದ ತರುಣದಲ್ಲಿ ಠಾಕೂರರಿಗೆ ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದ ಗೌರವ ಪ್ರಶಸ್ತಿಯನ್ನು ಕೊಡಿಸಬೇಕೆಂದು ರಾಬರ್ಟ್ ಬ್ರಿಜಸ್, ಫ್ಲಾಕ್ಸ್ ಸ್ಪ್ರಾಂಗ್‌ವೇಸ್ ಮೊದಲಾದ ಸಾಹಿತಿಗಳು ಪ್ರಯತ್ನಿಸಿದರು. ಆಗ ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದಲ್ಲಿ ಲಾರ್ಡ್ ಕರ್ಜನ್ ಅವರು ಛಾನ್ಸಲರಾಗಿದ್ದರು. ವಂಗಪ್ರಾಂತ ವಿಭಜನೆಯ ಸಂದರ್ಭವಾಗಿ ಕರ್ಜನ್ ಅವರಿಗೂ ಠಾಕೂರರ ಮನೆತನಕ್ಕೂ ಘರ್ಷಣೆಯೊದಗಿದ್ದುದರಿಂದ ಠಾಕೂರರಿಗೆ ಗೌರವ ಪ್ರಶಸ್ತಿಯನ್ನು ಕೊಡುವ ವಿಷಯದಲ್ಲಿ ಕರ್ಜನ್ ಅವರು ಸಮ್ಮತಿಕೊಡಲಿಲ್ಲ ಎಂಬುದಾಗಿ ಸರ್ ರೊದೆನ್ ಸ್ಟೀನರು ಲೇಖನದಲ್ಲಿ ಬರೆದಿದ್ದಾರೆ.

"ಠಾಕೂರರ ಆಂಗ್ಲಕೃತಿಗಳು ಪ್ರಕಟವಾದ ಮೊದಮೊದಲಲ್ಲಿ, ಪ್ರಸಿದ್ಧ ಐರಿಷ್ ಕವಿಗಳಾದ ಈಟ್ಸ್ ಅವರು ಠಾಕೂರರ ಬಗ್ಗೆ ವ್ಯಕ್ತ ಪಡಿಸಿದ ಸ್ನಿಗ್ಧ ಸಹಾನುಭೂತಿಯೂ ಒಡಂಬಡಿಕೆಯೂ (Understanding) ಕಾಲಕ್ರಮದಲ್ಲಿ ಕಡಮೆಯಾಗಿ, ಠಾಕೂರರಂಥ ಕವಿಗಳೂ ದೇಶಾಭಿಮಾನಿಗಳೂ (ಅವರ ತಾಯ್ನುಡಿಯಾದ) ಬಂಗಾಳಿ ಭಾಷೆಯಲ್ಲಿ ಮಾತ್ರ ಪ್ರಕಟನೆ ಮಾಡಬೇಕಾದುದನ್ನು ಬಿಟ್ಟು ಇಷ್ಟೊಂದು ಗ್ರಂಥಗಳನ್ನು ಇಂಗ್ಲಿಷಿನಲ್ಲಿ ಪ್ರಕಟಿಸಿದುದು ತಪ್ಪು ಎಂದು ಈಟ್ಸ್ ಅವರು ಭಾವಿಸಿದರು.

ಠಾಕೂರರು ಒಂದಾಗುತ್ತಲೊಂದರಂತೆ ಪ್ರಕಟಿಸಿದ ಕತೆ, ಕವಿತೆ, ಪ್ರಬಂಧಾದಿ ತಮ್ಮ ಆಂಗ್ಲ ಕೃತಿಗಳಿಂದ ಪಾಶ್ಚಿಮಾತ್ಯ ದೇಶಗಳಿಗೆ ಭಾರತೀಯ ಪ್ರತಿಭೆಯ ಒಂದು ಹೊಸ ಕಲ್ಪನೆ ಬರುವಂತೆ ಮಾಡಿದರು ನಿಜ. ಆದರೆ ಇವು, 'ಗೀತಾಂಜಲಿ' ಪ್ರಕಟನೆಯಿಂದ ಅವರು ಗಳಿಸಿದ್ದ ಕೀರ್ತಿ ಪ್ರಶಸ್ತಿಗಳಿಗೆ ಕೊರತೆಯನ್ನುಂಟುಮಾಡಿದುವು." (**'ಹಿಂದು'**)

[ಈ ಲೇಖನದ ಸಾರಾಂಶವನ್ನು ಇಲ್ಲಿ ಉದ್ಧರಿಸಿ ಕೊಡುವ ಉದ್ದೇಶವಿಷ್ಟೆ; ನಮ್ಮ ನಾಡಿನ ಪ್ರತಿಭಾಶಾಲಿಗಳಾದ ಸಾಹಿತಿಗಳು ಪ್ರತಿಭೆ ಪಾಂಡಿತ್ಯಗಳು ನಮ್ಮ ಜನಕ್ಕೆ ಪೂರ್ಣಪ್ರಮಾಣದಲ್ಲಿ ದೊರೆಯುಂತಾಗಬೇಕಾದರೆ ಅವರು ತಾಯ್ನುಡಿಯಲ್ಲಿಯೇ ಗ್ರಂಥರಚನೆ ಮಾಡಬೇಕೆಂಬ ಮೂಲತತ್ತ್ವವನ್ನು ಇದು ನೆನಪಿಗೆ ತಂದುಕೊಡುತ್ತದೆ. — **ಸಂ.**]

## ಸಾದರ ಸ್ವೀಕಾರ

**ಸಂಸ್ಕೃತ ನಾಟಕ ಕಥೆಗಳು:** (ಮೊದಲನೆಯ ಭಾಗ) [ಪ್ರತಿಮಾ, ಶಾಕುನ್ತಲ, ಮಾಲವಿಕಾಗ್ನಿಮಿತ್ರ, ನಾಗಾನಂದ, ವೇಣೀಸಂಹಾರ ನಾಟಕಗಳ ಕಥಾನುವಾದ] ಬರೆದವರು: ಶ್ರೀ. ಮೋಟಗಾನಹಳ್ಳಿ ಸುಬ್ರಹ್ಮಣ್ಯ ಶಾಸ್ತ್ರಿಗಳು. ಕ್ರೌನ್ ಅಷ್ಟಪತ್ರ ೧೪೪ ಪುಟಗಳು. ಬೆಲೆ ೧ ರೂ. ೪ ಆಣೆ.

**ಭಾಗ್ಯಲಕ್ಷ್ಮೀ:** (ಕಿರುಕಾದಂಬರಿ) [ಕ್ರೌನ್ ಅಷ್ಟಪತ್ರ ೮+೧೦೪; ಬೆಲೆ ೧೨ ಆಣೆ.] ಲೇಖಕರು: ಎಂ. ವಿ. ಸೀತಾರಾಮಯ್ಯ, ಎಂ.ಎ.

ಈ ಪುಸ್ತಕ ೧೯೪೪ರ ಮಿಡ್ಲ್‌ಸ್ಕೂಲು ಪರೀಕ್ಷೆಯ ಪಠ್ಯಪುಸ್ತಕವಾಗಿ ನಿಯಮಿತವಾಗಿ, ಅದರ ಎರಡನೆಯ ಮುದ್ರಣ ಈಗ ಹೊರಬಿದ್ದಿದೆ. ಇದರ ವಿಮರ್ಶೆ ಹಿಂದೆ 'ನುಡಿ'ಯಲ್ಲಿ ಪ್ರಕಟವಾಗಿದೆ. ಈ ಮುದ್ರಣದಲ್ಲಿ, ವಿದ್ಯಾರ್ಥಿಗಳ ದೃಷ್ಟಿಯಿಂದ ಆವಶ್ಯಕವಾದ ಕೆಲವು ತಿದ್ದುಪಾಟುಗಳನ್ನು ಲೇಖಕರು ಮಾಡಿರುತ್ತಾರೆ; ಮತ್ತು ಪುಸ್ತಕವನ್ನು ಕುರಿತು ಬೇರೆ ಬೇರೆ ಪತ್ರಿಕೆಗಳಲ್ಲಿ ಬಂದ ವಿಮರ್ಶಾತ್ಮಕ ಅಭಿಪ್ರಾಯಗಳ ಸಂಗ್ರಹವನ್ನೂ ಕೊಟ್ಟಿರುತ್ತಾರೆ; ಇದು ಬೋಧಕರಿಗೂ ವಿದ್ಯಾರ್ಥಿಗಳಿಗೂ ಸಹಾಯಕವಾಗುವುದೆಂದು ಹೇಳಬಹುದಾಗಿದೆ.

## ಕೈಲಾಸಂ ಅವರ 'ಕೊಳ'

(೧೩೭ನೆಯ ಪುಟದಿಂದ)

Know Thyself ಎಂಬುದು ಎಲ್ಲ ಋಷಿಗಳ ಮಾತು. 'ಇಲ್ಲಿಯೇ ತಿಳಿದುಕೋ' – ಈಗಲೇ ತಿಳಿದುಕೋ' ಎಂದಿದ್ದಾರೆ ಉಪನಿಷತ್ತಿನ ದಾರ್ಶನಿಕರು. **ಇಲ್ಲಿಯೇ ಈ 'ಕೊಳ'ದಲ್ಲಿಯೇ ತಿಳಿಸಿದ್ದಾರೆ ಕೈಲಾಸಂ.** ಈ ಕಾವ್ಯದಲ್ಲಿ ಪ್ರತೀಕವೂ ನುಸುಳಿದೆ. ಸರಳ ತೋರಿದಷ್ಟೂ ಅದು ಆಳವಾಗಿದೆ. ಜೀವವು ಒಂದು ಕೊಳದಂತೆ ಎಂದು ತಿಳಿದರೆ ಚಿರಂತ ನಾವು ಕಡಲಿನಂತೆ ಆಗಬಹುದು. ಆದರೆ 'ಕೊಳ' ಸೂರ್ಯನನ್ನು ಪ್ರೀತಿಸಿದಂತೆ ಚಿರಂತನದಲ್ಲಿ ಆಸಕ್ತಿ ಜೀವನಿಗೆ ಅಗತ್ಯವಾಗಿ, ಬೇಕು. ಮಧ್ವಾಚಾರ್ಯರು, ಶಂಕರಾಚಾರ್ಯರು, ರಾಮಾನುಜಾಚಾರ್ಯರು – ಎಲ್ಲರೂ ದಾರ್ಶನಿಕರೇ. ಅವರು ಇಂಗ್ಲಿಷು ತಿಳಿದು ಈ ಕೃತಿಯನ್ನೋದಿದರೆ ಪರಸ್ಪರ ಒಡಂಬಡಿಕೆ ಮಾಡಿಕೊಳ್ಳುತ್ತಿದ್ದರೇನೊ ಎಂದು ಎಣಿಕೆ ಹಾಕುತ್ತಿದ್ದೇನೆ.

ಇಂಥ ಪ್ರತಿಭೆ, ಇಂಥ ದರ್ಶನ, ಇಂಥ ಅನುಭಾವಗಳು ದೇವದತ್ತವಾದುವುಗಳೇ. ಕೈಲಾಸಂ ಅದೇಕೊ 'ಹಕ್ಕಿ'ಯಂತೆ ತಪ್ಪಿಸಿ ಕೊಳ್ಳುತ್ತಿದ್ದಾರೆ. ಅವರಿನ್ನೂ ಬರೆಯಬೇಕು ಎಂದು ಎಲ್ಲರ ಆಸೆ. ಅವರ 'ಕೊಳ'ವನ್ನೋದಿದವರೆಲ್ಲ ಅವರ ಇತರ ಕೃತಿಗಳನ್ನೋದಿದವರೆಲ್ಲ ಈ ಮಾತನ್ನು ಹೇಳಿಯೇ ಹೇಳುವರು :

'ಜೋಗದ ಜಲಪಾತ ನೀನು
ನಿನ್ನನಂತ ವಿದ್ಯುತ್ತು
ನಾಡನಿನಿಸು ಬಳಸದಂತೆ ಕಳೆಯುತಿರುವದು
ನಿನ್ನ ಕಲಾಕೃತಿಗಳಲ್ಲಿ
ವಿದ್ಯುಲ್ಲತೆಯಂತೆ ತೂಗಿ
ಆಗಲೊಮ್ಮೆ ಈಗಲೊಮ್ಮೆ ಹೊಳೆಯುತಿರುವದು

ಎಂದು ಗೋಕಾಕರು ಹೇಳಿದ್ದಾರೆ. 'What a wash my Country men' ಎಂದು ನಾನೂ ನಿಟ್ಟುಸಿರಿಟ್ಟದ್ದೇನೆ. ಕೈಲಾಸಂ ಒಂದೆಡೆ ನಿಂತು ಬರೆದಂದು ನಾಡಪುಣ್ಯ ತೆರೆದಂತೆಯೇ ಸರಿ.

ಸು. ರಂ. ಎಕ್ಕುಂಡಿ, ಹುಬ್ಬಳ್ಳಿ.

### ವಸಂತ ಸಾಹಿತ್ಯೋತ್ಸವದ ಅಂಗವಾಗಿ ನಡೆದ

## ಯುವಜನ ಗೋಷ್ಠಿ

### ಅಧ್ಯಕ್ಷ ಭಾಷಣದ ಸಾರಾಂಶ

(ಶ್ರೀ. ಬಿ. ಶ್ರೀ. ಪಾಂಡುರಂಗರಾಯರು)

ನಾಡಪ್ರಗತಿಗೆ ಯುವಕರು ಬಹಳ ಮುಖ್ಯ. ಯುವಕರು ಒಂದಾಗದೆ ನಾಡಿನ ಕಲ್ಯಾಣವಾಗದು. ಕನ್ನಡದ ಕನ್ನಡತನ ಉಳಿಯುವುದು ಅಳಿಯುವುದು ನಮ್ಮನ್ನು ಅವಲಂಬಿಸಿದೆ. ನಮಗೆ ಕುಲಗೋತ್ರಗಳ ಜಂಜಡ ಬೇಡ.

ನಮ್ಮ ಯುವಕರು ಈ ವಿಶಾಲದೃಷ್ಟಿಯನ್ನು ಬೆಳಸಿಕೊಳ್ಳುವುದರ ಜೊತೆಗೆ ನಮ್ಮ ಜನದಲ್ಲಿ ಜ್ಞಾನಪ್ರಸಾರ ಮಾಡಬೇಕಾಗಿದೆ. ಪರಿಷತ್ತು ಕೆಲವು ವರ್ಷಗಳಿಂದ ಕನ್ನಡ ನುಡಿಯ ಪ್ರಸಾರವನ್ನು ಧ್ಯೇಯವಾಗಿಟ್ಟು ಕೊಂಡು ಯುವಕರಿಗಾಗಿ ವ್ಯಾಸಂಗವನ್ನು ಕನ್ನಡ ನಾಡಿನ ನಾನಾ ಭಾಗಗಳಲ್ಲಿ ಏರ್ಪಡಿಸಿ ಸಾಧಾರಣವಾಗಿ ಕನ್ನಡ ಜಾಣ ಜಾಣೆಯರ ಒಂದು ಪಡೆಯನ್ನೇ ನಿರ್ಮಿಸಿರುವುದನ್ನು ಈ ಸಮಯದಲ್ಲಿ ನಾವು ನೆನಪಿನಲ್ಲಿಟ್ಟುಕೊಂಡರೆ ಒಳ್ಳೆಯದು. ಈ ಕನ್ನಡ ತರುಣ ಪಡೆಯು ಪರಿಷತ್ತಿಗೆ ಕನ್ನಡ ಪ್ರಸಾರ ಕಾರ್ಯದಲ್ಲಿ ಜ್ಞಾನಪ್ರಸಾರ ಕಾರ್ಯದಲ್ಲಿ ನೆರವಾಗಬಹುದು. ನಮಗೂ ಸೇವೆ ಮಾಡಲು ಒಂದು ಅವಕಾಶ ದೊರೆತೀತು. ಪರಿಷತ್ತಿಗೂ ವಿದ್ಯಾದಾನ ಮಾಡಿ ವಿದ್ಯಾಪೀಠದ ಕಾಣಿಕೆ ಅರ್ಪಿಸುವ ಒಂದು ಸುಯೋಗವೂ ಲಭಿಸೀತು. ನಮ್ಮ ಯುವಕರು ಈ ಯೋಜನೆಯನ್ನು ಮನಸ್ಸಿಗೆ ತಂದುಕೊಳ್ಳಬೇಕೆಂದು ಅವರನ್ನು ಪ್ರಾರ್ಥಿಸುತ್ತೇನೆ.

ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ಯುವಜನ ಶಾಖೆಗೂ ಕೆಲಸ ಮಾಡಲು ಸ್ಥಳ ದೊರೆಯಲಿ, ಹಾಗಾಗುವುದೆಂದು ನಂಬಿದ್ದೇನೆ.

## ಯುವಜನ ಸಮ್ಮೇಳನ

### ಅಧ್ಯಕ್ಷರ ಭಾಷಣದ ಸಾರಾಂಶ

(ಶ್ರೀ. ಮತಿಘಟ್ಟ ಕೃಷ್ಣಮೂರ್ತಿಯವರು)

"ಯುವಜನ ಸಾಹಿತಿಗಳು, ಸಾಹಿತ್ಯ ಸಂಘಗಳು ಸುವ್ಯವಸ್ಥೆಗೊಂಡು ಒಮ್ಮುಖವಾಗಿ ಪರಿಣಾಮಕಾರಿಯಾದ ಕೆಲಸ ಮಾಡುವಂತಾಗಬೇಕೆಂಬುದೇ ಈ ದಿನ ಇಲ್ಲಿ ಯುವಜನ ಸಮ್ಮೇಳನ ಸೇರಿರುವುದರ ಮುಖ್ಯ ಉದ್ದೇಶ. ಹಳ್ಳಿಗಳಲ್ಲಿ ಕೆಲಸ ಮಾಡಬೇಕೆನ್ನುವವರು ಜನಪದ ಸಾಹಿತ್ಯವನ್ನು ಅಭ್ಯಾಸ ಮಾಡುವುದು ಅವಶ್ಯಕವಾದುದು. ಅಂತಹವರು ಕೋಲಾಟವನ್ನೂ ಯಕ್ಷಗಾನವನ್ನೂ ಕಲಿತು ಹೊಸ ಕಾಲಕ್ಕೆ ತಕ್ಕಂತೆ ಹೊಸ ಹೊಸ ಗೀತೆಗಳನ್ನೂ ಯಕ್ಷಗಾನ ನಾಟಕವನ್ನೂ ಬರೆದು ಹಳ್ಳಿಗಳಲ್ಲಿ ಪ್ರಚಾರ ಮಾಡಬೇಕು. ಹಿರಿಯರಾದ ಮಾಸ್ತಿಯವರು, ಬೇಂದ್ರೆಯವರು, ವಿ.ಸೀ. ಅವರು, ಪುಟ್ಟಪ್ಪನವರು ಮೊದಲಾದವರ ಎಷ್ಟೋ ಕವನಗಳು ಕೋಲಾಟಕ್ಕೆ ಹೊಂದುತ್ತವೆ. ಅವನ್ನು ಅಭ್ಯಾಸ ಮಾಡಿ ಜನತೆಯಲ್ಲಿ ಹರಡಬೇಕು. ನಮ್ಮ ದೇಶದ ಚರಿತ್ರೆಯನ್ನು ಯಕ್ಷಗಾನದಲ್ಲಿ ಬರೆದು ಪ್ರಚಾರ ಮಾಡಬೇಕು. ವಯಸ್ಕರ ವಿದ್ಯಾಭ್ಯಾಸಕ್ಕೆ ಇವು ಉತ್ತಮ ಮಾರ್ಗಗಳಾಗಿವೆ.

ಅನಕ್ಷರಸ್ಥರನ್ನು ಅಕ್ಷರಸ್ಥರನ್ನಾಗಿ ಮಾಡಬೇಕು. ದುಃಖಿಗಳನ್ನು ಸಂತೈಸಬೇಕು, ಅಳುವವರನ್ನು ನಗಿಸಬೇಕು ಎಂಬ ಉನ್ನತ ಧ್ಯೇಯದಿಂದ ಕೆಲಸ ಮಾಡಲು ಹೊರಟರೆ ಹಾದಿ ಒಂದಲ್ಲ ಹತ್ತಾರು ತೆರೆಯುತ್ತವೆ. ಆಗ ನಮ್ಮಿಂದ ಉತ್ತಮವಾದ ಸೇವೆ ಜನಕ್ಕೆ ಒದಗುತ್ತದೆ.

ಒಟ್ಟಿನಲ್ಲಿ ಯುವಜನರು ತಮ್ಮ ಕಲಾಕುಶಲತೆಯನ್ನು ವೃದ್ಧಿ ಪಡಿಸಿಕೊಳ್ಳಲೂ ನಾಡು ನುಡಿಗಳ ಸೇವೆಯನ್ನು ಉತ್ತಮ ರೀತಿಯಲ್ಲಿ ಮಾಡಲೂ ಸಂಘಟಿತರಾಗಿ ಕೆಲಸ ಮಾಡಬೇಕು.

### ಯುವಜನ ಸಮ್ಮೇಳನದ ಗೊತ್ತುವಳಿಗಳ ಸಾರಾಂಶ

೧. ಇಂದಿನ ಕನ್ನಡ ನಾಡಿನ ಯುವಕ ಯುವತಿಯರ ಆದರ್ಶ ಆಸೆ ಆಕಾಂಕ್ಷೆಗಳನ್ನು ರೂಪಗೊಳಿಸಲು ಪರಿಷತ್ತಿನ ಆಶ್ರಯದಲ್ಲಿ ಒಂದು ಯುವಜನ ಶಾಖೆಯನ್ನು ಏರ್ಪಡಿಸಬೇಕು. ಯುವಜನ ಶಾಖೆಯ ಕಾರ್ಯಕಲಾಪಗಳನ್ನು ನಡಸಲು ಯುವಜನರ ಒಂದು ಸ್ಥಾಯೀಸಮಿತಿಯನ್ನು ರಚಿಸಬೇಕು.

ಈ ನಿರ್ಣಯದ ಉದ್ದೇಶವನ್ನು ನಡಸಿಕೊಡಬೇಕೆಂದು ಸಮ್ಮೇಳನ ಪರಿಷತ್ತನ್ನು ಪ್ರಾರ್ಥಿಸುತ್ತದೆ.

೨. ಇನ್ನು ಮುಂದೆ ಎಲ್ಲಾ ಯುವಜನ ಕನ್ನಡ ಸಂಘಗಳೂ ಪರಿಷತ್ತಿನವರು ನಡಸುತ್ತಿರುವ ಸಾಹಿತ್ಯ ತರಗತಿಗಳಿಗೆ ನೆರವಾಗುವುದಲ್ಲದೆ ಆ ಸಂಘಗಳೆಲ್ಲಾ ವಿದ್ಯಾ ಪೀಠಗಳಾಗಿ ಪರಿಣಮಿಸುವಂತೆ ಎಲ್ಲಾ ಸಂಘಗಳ ಕಾರ್ಯನಿರ್ವಾಹಕರೂ ಶ್ರಮಿಸಬೇಕೆಂದು ಈ ಸಮ್ಮೇಳನ ಅವರೆಲ್ಲರನ್ನೂ ಪ್ರಾರ್ಥಿಸುತ್ತದೆ.

೩. ದೇಶದ ಏಳಿಗೆ ಬಹುಮಟ್ಟಿಗೆ ಜನತೆಯ ಅಕ್ಷರತೆಯನ್ನು ಅವಲಂಬಿಸಿರುವುದರಿಂದ ಸೋದರ ಸೋದರಿಯರನ್ನು ಅಕ್ಷರಸ್ಥರನ್ನಾಗಿ ಮಾಡಿ ಜ್ಞಾನಪ್ರಸಾರ ಮಾಡುವುದು ತಮ್ಮ ಕರ್ತವ್ಯವೆಂದು ಭಾವಿಸಿ ಯುವಕರೆಲ್ಲರೂ ನಾಡಿಗೆ ತಮ್ಮಿಂದ ಸಲ್ಲಬೇಕಾದ ವಿದ್ಯಾ ಋಣವನ್ನು ಈ ರೀತಿ ತೀರಿಸಿಕೊಳ್ಳಬೇಕೆಂದು ಈ ಸಮ್ಮೇಳನ ತೀರ್ಮಾನಿಸುತ್ತದೆ.

೪. ದಕ್ಷಿಣ ಭಾರತ ಹಿಂದೀ ಪ್ರಚಾರ ಸಂಘದವರು ನಡಸುವ ಹಿಂದೀ ಪರೀಕ್ಷೆಗಳಲ್ಲಿ ಭಾಗವಹಿಸುವ ಕನ್ನಡಿಗರಿಗೆ ಕನ್ನಡದ ಕೆಲವು ಪಠ್ಯಪುಸ್ತಕಗಳನ್ನಿಟ್ಟು ಅವುಗಳಿಂದ ಪ್ರಶ್ನೆಗಳನ್ನು ಕೇಳುವಂತೆ, ದಕ್ಷಿಣ ಭಾರತ ಹಿಂದೀ ಪ್ರಚಾರ ಸಮಿತಿಯವರನ್ನು ಈ ಸಮ್ಮೇಳನ ಪ್ರಾರ್ಥಿಸುತ್ತದೆ.

೫. ಕನ್ನಡ ನಾಡಿನ ಎಲ್ಲಾ ನ್ಯಾಯಸ್ಥಾನ, ಕಛೇರಿ ಮತ್ತು ಕಾಲೇಜುಗಳಲ್ಲಿಯೂ ವ್ಯವಹಾರ ಮತ್ತು ಕಾಗದ ಪತ್ರಗಳ ಏರ್ಪಾಡು ಕನ್ನಡ ಭಾಷೆಯಲ್ಲಾಗುವಂತೆ ಆಯಾ ಅಧಿಕಾರದ ಸಂಸ್ಥೆಗಳನ್ನು ಈ ಸಮ್ಮೇಳನ ಒತ್ತಾಯಪಡಿಸುತ್ತದೆ.

೬. ಯುವಕ ಸಾಹಿತಿಗಳು ಸಂಘಟಿತರಾಗಿ, ಪರಿಷತ್ತಿನ ಮೂಲಕ ತಕ್ಕಷ್ಟು ಪರಿಣಾಮಕಾರಿಯಾದ ರೀತಿಯಲ್ಲಿ ಸಾಹಿತ್ಯ ಸೇವೆ ಮಾಡಲು ಅವಕಾಶವಾಗುವಂತೆ ಸಾಹಿತ್ಯ ಪರಿಷತ್ತಿಗೆ ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಸದಸ್ಯರಾಗಬೇಕೆಂದು ಯುವಕರನ್ನು ಈ ಸಮ್ಮೇಳನ ಪ್ರಾರ್ಥಿಸುತ್ತದೆ.

## ಪರಿಷತ್ತಿನ ಸುದ್ದಿ

### ಪರಿಷತ್ತಿನ ಸದಸ್ಯರ ಬೆಳವಣಿಗೆ

**ಸಹಾಯಕ ಸದಸ್ಯರು (೧೦೦ ರೂ.) :** ಶ್ರೀ. ಕೆ. ಬಿ. ಮಾಧವ, ಎಂ.ಎ., ಎಫ್.ಆರ್.ಎ.ಎಸ್., ಎ.ಐ.ಎ. (ಲಂಡನ್) ಅವರು, ಗಣಿತಶಾಸ್ತ್ರದ ಪ್ರಧಾನಾಧ್ಯಾಪಕರು, ಮಹಾರಾಜರವರ ಕಾಲೇಜು, ಮೈಸೂರು.

**ಸಾಮಾನ್ಯ ಸದಸ್ಯರು (೩ ರೂ.) :** ೧. ಶ್ರೀಮತಿ ಸೌ॥ ತುಳಸಿಬಾಯಿ ಶಾಮರಾವ್ ಅವರು, ಶಂಕರಪುರ, ಬೆಂಗಳೂರು. ೨. ಶ್ರೀ. ಮಂಗಳೂರು ಗೋವಿಂದರಾಯರು, ಸಾಹಿತ್ಯಭಂಡಾರ, ಹುಬ್ಬಳ್ಳಿ.

### ಸಾಹಿತ್ಯ ಪರೀಕ್ಷೆಗಳು

ಈ ವರ್ಷದ 'ಕಾವ' ಪರೀಕ್ಷೆಯ ಪಾಠ ಪುಸ್ತಕಗಳಲ್ಲಿ ಈ ಕೆಳಗಿನ ಬದಲಾವಣೆಗಳನ್ನು ಮಾಡಿದೆ.

೧. 'ಕಂಬನಿ' ಬದಲು ಧಾರವಾಡದ ಮನೋಹರ ಗ್ರಂಥ ಭಾಂಡಾರದ ಪ್ರಕಟನೆ 'ಚಿಗುರು' ಬೆಲೆ ೧೪ ಅಣೆ.

೨. 'ಶಬ್ದಾದರ್ಶ' ಅಥವಾ ಕನ್ನಡ ಮಾಧ್ಯಮ ವ್ಯಾಕರಣ ಅಥವಾ 'ಕನ್ನಡ ಕೈಪಿಡಿ'ಯಲ್ಲಿನ ವ್ಯಾಕರಣ ಭಾಗ. (ಈ ಭಾಗ ಪ್ರತ್ಯೇಕವಾಗಿ ಅಚ್ಚಾಗಿದ್ದು ಮೈಸೂರು ಓರಿಯಂಟಲ್ ಲೈಬ್ರರಿಯಲ್ಲಿ ಮಾರಾಟಕ್ಕೆ ಸಿದ್ಧವಾಗಿದೆ. ಬೆಲೆ ೪ ಅಣೆ.)'

### ಮಂಗಳೂರು – ಕೊಡಗು ಪ್ರಾಂತಸಮಿತಿ

### ವಸಂತ ಸಾಹಿತ್ಯೋತ್ಸವ

ಏಪ್ರಿಲ್ ೧೦ ಮತ್ತು ೧೧ರಲ್ಲಿ ಮಡಕೇರಿಯಲ್ಲೂ, ೧೨ರಲ್ಲಿ ನಾಪೋಕ್ಲಿನಲ್ಲೂ, ೧೩ರಲ್ಲಿ ಮೂರ್ನಾಡಿನಲ್ಲೂ ವಸಂತ ಸಾಹಿತ್ಯೋತ್ಸವ ಜರುಗಿತು. ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಪ್ರಸಕ್ತ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್, ಎಂ.ಎ. ಅವರು ಆರಂಭೋತ್ಸವವನ್ನು ನೆರವೇರಿಸಿದರು.

ಮಡಕೇರಿಯಲ್ಲಿ. ೧೦–೪–೪೩ರಲ್ಲಿ ಆರಂಭ ಭಾಷಣ: ರಾಜಸೇವಾಪ್ರಸಕ್ತ ಎಂ. ವೆಂಕಟೇಶ ಅಯ್ಯಂಗಾರ್ ಅವರು. 'ಸಾಹಿತ್ಯ ಸಂದೇಶ': ಮುಳಿಯ ತಿಮ್ಮಪ್ಪಯ್ಯನವರು, ಭಾರತ ವಾಚನ: ಗಮಕ ವಿದ್ವಾನ್ ಶ್ರೀ. ಕೃಷ್ಣರಾಯರು. ೧೧–೪–೪೩ ಬೆಳಗ್ಗೆ ಕವಿತಾ ವಾಚನ: ಶ್ರೀ. ರಂಗನಾಥ್ ಅವರು, 'ನಮ್ಮ ಕರ್ತವ್ಯದ ಧೋರಣೆ': ಶ್ರೀ. ವಿ. ಸೀತಾರಾಮಯ್ಯನವರು, 'ಅಕ್ಕಮಹಾದೇವಿ' ಶ್ರೀ. ನಾ. ಕಸ್ತೂರಿಯವರು. ಅಪರಾಹ್ನ – ಕವಿತಾ ವಾಚನ: ಶ್ರೀ. ರಂಗನಾಥ್ ಅವರು, 'ಪಂಪಭಾರತದ ಭೀಷ್ಮ': ವಿದ್ವಾನ್ ಶ್ರೀ. ಎಂ. ತಿಮ್ಮಪ್ಪಯ್ಯನವರು, 'ಭಾರತೀಯ ಸಂಸ್ಕೃತಿಯ ಮುನ್ನೋಟ': ರಾಜಸೇವಾಪ್ರಸಕ್ತ ಶ್ರೀ. ಎಂ. ವೆಂಕಟೇಶ ಅಯ್ಯಂಗಾರ್ ಅವರು, 'ಸಮುದ್ರಗೀತೆ'ಗಳಿಂದ ವಾಚನ: ಶ್ರೀ. ವಿ. ಸೀತಾರಾಮಯ್ಯನವರು.

ಇದೇ ಕಾರ್ಯಕ್ರಮಗಳು ನಾಪೋಕ್ಲು ಮತ್ತು ಮೂರ್ನಾಡುಗಳಲ್ಲಿ ಜರುಗಿದುವು.

## ಕನ್ನಡ ಸುದ್ದಿ

### ಅಖಿಲ ಕರ್ನಾಟಕ ಮಕ್ಕಳ ಕೂಟ, ಬೆಂಗಳೂರು

'ಅಖಿಲ ಕರ್ನಾಟಕ ಮಕ್ಕಳ ಕೂಟ'ದ ಆರನೆಯ ವಾರ್ಷಿಕೋತ್ಸವ ಮೇ ತಿಂಗಳು ೧೨ನೆಯ ತಾರೀಖು ಬುಧವಾರ ನಡೆಯುವುದು. ಸ್ಥಳೀಯ ಸಂಸ್ಥೆಗಳ ಮತ್ತು ಆರೋಗ್ಯ ಸಚಿವರಾದ ಶ್ರೀ. ಹೆಚ್. ಬಿ. ಗುಂಡಪ್ಪಗೌಡ, ಬಿ.ಎ., ಬಿ.ಎಲ್. ಅವರು ಅಧ್ಯಕ್ಷತೆಯನ್ನು ವಹಿಸಲು ದಯವಿಟ್ಟು ಒಪ್ಪಿರುವರು. ಮೇ ತಿಂಗಳು ೧೩ರಲ್ಲಿ ನಡೆಯುವ ಮಕ್ಕಳ ಸಮ್ಮೇಳನದ ಅಧ್ಯಕ್ಷತೆಯನ್ನು ಆನವಟ್ಟಿಯ ಸುಪ್ರಸಿದ್ಧ ವರ್ತಕರಾದ ಶ್ರೀ. ಡಿ. ಓಂಕಾರಯ್ಯನವರ ಪುತ್ರ ಶ್ರೀ. ಡಿ. ದೇವಪ್ಪನೆಂಬ ಬಾಲಕನೂ, ಸ್ವಾಗತಾಧ್ಯಕ್ಷತೆಯನ್ನು ಮೈಸೂರು ಸಂಸ್ಥಾನದ ಮಿಡಲ್ ಮತ್ತು ಹೈಸ್ಕೂಲುಗಳ ಚೀಫ್ ಮೆಡಿಕಲ್ ಇನ್ಸ್‌ಪೆಕ್ಟರಾದ ಡಾಕ್ಟರ್ ರಾಜಯ್ಯಂಗಾರ್ ಅವರ ಪುತ್ರ ಎನ್. ಚಕ್ರಪಾಣಿಯೂ ವಹಿಸುವರು. ಮಹಾಜನರು ಸಮ್ಮೇಳನಕ್ಕೆ ಉದಾರವಾಗಿ ಧನಸಹಾಯ ಮಾಡುವುದರ ಮೂಲಕ ಪ್ರೋತ್ಸಾಹಿಸಬೇಕಾಗಿ ಕೋರಲಾಗಿದೆ.

### ಕೊಡಗಿನಲ್ಲಿ ಕಾವ್ಯ ವಾಚನ ಮತ್ತು ಉಪನ್ಯಾಸ

ಮಡಿಕೇರಿಯ ಗಮಕಿಗಳಾದ ಶ್ರೀ. ಎಂ. ಎಸ್. ಅನಂತಪದ್ಮನಾಭರಾಯರು ಸುಂಟಿಕೊಪ್ಪಲಿನ ಕಾಫಿ ಪ್ಲಾಂಟರ್ ಶ್ರೀ. ಜಿ. ಎಂ. ಮಂಜುನಾಥಯ್ಯನವರ "ಸ್ವರ್ಣಾಲಯ"ದಲ್ಲಿ ತಾ. ೨೪ರ ಪ್ರಾತಃಕಾಲ ವಿವಿಧ ಕಾವ್ಯವಾಚನವನ್ನೂ ಸಾಯಂಕಾಲ ಕುಮಾರವ್ಯಾಸ ಭಾರತದಿಂದ "ಶ್ರೀಕೃಷ್ಣ ರಾಯಭಾರ"ವೆಂಬ ಭಾಗವನ್ನೂ ವಾಚನ ಮಾಡಿದರು.

ತಾ. ೨೫ರಲ್ಲಿ ಮಡಿಕೇರಿ ವೇದಾಂತ ಮಂದಿರದಲ್ಲಿ ಕರ್ಣನ ಸರ್ಪಾಸ್ತ್ರ ಪ್ರಯೋಗವೆಂಬ ಭಾಗವನ್ನೂ, ತಾ. ೨೬ರಲ್ಲಿ ಶ್ರೀ. ಸಿ. ಎಂ. ರಾಮರಾಯರ ಮನೆಯಲ್ಲಿ "ಕುಂತೀ ಕರ್ಣ ಸಂವಾದ"ವೆಂಬ ಭಾಗವನ್ನೂ ವಾಚನ ಮಾಡಿದರು.

ತಾ. ೨೬ರ ಸಾಯಂಕಾಲ ಬೆಂಗಳೂರು ದಂಡಿನ ಸೈಂಟ್ ಜೋಸೆಫ್ಸ್ ಕಾಲೇಜಿನ ಸಂಸ್ಕೃತ ಪ್ರೊಫೆಸರರಾದ ವಿದ್ವಾನ್ ಎಂ. ರಾಮಕೃಷ್ಣ ಭಟ್, ಎಂ.ಎ. ಅವರೂ ಮತ್ತು ಬಳ್ಳಾರಿಯ ವಿದ್ವಾನ್ ತಿರುಮಲೇಶ್ ಅವರೂ "ಸಾಹಿತ್ಯ ಧರ್ಮ" ಎಂಬ ವಿಷಯ ಭಾಷಣ ಮಾಡಿದರು.

**ಮೇಲುಕೋಟೆ : ಕನ್ನಡ ಸಂಘ**

೨೦–೪–೪೩ರಲ್ಲಿ ಸಂಘದ ಆಶ್ರಯದಲ್ಲಿ ಬಹುಮಾನ ಸಭೆ ನಡೆಯಿತು. ಫ್ರೆಂಚ್‌ರಾಕ್ಸ್ ಸಬ್ ಡಿವಿಜನ್ ಆಫೀಸರಾದ ಶ್ರೀ. ಕೆ. ಬಾಲಸುಬ್ರಹ್ಮಣ್ಯಂ, ಎಂ.ಎಸ್‌ಸಿ. ಅವರು ಅಧ್ಯಕ್ಷತೆ ವಹಿಸಿದ್ದರು. ಈ ಸಲ ವಾರ್ಷಿಕೋತ್ಸವದಲ್ಲಿ ಈ ಊರಿನ ಕುರುಹಿನ ಶೆಟ್ಟರ ಸಂಘದವರು ಪ್ರದರ್ಶಿಸಿದ "ಬಭ್ರುವಾಹನ ಕಾಳಗ" ಯಕ್ಷಗಾನವನ್ನು ನೋಡಿದ ಕೆಲವು ಮಹನೀಯರು ಒಂದು ಬೆಳ್ಳಿಯಬಟ್ಟಲನ್ನು ದಯಪಾಲಿಸಿದರು. ಈ ಬಹುಮಾನವನ್ನು ಸಂಘದ ಪ್ರಧಾನಿಗಳಾದ ಶ್ರೀ. ಮಲ್ಲಣ್ಣ ಶೆಟ್ಟರ ಹಸ್ತ ಕೊಟ್ಟು ಅಧ್ಯಕ್ಷರು ಹೀಗೆ ಉಪನ್ಯಾಸಮಾಡಿದರು:

"ಈ ಸಂಘದವರು ಪ್ರಾಚೀನ ಕಲೆಗಳಿಗೆ ಪ್ರೋತ್ಸಾಹ ಕೊಡುತ್ತಿರುವುದು ಬಹಳ ಸಂತೋಷದ ವಿಷಯ. ಸಂಸ್ಕೃತದ ಸಹಾಯದಿಂದ ಕನ್ನಡವನ್ನೂ ಬೆಳಸುತ್ತಿರುವುದೂ, 'ಯದುಗಿರಿ' ಹಸ್ತಪತ್ರಿಕೆಯೊಂದನ್ನು ಹೊರಡಿಸುತ್ತಿರುವುದೂ ಬಹಳ ಉತ್ಸಾಹದ ಕೆಲಸಗಳಾಗಿವೆ. ಬೇಗನೆ ಈ ಪತ್ರಿಕೆಯು ಮುದ್ರಿತವಾಗಲಿ ಎಂದು ಹರಸುತ್ತೇನೆ. ಅದರಲ್ಲಿ ಗಹನವಾದ ವಿಷಯಗಳಿವೆ. ಇಂದು ಸಿನಿಮಾಗಳು ಹೆಚ್ಚಿ ಹಿಂದಿನ ಕಲೆಗಳು ಹಿಂದಾಗಿರಲು, ಇಂಥ ಸಂಘಗಳೇ ಅವುಗಳ ಉದ್ಧಾರ ಮಾಡಬೇಕು. ಶ್ರೀ. ಚೆಲುವರಾಯನ ಕೃಪೆ ಎಲ್ಲ ರೀತಿಯಲ್ಲೂ ಇವರಿಗೆ ಲಭಿಸಲಿ."

### ದಕ್ಷಿಣ ಕರ್ನಾಟಕ ಅಕ್ಷರ ಪ್ರಚಾರ ಸಮಿತಿ, ಮಡಿಕೇರಿ

ಸಮಿತಿಯ ಕಾರ್ಯದರ್ಶಿಗಳಾದ ಶ್ರೀ. ಕೆ. ಕೃಷ್ಣಮಾಚಾರ್ಯರು ಏಪ್ರಿಲ್ ೧ ರಿಂದ ೧೦ರ ವರೆಗೆ ದಕ್ಷಿಣ ಕರ್ನಾಟಕದ ಹಲವೆಡೆ ಪ್ರವಾಸಮಾಡಿ ರಾಮಕುಂಜ, ಪುತ್ತೂರು, ಕಾಸರಗೋಡು ರಾಮನಗರಗಳಲ್ಲಿ ಸಾರ್ವಜನಿಕ ಸಭೆ ಸೇರಿಸಿ ಅಕ್ಷರ ಪ್ರಚಾರ ಕೇಂದ್ರಗಳನ್ನು ಮತ್ತು ಕನ್ನಡ ಹಿತೈಷಿಗಳ ಚಿಕ್ಕ ಚಿಕ್ಕ ಸಮಿತಿಗಳನ್ನು ಸ್ಥಾಪಿಸಿದರು.

ಈ ಕನ್ನಡದ ಕಾರ್ಯದಲ್ಲಿ ಸಹಕರಿಸಿದ ಮಹನೀಯರೆಲ್ಲರಿಗೂ ಕಾರ್ಯದರ್ಶಿಗಳು ಧನ್ಯವಾದಗಳನ್ನರ್ಪಿಸಿದರು.

ಆಯಾ ಸ್ಥಳೀಕ ಕರ್ನಾಟಕ ಸಂಘಗಳು, ಯುವಜನ ಸಂಘಗಳು, ಭಗಿನೀ ಸಮಾಜ, ಮಿತ್ರಮಂಡಳಿ, ಹರಿಜನ ಸೇವಕ ಸಂಘ ಮುಂತಾದ ಸಂಸ್ಥೆಗಳವರು ಮುಂದೆ ಬಂದು ಈ ಅಕ್ಷರ ಪ್ರಚಾರ ಮಹಾಕಾರ್ಯವನ್ನು ನಡಸಲು ಸಹಾಯಕರಾಗಬೇಕೆಂದು ಕಾರ್ಯದರ್ಶಿಗಳು ಪ್ರಾರ್ಥಿಸಿದರು.

### ಮುಂಬಯಿ ಪ್ರಾಂತ್ಯದಲ್ಲಿ ಅಕ್ಷರ ಪ್ರಚಾರ

ಮುಂಬಯಿ ಪ್ರಾಂತದ ಕೊಲಾಬಾ ಜಿಲ್ಲೆಯಲ್ಲಿರುವ ಅನಾಗರಿಕ ತಂಡದ ಮಕ್ಕಳಿಗೆ ಓದುಬರಹ ಕಲಿಸಲು ಒಂದು ಹೊಸ ವ್ಯವಸ್ಥೆಯನ್ನು ಕೈಗೊಳ್ಳಲಾಗಿದೆ. ಈ ಮಕ್ಕಳಿಗಾಗಿ ತೆರೆದಿರುವ ಶಾಲೆಗಳಿಗೆ ತಿಂಗಳಿಗೆ ಕನಿಷ್ಠಪಕ್ಷ ಅರ್ಧದಷ್ಟು ಕೆಲಸದ ದಿನಗಳ ಕಾಲ ಹಾಜರಾಗುವ ಮಕ್ಕಳಿಗೆ ದಿನಕ್ಕೆ ಅರ್ಧಾಣೆಯಂತೆ ವಿದ್ಯಾರ್ಥಿವೇತನ ಕೊಡುವರು. ಈ ಕ್ರಮವನ್ನು ಒಂದು ವರ್ಷದ ಪ್ರಯೋಗಾರ್ಥವಾಗಿ ನಡಸಿ, ಮಕ್ಕಳಲ್ಲಿ ಶಾಲೆಗೆ ಬಂದು ಕಲಿಯುವ ಅಭ್ಯಾಸವಾಗುವುದನ್ನು ನಿರೀಕ್ಷಿಸಲಾಗುವುದು. ವೇತನವನ್ನು ನಗದಾಗಿಯೊ, ಪುಸ್ತಕ ಸ್ಲೇಟು ಇಲ್ಲವೆ ಬಟ್ಟೆಗಳ ರೂಪದಲ್ಲಿಯೊ ಕೊಡುತ್ತಾರಂತೆ.

೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧
ಬಿಡಿ ಪತ್ರಿಕೆ: ೬ ಕಾಸು



ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

| ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ<br>ಬೆಂಗಳೂರು: ಶುಕ್ರವಾರ, ಮೇ ೬, ೧೯೪೩ | ಸಂಚಿಕೆ ೨೮ |
|---|---|---|

# ಭಗವದ್ಗೀತೆಯ ಭವ್ಯತೆ*

(ಶ್ರೀ. ಹನುಮಂತರಾವ್ ಮಾಂಜರೇಕರ್, ಬಿ.ಎ. ಅವರು)

## ಗೀತೆಗೆ ಶರಣು ಹೋಗಬೇಕು

ಇಂದು ನಮ್ಮ ಸುತ್ತಲೂ ಭಾರತವರ್ಷದಲ್ಲಿ ಅಶಾಂತಿಸರ್ವವೂ, ಪ್ರಪಂಚದ ಇತರ ಭಾಗಗಳಲ್ಲಿ ಭೀಕರವಾದ ಹತ್ಯಾಕಾಂಡವೂ ನಡೆದಿವೆ. ಇಂತಹ ನಿರಾಶಾಮಯ ವಾತಾವರಣದಲ್ಲಿ ಭಾರತೀಯ ಯುದ್ಧದ ಹೊತ್ತಿಗೆ ಅವತೀರ್ಣವಾದ, ಸಾಕ್ಷಾತ್ ಪರಮಾತ್ಮನ ಬಾಯಿಯಿಂದ ಹೊರಟ ಗೀತೆಗೆ ಶರಣು ಹೋಗದೆ ಇನ್ನಾವುದನ್ನು ಮೊರೆ ಹೋಗೋಣ? ಯುದ್ಧ ಕಾಲವು ಪ್ರಾಪ್ತವಾದಾಗ ವೀರಾಗ್ರಣಿಯಾದ ಅರ್ಜುನನು ಸಹ ಹೇಗೆ ಕಿಂಕರ್ತವ್ಯತಾಮೂಢನಾದನೋ ಅದೇ ತೆರದಲ್ಲಿ ಇಂದು ಭಾರತೀಯರಾದ ನಾವು ಕರ್ತವ್ಯ ಪರಾಙ್ಮುಖರಾಗುತ್ತಿದ್ದೇವೆ. ಕಾರ್ಯಾಕಾರ್ಯ ವಿವೇಕವು ನಮ್ಮಲ್ಲಿ ಒಡಮೂಡಿ ನಾವು ಅರ್ಜುನನಂತೆಯೇ ಕಾರ್ಯಪ್ರವಣರಾಗಬೇಕಾದರೆ ಅರ್ಜುನನಿಗೆ ಕಾರ್ಯಸ್ಫೂರ್ತಿಯನ್ನಿತ್ತ ಭಗವದ್ವಾಣಿಯನ್ನೇ ನಾವೂ ಕೇಳಬೇಕು; ಅದನ್ನು ನಾವೂ ಮನನ ಮಾಡಬೇಕು; ಅದರ ನಿದಿಧ್ಯಾಸವು ಸತತವಾಗಿ ನಮ್ಮ ಅಂತಃಕರಣದಲ್ಲಿ ನಡೆಯಬೇಕು. ಭಗವದ್ಗೀತೆಯು ಕೇವಲ ಒಣ ವೇದಾಂತವನ್ನು ಹೇಳಲು ಹೊರಟಿಲ್ಲ. ಉಚ್ಚ ತತ್ವಗಳ ಹೆಸರಿನಲ್ಲಿ ಕರ್ಮಚ್ಯುತಿಯನ್ನು ಅದು ಸಮರ್ಥಿಸುವುದಿಲ್ಲ. "Stand and wait" ಎಂದು ಅದು ಸಾರುವುದಿಲ್ಲ; 'ಸತ್ತರೆ ಸ್ವರ್ಗ; ಗೆದ್ದರೆ ರಾಜ್ಯ' ಎಂದು ಅದು ನಮ್ಮನ್ನು ಆಹ್ವಾನಿಸುತ್ತದೆ. ಇಂದಿನ ಪ್ರಪಂಚದ ಜಟಿಲ ಸಮಸ್ಯೆಗಳನ್ನು ಬಗೆಹರಿಸುವಂಥ ಗ್ರಂಥರತ್ನವೆಂದರೆ ಭಗವದ್ಗೀತೆ.

## ಗೀತೆ, ಥೋರೋ ಮತ್ತು ಗಾಂಧೀಜಿ

ಅಮೇರಿಕೆಯ ಥೋರೋನ ವಿಚಾರವಾಗಿ ತಮ್ಮಲ್ಲಿ ಅನೇಕರು ಕೇಳಿರಬಹುದು. ಅವನು ಪ್ರಸಿದ್ಧ ತತ್ವಜ್ಞಾನಿಯಾದ ಇಮರ್ಸನ್ನನ ಗುರು. ಅವನು ಗೀತೆಯನ್ನು ಮಾತೆಯೆಂದು ಭಾವಿಸಿ ಅದನ್ನು ದಿನಾಲು ಪಠಿಸುತ್ತಿದ್ದನೆಂಬ ಬಗ್ಗೆ ಅವನ ಖ್ಯಾತಿಯುಂಟು. ಪ್ರಹ್ಲಾದನು ಹೇಗೆ ಪುರಾಣಕಾಲದ ಪ್ರಥಮ ಸತ್ಯಾಗ್ರಹಿಯೋ, ಹಾಗೆಯೇ ಥೋರೋನು ವರ್ತಮಾನ ಯುಗದ ಮೊದಲನೆಯ ಸತ್ಯಾಗ್ರಹಿಯು. ಮ॥ ಗಾಂಧಿಯವರೂ ಅವನನ್ನು ತಮ್ಮ ಗುರು ಸ್ಥಾನದಲ್ಲಿಟ್ಟುಕೊಂಡಿದ್ದಾರೆಂಬ ಮಾತು ತಮಗೆ ಗೊತ್ತಿರಲಿಕ್ಕೆ ಸಾಕು.

ಥೋರೋನು ಏಕಾಂತವಾಸಕಸ್ಕಾಗಿ ನಿಬಿಡವಾದ ಅಡವಿಯನ್ನಾಶ್ರಯಿಸುತ್ತಿದ್ದನು. ಅವನ ಶಿಷ್ಯನಾದ ಇಮರ್ಸನ್ನನು ಗೀತಾದಿ ಪೌರ್ವಾತ್ಯ ಗ್ರಂಥಗಳ ಅಧ್ಯಯನಕ್ಕಾಗಿ ಸಾಯಂಕಾಲದ ಹೊತ್ತಿಗೆ ಅವನಿದ್ದಲ್ಲಿಗೆ ಹೋಗುತ್ತಿದ್ದನಂತೆ. ಹೀಗೆಯೇ ಒಂದು ದಿನ ಅಲ್ಲಿ ಹೋದಾಗ ಭಯಂಕರ ದೃಶ್ಯವೊಂದು ಅವನಿಗೆ ಕಾಣಿಸಿತು: ಗುರುವಾದ ಥೋರೋನು ಮಂಚದ ಮೇಲೆ ಗಾಢವಾದ ನಿದ್ರೆಯಲ್ಲಿದ್ದಾನೆ. ಮಂಚದ ಕೆಳಗೆ ನಾಲ್ಕೈದು ನಾಗರ ಹಾವುಗಳೂ, ಚೇಳಿನಂತಹ ವಿಷ ಜಂತುಗಳೂ ಆಟವಾಡುತ್ತಿವೆ. ಇದನ್ನು ನೋಡಿ ಇಮರ್ಸನ್ನನು ಬೆಚ್ಚಿಬಿದ್ದನು. ಅವನಿಗೆ ಮುಂದೆ ಹೋಗಿ ಗುರುವನ್ನೆಬ್ಬಿಸಲು ಧೈರ್ಯವಾಗಲೊಲ್ಲದು. ಒಂದಿಷ್ಟು ಗಡಿಬಿಡಿಯಾದರೂ ಆ ಪ್ರಾಣಿಗಳು ಗುರುವಿನ ಪ್ರಾಣವನ್ನು ಗಂಡಾಂತರಕ್ಕೆ ಈಡುಮಾಡುವವೆಂದು ಅವನು ಭೀತಿಗೊಂಡನು. ಕೆಲವು ಹೊತ್ತಿನಮೇಲೆ ಆ ಪ್ರಾಣಿಗಳು ತಂತಾನೇ ಹೊರಟುಹೋದವು; ಇತ್ತ ಥೋರೋನು ನಿದ್ದೆಯಿಂದೆಚ್ಚತ್ತನು. ಆಗ ಇಮರ್ಸನ್ನನು ನಡೆದ ಸಂಗತಿಯನ್ನು ಹೇಳಿ "ತಮ್ಮ ಆಜ್ಞೆಯಾದರೆ ಈ ಮಂಚವನ್ನು ಬೇರೆ ಕಡೆಗೆ ಒಯ್ದು ಹಾಕುವೆ" ಎಂದನು. ಥೋರೋನು ಗೀತಾಗ್ರಂಥವನ್ನು ಕೈಯಲ್ಲಿ ತಗೊಂಡು "ಈ ನನ್ನ ತಾಯಿಯು ನನ್ನನ್ನು ಕಾಪಾಡಲು ನನ್ನ ಕಡೆಗೆ ಇರುವವರೆಗೆ ನನಗೆ ಯಾತರ ಭೀತಿಯು ಅನಿಸಲಿಕ್ಕಿಲ್ಲ" ಎಂದನು. ಇಂಥ ಅಚಲವಾದ ಶ್ರದ್ಧೆಯೇ ನಿಜವಾದ ತಾರಕ ಶಕ್ತಿ. ಥೋರೋನಂಥ ಪಾಶ್ಚಾತ್ಯನಲ್ಲಿಯೂ ಅದು ಇರಬೇಕಾದರೆ, ಗೀತೆಯ ಮಹಿಮೆ ಎಷ್ಟೆಂದು ಹೇಳಬೇಕು?

ಗೀತೆಯ ಬಗ್ಗೆ ಈ ಶ್ರದ್ಧೆಯೂ, ಈ ವಿಶ್ವಾಸವೂ ಗಾಂಧೀಜಿಯವರಲ್ಲಿಯೂ ಕಂಡುಬರುತ್ತದೆ. ಗಾಂಧೀಜಿಯವರು ಅನ್ನುತ್ತಾರೆ– "ಸಂಶಯಗಳು ನನ್ನನ್ನು ನಾಲ್ಕು ಬದಿಯಿಂದ ಮುತ್ತುವಾಗ, ನಿರಾಶೆಯು ನನ್ನನ್ನು ಎದುರಿಸುತ್ತಿದ್ದಾಗ, ಆಕಾಶದಲ್ಲಿ ಪ್ರಕಾಶದ ಒಂದು ಕಿರಣವೂ ನನಗೆ ಕಾಣದಿದ್ದಾಗ ನಾನು ಗೀತಾಮಾತೆಗೆ ಶರಣು ಹೋಗುತ್ತೇನೆ. ಇಂಥ ಪ್ರಸಂಗದಲ್ಲಿ ಮನಸ್ಸಿಗೆ ಶಾಂತಿಯನ್ನೀಯುವ ಒಂದಿಲ್ಲೊಂದು ಶ್ಲೋಕವು ನನಗೆ ಸಿಕ್ಕೇ ಸಿಗುವುದು; ಮತ್ತು ದಾರುಣವಾದ ದುಃಖಾವಸ್ಥೆಯಲ್ಲಿಯೂ ನನ್ನ ಮೊಗದ ಮೇಲೆ ನಗೆಯು ಮೂಡುವದು. ನನ್ನ ಬಾಹ್ಯ ಜೀವನವು ನಿಜವಾಗಿಯೂ ದುಃಖಪೂರ್ಣವಾದ ಘಟನೆಗಳಿಂದ ತುಂಬಿದೆ. ಹೀಗಿದ್ದೂ ಅವುಗಳ ಸ್ಥಿರವಾದ ಯಾವುದೊಂದು ಕುರುಹು ನನ್ನಲ್ಲಿ ಶಾಶ್ವತವಾಗಿ ಉಳಿಯದಿರುವುದರ ಶ್ರೇಯಸ್ಸು ಭಗವದ್ಗೀತೆಯ ಉಪದೇಶಗಳಿಗೆ ಸಲ್ಲುತ್ತದೆ." ಗೀತೆಯನ್ನೋದುವ ಪ್ರತಿಯೊಬ್ಬ ಸಾಧಕನೂ ಇಷ್ಟು ಶ್ರದ್ಧಾಮಯನಾಗಿರುವುದು ಅವಶ್ಯವಿದೆ. ಈ ಶ್ರದ್ಧೆಯೇ ನಮಗೆ ಮಾರ್ಗದರ್ಶಕವಾಗುವುದು.

## ಗೀತಾಮಂದಿರ– ಜೈನ ಬಸ್ತಿ

ನಮ್ಮ ನಾಡಿನಲ್ಲಿ ಹಳೇ ಗೆರಸಪ್ಪೆ, ಕಾರ್ಕಳ ಮೊದಲಾದ ಸ್ಥಳಗಳಲ್ಲಿ ಚತುರ್ಮುಖ ಬಸ್ತಿಗಳಿವೆಯಷ್ಟೆ! ಗೀತಾಮಂದಿರವನ್ನು ಒಂದು ಸುಂದರವಾದ ಚತುರ್ಮುಖ ಬಸ್ತಿಗೆ ಹೋಲಿಸಬಹುದು. 'ಗೋವಿಂದನೇ ನಾನು ಯುದ್ಧ ಮಾಡಲಾರೆ' ಎಂದು ಹೇಳಿ ಅರ್ಜುನನು ಸ್ತಬ್ಧನಾಗಿ ಕುಳಿತುಬಿಟ್ಟನು. ಇದು ಆ ಬಸ್ತಿಯ ನೆಲಗಟ್ಟು; ವಿಶ್ವರೂಪದರ್ಶನವು ಅದರ ಮಧ್ಯವು; ಕರಿಷ್ಯೇ ವಚನಂ ತವ ಎಂಬುದು ಅದರ ಕಲಶವು. ಕರ್ಮಯೋಗ, ರಾಜಯೋಗ, ಭಕ್ತಿಯೋಗ, ಜ್ಞಾನಯೋಗ– ಇವು ಅದರ ಚತುರ್ದ್ವಾರಗಳು. ಈ ಬಸ್ತಿಯ ಗರ್ಭಗುಡಿಯೊಳಗೆ ಪರಮಾತ್ಮನಿದ್ದಾನೆ. ಬೇಕಾದವರು ತಮಗೆ ಅನುಕೂಲವಿರುವ ದ್ವಾರದಿಂದ ಆ ಮಂದಿರವನ್ನು ನೇರವಾಗಿ ಪ್ರವೇಶಿಸಿ ಅತ್ತಿತ್ತ ತಿರುಗದೆ ದೇವರನ್ನು ಸಾಕ್ಷಾತ್ಕರಿಸಬಹುದು.

[೧೪೬ನೆಯ ಪುಟಕ್ಕೆ]

* ಈ ವರ್ಷ ಪರಿಷತ್ತಿನಲ್ಲಿ ನಡೆದ ವಸಂತ ಸಾಹಿತ್ಯೋತ್ಸವ ಸಂದರ್ಭದಲ್ಲಿ ಶ್ರೀಯುತರು ಕೊಟ್ಟ ಉಪನ್ಯಾಸದ ಸಾರಾಂಶ.

# ಕನ್ನಡ ನುಡಿ

**ಶುಕ್ರವಾರ, ಮೇ ೭, ೧೯೪೩**

## ಗ್ರಾಮಾಭಿವೃದ್ಧಿಯ ಐದು ವರ್ಷಗಳ ಕಾರ್ಯಯೋಜನೆ

ಮೈಸೂರು ಸಂಸ್ಥಾನದಲ್ಲಿ ಗ್ರಾಮಗಳ ಸ್ಥಿತಿಯನ್ನು ಉತ್ತಮಗೊಳಿಸಲು ಹಿಂದೆ ಒಂದು ಏರ್ಪಾಡಿತ್ತು. ಏನೆಂದರೆ, ಪ್ರತಿ ಜಿಲ್ಲೆಗೂ ನಾಲ್ಕು ಐದು ಹಳ್ಳಿಗಳನ್ನು ಆರಿಸಿ, ಅವುಗಳನ್ನು 'ಮಾದರಿ ಗ್ರಾಮ'ಗಳನ್ನಾಗಿ ಮಾಡುವುದು; ಸುತ್ತಮುತ್ತಲಿನ ಹಳ್ಳಿಗಳು ಆ ಗ್ರಾಮಗಳ ಮಾದರಿಯನ್ನು ಅನುಸರಿಸುವ ಹಾಗೆ ಮಾಡುವುದು. ಈ ಏರ್ಪಾಟು ಐದು ಆರು ವರ್ಷಗಳು ನಡೆದು ತಕ್ಕಮಟ್ಟಿನ ಫಲವನ್ನು ಕೊಟ್ಟಿದೆ.

'ಅಲ್ಲೊಂದು ಇಲ್ಲೊಂದು ಗ್ರಾಮದಲ್ಲಿ ಈ ರೀತಿಯ ಕೆಲಸವನ್ನು ಮಾಡುವುದರಿಂದ ತೀವ್ರಗತಿಯಲ್ಲಿ ಈ ಕೆಲಸವನ್ನು ಮಾಡಿದಂತಾಗುವುದಿಲ್ಲ. ಇದು ಸಂಸ್ಥಾನಾಮಳೆ ದೊಡ್ಡದಾಗಿ ಒಂದು ಚಳವಳಿಯಂತೆ ಹಬ್ಬಿ ಎಲ್ಲ ಕಡೆಗೂ ವ್ಯಾಪಿಸಬೇಕು. ಅಲ್ಲದೆ ಎಲ್ಲ ಹಳ್ಳಿಗಳೂ ಎಷ್ಟು ಅಲ್ಪಕಾಲದಲ್ಲಿ ಸಾಧ್ಯವೋ ಅಷ್ಟುಕಾಲದಲ್ಲಿ ಅಭಿವೃದ್ಧಿ ಹೊಂದಬೇಕು ಎಂದು ಯೋಚಿಸಿ ಇತ್ತೀಚೆಗೆ ಸ್ಥಳೀಯ ಸಂಸ್ಥೆಗಳ ಸಚಿವರಾದ ಶ್ರೀ. ಎಚ್. ಬಿ. ಗುಂಡಪ್ಪಗೌಡರು ಗ್ರಾಮಾಭಿವೃದ್ಧಿಯ ಐದು ವರ್ಷಗಳ ಒಂದು ಯೋಜನೆಯನ್ನು ತಯಾರು ಮಾಡಿಸಿದರು. ಸಚಿವರಿಗೆ ಹಳ್ಳಿಗಳ ಪರಿಸ್ಥಿತಿ ಚೆನ್ನಾಗಿ ಗೊತ್ತು. ತಾವೂ ಹಳ್ಳಿಯವರು ಎಂದು ಅನೇಕ ಸಾರಿ ಅವರು ಹೇಳಿಕೊಂಡಿದ್ದಾರೆ. ಆದ್ದರಿಂದ ಹಳ್ಳಿಗರ ಯೋಗಕ್ಷೇಮದಲ್ಲಿ ಅವರಿಗೆ ಇರುವುದು ಬುದ್ಧಿಗಮ್ಯವಾದ ಸಹಾನುಭೂತಿಯಷ್ಟೇ ಅಲ್ಲ; ಹಳ್ಳಿಯ ದುರ್ದೆಶೆಯನ್ನು ಕಣ್ಣಾರೆ ಕಂಡು ಕಣ್ಣೀರಿಟ್ಟಿದ್ದಾರೆ. ರೈತರ ಕಷ್ಟಜೀವನವನ್ನು ನೋಡಿ ಬಹಳ ನೊಂದಿದ್ದಾರೆ. ಹಳ್ಳಿಗಳ ಸ್ಥಿತಿಗತಿಗಳನ್ನು ನೋಡಿ ಅವುಗಳನ್ನು ಹೇಗೆ ಉತ್ತಮಪಡಿಸಬೇಕೆಂದು ಸಂತತವಾಗಿ ಯೋಜನೆ ಮಾಡುತ್ತಿದ್ದಾರೆ. ಅವರ ನೇತೃತ್ವದಲ್ಲಿ ಐದು ವರ್ಷಗಳ ಯೋಜನೆಯೊಂದು ತಯಾರಾಗಿ ಈಗ ಕಾರ್ಯರೂಪಕ್ಕೆ ಬಂದಿದೆ. ಅದರ ಮುಖ್ಯ ಅಂಶಗಳಿವು:

ಸಂಸ್ಥಾನದಲ್ಲಿ ಎಪ್ಪತ್ತೆಂಟು ತಾಲ್ಲೂಕುಗಳಿವೆ. ಒಂದೊಂದು ತಾಲ್ಲೂಕಿಗೂ ಸರಾಸರಿ ಐದು ಹೋಬಳಿಗಳು ಸೇರಿವೆ. ಒಂದು ಹೋಬಳಿಗೆ ಸಾಧಾರಣವಾಗಿ ೪೦ ರಿಂದ ೬೦ರ ವರೆಗೆ ಹಳ್ಳಿಗಳು ಸೇರಿವೆ. ಪ್ರತಿ ವರ್ಷ ಒಂದೊಂದು ಹೋಬಳಿಯನ್ನು ಆರಿಸಿಕೊಂಡು ಆ ಹೋಬಳಿಗೆ ಸೇರಿರುವ ಎಲ್ಲ ಹಳ್ಳಿಗಳಲ್ಲಿಯೂ ಗ್ರಾಮಾಭಿವೃದ್ಧಿ ಕಾರ್ಯವನ್ನು ಕೈಕೊಳ್ಳಬೇಕು. ಒಂದೊಂದು ಹೋಬಳಿಗೆ ಒಂದು ವರ್ಷ ಅವಧಿ. ಒಂದು ವರ್ಷ ಕಾಲದಲ್ಲಿ ಒಂದು ಹೋಬಳಿಯ ಕೆಲಸವನ್ನು ಮುಗಿಸಿ ಮುಂದಿನ ಹೋಬಳಿಯಲ್ಲಿ ಕೆಲಸವನ್ನು ಆರಂಭಿಸಬೇಕು. ಹೀಗೆ ಐದು ವರ್ಷಗಳಲ್ಲಿ ಸಂಸ್ಥಾನದ ಎಲ್ಲ ಹಳ್ಳಿಗಳಲ್ಲಿಯೂ ಅಭಿವೃದ್ಧಿ ಕಾರ್ಯವನ್ನು ನಡಸಿದಂತಾಗುತ್ತದೆ.

ಈ ಕೆಲಸವನ್ನು ಒಂದು ಉದ್ಯೋಗವನ್ನಾಗಿ ತೆಗೆದುಕೊಳ್ಳುವ ಕೆಲಸಗಾರರನ್ನು ಒಂದೊಂದು ಹೋಬಳಿಗೂ ನೇಮಿಸಬೇಕು. ಇವರು ಸರ್ಕಾರಿ ನೌಕರರಲ್ಲ. ಯಾರಿಗೆ ಈ ಕೆಲಸದಲ್ಲಿ ಶ್ರದ್ಧೆ ಉತ್ಸಾಹಗಳಿವೆಯೋ ಅಂತಹವರನ್ನು ಆರಿಸಿ, ಅವರಿಗೆ ತಿಂಗಳಿಗೆ ರೂ. ೩೦ ಸಂಭಾವನೆಯನ್ನು ಕೊಡಲಾಗುವುದು. ಒಂದು ಹೋಬಳಿಗೆ ೫೦-೬೦ ಗ್ರಾಮಗಳ ಮೇಲೆ ಸೇರಿದ್ದರೆ ಅಲ್ಲಿಗೆ ಇಬ್ಬರು ಕೆಲಸಗಾರರನ್ನು ನೇಮಿಸುವುದು. ಅಂತೂ ಸಾಧಾರಣವಾಗಿ ಒಬ್ಬ ಹೋಬಳಿ ಕೆಲಸಗಾರನಿಗೆ ೪೦ ಹಳ್ಳಿಗಳನ್ನು ಹಂಚಿ ಅಲ್ಲಿಯ ಗ್ರಾಮಾಭಿವೃದ್ಧಿಯ ಎಲ್ಲ ಕಾರ್ಯಗಳಿಗೆ ಆತನನ್ನು ಜವಾಬ್ದಾರನನ್ನಾಗಿ ಮಾಡುವುದು. ಈತ ಆ ಹೋಬಳಿಗೆ ಸೇರಿದವನಾಗಿದ್ದು ಅಲ್ಲಿಯೇ ವಾಸಮಾಡಿಕೊಂಡಿರಬೇಕು.

ಈ ಕಾರ್ಯಕ್ಕೆ ಬೇಕಾದ ಹಣ ಅಲ್ಪವಾದ್ದಲ್ಲ; ಏಕೆಂದರೆ ನಡಸಬೇಕಾದ ಕೆಲಸ ಅಷ್ಟು ಅಗಾಧವಾಗಿದೆ. ಸರಕಾರವು ಈ ಕಾರ್ಯಕ್ಕೆ ಪ್ರತಿ ವರ್ಷವೂ ೩ ಲಕ್ಷ ರೂಪಾಯಿಗಳನ್ನು ಖರ್ಚು ಮಾಡುವುದು. ಜೊತೆಗೆ ಗ್ರಾಮ ಪಂಚಾಯಿತಿಗಳ ವರಮಾನವನ್ನು ಪೂರ್ತಿಯಾಗಿ ಇದಕ್ಕೆ ಉಪಯೋಗಿಸಿಕೊಂಡು ಈ ಐದು ವರ್ಷಗಳ ಅವಧಿಯಲ್ಲಿ ಸುಮಾರು ೨॥ ಕೋಟಿ ರೂಪಾಯಿಗಳನ್ನು ಈ ಕಾರ್ಯಕ್ಕೆ ಖರ್ಚುಮಾಡಬೇಕೆಂಬ ಕಾರ್ಯಯೋಜನೆಯನ್ನು ತಯಾರು ಮಾಡಿದೆ.

ಈ ಗ್ರಾಮಾಭಿವೃದ್ಧಿ ಕಾರ್ಯವನ್ನು ಕೈಕೊಳ್ಳಲು ಮುಂದೆ ಬಂದಿರುವ ಕೆಲಸಗಾರರ ಸಂಖ್ಯೆ ೧೩೦. ಇವರಲ್ಲಿ ಪ್ರಜಾಪ್ರತಿನಿಧಿಸಭೆಯ ಸದಸ್ಯರಿದ್ದಾರೆ, ಸ್ಥಳೀಯ ಸಂಸ್ಥೆಗಳ ಅಧ್ಯಕ್ಷ ಉಪಾಧ್ಯಕ್ಷರಿದ್ದಾರೆ, ಆ ಸಂಸ್ಥೆಗಳ ಸದಸ್ಯರಿದ್ದಾರೆ. ಎಲ್ಲ ಕೋಮಿನ ಜನರೂ ಈ ಕೆಲಸಕ್ಕೆ ಮುಂದೆ ಬಂದಿರುವುದು ಬಹಳ ಶ್ಲಾಘ್ಯವಾಗಿದೆ. ಅವರು ತಮ್ಮ ಕೆಲಸವನ್ನು ಮುಂದಿನ ಜುಲೈ ತಿಂಗಳಲ್ಲಿ ಆರಂಭಿಸುವರು. ಅದಕ್ಕೆ ಪೂರ್ವಭಾವಿಯಾಗಿ ಶಿಕ್ಷಣವನ್ನು ಪಡೆಯುವುದಕ್ಕೆ ಬೆಂಗಳೂರಲ್ಲಿ ಈಗ ಸೇರಿದ್ದಾರೆ. ಒಂದು ತಿಂಗಳು ಕ್ಲೋಸ್‌ಪೇಟೆಯ ಗ್ರಾಮಾಭಿವೃದ್ಧಿ ಕೇಂದ್ರದಲ್ಲಿ, ಒಂದು ತಿಂಗಳು ದೊಡ್ಡಬಳ್ಳಾಪುರದ ಕೇಂದ್ರದಲ್ಲಿ, ಒಂದು ತಿಂಗಳು ಬೆಂಗಳೂರಲ್ಲಿ ಶಿಕ್ಷಣವೆಂದು ಗೊತ್ತುಮಾಡಿದೆ.

ಗ್ರಾಮಾಭಿವೃದ್ಧಿಗೆ ಯಾವ ಯಾವ ಕೆಲಸ ಅಗತ್ಯವೋ ಅದೆಲ್ಲವನ್ನೂ ಶಿಕ್ಷಣದಲ್ಲಿ ಸೇರಿಸಿದೆ: ವ್ಯವಸಾಯ, ಕೈಗಾರಿಕೆ, ಸಹಕಾರ, ಗ್ರಾಮನೈರ್ಮಲ್ಯ, ವಿದ್ಯಾಭ್ಯಾಸ, ಪ್ರಚಾರ ಈ ರೀತಿಯಾಗಿ ಶಿಕ್ಷಣದ ಭಾಗಗಳು ವಿಶ್ವವ್ಯಾಪಕವಾಗಿವೆ. ಆಯಾ ಇಲಾಖೆಗಳ ಸಂಬಂಧಪಟ್ಟ ಅಧಿಕಾರಿಗಳೂ ಆಯಾ ಕೆಲಸದಲ್ಲಿ ವಿಶೇಷ ಪರಿಶ್ರಮವುಳ್ಳ ಮಹನೀಯರೂ ಈ ಶಿಕ್ಷಣವನ್ನು ಕೊಡುತ್ತಿದ್ದಾರೆ.

ವಯಸ್ಕರ ಶಿಕ್ಷಣಕ್ಕಾಗಿ ಶಾಲೆಗಳನ್ನು ನಡಸುವುದು, ಪಾಠಶಾಲೆಗೆ ಹೋಗುವ ಮಕ್ಕಳ ಸಂಖ್ಯೆಯನ್ನು ಹೆಚ್ಚಿಸುವುದು, ಪುಸ್ತಕ ಭಂಡಾರಗಳನ್ನು ಸ್ಥಾಪಿಸುವುದು, ಭಾರತವಾಚನ, ಕಾವ್ಯವಾಚನ, ಹರಿಕಥೆ, ಉಪನ್ಯಾಸಗಳು ಇವುಗಳನ್ನು ಏರ್ಪಡಿಸುವುದು, ಹಳ್ಳಿಯ ಪದಗಳನ್ನು ಸಂಗ್ರಹಿಸುವುದು ಇವು ಜ್ಞಾನಪ್ರಸಾರಕ್ಕೆ ಸಂಬಂಧಿಸಿದ ಕಾರ್ಯಗಳು. ಇವುಗಳಿಗೆ ಯೋಜನೆಯಲ್ಲಿ ಸಾಕಷ್ಟು ಪ್ರಾಶಸ್ತ್ಯ ದೊರೆಯಬೇಕಾದದ್ದು ಅತ್ಯಾವಶ್ಯಕ. ಇದರ ಮಹತ್ವವನ್ನು ಸರಕಾರದವರು ಶಿಕ್ಷಣದಲ್ಲಿ ಕೆಲಸಗಾರರಿಗೆ ತಿಳಿಸಿಕೊಡುವರೆಂದು ಆಶಿಸಬಹುದಾಗಿದೆ.

ಶಿಕ್ಷಣವೆಲ್ಲವನ್ನು ಕನ್ನಡದ ಮೂಲಕವೇ ಕೊಡುತ್ತಿರುವರೆಂದು ಕೇಳಿ ನಮಗೆ ಬಹಳ ಸಂತೋಷವಾಯಿತು. ಇಂಗ್ಲಿಷಿನ ಅಭ್ಯಾಸದಿಂದ ನಮಗೆ ಆಗಿರುವ ದೊಡ್ಡ ಅಪಕಾರ ಯಾವುದೆಂದರೆ, ಇಂಗ್ಲಿಷು ಅಭ್ಯಾಸ ಮಾಡಿದವರಿಗೂ, ಇಂಗ್ಲಿಷು ತಿಳಿಯದವರಿಗೂ ಒಂದು ದೊಡ್ಡ ಅಂತರವನ್ನು ಏರ್ಪಡಿಸಿರುವುದು. ಒಂದು ದೃಷ್ಟಿಯಿಂದ ನೋಡಿದರೆ ನಮ್ಮಲ್ಲಿರುವುದು ಎರಡೇ ಜಾತಿ: ಇಂಗ್ಲಿಷ್ ಮಾತನಾಡುವವರು, ಇಂಗ್ಲಿಷ್ ಬಾರದವರು. ಹೀಗಾದ್ದರಿಂದ ಇಂಗ್ಲಿಷ್ ತಿಳಿಯದ ಹಳ್ಳಿಗರ ಕಡೆ ವಿದ್ಯಾವಂತರ ಲಕ್ಷ್ಯ ಬೀಳಬೇಕಾದರೆ ಇಷ್ಟು ದಿನಗಳು ಬೇಕಾಯಿತು. ತಡವಾದರೂ ಚಿಂತೆಯಿಲ್ಲ. ಈಗಲಾದರೂ ಜನಕ್ಕೆ ಇದರ ಅರಿವು ಬಂತಲ್ಲಾ ಎಂದು ನಾವು ಸಂತೋಷಪಡುತ್ತೇವೆ.

ಶ್ರದ್ಧೆ ಉತ್ಸಾಹಗಳಿಂದ ತುಂಬಿದ ಕೆಲಸಗಾರರು, ಅವರಿಗೆ ತಕ್ಕ ಶಿಕ್ಷಣ, ಕೆಲಸಕ್ಕೆ ಬೇಕಾದ ಹಣ, ಎಲ್ಲಕ್ಕೂ ಮಿಗಿಲಾಗಿ ಕೆಲಸವನ್ನು ಸಾಧಿಸಬೇಕೆಂಬ ಮೇಲಿನ ಅಧಿಕಾರಿಗಳ ಸಂಕಲ್ಪ ಇವು ಈ ಯೋಜನೆಯನ್ನು ಯಶಸ್ವಿಯಾಗಿ ನಡೆಸುವುವೆಂದು ನಾವು ಹಾರೈಸುತ್ತೇವೆ.

ಈ ಸಂದರ್ಭದಲ್ಲಿ ಈ ಯೋಜನೆಯ ಸಾಫಲ್ಯ ವಿಷಯದಲ್ಲಿ ನಮ್ಮಲ್ಲಿ ಮೂಡಿರುವ ಒಂದೆರಡು ಸಂಶಯಗಳನ್ನು ಮುಂದಿಡಲು ಬಯಸುತ್ತೇವೆ. ಒಂದು ವರ್ಷದಲ್ಲಿ ೪೦–೫೦ ಹಳ್ಳಿಗಳ ಅಭಿವೃದ್ಧಿ ಕಾರ್ಯ ಮುಗಿಯುವುದು ಸಾಧ್ಯವೇ? ಒಂದಲ್ಲ ಹತ್ತು ವರ್ಷಗಳು ಬೇಕಾದೀತು. ಒಂದು ವೇಳೆ ಎಲ್ಲ ಕೆಲಸವನ್ನೂ ನಡಸಿ ಒಂದು ಹೋಬಳಿಯನ್ನು ಮಾದರಿಯನ್ನಾಗಿ ಮಾಡಿ ಮುಂದಿನ ಹೋಬಳಿಗೆ ಹೋದರೆ, ಹಿಂದಿನ ಹೋಬಳಿಯು ಮೊದಲಿನ ಸ್ಥಿತಿಗೆ ಜಾರದಿರಲು ರಕ್ಷಣೆಗಳೇನು? ಈ ರೀತಿಯ ರಕ್ಷಣೋಪಾಯಗಳಿಲ್ಲದಿದ್ದರೆ ಮಾಡಿದ ಕೆಲಸ ನೀರಿನಲ್ಲಿ ಹೋಮ ಮಾಡಿದಂತಾಗುತ್ತದೆ. ಈ ದೃಷ್ಟಿಯಿಂದ ನೋಡಿದರೆ ಈ ಯೋಜನೆ ಐದು ವರ್ಷಗಳ ಯೋಜನೆಯಲ್ಲ, ಐವತ್ತು ವರ್ಷಗಳ ಯೋಜನೆಯಾಗಬಹುದು. ರಷ್ಯಾ ದೇಶ ಮೊದಲು ಈ ರೀತಿಯ ಯೋಜನೆಗಳನ್ನು ಆರಂಭಿಸಿತು – ಮೊದಲು ಐದು ವರ್ಷಗಳ ಯೋಜನೆ; ಆಮೇಲೆ ಹತ್ತು ವರ್ಷಗಳ ಯೋಜನೆ, ಪುನಃ ಮತ್ತೊಂದು ಹತ್ತು ವರ್ಷಗಳ ಯೋಜನೆ. ಹಾಗೆಯೇ ನಾವು ಇಲ್ಲಿ ಐದು ವರ್ಷಗಳ ಯೋಜನೆಯೊಂದು ಆರಂಭಿಸಿದರೆ ಇದು ಸಾರ್ಥಕವಾಗಲು ಮತ್ತೊಂದು ಹೆಚ್ಚು ಕಾಲದ ಯೋಜನೆಯೊಂದು ತಯಾರು ಮಾಡಬೇಕಾದೀತು. ಆ ರೀತಿಯ ಆವಶ್ಯಕತೆ ತಲೆದೋರುವುದೇ ಪ್ರಗತಿಯ ಲಕ್ಷಣ.

## ಸಂಸ್ಕೃತ ನಾಟಕ ಕಥೆಗಳು

(ಮೊದಲನೆಯ ಭಾಗ)

ಲೇಖಕರು: ಶ್ರೀಮಾನ್ ಎಂ. ಎಸ್. ಸುಬ್ರಹ್ಮಣ್ಯಶಾಸ್ತ್ರಿಗಳು.

ಪುಟಗಳು: viii + ೧೪೪. ಬೆಲೆ ೧–೪–೦.

ಆಂಗ್ಲ ಭಾಷೆಯಲ್ಲಿ ಚಾರಲ್ಸ್ ಮತ್ತು ಮೇರಿ ಲ್ಯಾಂಬ್ ಬರೆದಿರುವ "Tales from Shakespeare" ಎಂಬ ಪುಸ್ತಕವನ್ನು ಷೇಕ್ಸ್ಪಿಯರ್ ಮಹಾಕವಿ ರಚಿಸಿರುವ ಬಹು ಪ್ರೌಢವೂ ಸುಂದರವೂ ಆದ ನಾಟಕಗಳನ್ನು ಓದಿಯಾಗಲೀ ನೋಡಿಯಾಗಲೀ ಆಸ್ವಾದಿಸಿ ಆನಂದ ಪಡೆಯಲಾಗದ ಪ್ರತಿಯೊಬ್ಬ ಆಂಗ್ಲನೂ ತನ್ನ ಜೀವನದಲ್ಲಿ ಒಮ್ಮೆಯಲ್ಲದಿದ್ದರಿನ್ನೊಮ್ಮೆ ಯಾವಾಗಲಾದರೂ ಓದಿಯೇ ಇರುತ್ತಾನೆ. ಈ ಪುಸ್ತಕವನ್ನು ಓದಿದ ಮೇಲೆ ನಾಟಕವನ್ನು ನೋಡಲು ಕುಳಿತುಕೊಂಡಾಗ ಬಹುಮಟ್ಟಿಗೆ ಕಲೆಗಾರನ ಚಾತುರಿಯ ಕಡೆಗೆ ದೃಷ್ಟಿಯಿದ್ದು ರಸಾಸ್ವಾದ ಹೆಚ್ಚಿನ ಮಟ್ಟದಲ್ಲಿ ಅಧಿಕವಾಗಿ ಆಗುವುದೆಂಬುದನ್ನು ನಿಸ್ಸಂದೇಹವಾಗಿ ಹೇಳಬಹುದು. ಷೇಕ್ಸ್ಪಿಯರ್ ತನ್ನ ನಾಟಕದಲ್ಲಿ ಕಥೆಯನ್ನು ಹೇಗೆ ಬೆಳಸಿಕೊಂಡಿದ್ದಾನೆಂಬುದು ಎಲ್ಲರಿಗೂ ಸುಲಭವಾಗಿ ತಿಳಿಯಲೆಂದೇ ಮಾಡಿದ ಪ್ರಯತ್ನ ಚಾರಲ್ಸ್ ಮತ್ತು ಮೇರಿ, ಇವರದು. ಹಾಗೆಯೇ – ಇನ್ನೂ ಹೆಚ್ಚಾಗಿಯೇ – ಸಂಸ್ಕೃತ ನಾಟಕಗಳ ಕಥಾವಸ್ತುವನ್ನು ನಿರೂಪಿಸುವ ಪುಸ್ತಕಗಳೂ ಸಹ ಅಗತ್ಯ. ಸಂಸ್ಕೃತ ಭಾಷೆಯ ಸಂಪರ್ಕ ದಿನದಿನಕ್ಕೆ ಜನದಿಂದ ದೂರವಾಗತೊಡಗಿದೆ; ಸಂಸ್ಕೃತ ಭಾಷೆಯಲ್ಲಿ ರಚಿತವಾದ ನಾಟಕಗಳಂತೂ ಆಡುವವರೂ ನೋಡುವವರೂ ಇಲ್ಲದೆ ಕೆಲವರು ಅಲ್ಲಿ ಇಲ್ಲಿ ಓದಿ ಪಾಠ ಹೇಳಿ ಲಕ್ಷ್ಯಲಕ್ಷಣಗಳ ವಿಮರ್ಶೆಯಲ್ಲಿ ಇದ್ದು ಕಾಲಕ್ರಮೇಣ ಸುಮ್ಮನೆ ಸ್ಮರಣೆಯಲ್ಲೇ ಉಳಿದುಬಿಡುವುವೋ ಎಂಬ ಶಂಕೆ ಏಳುತ್ತದೆ. ಭರತಖಂಡದ ಎಲ್ಲ ಸಂಸ್ಕೃತಿಯು ಆದಿ ಸಂಸ್ಕೃತ ಭಾಷೆಯಲ್ಲಿರುವಂತೆಯೇ, ಇಲ್ಲಿನ ನಾಟಕವೂ ಸಹ ಸಂಸ್ಕೃತ ಭಾಷೆಯಲ್ಲೇ ರಚಿತವಾಯಿತು. ಭಾಸ, ಶೂದ್ರಕ, ಕಾಳಿದಾಸ, ಭವಭೂತಿ, ಹರ್ಷ ಮುಂತಾದ ಉದ್ದಾಮ ಕವಿಗಳು ನಾಟಕಗಳನ್ನು ರಚಿಸಿ ಅಂದಿನ ಜನದ ಮನವನ್ನು ರಂಜಿಸಿದರು. ಹಾಗೆ ರಚಿಸಿದ ನಾಟಕಗಳು ಇಂದೂ ನಾಳೆಯೂ ನಾವು ಕಾಪಾಡಿ ನಡೆಸಿಕೊಂಡು ಬರಬೇಕಾದ ನಿಧಿ. ಮತ್ತೆ ಮತ್ತೆ ಓದಿ ಕೇಳಿ ಆಡಿ ನೋಡಿ ಅವುಗಳಲ್ಲಿನ ಅರ್ಥವನ್ನೂ ಸ್ವಾರಸ್ಯವನ್ನೂ ಸವಿದು ಆನಂದಿಸಬೇಕಾದುದು ನಮ್ಮ ಪಾಲಿಗೆ ಬಂದಿದ್ದರೂ, ಬಹು ಜನರಿಗೆ ಭಾಷೆಯ ಪರಿಚಯವೇ ಇಲ್ಲದಿರುವುದರಿಂದಲೂ, ನಾಟಕದಲ್ಲಿ ಕಥೆಯ ಕಡೆಗೇ ಇರುವ ಒಂದು ಪಕ್ಷಪಾತದಿಂದಲೂ, ಆ ನಾಟಕಗಳಲ್ಲಿ ಚಿತ್ರಿತವಾಗಿರುವ ನಾಯಕ ನಾಯಿಕೆಯರ ಕಥೆಯನ್ನು ಸುಲಭವಾಗಿ ಮನವಟ್ಟು ಮಾಡಿಕೊಡುವ ಪುಸ್ತಕಗಳು ಬೇಕಾಗುತ್ತವೆ. ಅಂತಹ ಪುಸ್ತಕವೊಂದು ಈ "ಸಂಸ್ಕೃತ ನಾಟಕ ಕಥೆಗಳು."

ಇಲ್ಲಿ ಐದು ನಾಟಕಗಳ ಕಥೆಯನ್ನು ಕೊಡಲಾಗಿದೆ: ಮೊದಲನೆಯದು ಭಾಸನ 'ಪ್ರತಿಮಾ'; ಆಮೇಲೆ ಕಾಳಿದಾಸನ 'ಅಭಿಜ್ಞಾನ ಶಾಕುಂತಲ' ಮತ್ತು 'ಮಾಳವಿಕಾಗ್ನಿಮಿತ್ರ'; ಅದಾದ ಮೇಲೆ ಹರ್ಷನ 'ನಾಗಾನಂದ'; ಕೊನೆಯದಾಗಿ ಭಟ್ಟನಾರಾಯಣನ 'ವೇಣೀ ಸಂಹಾರ' – ಹೀಗೆ. ಈ ಕಥೆಗಳು ಸಾಮಾನ್ಯವಾಗಿ ಅಂಕಾನುಸಾರಿಯಾಗಿಯೇ ಇದ್ದರೂ, ಹಲವು ವೇಳೆ ಮೊದಲಲ್ಲಿಯೂ ಮಧ್ಯದಲ್ಲಿಯೂ ಬೇಕಾದ ಸಂದರ್ಭ ಸೂಚನೆಗಳು ಇದ್ದು, ಸುಲಭವಾಗಿಯೂ ಓದಿಕೊಳ್ಳಲು ಅನುಕೂಲವಾಗಿಯೂ ಇವೆ. ಒಂದು ವಿಶೇಷವೇನೆಂದರೆ, ಹಲವು ಬಾರಿ ಕವಿಯ ಮಾತನ್ನು ಬಾಷಾಂತರದಲ್ಲಿ ತಂದು ಕೊಟ್ಟು, ಒಟ್ಟು ಬರವಣಿಗೆಯಲ್ಲೇ ಅಳವಡಿಸಿಕೊಂಡಿರುವುದು. ಇದರಿಂದ ಬಹು ದೊಡ್ಡ ಪ್ರಯೋಜನವೊಂದು ಆಗಬಹುದು – ಈ ಪುಸ್ತಕದಲ್ಲಿ ಕಾಣಬರುವ ಕವಿಯ ಮಾತುಗಳು ಓದುಗನ ಮನಸನ್ನಪಹರಿಸಿ, ಆತನನ್ನು ಮೂಲದಲ್ಲಿಯಾಗಲಿ ಭಾಷಾಂತರದಲ್ಲಿಯಾಗಲೀ ನಾಟಕವನ್ನು ಓದಿಕೊಳ್ಳುವಂತೆ ಪ್ರಚೋದಿಸಬಹುದು. ಹೀಗೆ ಓದುಗರು ಮೂಲದಲ್ಲಿಯಾಗಲೀ ಅನುವಾದದಲ್ಲಿಯಾಗಲೀ ನಾಟಕವನ್ನು ಓದಿ ಆನಂದಪಡುವಂತಾದರೆ ಈ ಚಿಕ್ಕ ಪುಸ್ತಕವನ್ನು ಬರೆದ ಶ್ರೀ. ಶಾಸ್ತ್ರಿಗಳು ತಮ್ಮ ಶ್ರಮ ಸಾರ್ಥಕವಾಯಿತೆಂದು ತಿಳಿಯುವರೆಂಬುದು ಖಂಡಿತ.

ಸಂಸ್ಕೃತ ನಾಟಕಗಳ ಕಥೆಯನ್ನು ಕೊಡುವ ಈ ಪುಸ್ತಕದಲ್ಲಿ ವಾಕ್ಯಗಳು ಸಂಸ್ಕೃತ ಭೂಯಿಷ್ಠವಾಗಿರುವುದು ಸಹಜವಾದರೂ, ತಿಳಿವಿಗೆ ಅಡಚಣೆಯಾಗುವ ಮಹಾ ಸಮಾಸಗಳಾಗಲೀ ಪದಾಡಂಬರವಾಗಲೀ ಇಲ್ಲದೆ ಹಲವು ವೇಳೆ ಅಚ್ಚಗನ್ನಡದ ಪದಗಳು ಬೆರೆತು ಶೈಲಿ ಓದುಗರ ದೃಷ್ಟಿಯಿಂದ ಗ್ರಾಹ್ಯವಾಗಿದೆ. ಒಟ್ಟಿನಲ್ಲಿ ಪುಸ್ತಕವು ಜನಾದರಣೀಯವಾಗಬಹುದೆನ್ನುವುದರಲ್ಲಿ ಸಂದೇಹವಿಲ್ಲ.

೧೩ನೆಯ ಪುಟದ ೨೨–೨೩ನೆಯ ಪಂಕ್ತಿಯಲ್ಲಿ "... ತನ್ನನ್ನು ಶುಲ್ಕಲುಬ್ಧೆಯನ್ನಾಗಿಸಿದ ತನ್ನ ಅಣ್ಣನನ್ನು ನಿಂದಿಸಬೇಕೆಂದು" ಎಂಬುದು ಪ್ರತಿಮಾನಾಟಕದ 'ಶುಲ್ಕಲುಬ್ಧಾನನು ಪ್ರಷ್ಟವ್ಯಾ' ಎಂಬ ವಾಕ್ಯದ ಅರ್ಥದಿಂದ ಬಹುದೂರ; ೪೭ನೆಯ ಪುಟದ ೧೬ನೆಯ ಪಂಕ್ತಿಯ 'ಅದಕ್ಕೆ ನಾವು ಹೊಣೆಯಲ್ಲ' ಎಂಬುದು 'ನಖಲು ತದ್ವಾಚ್ಯಂ ವಧೂ ಬಂಧುಭಿಃ' ಎಂಬುದರ ಭಾವವನ್ನಾಗಲಿ, ಹಾಗೆಯೇ ಅದೇ ಪುಟದ ಕೊನೆಯ ಪಂಕ್ತಿಯಲ್ಲಿ '..... ವಿರುದ್ಧವಾಗಿ ನಡೆಯುವವರು ನಿಂದೆಗೆ ಒಳಗಾಗಬೇಕಾಗುವುದು' ಎಂಬುದು 'ವಾಮಾಃ ಕುಲಸ್ಯಾಧಯಃ' ಎಂಬುದರ ಭಾವವನ್ನಾಗಲೀ ತಾರವು. ೪೭ನೆಯ ಪುಟದ ೨೩ನೆಯ ಪಂಕ್ತಿಯಲ್ಲಿರುವ 'ಸ್ನೇಹಃ ಪಾಪಶಂಕೀ' ಎಂಬ ಮಾತನ್ನು ಭಾಷಾಂತರಿಸಿ ಕೊಡಬೇಕಾಗಿತ್ತು. 'ಜನ್ಮಿಸಿರುವೆನು' (ಪು. ೧೭), 'ಔದ್ಧತ್ಯ ಭಾಷಿತ' (ಪು. ೨೩), 'ಯಯಾತಿಗೆ ಶರ್ಮಿಷ್ಠೆ ಬಹುಮತಿಯಾಗಿ' (ಪು. ೪೩), 'ಜಲಿತವೆಂಬ ನಾಟ್ಯ' (ಪು. ೭೩) 'ದುಶ್ಶೈಲೆ' (ಪು. ೧೬೭), 'ದೃಷ್ಟದ್ಯುಮ್ನ' (ಪು. ೧೨೮, ೧೩೦) – ಮುಂತಾದ ಕೆಲವು ಶಬ್ದಗಳನ್ನು ಸರಿಪಡಿಸಬೇಕಾಗಿದೆ.

ಎಂದಿನಂತೆ ಬೆಂಗಳೂರು ಪ್ರೆಸ್ಸಿನವರು ಪುಸ್ತಕವನ್ನು ಚೆನ್ನಾಗಿ ಮುದ್ರಿಸಿ ಕೊಟ್ಟಿದ್ದಾರೆ; ಅಚ್ಚಿನ ತಪ್ಪುಗಳು ಬಹುವಾಗಿ ಇಲ್ಲವೆಂದೇ ಹೇಳಬಹುದು.

ಒಟ್ಟಿನಲ್ಲಿ ಪುಸ್ತಕ ಬಹು ಅಗತ್ಯವಾಗಿ ಕನ್ನಡಿಗರ ಕೈಸೇರಿ ಕನ್ನಡಿಗರೆಲ್ಲರೂ ಓದಿ ಸಂತೋಷಪಡಬೇಕಾದುದು. ಇನ್ನು ಇತರ ಸಂಸ್ಕೃತ ನಾಟಕಗಳ ಕಥೆಯನ್ನು ಮುಂದೆ ಇನ್ನೈದು ಭಾಗಗಳಲ್ಲಿ ಹೊರತರಬೇಕೆಂಬ ತಮ್ಮ ಇಷ್ಟವನ್ನು ಶ್ರೀ. ಶಾಸ್ತ್ರಿಗಳವರು ಮುನ್ನುಡಿಯಲ್ಲಿ ಸೂಚಿಸಿದ್ದಾರೆ. ಈ ಪುಸ್ತಕದಂತೆಯೇ ಇನ್ನೂ ಹೊರಬೀಳಬೇಕಾಗಿರುವ ಆ ಐದೂ ಸರ್ವಜನ ಪರಿಗ್ರಾಹ್ಯವೂ ಸಂತೋಷದಾಯಕವೂ ಆದಾವೆಂದು ಆಶಿಸುತ್ತೇವೆ.

— ಕೈ

# ಪರಿಷತ್ತಿನ ಸುದ್ದಿ

## ಪರಿಷತ್ತಿನ ಸದಸ್ಯರ ಬೆಳವಣಿಗೆ

(೩೦-೪-೪೩ ರಿಂದ ೬-೫-೪೩ರ ವರೆಗೆ)

**ಸಹಾಯಕ ಸದಸ್ಯರು (೧೦೦ ರೂ.):** ಶ್ರೀ.ಗಳಾದ ೧. ಎಂ. ಎ. ಶ್ರೀನಿವಾಸನ್, ಬಿ.ಎ. ಅವರು, ಕೈಗಾರಿಕೆ ಮತ್ತು ವಾಣಿಜ್ಯ ಶಾಖೆಯ ಮಂತ್ರಿಗಳು, ಬೆಂಗಳೂರು. ೨. ವಿ. ವೆಂಕಟಪ್ಪನವರು, ಎಂ.ಆರ್.ಎ. ತಿಟ್ಟಮಾರನಹಳ್ಳಿ, ಚನ್ನಪಟ್ಟಣ. (ಆಜೀವ ಸದಸ್ಯತ್ವದಿಂದ ಬದಲಾವಣೆ.)

**ಸಾಮಾನ್ಯ ಸದಸ್ಯರು (೬ ರೂ.):** ಶ್ರೀ.ಗಳಾದ ೧. ಜಿ. ಮಾಧವರಾಯರು, ಬಿ.ಎ., ಕಾರ್ಯದರ್ಶಿಗಳು, ಮೈಸೂರು ಸರ್ಕಾರದ ಜೀವವಿಮಾ ಇಲಾಖೆ, ಬಸವನಗುಡಿ, ಬೆಂಗಳೂರು. ೨. ಎಚ್. ರಾಮರಾಜ ಅರಸ್ ಅವರು ಬಿ.ಎ., ಅಸಿಸ್ಟೆಂಟ್ ಕಮಿಷನರು, ಕಂಟ್ರೋಲರ್ಸ್ ಆಫೀಸು, ಬೆಂಗಳೂರು.

**ಸಾಮಾನ್ಯ ಸದಸ್ಯರು (೩ ರೂ.):** ಶ್ರೀ. ಎಂ. ಎಸ್. ಸುಬ್ಬರಾಯರು, ೩೬೨, ವಿಶ್ವೇಶ್ವರಪುರ ಸರ್ಕಲ್, ಬೆಂಗಳೂರು.

### ಗಮಕ ತರಗತಿ

ಎಂದಿನಂತೆ ಈ ವರ್ಷವೂ ಗಮಕ ಕಲಾಭ್ಯಾಸ ತರಗತಿಯನ್ನು ಪರಿಷತ್ತು ನಡಸಲು ಏರ್ಪಡಿಸಿದೆ.

ತರಗತಿ ಇದೇ ತಿಂಗಳು ೧೭ನೆಯ ತಾರೀಖಿನಿಂದ ಪ್ರಾರಂಭವಾಗಿ ೬ ತಿಂಗಳ ಕಾಲ ಪರಿಷನ್ಮಂದಿರದಲ್ಲಿ ನಡೆಯುವುದು. ಮೊದಲ ಮೂರು ತಿಂಗಳಲ್ಲಿ ತಕ್ಕಮಟ್ಟಿನ ಸಂಗೀತಜ್ಞಾನ ಉಂಟುಮಾಡಿ ಕೊಡುವ ಶಿಕ್ಷಣವನ್ನೂ ಉಳಿದ ಮೂರು ತಿಂಗಳಲ್ಲಿ ಗಮಕ ಶಿಕ್ಷಣವನ್ನೂ ಕೊಡುವಂತೆ ಏರ್ಪಾಡಾಗಿದೆ.

ತರಗತಿಗಳು ಸಾಮಾನ್ಯವಾಗಿ ಎಲ್ಲರಿಗೂ ಅನುಕೂಲವಾದ ವೇಳೆಯಲ್ಲಿ ನಡೆಯುವಂತೆ ಏರ್ಪಡಿಸಲಾಗುವುದು.

ತರಗತಿಗೆ ಸೇರಲಿಚ್ಛಿಸುವವರು ಕನ್ನಡ ಭಾಷೆಯಲ್ಲಿ ಪರಿಶ್ರಮ ಹೊಂದಿದವರಾಗಿರಬೇಕು; ಮತ್ತು ಸ್ವಲ್ಪಮಟ್ಟಿಗಾದರೂ ಸಂಗೀತ ಜ್ಞಾನ, ರಾಗಜ್ಞಾನ, ತಾಳಜ್ಞಾನಗಳನ್ನು ಪಡೆದವರಾಗಿರಬೇಕು.

ತರಗತಿಗೆ ಸೇರಿದವರು ತಿಂಗಳಿಗೆ ಒಂದು ರೂಪಾಯಿನಂತೆ ತೆರ ಕೊಡಬೇಕು.

ತರಗತಿಗೆ ಸೇರಬಯಸುವವರು ತಮ್ಮ ಅಪೇಕ್ಷಾ ಪತ್ರವನ್ನು ತೆರದ ಹಣದೊಂದಿಗೆ ಇದೇ ತಿಂಗಳು **೧೫ನೆಯ ತಾರೀಖಿನೊಳಗಾಗಿ ಪರಿಷತ್ತಿನ** ಕಚೇರಿಗೆ ತಲಪುವಂತೆ ಬರೆದು ಕಳಿಸಬೇಕು. ಅಪೇಕ್ಷಾ ಪತ್ರದಲ್ಲಿ ಕೆಳಗಿನ ವಿವರಗಳನ್ನು ತಿಳಿಸಿರಬೇಕು.

೧. ಹೆಸರು, ೨. ವಯಸ್ಸು, ೩. ಉದ್ಯೋಗ, ೪. ಇರುವ ಭಾಷಾ ಸಾಮರ್ಥ್ಯ, ೫. ಸಂಗೀತ ಜ್ಞಾನ, ೬. ವಿಶೇಷಾಂಶಗಳು, ೭. ವಿಳಾಸ.

ಕನ್ನಡ ಸಾಹಿತ್ಯದ ಸ್ವಾರಸ್ಯವನ್ನು ಜನರಿಗೆ ಅನುಭವ ಮಾಡಿಸಿ ಕೊಡುವುದಕ್ಕೂ ಕನ್ನಡದ ಅಭಿಮಾನವನ್ನು ಬೆಳಸುವುದಕ್ಕೂ ಈ ತರಗತಿ ಅತ್ಯಂತ ಉಪಯುಕ್ತವಾದ ಸಾಧನವೆಂದು ಪರಿಷತ್ತು ಭಾವಿಸಿದೆ. ಎಲ್ಲ ಕನ್ನಡಿಗರೂ ಈ ವಿಚಾರಕ್ಕೆ ತಕ್ಕ ಗಮನ ಕೊಟ್ಟು ಈ ಏರ್ಪಾಟು ಯಶಸ್ವಿಯಾಗುವಂತೆ ಸಹಕರಿಸಬೇಕೆಂದು ಪರಿಷತ್ತು ಬೇಡುತ್ತದೆ.

### ಕನ್ನಡ ಸಾಹಿತ್ಯ ಪರೀಕ್ಷೆಗಳು

'ಜಾಣ' ಮತ್ತು 'ಕಾವ' ತರಗತಿಗಳು ಇದೇ ತಿಂಗಳು ೧೭ನೆಯ ತಾರೀಖು ಸೋಮವಾರ ಪ್ರಾರಂಭವಾಗಿ ಪ್ರತಿದಿನವೂ ಸಂಜೆ ೬ ರಿಂದ ೭ರ ವರೆಗೆ ನಡೆಯುವುವು. ತರಗತಿಗಳಿಗೆ ಸೇರಬಯಸುವ ವಿದ್ಯಾರ್ಥಿಗಳು ತಮ್ಮ ಅಪೇಕ್ಷೆ ಪತ್ರವನ್ನು ೧೦ನೆಯ ತಾರೀಖಿನೊಳಗಾಗಿ ಪರಿಷತ್ತಿನ ಕಚೇರಿಗೆ ತಲಪಿಸಬೇಕು.

### ಉಪನ್ಯಾಸ

ತಾ|| ೮-೫-೧೯೪೩ನೆಯ ಶನಿವಾರ ಸಂಜೆ ೬-೩೦ಕ್ಕೆ ಪರಿಷನ್ಮಂದಿರದಲ್ಲಿ ಶ್ರೀ. ಬಿ. ಲಕ್ಷ್ಮೀನಾರಾಯಣರಾವ್, ಬಿ.ಎ., ಅವರಿಂದ "ತ್ಯಾಗರಾಜ ಹೃದಯ" ಎಂಬ ವಿಷಯ ಕುರಿತು ಭಾಷಣ ನಡೆಯುತ್ತೆ.

## ಯುವಜನ ಸಮ್ಮೇಳನದಲ್ಲಿ ಆದ ನಿರ್ಣಯಗಳು

೧. ಕನ್ನಡ ಕಾವ್ಯಗಾಯನ ಕಲೆಯ ಅಭ್ಯಾಸ ಮತ್ತು ಪ್ರೋತ್ಸಾಹಕ್ಕಾಗಿ ನಾಡಿನ ಯುವಕ ಯುವತಿಯರೆಲ್ಲರೂ ಕಂಕಣ ಬದ್ಧರಾಗಬೇಕು. ಈ ಕಲೆಯನ್ನು ಹಳ್ಳಿಹಳ್ಳಿಯಲ್ಲೂ ಪ್ರಸಾರ ಮಾಡಬೇಕು. ಕನ್ನಡ ಸಾಹಿತ್ಯದ ಸಂಕಲನ ಮಾಡುವಾಗ ಅಲ್ಲದೆ ಸಾಹಿತ್ಯ ಚರಿತ್ರೆಯನ್ನು ಬರೆಯುವಾಗ ಬ್ರಾಹ್ಮಣ, ಬ್ರಾಹ್ಮಣೇತರ ಜೈನ, ವೀರಶೈವ ಮುಂತಾದ ಮತಭೇದ ಮಾಡಬಾರದಾಗಿ ಈ ಸಮ್ಮೇಳನ ನಿರ್ಣಯಿಸುತ್ತದೆ.

೨. ಈಗ ಪ್ರಕಟವಾದ ಅಥವಾ ಆಗಲಿರುವ ಕನ್ನಡ ಗ್ರಂಥಗಳು ಕ್ರಾಂತಿಕಾರಕ ಸಾಹಿತ್ಯವೇ ಅಲ್ಲವೇ ಎಂಬುದನ್ನು ವಿಮರ್ಶಿಸುವ ಹಕ್ಕನ್ನು ಮೈಸೂರು ಸರ್ಕಾರದವರು ಕನ್ನಡ ಸಾಹಿತ್ಯ ಪರಿಷತ್ತಿಗೇ ಕೊಡಬೇಕಾಗಿ ಈ ಸಮ್ಮೇಳನ ಸೂಚಿಸುತ್ತದೆ.

೩. ಹಿಂದೀ ಸಾಹಿತ್ಯೋತ್ಸವ ಕಾಲಗಳಲ್ಲಿ ಕನ್ನಡ ಸಾಹಿತ್ಯ ದಿನಾಚರಣೆಯನ್ನು ಏರ್ಪಡಿಸಿ ಸುಪ್ರಸಿದ್ಧ ಕನ್ನಡ ಸಾಹಿತಿಗಳ ಉಪನ್ಯಾಸಗಳನ್ನೂ, ಕನ್ನಡ ಸಾಹಿತ್ಯೋತ್ಸವ ಕಾಲಗಳಲ್ಲಿ ಹಿಂದೂಸ್ಥಾನದ ಎಲ್ಲಾ ಪ್ರಧಾನ ಸಾಹಿತ್ಯಗಳ ದಿನಾಚರಣೆಯನ್ನು ಮಾಡಿ, ಆಯಾ ಸಾಹಿತ್ಯಗಳಲ್ಲಿ ಸುಪ್ರಸಿದ್ಧ ಸಾಹಿತಿಗಳ ಉಪನ್ಯಾಸಗಳನ್ನೂ ಏರ್ಪಡಿಸಿ, ಬೇರೆ ಬೇರೆ ಸಾಹಿತ್ಯಗಳಿಗೂ ಕನ್ನಡ ಸಾಹಿತ್ಯಕ್ಕೂ ಮಧುರ ಬಾಂಧವ್ಯವನ್ನೂ ಬೆಳಸಬೇಕೆಂಬುದಾಗಿ ಈ ಸಮ್ಮೇಳನ ನಿರ್ಣಯಿಸುತ್ತದೆ.

೪. ನಮ್ಮ ನಾಡಿನಲ್ಲಿ ಅನೇಕ ಕನ್ನಡ ಸಂಘಗಳನ್ನು ಸ್ಥಾಪಿಸಿ ಸರ್ಕಾರದ ಅಧಿಕಾರ ವರ್ಗದವರು ಶ್ರಮಿಸಿದ್ದಾರೆ ಮತ್ತು ಶ್ರಮಿಸುತ್ತಲಿದ್ದಾರೆ. ಜನತೆಯ ಸೇವೆಯ ಪವಿತ್ರ ದೃಷ್ಟಿಯೊಂದನ್ನೇ ಹೊಂದಿ ತಾಯ್ನುಡಿ ಸೇವೆಯಲ್ಲಿ ನೆರವಾಗಿರುವ ಮತ್ತು ನೆರವಾಗುತ್ತಲಿರುವ ಅಧಿಕಾರ ವರ್ಗದವರಿಗೆ ಸಮ್ಮೇಳನ ವಂದನೆಗಳನ್ನು ಸಮರ್ಪಿಸುತ್ತದೆ.

ಅಧಿಕಾರ ವರ್ಗದವರಿಗೆ ಜನಸಹಾಯ ಧನಸಹಾಯವಿರುವುದರಿಂದ ಪ್ರತಿ ಜಿಲ್ಲಾ ತಾಲ್ಲೂಕು, ಹೋಬಳಿಗಳಲ್ಲೂ ಕರ್ನಾಟಕ ಸಂಘಗಳು ಏರ್ಪಡಲು ಅವರು ಇನ್ನೂ ಹೆಚ್ಚಾಗಿ ಸಾಹಿತ್ಯ ಸೇವಕರಿಗೆ ನೆರವಾಗಬೇಕೆಂದು ಅವರನ್ನು ಈ ಸಮ್ಮೇಳನ ಪ್ರಾರ್ಥಿಸುತ್ತದೆ.

೫. ಮೈಸೂರು ವಿಶ್ವವಿದ್ಯಾನಿಲಯದ ಆರ್ಟ್ಸ ಶಾಖೆಯ ಇಂಟರ್‌ಮಿಾಡಿಯಟ್ ತರಗತಿಯಲ್ಲಿ ಮಾತ್ರ ವಿಜ್ಞಾನದ ವಿದ್ಯಾರ್ಥಿಗಳಿಗೆ ಇಲ್ಲದ ಕನ್ನಡ ಎರಡನೆಯ ಪತ್ರಿಕೆ (ಹಳೆಗನ್ನಡದ ಕಾವ್ಯ) ಇದ್ದು ಮುಂದೆ ಬಿ.ಎ. ತರಗತಿಯಲ್ಲಿ ವಿಜ್ಞಾನದ ವಿದ್ಯಾರ್ಥಿಗಳು ಓದುವಷ್ಟೇ ಭಾಗವನ್ನು ಇಟ್ಟಿರುವುದು ಯಾವ ರೀತಿಯಿಂದಲೂ ಫಲಕಾರಿಯಲ್ಲ. ಆದುದರಿಂದ ಈ ಸಮ್ಮೇಳನವು ಬಿ.ಎ. ತರಗತಿಗೂ ಕನ್ನಡ ಎರಡನೆಯ ಪತ್ರಿಕೆಯಿಟ್ಟು ಹಳೆಗನ್ನಡದ ವ್ಯಾಸಂಗವು ಫಲಕಾರಿಯಾಗುವಂತೆ ಮಾಡಬೇಕೆಂದು ವಿಶ್ವವಿದ್ಯಾನಿಲಯದ ಅಧಿಕಾರಿಗಳನ್ನು ಬೇಡುತ್ತದೆ.

### ಅಖಿಲ ಕರ್ನಾಟಕ ಮಕ್ಕಳ ಕೂಟ, ಬೆಂಗಳೂರು

ಈ ಸಂಸ್ಥೆಯ ಆಶ್ರಯದಲ್ಲಿ ಆರನೆಯ ಅಖಿಲ ಕರ್ನಾಟಕ ಮಕ್ಕಳ ಸಮ್ಮೇಳನ ೧೯೪೩ನೆಯ ಮೇ ತಿಂಗಳು ೧೩ನೆಯ ಗುರುವಾರ ಮತ್ತು ೧೪ನೆಯ ಶುಕ್ರವಾರ ಶ್ರೀ ಶಂಕರಯ್ಯನವರ ಸಭಾಮಂದಿರದಲ್ಲಿ ಕುಮಾರ ಡಿ. ದೇವಪ್ಪ ಈತನ ಅಧ್ಯಕ್ಷತೆಯಲ್ಲಿ ನಡೆಯುವುದು. ಮೈಸೂರು ಸಂಸ್ಥಾನದ ಸ್ಥಳೀಯ ಸಂಸ್ಥೆಗಳ ಮಂತ್ರಿಗಳಾದ ಶ್ರೀಮಾನ್ ಎಚ್. ಬಿ. ಗುಂಡಪ್ಪಗೌಡರವರು ಈ ಸಮ್ಮೇಳನದ ಪ್ರಾರಂಭೋತ್ಸವವನ್ನು ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ೧೨ನೆಯ ಬುಧವಾರ ಬೆಳಗ್ಗೆ ೯-೩೦ ಗಂಟೆಗೆ ನೆರವೇರಿಸಿಕೊಡುವರು.

೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

### ಭಗವದ್ಗೀತೆಯ ಭವ್ಯತೆ
(೧೯೩ನೆಯ ಪುಟದಿಂದ)

ಗೀತೆಯಲ್ಲಿ ನಿಷ್ಕಾಮ ಕರ್ಮಯೋಗದಂಥ ಒಂದೇ ಮಾರ್ಗವು ಪ್ರತಿಪಾದಿಸಲ್ಪಟ್ಟಿದೆಯೆಂದು ಸಾಧಿಸುವವರ ವಿಚಾರಸರಣಿಯು ಸಾಧುವಾದುದಲ್ಲ. ಗೀತೆಯು ಅವರವರ ಯೋಗ್ಯತೆಯಂತೆ ಅವರವರಿಗೆ ಹಾದಿಯನ್ನು ತೋರಿಸುತ್ತದೆ. ಅದು ಎಲ್ಲರಿಗೂ ಅಧಿಕಾರ ಭೇದದಂತೆ ದಾರಿಯನ್ನು ತೋರಿಸುತ್ತದೆ.

### ಗೀತೆ ಮತ್ತು ವಿಶ್ವಧರ್ಮ

ವಿಶ್ವಧರ್ಮದ ಆದರ್ಶಗ್ರಂಥವಾಗುವ ಯೋಗ್ಯತೆಯು ಭಗವದ್ಗೀತೆಯಲ್ಲಿದೆ. ಗೀತಾ ಧರ್ಮವು ಬರೇ ಹಿಂದೂ ಧರ್ಮದಿಂದಷ್ಟೇ ಮರ್ಯಾದಿತವಾಗಿಲ್ಲ. ಜಗತ್ತಿನೊಳಗಿನ ವಿವಿಧ ಮನೋವೃತ್ತಿಗಳ, ಭಿನ್ನ ಸಂಸ್ಕೃತಿಗಳ ಜನರನ್ನು ಭೇದ ಭಾವವಿಲ್ಲದೆ ಗೀತಾ ಧರ್ಮವು ಆತ್ಮೀಯತೆಯಿಂದ ಆಹ್ವಾನಿಸುತ್ತದೆ. ಯಾರ ಉಪಾಸನೆಯನ್ನು ಮಾಡಿದರೂ ಅದು ಗೀತೆಗೆ ಮಾನ್ಯವಿದೆ. ಯಾವ ವಿಭೂತಿಯಲ್ಲಿ ಸಾಧಕನ ಶ್ರದ್ಧೆ ಇದೆಯೋ, ಅವನಲ್ಲಿಯೇ ಅದನ್ನು ಸ್ಥಿರಗೊಳಿಸಲು ಗೀತೆಯು ಅಡ್ಡಬರುವುದಿಲ್ಲ. **ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ। ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಮ್॥** ಎಂದು ಗೀತೆಯು ಹೇಳುತ್ತದೆ.

ಅರವಿಂದಘೋಷರು ಗೀತಾಧರ್ಮದ ವಿಶ್ವವ್ಯಾಪಕತ್ವವನ್ನು ಕುರಿತು ಅನ್ನುವುದೇನೆಂದರೆ:-"ಶ್ರೀಕೃಷ್ಣನು ಗೀತೆಯಲ್ಲಿ ಸತ್ಯಯುಗದ ಆಗಮನಕ್ಕೆ ಉಪಯುಕ್ತವಾದ ಕೆಲವೊಂದು ಜ್ಞಾನವನ್ನೂ, ಕರ್ಮದ ಪ್ರಣಾಲಿಯನ್ನೂ ಬಿಟ್ಟು ಹೋಗಿರುವನು. ಕಲಿಯುಗಕ್ಕೆ ಒಳಪಟ್ಟ ಸತ್ಯಯುಗದ ಅಂತರ್ದಶೆಯ ಕಾಲದಲ್ಲಿ ಗೀತಾಧರ್ಮದ ವಿಶ್ವವ್ಯಾಪಿಯಾದ ಪ್ರಚಾರ ಆಗುವುದು ಅವಶ್ಯವು. ಆ ಕಾಲವು ಇಂದು ಬಂದಿರುವ ಕಾರಣ ಗೀತೆಯ ಬಗ್ಗೆ ಆದರವು ಕೇವಲ ಜ್ಞಾನಿ ಪಂಡಿತರುಗಳಲ್ಲಿ ಸೀಮಾಬದ್ಧವಾಗಿರದೆ, ಸಾಮಾನ್ಯ ಜನತೆಯಲ್ಲಿಯೂ ಪಾಶ್ಚಾತ್ಯ ದೇಶಗಳಲ್ಲಿಯೂ ಹಬ್ಬಿಗೊಂಡಿದೆ."

ಗಾಂಧೀಜಿಯವರೂ ಅದೇ ಅಭಿಪ್ರಾಯದವರಿದ್ದಾರೆ. ಅವರು ೩೦ನೆಯ ಇಸವಿಯಲ್ಲಿ ಕಾರವಾರಕ್ಕೆ ಆಗಮಿಸಿದ್ದಾಗ ಅವರ ಗೀತಾ ಬೋಧೆಯ ನಾನು ಮಾಡಿದ ಕನ್ನಡ ಅನುವಾದವನ್ನು ಕುರಿತು ಅವರೊಡನೆ ಮಾತನಾಡಲಿಕ್ಕೆ ಹೋದಾಗ, "The reading of the Gita will be Universal" ಗೀತೆಯ ವಾಚನವು ವಿಶ್ವವ್ಯಾಪಿಯಾಗುವುದು ಎಂದು ಅಪ್ಪಣೆ ಕೊಡಿಸಿದರು.

### ಗೀತೆ ಉತ್ತಮ ಸಾಹಿತ್ಯ

ಮನುಷ್ಯನ ಪರೀಕ್ಷೆಯನ್ನು ಅವನ ಬಾಹ್ಯಸ್ವರೂಪದಿಂದ ಮಾಡದೆ ಅವನಲ್ಲಿರುವ ಸದ್ಗುಣಗಳಿಂದಲೇ ಮಾಡುವುದಿರುತ್ತದಷ್ಟೆ! ಹಾಗೆಯೇ ಗ್ರಂಥದ ಪರೀಕ್ಷಣವನ್ನು ಕೂಡ ಅದರ ಭಾಷಾ ಶೈಲಿಯ ಮೇಲಿಂದಲೇ ಮಾಡದೆ ಅದರೊಳಗೆ ಪ್ರತಿಪಾದಿಸಲ್ಪಟ್ಟ ವಿಚಾರ ಸೌಷ್ಟವದ ಮೇಲಿಂದಲೇ ಮಾಡುವುದಿರುತ್ತದೆ. ಆದರೆ ಗುಣಕ್ಕಿಂತಲೂ ರೂಪದಿಂದಲೇ ನಾವು ಹೇಗೆ ಮೊದಲು ಆಕರ್ಷಿಸಲ್ಪಡುತ್ತೇವೋ, ಅದೇ ರೀತಿಯಲ್ಲಿ ಗ್ರಂಥದ ವಿಚಾರ ಸರಣಿಗಿಂತಲೂ ಅದರ ಭಾಷಾ ಶೈಲಿಯಿಂದಲೇ ನಾವು ಮೊದಲು ಮೋಹಿತರಾಗುತ್ತೇವೆ. ವಿಚಾರಗಳು ಸರ್ವೋತ್ಕೃಷ್ಟವಾಗಿದ್ದರೂ ಭಾಷೆಯು ಮೋಹಕವಾಗಿಲ್ಲದಿದ್ದರೆ ಆ ಗ್ರಂಥಕ್ಕೆ ವಾಚಕರು ಕಡಮೆ.

ಭಗವದ್ಗೀತೆಯು ಆಧ್ಯಾತ್ಮಿಕ ಗ್ರಂಥವಾಗಿದ್ದರೂ ಅದರ ಭಾಷಾ ಶೈಲಿಯು ನಮ್ಮನ್ನು ಮೊದಲು ಆಕರ್ಷಿಸುತ್ತದೆ. ಅದರ ಸಂಸ್ಕೃತ ಭಾಷೆಯು ಸರಲವೂ, ಚಿತ್ತಾಕರ್ಷಕವೂ, ಆಹ್ಲಾದದಾಯಕವೂ ಆಗಿರುವುದಲ್ಲದೆ ಓಜಸ್ವಿಯೂ ಪ್ರಸಾದಯುಕ್ತವೂ ಆಗಿರುವುದು. ಭಗವದ್ಗೀತೆಯಂಥ ತತ್ವಜ್ಞಾನಕ್ಕೆ ಸಂಬಂಧಿಸಿದಗ್ರಂಥವು ಇಷ್ಟು ರೋಚಕವಾದ ಶೈಲಿಯಲ್ಲಿ ಬರೆಯಲ್ಪಟ್ಟದ್ದು ಜಗತ್ತಿನ ವಾಙ್ಮಯದಲ್ಲಿಯೇ ಅಪೂರ್ವವಾದುದು. ಕೆಲವು ಕಡೆಯಲ್ಲಂತೂ ಗೀತೆಯ ಭಾಷಾ ಪ್ರವಾಹವು ಗಂಗಾನದಿಯ ಪ್ರವಾಹದಂತೆ ಗಂಭೀರವೂ, ನಿರ್ಮಲವೂ, ಅಸ್ಖಲಿತವೂ ಆಗಿರುತ್ತದೆ.

ಮೊದಲನೆಯ ಅಧ್ಯಾಯದೊಳಗಿನ ಅರ್ಜುನನ ಆತ್ಮಸ್ಥಿತಿಯ ವರ್ಣನೆಯೂ, ಯುದ್ಧವನ್ನು ಮಾಡದಿರಲಿಕ್ಕೆ ಅವನು ಹೇಳಿದ ಕಾರಣ ಪರಂಪರೆಯೂ, ಎರಡನೆಯ ಅಧ್ಯಾಯದೊಳಗಿನ ಸ್ಥಿತಪ್ರಜ್ಞನ ವರ್ಣನೆಯೂ, ಮೂರನೆಯ ಅಧ್ಯಾಯದೊಳಗಿನ ಯಜ್ಞಚಕ್ರದ ವರ್ಣನೆಯೂ, ಒಂಭತ್ತನೇ ಮತ್ತು ಹನ್ನೆರಡನೆಯ ಅಧ್ಯಾಯದೊಳಗಿನ ಭಕ್ತನ ವರ್ಣನೆಯೂ, ಹದಿನಾಲ್ಕನೇ ಅಧ್ಯಾಯದೊಳಗಿನ ಗುಣಾತೀತನ ವರ್ಣನೆಯೂ ಭಾಷಾ ಸೌಂದರ್ಯದ ದೃಷ್ಟಿಯಿಂದ ಅಪ್ರತಿಮವಾಗಿವೆಯೆಂದು ಹೇಳಬಹುದು. ಭಾಷೆಯು ಎಲ್ಲಿಯೂ ಕೃತ್ರಿಮವಾಗಿರದೆ ಸಹಜಾಲಂಕಾರಯುಕ್ತವಾಗಿ ಮೆರೆಯುತ್ತದೆ. ಉಪಮಾರೂಪಕಾದಿ ಅಲಂಕಾರಗಳು ಸಹಜವಾಗಿ ಭಾಷೆಯ ಹೊನಲಿನಲ್ಲಿ ಸೇರಿಕೊಂಡಿರುವುದರಿಂದ ಹೆಚ್ಚು ಮನಮೋಹಕವಾಗಿ ಕಾಣುತ್ತವೆ.

ಗೀತೆಯಲ್ಲಿ ಶಾಂತರಸವೇ ಪ್ರಧಾನವಾಗಿದ್ದರೂ ವೀರರಸವೂ ಅಲ್ಲಲ್ಲಿ ತಲೆದೋರುತ್ತದೆ. ಹನ್ನೊಂದನೆಯ ಅಧ್ಯಾಯದೊಳಗಿನ ವರ್ಣನೆಯು ರೌದ್ರ, ಅದ್ಭುತ, ಭಯಾನಕ ರಸಗಳ ಉತ್ತಮ ಮಾದರಿಯೆಂದು ತೋರಿಸಬಹುದು.

ಉತ್ತಮ ಸಾಹಿತ್ಯದಲ್ಲಿರಬೇಕಾದ ಉತ್ಕೃಷ್ಟ ಕಥನ ಸರಣಿಯ ಯಾವತ್ತೂ ಗುಣಗಳನ್ನು ನಾವು ಗೀತೆಯಲ್ಲಿ ಕಾಣಬಹುದು. ಉಪಾಧ್ಯಾಯರು ಗಹನ ವಿಷಯಗಳನ್ನು ಹೇಗೆ ಕ್ರಮಕ್ರಮವಾಗಿ ತಿಳಿಸಿ ಹೇಳುತ್ತಾರೋ, ಅದೇ ರೀತಿಯಲ್ಲಿ ಗೀತೆಯೊಳಗಿನ ಸಿದ್ಧಾಂತಗಳು ಕ್ರಮಕ್ರಮವಾಗಿ ಅರ್ಜುನನಿಗೆ ತಿಳಿಯುವಂತೆ ಸೊಗಸಾಗಿ ವಿವರಿಸಲಾಗಿವೆ.

ಭಗವದ್ಗೀತೆಯು ಒಂದು ಉತ್ತಮ ಕಾವ್ಯ. ಒಂದು ಉದಾತ್ತವಾದ ಜಗತ್ತಿನ ವಾಙ್ಮಯದಲ್ಲಿಯೇ ಅಪೂರ್ವವಾದ ಸನ್ನಿವೇಶವನ್ನು ಆಧರಿಸಿ ರಚಿತವಾದ ಕಾವ್ಯವೇನೋ ನಿಜ. ಆದರೂ ಸಾಹಿತ್ಯ ಭಕ್ತರಿಗೆ ಇಲ್ಲೊಂದು ಎಚ್ಚರಿಕೆಯನ್ನೇ ಕೊಡುವುದು ಅವಶ್ಯ. ಗೀತೆಯು ಕೇವಲ ಕಾವ್ಯವಲ್ಲ. ಅದು ಧರ್ಮಕಾವ್ಯ. ಕಾವ್ಯವು ಭವ್ಯ ಜೀವನವನ್ನು ತೋರಿಸಬಹುದು; ಆದರೆ ಅಂತಹ ಜೀವನವನ್ನು ಆಚರಣೆಯಲ್ಲಿ ತರಿಸುವ ಶಕ್ತಿಯು ಅದಕ್ಕಿಲ್ಲ. ಚೋದನಾಶಕ್ತಿಯು ಧರ್ಮದಲ್ಲಿದ್ದಂತೆ ಕಾವ್ಯದಲ್ಲಿಲ್ಲ. ಕಾವ್ಯವು ಪೂರ್ಣತೆಗೆ ಮುಟ್ಟಿದ ಕಡೆಯಿಂದಲೇ ಧರ್ಮವು ಪ್ರಾರಂಭವಾಗುತ್ತದೆ. Poetry cannot save the soul but makes it worth saving. Poetry enriches the treasures of the heart and religion offers them at the feet of God. ಇರಲಿ.

ಧರ್ಮಾತ್ಮರಾದ ಪಂಡಿತ ಮಾಲವೀಯರು ಅನ್ನುತ್ತಾರೆ:— ನನಗೆ ತಿಳಿದಷ್ಟರ ಮಟ್ಟಿಗೆ ಜಗತ್ತಿನ ಸಾಹಿತ್ಯದಲ್ಲಿ ಹಿಂದುಗಳಿಗಷ್ಟೇ ಅಲ್ಲ, ಇಡೀ ಮಾನವ ಜಾತಿಗೇ ಧರ್ಮ ಭಾಂಡಾರವಾಗಬಹುದಾಗಿರುವ ಭವ್ಯ ಗ್ರಂಥವು ಭಗದ್ಗೀತೆಯೊಂದೇ.

## ಧಾರವಾಡದಲ್ಲಿ ಗಮಕ ಶಿಕ್ಷಣ ವರ್ಗ
## ಕುಗ್ಗಿತೇ ಮುಗ್ಗಿತೇ?

[ ಕುಮಾರಿ ಮುದವೀಡು ಸಾವಿತ್ರಿ, ಧಾರವಾಡ ]

ಶ್ರೀಮಾನ್ ಅಸುಂಡಿ ಅನಂತರಾಯರ ಧರ್ಮ ಬುದ್ಧಿಯ ಫಲವಾಗಿ ಈ ಊರಲ್ಲಿ ಎರಡು ವರ್ಷ ಗಮಕ ಶಿಕ್ಷಣ ವರ್ಗ ನಡಯಿತು. ನನ್ನ ಬಂಧುಭಗಿನಿಯರನೇಕರು ಎರಡೂ ಸಾರೆ ತುಸು ಇದರ ಉಪಯೋಗವನ್ನು ಪಡೆದರು. ಹೋದ ವರ್ಷ ಪರಿಷತ್ತಿನಿಂದ ಮತ್ತೆ ಇಲ್ಲಿ ವರ್ಗ ನಡಸಲಾಗುವದೆಂದೂ, ಗುರುಗಳಾದ ಶ್ರೀ. ಎಸ್. ಜಿ. ಬಿಂದೂರಾಯರೇ ಬರುವರೆಂದೂ ದಟ್ಟಸುದ್ದಿ ಹರಡಿತ್ತು. ನಡುವೆ ನಮ್ಮ ಕ. ವಿ. ವ. ಸಂಘವೂ ಪರಿಷತ್ತೂ ಜಂಟಿಯಾಗಿ ಇಲ್ಲಿಯ

ಗಾಯಕರೊಬ್ಬರಿಂದಲೇ ವರ್ಗವನ್ನು ನಡಿಸುವರೆಂಬ ವರ್ತಮಾನವೂ ಹಬ್ಬಿತ್ತು. ಆದರೆ ಕೊನೆಗೆ ಯಾವುದೂ ಆಗದೆ ಇಡಿಯ ವರ್ಷವೇ ಹೋಯಿತು. ಈಗಲೂ ಇದರ ಪ್ರಸ್ತಾಪವೆಲ್ಲಿಯೂ ಕೇಳುವದಿಲ್ಲ.

ಇತ್ತ ಕಡೆಯ ಕನ್ನಡ ಸಂಸ್ಕೃತಿಯ ಕುರುಹುಗಳು ಬಲುಮಟ್ಟಿಗೆ ನಶಿಸಿರುವವಾದರೂ ಈಗಿನ ಕನ್ನಡ ತಿಳಿವಿನ ಹೊಸ ಬಾಳಿನಲ್ಲಿ ಹೊಸ ಜೀವನದ ನಸುಕಳೆಯಾದರೂ ತುಸುಮಟ್ಟಿಗೆ ಮಿಸುಕುತ್ತಿರುವದು ಕಂಗಳಿಗೆಸೆಯುತ್ತಿದೆ. ಆದರೆ ಸಂಗೀತದ ಮಾತು ಹೀಗಿಲ್ಲ. ಈಗ ೫೦ ವರ್ಷಗಳಿಂದಲೂ ಇಲ್ಲಿ ಕರ್ನಾಟಕ ಸಂಗೀತ ಪದ್ಧತಿ ಹೇಳ ಹೆಸರಿಲ್ಲದಾಗಿ ಹಿಂದೂಸ್ತಾನೀ ಸಾಂಪ್ರದಾಯ ಬೇರುಬಿಟ್ಟು ಕೂತಿದೆ ಎಂದು ಬಲ್ಲ ಹಿರಿಯರು ಹೇಳುತ್ತಾರೆ. ನಮ್ಮಲ್ಲಿಯ ಹೆಣ್ಣುಮಕ್ಕಳ ಕನ್ನಡ ಪ್ರಾಥಮಿಕ ವಿದ್ಯಾಭ್ಯಾಸದ ಘುಗಿತಾಯದ ಪರೀಕ್ಷೆಗೆ ಸಂಗೀತವನ್ನು ಆವಶ್ಯಕ ವಿಷಯವಾಗಿ ಇಟ್ಟಿರುವರಾದರೂ ಇಲ್ಲಿ ಕರ್ನಾಟಕ ಸಂಗೀತದ ಅಭ್ಯಾಸಕ್ಕೆ ಎಲ್ಲಿಯೂ ವ್ಯವಸ್ಥೆಯಿಲ್ಲ. ನನಗೂ ಹಿಂದುಸ್ತಾನೀ ಗಾಯನವನ್ನೇ ತಕ್ಕಮಟ್ಟಿಗೆ ಕಲಿತು ಪರೀಕ್ಷೆಯಲ್ಲಿ ತೇಲಿಬರಬೇಕಾಯಿತು. ಎರಡು ವರ್ಷ ನಡೆದಂತೆಯೇ ಗಮಕ ಶಿಕ್ಷಣ ಈಗೆರಡು ವರ್ಷವೂ ನಡೆಯುವ ವ್ಯವಸ್ಥೆಯಾಗಿದ್ದರೆ ಎಷ್ಟೋ ಉತ್ತಮಗೊಳ್ಳಬಹುದಾಗಿತ್ತು. ಆಗಲಿಲ್ಲ. ನಮ್ಮ ದುರದೃಷ್ಟ!

ಧಾರವಾಡದಲ್ಲಿ ಕನ್ನಡ ಸಂಸ್ಕೃತಿಯ ಅಭಿಮಾನಿಗಳು ಬಹು ಜನರಿರುವರು. ವಿದ್ಯಾವಿನಯಸಂಪನ್ನರಾಗಿರುವ ಈ ಮಹನೀಯರಲ್ಲಿ ಕರ್ನಾಟಕ ಸಂಗೀತದ ವಿಷಯವಾಗಿ ಆದರವೂ ಪ್ರೇಮವೂ ಇರುವುದಾಗಿ ತೋರುತ್ತದೆ. ಈ ಮಹಾನುಭಾವರೆಲ್ಲರೊಂದಾಗಿ ಮನಸ್ಸು ಮಾಡಿ 'ಕರ್ನಾಟಕ ಸಂಗೀತ ಸಮಿತಿ'ಯೊಂದನ್ನು ಸ್ಥಾಪಿಸಿ ಇಲ್ಲಿ ಮೃತಪ್ರಾಯವಾಗಿದ್ದ ಕರ್ನಾಟಕ ಸಂಗೀತ ಕಲೆಗೆ ಸಂಜೀವಿನಿಯನ್ನು ಎರೆಯಲು ಎದ್ದುನಿಂತರೆ ಅದು ಬದುಕಿ ಬೆಳೆಯಲು ಬಹುಕಾಲ ಬೇಡ. ಈ ಬಗೆಯ ಸತತ ಪ್ರಯತ್ನವಿಲ್ಲದೆ ವರುಷಕ್ಕೆ ಒಂದೆರಡು ತಿಂಗಳುಗಳ ಹೊಯ್‌ಹಾಲಿನಿಂದ ನಮ್ಮ ಕಲೆ ಜೀವಕಳೆ ತುಂಬಿ ಬೆಳೆಯುವದೆಂಬ ಆಶೆ ಒನಕೆಗೆ ನೀರು ಹೊಯ್ದು ಚಿಗುರೊಡಿಸುವ ಪ್ರಯತ್ನವಾಗಬಹುದೇನೋ ಎಂಬ ಹೆದರಿಕೆ. ನಮ್ಮ ಮುಖಂಡರು ದೃಢಸಂಕಲ್ಪಮಾಡಿ ಇಲ್ಲಿ ಕರ್ನಾಟಕ ಸಂಗೀತಕ್ಕೊದಗಿರುವ ದುರವಸ್ಥೆಯ ನಿವಾರಣೆಗೆ ಪ್ರಯತ್ನಮಾಡದಿದ್ದರೆ ವರ್ಷಕ್ಕೊಂದೆರಡು ತಿಂಗಳಾದರೂ ಕರ್ನಾಟಕ ಸಂಗೀತವು ಧಾರವಾಡದ ವಿಶಾಲವಾದ ವಾತಾವರಣದಲ್ಲಿ ಹಬ್ಬುವಂತೆ ಪರಿಷತ್ತಿನವರಾದರೂ ಇಲ್ಲಿಯವರ ಮೇಲೆ ಅನುಗ್ರಹ ಮಾಡಬೇಕು. ನಮ್ಮ ಕ. ವಿ. ವ. ಸಂಘ ಪರಿಷತ್ತಿಗೆ ಈ ಕೆಲಸದಲ್ಲಿ ಎಲ್ಲ ಬಗೆಯ ನೆರವು ನೀಡಬೇಕೆಂದು ತಲೆಬಾಗಿ ಬೇಡಿಕೊಳ್ಳುತ್ತೇನೆ. ಇಷ್ಟಾದರೂ ಆದರೆ 'ಕರ್ನಾಟಕ ಸಂಗೀತ ಪದ್ಧತಿ'ಯ ಅಲ್ಪ ಸ್ವಲ್ಪ ನೆನಪಾದರೂ ಧಾರವಾಡದವರಿಗೆ ಉಳಿಯಲು ಅವಕಾಶವಾದೀತಷ್ಟೆ?

## ಕನ್ನಡ ಸುದ್ದಿ

**ಸುರಪುರ: ಕನ್ನಡ ಸಾಹಿತ್ಯ ಸಂಘ, ರಂಗಂಪೇಟೆ**

ಮೇಲ್ಕಂಡ ಸಂಘದ ಪರವಾಗಿ ಚೈ. ಶು. ೯ನೆಯ ದಿವಸ ಶ್ರೀರಾಮ ಜಯಂತಿಯನ್ನೂ ಮತ್ತು ಸಂಘದ ಕೈಬರೆಹದ ತ್ರೈಮಾಸಿಕವಾದ 'ಅರುಣ' ಪತ್ರಿಕೆಯ ಪ್ರಕಟನೋತ್ಸವವನ್ನೂ ಶ್ರೀ. ಕೆ. ಬಸವಣ್ಣ, ಬಿ.ಇ. ಅವರ ಅಧ್ಯಕ್ಷತೆಯಲ್ಲಿ ಬಹಳ ವಿಜೃಂಭಣೆಯಿಂದ ನೆರವೇರಿಸಲಾಯಿತು.

ಸಭೆ ಮುಗಿದನಂತರ ಅಧ್ಯಕ್ಷರು ಮತ್ತು ವ್ಯವಸ್ಥಾಪಕರು ಶ್ರೀ. ರುದ್ರಶೆಟ್ಟಿಯವರು ಸಂಘವನ್ನು ಸಂದರ್ಶಿಸಿ ಕ್ರಮವಾಗಿ ೫ ಮತ್ತು ೧ ರೂ. ಕಾಣಿಕೆಯನ್ನು ಕೊಟ್ಟರು. ಅವರೀರ್ವರಿಗೂ ಸಂಘ ಚಿರಋಣಿ.

**ಕಲ್ಬುರ್ಗಿ: ಕನ್ನಡ ಸಾಹಿತ್ಯ ಸಂಘ**

ಏಪ್ರಿಲ್ ೧೫ನೆಯ ದಿವಸ ಕನ್ನಡ ಸಾಹಿತ್ಯ ಸಂಘದ ಸದಸ್ಯರ ಸಭೆ ಶ್ರೀ. ಸಂಜೀವರಾವ ದೇಸಾಯಿ ವಕೀಲರ ಅಧ್ಯಕ್ಷತೆಯಲ್ಲಿ ಸೇರಿತ್ತು. ಮೊದಲು ಕಾರ್ಯದರ್ಶಿಗಳು ವರದಿ ಓದಿದಮೇಲೆ ಶ್ರೀ. ದೇಸಾಯಿಯವರು ಮುಂದಿನ ವರ್ಷದ ಬಗ್ಗೆ ೫,೪೦೦ ರೂಪಾಯಿಗಳ ಅಂದಾಜು ಪತ್ರಿಕೆ ಮಂಡಿಸಿದರು. ಶ್ರೀ. ಪದ್ಮನಾಭಾಚಾರ್ಯ ಹಾಗೂ ಶ್ರೀ. ಅಶ್ವತ್ಥರಾವ ವಕೀಲ ಇವರ ಭಾಷಣಗಳಾದವು. ಸಂಘದ ಶಾಶ್ವತ ಮಂದಿರದ ನಿಧಿಗೆ ೨೦೦ ರೂಪಾಯಿಗಳ ವಾಗ್ದಾನ ದೊರೆಯಿತು.

## ನಿಜಾಮು ಕನ್ನಡಿಗನ ಕೊರಗು

ಎಳೆಯ ಕನ್ನಡಿಗರೆ ಗೆಳೆಯ ಕನ್ನಡಿಗರೆ
ಗೆಲವಾಗಲಾವಗಂ ನಿಮಗೆಂಬೆನು

ಚೆಲುವಕನ್ನಡ ತಾಯಿ ಇನಿನುಡಿಯ ಸುಖದಾಯಿ
ಬಾಡಿಕೋಡಿದುದನ್ನು ನೋಡುತಿಹಿರಾ?
ಕಲ್ಮನದಿ ಮರವಟ್ಟು ಕೂಡುತಿಹಿರಾ?
ನಮ್ಮ ನಾಡೇ ದೈವ ನಮ್ಮ ನುಡಿಯೇ ದೈವ
ವೆಂಬ ಮಂತ್ರವನೆಂತು ಮರೆತಿರಯ್ಯಾ
ಕೀಳು ಬಾಳಿಗೆ ಮನವ ನೊಲಿದಿರಯ್ಯಾ
ಓಲೈಸಿ ಬಾಳ್ವದಕೆ ಕುಣಿವಿರಯ್ಯಾ.

ಕನ್ನಡದ ಕಾಶಿಯಾಗಿತ್ತೆಮ್ಮ ಚೆಲುನಾಡು
ಹಿಂದೊಮ್ಮೆಯೆಂಬುದನು ಮರೆತಿರೇಕೆ?
ತಿರುಳು ಕನ್ನಡವೆಮ್ಮ ಕನ್ನಡವು ತಾನೆಂಬ
ಹೆಮ್ಮೆಯನು ಬಿಟ್ಟೀಗ ಕುಳಿತಿರೇಕೆ?
ನಿಮ್ಮ ಕಟ್ಟಭಿಮಾನ ಸುಟ್ಟುಹೋಗಿಹುದು
ಹೆಸರು ಕನ್ನಡವಷ್ಟೆ ಉಸಿರು ಕನ್ನಡವಲ್ಲ
ಬಾಯಿ ಮಾತಿನ ಜಂಭ ಮಿಕ್ಕಿಹೋಗಿಹುದು
ಕೈಯೆಸಕ ತಾನೆಂದೊ ಮಾಯವಾಗಿಹುದು.

ಹುಳು ಹುಳುವು ತಾನೊಂದು ಹಿರಿದೈವವೆನ್ನುತಿದೆ
ಜಗವೆಲ್ಲ ತನ್ನನ್ನು ಪೂಜಿಸಲು ಬಯಸುತಿದೆ
ಕನ್ನಡಕೆ ಗೆಲವಕ್ಕೆ ಎಂಬ ಘೋಷವ ಬಿಟ್ಟು
ತನ್ನ ಘೋಷಿಪ ರೋಗ ಹಿರಿದಾಗಿ ಹಬ್ಬುತಿದೆ.
ಮೋಕ್ಷವುಂಟೆ ಜನವೆ ಮುಕ್ತಿಯುಂಟೆ ನಿಮಗೆ
ನಿರ್ಲಜ್ಜೆ ಹೆಚ್ಚಿಹುದು ಮಾನವತೆ ಮಾಸಿಹುದು
ಕನ್ನಡದ ಕತ್ತೊತ್ತಿ ಬಾಳ್ವದಕೆ ಹವಣಿಪಿರಿ
ಕನ್ನಡದ ಹೆಸರಿನಲಿ ಕನ್ನಡದ ವೇಷದಲಿ.

ಹೇಸಿ ಜೀವನ ಸಾಕು ಕಣ್‌ತೆರೆದು ನೋಡಿರೈ
ಸತ್ತ ನರದಲಿ ಮತ್ತೆ ರಕ್ತ ಚಿಮ್ಮಲಿ ಬೇಗ
ಕನ್ನಡದ ಕಿಚ್ಚೆದ್ದು ಕೊಳೆಯನೆಲ್ಲವ ಸುಡಲಿ
ಕನ್ನಡದ ಬೆಳಕೆನ್ನ ಬೆಳಕೆಂದು ಹಾಡಿರೈ
ಕನ್ನಡದ ಬಾಳೆನ್ನ ಬಾಳೆಂದು ನುಡಿಯಿರೈ
ಕನ್ನಡವೆ ಉಸಿರೆನ್ನಿ ಕನ್ನಡವೆ ಕಣ್ಣೆನ್ನಿ
ಕನ್ನಡಕೆ ಸರ್ವಸ್ವ ಧಾರೆಯೆರೆದೆವು ಎನ್ನಿ
ಬಾಳ್ಗೆ ಕನ್ನಡವೆನ್ನಿ ಆಳ್ಗೆ ಕನ್ನಡವೆನ್ನಿ
ಕನ್ನಡಕೆ ಮೀಸಲವು ನಮ್ಮ ಜೀವನವೆನ್ನಿ.

ಹರಸುವಳು ನುಡಿತಾಯಿ ಚೆಲುವ ಕನ್ನಡ ತಾಯಿ
ಮತ್ತೆ ಮೆರೆಯಲಿ ನಾಡು ಮತ್ತೆ ಮೆರೆಯಲಿ ನುಡಿಯು
ನಮ್ಮ ಬಾವುಟವೆದ್ದು ಮುಗಿಲ ಮುಟ್ಟಲಿ ಇನ್ನು
'ಕೀಳು ನೋಟವೆ ಪಾಪ ಮೇಲು ನೋಟವೆ ಪುಣ್ಯ
ವ್ಯಕ್ತಿ ಸಂಘಕೆ ಶರಣು ಸಂಘವೆ ಸರ್ವಸ್ವ'
ಎಂಬ ಬುದ್ಧನ ಮಾತು ಮುತ್ತಿನಂತಹ ಮಾತು
ಅದ ತಿಳಿದು ನಡೆಯಲ್ಕೆ ಲೋಕವೆ ನಾಕಕ್ಕು
ಬೇರೆ ನಾಕವದೇಕೆ? ಕೈಗೆ ನಿಲುಕದ ಹಣ್ಣು!
ಇದು ನಿಮಗೆ ಬಿನ್ನಹವು ಕನ್ನಡದ ಗೆಳೆಯರಿರಾ
ನನ್ನ ಮಾತಲ್ಲವಿದು ನಾಡದೇವಿಯ ಮಾತು.

— ನಿಜಾಮು ಕನ್ನಡಿಗ

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧೨
ಬಿಡಿ ಪತ್ರಿಕೆ: ೬ ಕಾಸು




ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈ ಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿ ಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೨೯
ಬೆಂಗಳೂರು: ಶುಕ್ರವಾರ, ಮೇ ೧೪, ೧೯೪೩

# ದಿವಂಗತ ಬೆನಗಲ್ ರಾಮರಾಯರ ಭಾಷಾ ಸೇವೆ

(ಸಾಹಿತಿರತ್ನ ನಿದ್ವಾನ್ ಶ್ರೀ. ಪಾನ್ಯಂ ಸುಂದರಶಾಸ್ತ್ರಿಗಳು)

ಶ್ರೀ. ಬೆನಗಲ್ ರಾಮರಾಯರವರು ಇದೇ ವೈಶಾಖ ಶು. ೪ ಶನಿವಾರ (೮-೫-೪೩) ರಾತ್ರಿ ೭ ಘಂಟೆಗೆ ಮಲ್ಲೇಶ್ವರದಲ್ಲಿರುವ ತಮ್ಮ ಸ್ವಂತ ಗೃಹದಲ್ಲಿ ಈ ಲೋಕದಿಂದ ಕಣ್ಮರೆಯಾದದ್ದು ಅವರ ಬಂಧುಮಿತ್ರರಿಗೂ ಆಪ್ತೇಷ್ಟರಿಗೂ ನಿಖಿಲ ಕರ್ನಾಟಕಕ್ಕೂ ವಿಶೇಷ ನಷ್ಟವನ್ನುಂಟುಮಾಡಿದೆಯೆಂಬುದು ಅತಿಶಯೋಕ್ತಿಯಲ್ಲ.

ನನಗೂ ಇವರಿಗೂ ೨೭ ವರ್ಷಗಳ ಪರಿಚಯ. ಶ್ರೀ. ರಾಮರಾಯರು ಮಂಗಳೂರು ಜಿಲ್ಲೆಯ ಪುತ್ತೂರು ತಾಲ್ಲೂಕು ಮುನಸೀಫ್ ಕೋರ್ಟಿನಲ್ಲಿ ಖಾಸಗಿ ವಕೀಲರಾಗಿದ್ದ ಶ್ರೀ. ಮಂಜುನಾಥಯ್ಯನವರ ಮತ್ತು ಸೌ|| ರಮಾಬಾಯಿಯವರ ಸೀಮಂತ ಪುತ್ರರು. ಇವರು ಶ್ರೀರಾಮ ನವಮಿಯ ದಿನವೇ ಜನ್ಮಿಸಿದ ಕಾರಣ ಇವರಿಗೆ ರಾಮನೆಂದು ನಾಮಕರಣ ಮಾಡಿದರು. ಇವರ ಬಾಲ್ಯವಿದ್ಯಾಭ್ಯಾಸವು ಪುತ್ತೂರು ಗ್ರಾಮದಲ್ಲಿಯೇ ನಡೆಯಿತು. ಬಳಿಕ ಮಂಗಳೂರಿನ ಗಣಪತಿ ಹೈಸ್ಕೂಲ್ ಮೂಲಕ ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಮಂಗಳೂರು ಗೌ|| ಕಾಲೇಜಿನ ಮೂಲಕ ಎಫ್.ಎ. ಪರೀಕ್ಷೆಯಲ್ಲಿ ಉತ್ತೀರ್ಣರಾದರು. ದಿವಂಗತ ಶ್ರೀ. ಪಂಜೆ ಮಂಗೇಶರಾಯರೂ ಉಲ್ಲಾಳ ಮಂಗೇಶರಾಯರೂ ಇವರ ಬಾಲ್ಯಸ್ನೇಹಿತರು ಮತ್ತು ಸಹಪಾಠಿಗಳು.

ಬಳಿಕ ಇವರು ಮದ್ರಾಸು ಪ್ರೆಸಿಡೆನ್ಸಿ ಕಾಲೇಜು ಮೂಲಕ ಬಿ. ಎ. ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಆಗ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಕನ್ನಡ ಪಂಡಿತರಾಗಿದ್ದ ಕೀ|| ಶೇ|| ಸಿದ್ಧಾಂತಿ ಸುಬ್ರಹ್ಮಣ್ಯಶಾಸ್ತ್ರಿಗಳಲ್ಲಿಯೂ ಅವರ ತರುವಾಯ ಅವರ ಕುಮಾರರಾದ ದಿವಂಗತ ಮಹಾಮಹೋಪಾಧ್ಯಾಯ ಶಿವಶಂಕರ ಶಾಸ್ತ್ರಿಗಳಲ್ಲಿಯೂ ವ್ಯಾಸಂಗ ಮಾಡಿ ಕನ್ನಡದಲ್ಲಿ ಹೆಚ್ಚು ಶ್ರದ್ಧೆಯನ್ನು ತೋರಿಸುತ್ತಬಂದ ಕಾರಣ ಇವರ ಕನ್ನಡ ಸಾಹಿತ್ಯವು ದಿನಕಮೇಣ ವೃದ್ಧಿಹೊಂದಿತು.

ಆಬಳಿಕ ಕೆಲಕಾಲ ಮದ್ರಾಸು ಕ್ರಿಶ್ಚಿಯನ್ ಕಾಲೇಜಿನಲ್ಲಿ ಕನ್ನಡ ಭಾಷೆಯನ್ನು ಬೋಧಿಸುತ್ತಿದ್ದು, ವ್ಯಾಸಂಗ ತೆಲುಗು ಭಾಷೆಯನ್ನು ಐಚ್ಛಿಕವಾಗಿ ತೆಗೆದುಕೊಂಡು ಎಂ.ಎ. ಪರೀಕ್ಷೆಗೆ ಕುಳಿತು ಉತ್ತೀರ್ಣರಾದರು. ಆಗ ಇವರಿಗೆ ಮೈಸೂರು ನಾರ್ಮಲ್ ಸ್ಕೂಲಿನಲ್ಲಿ ೪೦ ರೂ.ಗಳ ನೌಕರಿಯು ದೊರೆತ ಕಾರಣ ತಮ್ಮ ಸ್ಥಾನದಲ್ಲಿ ದಿವಂಗತ ದೇವಶಿಖಾಮಣಿ ಅಳಸಿಂಗರಾಚಾರ್ಯರನ್ನಿಟ್ಟು ತಾವು ಮೈಸೂರು ನಾರ್ಮಲ್ ಸ್ಕೂಲಿನ ಉದ್ಯೋಗದಲ್ಲಿ ನಿಂತರು. ಇಷ್ಟರಲ್ಲಿ ಬೊಂಬಾಯಿ ಸರ್ಕಾರದವರು ಪ್ರಕಟಗೊಳಿಸಿದ ಜಾಹೀರಾತನ್ನು ಕಂಡು ದರಖಾಸ್ತು ಮಾಡಲಾಗಿ ಬೊಂಬಾಯಿ ಸರ್ಕಾರದಲ್ಲಿ ಭಾಷಾ ಪರಿವರ್ತಕ (Kannada Translator) ಸ್ಥಾನವು ಇವರಿಗೆ ದೊರೆಯಿತು. ಹೀಗಾಗಿ ಮೈಸೂರು ಸರ್ಕಾರದ ನೌಕರಿಗೆ ರಾಜೀನಾಮೆ ಕೊಟ್ಟು ಕೆಲವು ಕಾಲ ಬೊಂಬಾಯಿ ಸರ್ಕಾರದಲ್ಲಿ ಕೆಲಸಮಾಡಿ ಸುಮಾರು ೧೯೧೧ರಲ್ಲಿ ಮದ್ರಾಸು ಸರ್ಕಾರದ ಕನ್ನಡ ಭಾಷಾ ಪರಿವರ್ತಕರಿಗೆ ಸಹಾಯಕರಾಗಿ ವರ್ಗಾಯಿಸಲ್ಪಟ್ಟು ೧೯೧೪ರಲ್ಲಿ ಕನ್ನಡ ಟ್ರಾನ್ಸ್‌ಲೇಟರಾಗಿದ್ದ ರಾವ್‌ಬಹದ್ದೂರ್ ಎಸ್. ಮಂಗೇಶರಾಯರು ರೋಗಪೀಡಿತರಾಗಿದ್ದು ಮೃತರಾದ ಕಾರಣ ಅವರ ಸ್ಥಾನ ಇವರಿಗೇ ಲಭಿಸಿತು. ಆಗ ಇವರಿಗೆ ೩೦೦-೫೦೦ ರೂಪಾಯಿಗಳ ವೇತನವು ಏರ್ಪಟ್ಟಿತು. ಕೆಲವು ವರ್ಷಗಳ ತರುವಾಯ ಮದ್ರಾಸು ಸರ್ಕಾರದ ಭಾಷಾ ಪರಿವರ್ತಕರಲ್ಲಿ ಪ್ರಧಾನ (Senior Translator) ಸ್ಥಾನವು ಇವರಿಗೆ ದೊರೆಯಿತು.

ಸುಮಾರು ೧೯೩೭ರಲ್ಲಿ ಇವರು ಕೆಲಸದಿಂದ ನಿವೃತ್ತರಾಗಿ ಕೆಲವು ವರ್ಷ ಮದ್ರಾಸಿನ ಗೌರವ ನ್ಯಾಯಾಧೀಶ (presiding magistrate of the Egmore Bench Court) ರಾಗಿದ್ದರು. ೧೯೧೪ರ ಮೊದಲು ಮದ್ರಾಸು ವಿಶ್ವವಿದ್ಯಾನಿಲಯದಲ್ಲಿ ಪಠ್ಯಪುಸ್ತಕ ಸಮಿತಿಯ ಸದಸ್ಯರೂ ಆ ಬಳಿಕ ಸದರೀ ಸಮಿತಿಯ ಅಧ್ಯಕ್ಷರೂ ಆಗಿ ೧೯೩೫ರ ವರೆಗೆ ಶ್ರದ್ಧೆಯಿಂದಲೂ ದಕ್ಷತೆಯಿಂದಲೂ ಕೆಲಸ ಮಾಡಿ ಅನೇಕ ಮಂದಿ ಗ್ರಂಥಕರ್ತರಿಗೆ ಆಶ್ರಯಪ್ರದಾತರೆನಿಸಿಕೊಂಡರು. ಅಂತೆಯೇ ಮದ್ರಾಸು ವಿಶ್ವವಿದ್ಯಾನಿಲಯದ ಅಕ್ಯಾಡೆಮಿಕ್ ಕೌನ್ಸಿಲ್ ಮತ್ತು ಸೆನೆಟ್ಟಿನಲ್ಲಿಯೂ ಇವರು ಕನ್ನಡ ಭಾಷಾ ಪ್ರತಿನಿಧಿಗಳಾಗಿದ್ದರು. ಈ ಮಧ್ಯೆ ಹಲವು ಬಾರಿ ಮೈಸೂರಿನ ವಿಶ್ವವಿದ್ಯಾನಿಲಯದಲ್ಲಿಯೂ ಪಠ್ಯಪುಸ್ತಕ ನಿಯಾಮಕ ಸಮಿತಿ (Board of Studies) ಮತ್ತು ಪರೀಕ್ಷಕ ಸಮಿತಿಯಲ್ಲಿಯೂ ಇವರಿಗೆ ಸ್ಥಾನವಿದ್ದಿತು.

ಸತ್ಯರಾಜಾ ಪೂರ್ವದೇಶ ಯಾತ್ರೆ, ರಮಾಮಾಧವ, ಕೃಷ್ಣಾಕುಮಾರಿ, ಸುಭದ್ರಾ ವಿಜಯ,


ದಿವಂಗತ ಶ್ರೀ. ಬೆನಗಲ್ ರಾಮರಾಯರು

[೧೫೧ನೆಯ ಪುಟಕ್ಕೆ]

# ಕನ್ನಡ ನುಡಿ

**ಶುಕ್ರವಾರ, ಮೇ ೧೪, ೧೯೪೩**

## ದಿವಂಗತ ಶ್ರೀ. ಬೆನಗಲ್ ರಾಮರಾಯರು

ನಮ್ಮ ನಾಡು ನುಡಿಗಳ ಹಿರಿಯ ಸೇವಕರಲ್ಲೊಬ್ಬರಾಗಿದ್ದ ಶ್ರೀಮಾನ್ ಬೆನಗಲ್ ರಾಮರಾಯರವರು ಕಳೆದ ಭಾನುವಾರ ಬೆಳಗಿನ ಜಾವದಲ್ಲಿ ಹೃದಯಸ್ತಂಭನದಿಂದ ನಿಧನ ಹೊಂದಿದ ರೆಂಬ ಸಂಗತಿಯನ್ನು ಸೂಚಿಸಲು ನಮಗೆ ಅತ್ಯಂತ ವಿಷಾದ ವಾಗುತ್ತದೆ. ದಿವಂಗತರ ದೇಹಸ್ಥಿತಿ ಸಮರ್ಪಕವಾಗಿರಲಿಲ್ಲ ವಾದರೂ ಈಚೆಗೆ ಬಹಳ ಮೇಲಾಗಿದ್ದು ಇನ್ನೂ ಉತ್ತಮಗೊಳ್ಳುವ ಸೂಚನೆಗಳು ಕಂಡುಬಂದಿದ್ದವು. ಹೀಗಿದ್ದೂ ಅವರಿಗೆ ಅಕಾಲ ಮರಣವು ಸಂಭವಿಸಿರುವುದನ್ನು ಕಂಡು ಬಹಳವಾಗಿ ಖೇದ ವುಂಟಾಗಿದೆ. ಕನ್ನಡ ನಾಡಿಗೂ ಕನ್ನಡ ಸಾಹಿತ್ಯಕ್ಕೂ ಅನೇಕ ರೀತಿಗಳಲ್ಲಿ ಸೇವೆಯನ್ನು ಸಲ್ಲಿಸಿಯೂ ಸಲ್ಲಿಸುತ್ತಲೂ ಇದ್ದ ಶ್ರೀಮಾನ್ ಬೆನಗಲ್ ರಾಮರಾಯರವರು ಕಣ್ಮರೆಯಾದುದರಿಂದ ಉತ್ಸಾಹಶಾಲಿಗಳೂ ವಿದ್ವಾಂಸರೂ ಆಗಿದ್ದ ಹಿರಿಯರೊಬ್ಬರ ನೆರವು ತಪ್ಪಿ ನಮಗೆ ವಿಶೇಷ ನಷ್ಟವುಂಟಾಗಿದೆ. ಕನ್ನಡ ಸಾಹಿತ್ಯ ಪರಿಷನ್ಮಂದಿರದಲ್ಲಿ ಅವರ ಭಾವಚಿತ್ರದ ಅನಾವರಣ ಮಹೋತ್ಸವ ನಡೆದ ತರುಣದಲ್ಲೆ ಅವರಿಗೆ ಕಂಬನಿಯ ಕಾಣಿಕೆಯನ್ನೊಪ್ಪಿಸುವ ದಾರುಣಸ್ಥಿತಿಯೊದಗಿದ ದುಃಖದಿಂದ ಹೃದಯ ಮಿಡಿಯುತ್ತಿದೆ.

ದಿವಂಗತರು ನಾನಾ ರೀತಿಗಳಲ್ಲಿ ನಮ್ಮ ನಾಡಿಗೂ ನುಡಿಗೂ ಸೇವೆ ಮಾಡಿದ್ದಾರೆ. ಅವರು ಕನ್ನಡ, ಇಂಗ್ಲಿಷ್, ಸಂಸ್ಕೃತ, ಮರಾಠಿ ಮುಂತಾದ ಭಾಷೆಗಳಲ್ಲಿ ಪಾಂಡಿತ್ಯವನ್ನು ಸಂಪಾದಿಸಿ, ವಿಶ್ವವಿದ್ಯಾನಿಲಯದ ಪ್ರಶಸ್ತಿಗಳನ್ನು ಪಡೆದು ಸ್ವಲ್ಪಕಾಲ ಉಪಾಧ್ಯಾಯ ವೃತ್ತಿಯಲ್ಲಿದ್ದು ಅನಂತರ ಎಲ್ಎಲ್.ಬಿ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಮದರಾಸು ಸರ್ಕಾರದ ಕನ್ನಡ ಭಾಷಾಂತರಕಾರರಾಗಿದ್ದು ಕೊನೆಗೆ "ಸೀನಿಯರ್ ಟ್ರಾನ್ಸ್ಲೇಟರ್" ಹುದ್ದೆಯನ್ನಲಂಕರಿಸಿ ಕೆಲಸದಿಂದ ವಿಶ್ರಾಂತರಾದರು. ಅವರು ಕುಂದಮಾಲಾ ಮುಂತಾದ ಅನೇಕ ಗ್ರಂಥಗಳನ್ನು ಕನ್ನಡಕ್ಕೆ ಭಾಷಾಂತರ ಮಾಡಿ, ಅನೇಕ ಗ್ರಂಥಗಳನ್ನೂ ಪ್ರಬಂಧಗಳನ್ನೂ ಗೀತಗಳನ್ನೂ ಬರೆದು ಸಾಹಿತ್ಯ ಸೇವೆ ಮಾಡಿದರು. ಶ್ರೀ. ಎಚ್. ನಾರಾಯಣರಾಯರು, ಶ್ರೀ. ನಂದಳಿಕೆ ಲಕ್ಷ್ಮೀನಾರಾಯಣಪ್ಪನವರು, (ತಮ್ಮ ಭಾವಂದಿರಾದ) ಶ್ರೀ. ಪಂಜೆ ಮಂಗೇಶರಾಯರವರು ಮುಂತಾದವರೊಡನೆ ದುಡಿದು "ಸುವಾಸಿನಿ" ಎಂಬ ಹೆಸರಿನ ಪತ್ರಿಕೆಯ ಮೂಲಕ ಅಮೋಘವಾದ ಸೇವೆಯನ್ನು ಸಮರ್ಪಿಸಿದರು. ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಅಮಿತವಾದ ಆದರವನ್ನು ತೋರಿಸಿ, ಪರಿಷತ್ಪತ್ರಿಕೆಗೆ ಉತ್ತಮ ಲೇಖನಗಳನ್ನು ಬರೆಯುತ್ತಿದ್ದುದೇ ಮುಂತಾದ ರೀತಿಗಳಲ್ಲಿ ಉಪಕರಿಸಿದರು. ೧೯೨೯ನೆಯ ಇಸವಿಯಲ್ಲಿ ಬೆಳಗಾವಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯನ್ನಲಂಕರಿಸಿ ಕನ್ನಡಿಗರ ಪ್ರೀತಿ ಗೌರವಗಳಿಗೆ ಪಾತ್ರರಾದರು. ಮದರಾಸಿನ ಸುಗುಣ ವಿಲಾಸ ನಾಟಕ ಸಭೆಯ ಸದಸ್ಯರಾಗಿ ಕೆಲಸಮಾಡಿ, ಹಲವು ನಾಟಕಗಳಲ್ಲಿ ಪಾತ್ರವಹಿಸಿ ಯಥಾಶಕ್ತಿಯಾಗಿ ಕನ್ನಡ ರಂಗಭೂಮಿಯ ಸೇವೆಯನ್ನೂ ಮಾಡಿದರು. ವಿಶ್ವವಿದ್ಯಾನಿಲಯದಲ್ಲಿ ವಿದ್ಯಾಭ್ಯಾಸ ಮಾಡಿದವರು ನಾಟಕಗಳಲ್ಲಿ ಪಾತ್ರವಹಿಸುತ್ತಿದ್ದುದು ಆಗ್ಗೆ ತೀರ ಹೊಸದು. ಆದಕಾರಣ, ದಿವಂಗತರಾದ ನಾಟಕಶಿರೋಮಣಿ ಶ್ರೀ. ಎ. ವಿ. ವರದಾಚಾರ್ಯರವರೂ ಶ್ರೀ. ಬೆನಗಲ್ ರಾಮರಾಯರವರೂ ಈಚೆಗೆ 'ರಾವ್ ಬಹದ್ದೂರ್' ಎಂಬ ಬಿರುದು ಲಭಿಸಿರುವ ಬಳ್ಳಾರಿಯ ಶ್ರೀ. ಟಿ. ರಾಘವಾಚಾರ್ಯರವರೂ ನಾಟಕಗಳಲ್ಲಿ ಪಾತ್ರವಹಿಸಿದುದನ್ನು ಕಂಡು ಆಶ್ಚರ್ಯಪಡದಿದ್ದವರೇ ವಿರಳ. ದಿವಂಗತರಾದ ಶ್ರೀ. ಬೆನಗಲ್ ರಾಮರಾಯರವರು ಮದರಾಸು ಮತ್ತು ಮೈಸೂರು ವಿಶ್ವವಿದ್ಯಾನಿಲಯಗಳ ನಾನಾ ಬೋರ್ಡುಗಳಲ್ಲಿ ಸದಸ್ಯರಾಗಿದ್ದೂ ಹಿಂದೆ ಶ್ರೇಷ್ಠ ರೀತಿಯಲ್ಲಿ ಸೇವೆಯನ್ನು ಸಮರ್ಪಿಸಿದ್ದರು. ಅವರು ಮದರಾಸು ಸರ್ಕಾರದಲ್ಲಿ ತಮ್ಮ ಹುದ್ದೆಯಿಂದ ವಿಶ್ರಾಂತರಾದ ಮೇಲೆ ಬೆಂಗಳೂರು ನಗರದಲ್ಲಿ ನೆಲಸಿ, ಕಳೆದ ಹನ್ನೆರಡು ವರ್ಷಗಳಿಂದಲೂ ಭಾಷಾ ಸೇವೆ ಮಾಡಿದರು. ಪರಿಷತ್ತಿನ ಮೈಸೂರು ಪ್ರಾಂತ ಸಮಿತಿಯ ಅಧ್ಯಕ್ಷರಾಗಿ ಕೆಲವು ವರ್ಷಗಳ ಕಾಲ ಕೆಲಸ ಮಾಡಿದರು. ಆ ಬಳಿಕ ಮಲ್ಲೇಶ್ವರದ ಕರ್ಣಾಟಕ ಸಂಘದ ಅಧ್ಯಕ್ಷರಾಗಿ ಕೆಲಸ ಮಾಡುತ್ತಿದ್ದರು. ಅವರು ಕನ್ನಡದಲ್ಲಿ ರಚಿಸಿದ "ಪುರಾಣ ನಾಮ ಚೂಡಾಮಣಿ" ಎಂಬ ಗ್ರಂಥ ಮೈಸೂರು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಈಚೆಗೆ ಪ್ರಕಟವಾಯಿತು. ಹರಿದು ಹಂಚಿಹೋಗಿರುವ ನಮ್ಮ ಕನ್ನಡ ನಾಡಿನ ಏಕೀಕರಣಕ್ಕಾಗಿ ದಿವಂಗತರೂ ಸಹ, ವಿಶೇಷ ಶ್ರದ್ಧೆಯಿಂದಲೂ ಉತ್ಸಾಹದಿಂದಲೂ ಶ್ರಮಿಸುತ್ತಿದ್ದರು. ಕನ್ನಡ ಭಾಷೆಯು ಅವರ ತಾಯಿನುಡಿಯಲ್ಲ, ಹಾಗಿದ್ದೂ ಅವರಿಗೆ ಕನ್ನಡ ಭಾಷೆಯೇ ತಾಯಿನುಡಿಯಾಗಿದ್ದಷ್ಟು ಮಮತೆ; ತಮ್ಮವರೆಲ್ಲರೂ ಕನ್ನಡದಲ್ಲಿ ಅದೇ ರೀತಿ ಪ್ರೇಮವನ್ನೂ ಮಮತೆಯನ್ನೂ ತೋರಿಸುವಂತೆ ಮಾಡಬೇಕೆಂಬ ಸಂಕಲ್ಪ. ಇಂತಹ ಮಹನೀಯರು ದಿವಂಗತರಾದುದರಿಂದ ಒಟ್ಟು ಕನ್ನಡನಾಡಿಗೇ ಅಪಾರವಾದ ನಷ್ಟವುಂಟಾಗಿದೆ.

ದಿವಂಗತರು ನಾಡುನುಡಿಗಳ ಭಕ್ತರಾಗಿದ್ದಂತೆಯೇ ದೈವಭಕ್ತರಾಗಿಯೂ ಇದ್ದರು. ಕನ್ನಡಕ್ಕಾಗಿ ದುಡಿಯುವವರಲ್ಲಿ ಅವರಿಗೆ ಎಷ್ಟುಪ್ರೀತಿ! ಹಿರಿಯರ ವಿವೇಕವೂ ಕಿರಿಯರ ಉತ್ಸಾಹವೂ ಅವರಲ್ಲಿ ಒಟ್ಟುಗೂಡಿದ್ದುವು. ಅವರಲ್ಲಿದ್ದ ಮತ್ತೊಂದು ದೊಡ್ಡ ಗುಣವೆಂದರೆ, ತಮಗೆ ಪರಿಚಿತರಿಂದಲೇ ಆಗಲಿ, ಪರಿಚಿತರಲ್ಲದವರಿಂದಲೇ ಆಗಲಿ ಉತ್ತಮ ಗ್ರಂಥಗಳು ಯಾರಿಂದ ಹೊರಬಿದ್ದರೂ ದಿವಂಗತರು ತಮ್ಮದೇ ಆದೊಂದು ಮಮತೆಯಿಂದಲೂ ಪ್ರೀತಿಯಿಂದಲೂ ಶ್ಲಾಘಿಸಿ ಪ್ರೋತ್ಸಾಹಕೊಡುತ್ತಿದ್ದರು. ಗುಣಪಕ್ಷಪಾತಿಗಳಾಗಿ, ಸದಾ ಸಂತೋಷಚಿತ್ತದಿಂದಿದ್ದು, ಆದರ ತೋರುತ್ತಿದ್ದರು. ಹಿರಿಯರೊಡನೆ ಹಿರಿಯರಾಗಿ ಕಿರಿಯರೊಡನೆ ಕಿರಿಯರಾಗಿ, ಎಲ್ಲರೊಡನೆಯೂ ಸ್ನೇಹಮಮತೆಗಳಿಂದ ವರ್ತಿಸುತ್ತಿದ್ದರು. ಈ ಇಳಿವಯಸ್ಸಿನಲ್ಲಿ ಕೂಡ ಇನ್ನೂ ಅನೇಕ ಗ್ರಂಥಗಳನ್ನು ರಚಿಸಿ ಭಾಷಾ ಸೇವೆ ಮಾಡಬೇಕೆಂಬ ಉತ್ಸಾಹದಿಂದ ಕೂಡಿದ್ದರು. ಇಂತಹ ಮಹನೀಯರಿಗೆ ಅಕಾಲ ಮರಣವು ಸಂಭವಿಸಿದುದು ಕನ್ನಡಿಗರ ದುರದೃಷ್ಟವೇ ಸರಿ. ಕರುಣಾಮಯನಾದ ಭಗವಂತನು ದಿವಂಗತರ ಆತ್ಮಕ್ಕೆ ಶಾಂತಿಯನ್ನೂ ದಿವಂಗತರ ಕುಟುಂಬದವರಿಗೆ ತಮ್ಮ ದುಃಖವನ್ನು ಸಹಿಸುವ ಶಕ್ತಿಯನ್ನೂ ದಯಪಾಲಿಸಲೆಂಬುದೇ ನಮ್ಮ ಪ್ರಾರ್ಥನೆ.

## ಕನ್ನಡ ಸಂಸ್ಥಾನಗಳ ಭವಿಷ್ಯ

ದಕ್ಷಿಣ ಸಂಸ್ಥಾನಗಳ ೧೩ನೆಯ ಲೋಕಸಭೆ ಜಮುಖಂಡಿಯಲ್ಲಿ ಮೇ ತಿಂಗಳ ಮೊದಲನೆಯ ವಾರ ನಡೆಯಿತು. ಕರ್ನಾಟಕ ಹಾಗೂ ಮಹಾರಾಷ್ಟ್ರ ಸಂಸ್ಥಾನಗಳಿಂದ ಸುಮಾರು ೭೫ ಮಂದಿ ಪ್ರತಿನಿಧಿಗಳು ದಯಮಾಡಿಸಿದ್ದರು.

ಈ ಅಧಿವೇಶನದ ವಿವರಗಳು ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ (೧೧-೫-೪೩) ಪ್ರಕಟವಾಗಿವೆ. ದಕ್ಷಿಣಭಾರತದ ಸಂಸ್ಥಾನಗಳನ್ನು ಸೇರಿಸುವ ರಾಜ್ಯಾಂಗ ರಚನೆಯ ಯೋಜನೆಯೂ ಆ ರಚನೆಯಲ್ಲಿ ಕರ್ನಾಟಕ ಸಂಸ್ಥಾನಗಳು ಸೇರುವ ವಿಚಾರವೂ ಅಧಿವೇಶನದಲ್ಲಿ ಚರ್ಚೆಯಾದವು. ಈ ಬಗ್ಗೆ ಸಾಬಡೆ ಸಮಿತಿಯವರು ರಚಿಸಿರುವ ಘಟನೆಯ ವಿಷಯವಾಗಿ ವಿಚಾರವಿನಿಮಯ ನಡೆಯಿತು.

ಕನ್ನಡ ನಾಡಿನ ಜೀವಾಳದ ಪ್ರಶ್ನೆಯಾದ ಕರ್ನಾಟಕ ಏಕೀಕರಣದ ಧ್ಯೇಯಕ್ಕೆ ಕನ್ನಡ ಸಂಸ್ಥಾನಗಳ ಭವಿಷ್ಯದ ಈ ಯೋಜನೆ ಅನುಗುಣವಾಗಿದೆಯೆ ಎಂಬುದೇ ಈ ವಿಚಾರ ವಿನಿಮಯದಲ್ಲಿ ಮುಖ್ಯವಾಗಿ ಗಮನಕ್ಕೆ ಬಂದ ಅಂಶ. ಈಚೆಗೆ ವೈಸರಾಯ್‌ರವರು

(೧೫೩ನೆಯ ಪುಟಕ್ಕೆ)

### ದಿವಂಗತ ಬೆನಗಲ್ ರಾಮುರಾಯರ ಭಾಷಾ ಸೇವೆ

(೧೪೯ನೆಯ ಪುಟದಿಂದ)

ಕುಂದಮಾಲೆ, ಘೋಷಯಾತ್ರೆ ಮುಂತಾದ ಅನೇಕ ಗ್ರಂಥಗಳನ್ನು ಬರೆದು ಕನ್ನಡ ನಾಡಿಗೆ ಉಪಕಾರ ಮಾಡಿದ್ದಾರೆ. ಕೆಳದಿ ಬಸವರಾಜ ನಿರ್ಮಿತವಾದ **ಶಿವತತ್ವ ರತ್ನಾಕರ** ವೆಂಬ ಸಂಸ್ಕೃತ ವಿಶ್ವಕೋಶವನ್ನು ದೇವನಾಗರೀ ಲಿಪಿಯಲ್ಲಿ ಸ್ವಂತ ದ್ರವ್ಯವ್ಯಯದಿಂದ ಮುದ್ರಣಗೊಳಿಸಿ, ಗತಿಸಿದ ನಾಲ್ವಡಿ ಪ್ರಭುಗಳವರಿಗೆ ಅಂಕಿತವಾಗಿ ಸಮರ್ಪಿಸಿದ್ದಾರೆ. ಇತ್ತೀಚಿಗೆ ಮೈಸೂರು ವಿಶ್ವವಿದ್ಯಾನಿಲಯದವರ ಕೋರಿಕೆಯಂತೆ 'ಪುರಾಣನಾಮ ಚೂಡಾಮಣಿ' ಎಂಬ ಪೌರಾಣಿಕ ಕೋಶವನ್ನೂ ರಚಿಸಿದ್ದಾರೆ. ಈ ಗ್ರಂಥವು ಹಲವು ಕಾರಣಗಳಿಂದ ಬೇಗನೆ ಮುದ್ರಣವನ್ನು ಪಡೆಯದಿರಲು ಅವಕ್ಕಾಗಿ ಇವರು ತೀವ್ರ ಪ್ರಯತ್ನ ವನ್ನು ಕೈಕೊಳ್ಳಬೇಕಾಯಿತು. ಇವರಿಗೆ ಸಂಗೀತ, ನಾಟಕಾಭಿನಯ ಗಳಲ್ಲಿ ಹೆಚ್ಚು ಆಸಕ್ತಿ ಇದ್ದಿತು. ಜ್ಯೋತಿಶಾಸ್ತ್ರದಲ್ಲಿ ಇವರಿಗೆ ತಕ್ಕ ಮಟ್ಟಿಗೆ ಪ್ರವೇಶವಿದ್ದಿತು.

ಮಹಾರಾಷ್ಟ್ರ ಭಾಷೆಯನ್ನು ತಮ್ಮ ಜನನಿಯವರ ಮೂಲಕ ಬಾಲ್ಯದಲ್ಲಿ ಅಭ್ಯಾಸಮಾಡಿದ್ದರು. ಬೊಂಬಾಯಿಯಲ್ಲಿ ವಾಸಮಾಡು ವಾಗ ಅದು ವಿಶೇಷವಾಗಿ ವೃದ್ಧಿಯನ್ನು ಪಡೆಯಿತು. ನಾಲ್ಕಾರು ವರ್ಷಗಳ ಕಾಲ ಸಂಸ್ಕೃತ ಭಾಷೆಯನ್ನು ಅಭ್ಯಾಸಮಾಡಿದ್ದಕ್ಕಾಗಿ ತಕ್ಕಮಟ್ಟಿಗೆ ಸಂಸ್ಕೃತ ಭಾಷಾಪರಿಚಯ, ಆ ಮೂಲಕ ಸಂಸ್ಕೃತ ಭಾಷಾಭಿಮಾನ ಪ್ರೇಮಗಳು ನೆಲೆಗೊಂಡವು. ಇವರು ಪಂಡಿತಾಭಿ ಮಾನಿಗಳು, ದಯಾಮಯರು, ಆಸ್ತಿಕರು ಮತ್ತು ಶ್ರದ್ಧಾಳುಗಳು. ನವನಾಗರಿಕತೆಯ ಬೆಡಗಿಗೆ ಮರುಳಿದವರಲ್ಲ.

ಮದರಾಸು ಸ್ಕೂಲ್ ಬುಕ್ ಅಂಡ್ ಲಿಟರೇಚರ್ ಸೊಸೈಟಿ ಯಲ್ಲಿ ಕನ್ನಡ ಪ್ರತಿನಿಧಿಗಳ ಮುಖಂಡರಾಗಿದ್ದು ಅನೇಕ ಮಂದಿ ಗ್ರಂಥ ಕರ್ತರಿಗೆ ವಿಶೇಷವಾಗಿ ಉಪಕಾರ ಮಾಡಿದ್ದಾರೆ. ಇವರಿಂದ ಉಪಕೃತ ರಲ್ಲದ ಕನ್ನಡ ಗ್ರಂಥಕರ್ತರು ಅತಿ ವಿರಳ. ಕರ್ನಾಟಕದ ಏಕೀಕರಣ ಕ್ಕಾಗಿ ಬಹಳವಾಗಿ ದುಡಿದಿದ್ದಾರೆ. ಇವರ ಪ್ರಯತ್ನದ ಮೊತ್ತ ಮೊದಲಿನ ಫಲವೇ ಕನ್ನಡ ದೇಶದ ನಕ್ಷೆ– ಇವರಿಗೆ ಮೊದಲನೆಯ ವಿವಾಹವು ಧಾರವಾಡ ಪ್ರಾಂತದಲ್ಲಿ ಆಗಿದ್ದಿತು. ಇವರು ಬೊಂಬಾಯಿ ಯಲ್ಲಿರುವಾಗಲೇ ಇವರಿಗೆ ಪ್ರಥಮ ಪತ್ನಿ ವಿಯೋಗವಾಯಿತು. ಈಗ ಇವರಿಗೆ ಒಬ್ಬ ಕುವರಿಯೂ ನಾಲ್ವರು ಗಂಡುಮಕ್ಕಳೂ ಎರಡನೆಯ ಸಂಬಂಧದ ಪತ್ನಿಯೂ ಇದ್ದಾರೆ.

## ಮುಂಬಯಿ ಕನ್ನಡ ಸಂಘದ ಆರನೆಯ ವಾರ್ಷಿಕೋತ್ಸವ

ಮುಂಬಯಿ ಕನ್ನಡ ಸಂಘದ ಆರನೆಯ ವಾರ್ಷಿಕೋತ್ಸವ ೨-೫-೫೪ರಲ್ಲಿ ಮುಂಬಯಿ ಸರ್ಕಾರದ ಹೋಂ ಡಿಪಾರ್ಟ್‌ಮೆಂಟಿನ ಅಡಿಷನಲ್ ಸೆಕ್ರೆಟರಿಗಳಾದ ಶ್ರೀ. ಹೆಚ್. ವಿ. ಆರ್. ಅಯ್ಯಂಗಾರ್, ಸಿ.ಐ.ಇ.,ಐ.ಸಿ.ಎಸ್. ಅವರ ಅಧ್ಯಕ್ಷತೆಯಲ್ಲಿ ಬಹು ವಿಜೃಂಭಣೆಯಿಂದ ನಡೆಯಿತು. ಶ್ರೀ. ಎನ್.ಎನ್. ಅಯ್ಯಂಗಾರ್ ಮತ್ತು ಇತರ ಅನೇಕ ಕನ್ನಡಿಗರು ನೆರೆದಿದ್ದರು.

ಸಂಘದ ಕಾರ್ಯದರ್ಶಿಗಳಾದ ಶ್ರೀ. ಬಿ. ಜಿ. ಆಚಾರ್ ಅವರು ವಾರ್ಷಿಕ ವರದಿಯನ್ನು ಓದಿ ಸಂಘದ ಸದ್ಯದ ಏಳಿಗೆಯನ್ನು ಚಿತ್ರಿಸಿದರು.

ಅನಂತರ ಕಾರ್ಯಕಲಾಪಗಳಲ್ಲಿ ಶ್ರೀ ಚಲುವರಾಜ್‌ರವರಿಂದ ದಾಸರ ಪದಗಳು, ಸಂಗೀತ ವಿದ್ವಾನ್ ಭೀಮರಾಯರಿಂದ ಸಂಗೀತ, ಶ್ರೀ. ಬಿ. ಟಿ. ಚಾರ್, ಶ್ರೀ. ಕೆ. ವಿ. ರಾಮನ್ ಮತ್ತು ಶ್ರೀ. ಎಂ. ವಿ. ಚಾರಿ ಇವರಿಂದ ಕಾವ್ಯಪಠನ, ಶ್ರೀ. ಭಾಸ್ಕರ್ ಅವರಿಂದ ಕಥಕಳಿ ನೃತ್ಯ ಮತ್ತು ಬೇಬಿ ನಾಗರತ್ನ ಅವರಿಂದ ಮಣಿಪುರಿ ನೃತ್ಯ ನಡೆದುವು.

ಸಂಘದ ನಾಟಕ ಶಾಖೆಯವರು ರಾ|| ಕೆ. ಗೋಪಾಲಕೃಷ್ಣ ರಾಯರ 'ರುಗ್ಣಶಯ್ಯೆ' ಎಂಬ ನಾಟಕವನ್ನಾಡಿದರು.

ಆ ಬಳಿಕ ಅಧ್ಯಕ್ಷರಾದ ಶ್ರೀ. ಹೆಚ್. ವಿ. ಆರ್. ಅಯ್ಯಂಗಾರ್ ಅವರು ಭಾಷಣ ಮಾಡಿ ಕನ್ನಡದ ಏಳಿಗೆಗೆ ಅಮೂಲ್ಯವಾದ ಸಲಹೆ ಗಳನ್ನು ಕೊಟ್ಟರು. (ಭಾಷಣದ ಸಾರಾಂಶ ಮುಂದಿನ ಸಂಚಿಕೆಯಲ್ಲಿ)

ತರುವಾಯ ಸಂಘದ ಸಹಾಯ ಕಾರ್ಯದರ್ಶಿಗಳಾದ ಶ್ರೀ. ಜೆ. ಎನ್. ಅಯ್ಯರ್ ಅವರು, ಜೈಪುರದ ದಿವಾನರಾದ ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರಿಂದಲೂ, ಮತ್ತು ಇತರರಿಂದಲೂ ಬಂದ ಶುಭ ಸಂದೇಶಗಳನ್ನು ಓದಿ, ಆ ದಿನ ಅಧ್ಯಕ್ಷತೆಯನ್ನು ವಹಿಸಿ ಕಾರ್ಯ ಕಲಾಪಗಳನ್ನು ಯಶಸ್ವಿಯಾಗಿ ನಡಸಿಕೊಟ್ಟ ಶ್ರೀ. ಹೆಚ್. ವಿ. ಆರ್. ಅಯ್ಯಂಗಾರ್ ಅವರಿಗೂ ಮತ್ತು ಇತರರಿಗೂ ವಂದನೆಗಳನ್ನರ್ಪಿಸಿದರು.

ವಂದೇ ಮಾತರಂ ಹಾಡಿದನಂತರ ಸಭೆ ಮುಕ್ತಾಯವಾಯಿತು.

## ಪವನ!

ಅರವಿಂದ ಮಕರಂದ ಕೊಂಡು ಬಾ ಪವನ
ಹರವು ಮುಂದೆಂದು ತುಂಬಿ ಭವನ
ರಸಋಷಿಯ ನೋಡಿ ಬಾ – ಹೊಸ ಸಿದ್ಧಿ ಪಡೆದು ಬಾ
ಮುಗಿಲಿನೆತ್ತರವನ್ನು ಅಳೆದು ಬಾರಾ
ಹಗಲೆ ಚುಕ್ಕೆಗಳನ್ನು ತಿಳಿದು ತೋರಾ !

ಘನವೌನ ಸುಧೆಯಲ್ಲಿ ಮುಳುಮುಳುಗಿ ಬಾ
ಮನದಿ ಬೆಳಕನು ಕಂಡು ಬೆಳಬೆಳಗಿ ಬಾ
ಮಾಘ ಮುಗಿಲಾಗಿ ಬಾ – ಓಘ ಹೊನಲಾಗಿ ಬಾ
ಮುನ್ನೀರಿನಾಳದಲಿ ಮುಳುಗಿ ಬಾರಾ
ಪನ್ನೀರ ಪರಿಮಳವನಳೆದು ತೋರಾ

ಜೀವನಕೆ ಉಸಿರಾಗಿ ಹಸಿರ ಚಿಗುರಿಸಲು ಬಾ
ಜೀವನದಿ ಕುಸುರಾಗಿ ಕಲೆಯ ಕುದುರಿಸಲು ಬಾ
ಮಳೆಯ ಸುರಿಸಲಿಕೆ ಬಾ – ಇಳೆಯ ಮೆರೆಸಲಿಕೆ ಬಾ
ಸ್ವಾನಂದದಮರತೆಯ ತೂಗಿ ಬಾರಾ
ನಾನೆ ನೀನಾಗಿ ಗುರು ಹೋಗಿ ಬಾರಾ

— ದೇಶಾಯಿ ದತ್ತಮೂರ್ತಿ

### ಹೊಯ್ಸಳ ಸಾಮ್ರಾಜ್ಯ ಸ್ಮಾರಕೋತ್ಸವ

(ಕೀರ್ತನಾಚಾರ್ಯ ಶ್ರೀ. ಬೇಲೂರು ಕೇಶವದಾಸರು)

ಮೇಲ್ಕಂಡ ಮಹೋತ್ಸವವನ್ನು ನೆರವೇರಿಸಲು ಇದು ಸುಸಮಯವೆಂಬ ಹೆಸರಿನಿಂದ ೬ ವಾರಗಳ ಹಿಂದೆ ಕನ್ನಡ ನಾಡಿನ ಮುಖ್ಯ ವರ್ತಮಾನ ಪತ್ರಿಕೆಗಳಲ್ಲಿ ಸೂಚನೆಯೊಂದನ್ನು ಕಳು ಹಿಸಿದ್ದೆ. ಹಾಸನ ಜಿಲ್ಲೆಯ ಮುಖಂಡರು ಈ ಮಹತ್ಕಾರ್ಯ ಅವಶ್ಯ ನಡೆಯಬೇಕೆಂದೂ, ಶ್ರೀಮನ್ಮಹಾರಾಜರವರು ಭಕ್ತ ವಿಗ್ರಹಗಳನ್ನು ಪ್ರತಿಷ್ಠಿಸಲು ಬೇಲೂರಿಗೆ ದಯಮಾಡಿಸುವ ಸಮಯ ದಲ್ಲಿ ಮಹೋತ್ಸವವನ್ನು ನೆರವೇರಿಸಿ ಸ್ಮಾರಕ ಗ್ರಂಥವೊಂದನ್ನು ಪ್ರಕಟಿಸಬೇಕೆಂದೂ, ಆ ಕಾಲದ ಸಾಹಿತ್ಯ, ಸಂಗೀತ ಮತ್ತು ನೃತ್ಯಕಲೆಗಳ ಪ್ರದರ್ಶನ ಮಾಡಬೇಕೆಂದೂ ನಿರ್ಣಯಿಸಿದರು. ಈ ಸಂದರ್ಭದಲ್ಲಿ ನಮ್ಮ ಘನಸರ್ಕಾರದ ಸಹಾಯ ಪಡೆಯಲು ದಿವಾನ್ ಸಾಹೇಬರ ಭೇಟಿಗಾಗಿ ಪತ್ರವ್ಯವಹಾರ ನಡಸಿದ್ದರ ಮೇಲೆ ಅವರು ದಯವಿಟ್ಟು ತಾ|| ೭-೫-೫೪ರ ಮಧ್ಯಾಹ್ನ ಭೇಟಿಕೊಟ್ಟು ಸಾವಧಾನವಾಗಿ ಉತ್ಸವದ ಉದ್ದೇಶ ಮೊದಲಾದವುಗಳನ್ನು ವಿಚಾರಿಸಿದರು. ಈ ವಿಚಾರದಲ್ಲಿ ಚೆನ್ನಾಗಿ ಪರ್ಯಾಲೋಚಿಸಿ ಒಂದು ವಾರದೊಳಗೆ ಉತ್ತರವನ್ನು ದಯಪಾಲಿಸುವುದಾಗಿ ಅಪ್ಪಣೆ ಕೊಡಿಸಿದರು.

ಮೈಸೂರು ಬೆಂಗಳೂರು ನಗರಗಳಲ್ಲೂ ದೇಶದ ಇತರ ಜಿಲ್ಲೆ ಗಳಲ್ಲೂ ಉತ್ಸಾಹದಿಂದ ವಿಚಾರಿಸುತ್ತಿರುವ ಮಹನೀಯರುಗಳಿಗೆ ಪ್ರತ್ಯೇಕವಾಗಿ ಒಬ್ಬೊಬ್ಬರಿಗೂ ಪತ್ರ ಬರೆಯಲು ಅವಕಾಶವಿಲ್ಲದಿರು ವುದಕ್ಕಾಗಿ ಕ್ಷಮೆಬೇಡಿ, ಸ್ವಲ್ಪ ನಿದಾನಿಸಿ ಪ್ರಸಿದ್ಧ ಪತ್ರಿಕೆಗಳ ಮೂಲಕ ತಿಳಿಸುವೆನೆಂದು ವಿಜ್ಞಾಪಿಸುತ್ತೇನೆ. ಉತ್ಸವ ನಡೆಯು ವುದು ನಿಜ. ನಡೆಯಬೇಕಾದ ರೀತಿಯಲ್ಲಿ ನಡೆಯಲೆಂಬುದಕ್ಕೇ ಪ್ರಯತ್ನ. ನಮ್ಮ ಮಹಾಪ್ರಭುಗಳವರೂ ಸರ್ಕಾರದವರೂ ತಕ್ಕ ಸಹಾಯ ಅನುಗ್ರಹಿಸುವರು ಎಂಬುದೇ ನನ್ನ ಪೂರ್ಣ ನಂಬಿಕೆ.

## ಕನ್ನಡ ಸಂಸ್ಥಾನಗಳ ಭವಿಷ್ಯ

(೧೫೦ನೆಯ ಪುಟದಿಂದ)

ಸಣ್ಣ ಸಂಸ್ಥಾನಗಳನ್ನು ದೊಡ್ಡ ಸಂಸ್ಥಾನಗಳಿಗೆ ಸೇರಿಸಿ, ಅವುಗಳ ಆಡಳಿತದಲ್ಲೂ ಜನಜೀವನದಲ್ಲೂ ಮೇಲ್ಪಾಟುಗಳನ್ನು ತರಬೇಕೆಂದು ಮಾಡಿರುವ ಯೋಜನೆಯನ್ನು ನೆನಪಿನಲ್ಲಿಟ್ಟುಕೊಂಡು ಈ ಪ್ರಶ್ನೆಯನ್ನು ವಿವೇಚಿಸಬೇಕಾಗಿದೆ. ವೈಸ್‌ರಾಯರ ಯೋಜನೆಯನ್ನು ಕರ್ನಾಟಕದ ಸಂಸ್ಥಾನಗಳಿಗೆ ಅನ್ವಯಿಸುವಾಗ ಅದರಿಂದ ಏಕೀಕರಣ ತತ್ವಕ್ಕೆ ಹಾನಿಯಾಗದಂತೆ ನೋಡಿಕೊಳ್ಳಬೇಕು.

ಭಾಷಾವಾರು ಪ್ರಾಂತ ರಚನೆಯ ವಿಚಾರವೇ ಭಾರತದ ಯೋಗಕ್ಷೇಮಕ್ಕೆ ತಕ್ಕ ಉಪಾಯವೆಂದು ಬಲ್ಲವರನೇಕರು ಹೇಳುತ್ತಿದ್ದಾರೆ. ಈ ತತ್ವವನ್ನು ಕನ್ನಡದ ಪರವಾಗಿ ಅಧಿವೇಶನದಲ್ಲಿ ಮುಂದೊತ್ತಿ, ಕನ್ನಡ ಸಂಸ್ಥಾನಗಳನ್ನು ಮರಾಠಿ ಸಂಸ್ಥಾನಗಳಿಗೆ ಸೇರಿಸಬಾರದೆಂದೂ, ಬೇಕಿದ್ದರೆ 'ಬ್ರಿಟಿಷ್ ಕರ್ನಾಟಕ'ವೆನ್ನಿಸಿಕೊಂಡಿರುವ ಕರ್ನಾಟಕ ಪ್ರದೇಶಗಳಿಗೆ ಸೇರಿಸಬಹುದೆಂದೂ ಹೇಳಿ ವಾದಿಸಿದ ಶ್ರೀಗಳಾದ ಆರ್. ಪಿ. ಕುಲಕರ್ಣಿಯವರು, ನಾ. ಶ್ರೀ. ಗಲಗಲಿಯವರು ಅಭಿನಂದನೆಗೆ ಪಾತ್ರರು.

ಸಾಬಡೆ ಸಮಿತಿಯವರ ಘಟನೆಯನ್ನು ಪುನರ್ವಿಮರ್ಶೆಗಾಗಿ ಮತ್ತೊಂದು ಸಮಿತಿಗೆ ಒಪ್ಪಿಸಬೇಕೆಂದು ಅಧಿವೇಶನದಲ್ಲಿ ಗೊತ್ತುವಳಿಯಾಯಿತು. ಮತ್ತೆ ಘಟನೆ ಮುಂದಿನ ಅಧಿವೇಶನದಲ್ಲಿ ಚರ್ಚೆಗೆ ಬರುವುದಾಗಿದೆ. ಆದ್ದರಿಂದ ಕನ್ನಡ ಸಂಸ್ಥಾನಗಳ ಪ್ರತಿನಿಧಿಗಳು ತಕ್ಕ ಪ್ರಚಾರದಲ್ಲಿ ತೊಡಗಿ ಕನ್ನಡ ಸಂಸ್ಥಾನಗಳ ಭವಿಷ್ಯದ ಸೂಚಿ ಭಾಷಾವಾರು ಪ್ರಾಂತರಚನೆಯ ಗುರಿಗೇ ತಿರುಗಿರುವಂತೆ ಮಾಡಬೇಕಾಗಿ ಬಿನ್ನಹ.

## ಪರಿಷತ್ತಿನ ಸುದ್ದಿ

### ಗಮಕ ತರಗತಿ – ೧೯೪೩—ಅಭ್ಯಾಸ ಭಾಗ

**೧ ಕುಮಾರವ್ಯಾಸ ಭಾರತ:**

(i) ಪೀಠಿಕಾಸಂಧಿ ; ೧. ಶ್ರೀ ವನಿತೆಯರಸನೆ, ೨. ವಾರಿಜಾಸನೆ ಸಕಲಶಾಸ್ತ್ರ, ೩. ಹಲಗೆ ಬಳಪವ, ೪. ಅರಸುಗಳಿಗಿದು ವೀರ.

(ii) ಉದ್ಯೋಗಪರ್ವ (೧೧ನೆಯ ಸಂಧಿ) ಕರ್ಣ–ಕುಂತಿಯರ ಸಂವಾದ, ೩೫ ಪದ್ಯಗಳು.

**೨ ಹರಿಶ್ಚಂದ್ರ ಕಾವ್ಯಸಂಗ್ರಹ:** ಹರಿಶ್ಚಂದ್ರ – ಚಂಡಾಲ ಕನ್ನಿಕೆಯರ ಸಂವಾದ—೧೦ ಪದ್ಯಗಳು.

**೩ ಹೊಸ ಕವಿತೆಗಳು, ಇತ್ಯಾದಿ:**

(i) ಶ್ರೀ. ಡಿ. ವಿ. ಗುಂಡಪ್ಪನವರ "ಬೇಲೂರಿನ ಶಿಲಾಬಾಲಿಕೆಯರು". (ii) ಶ್ರೀ. ಬೆಟಗೇರಿ ಕೃಷ್ಣಶರ್ಮರ "ಕೊಳಲ ನುಡಿಸು ಕಿವಿಯೊಳೆನ್ನ" (iii) ಶ್ರೀ ನಿಜಗುಣ ಶಿವಯೋಗಿಯವರ "ನೋಡಲಾಗದೆ ದೇವ . . ." (iv) ಶ್ರೀ. ಕೆ. ವಿ. ಪುಟ್ಟಪ್ಪನವರ "ಬೃಂದಾವನದೊಳು ಹಾಲನು" (v) ವಿ. ಸೀ. ಅವರ "ಮಾನವನೆತ್ತರ" (vi) "ದಾಸರ ಕೃತಿ–ಉದರ ವೈರಾಗ್ಯ."

### ತಿದ್ದುಪಡಿ

ಕಾವ ಪರೀಕ್ಷೆಯ ವ್ಯಾಕರಣ ಭಾಗಕ್ಕೆ 'ಕನ್ನಡ ಕೈಪಿಡಿ'ಯ ವ್ಯಾಕರಣ ಭಾಗ ಪಾಠಕ್ರಮವೆಂದು ೩೦–೪–೪೩ರ ನುಡಿಯಲ್ಲಿ ಪ್ರಕಟಿಸಿದೆ. ಇದು ಕಾವ ಪರೀಕ್ಷೆಯ ಪಾಠ ಕ್ರಮದಲ್ಲಿ ಸೇರಿಲ್ಲ.

### ಸಂತಾಪಸೂಚಕ ಸಭೆ

ಶ್ರೀ. ಬೆನಗಲ್ ರಾಮರಾವ್, ಎಂ.ಎ., ಎಲ್‌ಎಲ್.ಬಿ. ಅವರು ಕಾಲಾಧೀನರಾದುದಕ್ಕಾಗಿ ೧೪–೫–೪೩ನೆಯ ಶುಕ್ರವಾರ ಸಂಜೆ ೭ ಗಂಟೆಗೆ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ದುಃಖವನ್ನು ಸೂಚಿಸಲು ಸಂತಾಪ ಸಭೆ ಸೇರುತ್ತದೆ.

ಶ್ರೀ. ಬಿ. ಪುಟ್ಟಯ್ಯ, ಬಿ.ಎ. ಅವರು ಸಭೆಯ ಅಧ್ಯಕ್ಷತೆಯನ್ನು ವಹಿಸುತ್ತಾರೆ.

### ಮಹಿಳಾ ಶಾಖೆ

೧೬–೫–೪೩ನೆಯ ಭಾನುವಾರ ಸಂಜೆ ೬–೩೦ ಗಂಟೆಗೆ ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯನವರು 'ರನ್ನ ಕವಿಯು ಚಿತ್ರಿಸಿರುವ ದುರ್ಯೋಧನ ಪಾತ್ರ' ಎಂಬ ವಿಷಯವಾಗಿ ಉಪನ್ಯಾಸ ಮಾಡುವರು. ಶ್ರೀಮತಿ ಎ. ಶೇಷಮ್ಮನವರು ಅಧ್ಯಕ್ಷರು.

೨೦–೫–೪೩ನೆಯ ಗುರುವಾರ ಸಂಜೆ ೬ ಗಂಟೆಗೆ ಮಹಿಳಾ ಶಾಖೆಯ ಅಭಿಮಾನಿಗಳಿಂದ 'ಕಾವ್ಯ ವಾಚನ' ನಡೆಯುವುದು. ಶ್ರೀಮತಿ ಆರ್. ಕಲ್ಯಾಣಮ್ಮನವರು ಅಧ್ಯಕ್ಷರು.

## ಕನ್ನಡ ಸುದ್ದಿ

### ಕಲುಬುರ್ಗಿ: ಕನ್ನಡ ಸಾಹಿತ್ಯ ಸಂಘ

ಶ್ರೀ ಬಸವ ಜಯಂತಿ

ಪ್ರತಿಸಾರೆಯಂತೆ ಬೇರೆಯಾಗಿ 'ಬಸವ ಜಯಂತಿ'ಯನ್ನು ಆಚರಿಸದೆ ಈಸಾರೆ ಸಂಘ ಸ್ಥಳಿಕ ಸಂಸ್ಥೆಗಳಾದ 'ವೀರಶೈವ ಬಂಧು ಸಮಾಜ' ಹಾಗೂ 'ವೀರಶೈವ ಯುವಕ ಸಂಘ'ಗಳೊಡನೆ ಸಹಕರಿಸಿ ಆಚರಿಸಿತು. ಬೆಂಗಳೂರಿನಿಂದ ಪ್ರಸಿದ್ಧ ಸಾಹಿತಿಗಳಾದ ಶ್ರೀ. ಅ. ನ. ಕೃಷ್ಣರಾಯರು ಆಗಮಿಸಿ ಮೊದಲ ದಿನ ಶ್ರೀ. ಬಸವೇಶ್ವರರ ಧಾರ್ಮಿಕ ಜೀವನದ ಬಗ್ಗೆಯೂ ಎರಡನೆಯ ದಿನ ಬಸವೇಶ್ವರರ ಹಾಗೂ ಹರಿಹರ ರಾಘವಾಂಕರ ಸಾಹಿತ್ಯದ ಬಗ್ಗೆಯೂ ಉಪನ್ಯಾಸ ಮಾಡಿದರು. ಶ್ರೀಯುತರು ತಮ್ಮ ಭಾಷಣದಲ್ಲಿ ಕನ್ನಡ ಸಾಹಿತ್ಯ ಸಂಘದ ಕಾರ್ಯವನ್ನು ಪ್ರಶಂಸಿಸಿ ಅದು ಕೈಕೊಂಡ ಕಟ್ಟಡ ನಿರ್ಮಾಣಕಾರ್ಯಕ್ಕೆ ಎಲ್ಲರೂ ಕೊಡುಗೈಯಿಂದ ಸಹಾಯಮಾಡಬೇಕಾಗಿ ಬಿನ್ನವಿಸಿದರು.

### ಶ್ರೀ. ಜಿ. ರಾಮಾಚಾರ್ಯರ ಉದಾರ ದಾನ

ನಿಜಾಮ ಕರ್ನಾಟಕದ ಸುಪ್ರಸಿದ್ಧ ಮುಂದಾಳುಗಳಾದ ಶ್ರೀ. ಜಿ. ರಾಮಾಚಾರ್ಯ ವಕೀಲರು, ಶ್ರೀ. ಜನಾರ್ಧನರಾವ ದೇಸಾಯಿ ಇವರ ಸಂಗಡ ಬಂದು ೮–೫–೧೯೪೩ ಸಾಯಂಕಾಲ ಸಂಘವನ್ನು ಸಂದರ್ಶಿಸಿದರು. ಶ್ರೀಯುತರು ಸಂಘದ ಕಾರ್ಯಕಲಾಪಗಳನ್ನು ಕಂಡು ಸಂತುಷ್ಟರಾಗಿ ೧೫೦ ರೂ.ಗಳ ಧನ ಸಹಾಯ ಮಾಡುವದಾಗಿ ವಾಗ್ದಾನ ಮಾಡಿದರು.

### ಕನ್ನಡ ಸಾಹಿತಿಗಳ ಸಂಘ, ಬೆಂಗಳೂರು

ಕನ್ನಡ ಸಾಹಿತಿಗಳ ಸಂಘದ ಆಶ್ರಯದಲ್ಲಿ ಕವಿವರ್ಯರಾದ ಶ್ರೀಮಾನ್ ಪುರೋಹಿತ ತಿರುನಾರಾಯಣ ನರಸಿಂಹಾಚಾರ್ಯರು ತಾವು ಈಚೆಗೆ ರಚಿಸಿರುವ 'ಕವಿ' ಮತ್ತು 'ನೌಕಾ ವಿನೋದ' ಎಂಬ ಗೀತರೂಪಕಗಳನ್ನು ಈ ತಿಂಗಳು ಒಂಬತ್ತನೆಯ ತಾರೀಖು ಭಾನುವಾರ ಬೆಳಗ್ಗೆ ಶ್ರೀಮಾನ್ ಗೋಪಾಲಕೃಷ್ಣರಾಯರ ಮನೆಯಲ್ಲಿ ಓದಿದರು. ಬೆಂಗಳೂರಿನ ಪ್ರಸಿದ್ಧ ಸಾಹಿತಿಗಳನೇಕರು ದಯಮಾಡಿಸಿದ್ದರು. ಈ ನಾಟಕಗಳು ಕನ್ನಡ ಸಾಹಿತ್ಯದಲ್ಲಿ ಹೊಸ ಪ್ರಯೋಗಗಳಾಗಿವೆ. ಸದ್ಯದಲ್ಲಿಯೇ ಅವುಗಳನ್ನು ಅಭಿನಯಿಸಲು ಪ್ರಯತ್ನ ನಡೆದಿದೆಯೆಂದು ತಿಳಿದು ಬಂದಿದೆ. ವಾಚನ ಮುಗಿಯುವುದರೊಳಗಾಗಿ ಶ್ರೀಮಾನ್ ಬೆನಗಲ್ ರಾಮರಾಯರು ಅದೇ ದಿನ ನಿಧನರಾದರೆಂಬ ವಾರ್ತೆ ಬಂದದ್ದರಿಂದ ವಾಚನ ಮುಗಿದೊಡನೆಯೆ ಸಂಘದ ಸದಸ್ಯರು ಶ್ರೀಮಾನ್ ನಿಟ್ಟೂರು ಶ್ರೀನಿವಾಸರಾಯರ ಅಧ್ಯಕ್ಷತೆಯಲ್ಲಿ ಸಭೆ ಸೇರಿ, ಕೆಳಗೆ ಕಂಡ ತೀರ್ಮಾನವನ್ನು ಮಾಡಿ ತಮ್ಮ ಸಂತಾಪವನ್ನು ಸೂಚಿಸಿದರು.

"ಕನ್ನಡ ನಾಡಿನ ಹಿರಿಯರಲ್ಲೊಬ್ಬರಾಗಿ ನಾಡು ನುಡಿಗಳ ಏಳಿಗೆಗೂ ನಾಡಿನ ಏಕೀಕರಣಕ್ಕೂ ಅವಿಶ್ರಾಂತವಾಗಿ ದುಡಿದ ನಮ್ಮ ಸಂಘದ ಮಾನ್ಯಸದಸ್ಯರು ಶ್ರೀ. ಬೆನಗಲ್ ರಾಮರಾಯರು ಈ ಬೆಳಗ್ಗೆ ಕಾಲಾಧೀನರಾದುದಕ್ಕಾಗಿ ಸಾಹಿತಿಗಳ ಸಂಘದ ಸದಸ್ಯರು ವಿಷಾದಿಸುತ್ತಾರೆ. ಮತ್ತು ಅವರ ಕುಟುಂಬ ವರ್ಗಕ್ಕೆ ತಮ್ಮ ಹಾರ್ದಿಕ ಸಹಾನುಭೂತಿಯನ್ನು ತಿಳಿಸಬಯಸುತ್ತಾರೆ."

೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

ಪ್ರತಿ ಶುಕ್ರವಾರ ಹೊರಡುತ್ತದೆ.

Reg. No. M. 3975



ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧೨
ಬಿಡಿ ಪತ್ರಿಕೆ: ೬ ಕಾಸು

ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈ ಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೩೦

ಬೆಂಗಳೂರು: ಶುಕ್ರವಾರ, ಮೇ ೨೧, ೧೯೪೩

## ಕಂತಿ*

(ಶ್ರೀಮತಿ ನರಸಮ್ಮ, ಎಂ. ಎ.)

ಕನ್ನಡ ಸಾಹಿತ್ಯದಲ್ಲಿ ಹೆಸರಾದ ಕಬ್ಬಿಗಿತಿಯರ ಸಂಖ್ಯೆ ಬಹಳ ಕಡಮೆ. ಇಲ್ಲವೇ ಇಲ್ಲವೆಂದು ಹೇಳಿದರೂ ತಪ್ಪಾಗದು. ಈಗ ತಿಳಿದಿರುವಮಟ್ಟಿಗೆ ಕಂತಿಯೇ ಕನ್ನಡ ಕಬ್ಬಿಗಿತಿಯರಲ್ಲಿ ಮೊದಲನೆಯವಳು. ಈಕೆ ದ್ವಾರಸಮುದ್ರದ ಬಲ್ಲಾಳ ರಾಜನ ಅಥವಾ ವಿಷ್ಣುವರ್ಧನ ರಾಜನ ಆಸ್ಥಾನದಲ್ಲಿ ಇದ್ದಳೆಂದೂ, ಅಭಿನವ ಪಂಪನೆಂದು ಪ್ರಸಿದ್ಧನಾದ ನಾಗಚಂದ್ರನು ಈಕೆಗೆ ಕೆಲವು ಸಮಸ್ಯೆಗಳನ್ನು ಕೊಟ್ಟನೆಂದೂ ಪ್ರತೀತಿಯಿರುವುದರಿಂದ ಈಕೆ ಸುಮಾರು ಕ್ರಿ. ಶ. ೧೧೦೦ ರಿಂದ ೧೧೦೬ರ ವರೆಗೆ ಆಳಿದ ಒಂದನೆಯ ಬಲ್ಲಾಳ ರಾಜನ ಆಸ್ಥಾನದಲ್ಲಿ ಪಂಡಿತೆಯಾಗಿದ್ದಳೆಂದು ತೋರುತ್ತದೆ. ಈಕೆಯ ಸಮಕಾಲೀನನಾದ ನಾಗಚಂದ್ರನೂ ಅದೇ ರಾಜನ ಆಸ್ಥಾನದಲ್ಲಿ ಹೆಸರಾದ ಕವಿಯಾಗಿದ್ದನು.

"ಯಾದವ ಕುಲಾಂಬರ ದ್ಯುಮಣಿ" ಎಂದು ಪ್ರಖ್ಯಾತರಾಗಿದ್ದ ಹೊಯ್ಸಳರ ಕಾಲದಲ್ಲಿ ಕನ್ನಡನಾಡು ಬೆಳೆಯುತ್ತಾ ಬಂದ ಹಾಗೆ ಕನ್ನಡ ಸಾಹಿತ್ಯವೂ ಬೆಳೆಯುತ್ತಾ ಬಂದಿತು. ಹನ್ನೆರಡನೆಯ ಶತಮಾನದ ಮಧ್ಯ ಕಾಲದಲ್ಲಿ ಬಸವಣ್ಣನವರ ನೇತೃತ್ವದಲ್ಲಿ ವೀರಶೈವರು ಪ್ರಬಲರಾದರು. ಸಾಹಿತ್ಯದಲ್ಲಿ ಹೊಸ ಸಂಪ್ರದಾಯ ಹುಟ್ಟಿತು. ಅನೇಕ ಬ್ರಾಹ್ಮಣ ಕವಿಗಳೂ, ಜೈನ ಕವಿಗಳೂ ಈ ಹೊಸ ಸಂಪ್ರದಾಯವನ್ನು ಅನುಸರಿಸಿ ಕಾವ್ಯರಚನೆ ಮಾಡಿದರು. ಇದರ ಜೊತೆಯಲ್ಲೇ ಹಳೆಯ ಸಂಪ್ರದಾಯದ ಎಂದರೆ ಚಂಪೂ ಮಾರ್ಗದಲ್ಲಿ ಬರೆಯುವ ಕವಿಗಳೂ ಇದ್ದರು. ಇವರಲ್ಲಿ ಶ್ರೇಷ್ಠನಾದ್ಧವನು ನಾಗಚಂದ್ರ. ಅವನ ಆಶ್ರಯದಾತ ಬಲ್ಲಾಳ ರಾಜ. ಈ ರಾಜಸಭೆಯನ್ನು ಅಲಂಕರಿಸಿದವರಲ್ಲಿ ಕಂತಿಯೂ ಒಬ್ಬಳು.

ಕಂತಿ ಎಂಬ ಹೆಸರಿನ ಕಬ್ಬಿಗಿತಿ ಇದ್ದಳೋ ಇಲ್ಲವೋ ಗೊತ್ತಿಲ್ಲ. ಈಕೆ ಜೈನಮತದವಳೆಂದು ತೋರುತ್ತದೆ. ಈಕೆಯ ವಿಷಯವಾಗಿ ಒಂದು ಐತಿಹ್ಯವಿದೆ. ಬಲ್ಲಾಳರಾಜನ ಮಂತ್ರಿಯಾಗಿದ್ದ ಧರ್ಮಚಂದ್ರನೆಂಬ ಬ್ರಾಹ್ಮಣನು ತನ್ನ ಮಕ್ಕಳ ಬುದ್ಧಿ ಪ್ರಕಾಶಕ್ಕೆ ಬರಲಿ ಎಂದು ಬುದ್ಧಿಯನ್ನು ಚುರುಕು ಮಾಡುವ ಜ್ಯೋತಿಷ್ಮತೀ ತೈಲವನ್ನು ತಯಾರುಮಾಡಿಸಿ ಇಟ್ಟಿದ್ದನಂತೆ. ಆ ತೈಲದ ಪ್ರಭಾವವೆಂದರೆ ಅದನ್ನು ಸೇವಿಸಿದ ಮೂರು ಮಂದಿಗಳಲ್ಲಿ ಒಬ್ಬನು ಹುಚ್ಚನಾಗುವನು. ಮತ್ತೆ ಒಬ್ಬನು ಸಾಯುವನು. ಉಳಿದೊಬ್ಬನು ಪ್ರಚಂಡ ಬುದ್ಧಿಶಾಲಿಯಾಗುವನು. ಇಂತಹ ಅದ್ಭುತವಾದ ಮಹಿಮೆಯುಳ್ಳ ತೈಲವನ್ನು ಮನೆಯಲ್ಲಿಟ್ಟು ಧರ್ಮಚಂದ್ರನು ಎಲ್ಲೋ ಹೊರಗೆ ಹೋಗಿರುವಾಗ ಅವನ ಮನೆಯ ದಾಸಿಯಾಗಿದ್ದ ಕಂತಿ ತಿಳಿಯದೆ ಆ ತೈಲವನ್ನು ಕುಡಿದುಬಿಟ್ಟಳಂತೆ. ಅದರ ಪರಿಣಾಮವಾಗಿ ಮೈಯಲ್ಲೆಲ್ಲಾ ಯಾತನೆಯುಂಟಾಗಲು ಅದನ್ನು ತಾಳಲಾರದೆ ಆತ್ಮಹತ್ಯೆ ಮಾಡಿಕೊಳ್ಳುವುದೇ ಲೇಸೆಂದು ಮನೆಯ ಹಿಂದುಗಡೆಯಿದ್ದ ಬಾವಿಯಲ್ಲಿ ಹಾರಿಕೊಂಡಳಂತೆ. ಮುಂದೆ ಪ್ರಖ್ಯಾತಳಾದ ಕಬ್ಬಿಗಿತಿಯಾಗಬೇಕಾಗಿದ್ದುದರಿಂದಲೋ ಏನೋ ದೇವರ ಅನುಗ್ರಹದಿಂದ ಅವಳಿಗೆ ಏನೂ ಅಪಾಯವುಂಟಾಗಲಿಲ್ಲ. ನೀರಿಗೆ ಧುಮುಕಿದ ಕೂಡಲೇ ದೇಹದ ಧಗೆ ಅಡಗಿ ಜ್ಞಾನದ ಬೆಳಕುಂಟಾಯಿತಂತೆ. ನೀರಿನಲ್ಲೇ ನಿಂತುಕೊಂಡು ರಮಣೀಯವಾದ ಕವಿತೆಗಳನ್ನು ಹೇಳುತ್ತಿದ್ದ ಕಂತಿಯನ್ನು ಕಂಡು ಜನರು ಆಶ್ಚರ್ಯಪಟ್ಟು ಅವಳ ಬುದ್ಧಿಶಕ್ತಿಯನ್ನು ಪರೀಕ್ಷಿಸಲು ಬಂದು. ಆಗ ಅವರ ಪರೀಕ್ಷೆಗೆ ಒಪ್ಪದೆ ಆಸ್ಥಾನ ಕವಿಯಾದ ಅಭಿನವಪಂಪನೆಂದು ಖ್ಯಾತಿವೆತ್ತ ನಾಗಚಂದ್ರನೇ ತನ್ನೊಡನೆ ವಾದಮಾಡಲು ಬರಬೇಕೆಂದು ಕಂತಿ ತಿಳಿಸಿದಳು. ಅದರಂತೆ ನಾಗಚಂದ್ರ ಮತ್ತು ಕಂತಿಯರಿಗೆ ವಾದ ನಡೆಯಿತಂತೆ. ಅದನ್ನು "ಕಂತಿ–ಹಂಪರ ಸಮಸ್ಯೆಗಳು" ಎಂದು ಕರೆಯುತ್ತಾರೆ. "ಉಸಿರೆಂದು ಸುಗುಣೆ ಕಂತಿಗಸಮ ಸಮಸ್ಯೆಯನೆ ಕೊಟ್ಟನಭಿನವ ಪಂಪ" ಎಂದು ಆಧಾರ ಸಿಕ್ಕುತ್ತದೆ.

"ಕಂತಿ ಹಂಪರ ಸಮಸ್ಯೆಗಳು" ಎಂಬ ಕೈ ಬರಹದ ಪ್ರತಿ ಮೈಸೂರು ಓರಿಯಂಟಲ್ ಲೈಬ್ರರಿಯಲ್ಲಿ ಇದೆ. ಇದು ಈಗಿರುವ ಸ್ಥಿತಿಯಲ್ಲಿ ಅಸಮಗ್ರವಾಗಿದೆ. ಅದರಲ್ಲಿ ಒಟ್ಟು ೨೩ ಸಮಸ್ಯೆಗಳು ಮಾತ್ರ ಸಿಕ್ಕುತ್ತವೆ. ಅವುಗಳಲ್ಲಿ ಕೆಲವು ಕಂದ ಪದ್ಯಗಳು, ಮತ್ತೆ ಕೆಲವು ಬಿಡಿ ವಾಕ್ಯಗಳು. ಅವುಗಳ ಜೋಡಣೆಯಲ್ಲಿ ಒಂದು ಕ್ರಮವಿಲ್ಲ. ಯಾವುದು ಮೊದಲೋ ಯಾವುದು ಕೊನೆಯೋ ವಾಗ್ವಾದ ನಡಸಿದ ಕಂತಿ–ಹಂಪರಿಗೇ ಗೊತ್ತು. ಅವುಗಳಲ್ಲೊಂದರಲ್ಲಿ "ನರಗುರಿ ಹಂಪ" ಎಂಬ ವಿಶೇಷಣ ಪಂಪನಿಗಿದೆ. ಇದರಿಂದ ಕಂತಿ ನಾಗಚಂದ್ರನಿಗಿಂತಲೂ ಹೆಚ್ಚು ಪ್ರತಿಭಾಶಾಲಿಯಾಗಿದ್ದಳೆಂದು ಊಹಿಸಲವಕಾಶವಿದೆ. ಸಮಸ್ಯೆಗಳು ಒಗಟಿನಂತಿವೆ. ಅವುಗಳಲ್ಲಿ ಕೆಲವು ಮೇಲೆನೋಡುವುದಕ್ಕೆ ಅಶ್ಲೀಲವಾಗಿರುವಂತೆ ತೋರುತ್ತದೆ. ಸಮಸ್ಯೆಗಳ ಲಕ್ಷಣ ಈ ರೀತಿಯಾಗಿದೆ: ನಿರ್ದಿಷ್ಟ ಪದದ ಹಿಂದೆ ಕೆಲವು ವರ್ಣಗಳನ್ನು ಸೇರಿಸುವುದರಿಂದ ಅವು ಸರಿಹೋಗುತ್ತವೆ. ಮತ್ತೆ ಕೆಲವು ಅಕ್ಷರಗಳು ಒಂದೇ ಬಗೆಯವಾಗಿದ್ದರೂ ಬೇರೆ ಬೇರೆ ಅರ್ಥ ಕೊಡುವುದರಿಂದ ಸರಿಹೋಗುತ್ತವೆ. ಇನ್ನು ಕೆಲವು ಪದವನ್ನು ಹಿಂದು ಮುಂದು ಮಾಡಿ ಅನ್ವಯ ಮಾಡಿದರೆ ಸರಿಹೋಗುತ್ತವೆ.

ಈ ಸಮಸ್ಯೆಗಳನ್ನು ಮಾಡಿದವರು ಕಂತಿ–ಹಂಪರೆನ್ನುವುದಕ್ಕೆ ಆಧಾರ ಅವರು ಒಬ್ಬರಿಗೊಬ್ಬರು ಮಾಡಿರುವ ಸಂಬೋಧನೆಯ ರೂಪದಲ್ಲಿರುವ ಇವರ ಹೆಸರು ಹೊರತು ಬೇರೆ ಯಾವ ಆಧಾರವೂ ಸಿಕ್ಕುವುದಿಲ್ಲ. ಒಂದು ವೇಳೆ ಕಂತಿ–ಹಂಪರೆಂಬವರು ನಡಸಿದ ಈ ಬಗೆಯ ಸ್ಪರ್ಧೆಯನ್ನು ಈಚಿನವರಾರಾದರೂ ತಮ್ಮ ಯೋಗ್ಯತಾನುಸಾರ ತಿದ್ದಿ ಪ್ರಕಟಿಸಿರಬಹುದೇ? ಎಂಬ ಊಹೆಗೂ ಅವಕಾಶವಿದೆ. ಈ ಸಮಸ್ಯೆಗಳಲ್ಲಿ ಬಳಸಿರುವುದು ಗ್ರಾಮ್ಯ ಭಾಷೆ. ಆದರೂ ಸಮಸ್ಯೆಗಳು ಬುದ್ಧಿಯನ್ನು ಚುರುಕು ಮಾಡುವಂತಹವು. ಈ ಸಮಸ್ಯೆಗಳೊಂದರಲ್ಲಿ ಜ್ಯೋತಿಷ್ಮತೀ ತೈಲಪಾನದಿಂದ ಪ್ರತಿಭೆ ಮೂಡುವುದಕ್ಕೆ ಆಧಾರವಿದೆ. ಅದು ಈರೀತಿಯಾಗಿದೆ.

"ನಾಯಂ ಕೊಳಲೇಳು ದಿನಕೆ ಮತಿ ಸಮನಿಸಿತು!" ಇದು ಅಭಿನವ ಪಂಪನು ಕಂತಿಗೆ ಕೊಟ್ಟ ಸಮಸ್ಯೆಗಳಲ್ಲೊಂದು. ಇದಕ್ಕೆ

(೧೫೫ ನೆಯ ಪುಟಕ್ಕೆ)

* ಮೈಸೂರು 'ಆಕಾಶವಾಣಿ'ಯಲ್ಲಿ ಮಾಡಿದ ಒಂದು ಭಾಷಣದಿಂದ.

# ಕನ್ನಡ ನುಡಿ

ಶುಕ್ರವಾರ, ಮೇ ೨೧, ೧೯೪೩

## ಕನ್ನಡ ಕೆಲಸ

ಈ ತಿಂಗಳು ೧೭ನೆಯ ಸೋಮವಾರ ಸಂಜೆ ಮಲ್ಲೇಶ್ವರದ ಕರ್ನಾಟಕ ಸಂಘ ಈ ವರ್ಷದ ತನ್ನ ವಸಂತ ಸಾಹಿತ್ಯೋತ್ಸವವನ್ನು ಆರಂಭಿಸಿತು. ಉತ್ಸವವನ್ನು ಆರಂಭಿಸಿದವರು ಮೈಸೂರು ಸಂಸ್ಥಾನದ ಸ್ಥಳೀಯ ಸಂಸ್ಥೆಗಳ ಸಚಿವರಾದ ಶ್ರೀಮಾನ್ ಎಚ್. ಬಿ. ಗುಂಡಪ್ಪಗೌಡರವರು. ಉತ್ಸವದ ಅಧ್ಯಕ್ಷರಾಗಿದ್ದವರು, ನಮ್ಮ ಶಿಕ್ಷಣ ಸಚಿವರಾದ ಶ್ರೀಮಾನ್ ಜೆ. ಅಪ್ಪಾಜಿಗೌಡರವರು. ಈ ಮಹನೀಯರಿಬ್ಬರೂ ಕನ್ನಡ ಭಾಷೆ, ಕನ್ನಡ ಪ್ರಾಂತ ನಿರ್ಮಾಣ, ಕನ್ನಡ ಸಾಹಿತ್ಯ ಮತ್ತು ಜನಜೀವನದ ಅಭಿವೃದ್ಧಿ ಮುಂತಾದ ವಿಷಯಗಳನ್ನು ಕುರಿತು ಅತ್ಯಂತ ಅಭಿಮಾನಪೂರ್ವಕವಾದ ಮಾತುಗಳನ್ನಾಡಿ ಜನಕ್ಕೆ ಉತ್ಸಾಹವನ್ನೂ ಭರವಸೆಯನ್ನೂ ಉಂಟುಮಾಡಿದ್ದಾರೆ. ಮಂತ್ರಿ ಪದವಿಗಳಲ್ಲಿಯೂ ಜನನಾಯಕವರ್ಗದಲ್ಲಿಯೂ ಅಭಿಮಾನಶಾಲಿಗಳಾದ ವ್ಯಕ್ತಿಗಳಿದ್ದರೆ ಅವರ ಶ್ರದ್ಧೆ ಎಷ್ಟು ಹುರುಪು ತುಂಬಬಲ್ಲದು ಎಷ್ಟು ಕಾರ್ಯಕಾರಿಯಾಗಬಲ್ಲದು ಎಂಬುದನ್ನು ಇವರ ನುಡಿಗಳು ಸೂಚಿಸುತ್ತವೆ. ಈ ಇಬ್ಬರೂ ನಮ್ಮ ದೇಶದ ಒಂದು ಮುಖ್ಯ ಜನವರ್ಗಕ್ಕೆ ಸೇರಿದವರು. ನಾಡಿನಲ್ಲಿ ಹಿರಿಯ ಒಕ್ಕಲಾಗಿ ನೆಲಮನೆ ಉಳ್ಳವರು. ದೇಶದ ಸಂಪತ್ತಿಯ ಬಹು ಭಾಗಕ್ಕೆ ಅವರು ಆಧಾರವಾಗಿರುವವರು. ಅವರ ಮನೆ ಮಾತು ಕನ್ನಡ; ಅವರು ಬೆಳಸಬೇಕಾಗಿರುವ ಜೀವನ ಕನ್ನಡಿಗರದು; ಕನ್ನಡದ ಮೂಲಕವಾಗಬೇಕಾದುದು; ಅವರ ಸಂಸ್ಥಾನ ಕನ್ನಡ ಸಂಸ್ಥಾನ. ಅದುದರಿಂದ ಅವರಿಗೆ ಗೊತ್ತು,– ಕನ್ನಡದಲ್ಲಿ ಶಿಕ್ಷಣ ಮತ್ತು ಅಭಿಪ್ರಾಯಗಳ ಪ್ರಚಾರ ಎಷ್ಟು ಅಗತ್ಯ, ಎಷ್ಟು ವಿಶೇಷವಾಗಿ ಸಾಧಿತವಾಗಬೇಕಾಗಿವೆ ಎಂಬುದು;– ಬೇರೆ ಭಾಷೆಗಳಿಂದ ಹೇಗೆ ಸರ್ವಥಾ ಆಗಲಾರದು ಎಂಬುದು.

ಜನಸಾಮಾನ್ಯರಲ್ಲಿ ಓದಿದವರಿಗೂ ಶ್ರೀಮಂತರಿಗೂ ಪರಭಾಷೆಗಳ ಮೋಹ ಇನ್ನೂ ಅತೀವವಾಗಿದೆ. ಮಹಿಳೆಯರಲ್ಲಿ ಕೂಡ ವಿದ್ಯೆ ಕಲಿತವರಲ್ಲಿ ಹಲವು ಮಂದಿಗೆ ನಮ್ಮ ನುಡಿಯಲ್ಲಿರುವುದಕ್ಕಿಂತ ಇತರ ನುಡಿ ಸಂಪ್ರದಾಯಗಳ ಮೇಲಣ ವ್ಯಾಮೋಹ ಹೆಚ್ಚಾಗಿದೆ; ಅವರ ವಿಶ್ವಾಸ ನಮ್ಮ ಕಡೆಯಿಂದ ಬೇರೆಗೆ ವೆಚ್ಚವಾಗುತ್ತಿದೆ. ಈ ಸ್ಥಿತಿಯಿಂದ ನಾವು ಬೇಗನೆ ಪಾರಾಗಲು ಕಾರ್ಯ ಕೈಕೊಳ್ಳಬೇಕು. ನಮ್ಮ ನಾಡಿನ ಈ ಭಾಗದಲ್ಲಿ, ವಿದ್ಯೆಯಲ್ಲಿ ಮುಂದುವರಿದ ನಮ್ಮ ಜನವೆಲ್ಲ ನಮ್ಮ ಭಾಷೆ, ಸಾಹಿತ್ಯ ಕಾರ್ಯಗಳಿಗಾಗಿ ವ್ರತ ಹೊತ್ತು ನಿಲ್ಲಬೇಕು ಎಂಬ ಶ್ರೀಮಾನ್ ಗುಂಡಪ್ಪಗೌಡರ ಮಾತು ಮಹತ್ವವಾದ್ದು; ಮನಸ್ಸಿನಲ್ಲಿ ನಿಲ್ಲಬೇಕಾದ್ದು. ವಿದ್ಯಾಪ್ರಚಾರ ಕಾರ್ಯದಲ್ಲಿ ಕನ್ನಡ ಭಾಷೆಯ ಸ್ಥಾನಕ್ಕೆ ಎಷ್ಟು ಗೌರವಕೊಡಬೇಕು ಎಂಬುದನ್ನು ಕುರಿತು ಶಿಕ್ಷಣ ಸಚಿವರು ಮಾತನಾಡಿದರು. ಈಗ ಶಿಕ್ಷಣ ಕ್ರಮದಲ್ಲಿ ಕನ್ನಡ ಮಾಧ್ಯಮದ ಹರಡುವಿಕೆಗೆ ಯಾವ ಮರ್ಮೋಹಗಳೂ, ಎಡರು ತೊಡರುಗಳೂ, ವೃತ್ತಿ ಪ್ರವೃತ್ತಿಗಳೂ ಅಡ್ಡಿಯಾಗುತ್ತಿವೆ; ಕನ್ನಡ ನಾಡಿನಲ್ಲೆಲ್ಲ ಹಳ್ಳಿ ಹಳ್ಳಿಗೂ ಹೇಗೆ ಕರ್ನಾಟಕ ಸಂಘಗಳು ಹುಟ್ಟಿಕೊಂಡು ಕೆಲಸ ಮಾಡಬೇಕು; ಧನಿಕರಾದವರು ಆಸ್ಪತ್ರೆ, ಛತ್ರ, ದೇವಸ್ಥಾನ ಮುಂತಾದುವುಗಳಿಗೆ ಬಿಡುವಂತೆ ಕನ್ನಡದಲ್ಲಿ ದುಡಿಯುವ ಜನರ ಪ್ರೋತ್ಸಾಹಕ್ಕೂ, ಸಾಹಿತ್ಯ ಮತ್ತು ಶಾಸ್ತ್ರ ಗ್ರಂಥಗಳ ನಿರ್ಮಾಣಕ್ಕೂ ಹೇಗೆ ದತ್ತಿಗಳನ್ನು ಬಿಡಬೇಕು; ಆ ಮೂಲಕ ಎಲ್ಲ ರೀತಿಯಲ್ಲಿಯೂ ನಮ್ಮ ಜನದ ಸಂಸ್ಕೃತಿ ಮೇಲಾಗುವುದಕ್ಕೆ ಸಹಕಾರ ಕೊಡಬೇಕು ಎಂಬುದನ್ನು ವಿವರಿಸಿದರು. ಇಂಥ ಮಾತುಗಳು ಇಂದು ಬಹಳ ಅಗತ್ಯ. ನಮ್ಮ ಶುಭೋದಯ ಕಾಲ ಹತ್ತಿರವಾಗುತ್ತಿದೆ ಎಂಬುದಕ್ಕೆ ಸೂಚನೆ.

ಕನ್ನಡ ಸಾಹಿತ್ಯ ಪರಿಷತ್ತು ಹುಟ್ಟಿದಂದಿನಿಂದ ಈ ಪರವಾಗಿ ಜನದಲ್ಲಿ ಮನವಿ ಮಾಡಿಕೊಳ್ಳುತ್ತಲೇ ಇದೆ. ಅರಮನೆಯ, ಸರ್ಕಾರದ ಮತ್ತು ಕನ್ನಡ ಜನತೆಯ ಉದಾರವಾದ ಸಹಕಾರದಿಂದ ತನ್ನ ಕೈಯಲ್ಲಾದ ಸೇವೆಯನ್ನು ನಾಡಿಗೆ ಸಲ್ಲಿಸುತ್ತಿದೆ. ಆದರೆ ಮಾಡಬೇಕಾಗಿರುವ ಕೆಲಸದ ಬೆಟ್ಟದಷ್ಟು ಪ್ರಮಾಣಕ್ಕೆ ಈವರೆಗೆ ಆಗಿರುವ ಕೆಲಸದ ಪ್ರಮಾಣ ಬಹಳ ಕಡಮೆಯಾದುದೆಂದು ಅದೂ ಬಲ್ಲುದಾಗಿದೆ. ನಮ್ಮ ಕೆಲಸ ಹಳೆಯ ಅಥವಾ ಹೊಸ ಗ್ರಂಥಗಳ ವ್ಯಾಸಂಗ, ಪ್ರಚಾರ ಮಾತ್ರವಲ್ಲ; ಗ್ರಂಥಕರ್ತರಿಗೆ ಉತ್ತೇಜನವನ್ನು ಕೊಡುವುದೋ ಕನ್ನಡ ಕೆಲಸಗಾರರ ಸಭೆಗಳನ್ನು ಸೇರಿಸಿ ಬಾಂಧವ್ಯಗಳನ್ನೂ, ಪರಿಚಯ ಸೌಹಾರ್ದಗಳನ್ನೂ, ಐಕಮತ್ಯವನ್ನೂ ಬೆಳಸುವುದೊ ಮಾತ್ರ ಅಲ್ಲ. ಅವೂ ಎಷ್ಟು ಹೆಚ್ಚು ಪ್ರಮಾಣದಲ್ಲಿ ಸಾಧಿತವಾದರೆ ಅಷ್ಟೂ, ಅಷ್ಟು ನಾಡು ಮುಂದುವರಿವುದಕ್ಕೆ ಸಹಾಯಕವೆ. ಆ ಬಗೆಗೂ ಇನ್ನೂ ಬಹುದಾರಿ ನಡೆಯಬೇಕಾದ್ದಿದೆ. ಬಹುಮುಖವಾದ ಅನುಕೂಲ ಸೌಕರ್ಯ ಒದಗಿಸಿ ಜನವನ್ನು ಬೆಸೆಯಬೇಕಾಗಿದೆ. ಅದಕ್ಕೂ ಮೇಲಾದ ಕಾರ್ಯ ಇನ್ನೊಂದುಂಟು: ನಾಳೆಯ ಹೊಸ ಜೀವನದ ಕಾಲಕ್ಕೆ ಕನ್ನಡಪ್ರಾಂತವನ್ನು ಭರತಖಂಡದ ಇತರ ಪ್ರಾಂತಗಳ ಎತ್ತಿಗೆ ನಿಲ್ಲಿಸಬೇಕಾಗಿದೆ; ಎಲ್ಲ ಬಗೆಯಲ್ಲಿಯೂ ಇತರರ ಜೊತೆಗೆ ನಿಲ್ಲುವ, ನಡೆಯುವ, ಕೀರ್ತಿ ಪ್ರತಿಷ್ಠೆಗಳನ್ನು ಗಳಿಸಿಕೊಳ್ಳುವ ಮತ್ತು ಸರ್ವಾಂಗ ಪುಷ್ಟವಾದ, ಸುಂದರವಾದ, ಸಾಧನೆಯ ಮುನ್ನೋಟವುಳ್ಳ ಒಂದು ಶಕ್ತಿಪ್ರಭಾವವನ್ನಾಗಿ ಮಾಡಬೇಕಾಗಿದೆ. ಕನ್ನಡದ ಕೆಲಸವೆಂದರೆ ಈ ಕೆಲಸ. ಕೇವಲ ಒಂದು ಸಾಹಿತ್ಯಕ್ಕೆ ಮಾತ್ರ ಸಂಬಂಧಿಸಿ ಆ ಕಾರ್ಯದಲ್ಲಿ ಮುಗಿವುದಲ್ಲ. ಪ್ರತಿ ಕನ್ನಡಿಗನೂ ತಾನು ಎಚ್ಚರಗೊಂಡು ತನ್ನ ಸುತ್ತಲ ಜೀವನವನ್ನು ಚೇತನಗೊಳಿಸುವ ಪ್ರಭಾವವಾಗಬೇಕು; ನಾಡಿನ ಪ್ರತಿ ಸಂಸ್ಥೆಯೂ ಕನ್ನಡದ ಮೂಲಕವಾಗಿ ಈ ನಾಡಿನ ಏಳಿಗೆಗಾಗಿ ದುಡಿಯುವ ಉತ್ಸಾಹಶಾಲಿಗಳ ಪಡೆಯಾಗಬೇಕು; ದೇಶದ ಬೇರೆ ಬೇರೆ ಭಾಗಗಳಲ್ಲಿನ ಜನರೂ ಸಂಸ್ಥೆಗಳೂ ಹೀಗೆ ಒಂದು ಮನಸ್ಸಿನಲ್ಲಿ ಕೂಡಿ ಒಂದೂವರೆ ಕೋಟಿ ಸಂಖ್ಯೆಯುಳ್ಳ ಕನ್ನಡಿಗರ ಈ ತಂಡವನ್ನು ದಕ್ಷವಾದ, ಕಾರ್ಯಪಟುವಾದ, ಸುಶಿಕ್ಷಿತ ಕಾರ್ಯಮಂಡಲವನ್ನಾಗಿ ಮಾಡಬೇಕು. ಇದೆಲ್ಲಕ್ಕೂ ಸಾಧನ ಕನ್ನಡನುಡಿ.

ಕಲೆ, ಶಾಸ್ತ್ರ, ಸಾಹಿತ್ಯ, ದರ್ಶನ, ವಿಜ್ಞಾನ, ಉದ್ಯೋಗ, ವ್ಯಾಪಾರ, ಯಂತ್ರತಂತ್ರ, ಸಂಪತ್ತಿ, ಆರೋಗ್ಯ, ಜೀವನ ಸೌಕರ್ಯ, ಮಾತು, ಮನಸ್ಸಿನ ಬಗೆಬಗೆಯ ಓಟ, ಎಲ್ಲ ವೃತ್ತಿಗಳ ಎಲ್ಲ ಬಗೆಯ ಉತ್ಕರ್ಷ ಇವೆಲ್ಲ ಕನ್ನಡದ ಮೂಲಕವಾಗಿ ಪೋಷಣೆಗೊಳ್ಳಬೇಕು. ಬೇರೆ ರೀತಿ ಆಗದು. ನೆಲದಿಂದ ರಸವನ್ನೂ, ಆಹಾರವನ್ನೂ ಗಿಡ ಹೀರಿಕೊಳ್ಳುತ್ತದೆ. ಸೂರ್ಯನಿಂದ ಶಕ್ತಿಯನ್ನು ಗ್ರಹಿಸುತ್ತದೆ. ಸುತ್ತಣ ಆವರಣದಿಂದ ಸಹಾಯಗಳನ್ನು ಸಂಚಯಿಸಿಕೊಳ್ಳುತ್ತದೆ. ಹಾಗೆ ಬೆಳೆದು ತನ್ನ ಬುಡ, ತಾಳು, ರೆಂಬೆ, ಕೊಂಬೆಗಳನ್ನು ಬಲಿಸಿಕೊಂಡು ಸಂತತವಾಗಿ ಎಲೆ, ಹೂಗಳ ಸಿಂಗಾರವನ್ನೂ ಹಣ್ಣು, ನೆಳಲು, ಗೂಡುಗಳ ಪ್ರಯೋಜನವನ್ನೂ ಸುತ್ತಣ ಆವರಣಕ್ಕೆಲ್ಲ ದೊರಕಿಸಿಕೊಡುತ್ತದೆ. ಹಾಗೆಯೇ ಯಾವುದೂ ತಾನೊಂದು ಕುಳವಾದ ಹೊರತು ಬೇರೊಂದಕ್ಕೆ ನೆರವಾಗಲಾರದು. ಕನ್ನಡದ ಜನತೆ ಅಂತಹ ಒಂದು ಕುಳವಾಗಬೇಕು ಎಂಬ ಹಬ್ಬಯಕೆ ಇಂದಿನ ಕನ್ನಡಿಗರದು. ಇದರಲ್ಲಿ ಜಾತಿ, ಮತ, ವಯಸ್ಸು, ಲಿಂಗ, ವೃತ್ತಿ, ಪ್ರದೇಶ, ಹಳ ಹೊಸ, ಪಂಡಿತ ಪಾಮರ ಎಂಬ ಭೇದಗಳಿಲ್ಲ. ಕನ್ನಡ ನಾಡೆಲ್ಲ ಒಂದು ರಂಗ; ಜನವೆಲ್ಲ ಒಂದು ತಂಡ; ಕನ್ನಡ ನುಡಿ ಅದರ ಉಸಿರು, ಜೀವ; ಸರ್ವತೋಮುಖವಾದ ಅದರ ಏಳಿಗೆಯೇ ಗುರಿ. ಆ ಮೂಲಕಹಾಗಿ ಒಂದು ಅಭಿಮಾನ, ಆತ್ಮ ಗೌರವದ ಸಾಧನೆ; ಹತ್ತು ಜನಕ್ಕೆ ಮತ್ತು ಎಲ್ಲ ಅಭಿವೃದ್ಧಿ ಕಾರ್ಯಗಳಿಗೆ ನೆಳವಾಗುವ ಒಂದು ಸೇವಾಪರಾಯಣತೆ; ಇತರ ಭಾಷಾಪ್ರಾಂತಗಳಲ್ಲಿ ದುಡಿವ ಜನವರ್ಗದೊಡನೆ ಕೆಳೆ; ಯಾರ ಅಹಿತಕ್ಕೂ

ಪ್ರವರ್ತಿಸದ ಮನೋವೃತ್ತಿ ಮತ್ತು ಕಾರ್ಯಯೋಗ; ನಮ್ಮದನ್ನು ರೂಡಿಸಿ ಉಳಿಸಿಕೊಳ್ಳುವ ಸಂತತವಾದ ನಿರ್ಭೀತ, ದುರ್ದಮ್ಯ ಪ್ರಯತ್ನ; ಕನ್ನಡಿಗರಾದ ನಮ್ಮದಾಗಿ, ಭರತಖಂಡಕ್ಕೂ ಆ ಮೂಲಕ ಪ್ರಪಂಚಕ್ಕೂ ವಿಶೇಷವಾಗಿ ನಾವು ಮಾತ್ರವೇ ಸಲ್ಲಿಸ ಬಹುದಾದ ಒಂದು ಸೇವೆಯನ್ನು ನಮ್ಮ ಕಾಲದಲ್ಲಿ ಸಲ್ಲಿಸಿ ಕೃತಾರ್ಥ ರಾಗಬೇಕಾದುದು;– ಇದು ಆದರ್ಶ.

ಆದುದರಿಂದ ವಿದ್ಯಾಕೇಂದ್ರಗಳಲ್ಲಿಯಾಗಲಿ, ನ್ಯಾಯ ವಿಮರ್ಶನ ಶಾಲೆಗಳಲ್ಲಿಯಾಗಲಿ ಸಭೆ ಸಮ್ಮೇಳನಗಳಲ್ಲಿಯಾಗಲಿ ಸಾರ್ವ ಜನಿಕ ಕೂಟ ಮತ್ತು ವ್ಯಾಪಾರ, ಉದ್ಯೋಗ ಕ್ಷೇತ್ರಗಳಲ್ಲಿ ಯಾಗಲಿ, ದಿನದ ಬಳಕೆಯಲ್ಲಿಯಾಗಲಿ, ಸಾಹಿತ್ಯ ಮತ್ತು ಶಾಸ್ತ್ರ ಪ್ರಚಾರ ಕಾರ್ಯಗಳಲ್ಲಿಯಾಗಲಿ ಎಲ್ಲದರಲ್ಲಿಯೂ ಈ ಆದರ್ಶದ ಕಡೆಗೇ ನಮ್ಮ ಎಲ್ಲ ಗಮನವೂ, ಯೋಜನೆಯೂ ಇರಬೇಕಾಗು ವುದು. ಇಂದು ಬಹಳ ಪ್ರಬಲ ರಾಷ್ಟ್ರಗಳೆನ್ನಿಸಿಕೊಂಡ ಜರ್ಮನಿ, ಜಪಾನ್, ಅಮೇರಿಕಾ, ರಷ್ಯಾ ಮುಂತಾದ ದೇಶಗಳು ಪ್ರಬುದ್ಧ ವಾಗಿ ಇನ್ನೂ ಪೂರ್ತಿ ಒಂದು ನೂರು ವರ್ಷವಾಗಿಲ್ಲ. ಅವುಗಳ ಸಾರಸ್ವತ, ಶಸ್ತ್ರ, ಶಾಸ್ತ್ರ, ಯಂತ್ರ, ಸಂಪತ್ತಿ, ವ್ಯವಸ್ಥೆ ಬೆಳೆವುದಕ್ಕೆ ಮೊದಲಾಗಿ ೫೦-೬೦ ವರ್ಷಕ್ಕೆ ಮೀರಿಸಮಯವಾಗಿಲ್ಲ. ಆ ನಾಡುಗಳು ಯಾವುವೂ ಬೇರೆನುಡಿ, ಬೇರೆ ನಡೆ, ಬೇರೆ ಮನಸ್ಸು, ಬೇರೆಯವರ ರೀತಿಗಳಿಗೆ ಮರುಳಾಗಿ ತಮ್ಮನ್ನು ಮಾರಿಕೊಂಡವಲ್ಲ; ಯಾವ ಭಾವದಾಸ್ಯಕ್ಕೂ ಕಟ್ಟುಬಿದ್ದುವಲ್ಲ; ಯಾವ ಕಟ್ಟು ಅಡ್ಡಿಗಳಿಗೂ ಬಾಗಿ ಕುಗ್ಗಿದವಲ್ಲ; ತಮ್ಮ ಶಕ್ತಿಯ ಬೆಳೆವಣಿಗೆಯ ಕಾರ್ಯವನ್ನೆಲ್ಲ ತಮ್ಮ ದೇಶ ಭಾಷೆಗಳ ಮೂಲಕವೇ ಮಾಡಿಕೊಂಡಿವೆ. ಇಂಥ ಸಂಗತಿಗಳನ್ನು ನಾಡಿನ ಜನ ಸರ್ವದಾ ಮುಂದಿರಿಸಿಕೊಂಡು ನಮ್ಮ ಮಂತ್ರಿವರ್ಯರು ಸೂಚಿಸಿರುವ ದಾರಿಯಲ್ಲಿ ನಡೆದು ಕನ್ನಡ ನಾಡಿನ ಅಭಿವೃದ್ಧಿಯನ್ನು ಸಾಧಿಸುವ ಮಹಾ ಕಾರ್ಯದಲ್ಲಿ ದೀಕ್ಷೆಗೊಳ್ಳಬೇಕು. ಸರಕಾರದವರು ಈ ಕೆಲಸ ಹಣ್ಣಾಗುವುದಕ್ಕೆ ಏನೇನನ್ನು ಮಾಡಬೇಕೋ ಅದೆಲ್ಲವನ್ನೂ ಕೈಕೊಂಡು ಇನ್ನು ೫–೧೦ ವರ್ಷಗಳೊಳಗಾಗಿ ಕನ್ನಡಕ್ಕೆ ತನ್ನ ಮನೆಯಲ್ಲಿ ಈ ಗೌರವ ಸಲ್ಲುವಂತೆ ಮಾಡಿಕೊಡಬೇಕು.

### ಕಂತಿ

(೧೫೩ನೆಯ ಪುಟದಿಂದ)

ಉತ್ತರವಾಗಿ –

ಆಯುತದಿಂ ಕಂಗುಂಗೇ
ಕಾಯಂ ತಾ ತಂದು ಸೂರ್ಯಪುಟದೋಳ್ ಸಪ್ತೋ
ಪಾಯದಿ ತೆಗೆದೆಣ್ಣೆಯನು ದಿ
ನಾಯಂ ಕೊಳಲೇಳು ದಿನಕೆ ಮತಿ ಸಮನಿಸಿತು

ಎಂದು ಕಂತಿ ಜ್ಯೋತಿಷ್ಮತೀ ತೈಲವನ್ನು ಮಾಡುವ ವಿಧಾನವನ್ನೂ ಕೂಡ ಸಮಸ್ಯೆಯನ್ನು ಪೂರ್ತಿ ಮಾಡುವ ನೆಪದಲ್ಲಿ ತಿಳಿಸಿದ್ದಾಳೆ.

ಕಂತಿ – ಹಂಪರ ಸಮಸ್ಯೆಗಳಲ್ಲಿ ಕೆಲವು ಅಸಂಬದ್ಧವಾಗಿ ತೋರುತ್ತವೆ. ಮತ್ತೆ ಕೆಲವು ಒಗಟುಗಳಂತೆ ಮನರಂಜಕವಾಗಿವೆ. ಅವುಗಳ ಅರ್ಥ ಬೇಗನೆ ಸ್ಫುರಿಸುವುದಿಲ್ಲ. ಸ್ವಲ್ಪ ಯೋಚಿಸಿದರೆ ಅವುಗಳ ಸ್ವಾರಸ್ಯ ಗೊತ್ತಾಗುತ್ತದೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಉದಾಹರಿಸಬಹುದು.

ಪಂಪ :—"ಸತ್ತವಳಿದ್ದು ತೌರೂರಿಗೆ ಪೋಗುತಿರ್ದಳ್!"

ಕಂತಿ :—ಅತ್ತೆಯ ಕಾಟವು ಅಧಿಕಂ
ಪೊತ್ತಿನ ಸವತಿಯರ ಕಾಟ ನಾದಿನಿ ಬೈವಳ್
ಪೆತ್ತ ಮಕ್ಕಳಳಲ್ಕೆ ಬೇ
ಸತ್ತವಳಿದ್ದು ತೌರೂರಿಗೆ ಪೋಗುತಿರ್ದಳ್

ಇದರಲ್ಲಿ ದುರ್ದೈವಿಯಾದ ಹೆಂಗಸೊಬ್ಬಳ ಒಡಕು ಸಂಸಾರ ವನ್ನು ಚಿತ್ರಿಸಿದ್ದಾಳೆ.

ಪಂಪ :—ಮುಸಗಲ್ ಕೊಡಲಿಯು ಬಾಚಿಯು
ವಸುಧಾತಳಕಿಳಿವ ಉಳಿಯು ಒಂದೇ ಕಂದದಿ
ಉಸುರೆಂದು ಸುಗುಣೆ ಕಂತಿಗೆ
ಅಸಮುಸಮಸ್ಯವನು ಕೊಟ್ಟನಭಿನವ ಪಂಪಂ

ಕಂತಿ :—ಮುಸಗಲು ಗಿಳಿ ಮಾವು ಫಲಮಂ
ವಸುಧಾತಳಕುದುರೆ ಬಾಚಿ ಕಟ್ಟಿದಳೊರ್ವಳ್
ಶಶಿಮುಖಿಗೆ ಕೊಡಲಿ ಕಾಣಿಕೆ
ಪೊಸ ಪಣ್ಣಂ ಸವಿದು ನೋಡಿ ನಸುವುಳಿಯೆಂದಳ್

ಈ ರೀತಿ ಕೊಡಲಿ, ಬಾಚಿ, ಉಳಿಗಳನ್ನು ಸಮಂಜಸವಾದ ಅರ್ಥ ಬರುವಂತೆ ಜೋಡಿಸಿ ಕಂದ ಪದ್ಯವನ್ನು ಕಟ್ಟಿದಳು.

ಪಂಪ :—"ವಿಪ್ರರು ಕಾಗೆ ಮಾಂಸವ ಭಕ್ಷಿಪುದು ಕಂಡೆ ಇದೇನು ಚಿತ್ರವೆ ಕಂತೀ!"

ಕಂತಿ :—"ಬೆಟ್ಟದ ತಪ್ಪಲೊಳ್ ನವಿಲು ಪಾಲ್ಗರೆಯೆ
ಪಶುವು ಚೆಣ್ಣನೆತ್ತಿ ಬಾಲೆ ವೇದವನೋದೆ
ವಿಪ್ರರು ಕಾಗೆ ಮಾಂಸವನು ಭಕ್ಷಿಸುವರಲ್ಲದೆ"

ಹಂಪನು ಕೊಟ್ಟ ಸಮಸ್ಯೆಗೆ ಸಮಸ್ಯೆಯ ರೂಪದಿಂದಲೇ ಕಂತಿ ಉತ್ತರ ಕೊಟ್ಟಿದ್ದಾಳೆ. ಇದರಲ್ಲಿಯ ಪದಗಳನ್ನು ಸ್ವಲ್ಪ ಹಿಂದು ಮುಂದು ಮಾಡಿದರೆ ಅರ್ಥ ಸ್ವಲ್ಪ ಸ್ಪಷ್ಟವಾಗುತ್ತದೆ.

ಕಂತಿಯೂ ಕೆಲವು ಸಮಸ್ಯೆಗಳನ್ನು ಪಂಪನಿಗೆ ಕೊಟ್ಟಿರಬಹುದು.

ಕಂತಿ :—ಕಡೆದೊಡೆಯಲ್ ಹರನಾಮಂ
ನಡುದೊಡೆಯಲ್ ಹವಿಯನಾಮ ಮಾದ್ಯಕ್ಷರಮಂ
ತೊಡೆಯಲ್ಕೆ ರವಿಯನಾಮಂ
ಕಡೆಯಿಂದೋದಲ್ಕೆ ವಿರಹ ಕಾಣಿಲೊ ಪಂಪಾ

ಇದು ಒಗಟಿಯ ರೂಪದಲ್ಲಿದೆ. ಇದನ್ನು ಬಿಡಿಸಿದರೆ 'ಹರವಿ' ಎಂದಾಗುತ್ತದೆ. ಈ ಬಗೆಯ ವಾದ, ಉತ್ತರ ಪ್ರತ್ಯುತ್ತರಗಳಿಂದ ಸಮಸ್ಯೆಗಳು ಮುಂದುವರಿಯುತ್ತವೆ. ಶಬ್ದ ಚಮತ್ಕಾರದಿಂದ ಕೂಡಿದ ಒಗಟಿಯ ರೂಪದಲ್ಲಿರುವ ಕಂತಿ-ಹಂಪರ ಸಮಸ್ಯೆಗಳು ಅಚ್ಚಾ ಗಿರುವಂತೆ ಕಂಡು ಬಂದಿಲ್ಲ. ಸ್ತ್ರೀಯರಿಗೆ ಒಗಟಿಗಳೆಂದರೆ ಪಂಚಪ್ರಾಣ ಮದುವೆಗಳಲ್ಲಿ ಬಾಗಿಲು ತಡೆಯುವಾಗ ವಧೂವರರಿಂದ ಒಗಟಿಗಳ ರೂಪದಲ್ಲಿ ಹೆಸರು ಹೇಳಿಸುವ ಪದ್ಧತಿಯಿದೆ. ಒಗಟಿಗಳನ್ನು ಬಿಡಿಸು ವಾಗ ಕಳೆಯುವ ಕಾಲದ ನೆನಪೂ ಹೆಂಗಸರಿಗಿರುವುದಿಲ್ಲ. ಇಂತಹ ಸಾಹಿತ್ಯವನ್ನು ಅವರು ಆದರದಿಂದ ಬರಮಾಡಿಕೊಳ್ಳುವರು.

ಕಂತಿಯ ಬುದ್ಧಿ ಚಾತುರ್ಯವನ್ನು ಒರೆಗೆ ಹಚ್ಚಿದ್ದ ಪಂಪನಿಗೆ ಆಕೆಯ ವಿಚಾರದಲ್ಲಿ ಬಹಳ ಗೌರವವಿದ್ದಿತು. ಅವಳ ಮೆಚ್ಚಿಗೆಯನ್ನು ಪಡೆಯದಿದ್ದರೆ ತಾನು ಕವಿಯೆನಿಸಿಕೊಂಡದ್ದು ಸಾರ್ಥಕವಲ್ಲವೆಂದು ಭಾವಿಸಿದ್ದನು. "ನರಗುರಿ ಹಂಪ"ನೆಂದು ಕಂತಿ ಅವನನ್ನು ಕಡೆ ಗಣಿಸಿದ್ದಳು. ಆದರೂ ಅವನ ವಿಚಾರದಲ್ಲಿ ಅವಳಿಗೆ ಆದರವೇನೋ ಇದ್ದೇ ಇತ್ತು. ಅವಳು ಬಹಳ ಚಲಗಾತಿ. ಪಂಪನನ್ನು ಹೊಗಳಲಿಲ್ಲ. ಹೇಗಾದರೂ ಮಾಡಿ ಅವಳ ಬಾಯಿಂದ ತನ್ನ ಹೊಗಳಿಕೆಯನ್ನು ಕೇಳ ಬೇಕೆಂದು ಪಂಪನ ಹಟ. ಅದಕ್ಕಾಗಿ ಪಂಪನು ಒಂದು ಉಪಾಯ ವನ್ನು ಹೂಡಿದನು. ಕೆಲವು ದಿನಗಳು ಕಳೆದುವು. ಪಂಪನಿಗೆ ಯಾವುದೋ ಕಾಯಿಲೆಯೆಂಬ ಸುದ್ದಿ ಊರಲ್ಲೆಲ್ಲಾ ಹರಡಿತು. ಪಂಪನು ಬೇನೆಯಿಂದ ದಿನದಿನಕ್ಕೆ ಕ್ಷೀಣಿಸಿ ಹೋಗುತ್ತಿದ್ದಾನೆಂದೂ, ಉಳಿಯುವ ಸಂಭವವೇ ಇಲ್ಲವೆಂದೂ ಮಾತು ಹೊರಟಿತು. ಕಡೆಗೊಂದು ದಿನ ಪಂಪನು ಸತ್ತೇ ಹೋದನೆಂಬ ಸಮಾಚಾರವೂ ಬಂದಿತು. ಊರಿಗೆ ಊರೆ ಆಸ್ಥಾನ ಕವಿಯ ಅಂತಿಮ ದರ್ಶನಕ್ಕಾಗಿ ಹೊರಟಿತು. ಈ ಸುದ್ದಿ ಕಂತಿಯ ಕಿವಿಗೂ ಬಿದ್ದಿತು. ವೈರಕ್ಕೆ ಮರಣವೇ ಅಂತ್ಯ. ಪಂಪನು ಬದುಕಿರುವಾಗ ಅವನನ್ನು ತಿರಸ್ಕರಿಸು ತ್ತಿದ್ದಳು. ಅವನು ಗತಿಸಿದನೆಂಬ ಸುದ್ದಿಯನ್ನು ಕೇಳಿ ಮಲಮಲ ಮರುಗಿ ಅವನ ಕಟ್ಟಕಡೆಯ ದರ್ಶನವನ್ನು ಪಡೆಯಬೇಕೆಂದು ಅವನ ಮನೆಗೆ ಹೋದಳು. ಪಂಪನು ಸತ್ತವನಂತೆ ನಟಿಸಿ ಶವದಂತೆ ಬಿದ್ದಿರಲು ಕಂತಿ ಈತನನ್ನು ಈತನ ಕವಿತಾ ವೈಖರಿಯನ್ನು ಕುರಿತು –

"ಕವಿರಾಯ ಕವಿಪಿತಾಮಹ!
ಕವಿಕಂಠಾಭರಣ ಕವಿಶಿಖಾಮಣಿ ಭಾಪುರೆ!

ಪಂಪುಗ ಕವಿಚಕ್ರೇಶಂಗೆ ಸಾವು ಸಮನಿಸಿತಕಟಾ !
ಕಲ್ಲೊಸರ್ಗುಂ ಕೊಯ್ದೊಣಗಿದ
ಪುಲ್ಲೆಲ್ಲಂ ಚಿಗುರ್ಗುಮಡವಿಗಡಿದಮರಂಗಳ್
ಪಲ್ಲವಿಕುಮಮಮ ಕವಿಗಜ
ಮಲ್ಲನ ಪಂಪುಗನ ಕಾವ್ಯರಸಾಮೃತದಿಂ
ಇನ್ನೇಕೆ ದೋರನೋಲಗ
ಮಿನ್ನೇಕೆ ಕವಿತ್ವ ವಾದ ತರ್ಕ ಸಮಸ್ಯಂ
ಇನ್ನೇಕೆ ಬಲ್ವಿಚಾರಂ
ಚೆನ್ನಿಗ ಕವಿ ಪಂಪರಾಜನಳಿದ ಬಳಿಕ್ಕಂ "

ಎಂದು ಹಾಡಿ ಹಾಡಿ ಅತ್ತಳು. ಭೋಜರಾಜನು ಕಾಳಿದಾಸನ ಬಾಯಿಂದ ತನ್ನ ಚರಮಗೀತೆಯನ್ನು ಕೇಳಿದಂತೆ ಪಂಪನಾದರೂ ಉಪಾಯಾಂತರದಿಂದ ಕಂತಿಯ ಬಾಯಲ್ಲಿ ತುಂಬ ಹೊಗಳಿಕೆಯ ತನ್ನ ಚರಮಗೀತೆಯನ್ನು ಕೇಳಿದನು. ಕೂಡಲೆ ಮಲಗಿದ್ದ ಶವ ಚಟ್ಟನೆ ಎದ್ದು ಕುಳಿತಿತು. "ನಿನ್ನಿಂದ ಹೊಗಳಿಸಿಕೊಂಡು ಪಂಥವನ್ನು ಗೆದ್ದೆನು " ಎಂದು ಪಂಪನು ಹೇಳಿದನು. ಇದರಿಂದ ಕವಿಗಳ ಮಧ್ಯೆ ಕಂತಿ ಯಾವ ಸ್ಥಾನವನ್ನು ಪಡೆದಿದ್ದಳೆಂಬುದು ವ್ಯಕ್ತವಾಗುತ್ತದೆ.

ಬಾಹುಬಲಿ (ಸು. ೧೨ನೆಯ ಶತಮಾನ) ಕಂತಿಯನ್ನು ಕುರಿತು ಈಕೆ "ದೋರರಾಯನ ಸಭೆಗೆ ಮಂಗಳ ಲಕ್ಷ್ಮಿಯಾಗಿದ್ದಳು' ಎಂದು ಹೊಗಳಿದ್ದಾನೆ. ಇದಲ್ಲದೆ ಅವಳನ್ನು "ಅಭಿನವ ವಾಗ್ದೇವಿ" ಎಂದೂ ಕರೆದಿದ್ದಾನೆ. "ಅಭಿನವವಾಗ್ದೇವಿ" ಎಂದು ಕಂತಿಗೆ ಬಿರುದು ಇದ್ದಂತೆ ಕಾಣುತ್ತದೆ. ಇದರಿಂದ ಆಕೆಯ ವಾಕ್‌ಪ್ರೌಢಿಮೆ ಎಂತಹದು ಎಂಬುದನ್ನು ಮನಗಾಣಬಹುದು. ಆದರೆ ಕನ್ನಡಿಗರ ದುರದೃಷ್ಟದಿಂದ ಅವಳವೆಂದು ಹೇಳಬಹುದಾದ ಗ್ರಂಥಗಳಾವುವೂ ಸಿಕ್ಕಿಲ್ಲ. ಅದು ಹೇಗಾದರೂ ಇರಲಿ ಕಂತಿಯೆಂಬುವಳೊಬ್ಬ ಕಬ್ಬಿಗಿತಿ ಇದ್ದಿದ್ದ ಪಕ್ಷದಲ್ಲಿ ನಮಗೆ ತಿಳಿದಿರುವಮಟ್ಟಿಗೆ ಇವಳೇ ಕನ್ನಡನಾಡಿನ ಬರಹಗಾತಿಯರಲ್ಲಿ ಮೊದಲನೆಯವಳು. ಕನ್ನಡನಾಡಿನ ಕಬ್ಬಿಗಿತಿಯರ ಕೈದೀವಟಗೆಯಂತಿರುವ ಕಂತಿ ನಮ್ಮೆಲ್ಲರ ಗೌರವಕ್ಕೆ ಅರ್ಹಳು.

## ಪರಿಷತ್ತಿನ ಸುದ್ದಿ

### ಪರಿಷತ್ತಿನ ಸದಸ್ಯರ ಬೆಳವಣಿಗೆ

**ಸಹಾಯಕ ಸದಸ್ಯರು (೧೦೦ ರೂ.)** : ಶ್ರೀಗಳಾದ ನಾರಾಯಣರಾವ್ ಜಿ. ನಾಯಕ್ ಅವರು, ಮ್ಯಾನೇಜಿಂಗ್ ಡೈರೆಕ್ಟರು ಶ್ರೀರಾಮ ಸಿಲ್ಕ್ ಮಿಲ್ಸ್, ಬೆಂಗಳೂರು.

**ಸಾಮಾನ್ಯ ಸದಸ್ಯರು (೫ ರೂ.)** : ಶ್ರೀಗಳಾದ ೧. ಎಂ. ಕೆ. ಮೂರ್ತಿ ಅವರು, ಸರ್ಕಲ್ ಬೋರ್ಡಿಂಗ್ ಹೋಂ, ವಿಶ್ವೇಶ್ವರಪುರ. ೨. ಗುಲಾಂ ಮಹಮುದ್ ಅವರು, ಬಿ.ಎ., ಬಿ.ಟಿ., ಕಾರ್ಯದರ್ಶಿಗಳು, ಉರ್ದು ಟೆಕ್ಸ್ಟ್ ಬುಕ್ ಕಮಿಟಿ, ಬೆಂಗಳೂರು.

### ನಾಡಿನ ಕನ್ನಡ ಸಾಹಿತ್ಯ ಸಂಸ್ಥೆಗಳಲ್ಲಿ ಬಿನ್ನಹ

ಕಳೆದ ೨೮ ವರ್ಷಗಳಿಂದ ಪರಿಷತ್ತು, ಅಖಿಲ ಕರ್ನಾಟಕ ಸಂಸ್ಥೆಯಾಗಿ, ನಾಡು ನುಡಿಗಳ ಏಳ್ಗೆಗಾಗಿಯೂ ಮತ್ತು ಸಾಂಸ್ಕೃತಿಕ ಏಕೀಕರಣಕ್ಕಾಗಿಯೂ ದುಡಿಯುತ್ತಿರುವುದು ಮಹಾ ಜನಗಳಿಗೂ ಕನ್ನಡ ಸಂಘಗಳಿಗೂ ತಿಳಿದ ವಿಷಯವಾಗಿದೆ. ಕರ್ನಾಟಕ ಸಂಘಗಳಂತಹ ಸಂಸ್ಥೆಗಳಿಗೂ ಪರಿಷತ್ತಿಗೂ ಇರುವ ಉದ್ದೇಶಗಳೂ ಧ್ಯೇಯಗಳೂ ಸಮಾನವಾಗಿವೆ.

ಈಗ ಸುಮಾರು ೨೦೦ಕ್ಕೆ ಮೇಲ್ಪಟ್ಟು ಸಂಘಗಳು ನಾಡಿನಲ್ಲಿ ಕೆಲಸಮಾಡುತ್ತಿವೆ. ಇವೆಲ್ಲ ಒಮ್ಮುಖವಾಗಿ ಶಿಸ್ತಿನಿಂದ ಕಾರ್ಯ ನಡಸಿದರೆ ನಮ್ಮೆಲ್ಲರ ಗುರಿ ಬೇಗ ಸಫಲವಾಗುವುದೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಈ ದೃಷ್ಟಿಯಿಂದ ಪರಿಷತ್ತಿಗೂ ಸ್ಥಳೀಯ ಸಾಹಿತ್ಯ ಸಂಸ್ಥೆಗಳಿಗೂ ಪರಸ್ಪರ ಬಾಂಧವ್ಯ ಏರ್ಪಟ್ಟರೆ ಎರಡಕ್ಕೂ ಪ್ರಯೋಜನ ಉಂಟೆಂಬುದರಲ್ಲಿ ಸಂಶಯವಿಲ್ಲ.

ಪ್ರತಿವರ್ಷವೂ ಸಮ್ಮೇಳನದ ಕಾಲದಲ್ಲಿ ಕರ್ನಾಟಕದಲ್ಲಿರುವ ಎಲ್ಲ ಕನ್ನಡ ವಾಙ್ಮಯ ಸಂಘಗಳೂ ಈ ಪರಿಷತ್ತಿನ ಶಾಖೆಗಳಾಗಿರಬೇಕಾದ ಆವಶ್ಯಕತೆ ಕುರಿತು ನಿರ್ಣಯಗಳು ಆಗುತ್ತಲೇ ಇವೆ.

ಈ ಸೂಚನೆಯನ್ನು ಸಂಘಗಳು ಸ್ನೇಹ ದೃಷ್ಟಿಯಿಂದ ಪರ್ಯಾಲೋಚಿಸಿ ಅಂಗೀಕರಿಸುವುವೆಂದು ನಂಬಿದೆ.

ಸಂಘಗಳು ಪರಿಷತ್ತಿನ ಅಂಗ ಸಂಸ್ಥೆಗಳಾಗಿ ಸಹಾಯವನ್ನು ಪಡೆದು, ಕಾವ್ಯವಾಚನ, ಉಪನ್ಯಾಸ, ಅಕ್ಷರ ಪ್ರಚಾರ, ಸಾಹಿತ್ಯ ಪರೀಕ್ಷೆಗಳು ಮೊದಲಾದುವುಗಳ ಮೂಲಕ ಹಳ್ಳಿ ಹಳ್ಳಿಯಲ್ಲಿಯೂ ಸಾಹಿತ್ಯ ಪ್ರಚಾರಮಾಡಿ ಅನಕ್ಷರಸ್ಥರಾದ ಕನ್ನಡಿಗರಿಗೆ ಕನ್ನಡದ ಮೂಲಕ ತಿಳಿವಳಿಕೆ ಕೊಟ್ಟು ಪರಿಷತ್ತಿನ ಉದ್ದೇಶ ಸಾಧನೆಯಲ್ಲಿ ಎಲ್ಲ ರೀತಿಯಲ್ಲಿಯೂ ಸಹಕರಿಸುವುವೆಂದು ಪರಿಷತ್ತು ಹಾರೈಸುತ್ತದೆ.

ಬೆಂಗಳೂರು — ಬಿ. ವೆಂಕೋಬರಾವ್,
ತಾ॥ ೨೦-೫-೪೩ — ಕಾರ್ಯದರ್ಶಿ.

### ಗಮಕ ತರಗತಿ

೧೭ನೆಯ ತಾರೀಖು ಬದಲು ಇದೇ ೨೪ನೆಯ ತಾರೀಖು ಸೋಮವಾರದಿಂದ ಪ್ರಾರಂಭವಾಗಿ ನಡೆಯುವುದು. ಸೇರಲಿಚ್ಛಿಸುವವರು ೨೨ನೆಯ ತಾ॥ ವರೆಗೂ ಅಪೇಕ್ಷೆಪತ್ರಗಳನ್ನು ಸಲ್ಲಿಸಬಹುದು. ಸೇರಬಯಸುವ ಎಲ್ಲ ವಿದ್ಯಾರ್ಥಿಗಳು ೨೪ನೆಯ ತಾರೀಖು ಸಂಜೆ ೭ ಗಂಟೆಗೆ ಪರಿಷನ್ಮಂದಿರದಲ್ಲಿ ಬಂದಿರಬೇಕು.

### ಸಂಗೀತ

೨೨-೫-೪೩ನೆಯ ಶನಿವಾರ ಸಂಜೆ ೭ ಗಂಟೆಗೆ ಪರಿಷನ್ಮಂದಿರದಲ್ಲಿ ಶ್ರೀ. ಟಿ. ಎಚ್. ನರಹರಿರಾಯರ ಸಂಗೀತ. ಶ್ರೀ. ಟಿ. ಎನ್. ರಾಮಚಂದ್ರರಾಯರು ಪಿಟೀಲು ವಾದ್ಯವನ್ನೂ ಚಿ॥ ಶ್ರೀಕಂಠಯ್ಯನು ಮೃದಂಗ ವಾದ್ಯವನ್ನೂ ನುಡಿಸುವರು.

### ಉಪನ್ಯಾಸ

ಕಲ್ಕತ್ತೆಯಿಂದ ದಯಮಾಡಿಸಿರುವ ಶ್ರೀ. ಶ್ಯಾಮಲ ಕೃಷ್ಣ ಘೋಷ್ ಅವರು, ೨೪-೫-೪೩ನೆಯ ಸೋಮವಾರ ಸಂಜೆ ೭ ಗಂಟೆಗೆ ಪರಿಷನ್ಮಂದಿರದಲ್ಲಿ " ಬಂಗಾಳಿಯಲ್ಲಿ ಶಿಶು ಸಾಹಿತ್ಯ " ಎಂಬ ವಿಷಯವನ್ನು ಕುರಿತು ಇಂಗ್ಲಿಷಿನಲ್ಲಿ ಉಪನ್ಯಾಸ ಮಾಡುತ್ತಾರೆ.

### ನಾಟಕ ವಾಚನ

೨೫-೫-೪೩ನೆಯ ಮಂಗಳವಾರ ಸಂಜೆ ೭ ಗಂಟೆಗೆ ಶ್ರೀ. ಬಿ. ಎಸ್. ರಾಮರಾವ್ ಬಿ.ಎ., ಅವರು, ಶ್ರೀ. ಟಿ. ಪಿ. ಕೈಲಾಸಂ ಅವರ " ಶೂರ್ಪನಖಾ ಕುಲವೈಭವ " ನಾಟಕವನ್ನು ವಾಚಿಸುವರು.

### ಪರಿಷತ್ತಿಗೆ ಗ್ರಂಥ ದಾನ

ಶ್ರೀಗಳಾದ ಅ. ನಾರಾಯಣಸ್ವಾಮಿ ಅಯ್ಯರ್ ಅವರು, ತಮ್ಮ ಕುಟುಂಬ ಶ್ರೀಮತಿ ಸೌ॥ ರಾಜಮ್ಮನವರ ಹೆಸರಿನಲ್ಲಿ ಪರಿಷತ್ತಿಗೆ ಈ ಕೆಳಗೆ ಕಂಡಂತೆ ೩೨೦ ರೂಪಾಯಿಗಳ ಬೆಲೆಯ ೧೩೫ ಪುಸ್ತಕಗಳನ್ನು ದಾನ ಮಾಡಿರುತ್ತಾರೆ. ಅಲ್ಲದೆ ಅವುಗಳನ್ನು ಇಡುವ ಸಲುವಾಗಿ ಒಂದು ಬೀರುವನ್ನೂ ಕೊಡುವುದಾಗಿ ವಾಗ್ದಾನ ಮಾಡಿರುತ್ತಾರೆ. ಪರಿಷತ್ತು ಈ ದಾನವನ್ನು ಕೃತಜ್ಞತೆಯಿಂದ ಸ್ವೀಕರಿಸಿದೆ.

೩೬ ಕನ್ನಡಭಾಷೆಯ ಪುಸ್ತಕಗಳು.
೫೭ ಬಂಗಾಳಿ ಭಾಷೆಯ ಪುಸ್ತಕಗಳು.
[ಕವಿ ರವೀಂದ್ರರ ಎಲ್ಲ ಕೃತಿಗಳೂ ಸೇರಿವೆ.]
೧೨ ಹಿಂದಿ ಭಾಷೆಯ ಪುಸ್ತಕಗಳು.
೩೦ ಇಂಗ್ಲಿಷ್ ಭಾಷೆಯ ಪುಸ್ತಕಗಳು.

### ಗೆಳೆಯರ ಕೂಟ, ಗೋಕರ್ಣ

ಕೂಟದ ಆಶ್ರಯದಲ್ಲಿ ಮಂಗಳೂರಿನ ಪ್ರಸಿದ್ಧ ವಕೀಲರೂ, ಮಿತ್ರ ಮಂಡಳಿಯ ಸದಸ್ಯರೂ ಆದ ಶ್ರೀ. ರಂಗರಾವ್ ತಲಚೇರಿಕಾರ್ ಅವರು—" ಉತ್ತರ-ದಕ್ಷಿಣ ಕನ್ನಡ ಜಿಲ್ಲೆಗಳ ಐಕ್ಯ " ವೆಂಬ ವಿಷಯದ ಮೇಲೆ ಕಳೆದ ವಾರ ಭಾಷಣವನ್ನು ಮಾಡಿದರು.

೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧–೮–೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧೨
ಬಿಡಿ ಪತ್ರಿಕೆ: ೬ ಕಾಸು




ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮–೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈ ಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿ ಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ

ಬೆಂಗಳೂರು: ಶುಕ್ರವಾರ, ಮೇ ೨೮, ೧೯೪೩

ಸಂಚಿಕೆ ೩೧

## ಬಂಗಾಳಿಯಲ್ಲಿ ಶಿಶು ಸಾಹಿತ್ಯ

ಪರಿಷತ್ತಿನ ಮೈಸೂರು ಪ್ರಾಂತಸಮಿತಿಯ ಆಶ್ರಯದಲ್ಲಿ ೨೪–೫–೪೩ನೆಯ ಸೋಮವಾರ ಪರಿಷನ್ಮಂದಿರದಲ್ಲಿ ಕಲ್ಕತ್ತೆಯ ಶ್ರೀ. ಶ್ಯಾಮಲ ಕೃಷ್ಣ ಘೋಷ್ ಅವರು 'ಬಂಗಾಳಿಯಲ್ಲಿ ಶಿಶು ಸಾಹಿತ್ಯ' ಎಂಬ ವಿಷಯವನ್ನು ಕುರಿತು ಉಪನ್ಯಾಸ ಮಾಡಿದರು. ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಪ್ರಸಕ್ತ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ಅಧ್ಯಕ್ಷತೆ ವಹಿಸಿದ್ದರು.

ಅಧ್ಯಕ್ಷರು ತಮ್ಮ ಮೊದಲ ಮಾತಿನಲ್ಲಿ ಉಪನ್ಯಾಸಕರಾದ ಶ್ರೀ. ಶ್ಯಾಮಲ ಕೃಷ್ಣ ಘೋಷ್ ಅವರ ಸಾಹಿತ್ಯ ಸೇವೆಯನ್ನು ಪ್ರಶಂಸೆ ಮಾಡಿ, ಅವರ ವೃತ್ತಿ ಬೇರೆಯಾದರೂ ಅವರು ಸಾಹಿತ್ಯದಲ್ಲಿ ಅಭಿರುಚಿಯನ್ನು ಬೆಳಸಿಕೊಂಡು ಕೃತಿಗಳನ್ನು ರಚಿಸುತ್ತ ಬಂಗಾಳಿ ಸಾಹಿತ್ಯ ಚರಿತ್ರೆಯಲ್ಲಿ ಗಣ್ಯವಾದ ಸ್ಥಾನವನ್ನು ಪಡೆದಿದ್ದಾರೆ ಎಂದು ಹೇಳಿ, ಭಾರತದ ವಿವಿಧ ಭಾಷೆಗಳಲ್ಲಿ ಪರಸ್ಪರ ಸ್ನೇಹ ಸೌಹಾರ್ದಗಳು ಬೆಳೆಯ್ಯಬೇಕು. ಹೀಗೆ ಒಂದು ಪ್ರಾಂತದ ಜನರು ಇನ್ನೊಂದು ಪ್ರಾಂತಕ್ಕೆ ಹೋಗಿ ಪರಸ್ಪರವಾಗಿ ಸಾಹಿತ್ಯ ಸಂಸ್ಕೃತಿಗಳ ಪರಿಚಯ ಮಾಡಿಕೊಂಡು ಭರತಖಂಡದ ಒಟ್ಟು ಸಂಪತ್ತನ್ನು ಬೆಳಸಬೇಕು ಎಂದರು.

ಬಳಿಕ ಶ್ರೀ. ಅ. ನಾರಾಯಣಸ್ವಾಮಿ ಅಯ್ಯರ್ ಅವರು ಕಲ್ಕತ್ತೆಯಲ್ಲಿದ್ದಾಗ ತಮಗೂ ಶ್ರೀ. ಶ್ಯಾಮಲ ಕೃಷ್ಣ ಘೋಷ್ ಅವರಿಗೂ ಉಂಟಾದ ಪರಿಚಯವನ್ನು ನೆನೆದು ಅವರ ಸೌಜನ್ಯಾದಿ ಗುಣಗಳನ್ನೂ ಸಾಹಿತ್ಯ ಸೇವೆಯನ್ನೂ ಸಭೆಗೆ ಪರಿಚಯ ಮಾಡಿಕೊಟ್ಟರು.

"ಬಂಗಾಳಕ್ಕೂ ಕರ್ನಾಟಕಕ್ಕೂ ಬಹಳ ಕಾಲದ ಹಿಂದೆಯೆ ಬಾಂಧವ್ಯ ಬೆಳೆಯಿತು. ಭಕ್ತಿಪಂಥ ಈ ಬಾಂಧವ್ಯವನ್ನು ಬಲಪಡಿಸಿತು. ಶ್ರೀ ಚೈತನ್ಯರ ಉಪದೇಶವನ್ನು ಪ್ರಚಾರ ಮಾಡಿದ ಶ್ರೀ. ಜೀವಗೋಸ್ವಾಮಿ, ಶ್ರೀ. ಸನಾತನಗೋಸ್ವಾಮಿ ಮತ್ತು ಶ್ರೀ. ರೂಪಗೋಸ್ವಾಮಿ ಇವರು ಮೂವರೂ ಶ್ರೀ. ಚೈತನ್ಯರ ಪ್ರಧಾನ ಶಿಷ್ಯರು. ಇವರುಗಳ ಮೂಲಪುರುಷರು ಕನ್ನಡಿಗರು. ಇವರಿಗೆ ಚೈತನ್ಯ ಪಂಥದವರಿಂದ (ದಕ್ಷಿಣದ ಜನ ಆಳ್ವಾರುಗಳಿಗೆ ತೋರಿಸುವಂತೆ) ಗೌರವ ಮನ್ನಣೆಗಳು ಸಲ್ಲುತ್ತಿವೆ. ಶ್ರೀ. ಚೈತನ್ಯರು ಪ್ರವಾಸ ಕಾಲದಲ್ಲಿ ಕರ್ನಾಟಕಕ್ಕೆ ಬಂದಿದ್ದಾಗ್ಗ ಶ್ರೀ. ಮಧ್ವಾಚಾರ್ಯರನ್ನು ಸಂದರ್ಶಿಸಿದರು" ಮುಂತಾಗಿ ಹೇಳಿ ಶ್ರೀ. ಘೋಷ್ ಅವರಿಗೆ ಸುಸ್ವಾಗತವನ್ನು ಬಯಸಿದರು.

### ಶ್ರೀ. ಘೋಷ್ ಅವರ ಉಪನ್ಯಾಸ.

ಬಳಿಕ ಶ್ರೀ. ಘೋಷ್ ಅವರು ತಮ್ಮ ಉಪನ್ಯಾಸದಲ್ಲಿ ಹೀಗೆ ಹೇಳಿದರು:

'ಮಗುವಿಗಿಂತಲೂ ಪುರಾತನವಾದುದಿಲ್ಲ. ಮಗುವಿನ ಮನೋರಾಜ್ಯದಲ್ಲಿ ವ್ಯತ್ಯಾಸಗಳಾಗುವುದಿಲ್ಲ. ಮಗು ಸಾಮಾಜಿಕ ವಾತಾವರಣ, ಆರ್ಥಿಕ ಸಮಸ್ಯೆಗಳು ಇವುಗಳ ಪ್ರಭಾವಗಳಿಗೆ ಎಂದಿಗೂ ಒಳಗಾಗುವುದಿಲ್ಲ. ಲೋಕ ಮಾರ್ಪಡುತ್ತಲೇ ಇರುವುದು, ಆದರೆ ಮಗು ಮಾತ್ರ ಸದಾ ನೂತನವಾಗಿ, ಮೃದುವಾಗಿ, ಪ್ರಸನ್ನವಾದ ಮೌಢ್ಯತೆಯಿಂದ ಕೂಡಿ, ಆನಂದವನ್ನು ಬೀರುವ ಕಂದನಾಗಿಯೇ ಇರುವುದು' ಎಂದು ರವೀಂದ್ರರು ತಮ್ಮ ಲೇಖನವೊಂದರಲ್ಲಿ ಹೇಳಿರುವರು.

ಬಂಗಾಳದಲ್ಲಿ ಮಗು ಮೊತ್ತಮೊದಲು "ವೃಷ್ಟಿ ಪಡೇ ನದೀ ಏಲೋ ಬಾನ" [ಮಳೆ ಕರೆಯಿತು. ಹೊಳೆಯಲ್ಲಿ ನೆರೆಯೇರಿತು] ಎಂದು ಹಾಡಿಕೊಂಡು ಕುಣಿಯುತ್ತದೆ. ಈ ಕೃತಿ ಹುಟ್ಟಿದ್ದು ಯಾವಾಗ ಎಂಬುದನ್ನು ಭಗವಂತನೇ ಬಲ್ಲ. ಈಗಲೂ ವರ್ಷಂಪ್ರತಿ ಮುಂಗಾರು ಮಳೆ ಆರಂಭವಾದಾಗ ಬಂಗಾಳದ ಎಳೆಯರು ಈ ಪದವನ್ನು ಹಾಡುತ್ತ ಕುಣಿಯುವುದನ್ನು ಕಾಣುವೆವು. ಇಂಥ ಹಾಡುಗಳನ್ನು ಹಾಡುವ ಮಕ್ಕಳ ಮನಸ್ಸಿಗೆ, ಹಾಡಿಗೆ ಇಂಥ ವಸ್ತುವೇ ಬೇಕೆಂಬ ನಿಷ್ಕರ್ಷೆಯಿಲ್ಲ; ಯಾವ ವಸ್ತುವೇ ಆದರೂ ಹಾಡಿನ ಮಟ್ಟಿನಲ್ಲಿದ್ದರೆ ಸಾಕು ಮಕ್ಕಳಿಗೆ.

ಮಗುವು ಮಳೆಯ ಸಂಗತಿಯನ್ನು ಮರೆತು ಬೇರೆ ವಸ್ತುವಿಗೆ ಮನಸ್ಸು ಹರಿಯಿಸಿದ್ದನ್ನು ಮುಂದಿನ ಸಾಲುಗಳಲ್ಲಿ ಕಾಣಬಹುದು:

ಶಿವ ಠಾಕುರೇರ್ ಬಿಯೆ ಹಲೊ ತೀನ್ ಕನ್ನೆದಾನ್
ಏಕ್ ಕನ್ನೆ ರಾಂಧೆನ್, ಬಾಡೆನ್; ಏಕ್ ಕನ್ನೆ ಖಾನ್
ಏಕ್ ಕನ್ನೆ ಸಾಖೆಯೆ ಬಾಪೇರ್ ಬಾಡಿದಾನ್

[ಶಿವ ಠಾಕೂರನ ಮದುವೆಯಾಯಿತು. ಮೂರು ಕನ್ಯಾದಾನ! ಒಬ್ಬಳು ಅಟ್ಟು ಅಣಿಮಾಡಿದಳು. ಇನ್ನೊಬ್ಬಳು ಉಂಡಳು. ಮೂರನೆಯವಳು ಉಣದೆ ಅಪ್ಪನ ಮನೆಗೆ ನಡೆದಳು.]

ಶಿವನ ಈ ಮೂವರು ಹೆಂಡಿರಲ್ಲಿ ಉಂಡವಳೇ ಬುದ್ಧಿವಂತೆ ಎಂದು ನಮಗೆ ಅನಿಸಬಹುದು. ಆದರೆ ಗುಣಾವಗುಣಗಳನ್ನು ಪರಿಶೀಲಿಸಲು ಮಗುವಿಗೆ ಸಹನೆಯಾಗಲಿ ಆಸಕ್ತಿಯಾಗಲಿ ಇರದು. ಅದರ ಮನಸ್ಸಿಗೆ ಹೊಳೆಯುವುದು ಕಾರ್ಮೋಡ, ತುಂಬಿ ಹರಿಯುವ ಹೊಳೆ, ಮರಳುದಿಣ್ಣೆಯಲ್ಲಿ ನಟ್ಟಿರುವ ಕಂಬಕ್ಕೆ ಕಟ್ಟಿದ ದೋಣಿಗಳು, ಅಡಿಗೆಯಲ್ಲಿ ನಿರತರಾದ ಶಿವನ ಹೊಸ ಹೆಂಡತಿಯರು; ಇಂಥ ಚಿತ್ರಗಳೇ. ಮತ್ತೊಂದು ಮಕ್ಕಳ ಹಾಡಿನಲ್ಲಿಯೂ ಶಿವನ ಹೆಸರಿದೆ. ಅದರಲ್ಲಿ ಅವನು ವರ್ತಕನಾಗಿರುವನು—

ಏಪಾರ್ ಗಂಗಾ—ಉಪಾರ್ ಗಂಗಾ ಮಾಝ್‌ಖಾನೆ ಚರ್
ತಾರಿ ಮಾಝೆ ಬಸೆ ಆಛೆ ಶಿವ್ ಸದಾಗರ್
ಶಿವ್‌ಗೆಲೋ ಶ್ವಸುರ್ ಬಾಡಿ—ಬಸತೇ ದಿಲೇ ಪಿಡೆ
ಜಲ್‌ಪಾನ್ ಕರಿತೇ ದಿಲೊ ಶಾಲಿಧಾನೇರ್ ಚಿಡೆ
ಶಾಲಿಧಾನೇರ್ ಚಿಡೆ ನಾಯ್‌ರೆ, ಭಿನ್ನಿ ಧಾನೇರ್ ಖಯಿ
ಮೊಟ್ಠೊ ಮೊಟೋ ಆಬರಿ ಕೋಲಾ, ಕಾಗಮಾರೇರ್ ದಹಿ

[ಇತ್ತ ಗಂಗೆ, ಅತ್ತ ಗಂಗೆ. ನಡುವೆ ಮರಳುಗುಡ್ಡೆ
ಅದರ ನಡುವೆ ಕುಳಿತಿರುವ ಶಿವಶೆಟ್ಟಿ.
ಶಿವ ನಡೆದ ಮಾವನ ಮನೆಗೆ; ಕೂರಲು ಕೊಟ್ಟರು ಕಾಲುಮಣೆ
ಉಪಾಹಾರಕ್ಕೆ ಬಡಿಸಿದರು – ಕಡ್ಡೀಬತ್ತದ ಅವಲಕ್ಕಿ
ಕಡ್ಡಿಬತ್ತದ ಅವಲಕ್ಕಿಯಲ್ಲವೋ, ಕಾರುಬತ್ತದ ಅರಳು.
ದಪ್ಪದಪ್ಪ ಬಾಳೇಹಣ್ಣು 'ಕಾಗಮಾರಿ'ಯ ಮೊಸರು]

(೧೫೫ನೆಯ ಪುಟಕ್ಕೆ)

# ಕನ್ನಡ ನುಡಿ

**ಶುಕ್ರವಾರ, ಮೇ ೨೮, ೧೯೪೩**

## ಕನ್ನಡದ 'ಕಲ್ಯಾಣ ನಿಧಿ'

೧೫-೫-೧೯೪೨ನೆಯ ದಿನ 'ಕನ್ನಡ ನುಡಿ'ಯಲ್ಲಿ ಪರಿಷತ್ತಿನ ಹಿರಿಯ ಅಭಿಮಾನಿಗಳಿಬ್ಬರು ತಮ್ಮ ಮನೆಯಲ್ಲಿ ನಡೆದ ಮದುವೆಯ ಸಂದರ್ಭದಲ್ಲಿ ಕನ್ನಡ ಕಾಣಿಕೆ ತೆಗೆದು ಪರಿಷತ್ತಿಗೆ ಸಲ್ಲಿಸಿದ ಸಂತೋಷದ ಸಂಗತಿಯನ್ನು ನೆನೆದು ಒಂದು ಲೇಖನ ಬರೆದಿದ್ದೆವು. ಅಲ್ಲಿಂದೀಚೆಗೆ ಇನ್ನು ಕೆಲವು ಮಹನೀಯರು ಈ ರೀತಿಯ ಕಾಣಿಕೆಯನ್ನು ನೀಡುತ್ತ ಬರುತ್ತಿರುವುದು ಹೆಮ್ಮೆಯ ವಿಷಯವಾಗಿದೆ. ಈ ಕಾಣಿಕೆಗಳ ಉದ್ದೇಶ ಕನ್ನಡದ ಕೆಲಸಕ್ಕೆ ಸಹಾಯ ಒದಗಿಸುವುದೇ ಆಗಿದೆಯೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಮನೆಗಳಲ್ಲಿ ಮದುವೆ, ಮುಂಜಿ ಮೊದಲಾದ ಶುಭ ಕಾರ್ಯಗಳು ನಡೆಯುವ ಸಂದರ್ಭಗಳಲ್ಲಿ ಮಠದ ತಾಂಬೂಲ, ಆಚಾರ್ಯ ಸಂಭಾವನೆ ಒಪ್ಪಿಸಿ ಮರ್ಯಾದೆ ತೋರಿಸುವ ಹಿರಿಯ ಸಂಪ್ರದಾಯಕ್ಕೆ ಕನ್ನಡದ ಕಾಣಿಕೆಯನ್ನು ಸೇರಿಸಿಕೊಳ್ಳುವುದರಿಂದ ಪೂರ್ವಾಚಾರಕ್ಕೆ ಲೋಪವಾದೀತೆಂಬ ಭಯವಿಲ್ಲ; ಈ ನವೀನಾಚಾರವನ್ನು ಕನ್ನಡಿಗರು ತಪ್ಪದೆ ರೂಢಿಗೆ ತರುವ ಕೃಪೆ ಮಾಡಬೇಕು. 'ಹನಿಗೂಡಿದರೆ ಹಳ್ಳ, ತೆನೆಗೂಡಿದರೆ ಬತ್ತ' ಎಂಬಂತೆ ನಾಡಿನ ಪ್ರತಿ ಮನೆಯಿಂದಲೂ ಹೀಗೆ ಕಾಣಿಕೆಯಾಗಿ ಬರಬಹುದಾದ ಹಣವನ್ನು ಒಂದು ಪುದುವಟ್ಟಾಗಿ ಸೇರಿಸಿ ದೊಡ್ಡ ನಿಧಿಯಾಗಿ ಬೆಳಸಿದಲ್ಲಿ ಯಾವುದಾದರೊಂದು ಕನ್ನಡ ಕೆಲಸಕ್ಕೆ ವಿನಿಯೋಗಿಸಲು ಅನುಕೂಲವಾಗುತ್ತದೆ.

ನಮ್ಮ ಈ ಪ್ರಾರ್ಥನೆಯನ್ನು ಕನ್ನಡ ಮನೆಗಳು ನಡಸಿಕೊಡುವುವೆಂದು ಹಾರೈಸುತ್ತೇವೆ.

## ವಿಶ್ವಪ್ರಜೆತನಕ್ಕಾಗಿ ಶಿಕ್ಷಣ

ಅಮೆರಿಕಾ ಸಂಯುಕ್ತ ಸಂಸ್ಥಾನದ ಶಿಕ್ಷಣ ಪ್ರವೀಣರು ಯುದ್ಧಾನಂತರದ ಜಗತ್ತಿನಲ್ಲಿ ವಿದ್ಯಾಭ್ಯಾಸ ಕ್ರಮದಲ್ಲಿ ಹೇಗೆ ಮಾರ್ಪಾಡುಗಳಾಗಬೇಕೆಂಬ ವಿಷಯದಲ್ಲಿ ಆಲೋಚನೆ ಮಾಡುತ್ತಿದ್ದಾರೆ. ಅಮೆರಿಕದ ಶಿಕ್ಷಣ ರೀತಿ ನೀತಿಗಳನ್ನು ರೂಪುಗೊಳಿಸಲೆಂದು ಹುಟ್ಟಿರುವ ಸಂಸ್ಥೆ ಈಚೆಗೆ ನ್ಯೂಯಾರ್ಕ್ ನಗರದಲ್ಲಿ ಸಭೆ ಸೇರಿ, ಅಧ್ಯಾಪಕ ವರ್ಗಕ್ಕೆ ಕೆಲವು ಸಲಹೆಗಳನ್ನು ಕೊಟ್ಟಿದೆ. ಈ ಸಲಹೆಗಳ ಸ್ವರೂಪವನ್ನು ಪ್ರಸಿದ್ಧ ಶಿಕ್ಷಣ ತತ್ವಜ್ಞರಾದ ಡಾ|| ಜಾರ್ಜ್ ಸಿಲ್ವೆಸ್ಟರ್ ಕೌಂಟ್ಸ್ ಅವರ ಮಾತಿನಲ್ಲಿ ಹೀಗೆ ಸಂಗ್ರಹಿಸಬಹುದು :

"ಇತಿಹಾಸವನ್ನು ಹೊಸ ದೃಷ್ಟಿಯಿಂದ ಕಲಿಸಬೇಕು. ವಿಶ್ವಪ್ರಜೆತನವನ್ನು ಒತ್ತಿ ಹೇಳುವುದೇ ಇತಿಹಾಸಬೋಧೆಯ ಮುಖ್ಯ ತತ್ವವಾಗಿರತಕ್ಕದ್ದು. ಮಕ್ಕಳ ಮನಸ್ಸಿನಲ್ಲಿ ಪ್ರಜಾಪ್ರಭುತ್ವದ ಮೂಲ ಸೂತ್ರಗಳು ಚೆನ್ನಾಗಿ ನೆಲೆಗೊಳ್ಳುವಂತೆ ಶಿಕ್ಷಣ ವಿಧಾನವನ್ನು ಮಾರ್ಪಡಿಸಬೇಕು. ವರ್ತಮಾನ ಇತಿಹಾಸದ ಗತಿಗೆ ತಕ್ಕಂತೆ ಹೆಜ್ಜೆ ಹಾಕುತ್ತ, ಯುದ್ಧ ಸಮಸ್ಯೆಯನ್ನು ವಿದ್ಯಾರ್ಥಿಗಳು ಚೆನ್ನಾಗಿ ಅರಿತುಕೊಳ್ಳುವಂತೆ ಬೋಧಿಸಿ, ಶಾಂತಿ ನೆಲೆಗೊಳ್ಳುವ ಕಾಲದಲ್ಲಿ ಮಾನವನ ಬದುಕಿನಲ್ಲಿ ನಡೆಯಬೇಕಾದ ಬಹುಮುಖವಾದ ಮಾರ್ಪಾಟುಗಳಿಗೆ ಮನಸ್ಸನ್ನು ಸಿದ್ಧಗೊಳಿಸಬೇಕು.

ಯುದ್ಧಾನಂತರ ವಿದ್ಯಾಭ್ಯಾಸದ ಹರಡಿಕೆಗೆ ಬೇಕಾದಷ್ಟು ಅವಕಾಶವಿರುವುದು. ಮೊದಲು ಆಗತಕ್ಕ ಸುಧಾರಣೆಯೆಂದರೆ ಆರ್ಥಿಕ ಕ್ಷೇತ್ರದಲ್ಲಿ. ಈಗ ನಾವು ವಿಪರೀತ ಪ್ರಮಾಣದಲ್ಲಿ ಕೈಗಾರಿಕೆಗಳನ್ನು ನಡಸುತ್ತಿದ್ದೇವೆ. ೩೩-೪ ಕೋಟಿ ಜನರು ಈ ಉದ್ಯಮಗಳಲ್ಲಿ ತೊಡಗಿದ್ದಾರೆ. ಶಾಂತಿ ಕಾಲದಲ್ಲಿಯಾದರೊ ಇವಕ್ಕೆ ೨ ಕೋಟಿಗಿಂತ ಹೆಚ್ಚು ಜನರು ಬೇಕಾಗುವುದಿಲ್ಲ ಎಂದರೆ, ಯುದ್ಧ ಮುಗಿದಮೇಲೆ ಸುಮಾರು ೧೩-೨ ಕೋಟಿ ಜನರಿಗೆ ಬೇರೆ ಕಸಬನ್ನು ಹುಡುಕಬೇಕಾಗುವುದು.

ಇದರಿಂದ ಹೊಳೆಯುವ ಒಂದು ಮುಖ್ಯವಾದ ಪ್ರಶ್ನೆ ಎಂದರೆ, ನಮ್ಮ ಕಸಬುದಾರಿ ವಿದ್ಯಾಭ್ಯಾಸದಲ್ಲಿ ಆಗಬೇಕಾದ ಮಹತ್ತರವಾದ ಮಾರ್ಪಾಟಿಗೆ ಸಂಬಂಧಿಸಿದ ಪ್ರಶ್ನೆ. ಯುದ್ಧ ಮುಗಿದಮೇಲೆ, ಸಮಾಜಸೇವಾಕಾರ್ಯಗಳನ್ನು ನಾವು ಅಧಿಕ ಪ್ರಮಾಣದಲ್ಲಿ ವಿಸ್ತರಿಸಬೇಕಾಗುವುದು. ಶಾಲೆಯ ಆವರಣ ಒಂದರಲ್ಲೇ ಅಲ್ಲದೆ ಬದುಕಿನ ಎಲ್ಲ ರಂಗಕ್ಕೂ ವಿದ್ಯೆಯ ಫಲ ಪ್ರಭಾವಗಳು ಹರಡುವಂತೆ ಮಾಡಿ, ಇಡಿಯ ಸಮಾಜವನ್ನೆ ಮೇಲೆತ್ತುವ ಕೆಲಸಕ್ಕೆ ವಿದ್ಯಾಭ್ಯಾಸವನ್ನು ಹೂಡಬೇಕು.

ನಮ್ಮ ಬಾಳನ್ನು ದೊಡ್ಡದು ಮಾಡಿರುವ, ಹಿಂದಿನಿಂದ ಬದುಕಿ ಬಂದಿರುವ ಸಂಸ್ಕೃತಿಯನ್ನು ಕಾಪಾಡಿಕೊಂಡು ಬರಬೇಕು. ಶಿಕ್ಷಣದಾನ ವಿಧಾನಗಳಿಗೆ ಸ್ವಲ್ಪವೂ ಆತಂಕವುಂಟಾಗದಂತೆ ಆವರಣ ಸನ್ನಿವೇಶವನ್ನು ಕಲ್ಪಿಸಿ ಅದನ್ನು ರಕ್ಷಿಸಬೇಕು. ಯುದ್ಧಾನಂತರದ ಎಲ್ಲ ಕೆಲಸವನ್ನೂ ಮೇಲೆ ಹೇಳಿದಂತೆ ಸುಧಾರಿಸಿದ ಶಿಕ್ಷಣ ತತ್ವಕ್ಕೆ ಅನುಸಾರವಾಗಿ ಮುಂದುವರಿಸಬೇಕು.

ನಮ್ಮ ಉದ್ಯೋಗದಲ್ಲಿ ನಮಗೆ ಶ್ರದ್ಧೆ ಇರುವುದಾದರೆ, ಎಂಥ ವಿಷಮಪರಿಸ್ಥಿತಿಯನ್ನಾದರೂ ನಾವು ಧೈರ್ಯದಿಂದ ಎದುರಿಸಿ, ನಮ್ಮ ವಿದ್ಯಾಭ್ಯಾಸ ಕ್ರಮವನ್ನು ಸ್ವತಂತ್ರ ಮಾನವ ಶಿಕ್ಷಣದ ಸಾಧನವಾಗಿ ಸಂಸ್ಕರಿಸಿಕೊಳ್ಳಲು ಸಾಧ್ಯವಾಗುವುದು."

ನಮ್ಮ ದೇಶದಲ್ಲೂ ವಿದ್ವಾಂಸರು ಶಿಕ್ಷಣ, ಅರ್ಥ ಮುಂತಾದ ಕ್ಷೇತ್ರಗಳಲ್ಲಿ ಯುದ್ಧಾನಂತರದ ಸುಧಾರಣೆಗಳು ಹೇಗಿರಬೇಕೆಂದು ಆಲೋಚಿಸುತ್ತಿದ್ದಾರೆ. ವಿದೇಶಗಳಲ್ಲಿ ನಡೆಯುತ್ತಿರುವ ಪ್ರಯತ್ನಗಳೂ ಅವರ ಗಮನಕ್ಕೆ ಬರುತ್ತಿವೆ. ವಿದ್ಯಾಭ್ಯಾಸದಲ್ಲಿ ಇನ್ನೂ ಬಹಳ ಹಿಂದಿರುವ ನಮ್ಮ ದೇಶ ಬೇಗನೆ ಮುಂದುವರಿದು ಜಗತ್ತಿನ ಮಹಾ ರಾಷ್ಟ್ರಗಳ ಜೊತೆಗೆ ಮೊದಲ ಪಂಕ್ತಿಯಲ್ಲಿ ಬೆಳಗುವಂತಾಗಲು ತಕ್ಕ ಸುಧಾರಣೆಗಳನ್ನು ಸಾಧಿಸುವುದು ಆವಶ್ಯಕವಾಗಿದೆಯೆಂದು ಒತ್ತಿಹೇಳಬೇಕಾಗಿಲ್ಲ.

### ಕನ್ನಡ ಸಂಘ, ಮೇಲುಕೋಟೆ

ಮೈಸೂರು ವಿಶ್ವವಿದ್ಯಾನಿಲಯದ ಅಧ್ಯಾಪಕ ಸಂಘದ ೪೩ನೆಯ ಉಪನ್ಯಾಸ ಮಾಲೆಯು ಈ ತಿಂಗಳು ೧೪, ೧೫ ಮತ್ತು ೧೬ರಲ್ಲಿ ಮೇಲುಕೋಟೆ ಕನ್ನಡ ಸಂಘದ ಆಶ್ರಯದಲ್ಲಿ ಸಂಭ್ರಮದಿಂದ ಜರುಗಿತು. ಮೊದಲ ಎರಡು ದಿನಗಳ ಉಪನ್ಯಾಸಗಳು ಸಾರ್ವಜನಿಕ ವಾಚನಾಲಯದಲ್ಲಿ ಸಂಜೆ ಹೊತ್ತಿನಲ್ಲೂ ಕೊನೆಯ ದಿನ ಬೆಳಗ್ಗೆ ಸಂಸ್ಕೃತ ಮಹಾಪಾಠಶಾಲೆಯಲ್ಲಿಯೂ ಉಪನ್ಯಾಸಗಳು ಜರುಗಿದುವು. ೧೪-೫-೪೩ನೆಯ ಶುಕ್ರವಾರದ ದಿನ ಸಂಜೆ ದೇವತಾ ಪ್ರಾರ್ಥನೆಯಾದ ಮೇಲೆ ಶ್ರೀ. ಎಂ. ಕೆ. ಅಳಸಿಂಗ್ರಾಚಾರ್ಯರು ಕನ್ನಡ ಸಂಘದ ಮತ್ತು ಪುರಜನರ ಪರವಾಗಿ ಉಪನ್ಯಾಸಕರಿಗೆ ಸ್ವಾಗತವನ್ನು ನೀಡಿದರು. ಬಳಿಕ ಶ್ರೀ. ಎಸ್. ವಿ. ರಂಗಣ್ಣನವರ ಆರಂಭಭಾಷಣ, ಶ್ರೀ. ನಾ. ಕಸ್ತೂರಿಯವರ 'ಹೊಯ್ಸಳರು' ಎಂಬ ಉಪನ್ಯಾಸ, ಸಿ. ರಂಗಾಚಾರ್ಯರ ಕಾಶ್ಮೀರ ದೇಶದ ವರ್ಣನೆ (ಸಚಿತ್ರ) ಉಪನ್ಯಾಸ – ಇವು ಜರುಗಿದುವು.

ಎರಡನೆಯ ದಿನ ಶ್ರೀ.ಗಳಾದ ವಿ. ಸೀ., ಮತ್ತು ಜಿ. ಹನುಮಂತರಾಯರು 'ಶಾಕುಂತಲ' ಮತ್ತು 'ಸಿಕ್‌ಮತ'ಗಳನ್ನು ಕುರಿತು ಭಾಷಣ ಮಾಡಿದರು. ಶ್ರೀ. ಸಿ. ರಂಗಾಚಾರ್ಯರು ಚಲನ ಚಿತ್ರದ ಸಹಾಯದಿಂದ ಜೀರಕ ಕ್ರಿಯೆಯನ್ನು ವರ್ಣಿಸಿದರು. ಆ ದಿನ ರಾತ್ರಿ ಪುರಜನರು ಉಪನ್ಯಾಸಕರಿಗೂ ಅತಿಥಿಗಳಿಗೂ ಒಂದು ಔತಣವನ್ನೇರ್ಪಡಿಸಿದ್ದರು.

ಮೂರನೆಯ ದಿನ ಬೆಳಗ್ಗೆ ಶ್ರೀ.ಗಳಾದ ವಿ. ಸೀ., ಎಲ್. ರಾಜಾರಾವ್, ಎಸ್. ವಿ. ರಂಗಣ್ಣ ಇವರಿಂದ ಶಾಕುಂತಲ, ತತ್ವಶಾಸ್ತ್ರದ ತಿರುಳು–ಇವನ್ನು ಕುರಿತ ಉಪನ್ಯಾಸವೂ ಮತ್ತು ಪರಿಸಮಾಪ್ತಿ ಭಾಷಣವೂ ಆದುವು. ಶ್ರೀ. ಪಿ. ನಾರಾಯಣ ಅಯ್ಯಂಗಾರರು ಸಂಘದ ಪರವಾಗಿ ಉಪನ್ಯಾಸಕರಿಗೆ ಧನ್ಯವಾದಗಳನ್ನರ್ಪಿಸಿ ಹೂ ಹಾರಗಳನ್ನು ಹಾಕಿದರು. ಕಾಯೌ ಶ್ರೀ ಗೌರಿಯನ್ನು ಹಾಡಿದ ಮೇಲೆ ಉಪನ್ಯಾಸ ಮಾಲೆ ಕೊನೆಗಂಡಿತು.

## ಬಂಗಾಳಿಯಲ್ಲಿ ಶಿಶು ಸಾಹಿತ್ಯ

(೧೫೭ನೆಯ ಪುಟದಿಂದ)

ಆರ್ ವೃಷ್ಟಿದೇರೇ
ಥಾನ್ ದಿವ್ರೋ ಮೇಪೆ
ಭಾಗಲೀರ್ ಮಾ ಬುಡಿ –
ಕಾಠ್ ಕುಡೋಮತೊ ಗೇಲಿ

[ಇನ್ನೂ ಮಳೆ ಹುಯ್ಯಪ್ಪಾ ಧಾನ್ಯ ಕೊಡ್ತೀನಿ ಅಳೆದು – ಆಡಿನ ಅವ್ವ ಮುದುಕಿ – ಸೌದೇ ಆರಿಸೋಕೆ ಹೋದಳು.]

ಇದರಲ್ಲಿ ಮಗುವಿನ ಆಲೋಚನಾ ತರಂಗಗಳು ವಸ್ತುವಿಂದ ವಸ್ತುವಿಗೆ ಹಾರುತ್ತಿರುವುದನ್ನು ಕಾಣುವೆವು. ಆದರೆ ಮಾತುಗಳ ಜೋಡಣೆಯೇ ಮಳೆಯನ್ನು ಸುರಿಸುವಂತೆ ಕಾಣುವುದು. ಮಕ್ಕಳಿಗಾಗಿ ನಿರ್ಮಾಣವಾದ 'ಹುಚ್ಚು' ಸಾಹಿತ್ಯದಲ್ಲಿ ವಯಸ್ಕರಿಗಾಗಿ ನಿರ್ಮಾಣವಾಗುವ 'ಶುದ್ಧ' ಸಾಹಿತ್ಯದಂತೆ ಕಟ್ಟುಪಾಟುಗಳೇನೂ ಇರುವುದಿಲ್ಲ. ಇದ್ದರೆ ಮಕ್ಕಳು ಒಲಿಯಲಾರವು. ಪಾತ್ರ ಸನ್ನಿವೇಶ ರಚನೆಗಳು ಹೊಂದಿಕೆಯಿರದೆ ಅಸಂಬದ್ಧವಾಗಿರುವುವು.

ಮಕ್ಕಳ ಹಾಡುಗಳಲ್ಲಿ ಅಸಂಭವವೂ ಅಲೌಕಿಕವೂ ಆದ ವ್ಯಾಪಾರಗಳ ವರ್ಣನೆಗೆ ಕೊನೆಮೊದಲಿಲ್ಲ – ಗಿಣಿ ದೋಣಿಯನ್ನು ನಡಸಬಹುದು. ಬತ್ತಿದ ನದಿಯಲ್ಲಿ ಮೀನು ನೆಗೆಯಬಹುದು. ಆದರೆ ಇಂಥ ಅನನ್ವಯ ಅಸಂಬದ್ಧತೆಗಳಿಗೆ ಮಕ್ಕಳ ಮನಸ್ಸು ಆನಂದದಿಂದ ಮಿಡಿಯುತ್ತದೆ.

ಬಂಗಾಳದಲ್ಲಿ ಮಕ್ಕಳ ಮನಸ್ಸಿನ ಮೇಲೆ ಪ್ರಭಾವವನ್ನು ಬೀರುತ್ತಿರುವ ಪ್ರೇರಣೆಗಳು ಮತ್ತೆರಡಿವೆ. ಜಪಮಾಡುವಾಗ ಅಜ್ಜಿಯ್ಯ ಬಲಗೈಯಲ್ಲಿರುವ ಜಪಸರದ ಚೀಲದಿಂದ [ಝೋಲಿ] ಹೊರಬೀಳುವುವೆಂದು ಹೇಳಲ್ಪಡುವ ರಾಕ್ಷಸರು, ಕಾಕ್ಷಸರು, ಬಾಕ್ಷಸರು ಮೊದಲಾದ ಅಲೌಕಿಕ ವ್ಯಕ್ತಿಗಳ ಕಟ್ಟುಕಥೆಗಳು – ಒಂದು. ರಾಮಾಯಣ, ಮಹಾಭಾರತ ವ್ರತಉದ್ಯಾಪನೆಗಳಿಗೆ ಸಂಬಂಧಿಸಿದ ಪುರಾಣದ ಕತೆಗಳು – ಇನ್ನೊಂದು.

ರವೀಂದ್ರರ ಅಣ್ಣ ದ್ವಿಜೇಂದ್ರರು ತಮ್ಮ 'ಸ್ವಪ್ನ ಪ್ರಯಾಣ' ದಲ್ಲಿ ಒಂದು ವಿಚಿತ್ರ ಅಲೌಕಿಕ ಪ್ರಪಂಚವನ್ನು ಸೃಷ್ಟಿಸಿರುವರು. ರವೀಂದ್ರರು ಇಳಿವಯಸ್ಸಿನಲ್ಲಿ ತಮ್ಮ ಬಾಲ್ಯವನ್ನು ನೆನಪು ಮಾಡಿಕೊಂಡಿರುವುದಷ್ಟೇ ಅಲ್ಲ – ಆ ಕಾಲವನ್ನು ಮನದಲ್ಲಿ ಮತ್ತೆ ಅನುಭವಿಸಿರುವರೆಂದರೆ ಅತಿಶಯೋಕ್ತಿಯಾಗದು. ಮಗುವಿನ ಧೈರ್ಯ, ಸಾಹಸಗಳ ವರ್ಣನೆ ಮಗುವು ತಾಯಿಯ ಇದಿರಿಗೆ ವರ್ಣಿಸಿ ಹೇಳುವ ತನ್ನ ಸಾಹಸ ಕೃತ್ಯಗಳ ಚಿತ್ರ – ಇವೆಲ್ಲವೂ ಒಂದಕ್ಕಿಂತ ಒಂದು ಅಪೂರ್ವವಾದುವು.

ಬಂಗಾಲಿ ಶಿಶು ಸಾಹಿತ್ಯ ರಚಯಿತೃಗಳಲ್ಲಿ ಸುಕುಮಾರ್ ರಾಯ್ ಅವರು ತಮ್ಮ 'ಅಬೋಲ್ ತಬೋಲ್' ಎಂಬ ಪುಸ್ತಕದಲ್ಲಿ ಹೊಸ ಹಾದಿಯನ್ನು ಹಿಡಿದಿರುವರು.

ಮಕ್ಕಳಿಗಾಗಿ ಹಲವು ಪತ್ರಿಕೆಗಳು ಬಂಗಾಳಿಯಲ್ಲಿ ಹೊರಬೀಳುತ್ತಿವೆ. ಅವುಗಳಲ್ಲಿ ಹಲವು ಆರ್ಥಿಕ ದೃಷ್ಟಿಯಿಂದಲೂ ಸಫಲವಾಗಿ ನಡೆಯುತ್ತಿವೆ. ಆದರೆ ಮಕ್ಕಳು ಬೆಳೆಯಲು ಸಹಾಯ ಮಾಡುತ್ತಿರುವುದು ಪುರಾತನದ ಜೋಗುಳದ ಹಾಡುಗಳು, ಶಿಶುಗೀತೆಗಳೇ! ಈ ಕ್ಷೇತ್ರದಲ್ಲಿ ಕಾಲಿಟ್ಟು ಸ್ಥಿತಿಗತಿಗಳನ್ನು ಪರೀಕ್ಷಿಸುತ್ತಿರುವ ಇಂದಿನ ಬರಹಗಾರರಲ್ಲಿ ಪ್ರೇಮೆಸ್ ಮಿತ್ರ, ಬುದ್ಧ ದೇವ ಬೋಸ್, ಲೀಲಾ ಮಜುಂದಾರ್, ಸುಶೀಲ್ ಮಿತ್ತರ್ ಮುಂತಾದ ಕೆಲವರಿರುವರು.

ಮಗು ಕೇಳುವುದು ಅದರ ಮನೋರಾಜ್ಯದಲ್ಲಿ ಬೀಳುವ ಸವಿಗನಸುಗಳಿಗೆ ಅನುರೂಪವಾದ ಸಂಗತಿಗಳನ್ನು. ಆದರ ಸ್ವಪ್ನರಾಜ್ಯ ಪಾರ್ಥಿವ ಜಗತ್ತಿನಿಂದ ಸಂಪೂರ್ಣವಾಗಿ ಬೇರೆಯಾದದ್ದು.

ತಮ್ಮ ಬಾಲ್ಯವನ್ನು ಪುನಃ ನೆನಪಿಗೆ ತಂದುಕೊಂಡು ಬಾಲ್ಯದ ಅನುಭವಗಳನ್ನು ಮತ್ತೆ ಮತ್ತೆ ಅನುಭವಿಸಲು ಶಕ್ತರಾದ ಬರಹಗಾರರು ಮಾತ್ರವೇ ಉತ್ತಮ ಶಿಶು ಸಾಹಿತ್ಯ ರಚಿಸಲು ಶಕ್ತರು.

### ಅಧ್ಯಕ್ಷರ ಭಾಷಣ

ಆಮೇಲೆ ಅಧ್ಯಕ್ಷರು ತಮ್ಮ ಮಾತಿನಲ್ಲಿ "ನಮ್ಮ ನಾಡು ಮುಂದಕ್ಕೆ ಬರಬೇಕಾದರೆ ತಾಯಿ ತಂದೆಗಳು ತಮ್ಮ ದೌರ್ಬಲ್ಯಗಳನ್ನು ಮಕ್ಕಳಿಗೆ ಕಲಿಸಬಾರದು; ಸರಳವೂ ನಿಷ್ಕಪಟವೂ ಮೃದುವೂ ಪಾಪದೂರವೂ ಆದ ಮಕ್ಕಳ ಹದವಾದ ಮನಸ್ಸನ್ನು ಕೆಡಿಸುವ ಜಾತಿ ಮತ ಭೇದಗಳ ಅಭಿಪ್ರಾಯಗಳನ್ನು ಅವರಿಗೆ ತಿಳಿಸಬಾರದು; ಮಕ್ಕಳು ಹಾಡುವ ಹಾಡಿನಲ್ಲಿ ಓದುವ ಕತೆಯಲ್ಲಿ ಅವರಲ್ಲಿ ಸಹಜವಾಗಿ ಮನೆ ಮಾಡಿರುವ ಸೌಹಾರ್ದವೂ ದೇವತ್ವವೂ ಇನ್ನೂ ವಿಕಾಸಗೊಳ್ಳುವಂತೆ ಮಾಡಬೇಕು. ಮಕ್ಕಳು ದೇವರಿಗೆ ಸಮಾನವೆಂದು ಭಾವಿಸುವ ನಾವು ಈ ಭಾವನೆಗೆ ತಕ್ಕಂತೆ ಮಕ್ಕಳನ್ನು ನಡಸಿಕೊಳ್ಳಬೇಕಾದ ಆವಶ್ಯಕತೆಯನ್ನು ಕಂಡುಕೊಳ್ಳಬೇಕು." ಎಂದು ಹೇಳಿ, ಅಳುವ ಮಕ್ಕಳನ್ನು ಸಮಾಧಾನ ಪಡಿಸಲು ಈಗ್ಗೆ ಮೂರು ನಾಲ್ಕು ತಲೆಮಾರುಗಳಿಂದ ಕನ್ನಡ ತಾಯಂದಿರು ಹಾಡುವ 'ಏಕಳುವೆ ಎಲೆ ರಂಗ ಬೇಕಾದ್ದು ನಿನಗಿದೆ' ಎಂಬ ಶಿಶುಗೀತೆಯ ಕೆಲವು ಸಾಲುಗಳನ್ನು ಹಾಡಿ ಅದರ ಸೌಂದರ್ಯವನ್ನು ಚಿತ್ರಿಸಿದರು.

| | |
|---|---|
| ಯಾಕಳುವೆ ಎಲೆ ರಂಗ | ಅಂಗಿಯ ತೊಟ್ಟರೆ |
| ಬೇಕಾದ್ದು ನಿನಗಿಧೆ | ರಂಗನಾ ಸಿರಿಯೆಂಬೆ |
| ನಾಕೆಮ್ಮೆ ಕರೆದ ನೊರೆಹಾಲು | ಚುಂಗು ಬಿಟ್ಟರೆ ನವಿಲೆಂಬೆ |
| ನೊರೆಹಾಲು ಸಕ್ಕರೆ | ನವಿಲೆಂಬೆ ಕೃಷ್ಣಯ್ಯ |
| ನೀ ಕೇಳಿದಾಗ ಕೊಡುವೇನು | ಶೃಂಗಾರವಾಗೆ ದೊರೆಯೆಂಬೆ |
| ಅತ್ತು ಕಾಡುವನಲ್ಲ | ಚಂದಿರನನಿಲ್ಲಿನೆಗೆ |
| ಮತ್ತೆ ಬೇಡುವನಲ್ಲ | ತಂದು ಕೊಡಬೇಕೆಂದು |
| ಎತ್ತಿಕೊಳ್ಳೆಂಬ ಹಟವಿಲ್ಲ | ಕಂದ ನೀನತ್ತು ಹೊರಳುವರೆ |
| ಹಟವಿಲ್ಲ ನಿನ್ನಂಥ | ಹೊರಳುವರೆ ನಿನ್ನಂಥ |
| ಹತ್ತು ಮಕ್ಕಳು ಇರಬಹುದು | ನಂದನನ ಕಾಣೆ ಜಗದೊಳಗೆ |

ಕನ್ನಡದಲ್ಲಿ ಈಗ ಶಿಶು ಸಾಹಿತ್ಯದಲ್ಲಿ ನಡೆಯುತ್ತಿರುವ ಕೆಲಸವನ್ನು ಪ್ರಸ್ತಾವಿಸಿ, ಈ ಕೆಲಸ ಇನ್ನೂ ಹೆಚ್ಚಾಗಿ ನಡೆದು ಮಕ್ಕಳ ನಲಿವು ಹೆಚ್ಚಲೆಂದು ಹಾರೈಸಿದರು.

ಪ್ರಾಂತಸಮಿತಿಯ ಕಾರ್ಯದರ್ಶಿಗಳಾದ ಶ್ರೀ. ಆಂಬ್ರೋಸ್ ಆನಂದ ಅವರಿಂದ ಧನ್ಯವಾದ ಸಮರ್ಪಣೆಯಾಗಿ ಸಭೆ ಮುಗಿಯಿತು.

## ಮಹಿಳಾ ಶಾಖೆ

೧೯–೫–೪೩ನೆಯ ಭಾನುವಾರ ಸಂಜೆ ಶ್ರೀ. ಸಿ. ಕೆ. ವೆಂಕಟರಾಮಯ್ಯನವರು 'ರನ್ನ ಕವಿ ಚಿತ್ರಿಸಿರುವ ದುರ್ಯೋಧನ ಪಾತ್ರ' ಎಂಬ ವಿಷಯವಾಗಿ ಉಪನ್ಯಾಸ ಮಾಡಿದರು. ಮಾನ್ಯ ಉಪನ್ಯಾಸಕರು ತಮ್ಮ ಭಾಷಣದಲ್ಲಿ ಈ ರೀತಿ ತಿಳಿಸಿದರು:

"ಮಹಾ ಕವಿ ರನ್ನನು ಚಿತ್ರಿಸಿರುವ ದುರ್ಯೋಧನನು ಮಹಾಭಾರತದ ದುರ್ಯೋಧನನಂತೆ ನೀಚನಲ್ಲ. ಅವನು ಮಹಾನುಭಾವ. ವಿಷಾದಾಂತ ನಾಟಕದ ದುರಂತನಾಯಕನಂತೆ ರನ್ನನ ದುರ್ಯೋಧನನು ಅನೇಕ ದೊಡ್ಡ ಗುಣಗಳಿಂದ ಕೂಡಿದವನಾದರೂ ಅವನಲ್ಲಿದ್ದ ಒಂದೆರಡು ಅವಗುಣಗಳ ನೆವದಿಂದ ಅವನ ಪ್ರತಿಕೂಲ ದೈವವು ಅವನನ್ನು ನಾಶಮಾಡುವುದು. ರನ್ನ ಚಿತ್ರಿತ ದುರ್ಯೋಧನನು ಮಹಾಸಾಹಸಿ, ಪರಮ ವಿಶ್ವಾಸಿ, ಸತ್ಯಸಂಧನು, ರಣಧೀರನು, ಗುಣಪಕ್ಷಪಾತನು, ದೃಢಪ್ರತಿಜ್ಞನು, ಮಹಾಛಲಗಾರ; ಆದರೆ ದುರದೃಷ್ಟಶಾಲಿ. ಕುರುಕ್ಷೇತ್ರದಲ್ಲಿ ದುಶ್ಶಾಸನ ಕರ್ಣ, ಲಕ್ಷಣ, ದ್ರೋಣ, ಅಭಿಮನ್ಯು ಈ ವೀರರ ಕಳೇಬರಗಳನ್ನು ಕಂಡು ಅವನ ದುಃಖವನ್ನು

ತೋಡಿಕೊಳ್ಳುವ ಮಾತುಗಳು ಅವನ ಹೃತ್ಪೂರ್ವಕ ಆಂತರ್ಯವನ್ನು ವ್ಯಕ್ತಪಡಿಸುತ್ತವೆ. ಹಗೆಯ ಮಗನಾದರೂ ಅಭಿಮನ್ಯುವಿನ ಮೃತ ದೇಹವನ್ನು ನೋಡಿ ಹಿಗ್ಗದೆ ಆ ಬಾಲವೀರನ ಶೌರ್ಯವನ್ನು ಬಾಯಿ ತುಂಬ ಹೊಗಳಿ ಅವನಿಗೆ ಕೈಮುಗಿದು ಅವನನ್ನು ಗೌರವಿಸುವನು. ಗದಾಯುದ್ಧಾನಂತರ ಅಶ್ವತ್ಥಾಮನು ಕೃಷ್ಣೆಯ ಮಕ್ಕಳನ್ನು ಕೊಲೆ ಮಾಡಿ ಅವರ ತಲೆಗಳನ್ನು ದುರ್ಯೋಧನನೆದುರಿಗಿಡಲು ಅವನ್ನು ನೋಡಿ ಸಂತೋಷಪಡದೆ, ಸರಮುಜ್ಞನಾಸಿ ಅಶ್ವತ್ಥಾಮನಿಗೆ ಬಾಲವಧೆ ಪಾತಕ ಬಂತು ಎಂದು ಸಂಕಟಪಡುವನು.

ಕರ್ಣನಲ್ಲಿದ್ದ ಕೆಳೆ, ದುಶ್ಶಾಸನ ಲಕ್ಷಣಾದಿ ಬಂಧುಗಳಲ್ಲಿದ್ದ ಪ್ರೇಮ, ಧರ್ಮರಾಯನಲ್ಲಿದ್ದ ದಾಕ್ಷಿಣ್ಯ, ಭೀಷ್ಮ ದ್ರೋಣರಲ್ಲಿದ್ದ ಭಕ್ತಿ ಭೀಮನಲ್ಲಿದ್ದ ದ್ವೇಷ—ಇವು ಕೌರವೇಶ್ವರನ ಮುಖ್ಯಗುಣಗಳು. ಇವೆಲ್ಲವನ್ನೂ ಮೀರಿಸಿದ ಗುಣವೊಂದು ಅವನನ್ನು ಮುರಿಯಿತು. ಅದು ಛಲ. ಛಲಕ್ಕಾಗಿ ಅವನು ಬಾಳಿದನು, ಛಲಕ್ಕಾಗಿ ಇಷ್ಟಬಾಂಧವರನ್ನು ಬಲಿಕೊಟ್ಟನು. ಕೊನೆಗೆ ಛಲಕ್ಕಾಗಿಯೇ ತಾನೂ ಆಹುತಿಯಾಗುವನು."

ಕನ್ನಡ ನಾಡಿನ ಹಿರಿಯರೂ, ಪ್ರಸಿದ್ಧ ಸಾಹಿತಿಗಳೂ ಆದ ಶ್ರೀ. ಸಿ. ಕೆ. ವೆಂಕಟರಾಮಯ್ಯನವರು ಮಹಿಳಾ ಶಾಖೆಗೆ ದಯಮಾಡಿಸಿ ಉಪನ್ಯಾಸಮಾಡಿದ ಕೃಪೆ ಶಾಖೆಯ ಸುಯೋಗವೆಂದು ಸಭಾಧ್ಯಕ್ಷರಾದ ಶ್ರೀ. ಎ. ಶೇಷಮ್ಮನವರು ಹೇಳಿದರು.

೨೦-೫-೪೩ನೆಯ ಗುರುವಾರ ಸಂಜೆ ಶ್ರೀಮತಿ ಕಲ್ಯಾಣಮ್ಮನವರ ಅಧ್ಯಕ್ಷತೆಯಲ್ಲಿ ಕಾವ್ಯವಾಚನ ನಡೆಯಿತು. ಶ್ರೀಮತಿ ಸೀತಮ್ಮನವರು 'ಸಿಜಗಲ್ಲಿನ ರಾಣಿ'ಯ ಕಥೆಯನ್ನೂ, ಶ್ರೀಮತಿ ಜಯಮ್ಮನವರು 'ಕಾರ್ಯದಲ್ಲಿ ಆನಾದರ' ಎಂಬ ಪ್ರಬಂಧವನ್ನೂ ಓದಿದರು. 'ಪರ್ಣಕುಟಿ'ಯಿಂದ ಶ್ರೀಮತಿ ಕಸ್ತೂರಿಬಾಯಿ ಅವರ ಚಿತ್ರವನ್ನು ಶ್ರೀಮತಿ ಕಮಲಮ್ಮನವರು ವಾಚಿಸಿದರು.

## ಪರಿಷತ್ತಿನ ಸುದ್ದಿ

### ಪರಿಷತ್ತಿನ ಸದಸ್ಯರ ಬೆಳವಣಿಗೆ

(೨೧-೪-೪೩ ರಿಂದ ೨೦-೫-೪೩ರ ವರೆಗೆ)

**ಸಹಾಯಕ ಸದಸ್ಯರು (೧೦೦ ರೂ.) :** ಶ್ರೀ.ಗಳಾದ ವಿ. ಕೆ. ಶ್ರೀನಿವಾಸನ್ ಅವರು, ಜಮೀನ್ದಾರರು, ರಾಘವ ಸದನ, ರಮಾವಿಳಾಸ ಅಗ್ರಹಾರ, ಮೈಸೂರು.

### ಮಹಿಳಾ ಶಾಖೆ : ಭಾರತ ವಾಚನ

ಮಹಿಳಾ ಶಾಖೆಯ ಆಶ್ರಯದಲ್ಲಿ **೧-೬-೪೩ನೆಯ ಮಂಗಳವಾರ ಸಂಜೆ** ೫-೩೦ ಗಂಟೆಗೆ ಶ್ರೀಮತಿ ಶಕುಂತಲಾಬಾಯಿ ಪಾಂಡುರಂಗರಾವ್ ಅವರು **ಭಾರತವಾಚನ** ಮಾಡುವರು. ಸೋದರಿಯರೆಲ್ಲ ಬರಬೇಕಾಗಿ ಪ್ರಾರ್ಥನೆ.

### ಬೆಂಗಳೂರು ಪೌರ ಸಭೆಯ ಸಹಾಯ ದ್ರವ್ಯ:

ಬೆಂಗಳೂರಿನಲ್ಲಿ ನಡೆದ ವಸಂತ ಸಾಹಿತ್ಯೋತ್ಸವಕ್ಕೆ ಬೆಂಗಳೂರು ಪೌರಸಭೆ ತಾ|| ೨೪-೫-೪೩ರ ಅಧಿವೇಶನದಲ್ಲಿ ೧೦೦ ರೂ.ಗಳ ಸಹಾಯ ದ್ರವ್ಯವನ್ನು ಕೊಡತಕ್ಕದ್ದೆಂದು ತೀರ್ಮಾನಿಸಿರುತ್ತಾರೆಂದು ತಿಳಿಸಲು ಸಂತೋಷವಾಗುತ್ತದೆ.

### ಪರಿಷತ್ತಿಗೆ ಕಾಣಿಕೆ

ಶ್ರೀ. ಜಿ. ಪಿ. ರಾಜರತ್ನಂ ಅವರು ಇದೇ ತಿಂಗಳು ೨೦ನೆಯ ತಾರೀಖಿನಲ್ಲಿ ನಡೆದ ತಮ್ಮ ಅಣ್ಣನ ಮಗಳ ಮದುವೆಯ ಸಂಬಂಧದಲ್ಲಿ ಎತ್ತಿದ ಸಂಭಾವನೆ ೧೦ ರೂ.ಗಳನ್ನು ಪರಿಷತ್ತಿಗೆ ಕಾಣಿಕೆಯಾಗಿ ಒಪ್ಪಿಸಿರುತ್ತಾರೆ. ಪರಿಷತ್ತು ಇದನ್ನು ಕೃತಜ್ಞತೆಯಿಂದ ಸ್ವೀಕರಿಸಿದೆ.

## ವಸಂತ ಸಾಹಿತ್ಯೋತ್ಸವ

ಜೂನ್ ತಿಂಗಳು ೫-೬ನೆಯ ತಾರೀಖುಗಳಲ್ಲಿ ಮಂಡ್ಯದಲ್ಲಿಯೂ, ೭-೮ನೆಯ ತಾರೀಖುಗಳಲ್ಲಿ ಅರಸೀಕೆರೆಯಲ್ಲಿಯೂ, ೧೦-೧೧ನೆಯ ತಾರೀಖುಗಳಲ್ಲಿ ಹಳೇಬೀಡಿನಲ್ಲಿಯೂ ವಸಂತ ಸಾಹಿತ್ಯೋತ್ಸವ ನಡೆಯುವಂತೆ ಏರ್ಪಾಟಾಗಿದೆ.

**ಮಂಡ್ಯದಲ್ಲಿ:**

**೫ನೆಯ ತಾರೀಖು ಶನಿವಾರ ಸಂಜೆ ೬-೩೦ಕ್ಕೆ**

೧. ಪ್ರಾರಂಭೋತ್ಸವ – ಮಂಡ್ಯ ಜಿಲ್ಲಾಧಿಕಾರಿಗಳಾದ ಶ್ರೀ. ಮೀರ್ ಸಫ್ದರ್ ಹುಸೇನ್ ಅವರಿಂದ.

೨. ಭಾರತವಾಚನ– ಶ್ರೀ. ಎಂ. ಹರಿನಾರಾಯಣ ಅವರು.

೩. ಉಪನ್ಯಾಸ– "ಭಾರತೀಯ ಸಂಸ್ಕೃತಿಯ ಮುನ್ನೋಟ": ರಾಜಸೇವಾಪ್ರಸಕ್ತ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು.

**೬ನೆಯ ತಾರೀಖು ಭಾನುವಾರ ಸಂಜೆ ೬-೩೦ಕ್ಕೆ**

೧. ಉಪನ್ಯಾಸ– "ಜನ್ನನ ಯಶೋಧರ ಚರಿತೆ": ಶ್ರೀ. ಕೆ. ವಿ. ರಾಘವಾಚಾರ್ಯರು.

೨. ಆಧುನಿಕ ಕನ್ನಡ ಕವಿತೆಗಳ ವಾಚನ– ಶ್ರೀ. ಎಂ. ಹರಿನಾರಾಯಣ ಅವರು.

೩. ಉಪನ್ಯಾಸ:

### ಕಿರಿಯ ತರುಣ ಸಂಘ, ಬೆಂಗಳೂರು

ಈ ತಿಂಗಳು ೧೪ನೆಯ ಶುಕ್ರವಾರ ಕಿರಿಯ ತರುಣ ಸಂಘದಲ್ಲಿ ಶ್ರೀ. ಎ.ಕೆ. ಪುಟ್ಟರಾಮು, ಬಿ.ಎ. ಅವರ ಅಧ್ಯಕ್ಷತೆಯಲ್ಲಿ ಶ್ರೀ. ಚಿ. ವಿಶ್ವೇಶ್ವರಯ್ಯ, ಶ್ರೀ. ಅರ್ಚಿಕ ವೆಂಕಟೇಶ, ಶ್ರೀ. ಧನ್ವಂತ, ಶ್ರೀ. ಡಿ. ಬಿ. ಹರೀಂದ್ರ ಇವರುಗಳು ಕವನಗಳನ್ನೂ ಲೇಖನಗಳನ್ನೂ ಶ್ರೀ. ವೈ. ವಿ. ರಾಮದಾಸ್ ಅವರು ವಿಡಂಬನ ಲೇಖನವನ್ನೂ ಶ್ರೀ. ಕೆ. ಎಸ್. ದೊರೆಸ್ವಾಮಿಯವರು ವಿಮರ್ಶಾತ್ಮಕ ಲೇಖನವನ್ನೂ ಓದಿದರು. ಅನಂತರ ಅಧ್ಯಕ್ಷರು ತಮ್ಮ ಭಾಷಣದಲ್ಲಿ ಮನಸ್ಸು ಹೃದಯಗಳ ಆನಂದವನ್ನು ಉಂಟುಮಾಡುವುದೇ ಸಾಹಿತ್ಯದ ಗುರಿಯೆಂದು ಹೇಳಿ, "ಬರಹಗಳಿಗೆ ಒಳ್ಳೆಯ ವಿಷಯ ಬೇಕು. ತಕ್ಕ ಭಾಷೆಯೂ ಬೇಕು" ಎಂದು ನುಡಿದರು. ಅನಂತರ ತಮ್ಮ ಕೆಲವು ಕವಿತೆಗಳನ್ನು ಓದಿದರು.

೧೫ನೆಯ ತಾರೀಖು ಶ್ರೀ. ಅ. ನ. ಕೃಷ್ಣರಾಯರ ಅಧ್ಯಕ್ಷತೆಯಲ್ಲಿ ಶ್ರೀಗಳಾದ ಮತಿಘಟ್ಟದ ಕೃಷ್ಣಮೂರ್ತಿ, ಸಿ. ಕೆ. ಅಣ್ಣಾಸ್ವಾಮಿರಾವ್, ಹರೀಂದ್ರ, ಕೃಷ್ಣಸ್ವಾಮಿ ನಂದಾವರ, ಸೌಭಾಗ್ಯವತಿಯರಾದ ಅಮೃತ, ಪಂಕಜಾ ಇವರುಗಳು ತಮ್ಮ ಬರಹಗಳನ್ನು ಓದಿದರು. ಅಧ್ಯಕ್ಷರು ತರುಣ ಸಾಹಿತಿಗಳಿಗೆ ಸಲಹೆಗಳನ್ನು ಸೂಚಿಸಿದರು. 'ಸಾಹಿತ್ಯ ಒಂದು ರಿಪಬ್ಲಿಕ್. ಅಲ್ಲಿ ಯಾರೊಬ್ಬರ ಅಡಳಿತವೂ ಆಚಾರ್ಯತನವೂ ಇಲ್ಲ. ತರುಣ ಸಾಹಿತಿಗಳು ಅನುಕರಣದಿಂದ ಮುಕ್ತರಾಗಿ ಸ್ವಾಭಿಮಾನದ ಸ್ವತಂತ್ರ ಪ್ರವೃತ್ತಿಯನ್ನು ಬೆಳಸಿಕೊಳ್ಳಬೇಕು" ಎಂದು ಹೇಳಿದರು.

೧೬ನೆಯ ತಾರೀಖು ಶ್ರೀ. ಎ. ನಾರಾಯಣಸ್ವಾಮಿ ಅಯ್ಯರ ಅಧ್ಯಕ್ಷತೆಯಲ್ಲಿ ಶ್ರೀ.ಗಳಾದ ಕೆ. ಬಿ. ಬಸವಣ್ಣನವರು, ಆರ್. ದಯಾನಂದಸಾಗರರು, ಟಿ. ಆರ್. ಜಯರಾಯರು, ವಿ. ಎಂ. ರಾಮಸ್ವಾಮಿಯವರು, ತ. ರಾ. ಸುಬ್ಬರಾಯರು, ಕಡೂರು ಶ್ರೀಪಾದರು ಕಾವ್ಯವಾಚನ ಮಾಡಿದರು.

ಅನಂತರ ಶ್ರೀ. ಶಿವರಾಮಕಾರಂತರು ಯುವಕರಲ್ಲಿ ಸ್ವತಂತ್ರ ವಿಚಾರ ಶಕ್ತಿ ಯುಂಟಾಗಿ ಅನುಕರಣೆಯನ್ನು ಬಿಡಬೇಕೆಂದು ಹೇಳಿದರು. ಆಲೋಚನೆಯಿಂದ ಪಕ್ವವಾದ ಆಮೇಲೆ ಒಂದು ವಿಷಯವನ್ನು ಬರಹದಲ್ಲಿ ಮೂಡಿಸಬೇಕೆಂದರು. ಉತ್ತಮ ಸಾಹಿತ್ಯ ಸೃಷ್ಟಿಗೆ ಉತ್ತಮ ಜೀವನವೇ ಸಾಧನ. ಶೀಲಪೂರ್ಣವಾಗಿರುವ ಜೀವನವು ಉತ್ತಮವಾಗಿರುತ್ತದೆ. ಶೀಲವಿಲ್ಲದೆ ಜೀವನ ಹಸನಾಗುವುದಿಲ್ಲ. ಅನುದಿನದ ಜೀವನದಲ್ಲಿ ಸುಪರಿಚಿತವಾದ ವಿಷಯಗಳನ್ನು ತರುಣರು ಚಿತ್ರಿಸಲು ಯತ್ನಿಸಿದರೆ ಅದು ಸಹಜವೂ ಸುಂದರವೂ ಆಗಿರುವುದೆಂದೂ ಅನುಭವ ಸಿದ್ಧವಲ್ಲದುದನ್ನು ಬರೆಯಬಾರದೆಂದೂ ಹೇಳಿದರು. ರಾಗ, ಸಂಗೀತ, ಗಮಕಗಳು ಸಾಹಿತ್ಯದಲ್ಲಿಯ ದೋಷಗಳನ್ನು ಮುಚ್ಚುವ ಆಭರಣಗಳಾಗಿರದೆ ಬರವಣಿಗೆಯ ಭಾವಕ್ಕೆ ಹೊಂದಿಕೊಂಡು ದೇಹ ಜೀವಗಳಂತೆ ಬೆಳೆಯಬೇಕೆಂದರು. ಈ ದೃಷ್ಟಿಯಿಂದ ಜನಪದದ ಗಂಡಸರು ಹೆಂಗಸರು ತ್ರಿಪದಿಗಳಲ್ಲಿ ಹಾಗೂ, ಇತರ ಛಂದಸ್ಸುಗಳಲ್ಲಿ ರಚಿಸಿರುವ ಪದಗಳನ್ನು ಹೊಗಳಿದರು.

ಅನಂತರ ಅಧ್ಯಕ್ಷರು ಪರಭಾಷೆಗಳಿಂದ ಅನುವಾದಗಳೂ ಹೆಚ್ಚಬೇಕೆಂದೂ ತರುಣರಲ್ಲಿ ಶಿಸ್ತು ಹೆಚ್ಚಲು 'ವ್ರತಚಾರಿ' ಯಂತಹ ಚಳುವಳಿಯನ್ನು ಆರಂಭಿಸಬೇಕೆಂದೂ ಹೇಳಿದರು.

೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

## ಮುಂಬಯಿ ಕನ್ನಡ ಸಂಘ

### ವಾರ್ಷಿಕ ವರದಿ

"ಜನ್ಮಸ್ಥಳಗಳನ್ನು ಬಿಟ್ಟು ಬಂದು ಇಲ್ಲಿ ನೆಲಸಿರುವ ಕನ್ನಡಿಗರಲ್ಲಿ ನಮ್ಮ ಸಂಸ್ಕೃತಿಯಲ್ಲಿ ಒಂದು ಉಜ್ವಲವಾದ ಹೆಮ್ಮೆ, ಕನ್ನಡ ಭಾಷೆಯಲ್ಲಿ ಪೂರ್ಣಾಭಿಮಾನ, ಕನ್ನಡದ ಅಮೋಘವಾದ ಸಾಹಿತ್ಯದಲ್ಲಿ ಅನುರಾಗ, ಕನ್ನಡ ಸಮಾಜದ ಸರ್ವತೋಮುಖವಾದ ಪ್ರಗತಿ ಕಾರ್ಯಗಳಲ್ಲಿ ಜಾಗೃತಿ ಮತ್ತು ಆಸಕ್ತಿ ಮುಂತಾದುವನ್ನು ಆದಷ್ಟು ಅಭಿವೃದ್ಧಿಗೊಳಿಸಬೇಕೆಂಬ ಉಚ್ಚತರದ ಧ್ಯೇಯವನ್ನು ಮುಂದಿಟ್ಟುಕೊಂಡು ಸಂಘ ಕೈಯಲ್ಲಾದಷ್ಟು ಅಲ್ಪಸ್ವಲ್ಪ ಸೇವೆಯನ್ನು ನಡಸುತ್ತಾ ಬಂದಿರುತ್ತದೆ. ಸಂಘ ಸ್ಥಾಪಿತವಾದ ಎರಡನೆಯ ವರ್ಷದಲ್ಲಿಯೇ ಇಲ್ಲಿಯ ನಮ್ಮವರ ಮಕ್ಕಳಿಗೆ ನಮ್ಮ ಮಾತೃಭಾಷೆಯಲ್ಲಿಯೇ ಶಿಕ್ಷಣವನ್ನು ದೊರಕಿಸಬೇಕೆಂಬ ಮಹದುದ್ದೇಶದಿಂದ "ಮುಂಬಯಿ ರಾಷ್ಟ್ರೀಯ ಕನ್ನಡ ಶಿಕ್ಷಣ ಸಮಿತಿ" ಎಂಬ ಒಂದು ವಿದ್ಯಾವರ್ಧಕ ಸಂಘವನ್ನು ಸ್ಥಾಪಿಸಿದರು. ಈ ಸಮಿತಿಯ ಶಾಲೆ ಈಗ ಪ್ರಾಥಮಿಕಾವಸ್ಥೆಯಿಂದ ಮಾಧ್ಯಮಿಕಸ್ಥಾಯಿಗೆ ಉತ್ತೀರ್ಣವಾಗಿದೆ. ಈ ಶಾಲೆಗೆ ಅನೇಕ ಕನ್ನಡಾಭಿಮಾನಿಗಳ ಔದಾರ್ಯ ಉತ್ತೇಜನಗಳು ದೊರೆತಿರುವುದು ಬಹಳ ಸಂತೋಷದ ಸಂಗತಿ. ಈ ಆಶ್ರಯ ಇನ್ನೂ ಹೆಚ್ಚಾಗಿ ದೊರೆತು ಕ್ಷಿಪ್ರದಲ್ಲಿಯೇ ಈ ಶಾಲೆ ಒಂದು ಸಂಪೂರ್ಣ ಹೈಸ್ಕೂಲು ಆಗಿ ಪರಿಣಮಿಸಿ ಕರ್ನಾಟಕಕ್ಕೆ ಕೀರ್ತಿ ತರಲೆಂದು ಹಾರೈಸುತ್ತೇನೆ.

ಸಂಘದ ಪುಸ್ತಕ ಭಂಡಾರವೂ ವಾಚನಾಲಯವೂ ಹೆಚ್ಚು ಓದುಗರನ್ನು ಆಕರ್ಷಿಸುತ್ತಿದೆ.

ಸಂಘದ ಕಾರ್ಯಕಲಾಪಗಳಿಗೆ ನಾಟಕ ಶಾಖೆ ಒಂದು ಅಂಗವಾಗಿರುತ್ತದೆ. ಕಳೆದ ವರ್ಷ 'ಕಬೀರದಾಸ್' ಎಂಬ ನಾಟಕವನ್ನಭಿನಯಿಸಿ ಉತ್ಪನ್ನವಾದ ೫೫೦ ರೂ.ಗಳನ್ನು ಕನ್ನಡ ಶಾಲೆಗೆ ಕೊಡಲಾಯಿತು.

### ಶ್ರೀ. ಎಚ್. ವಿ. ಆರ್. ಅಯ್ಯಂಗಾರರ ಭಾಷಣ

ಸಂಘದ ೬ನೆಯ ವಾರ್ಷಿಕೋತ್ಸವದ ಅಧ್ಯಕ್ಷತೆ ವಹಿಸಿದ್ದ ಮುಂಬಯಿ ಸರಕಾರದ ಹೋಂ ಡಿಪಾರ್ಟ್‌ಮೆಂಟಿನ ಅಡಿಷನಲ್ ಸೆಕ್ರೆಟರಿಗಳಾದ ಶ್ರೀ. ಎಚ್. ವಿ. ಆರ್. ಅಯ್ಯಂಗಾರ್, ಸಿ.ಐ.ಇ., ಐ.ಸಿ.ಎಸ್. ಅವರು ತಮ್ಮ ಉಪನ್ಯಾಸದ ಮೊದಲಲ್ಲಿ, ಹಿಂದೆ ಕನ್ನಡಕ್ಕಿದ್ದ ಅನಾದರ ಈಗ ಹೋಗುತ್ತಿದೆಯೆಂದೂ, ಕನ್ನಡದ ಅಭಿಮಾನ ಮೂಡುತ್ತಿದೆಯೆಂದೂ ಹೇಳಿ, ಕನ್ನಡದ ಈಚಿನ ಪ್ರಗತಿಯನ್ನು ವಿವರಿಸಿದರು :

ಈಚೆಗೆ ಕನ್ನಡ ಭಾಷೆಯನ್ನು ಅಭಿವೃದ್ಧಿಗೊಳಿಸುವುದಕ್ಕೋಸ್ಕರ ಮೈಸೂರು ದೇಶದಲ್ಲಿ ಓದುತ್ತಿರುವ ತರುಣರಿಗೆ ಕನ್ನಡದಲ್ಲಿಯೇ ಪಾಠ ಹೇಳಬೇಕೆಂದೂ ಹಳೆಯ ಉದ್ಗ್ರಂಥಗಳನ್ನು ಮುದ್ರಿಸಿ ಈ ಭಾಷೆಯನ್ನು ಬೆಳಕಿಗೆ ತರಬೇಕೆಂದೂ ವಿದ್ಯಾಪೀಠವು ಬಹಳವಾಗಿ ಪ್ರಯತ್ನವನ್ನು ಮಾಡುತ್ತಿದೆ. ಶ್ರೀ.ಗಳಾದ ಮಾಸ್ತಿ ವೆಂಕಟೇಶ ಅಯ್ಯಂಗಾರ್, ಬಿ. ಎಂ. ಶ್ರೀಕಂಠಯ್ಯ, ವಿ. ಸೀತಾರಾಮಯ್ಯ ಮತ್ತು ಇನ್ನೂ ಕೆಲವರು ಇಂಗ್ಲೀಷ್ ಭಾಷೆಯಲ್ಲಿ ಪ್ರವೀಣರಾಗಿದ್ದರೂ ಕೂಡ ಕನ್ನಡದಲ್ಲಿ ಅಮೋಘವಾದ ಪುಸ್ತಕಗಳನ್ನು ಪ್ರಕಟಿಸಿ, ಭಾಷಣಗಳನ್ನು ಮಾಡಿ ಕನ್ನಡ ಭಾಷೆಗೆ ಪ್ರಾಶಸ್ತ್ಯವನ್ನು ಕೊಟ್ಟಿರುವರು. ಇಂತಹ ಪ್ರಯತ್ನಗಳು ನಡೆಯುತ್ತಿರುವುದು ಕರ್ನಾಟಕದಲ್ಲಿ ಮಾತ್ರವೇ ಅಲ್ಲ. ನಮ್ಮ ಇಂಡಿಯಾ ದೇಶದ ಇತರ ಪ್ರಾಂತಗಳಲ್ಲಿಯೂ ಇದೇ ತೆರದ ಉತ್ಸಾಹ ಹರಡಿತು. ಮಹಾತ್ಮಾ ಗಾಂಧೀಜಿಯವರು ಸ್ವರಾಜ್ಯ ಚಳವಳಿಯಲ್ಲಿ ತೊಡಗುವುದಕ್ಕೆ ಮೊದಲು ನಮ್ಮ ರಾಜ್ಯದ ಮುಖಂಡರು ಸಾಧಾರಣವಾಗಿ ಇಂಗ್ಲಿಷ್ ಭಾಷೆಯಲ್ಲಿಯೇ ಬರೆಯುತ್ತಿದ್ದರು ಮತ್ತು ಭಾಷಣ ಮಾಡುತ್ತಿದ್ದರು. ಆದರೆ ಗಾಂಧೀಜಿಯವರು ಸಾಧ್ಯವಾದ ಮಟ್ಟಿಗೆ ಗುಜರಾತಿ ಮತ್ತು ಹಿಂದೀ ಭಾಷೆಯಲ್ಲಿ ಬರೆಯುವುದಕ್ಕೂ ಮತ್ತು ಉಪನ್ಯಾಸ ಮಾಡುವುದಕ್ಕೂ ಆರಂಭಿಸಿದರು. ಯಾವ ರೀತಿಯಲ್ಲಿ ಸ್ವರಾಜ್ಯ ನಮಗೆ ಬರಬೇಕೆಂದು ಇಡಿಯ ರಾಜ್ಯದಲ್ಲೆಲ್ಲ ಚಳವಳಿ ಹರಡಿತೋ, ಅದೇ ರೀತಿಯಲ್ಲಿಯೇ ನಮ್ಮ ದೇಶದ ನಾನಾ ಭಾಷೆಗಳನ್ನು ಪುನಃ ಉಚ್ಚಸ್ಥಾನಕ್ಕೆ ತಂದು ಇಂಗ್ಲಿಷ್ ಭಾಷೆಯ ಹಿಡಿತವನ್ನು ತಗ್ಗಿಸಬೇಕೆಂದು ಪ್ರಯತ್ನಗಳು ಮುಂದಾದವು. ಇಂತಹ ಪ್ರಯತ್ನಗಳಿಂದ ನಮ್ಮ ನುಡಿಯ ವಿಷಯದ ಉದಾಸೀನವೂ ತಿರಸ್ಕಾರಭಾವವೂ ಈಗ ಬಹಳವಾಗಿ ದೂರವಾಗುತ್ತಿವೆ. ಈಗ ಮುಂಬಯಿಯಲ್ಲಿಯೂ ಮತ್ತು ಇತರ ದೂರ ಪ್ರದೇಶಗಳಲ್ಲಿಯೂ ಅಲ್ಲಲ್ಲಿ ಕನ್ನಡ ಸಂಘಗಳನ್ನು ಸ್ಥಾಪಿಸಿ ದೂರ ರಾಜ್ಯದಲ್ಲಿ ನೆಲಸಿರುವ ಕರ್ನಾಟಕರಿಗೆ ತಮ್ಮ ತಮ್ಮ ಭಾಷಾಭಿವೃದ್ಧಿಗೋಸ್ಕರ ಅನುಕೂಲಗಳನ್ನು ಮಾಡುತ್ತಿರುವರು. ಇದು ಸ್ವಾಭಾವಿಕವಾದ ವಿಷಯ. ಈ ಮುಂಬಯಿ ಸಂಘವೂ ಕೂಡ ಇಷ್ಟು ಕೊಂಚ ವರ್ಷಗಳಲ್ಲಿಯೇ ಕನ್ನಡ ಶಾಲಾಭಿವೃದ್ಧಿಯನ್ನು ಮಾಡಿ, ವಾಚನಾಲಯವನ್ನು ಸ್ಥಾಪಿಸಿ ಅದರ ಜೊತೆಗೆ ಇನ್ನೂ ಇತರ ಶಾಖೆಗಳನ್ನೇರ್ಪಡಿಸಿ ಇಷ್ಟು ಅಭಿವೃದ್ಧಿಗೆ ಬಂದಿರುವುದನ್ನು ನೋಡಿ, ನನಗೂ ಕೂಡ ಈ ಸಂಘಕ್ಕೆ ಸದಸ್ಯನಾಗಬೇಕೆಂಬ ಉತ್ಸಾಹ ತುಂಬಿ ತುಳುಕುತ್ತಿದೆ. ಮತ್ತು ನಾನು ಕೈಯಲ್ಲಾದ ಮಟ್ಟಿಗೆ ಈ ಸಂಘಕ್ಕೆ ಸಹಾಯ ಮಾಡಲು ಸಿದ್ಧವಾಗಿದ್ದೇನೆ.

ನಮ್ಮ ದೇಶದ ನಾನಾ ಭಾಷೆಗಳ ಪುನರುಜ್ಜೀವನದಿಂದ ರಸಿಕರಿಗೆ ಮಾತ್ರವಲ್ಲ, ಸಾಧಾರಣ ಜನಸಮೂಹಕ್ಕೆ ಕೂಡ ಅತ್ಯಂತ ಉಪಕಾರವಾಗುವುದೆಂದು ಹೇಳುವುದರಲ್ಲಿ ಯಾವ ಅತಿಶಯೋಕ್ತಿಯೂ ಇಲ್ಲ. ಸ್ವಭಾಷೆಯಲ್ಲಿ ಯಾವ ವೃತ್ತಾಂತವನ್ನೇ ಆಗಲಿ ಬಹಳ ಸುಲಭವಾಗಿಯೂ, ವಿಶದವಾಗಿಯೂ ಮತ್ತು ಜಾಗ್ರತೆಯಾಗಿಯೂ ಗ್ರಹಿಸಿಕೊಳ್ಳಬಹುದು. ಓದು ಬರಹ ತಿಳಿಯದ ಗ್ರಾಮಸ್ಥರಿಗೂ ಕೂಡ ತಮ್ಮ ತಮ್ಮ ಭಾಷೆಯಲ್ಲಿ ನಾಟಕ, ಸಂಗೀತ, ಪುರಾಣ, ಪುಣ್ಯಕತೆ ಮತ್ತು ಉಪನ್ಯಾಸಗಳು ಇವನ್ನೆಲ್ಲಾ ಏರ್ಪಡಿಸಿ ಅವರ ಮನಸ್ಸನ್ನಾಕರ್ಷಿಸುವ ಹಾಗೆ ಮಾಡುತ್ತಿದ್ದರೆ, ಅವರಲ್ಲಿ ವಿದ್ಯೆ ಕಲಿಯುವ ಆಸಕ್ತಿ ಹುಟ್ಟಿಸಬಹುದು. ವೃತ್ತಾಂತ ಪತ್ರಿಕೆಗಳು, ವಾರ ಪತ್ರಿಕೆಗಳು ಮತ್ತು ಮಾಸಿಕಗಳು ಮುಂತಾದುವನ್ನು ಪ್ರಕಟಿಸಿ ಒಳ ಹೊರದೇಶದ ಸಮಾಚಾರಗಳನ್ನು ಅವರಿಗೆ ತಿಳಿಸಬಹುದು.

ಈಗ ೨೫–೩೦ ವರ್ಷಗಳ ಹಿಂದೆ ರಷ್ಯಾ ದೇಶ ಬಹಳ ಹೀನ ಸ್ಥಿತಿಯಲ್ಲಿತ್ತು. ಆ ರಾಜ್ಯದಲ್ಲಿ ಮುಕ್ಕಾಲು ಭಾಗದ ಜನರಿಗೆ ಓದು ಬರಹವೇ ಬರುತ್ತಿರಲಿಲ್ಲ. ಆದರೂ ಕೂಡ ತಮ್ಮ ಸ್ವಭಾಷೆಯಿಂದಲೇ ಜನರನ್ನು ತಕ್ಕ ವಿದ್ಯಾವಂತರನ್ನಾಗಿ ಮಾಡಿ ನಾಗರಿಕತೆಯನ್ನು ಅಭಿವೃದ್ಧಿಗೊಳಿಸಿ ಈಗ ಅಕ್ಕ ಪಕ್ಕ ಅನೇಕ ರಾಜ್ಯಗಳಿಗಿಂತ ಮೇಲ್ಮೆಯನ್ನು ಹೊಂದಿರುವುದು ಎಲ್ಲರಿಗೂ ತಿಳಿದ ವಿಷಯವಾಗಿದೆ. ಸ್ತ್ರೀಯರು ಪುರುಷರು ಮತ್ತು ಮಕ್ಕಳು ಮುಂತಾಗಿ ಎಲ್ಲರೂ ಕೂಡ ಯಾವ ಕಾರ್ಯಕ್ಕೇ ಆಗಲಿ ಹಿಂಜರಿಯದೆ ಕಂಕಣಬದ್ಧರಾಗಿದ್ದಾರೆ. ಮಾತೃಭಾಷೆಯನ್ನು ಪಕ್ಕಕ್ಕೆ ತಳ್ಳಿ, ಪರಭಾಷೆಯ ಮುಖಾಂತರ ಜನಸಮೂಹಕ್ಕೆ ವಿದ್ಯಾಭ್ಯಾಸವನ್ನು ಕೊಡಬೇಕೆಂದಿದ್ದರೆ ರಷ್ಯಾದವರಿಗೆ ಇನ್ನೂ ನೂರಾರು ವರ್ಷಗಳಾಗುತ್ತಿದ್ದುವು. ಯಾವ ರೀತಿಯಲ್ಲಿ ರಷ್ಯದ ಜನರು ತಮ್ಮ ಸ್ವಭಾಷೆಯಲ್ಲಿ ಜನಸಮೂಹಕ್ಕೆ ವಿದ್ಯೆಯನ್ನು ಕಲಿಸಿಕೊಟ್ಟರೋ ಅದೇ ರೀತಿಯಲ್ಲಿಯೇ ಕರ್ನಾಟಕದಲ್ಲಿ ನಮ್ಮ ಜನರು ಮುಂದಕ್ಕೆ ಬರಬೇಕೆಂದರೆ ಕನ್ನಡದಲ್ಲಿಯೇ ಶಿಕ್ಷಣವನ್ನು ಕೊಡಬೇಕಾದುದು ಅವಶ್ಯಕ. ಆದರೆ ಈ ವಿಚಾರದಲ್ಲಿ ಒಂದೆರಡು ಸಣ್ಣ ಮಾತುಗಳನ್ನು ಹೇಳಬೇಕಾಗಿದೆ. ನಾನು ಓದಿರುವ ಕೆಲವು ಕನ್ನಡ ಪುಸ್ತಕಗಳಲ್ಲಿ ಪಾಂಡಿತ್ಯ ಬೇಕಾದಷ್ಟು ಇದ್ದರೂ ಸರಳತೆಯೆಂಬ ವಾಸನೆಯೇ ಇಲ್ಲ. ದೊಡ್ಡ ದೊಡ್ಡ ಸಂಸ್ಕೃತ ಭಾಷೆಯ ಶಬ್ದಗಳನ್ನೂ ಯಾರಿಗೂ ಅರ್ಥವಾಗದಂತಹ ಕೆಲವು ಹಳಗನ್ನಡ ಶಬ್ದಗಳನ್ನೂ ಉಪಯೋಗಿಸಿ ಒಂದು ಮೈಲು ಉದ್ದವಾದ ವಾಕ್ಯಗಳನ್ನು ಕಟ್ಟಿದರೆ ಪಾಂಡಿತ್ಯವನ್ನೇನೋ ತೋರಿಸಿದ ಹಾಗಾಗುವುದು. ಆದರೆ ಸಾಮಾನ್ಯ ಜನಸಮೂಹಕ್ಕೆ ಉಪಯೋಗವಾಗಬೇಕಾದರೆ ಶೈಲಿಯಲ್ಲಿ ಸರಳತೆ ಇರಬೇಕು. ಮಹಾತ್ಮಾ ಗಾಂಧೀಜಿಯವರು 'ನವಜೀವನ'ದಲ್ಲಿ

ಬರೆಯುವುದಕ್ಕೆ ಮುಂಚೆ ಗುಜರಾತಿ ಭಾಷೆಯಲ್ಲಿಯೂ ಕೂಡ ಇದೇ ರೀತಿಯಲ್ಲಿಯೇ ಬಹಳ ಪಾಂಡಿತ್ಯ ಭರಿತವಾದ ಶೈಲಿಯಿತ್ತು. ಗಾಂಧೀಜಿಯವರು ಹೊಸ ನಮೂನೆಯ ಗುಜರಾತಿಯನ್ನು ಸ್ಥಾಪಿಸಿದರು. ಯಾವ ಪುಸ್ತಕವನ್ನೂ ಓದದ ಹಳ್ಳಿಯವನಿಗೂ ಕೂಡ ತಿಳಿಯುವಂತಹ ಶೈಲಿ ಅವರದು. ಇಷ್ಟು ಸರಳ ಶೈಲಿಯಾದರೂ ಅದರಲ್ಲಿ ಒಂದು ವಿಧವಾದ ಗಾಂಭೀರ್ಯವೂ ಇಂಪೂ ಇದೆ. ಕನ್ನಡದಲ್ಲಿಯೂ ಕೂಡ ಇದೇ ತೆರದ ಸರಳ ಶೈಲಿಯಲ್ಲಿ ಬರೆಯಲು ಹಲವರು ಇತ್ತೀಚಿಗೆ ಪ್ರಯತ್ನಿಸಿರುವರು. ಇದು ಬಹಳ ಶ್ಲಾಘ್ಯವಾದುದೆಂದು ನನ್ನ ಅಭಿಪ್ರಾಯ.

ನಮ್ಮ ಭಾಷೆಯನ್ನು ಉಚ್ಚ ಪದವಿಯಲ್ಲಿಡಬೇಕೆಂಬ ಅಭಿಲಾಷೆಯಿಂದ ಹಲವರು ಇತರ ಭಾಷೆಗಳನ್ನು ಅದರಲ್ಲೂ ಇಂಗ್ಲಿಷ್ ಭಾಷೆಯನ್ನು ತಿರಸ್ಕಾರ ಮಾಡುವರು. ಇದು ದೊಡ್ಡ ತಪ್ಪೆಂದು ನನ್ನ ಭಾವನೆ. ಇಂಗ್ಲಿಷ್ ಭಾಷೆಯಿಂದ ನಾವು ಕಲಿಯಬೇಕಾದ ತತ್ವಗಳು ಎಷ್ಟೋ ಇವೆ. ಸಾಹಿತ್ಯದಲ್ಲಿಯೇ ಅಲ್ಲ, ನಾನಾ ಶಾಸ್ತ್ರಗಳಲ್ಲೂ ಇಂಗ್ಲಿಷ್ ಭಾಷೆಯಲ್ಲಿ ಅಮೋಘವಾದ ಪುಸ್ತಕಗಳು ಪ್ರಕಟವಾಗುತ್ತಿವೆ. ಅವುಗಳ ರಸವನ್ನು ಹೀರಿ ಅದನ್ನು ನಮ್ಮ ಭಾಷೆಯಲ್ಲಿ ಪ್ರಕಟಿಸುವುದು ನಮ್ಮ ಕರ್ತವ್ಯ. ಕಳೆದ ೫೦ ವರ್ಷಗಳಲ್ಲಿ ಶಾಸ್ತ್ರಜ್ಞಾನವು (Science) ಬಹಳವಾಗಿ ಹರಡಿದೆ. ಈ ಹೊಸ ಜ್ಞಾನವನ್ನು ಕನ್ನಡದಲ್ಲಿ ಪ್ರಚಾರ ಮಾಡಬೇಕಾದರೆ ಅನೇಕ ಹೊಸ ಪಾರಭಾಷಿಕ (Technical) ಶಬ್ದಗಳನ್ನು ಉಪಯೋಗಿಸಬೇಕಾಗುವರು ಕೆಲವರು ಎಷ್ಟೇ ಕಷ್ಟವಾದರೂ ಈ ಶಬ್ದಗಳನ್ನು ಕನ್ನಡದಲ್ಲಿಯೇ ತರ್ಜುಮೆ ಮಾಡಿ ಉಪಯೋಗಿಸಬೇಕೆಂದು ಹಠ ಮಾಡುವರು. ಸಾಧಾರಣವಾಗಿ ಇಂಗ್ಲಿಷ್‌ನಲ್ಲಿ ಉಪಯೋಗಿಸುತ್ತಿರುವ Technical ಶಬ್ದಗಳನ್ನು ತರ್ಜುಮೆ ಮಾಡದೆ ಹಾಗೆಯೇ ಉಪಯೋಗಿಸಿದರೆ ಉತ್ತಮವೆಂದು ನನಗೆ ತೋರುತ್ತದೆ.

## ಕರ್ಣಾಟಕ ಸಂಘ, ಶಿವಮೊಗ್ಗ

### ಅಖಿಲ ಕರ್ಣಾಟಕ ಬಾಂಧವರಲ್ಲಿ ಬಿನ್ನಹ

ಸಂಘದ ಕಾರ್ಯದರ್ಶಿಗಳಾದ ಶ್ರೀ. ವಿಷ್ಣುಭಟ್ಟರು ಹೀಗೆ ಬರೆಯುತ್ತಾರೆ:

ತಮ್ಮೆಲ್ಲರ ಉದಾರವಾದ ಸಹಾಯ ಮತ್ತು ಸಹಾನುಭೂತಿಗಳಿಂದ ಬೆಳೆದುಬಂದ ಶಿವಮೊಗ್ಗಾ ಕರ್ಣಾಟಕ ಸಂಘಕ್ಕೆ ಸುಂದರವಾದ ಭವನವನ್ನು ಶ್ರೀಮಾನ್ ಹಸೂಡಿ ವೆಂಕಟಶಾಸ್ತ್ರಿಗಳವರು ಕಟ್ಟಿಸಿಕೊಟ್ಟಿರುವುದೂ, ಅದನ್ನು ನಮ್ಮನ್ನಾಳುವ ಶ್ರೀಮನ್ಮಹಾರಾಜರವರು ತಮ್ಮ ಅಮೃತ ಹಸ್ತದಿಂದ ತಾ॥ ೧೧-೨-೧೯೪೩ ರಲ್ಲಿ ತೆರೆದ ಶುಭ ಸಮಯದಲ್ಲಿ ಸಂಘದ ಪುರೋಭಿವೃದ್ಧಿಗಾಗಿ ಒಂದು ಸಾವಿರ ರೂಪಾಯಿಗಳನ್ನು ಶ್ರೀಮಾನ್ ವೆಂಕಟಶಾಸ್ತ್ರಿಗಳು ಉದಾರವಾಗಿ ದಾನಮಾಡಿರುವುದೂ ತಮಗೆಲ್ಲಾ ತಿಳಿದೇ ಇದೆ. ಹಿಂದಿನಂತೆಯೇ ಮತ್ತು ಅದಕ್ಕೂ ಹೆಚ್ಚಾಗಿ ಸಂಘವು ಜನಸೇವೆಯನ್ನು ಮಾಡಲೆಳಸಿದೆ. ಇದಕ್ಕೆ ತಮ್ಮಗಳೆಲ್ಲರ ಉದಾರ ಧನಸಹಾಯ ಅವಶ್ಯಕ. ಸಂಘದ ಉದ್ದೇಶಗಳು ಈಡೇರಲು, ಒಂದು ಶಾಶ್ವತ ನಿಧಿಯನ್ನು ಏರ್ಪಡಿಸಬೇಕೆಂದು ಕಾರ್ಯನಿರ್ವಾಹಕ ಸಮಿತಿ ನಿಶ್ಚಯಿಸಿದೆ. ಇದಕ್ಕೆ ಅಖಿಲ ಕರ್ಣಾಟಕದ ಮಹಾಜನಗಳ ನೆರವು ಬೇಕು. ಆದುದರಿಂದ ತಾವುಗಳೆಲ್ಲರೂ ಈ ಮಹೋದ್ದೇಶ ಸಫಲವಾಗುವಂತೆ ಸಹಕರಿಸಿ ಸ್ವಹಸ್ತ ಮತ್ತು ಪರಹಸ್ತಗಳಿಂದ ಧನಸಹಾಯ ಮಾಡಿ, ಸಂಘದ ಅಭಿವೃದ್ಧಿಗೆ ಕಾರಣರಾಗಬೇಕಾಗಿ ಬಿನ್ನವಿಸುತ್ತೇನೆ.

## ಸಾದರ ಸ್ವೀಕಾರ

**ಬೆಂಗಳೂರಿನ ಅಖಿಲ ಕರ್ನಾಟಕ ಮಕ್ಕಳ ಕೂಟದ ಪ್ರಕಟನೆಗಳು: ೧. ಕೈಪಿಡಿ ಮತ್ತು ೨. ೧೯೪೨-೪೩ನೆಯ ವಾರ್ಷಿಕ ವರದಿ**

ಈ ಎರಡು ಪ್ರಕಟನೆಗಳೂ ಮಕ್ಕಳ ಕೂಟದ ಆಶ್ರಯದಲ್ಲಿ ನಡೆದ ಆರನೆಯ ಮಕ್ಕಳ ಸಮ್ಮೇಳನದ ಸಂದರ್ಭದಲ್ಲಿ ಹೊರಬಿದ್ದವು.

ವರದಿಯಿಂದ ಮಕ್ಕಳ ಕೂಟದ ಪ್ರಗತಿ ಚೆನ್ನಾಗಿ ವ್ಯಕ್ತವಾಗುತ್ತದೆ. ಅದಕ್ಕೆ ಮಹಾಜನರಿಂದ ಒದಗುತ್ತಿರುವ ಪ್ರೋತ್ಸಾಹವೂ ದ್ರವ್ಯಸಹಾಯವೂ ಆಶಾಜನಕವಾಗಿದೆ.

ಕೋಲಾರ, ಅನವಟ್ಟಿ, ಮೇಲುಕೋಟೆ, ಶಿರಾಳಕೊಪ್ಪಗಳಲ್ಲಿಯ ಮಕ್ಕಳ ಕೂಟದ ಅಂಗಸಂಸ್ಥೆಗಳ ವಿವರಗಳು ವರದಿಯಲ್ಲಿ ಅಡಕವಾಗಿವೆ.

ಈ ಸಂಸ್ಥೆ ವರ್ಷ ವರ್ಷಕ್ಕೂ ದೊಡ್ಡದಾಗಿ ಬೆಳೆದು, ಮೈಸೂರು ಸಂಸ್ಥಾನದ ಹೊರಗಿನ ಮಕ್ಕಳೂ ಇದರ ಕಾರ್ಯಕಲಾಪಗಳಲ್ಲಿ ಧ್ಯೇಯವಲ್ಲಿ ಭಾಗವಹಿಸುವಂತಾಗಲೆಂದು ಹಾರೈಸುತ್ತೇವೆ.

'ಕೈಪಿಡಿ'ಯಲ್ಲಿ ಕರ್ನಾಟಕದಲ್ಲಿ ಮಕ್ಕಳ ಕೂಟಗಳು, ಪಾಠವೋ ಆಟವೋ, ಮಕ್ಕಳ ಸ್ವಭಾವ, ಪೌರಸಭೆಗಳಿಂದ ಮಕ್ಕಳ ಸ್ವಭಾವ, ಬೆಂಗಳೂರು ಪಟ್ಟಣದ ಚರಿತೆ – ಈ ಲೇಖನಗಳಿವೆ. ಈ ಪ್ರಕಟನೆ ಮಕ್ಕಳ ಯೋಗಕ್ಷೇಮದ ಹೊಣೆ ಹೊತ್ತಿರುವ ಹಿರಿಯರ ಗಮನಕ್ಕೆ ಅರ್ಹವಾದದ್ದಾಗಿದೆ.

**ಲಕ್ಷ್ಮೀಶ:** ಮೈಸೂರು ವಿಶ್ವವಿದ್ಯಾನಿಲಯ ಪ್ರಚಾರ ಪುಸ್ತಕ ಮಾಲೆ ೪೫. ಲೇಖಕರು: ಶ್ರೀ. ಎಸ್. ಅನಂತರಂಗಾಚಾರ್, ಎಂ.ಎ., ಬಿ.ಟಿ. ಅವರು ಆಕಾರ: ಫೂಲ್ಸ್‌ಕ್ಯಾಪ್ ಅಷ್ಟಪತ್ರ ಪುಟಗಳು ೫೬ + ೪ ಬೆಲೆ ೪ ಆಣೆ.

**ಅಯ್ದಕ್ಕಿ ಮಾರಯ್ಯ** (ನಾಟಕ ಸಚಿತ್ರ): ಶ್ರೀ. ಜ. ಪ. ಚನ್ನಬಸವರಾಜ ದೇಶಿಕೇಂದ್ರ ಸ್ವಾಮಿಗಳವರು, ನಿಡುಮಾಮಿಡಿ ಶ್ರೀಶೈಲ ಸಂಸ್ಥಾನ. ಪ್ರಕಾಶಕರು: ಎಸ್. ಎಂ. ಯಜಮಾನ್ ಅಂಡ್ ಸನ್ಸ್. ಆಕಾರ: ಕಿರೀಟಾಕಾರದ ಅಷ್ಟಪತ್ರ ಪುಟಗಳು ೮ + ೪೩ ಬೆಲೆ ೫ ಆಣೆ.

**ಸಾಮಾಜಿಕ ಅಭ್ಯಾಸ ಮತ್ತು ಭಾರತದ ರಾಜ್ಯಭಾರ ಕ್ರಮ ಅಥವಾ ಸಿವಿಕ್ಸ್** ಲೇಖಕರು: ಶ್ರೀ. ಶಂಕರನಾರಾಯಣ ಕಾರಂತ ಕೋಟ, ಬಿ.ಎ., ಬಿ.ಎಲ್., ಅಡ್ವೋಕೇಟ್, ಕುಂದಾಪುರ ಅವರು. ಪ್ರಕಾಶಕರು: ಶ್ರೀ. ಕೆ.ಎಸ್. ಕಾರಂತ, ಪುತ್ತೂರ ದ. ಕ. ಆಕಾರ: ಕಿರೀಟಾಕಾರದ ಅಷ್ಟಪತ್ರ. ಪುಟಗಳು ೨ + ೧೧೩ + ೨ ಬೆಲೆ ೧೦ ಆಣೆ.

**ಸಂತಸಖು** (ನಾಟಕ): ಲೇಖಕರು: ಕೋ. ಶ. ಕಾರಂತ, ಬಿ.ಎ., ಬಿ.ಎಲ್. ಪ್ರಕಾಶಕರು: ಬಿ.ಎಸ್. ಸೋಮಯಾಜಿ ಕಂಪೆನಿ, ರಥಬೀದಿ ಮಂಗಳೂರು. ಬೆಲೆ ೨ ಆಣೆ.

## ಕನ್ನಡ ಸಾಹಿತಿಗಳ ಸಂಘ, ಬೆಂಗಳೂರು

ಕನ್ನಡ ಸಾಹಿತಿಗಳ ಸಂಘದ ಆಶ್ರಯದಲ್ಲಿ ಶ್ರೀ. ದತ್ತಾತ್ರೇಯ ರಾಮಚಂದ್ರ ಬೇಂದ್ರೆಯವರು ಮೇ ತಿಂಗಳು ೨೩ನೆಯ ತಾರೀಖು ಭಾನುವಾರ ಸಂಜೆ ಶ್ರೀ. ಗೋಪಾಲಕೃಷ್ಣರಾಯರ ಮನೆಯಲ್ಲಿ ತಮ್ಮ ಹೊಸ ಕವನಗಳನ್ನು ಓದಿದರು. ಮಾಸ್ತಿಯವರೇ ಮೊದಲಾಗಿ ಅನೇಕ ಸಾಹಿತಿಗಳು ದಯಮಾಡಿಸಿದ್ದರು. ಶ್ರೀ. ಬೇಂದ್ರೆಯವರು ತಾವು ಕನ್ನಡಿಸಿರುವ ಸಂಪೂರ್ಣ 'ಮೇಘಸಂದೇಶ' ಕಾವ್ಯವನ್ನೂ ಇತರ ಕೆಲವು ಸ್ವಂತಕವಿತೆಗಳನ್ನು ಓದಿದರು. ಸದಸ್ಯರ ಕೋರಿಕೆಯ ಮೇರೆ, ಪರ್ಶಿಯನ್ ಸಾಹಿತ್ಯದಲ್ಲಿ ಪರಿಶ್ರಮವುಳ್ಳ ಶ್ರೀ. ಎಂ. ವಾಸುದೇವ ಮೂರ್ತಿಗಳು ತಾವು ಕನ್ನಡಕ್ಕೆ ಭಾಷಾಂತರ ಮಾಡಿದ ಹಾಫೀಸ್ ಕವಿಯ ಕೆಲವು ಕವನಗಳನ್ನೂ ಓದಿದರು.

## ಮಕ್ಕಳ ಸಮ್ಮೇಳನ, ಬೆಂಗಳೂರು

ಇದೇ ತಿಂಗಳು ೧೩ನೆಯ ಗುರುವಾರ ಬೆಳಗ್ಗೆ ಅಖಿಲ ಕರ್ನಾಟಕ ಮಕ್ಕಳ ಕೂಟದ ಆಶ್ರಯದಲ್ಲಿ ಆರನೆಯ ಮಕ್ಕಳ ಸಮ್ಮೇಳನ ಪರಿಷನ್ಮಂದಿರದಲ್ಲಿ ನಡೆಯಿತು. ಮೈಸೂರು ಸಂಸ್ಥಾನದ ಸ್ಥಳೀಯ ಸಂಸ್ಥೆಗಳ ಮತ್ತು ಆರೋಗ್ಯ ಶಾಖೆಯ ಮಂತ್ರಿಗಳಾದ ಶ್ರೀ. ಎಚ್. ಬಿ. ಗುಂಡಪ್ಪಗೌಡ ಅವರು ಪ್ರಾರಂಭೋತ್ಸವವನ್ನು ನಡಸಿಕೊಟ್ಟು 'ಮಕ್ಕಳ ಸೇವೆ' ನಿಜವಾಗಿ ನಾಡಸೇವೆ ಎಂದು ಹೇಳಿ ಮಕ್ಕಳ ಕೂಟ ನಡಸುತ್ತಿರುವ ಕಾರ್ಯಕಲಾಪಗಳನ್ನು ಪ್ರಶಂಸಿಸಿದರು.

೧೩, ೧೪, ೧೫ನೆಯ ದಿನಗಳಲ್ಲಿ ಸಮ್ಮೇಳನ ಶಂಕರಯ್ಯನವರ ಸಭಾಮಂದಿರದಲ್ಲಿ ಶ್ರೀ. ದೇವಪ್ಪನೆಂಬ ಬಾಲಕನ ಅಧ್ಯಕ್ಷತೆಯಲ್ಲಿ ನಡೆಯಿತು. ಮಕ್ಕಳ ಬೆಳವಣಿಗೆಯ ವಿಷಯವಾದ ಉಪನ್ಯಾಸ ಮುಂತಾದ ಸ್ವಾರಸ್ಯವೂ ಬೋಧಪ್ರದವೂ ಆದ ಕಾರ್ಯಕ್ರಮಗಳು ಸಾಂಗವಾಗಿ ನಡೆದುವು.

## ಸಾಹಿತ್ಯ ಸಮಿತಿ, ಬಳ್ಳಾರಿ

ಈ ಸಮಿತಿಯ ಸ್ಥಾಪನೆಗೂ ಉತ್ತೇಜನಕ್ಕೂ ಅತಿ ಶ್ರಮಪಟ್ಟ ದಿವಂಗತ ವೇ. ವಿದ್ವಾನ್ ವೇದಾಂತ ಶಿರೋಮಣಿ ಕೆ. ವೆಂಕಟರಾಮಶಾಸ್ತ್ರಿ, ಎಂ.ಓ.ಎಲ್. ಅವರು ೬-೫-೪೩ರಲ್ಲಿ, ತಮ್ಮ ೪೦ನೆಯ ವಯಸ್ಸಿನಲ್ಲಿ ಮರಣ ಹೊಂದಿದ್ದಕ್ಕಾಗಿ ಈ ಸಮಿತಿ ತಮ್ಮ ಅಪಾರ ಸಂತಾಪವನ್ನು ಸೂಚಿಸುತ್ತದೆ. ಬಳ್ಳಾರಿಯ ಪಂಡಿತ ವರ್ಗಕ್ಕೆ ಇದರಿಂದ ಬಹಳ ನಷ್ಟವುಂಟಾಗಿದೆ. ದಿವಂಗತರ ಆತ್ಮಕ್ಕೆ ಶಾಂತಿಯಿರಲಿ.

ಪ್ರತಿ ಶುಕ್ರವಾರ ಹೊರಡುತ್ತದೆ

**Reg. No. M. 3975**

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧೨
ಬಿಡಿ ಪತ್ರಿಕೆ: ೬ ಕಾಸು



ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೩೨

ಬೆಂಗಳೂರು: ಶುಕ್ರವಾರ, ಜೂನ್ ೪, ೧೯೪೩

ನನ್ನ ಹಳ್ಳಿಯ ಪ್ರವಾಸ*

## ೨. ಹಾದಿ ಹನುಮಂತರಾಯನ ಗುಡಿ

(ಶ್ರೀಮತಿ ಎಂ. ಆರ್. ಲಕ್ಷ್ಮಮ್ಮ, ಎಂ.ಎ.)

ಹಾಸನದಿಂದ ಹಗರೆ ಮಾರ್ಗವಾಗಿ ಬೇಲೂರಿಗೆ ಹೋಗುವ ಮೋಟಾರು ರಸ್ತೆ ಎಪ್ಪತ್ತು ವರ್ಷಗಳ ಈಚಿನದು. ಅದಕ್ಕೆ ಹಿಂದೆ ಬಂಡಿಹಾದಿಯೊಂದು ಹಾಸನ, ಹೂವಿನಹಳ್ಳಿ, ಹುಲ್ಲುಗುಂಡಿ ಹಾದು, ಬೇಲೂರನ್ನು ಮುಟ್ಟುತ್ತಿತ್ತಂತೆ. ಆ ಹಾದಿಯ ಸುಮಾರು ನಡುವೆ ಹಂದನಹಾಲಿಗೆ ಒಂದು ಮೈಲಿ ದೂರದಲ್ಲಿ ಹನುಮಂತರಾಯನ ಗುಡಿಯೊಂದಿದೆ. ಹಿಂದೆ ಈ ಮಾರ್ಗವಾಗಿ ಬೇಲೂರಿಗೆಂದು ಬಂಡಿ ಕಟ್ಟುತ್ತಿದ್ದವರೆಲ್ಲ ಹಾದಿಯಲ್ಲಿದ್ದ ಆಂಜನೇಯಸ್ವಾಮಿಗೆ ಹಣ್ಣುಕಾಯಿ ಒಪ್ಪಿಸಿ ಮುಂದುವರಿಯುತ್ತಿದ್ದರಂತೆ. ಅದರಿಂದ "ಹಾದಿ" ಎಂಬ ವಿಶೇಷಣ ಗುಡಿಗೆ ಸೇರಿಕೊಂಡಿತು. ಮೂರ್ತಿಯೂ "ಹಾದಿ ಹನುಮಂತರಾಯ"ನೆಂದು ಊರೂರಿಗೆಲ್ಲ ಪ್ರಸಿದ್ಧನಾದ.

ಪ್ರಕೃತ, ಹಂದನಹಾಲನ್ನು ಬಿಟ್ಟು ನಾವು ಹೊರಟದ್ದು ಈ ದೇವಾಲಯದ ಅಭಿಮುಖವಾಗಿಯೇ. ಮಧ್ಯಾಹ್ನ ಎರಡರ ಸಮಯ. ಮೇಲೆ ನೀಲಿಮೆಯ ಆಕಾಶ, ಕೆಳಗೆ ಜೇನ ಬಣ್ಣದ ಭೂಮಿ, ಎರಡೂ ಕಾದು ತಪ್ತವಾಗಿವೆ. ಸಮಮಟ್ಟವಾದ ಆ ಪ್ರದೇಶ ಬಿಸಿಲಿನ ಝಳದಲ್ಲಿ ಕೇವಲ ಸಾಮಾನ್ಯವಾಗಿ ತೋರಿದುದರಿಂದಲೋ ಅಥವಾ ಹಸಿವೆಯ ಆತುರ ಹೆಚ್ಚಿದುದರಿಂದಲೋ ನಮ್ಮ ದೃಷ್ಟಿ ಆಕಡೆ ಈಕಡೆ ಹೊರಳಲೇ ಇಲ್ಲ.

ಮುಕ್ಕಾಲು ಮೈಲು ನಡೆಯುವುದರೊಳಗಾಗಿ ಕಂದು ಬಣ್ಣದ ಪ್ರಾಕಾರ ಗೋಚರಿಸಿತು. ಆಗ ನನಗೆ ದಾರಿ ತೋರಿದಾತನನ್ನು ಕೇಳಿದೆ: "ನಿಜವಾಗಿ, ಈ ದೇವರಿಗೆ ಎರಡು ತಲೆಗಳಿವೆಯೆ?"

ಆತ: "ಹೌದು. ನಿಜವಾಗಿ, ಇದು ಜೋಡು ತಲೆಯ ವಿಗ್ರಹ. ಘನವಾದ ಮೂರ್ತಿ; ದಿವ್ಯವಾದ ಪ್ರಸಾದ ನೀಡುತ್ತಾನೆ. ನೋಡಿ! ನಿಮ್ಮ ಮನಸ್ಸಿನಲ್ಲಿ ಏನನ್ನಾದರೂ ಕುರಿತುಕೊಂಡು ದೇವರ ಪಾಧದಡಿಯಲ್ಲಿ ಒಂದು ಹೂವಿಡಿ. ಕಾರ್ಯ ಫಲಿಸುವ ಹಾಗಿದ್ದರೆ ಬಲಕ್ಕೆ ಬೀಳುತ್ತೆ; ಇಲ್ಲವಾದರೆ ಎಡಕ್ಕೆ ಬೀಳುತ್ತೆ. ಈ ಸುತ್ತುಮುತ್ತಲ ಹಳ್ಳಿಗಳಲ್ಲಿ ಯಾರದಾದರೂ ಹಸು ಒದ್ದುಕೊಂಡಿತೆಂದರೆ, ಈ ದೇವರಿಗೆ ಹಾಲಿನ ಅಭಿಷೇಕವನ್ನೊ ಇಲ್ಲ ಮೊಸರನ್ನವನ್ನೊ ಮಾಡಿಸುವೆನೆಂದು ಹರಿಸಿಕೊಂಡರೆ ಸಾಕು. ನೋಡಿ! ಆ ದಿನ ಕೆಚ್ಚಲು ಬಿಡದಿದ್ದರೆ–"

ಮುಂದೆ ನಾನು ಗಮನಿಸಲಿಲ್ಲ. ನನ್ನ ಮನಸ್ಸೆಲ್ಲಾ ಎಲ್ಲೋ ಇತ್ತು. ಎರಡು ತಲೆಯ ಹನುಮಂತ ವಿಗ್ರಹ! ಎಷ್ಟು ಅಪರೂಪದ ಸಂಗತಿ! ಈಗ ಸುಮಾರು ಎರಡು ವರ್ಷಗಳ ಕೆಳಗೆ "ಹಿಂದೂ" ಪತ್ರಿಕೆಯವರು ಪಂಚಮುಖಿ ಆಂಜನೇಯನಮೂರ್ತಿ ಸಿಕ್ಕಿರುವ ಐದಾರು ಸ್ಥಳಗಳನ್ನು ಪ್ರಸಿದ್ಧಪಡಿಸಿದ್ದರು. ಆದರೆ ಎರಡು ತಲೆಯ ಆಂಜನೇಯ ವಿಗ್ರಹವನ್ನು ಮಾತ್ರ ಎಲ್ಲೂ ಕೇಳಿರಲಿಲ್ಲ; ಯಾರೂ ಹೇಳಿರಲಿಲ್ಲ. ಅದರಿಂದಲೇ ಅಷ್ಟು ಶ್ರದ್ಧೆಯಿಂದ ಮುಂದೆ ದಾರಿ ನಡೆಯುವ ನಿಶ್ಚಯ ಮಾಡಿದೆವು.

ಗುಡಿ ಸಮೀಪಿಸಿತು. ಪ್ರಾಕಾರದ ಒಳಹೋಗುತ್ತಿದ್ದಾಗ ನಮ್ಮ ಮಾರ್ಗದರ್ಶಕರು "ಇದು ಚೋಳ ಪ್ರತಿಷ್ಠಿತ" ಎಂದರು. ಸಾಮಾನ್ಯವಾಗಿ ಹಳ್ಳಿಯ ಕಡೆಯವರು ಪ್ರಾಚೀನ ದೇವಾಲಯಗಳಿಗೆಲ್ಲ ಚೋಳ ಇಲ್ಲವೆ ಚಾಲುಕ್ಯ ಪ್ರತಿಷ್ಠೆ ಎನ್ನುವ ವಾಡಿಕೆ. ದೇವಾಲಯದ ಗೋಡೆಗಳೆಲ್ಲ ಖಿಲವಾಗಿದ್ದುವೆಂದು ಕಾಣುತ್ತದೆ. ಹೊಸದಾಗಿ ದುರಸ್ತು ಮಾಡುತ್ತಿದ್ದರು. ಹಳೆಯ ಇಟ್ಟಿಗೆಯ ಪ್ರಮಾಣ ಸುಮಾರು 20"×15"×2" ಇತ್ತು. ಕಟ್ಟಡವೇನೋ ತೀರಾ ಸಾದಾ; ಕೆತ್ತಿದ ಕಂಬವಿಲ್ಲ; ಭುವನೇಶ್ವರಿ ಇಲ್ಲ, ಏನಿಲ್ಲ. ಇದ್ದುದೆಂದರೆ ಒರಟು ಕಲ್ಲಿನ ಸಾದಾ ಚಪ್ಪಡಿಗಳನ್ನು ಜೋಡಿಸಿದ ಒಂದು ಮುಖಮಂಟಪ, ಒಂದು ನವರಂಗ, ಒಂದು ಗರ್ಭಗುಡಿ.

ಗರ್ಭಗುಡಿಯಲ್ಲಿ ಬಗ್ಗಿ ನೋಡಿದರೆ– ಅಲ್ಲಿ ಪ್ರತಿಷ್ಠಿತವಾಗಿದ್ದುದು ದ್ವಿಶೀರ್ಷ ಆಂಜನೇಯನಲ್ಲ. ಮುಮ್ಮೂಲೆಯ ಶಿಲೆಯ ಎರಡು ಫಲಕಗಳಲ್ಲಿ ಕೆತ್ತಿದ ಹನುಮಂತನ ಎರಡು ಬೇರೆ ಬೇರೆ ವಿಗ್ರಹಗಳು! ದೇವರ ಸೇವೆ ಮುಗಿಸಿಕೊಂಡಾದಮೇಲೆ, ಮಾರ್ಗದರ್ಶಕರಿಗೆ ಹೇಳಿದೆ. "ನೀವು ಎರಡು ವಿಗ್ರಹವೆಂದು ಹೇಳಲಿಲ್ಲ. ದೇವರ ಪೂಜ್ಯತೆ ಬಗ್ಗೆ ನಾನು ಹೇಳುವುದಿಲ್ಲ. ದೇವರು ಎಲ್ಲಿದ್ದರೂ, ಹೇಗಿದ್ದರೂ ದೇವರೇ. ಆದರೆ ರಚನಾದೃಷ್ಟಿಯಿಂದ ಘನವಾದ ಶಾಸನವನ್ನು ಹುಡುಕಿಕೊಂಡು ಹೊರಟವನಿಗೆ ಯಂತ್ರದ ಕಲ್ಲು ಸಿಕ್ಕಂತಾಯಿತು."

ಆತ ನನ್ನ ಖಿನ್ನಮನಸ್ಸನ್ನು ಸಮಾಧಾನಗೊಳಿಸಲೋ ಎಂಬಂತೆ "ಹೋಗಲಿ, ಬಿಡಿ. ಇಲ್ಲಿ ನೋಡಿ, ಬಾಗಿಲಿಗೆ ಎದುರಾಗಿರುವ ಮೂರ್ತಿ ಗದಾ ಪದ್ಮಗಳನ್ನು ಹಿಡಿದಿದೆ. ಪಕ್ಕಕ್ಕೆ ತಿರುಗಿರುವ ಈ ಮೂರ್ತಿ ಹಲಸಿನ ಹಣ್ಣನ್ನು ಹಿಡಿದಿದೆ. ಕೆಲವರು 'ಹಲಸಿನ ಹಣ್ಣಲ್ಲ, ಚಂದ್ರದ್ರೋಣ ಪರ್ವತ'ವೆಂದು ಹೇಳುತ್ತಾರೆ. ಈ ಎರಡನೆಯ ಮೂರ್ತಿಯನ್ನು ಸುಲಭವಾಗಿ ದರ್ಶನ ಮಾಡುವಂತೆ ಗೋಡೆಯಲ್ಲಿ ಕಿಂಡಿಯೊಂದಿದೆ. ಅದನ್ನು ನೋಡಿದರೆ ಕನಕನ ಕಿಂಡಿ ಜ್ಞಾಪಕಕ್ಕೆ ಬರುವುದಲ್ಲವೆ? ಈ ಮೂರ್ತಿ ಮತ್ತು ಕಿಂಡಿಗೆ ಸಂಬಂಧಪಟ್ಟಂತೆ ಒಂದು ಸ್ವಾರಸ್ಯವಾದ ಕತೆಯಿದೆ" ಎಂದು ಮೊದಲುಮಾಡಿದರು.

"ಹಲಸಿನ ಹಣ್ಣು ಹಿಡಿದಿರುವ ಈ ಮೂರ್ತಿ ಪುರಾತನವಾದದ್ದು. ಸ್ವಯಂ ಉದ್ಭವಮೂರ್ತಿ. ಅದು ಮೊದಲು ದರ್ಶನವಾದಾಗ ದಕ್ಷಿಣಕ್ಕೆ ಅಂದರೆ ಹಂದನಹಾಲಿಗಭಿಮುಖವಾಗಿ ತಿರುಗಿದ್ದಿತು. ಆದರೆ ಸಿಕ್ಕಿದುದು ಹಂದನಹಾಲಿನವರಿಗಲ್ಲ, ಹುಲ್ಲುಗುಂಡಿಯವರಿಗೆ. ಅದೋ! ಎದುರಿಗೆ ಕಾಣುತ್ತಿರುವ ಮರಗಳ ಗುಂಪೇ ಹುಲ್ಲುಗುಂಡಿ. ದರಿದ್ರನಿಗೆ ನಿಧಿ ಸಿಕ್ಕಿದಂತೆ, ತಮಗೆ ದತ್ತವಾದ್ದ ವಿಗ್ರಹಕ್ಕೆ ಅವರೊಂದು ದೇವಾಲಯವನ್ನು ಇತರ ಹಳ್ಳಿಗಳ ಸಹಾಯದಿಂದ ಕಟ್ಟಿಸಿದರು. ಕಟ್ಟಿಸುವಾಗ ವಿಗ್ರಹವನ್ನೂ ಸಹ ತಮ್ಮ ಹಳ್ಳಿಗೆ ಎದುರಾಗುವಂತೆ ತಿರುಗಿಸಿದರು."

ಪ್ರತಿಷ್ಠೆ ಮಾಡಿದ ಮರುದಿನ ಬಂದು ನೋಡುವಲ್ಲಿ ಏನಾಶ್ಚರ್ಯ! ವಿಗ್ರಹವು ಪೂರ್ವಸ್ಥಾನಕ್ಕೆ ಜರುಗಿತ್ತು. ಪುನಃ ತಮ್ಮ ಗ್ರಾಮದ ಅಭಿಮುಖವಾಗಿ ತಿರುಗಿಸಿ ಈ ಕೆಲಸ ಹಂದನಹಾಲ ಹಳ್ಳಿಯವರದಿರಬೇಕೆಂದು ತಿಳಿದು ಹುಲ್ಲುಗುಂಡಿಯವರು ಅಂದು ಇಡೀ ರಾತ್ರೆ ಬಾಗಿಲಲ್ಲಿ ಕಾವಲು ಕುಳಿತಿದ್ದರು.

[೧೬೫ನೆಯ ಪುಟಕ್ಕೆ]

* ಈ ಮಾಲೆಯ ಮೊದಲನೆಯ ಲೇಖನ ತಾ|| ೨೬-೨-೪೩ರ 'ನುಡಿ'ಯಲ್ಲಿ ಪ್ರಕಟವಾಗಿದೆ.—ಸಂ.

# ಕನ್ನಡ ನುಡಿ

**ಶುಕ್ರವಾರ, ಜೂನ್ ೪, ೧೯೪೩**

## ಅಮೆರಿಕದಲ್ಲಿ ವಯಸ್ಕರ ವಿದ್ಯಾಭ್ಯಾಸ ಮತ್ತು ಯುದ್ಧಾನಂತರದ ಕಾರ್ಯಯೋಜನೆ

"ಅಮೆರಿಕ ಸಂಯುಕ್ತ ಸಂಸ್ಥಾನದಲ್ಲಿ ವಯಸ್ಕರ ಶಿಕ್ಷಣ ಬಹು ಜನಪ್ರಿಯವಾಗಿದೆ. ಸರಕಾರಿ ಮತ್ತು ಖಾಸಗಿ ಸಂಸ್ಥೆಗಳ ಆಶ್ರಯದಲ್ಲಿ ನಡೆಯುತ್ತಿರುವ ಈ ಶಿಕ್ಷಣದಿಂದ ಸುಮಾರು ಮೂರು ಕೋಟಿ ಪ್ರಜೆಗಳು ಸಹಾಯ ಪಡೆದು ತಮ್ಮ ಜ್ಞಾನಾನುಭವಗಳನ್ನು ಉತ್ತಮಪಡಿಸಿಕೊಂಡಿದ್ದಾರೆಂದು ಅಂದಾಜು ಮಾಡಲಾಗಿದೆ. ಸಂಜೆಯ ಹೊತ್ತು ವಯಸ್ಕರಿಗೆಂದು ತೆರೆದಿರುವ ವಿಸ್ತರಣದ (ಎಕ್ಸ್‌ಟೆನ್ಶನ್) ತರಗತಿಗಳನ್ನು ಕಾಲೇಜುಗಳ ಮತ್ತು ವಿಶ್ವವಿದ್ಯಾನಿಲಯದ ಅಧಿಕಾರಿ ವರ್ಗದವರು ನಡಸುತ್ತಿದ್ದಾರೆ. ಪಬ್ಲಿಕ್ ಹೈಸ್ಕೂಲುಗಳಲ್ಲಿ ರಾತ್ರಿಯ ಕಾಲ ವೃತ್ತಿಶಿಕ್ಷಣದ ಏರ್ಪಾಟಾಗಿದೆ. ಅಮೆರಿಕದ ವಯಸ್ಕರ ವಿದ್ಯಾಭ್ಯಾಸ ಸಂಘಗಳು ಶಿಕ್ಷಕರನ್ನು ತಯಾರಿಸುವುದಲ್ಲದೆ, ನಾಡಿನ ಬೇರೆ ಬೇರೆ ಖಾಸಗಿ ಸಂಸ್ಥೆಗಳ ಕೆಲಸ ಒಂದು ಕ್ರಮದಲ್ಲಿ ನಡೆಯುವಂತೆ ನೋಡಿಕೊಳ್ಳುತ್ತವೆ. ಈ ಸಂಘಗಳು ಸಂಶೋಧನೆಯ ಕೆಲಸದಲ್ಲಿಯೂ ತೊಡಗಿವೆ. ಸುಮಾರು ಏಳು ಲಕ್ಷ ಐವತ್ತು ಸಾವಿರ ಮಂದಿ ವಯಸ್ಕರು ಮನೆಯಲ್ಲಿದ್ದುಕೊಂಡೇ ಅಂಚೆಯ ಮೂಲಕ ವಿದ್ಯಾರ್ಜನೆ ಮಾಡುತ್ತಿದ್ದಾರೆ. ಈ ಕೆಲಸವನ್ನು ಮುನ್ನೂರ ಐವತ್ತು ಖಾಸಗಿ ಶಾಲೆಗಳು (ಕರೆಸ್ಪಾಂಡೆನ್ಸ್ ಸ್ಕೂಲ್ಸ್) ನಡಸುತ್ತಿವೆ. ಜೊತೆಗೆ ನಲವತ್ತೆರಡು ವಿಶ್ವವಿದ್ಯಾನಿಲಯಗಳೂ ಕಾಲೇಜುಗಳೂ ಈ ರೀತಿ ಪತ್ರವ್ಯವಹಾರ ಮೂಲಕ ಹತ್ತುಲಕ್ಷ ಮಂದಿಗೆ ವಿದ್ಯಾದಾನ ಮಾಡುತ್ತ, ಸಂದರ್ಭವೊದಗಿದಾಗಲೆಲ್ಲ ಪುಸ್ತಕ ಭಂಡಾರಗಳ ಆಶ್ರಯದಲ್ಲಿ ಉಪನ್ಯಾಸಮಾಲೆಗಳನ್ನು ಏರ್ಪಡಿಸಿ ಅವರಲ್ಲಿ ಹೆಚ್ಚಿಗೆ ಜ್ಞಾನವನ್ನು ಪ್ರಸಾರ ಮಾಡುತ್ತಿವೆ.

ಕೇಂದ್ರ, ಪ್ರಾಂತ ಮತ್ತು ಸ್ಥಳೀಯ ಸರಕಾರಗಳು ಉಚಿತ ಸಾರ್ವಜನಿಕ ಪುಸ್ತಕ ಭಂಡಾರಗಳನ್ನು ನಡಸಿಕೊಂಡು ಬರುತ್ತಿವೆ. ಇಡಿಯ ಅಮೆರಿಕದಲ್ಲಿ ಹತ್ತು ಕೋಟಿ ಅರುವತ್ತು ಲಕ್ಷ ಪುಸ್ತಕಗಳನ್ನು ಈ ಭಂಡಾರಗಳಲ್ಲಿ ಸಂಗ್ರಹಿಸಿಟ್ಟಿದೆ. ವರ್ಷ ವರ್ಷವೂ ಸರಾಸರಿ ಎರಡೂವರೆ ಕೋಟಿ ಜನರು ಅರುವತ್ತು ಕೋಟಿ ಪುಸ್ತಕಗಳನ್ನು ಓದುತ್ತಾರೆ.

ಯುದ್ಧಾನಂತರದ ಕಾರ್ಯಯೋಜನೆಯಲ್ಲಿ ಜನರು ಜಾಣತನದಿಂದ ಪಾತ್ರವಹಿಸಲು ಅನುಕೂಲಿಸುವಂತಹ ವಯಸ್ಕರ ವಿದ್ಯಾಭ್ಯಾಸದ ಹೊಸ ಪದ್ಧತಿಯನ್ನು ಅಮೆರಿಕದಲ್ಲಿ ಪುಸ್ತಕ ಭಂಡಾರಗಳು ಪ್ರಾರಂಭಿಸಿವೆ. ಚಿಕಾಗೊ ನಗರದಲ್ಲಿ ಈಚೆಗೆ ಸಂಯುಕ್ತ ಸಂಸ್ಥಾನದ ಸುಮಾರು ಇನ್ನೂರು ಮಂದಿ ಪುಸ್ತಕ ಭಂಡಾರಿಗಳ ಸಭೆ ಈಗ ನಡೆಯುತ್ತಿರುವ ಯುದ್ಧದ ಮತ್ತು ಯುದ್ಧಾನಂತರದ ಸಮಸ್ಯೆಗಳನ್ನು ಪರಿಶೀಲಿಸಲು ಸೇರಿ ಒಂದು ರಾಷ್ಟ್ರೀಯ ಸಂಸ್ಥೆಯನ್ನು ಸ್ಥಾಪಿಸಲಾಯಿತು. ಇದಕ್ಕೆ ಅಮೆರಿಕದ ಪುಸ್ತಕ ಭಂಡಾರ ಸಂಸ್ಥೆಯೂ ನ್ಯೂಯಾರ್ಕಿನ ಕಾರ್ನೆಗಿ ಕಾರ್ಪೊರೇಷನ್ನೂ ನೆರವಾಗಿವೆ.

ಈ ಹೊಸ ಪದ್ಧತಿಯಂತೆ ವಯಸ್ಕರ ವಿದ್ಯಾಶಾಲೆಗಳು ಪರಸ್ಪರ ಸಹಕಾರದಿಂದ ನಾಡಿನ ಪ್ರತಿ ಮೂಲೆಗೂ ಹರಡಿ ಇಡಿಯ ಜನಜೀವನವನ್ನು ಮುಟ್ಟಬೇಕೆಂದು ಯೋಜನೆಯನ್ನು ಕೈಗೊಂಡಿದ್ದಾರೆ. ಪುಸ್ತಕ ಭಂಡಾರಿಗಳು ಯುದ್ಧಾನಂತರದ ಸಮಸ್ಯೆಗಳನ್ನು ವಿವರಿಸುವ ಪುಸ್ತಕಗಳನ್ನು ಸಿದ್ಧಗೊಳಿಸಿ ಜನತೆಯ ಮುಂದೆ ಇಡುವರು. ಸರಕಾರದ ನಡವಳಿಕೆಗಳ ಪರಿಚಯವಿಲ್ಲದ ದೂರದ ನಿವಾಸಿಗಳಿಗೆ ಅನುಕೂಲವಾಗಲೆಂದು ಸರಕಾರಿ ಕಾಗದ ಪತ್ರಗಳನ್ನವರಿಗೆ ದೊರಕಿಸಿ ವಿವರಿಸುವರು." (ಹಿಂದೂ ೩೧-೫-೪೩)

ಅಮೆರಿಕದಲ್ಲಿ ಯಾವ ಕೆಲಸವೇ ನಡೆಯಲಿ ಬಹು ದೊಡ್ಡ ಪ್ರಮಾಣದಲ್ಲಿ ನಡೆಯುವುದು. ಶಾಂತಿಕಾಲದಲ್ಲಿ ಜನಜೀವನಕ್ಕೆ ಬೇಕಾದ ಸೌಕರ್ಯಗಳೆ ಆಗಲಿ, ಯುದ್ಧಕಾಲದಲ್ಲಿ ವಿಜಯಕ್ಕೆ ಬೇಕಾದ ಸನ್ನಾಹಗಳೆ ಆಗಲಿ ನಡೆಯುವುವೆಲ್ಲವೂ ಬೃಹತ್ಪ್ರಮಾಣದಲ್ಲಿ!

ಮೇಲೆ ಕೊಟ್ಟಿರುವ ವರದಿಯಿಂದ ಅಮೆರಿಕ ಸಂಯುಕ್ತ ಸಂಸ್ಥಾನದಲ್ಲಿ ವಯಸ್ಕರ ವಿದ್ಯಾಭ್ಯಾಸವನ್ನು ಯಾವ ದೊಡ್ಡ ಗುರಿಯಿಂದ ಎಷ್ಟು ದೊಡ್ಡ ಪ್ರಮಾಣದಲ್ಲಿ ಹರಡುತ್ತಿದ್ದಾರೆಂದು ಗೊತ್ತಾಗುತ್ತದೆ. ಕೋಟಿಗಟ್ಟಲೆ ಹಣ ಸುರಿದು ಕೋಟಿಗಟ್ಟಲೆ ಜನಕ್ಕೆ ಬೆಳಕನ್ನೂ ಸೊಗವನ್ನೂ ನೀಡುವ ದೊಡ್ಡ ಯೋಜನೆ ಇದು. ಪ್ರಗತಿಯ ಹೆದ್ದಾರಿಯಲ್ಲಿ ಇನ್ನೂ ಮೊದ ಮೊದಲ ಮೈಲಿ ಕಲ್ಲುಗಳನ್ನು ದಾಟುತ್ತಿರುವ ಭರತಖಂಡಕ್ಕೆ ಹೊರ ದೇಶಗಳಲ್ಲಿ ನಡೆಯುತ್ತಿರುವ ಇಂಥ ಯೋಜನೆಗಳು ಕಣ್ಣುತೆರೆಯಿಸತಕ್ಕವಾಗಿವೆ, ಕೆಲಸಕ್ಕೆ ಪ್ರೇರಣೆ ಕೊಡತಕ್ಕವಾಗಿವೆ.

ಇಂದು ಭರತಖಂಡದ ಸ್ಥಿತಿ ಬಹು ದೀನವಾಗಿದೆ. ರಾಜಕೀಯವಾಗಿ ಒಂದು ಗೌರವದ ಸ್ಥಾನ ಅದಕ್ಕಿಲ್ಲ. ಆರ್ಥಿಕವಾಗಿ ಹೊಟ್ಟೆ ಬಟ್ಟೆಗೆ ಸಾಲದು. ಸಂಸ್ಕೃತಿ ಹಿರಿದಾದರೂ ಯಾವುದೋ ಭ್ರಾಂತಿ ಕವಿದು ತಾಳಿಕೆ ಇಲ್ಲದೆ ಹೋಗಿದೆ. ಈ ದೀನ ಹೀನ ಅವಸ್ಥೆಯಲ್ಲಿ ಈ ನಾಡು ಜಗತ್ತಿಗೆ ತನ್ನದಾದ ಅಮರ ಸಂದೇಶವನ್ನು ಕೊಡುವ ಭಾಗ್ಯವನ್ನು ಪಡೆಯುವುದು ಇನ್ನೆಂದಿಗೊ ಎಂದು ಪ್ರತಿ ಭಾರತೀಯನೂ ನೋಯುತ್ತಿದ್ದಾನೆ. ಭರತಖಂಡಕ್ಕೆ ಒಂದು ಕೇಂದ್ರ ಸರಕಾರ ಸ್ಥಾಪಿತವಾಗಿ, ಅದರ ಆಶ್ರಯದಲ್ಲಿ ಪ್ರಾಂತಗಳೂ ಸಂಸ್ಥಾನಗಳೂ ಒಟ್ಟು ನಾಡಿನ ಐಶ್ವರ್ಯವನ್ನೂ ಪ್ರಸನ್ನತೆಯನ್ನೂ ಹೆಚ್ಚಿಸುವ ಕಾಲ ಬಹು ದೂರವಿಲ್ಲವೆಂದು ಒಳದನಿಯೊಂದು ಸಮಾಧಾನ ಹೇಳುತ್ತಿದ್ದರೂ, ಆ ಕಾಲ ಬರಲೆಂದು ಯಾವ ಒಂದು ಪ್ರಾಂತವಾಗಲಿ ಸಂಸ್ಥಾನವಾಗಲಿ ಸುಮ್ಮನೆ ಕುಳಿತಿರುವುದು ಒಳ್ಳೆಯದಲ್ಲ. ಇದನ್ನರಿತ ಮಹಾಜನರ ಉದ್ಯಮದಿಂದ ಇದ್ದ ಅನುಕೂಲಗಳಲ್ಲಿ ನಾಡಿಗೆ ಮಿತಪ್ರಮಾಣದಲ್ಲಾದರೂ ಒಳ್ಳೆಯದಾಗುವ ಕೆಲಸ ಅಲ್ಲಲ್ಲಿ ನಡೆಯುತ್ತಿವೆ. ಅಂಥ ಕೆಲಸಗಳಲ್ಲಿ ಮೈಸೂರು ಸಂಸ್ಥಾನದಲ್ಲಿ ಕೈಕೊಂಡಿರುವ ಐದು ವರ್ಷಗಳ ಗ್ರಾಮಾಭಿವೃದ್ಧಿ ಯೋಜನೆ ಒಂದು. ಈ ವಿಷಯವಾಗಿ ಹಿಂದೆ ನುಡಿಯಲ್ಲಿ (ತಾ|| ೭-೫-೪೩) ಒಂದು ಲೇಖನವನ್ನು ಬರೆದಿದೆ.

ಗ್ರಾಮೋದ್ಧಾರ ಯೋಜನೆಗೆ ಸಹಾಯವಾಗಿ ವಯಸ್ಕರ ಅಕ್ಷರ ಪ್ರಚಾರವನ್ನೂ ಸರ್ಕಾರದವರು ಜೋಡಿಸಿಕೊಳ್ಳಲು ಮನಸ್ಸುಮಾಡಿರುವ ಅಂಶ ಬಹಳ ಆಶಾದಾಯಕವಾಗಿದೆ. ಇದುವರೆಗೆ ಸಂಸ್ಥಾನದಲ್ಲಿ ಖಾಸಗಿಯಾಗಿ ನಡೆಯುತ್ತಿದ್ದ ಅಕ್ಷರ ಪ್ರಚಾರಕ್ಕೆ ಸರಕಾರದ ಕೃಪಾಶ್ರಯ ದೊರೆತು– ಈ ವರ್ಷ ಆಯವ್ಯಯದಲ್ಲಿ ಇದುವರೆಗೆ ಅಕ್ಷರ ಪ್ರಚಾರಕ್ಕೆ ಒದಗಿಸದೆ ಇದ್ದಷ್ಟು ಭಾರಿ ದ್ರವ್ಯವನ್ನು, ಎಂದರೆ ಒಂದು ಲಕ್ಷ ರೂಪಾಯಿಗಳನ್ನು, ಒದಗಿಸಿದೆ– ಇನ್ನು ಮುಂದೆ ನಮ್ಮ ಸಂಸ್ಥಾನದ ಅಕ್ಷರತೆ ಗುಣದಲ್ಲೂ ಪ್ರಮಾಣದಲ್ಲೂ ಉತ್ತಮಗೊಂಡು, ಸ್ಥಾಯಿಯಾಗುವ ಶುಭ ಸೂಚನೆ ತೋರಿಬರುತ್ತಿದೆ.

ಅಮೆರಿಕದ ಸಂಖ್ಯೆಗಳನ್ನು ನೋಡಿ ನಮ್ಮ ಜನ ಅಧೈರ್ಯ ಪಡಬೇಕಾಗಿಲ್ಲ. ಕಾರ್ಯಾರಂಭವಾಗಿ ಉತ್ಸಾಹ ಶ್ರದ್ಧೆಗಳನ್ನು ಆರದಂತೆ ಬೆಳಸಿಕೊಂಡು, ಜೊತೆಗೆ ಧನಿಕರನ್ನು ಒಲಿಸಿಕೊಂಡರೆ, ವಿದ್ಯಾರಣ್ಯರು ಕರ್ನಾಟಕ ಸಾಮ್ರಾಜ್ಯವನ್ನು ಸ್ಥಾಪಿಸಿದ ಸಂದರ್ಭದಲ್ಲಿ ಸುವರ್ಣ ವೃಷ್ಟಿಯಾದಂತೆ ಈಗಲೂ ಸಾರಸ್ವತ ಸಾಮ್ರಾಜ್ಯವನ್ನು ವಿಸ್ತರಿಸಲು ದ್ರವ್ಯಸಹಾಯ ದೊರತೇ ದೊರೆಯುವುದರಲ್ಲಿ ಸಂದೇಹವಿಲ್ಲ. ಆಯುರ್ವೇದ ಮತ್ತು ಯುನಾನಿ ವೈದ್ಯ ಪ್ರಸಾರಕ್ಕೆ ಶ್ರೀ. ಎಲ್. ಎಸ್. ವೆಂಕಾಜಿರಾಯರು ಒಂದು ಲಕ್ಷ ರೂ.ಗಳ

ಉದಾರ ದಾನವನ್ನು ನೀಡಿ ಧನಿಕರು ಕೂಡಿಟ್ಟ ಆಸ್ತಿಯನ್ನು ಹೇಗೆ ಸದ್ವಿನಿಯೋಗ ಮಾಡಬಹುದೆಂದು ಮೇಲ್ಪಂಕ್ತಿ ಹಾಕಿದ್ದಾರೆ. ಇವರ ದಾನದಿಂದ ಗ್ರಾಮೋದ್ಧಾರ ಯೋಜನೆ ಕೈಕೊಂಡವರಿಗೂ ಕೈಕೊಳ್ಳುವವರಿಗೂ ಎಷ್ಟೋ ಧೈರ್ಯ ಬಂದಿದೆ. ಹೀಗೆಯೆ ವಯಸ್ಕರ ವಿದ್ಯಾಭ್ಯಾಸದಂತಹ ಮುಖ್ಯ ಪ್ರಶ್ನೆಯನ್ನು ದಯಮಾಡಿ ಮನಸ್ಸಿಗೆ ತಂದುಕೊಂಡು, ಪ್ರಜಾಪ್ರಭುತ್ವದ ಕಲ್ಪವೃಕ್ಷಕ್ಕೆ ಬೀಜ ಪ್ರಾಯವಾದ ಅಕ್ಷರ ಪ್ರಚಾರದ ಯೋಜನೆಗೆ ದತ್ತಿಗಳನ್ನು ಬಿಟ್ಟು ಉಪಕಾರ ಮಾಡಬೇಕೆಂದು ನಮ್ಮ ಕನ್ನಡ ನಾಡಿನಲ್ಲಿರುವ ಎಲ್ಲ ಶ್ರೀಮಂತರನ್ನೂ ಪ್ರಾರ್ಥಿಸುತ್ತೇವೆ.

## ಹಾದಿ ಹನುಮಂತರಾಯನ ಗುಡಿ

[೧೬೩ನೆಯ ಪುಟದಿಂದ]

ಆ ರಾತ್ರೆಯೂ ಮತ್ತೆ ಅದೇ ಹಾಡೇ! ಹಂದನಹಾಲಿನವರು ಹಿಗ್ಗಿದರು. ಹುಲ್ಲುಗುಂಡಿಯವರು ಉರಿದುಬಿದ್ದರು. ಅಷ್ಟೇ ಅಲ್ಲ. ಬೇಕಾದುದಾಗಲಿ, ಇವರಿಗೆ ಬಾಗಿಲೇ ತೆಗೆಯುವುದಿಲ್ಲವೆಂದು ಮನಸ್ಸು ಮಾಡಿದರು.

ದೇವರಿಗೆ ಇದು ಸಹಿಸುವುದೆ? ಪೂಜಾರಿಗೆ ಇಲ್ಲದ ಬವಣೆ ಬಂದೆರಗಿತು. ಊರಲ್ಲೆಲ್ಲ ಉಪದ್ರವಗಳಾದವು. ಆಗ ಎಲ್ಲರೂ ದಿಗಿಲುಬಿದ್ದು ಇನ್ನು ಗುಡಿಯ ಬಾಗಿಲನ್ನು ಯಾವಾಗಲೂ ತೆರೆದಿಟ್ಟಿರುವೆವು ಎಂದು ಬಿನ್ನವಿಸಿಕೊಂಡರು. ಈಗ ನೋಡಿ, ಇಪ್ಪತ್ತನಾಲ್ಕು ಗಂಟೆಗಳ ಕಾಲವೂ ಬಾಗಿಲು ತೆರೆದಿರುತ್ತದೆ. ಭಕ್ತ ಬಂದನೆಂದರೆ ದೇವರ ದರ್ಶನ ಸಿದ್ಧ.

ಮುಂದೆ ಹುಲ್ಲುಗುಂಡಿಯವರು ಆಲೋಚನೆ ಮಾಡಿ ತಮಗೆದುರಾಗಿರುವಂತೆ ಇನ್ನೊಂದು ವಿಗ್ರಹವನ್ನು ಕೆತ್ತಿಸಿದರು; ಮತ್ತು ಹಂದನಹಾಲಿನವರ ಮೂರ್ತಿಯ ದರ್ಶನ ಸುಲಭವಾಗಲೆಂದು ಗೋಡೆಯಲ್ಲಿ ಕಿಂಡಿಯೊಂದನ್ನು ಮಾಡಿಸಿದರು. ಆಗ ಸ್ವಾಮಿ ಅವರಿಗೂ ಒಲಿದ ಎಂದು ಮಾರ್ಗದರ್ಶಕರು ಕತೆ ಮುಗಿಸಿದರು.

ಈ ದಂತ ಕತೆಯ ಚಿಪ್ಪನ್ನೊಡೆದರೆ ಆಗ ಹಳ್ಳಿ ಹಳ್ಳಿಗಳ ನಡುವೆ ಗುಡಿ ಗೋಪುರದ ಸಲುವಾಗಿ ಮನಸ್ತಾಪ ಜಗಳಗಳು ಹೇಗೆ ಹುಟ್ಟುತ್ತಿದ್ದುವು ಎಂಬುದನ್ನು ನಾವು ಒಂದು ನಿದರ್ಶನದ ಮೂಲಕ ತಿಳಿಯಬಹುದು. ಮನಸ್ತಾಪಕ್ಕೆ ಇನ್ನೂ ಒಂದು ಕಾರಣವಿರಬಹುದು. ಹುಲ್ಲುಗುಂಡಿಯಲ್ಲಿ ಶ್ರೀವೈಷ್ಣವ ಒಕ್ಕಲುಗಳೇ ಹೆಚ್ಚು; ಹಾಗೆಯೇ ಹಂದನಹಾಲು ವಿಶೇಷವಾಗಿ ಸಂಕೇತ ಬ್ರಾಹ್ಮಣರ ಅಗ್ರಹಾರ. ವೈಮನಸ್ಯ ಹುಟ್ಟಲು ಈ ವ್ಯತ್ಯಾಸವೂ ಸಹಕಾರಿಯಾಗಿರಬೇಕಲ್ಲವೆ? ದೊರೆ "ಸಕಳ ಸಮನ್ವಯ ರಕ್ಷಾಮಣಿ"ಯಾದರೂ, ಪಂಗಡ ಪಂಗಡಕ್ಕೆ ಜಗಳವಿಲ್ಲದೆ ಇರುವುದೇ ಇಲ್ಲ. ಆದರೆ ಈ ಜಗಳಗಳು ದ್ವೇಷವಾಗಿ ವಿಷಮಿಸದೆ ಸಂಧಾನಕ್ಕೆ, ಒಪ್ಪಂದಕ್ಕೆ ಒಳಪಡುತ್ತಿದ್ದುದು ಹೆಚ್ಚಿನ ಸಂಗತಿ.

ಹೀಗೆ ವಿಮರ್ಶೆ ಮಾಡುತ್ತ ದಣಿವಾರಿಸಿಕೊಳ್ಳಲು ಹೊರಗಿದ್ದ ಒಂದು ಗಿಡದ ಕೆಳಗೆ ಕುಳಿತೆವು. ಅಲ್ಲಿಂದ ಒಂದು ಫರ್ಲಾಂಗ್ ದೂರದಲ್ಲಿ ನೀಲಿಯ ಗಾಜಿನಂತೆ ಮರಗಳ ಮಧ್ಯೆ ಹೊಳೆಯುತ್ತಿದ್ದ ಜಲಾಶಯವೊಂದು ಕಂಡುಬಂದಿತು.

"ಅದು ಏನು?" ಎಂದು ಕೇಳಿದೆ.

"ಅದೇ ಸ್ವಾಮಿ, ಏರಿ. ಈ ದೇವರ ಮಜ್ಜನಕ್ಕೆ ಪವಿತ್ರವಾದ ನೀರನ್ನೊದಗಿಸುವ ಪುಷ್ಕರಣಿ. ಅದರಲ್ಲಿ ಒಂದು ಕಂಚಿನ ರಥ ಹೂತು ಹೋಗಿದೆಯೆಂದು ವದಂತಿ. ಅದೇನೇ ಇರಲಿ, ನೀರು ದಿವ್ಯವಾಗಿದೆ. ಸ್ನಾನಮಾಡಿದರೆ ಕುಷ್ಠಾದಿರೋಗಗಳೆಲ್ಲ ಗುಣವಾಗುವುದಂತೆ, ನಮ್ಮೂರಿನ ಹೆಂಗಸರು, ಮನೆಯಲ್ಲಿ ಯಾರಿಗಾದರೂ ಕಾಹಿಲೆಯಾದರೆ ಹರಸಿಕೊಂಡು, ಮೇಲಾದನಂತರ ಇಲ್ಲಿಗೆ ಬಂದು ಬೆಂಡಿನ ತೇರನ್ನು ತೇಲಬಿಟ್ಟು ಸುಮಂಗಲಿಯರಿಗೆ ಅರಿಸಿನ ಕುಂಕುಮ, ಮೊಸರನ್ನ ಕೊಡುತ್ತಾರೆ . . .

ಹಿಂದೆ ಮುಮ್ಮಡಿ ಕೃಷ್ಣರಾಜ ಒಡೆಯರವರು ಕುದುರೆಯ ಮೇಲೆ ಕುಳಿತು ಹಳ್ಳಿ ಹಳ್ಳಿಗೆ ಭೇಟಿ ದಯಪಾಲಿಸುತ್ತಿದ್ದರೆಂಬುದು ನಿಮಗೆ ಗೊತ್ತಿರಬಹುದು. ಹಾಗೇ ಒಂದು ಸಲ ಮಹಾರಾಜರು ಇಲ್ಲಿಗೆ ದಯಮಾಡಿಸಿದ ಸಮಯದಲ್ಲಿ, ಏರಿಯ ಹತ್ತಿರ ಒಬ್ಬ ವೃದ್ಧಬ್ರಾಹ್ಮಣ ಸಂಧ್ಯಾವಂದನೆ ಮಾಡುತ್ತ ಕುಳಿತಿದ್ದನಂತೆ. ಆತ ಮಹಾತ್ಮ. ವೈರಾಗ್ಯದಿಂದ ಪ್ರಪಂಚವನ್ನು ಗೆದ್ದವನು. ಮಹಾರಾಜರು ವರ್ಚಸ್ವಿಯಾದ ಆತನನ್ನು ಕಂಡು ಸಂತೋಷಪಟ್ಟು 'ತಮಗೇನು ಬೇಕು, ಕೇಳೋಣವಾಗಲಿ' ಎಂದು ಹೇಳಿಕಳುಹಿಸಿದರಂತೆ.

ಆಗ ಆತ ಏನು ಕೇಳಿದರು ಗೊತ್ತೆ? ಹತ್ತು ಹೊರೆ ಹುಲ್ಲನ್ನು! ಮಹಾರಾಜರಿಗೆ ಆಶ್ಚರ್ಯವೂ ಆಯಿತು; ಸಿಟ್ಟೂಬಂದಿತು. ಮತ್ತೆ 'ಸ್ವತಃ ನಾವು ಹೇಳಿ ಕಳುಹಿಸಿರುವಾಗ ಹುಲ್ಲು ಹೊರೆ ಬೇಡುವುದು ಸರಿಯೆ? ಇನ್ನೇನಾದರೂ ಬೇಡಬಾರದೆ?' ಎಂದು ಹೇಳಿಕಳುಹಿಸಲು ಬ್ರಾಹ್ಮಣನು 'ಮಹಾರಾಜರಿಗೆ ಅಷ್ಟೊಂದು ಆದರವಿದ್ದರೆ ಸ್ನಾನಾನಂತರ ಒಂದು ಶುಂಠಿ ಚೂರನ್ನು ತಂದು ತನ್ನ ಅಂಗೈಯಲ್ಲಿಡಲಿ' ಎಂದು ತಿಳಿಸಿದರಂತೆ.

ಮಹಾರಾಜರಿಗೆ ಇದು ಹಿತವೆನಿಸಲಿಲ್ಲ. ಆದರೂ ದೃಢಚಿತ್ತರಾದ ಅವರು ಮುಂಗೋಪವನ್ನು ನುಂಗಿಕೊಂಡು ಸ್ನಾನ ಮಾಡಿ ಮಡಿಯುಟ್ಟು ಶುಂಠಿ ಚೂರನ್ನು ತಂದು ಬ್ರಾಹ್ಮಣನ ಕೈಯಲ್ಲಿಡಲು ನೀಡಿದರಂತೆ. ಆತ ಎಡ ಅಂಗೈ ಹಿಡಿದ! ಬಳಿಯಲ್ಲಿದ್ದವರೆಲ್ಲಾ ಬುಸುಗುಟ್ಟಿದರು. ಶುಂಠಿ ಅಂಗೈ ಸೇರಿತೋ ಇಲ್ಲವೊ, ಭಗ್ಗನೆ ಉರಿದು ಭಸ್ಮವಾಯಿತು! ಆಗ ಬ್ರಾಹ್ಮಣನು 'ಮಹಾಸ್ವಾಮಿ! ನೀವು ಕೊಡಬಹುದಾದ ಎಲ್ಲ ದಾನವೂ ಇದೇ ಪರಿ ಸುಟ್ಟು ಬೂದಿಯಾಗುತ್ತದೆ. ಅನ್ಯಾಯವಾಗಿ ಪದಾರ್ಥಗಳನ್ನೇಕೆ ಹಾಳು ಮಾಡಬೇಕೆಂದು ಹತು ಹೊರೆ ಹುಲ್ಲನ್ನು ಮಾತ್ರವೇ ಕೋರಿದೆ. ಅದರಿಂದ ತಾವು ಸಿಟ್ಟಾಗಬೇಡಿರಿ. ಏನಾದರೂ ಒಂದು ದಾನವನ್ನು ನನಗೆ ಕೊಡಲೇಬೇಕೆಂಬ ಇಚ್ಛೆ ತಮಗೆ ಇದ್ದಪಕ್ಷದಲ್ಲಿ ಇದೋ, ಈ ಪುಷ್ಕರಣಿಗೆ ಸೋಪಾನವನ್ನು ಕಟ್ಟಿಸಿಕೊಡಿ. ಈ ದೇವಾಲಯಕ್ಕೆ ದತ್ತಿ ದಯಪಾಲಿಸಿ ಅಂದರಂತೆ. ಮಹಾರಾಜರವರು ಈತನ ಕೋರಿಕೆಯನ್ನು ಸಲ್ಲಿಸಿದರು. ಸೋಪಾನ ದತ್ತಿಗಳಲ್ಲದೆ, ದೇವಾಲಯದಿದಿರು ಸಂತೆಯ ಮಾಳವನ್ನೂ ಸಹ ಕಟ್ಟಿಸಿ, ವರ್ಷಕ್ಕೊಂದು ಬಾರಿ ಅಲ್ಲಿ ಜಾತ್ರೆ ನಡೆಯಬೇಕೆಂದು ಏರ್ಪಾಟು ಮಾಡಿದರಂತೆ. ಆ ಜಾತ್ರೆಯ ದಿನ ಹುಲ್ಲು ಗುಂಡಿಯ ಕೇಶವ ದೇವರು ಇಲ್ಲಿಗೆ ಬಿಜಯ ಮಾಡಿಸುವರು. ಭಕ್ತಾದಿಗಳು ಊರು ಊರಿಂದ, ನಾಗಮಂಗಲ, ಹಾಸನದ ಕಡೆಯಿಂದ ಸಹ ಬಂದು ಸೇರುತ್ತಾರೆ."

ಈ ಕತೆಯನ್ನು ಮೊದಲೇ ಕೇಳಿದ ಹಾಗೆ ಗೊತ್ತು. ಆದರೆ ಕತೆಗಿಂತ ಮುಖ್ಯವಾಗಿ ಹಿಂದೆ ಮುಮ್ಮಡಿ ಕೃಷ್ಣರಾಜ ಒಡೆಯರವರು ತಾವೇ ಹೇಗೆ ಸ್ವತಃ ಹಳ್ಳಿ ಹಳ್ಳಿಗೆ ಹೋಗಿ ಸ್ಥಿತಿಗತಿಗಳನ್ನರಿಯುತ್ತಿದ್ದರೆಂಬುದಕ್ಕೆ ಒಂದು ನಿದರ್ಶನ, ಅಂದರೆ, ಒಂದು ಐತಿಹಾಸಿಕ ಅಂಶ ದೊರೆತಂತಾಯಿತು.

ಅಲ್ಲದೆ ಜನತೆಯ ನೆನಪು ಎಷ್ಟು ಸ್ಥಿರ! ಮಹಾರಾಜರವರು ಅಥವಾ ಅವರಂತೆ ಇನ್ನಾರಾದರೂ ಪ್ರಸಿದ್ಧ ಪುರುಷರು, (ಉದಾಹರಣೆಗೆ ರೈಸ್‌ರವರು) ಅಂತಹ ಸಾವಿರಾರು ಹಳ್ಳಿಗಳಿಗೆ ಚಿತ್ತೈಸಿರಬಹುದು. ಪ್ರತಿಯೊಂದು ಹಳ್ಳಿಯ ನೆನಪೂ ಭೇಟಿಯಿತ್ತವರ ಮನದಲ್ಲಿ ಉಳಿಯುವುದು ಶಕ್ಯವಲ್ಲ. ಆದರೆ ಜನರ ಮನದಲ್ಲಿ ಅದೇ ಭೇಟಿಯು ಮರೆಯಲಾಗದ ಒಂದು ಚಿತ್ರವಾಗಿ, ಕಾಲಕಳೆದಂತೆಲ್ಲ, ಅದು ಕತೆಯಾಗಿ, ಕಲ್ಪನವಾಗಿ, ವರ್ಷಗಳನ್ನು ಎಣಿಸುವ ಅದೊಂದು ಮಾನದಂಡವಾಗಿ ಉಳಿಯುವುದು. ಶ್ರೀ ರಾಮಾನುಜಾಚಾರ್ಯರೂ, ಈ ಹೊಯ್ಸಳ ನಾಡಿನಲ್ಲಿ ಸಂಚಾರ ಮಾಡಿದ್ದರೆ ಆ ವಿಷಯವಾಗಿಯೂ ಕತೆಗಳು, ಹೀಗೆಯೇ ಹುಟ್ಟಿ ಜನರ ನೆನಪಿನಲ್ಲಿ ಉಳಿದಿರಬೇಕಲ್ಲವೆ?

ಅಲ್ಲಿಗೆ ಸಂಜೆ ನಾಲ್ಕರ ಸಮಯವಾಗಿತ್ತು. ಮಾರ್ಗದರ್ಶಕ ಮಹಾಶಯರು "ಈ ದಿನ ವಿಜಯದಶಮಿ. ಹಬ್ಬದೂಟ ಆರಿರಬೇಕು. ನಡೆಯಿರಿ" ಎಂದು ಎಚ್ಚರಿಸಿ ತಮ್ಮ ಹಳ್ಳಿಗೆ ಕರೆದುಕೊಂಡು ಹೋದರು.

# ಪರಿಷತ್ತಿನ ಸುದ್ದಿ

## ಪರಿಷತ್ತಿನ ಸದಸ್ಯರ ಬೆಳವಣಿಗೆ

(೨೯–೫–೪೩ ರಿಂದ ೩–೬–೪೩ರ ವರೆಗೆ)

**ಸಾಮಾನ್ಯ ಸದಸ್ಯರು (೩ ರೂ.):** ಶ್ರೀ.ಗಳಾದ ೧. ಸಿ. ಎನ್. ಕೃಷ್ಣರಾಯರು, C/o ಶ್ರೀ. ಸಿ. ಎಚ್. ಶ್ರೀನಿವಾಸಮೂರ್ತಿಗಳು, ಕ್ಯಾಪಿಟಲ್ ಸೈಕಲ್ ಮತ್ತು ಮೋಟಾರ್ ಕಂಪೆನಿ, ನರಸಿಂಹರಾಜಾ ರಸ್ತೆ, ಬೆಂಗಳೂರು. ೨. ತೂಪ್ಪಿಲ್ ರಾಜಯ್ಯಂಗಾರ್ ಅವರು, ೪೨, ಸೀತಪ್ಪಾ ಗಾರ್ಡನ್ಸ್, ಸುಬೇದಾರ್ ಚತ್ರದ ರಸ್ತೆ, ಬೆಂಗಳೂರು.

## ಪರಿಷತ್ತಿಗೆ ಕಾಣಿಕೆ

ಶ್ರೀಯುತ ಬಿ. ಆರ್. ನೀಲಕಂಠಪ್ಪನವರು ಕಳೆದ ತಿಂಗಳಿನಲ್ಲಿ ನಡಸಿದ ತಮ್ಮ ತಮ್ಮನ ಮದುವೆಯ ಸಂಬಂಧದಲ್ಲಿ ಪರಿಷತ್ತಿಗೆ ಕನ್ನಡದ ಕಾಣಿಕೆಯಾಗಿ ೫ ರೂ.ಗಳನ್ನು ಕೊಟ್ಟಿರುತ್ತಾರೆ. ಪರಿಷತ್ತು ಇದನ್ನು ಕೃತಜ್ಞತೆಯಿಂದ ಸ್ವೀಕರಿಸಿದೆ.

## ವಸಂತ ಸಾಹಿತ್ಯೋತ್ಸವ

### ಕಾರ್ಯಕ್ರಮ

**ಅರಸೀಕೆರೆಯಲ್ಲಿ:**

**೭ನೆಯ ತಾರೀಖು ಸೋಮವಾರ ಸಂಜೆ ೬–೩೦ಕ್ಕೆ**

೧. ಪ್ರಾರಂಭೋತ್ಸವ – ಹಾಸನದ ಜಿಲ್ಲಾಧಿಕಾರಿಗಳಾದ ಶ್ರೀ. ಎನ್. ಎಸ್. ಹಿರಿಯಣ್ಣಯ್ಯನವರಿಂದ.

೨. ಭಾರತವಾಚನ – ಶ್ರೀ. ಟಿ. ಆರ್. ಜಯರಾವ್ ಅವರು.

೩. ಉಪನ್ಯಾಸ – "ಪ್ರಗತಿ ಪರ ಸಾಹಿತ್ಯ": ಶ್ರೀ. ಆರ್. ವಿ. ಜಾಗಿರದಾರರು.

೪. ಮನೋರಂಜನೆ ಕಾರ್ಯಕ್ರಮ.

**೮ನೆಯ ತಾರೀಖು ಮಂಗಳವಾರ ಸಂಜೆ ೬–೩೦ಕ್ಕೆ**

೧. ಉಪನ್ಯಾಸ – "ಸಾಕ್ರೆಟೀಸ್": ಶ್ರೀ. ಕೆ. ವಿ. ರಾಘವಾಚಾರ್ಯರು.

೨. ಕಾವ್ಯವಾಚನ – ಶ್ರೀ. ಟಿ. ಆರ್. ಜಯರಾಯರು.

೩. ಉಪನ್ಯಾಸ – "ಭಾರತೀಯ ಸಂಸ್ಕೃತಿಯ ಮುನ್ನೋಟ": ರಾಜಸೇವಾಪ್ರಸಕ್ತ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು.

**ಹಳೇಬೀಡಿನಲ್ಲಿ:**

**೧೦ನೆಯ ತಾರೀಖು ಗುರುವಾರ ಸಂಜೆ ೬–೩೦ಕ್ಕೆ**

೧. ಪ್ರಾರಂಭೋತ್ಸವ – ಹಾಸನದ ಸಬ್ ಡಿವಿಜನ್ ಆಫೀಸರವರಿಂದ

೨. ಭಾರತವಾಚನ – ಶ್ರೀ. ಟಿ. ಆರ್. ಜಯರಾಯರು.

೩. ಉಪನ್ಯಾಸ – "ಆಧುನಿಕ ದೃಷ್ಟಿ": ಶ್ರೀ. ಎಸ್. ವಿ. ಶ್ರೀನಿವಾಸರಾಯರು.

**೧೧ನೆಯ ತಾರೀಖು ಶುಕ್ರವಾರ ಸಂಜೆ ೬–೩೦ಕ್ಕೆ**

೧. ಉಪನ್ಯಾಸ – "ಭಗವದ್ಗೀತೆ": ಶ್ರೀ. ಕೆ. ಸಂಪದ್ಗಿರಿರಾಯರು

೨. ಕಾವ್ಯವಾಚನ – ಶ್ರೀ. ಟಿ. ಆರ್. ಜಯರಾಯರು.

೩. ಉಪನ್ಯಾಸ – "ಭಾರತೀಯ ಸಂಸ್ಕೃತಿಯ ಮುನ್ನೋಟ": ರಾಜಸೇವಾಪ್ರಸಕ್ತ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು.

ತಾ|| ೧೩, ೧೪ರಲ್ಲಿ ವಸಂತ ಸಾಹಿತ್ಯೋತ್ಸವ ಚೆನ್ನರಾಯಪಟ್ಟಣದಲ್ಲಿ ನಡೆಯಲೇರ್ಪಡಿಸಿದೆ.

## ಶ್ರೀ. ಆರ್. ವಿ. ಜಾಗಿರದಾರರ ಉಪನ್ಯಾಸ ಪ್ರಚಾರ ಕಾರ್ಯಕ್ರಮ

ಶ್ರೀ. ಆರ್. ವಿ. ಜಾಗಿರದಾರರು ಪರಿಷತ್ತಿನ ಪರವಾಗಿ ಮೈಸೂರು ಸಂಸ್ಥಾನದ ಕೆಲವು ಜಿಲ್ಲೆಗಳಲ್ಲಿ ಇದೇ ತಿಂಗಳು ೫ರಿಂದ ೧೪ರ ವರೆಗೆ ಉಪನ್ಯಾಸ ಪ್ರಚಾರ ಕಾರ್ಯಕ್ರಮ ಇಟ್ಟುಕೊಂಡಿರುತ್ತಾರೆ. ದಾವಣಗೆರೆ (೫), ಚಿತ್ರದುರ್ಗ (೬), ಅರಸೀಕೆರೆ (೭), ಬೇಲೂರು (೯), ಹಳೇಬೀಡು (೧೦), ಹಾಸನ (೧೨). ಚೆನ್ನರಾಯಪಟ್ಟಣ (೧೩), ಶ್ರವಣಬೆಳಗೊಳ (೧೪).

## ಮಹಿಳಾ ಶಾಖೆ

ತಾ|| ೧–೬–೧೯೪೩ನೆಯ ಸಂಜೆ ಶ್ರೀಮತಿ ಸೌಭಾಗ್ಯವತಿ ಶಕುಂತಲಾಬಾಯಿ ಪಾಂಡುರಂಗರಾಯರು ಕನ್ನಡ ಭಾರತದಿಂದ ಅರ್ಜುನ–ಊರ್ವಸಿ ಪ್ರಸಂಗವನ್ನು ಮಧುರವಾಗಿ ಭಾವಪೂರ್ಣವಾಗಿ ವಾಚನ ಮಾಡಿದರು.

**ತಾ|| ೯–೬–೪೩ನೆಯ ಬುಧವಾರ ಸಂಜೆ ೫–೩೦ ಗಂಟೆಗೆ** ಪ್ರಸಿದ್ಧ ರೇಡಿಯೋ ಆರ್ಟಿಸ್ಟರಾದ ಶ್ರೀಮತಿ ವೇದವಲ್ಲಿ ವಾಸುದೇವನ್ ಅವರಿಂದ ಪರಿಷನ್ಮಂದಿರದಲ್ಲಿ ಸಂಗೀತ ನಡೆಯುತ್ತದೆ.

**ತಾ|| ೧೧–೬–೪೩ನೆಯ ಶುಕ್ರವಾರ ಸಂಜೆ ೬ ಗಂಟೆಗೆ** ಸೊಲ್ಲಾಪುರದ ಶ್ರೀಮತಿ ಸೌಭಾಗ್ಯವತಿ ಜಯದೇವಿಬಾಯಿ ಲಿಗಾಡೆ ಅವರು "ಕನ್ನಡ ಭಾಷೆಯ ಸದ್ಯದ ಪರಿಸ್ಥಿತಿ ಮತ್ತು ವೀರಶೈವರ ಸಾಹಿತ್ಯದಗುರಿ" ಎಂಬ ವಿಷಯ ಕುರಿತು ಪರಿಷನ್ಮಂದಿರದಲ್ಲಿ ಭಾಷಣ ಮಾಡುತ್ತಾರೆ.

## ಸಾದರ ಸ್ವೀಕಾರ

೧. ೧೯೪೪ನೆಯ ಇಸ್ವಿಯ **ಮೈಸೂರು ಎಸ್.ಎಸ್.ಎಲ್.ಸಿ.** ಪರೀಕ್ಷೆಗೆ ಗೊತ್ತಾದ **ಕನ್ನಡ ಪದ್ಯ ಸಂಗ್ರಹ:** ಡೆಮಿ ಅಷ್ಟಪತ್ರ ೯೩ ಪುಟಗಳು. ಬೆಲೆ ರೂ. ೦–೫–೩.

೨. ೧೯೪೪ನೆಯ ಇಸ್ವಿಯ **ಮೈಸೂರು ಮಿಡ್ಲ್ ಸ್ಕೂಲು, ಅಪ್ಪರ್ ಪ್ರೈಮರಿ ಸ್ಕೂಲು**ಗಳ ಪರೀಕ್ಷೆಗೆ ಗೊತ್ತಾದ **ಕನ್ನಡ ಪಠ್ಯಪುಸ್ತಕ.** ಡೆಮಿ ಅಷ್ಟಪತ್ರ. ೨೦+೧೪೪ ಪುಟಗಳು. ಬೆಲೆ ರೂ. ೦–೭–೬.

ಈ ಎರಡು ಪ್ರಕಟನೆಗಳೂ ಮೈಸೂರು ವಿದ್ಯಾಭ್ಯಾಸ ಇಲಾಖೆಯಿಂದ ಪ್ರಕಟವಾಗಿವೆ.

೩ **ವೇದ ಮತ್ತು ವೀರಶೈವ ಮತ, ೪. ವೀರಶೈವ ಸಮಾಜ ಮತ್ತು ಇದರ ಸುಧಾರಣೆ:** ಲೇಖಕರು ಮತ್ತು ಪ್ರಕಾಶಕರು: ಶ್ರೀ. ಎಂ. ಎಲ್. ನಾಗಣ್ಣನವರು, ವ್ಯವಸ್ಥಾಪಕರು, ಆತ್ಮವಿಚಾರ ಮಂದಿರ. ೮೭೫, ವಾಣಿವಿಲಾಸ ರೋಡ್, ಮೈಸೂರು. ಬೆಲೆ ಒಂದೊಂದೂ ನಾಲ್ಕಾಣೆ.

ಈ ಎರಡು ಪ್ರಕಟನೆಗಳಲ್ಲಿ ವೀರಶೈವ ಮತದ ಮೂಲವೂ ವೀರಶೈವ ಸಮಾಜದಲ್ಲಿ ಆಗಬೇಕಾದ ಸುಧಾರಣೆಗಳೂ ಸರಳವಾದ ಶೈಲಿಯಲ್ಲಿ ಪ್ರತಿಪಾದಿತವಾಗಿವೆ.



೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧೨
ಬಿಡಿ ಪತ್ರಿಕೆ: ೬ ಕಾಸು



ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈ ಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ

ಸಂಪುಟ ೫ | ಬೆಂಗಳೂರು: ಶುಕ್ರವಾರ, ಜೂನ್ ೧೧, ೧೯೪೩ | ಸಂಚಿಕೆ ೩೩

## ಮಂಡ್ಯದಲ್ಲಿ ವಸಂತ ಸಾಹಿತ್ಯೋತ್ಸವ

೫-೫-೪೩ ಶನಿವಾರ ಸಂಜೆ ೬-೩೦ಕ್ಕೆ ಮಂಡ್ಯ ಕರ್ನಾಟಕ ಸಂಘದ ಆಶ್ರಯದಲ್ಲಿ ಉತ್ಸವ ಪ್ರಾರಂಭವಾಯಿತು. ಕುಮಾರಿ ವತ್ಸಲಾ ಮತ್ತು ಶ್ರೀ. ಕೃಷ್ಣಮೂರ್ತಿ ಇವರುಗಳಿಂದ ಪ್ರಾರ್ಥನೆಯಾದ ಮೇಲೆ ಮಂಡ್ಯ ಜಿಲ್ಲಾಧಿಕಾರಿಗಳಾದ ಶ್ರೀ. ಮೀರ್ ಸಫ್ದರ್ ಹುಸೇನ್ ಅವರು ಪ್ರಾರಂಭ ಭಾಷಣ ಮಾಡಿ ತಮ್ಮ ಕನ್ನಡದ ಪ್ರೇಮಕ್ಕೆ ಉಕ್ತಿಗೊಟ್ಟರು.

ಬಳಿಕ ಶ್ರೀ. ಎಚ್. ಎಸ್. ಅಚ್ಚಪ್ಪನವರು 'ಗಾದೆಗಳು' ಎಂಬ ವಿಷಯವಾಗಿ ಮಾತನಾಡಿದರು.

ರಾಜಸೇವಾಪ್ರಸಕ್ತ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು "ಭಾರತೀಯ ಸಂಸ್ಕೃತಿಯ ಮುನ್ನೋಟ" ಎಂಬ ವಿಷಯವಾಗಿ ಉಪನ್ಯಾಸ ಮಾಡಿ, ಬದುಕನ್ನೂ ನಾಡನ್ನೂ ಕಟ್ಟುವವರು ತಮ್ಮ ಮನೋಧರ್ಮವನ್ನು ಹೇಗೆ ಬೆಳಸಿಕೊಳ್ಳಬೇಕೆಂಬುದನ್ನು ವಿವರಿಸಿದರು.

ಆಮೇಲೆ ಸಂಘದ ಅಧ್ಯಕ್ಷರಾದ ಶ್ರೀ. ಜಿ. ವೀರರಾಘವಾಚಾರ್ಯರು ವಂದನೆಗಳನ್ನು ಸಲ್ಲಿಸಿದರು.

೬-೬-೪೩ ಭಾನುವಾರ ಸಂಜೆ ೬-೩೦ಕ್ಕೆ ಉತ್ಸವದ ಎರಡನೆಯ ದಿನದ ಕಾರ್ಯಕಲಾಪಗಳು ನಡೆದುವು. ಪ್ರಾಥಮಿಕ ಶಾಲೆಯ ಮೂವರು ವಿದ್ಯಾರ್ಥಿನಿಯರು ಇಂಪಾಗಿ ಹಾಡಿ ಪ್ರಾರ್ಥನೆ ಮಾಡಿದರು.

ಶ್ರೀ. ಕೆ. ವಿ. ರಾಘವಾಚಾರ್ಯರು ಜನ್ನನ 'ಯಶೋಧರ ಚರಿತೆ'ಯನ್ನು ಕುರಿತು ಉಪನ್ಯಾಸ ಮಾಡಿದರು. ಶ್ರೀಯುತರು ತಮ್ಮ ಭಾಷಣದಲ್ಲಿ "ಜೈನರ ಮುಖ್ಯ ಧರ್ಮ ಅಹಿಂಸಾ ಪರಮೋ ಧರ್ಮಃ. ಯಾವ ವಿಧದ ಹಿಂಸೆಯೂ ಮಾನವನ ಪ್ರಗತಿಗೆ ಸಾಧಕವಾದುದಲ್ಲ. ಎಂದಿದ್ದರೂ ನಾವು ಪ್ರೇಮ ಸಹಕಾರಗಳಿಂದ ಮುಂದೆ ಬರಬೇಕೇ ಹೊರತು ಕಷಾಯದಿಂದಲ್ಲ. ಭರತಖಂಡದ ಧರ್ಮಗಳಲ್ಲಿ ಒಂದಾದ ಜೈನಧರ್ಮ ಈ ಸೂತ್ರವನ್ನು ತನ್ನ ಧರ್ಮದ ಅಡಿಗಲ್ಲಾಗಿ ಮಾಡಿಕೊಂಡಿದೆ. ಈ ಧರ್ಮವನ್ನು ಕನ್ನಡದ ಮಹಾಕವಿಗಳಲೊಬ್ಬನಾದ ಜನ್ನಕವಿ ಕಥಾಕಾವ್ಯ ರೂಪದಲ್ಲಿ ಬರೆದಿದ್ದಾನೆ. ಈ ಕಾವ್ಯದ ಶೈಲಿ ಲಲಿತವಾದದ್ದು; ಮಿಂಚಿನ ವೇಗವುಳ್ಳದ್ದು" ಎಂದು ಮುಂತಾಗಿ ಹೇಳಿ, ಜನ್ನನು ಜೀವದಯೆಯೇ ಜೈನಧರ್ಮವೆಂಬುದನ್ನು ಪ್ರತಿಪಾದಿಸಿರುವ ರೀತಿಯನ್ನು ವಿವರಿಸಿದರು.

ಆಮೇಲೆ ಶ್ರೀ. ಹರಿನಾಯಣ ಅವರು ಶ್ರೀ, ವಿ.ಸೀ.,ಡಿ.ವಿ.ಜಿ., ಬೇಂದ್ರೆ, ರತ್ನ, ಶ್ರೀನಿವಾಸರ ಕವಿತೆಗಳಲ್ಲಿ ಒಂದೆರಡನ್ನು ರಸವತ್ತಾಗಿ ವಾಚನ ಮಾಡಿದರು.

ಕುಮಾರಿ ಸರೋಜಮ್ಮ ಮತ್ತು ವಿಜಯಲಕ್ಷ್ಮಮ್ಮ ಇವರು 'ಗಿರಿಜಾ ಕಲ್ಯಾಣ'ದ ತ್ರಿಪದಿಯನ್ನೂ, ಕುಮಾರಿ ಜಯಲಕ್ಷ್ಮಮ್ಮನು 'ಕನ್ನಡವೆನೆ ಕುಣಿದಾಡುವುದೆನ್ನೆದೆ' ಎಂಬ ಕೃತಿಯನ್ನೂ, ಕುಮಾರಿ ಜಯಮ್ಮ ಮತ್ತು ಜಯಲಕ್ಷ್ಮಮ್ಮ ಇವರು 'ಕನ್ನಡಿಗನ ಕೊರಗು' ಎಂಬ ಕೃತಿಯನ್ನೂ ಇಂಪಾಗಿ ಹಾಡಿದರು.

ಬಳಿಕ ಶ್ರೀ. ಬಿ. ಎಸ್. ರಾಮರಾಯರು ಶ್ರೀ. ಟಿ. ಪಿ. ಕೈಲಾಸಂ ಅವರ 'ಶೂರ್ಪನಖಾ ಕುಲವೈಭವ' ಎಂಬ ನಾಟಕವನ್ನು ವಾಚಿಸಿದರು.

ಅಧ್ಯಕ್ಷತೆ ವಹಿಸಿದ್ದ ಶ್ರೀ. ಎಂ. ಕೆ. ರಾಜ ಅಯ್ಯಂಗಾರ್ ಅವರು ಉಪನ್ಯಾಸ ಮಾಡಿ ವಸಂತ ಸಾಹಿತ್ಯೋತ್ಸವದ ಉದ್ದೇಶಗಳು ಫಲಿಸಿ ನಾಡಿಗೆ ಒಳ್ಳೆಯದಾಗಲೆಂದು ಹಾರೈಸಿದರು.

ಪರಿಷತ್ತಿನ ಕಾರ್ಯದರ್ಶಿಗಳಾದ ಶ್ರೀ. ಬಿ. ವೆಂಕೋಬರಾಯರು ಉತ್ಸವವನ್ನು ಯಶಸ್ವಿಯಾಗಿ ನಡಸಿಕೊಟ್ಟು ಉಪಕಾರ ಮಾಡಿದ ಮಂಡ್ಯ ಕರ್ನಾಟಕ ಸಂಘದ ಮಾನ್ಯ ಅಧಿಕಾರಿಗಳನ್ನೂ ಸದಸ್ಯರನ್ನೂ ನಾಗರಿಕರನ್ನೂ ವಂದಿಸಿದರು.

ಸಂಘದ ಅಧ್ಯಕ್ಷರೂ ಜಿಲ್ಲಾ ವಿದ್ಯಾಧಿಕಾರಿಗಳೂ ಆದ ಶ್ರೀ. ಜಿ. ವೀರರಾಘವಾಚಾರ್ಯರು, ಸಂಘದ ಕಾರ್ಯದರ್ಶಿಗಳಾದ ಶ್ರೀ. ವಿಶ್ವನಾಥಶಾಸ್ತ್ರಿಗಳು ಮತ್ತು ಶ್ರೀ. ಅನಂತ ಶಂಕರಪ್ಪನವರು ಉತ್ಸವವನ್ನು ಏರ್ಪಡಿಸಿ ಸಾಂಗವಾಗಿ ನೆರವೇರಲು ಮೊದಲಿಂದ ಸಹಕಾರ ನೀಡಿದ್ದಕ್ಕಾಗಿ ಪರಿಷತ್ತು ಕೃತಜ್ಞತೆಯುಳ್ಳದ್ದಾಗಿದೆ.

### ಸ್ಥಳದ ಮಹನೀಯರೊಂದಿಗೆ ಮಾತುಕತೆ

ಕರ್ನಾಟಕ ಸಂಘಕ್ಕೆ ಪರಿಷತ್ತಿನ ಉಪಾಧ್ಯಕ್ಷರು ಮತ್ತು ಕಾರ್ಯದರ್ಶಿಗಳು ೬-೬-೪೩ರಲ್ಲಿ ಭೇಟಿಕೊಟ್ಟರು. ಆಗ ಅಮಲ್ದಾರರೂ, ಶ್ರೀ. ಬಿ. ವಿ. ಕೃಷ್ಣನ್ ಅವರೂ, ಸ್ಥಳದ ತರುಣರೂ, ವರ್ತಕರೂ, ಪತ್ರಿಕೋದ್ಯೋಗಿಗಳೂ ದಯಮಾಡಿಸಿದ್ದರು. ಸಂಘದ ಕಾರ್ಯದರ್ಶಿಗಳು ಎಲ್ಲರನ್ನೂ ಬರಮಾಡಿಕೊಂಡರು. ಉಪಾಧ್ಯಕ್ಷರು ಗೋಷ್ಠಿಯನ್ನುದ್ದೇಶಿಸಿ ಕನ್ನಡದ ಕೆಲಸವನ್ನು ಕುರಿತು ಮಾತನಾಡಿದರು: "ಊಟದಲ್ಲೂ ವ್ಯವಹಾರದಲ್ಲೂ ಜಾತಿ ಮತಗಳ ಗೊಂದಲ ಇಟ್ಟುಕೊಳ್ಳಬಾರದು. ಈ ದೃಷ್ಟಿಯಿಂದ ಮಂಡ್ಯದಲ್ಲಿ ಸಾಮರಸ್ಯವೂ ಐಕ್ಯತೆಯೂ ನೆಲಸಿರುವುದು ಸಂತೋಷಕ್ಕೆ ಎಡೆಯಾಗಿದೆ. ಪ್ರತಿಯೊಬ್ಬರೂ ತಮ್ಮ ವರಮಾನದಲ್ಲಿ ಧರ್ಮಕಾರ್ಯಕ್ಕಾಗಿ ಸ್ವಲ್ಪ ಭಾಗವನ್ನು ತೆಗೆದಿಡಬೇಕು. ಅದರಲ್ಲೂ ವರ್ತಕರು ಈ ವಿಚಾರವನ್ನು ತಮ್ಮ ಮಂಡಲಿಯಲ್ಲಿ ನಿರ್ಣಯಿಸಿ ತಪ್ಪದೆ ನಡಸಿಕೊಂಡು ಬರಬೇಕಾಗಿ ಪ್ರಾರ್ಥನೆ. ಮಂಡ್ಯದ ಮಹನೀಯರು ಸಂಘಕ್ಕೆ ಒಂದು ಕಟ್ಟಡ ಕಟ್ಟಿಸಿಕೊಟ್ಟು ಅದರ ಕೆಲಸವನ್ನು ವಿಸ್ತಾರಗೊಳಿಸಬೇಕು. ರಾಮಾಯಣ ಮತ್ತು ಭಾರತ ವಾಚನ, ಪುರಾಣಶ್ರವಣ ಮುಂತಾದ ಸಾಧನಗಳಿಂದ ಸಾರೋದ್ಧಾರವಾಗಿ ಜಿಲ್ಲೆಯಲ್ಲೆಲ್ಲಾ ಕನ್ನಡದ ಕೆಲಸ ಮಾಡುತ್ತ ಪರಿಷತ್ತಿಗೆ ವರದಿ ಕಳಿಸುತ್ತಿರಬೇಕು."

### ಕರ್ನಾಟಕ ಸಂಘ, ಮಂಡ್ಯ — ಬಿನ್ನಹ

ಈ ಸಂಘ ೬-೧೧-೩೩ರಲ್ಲಿ ಸ್ಥಾಪಿತವಾಯಿತು. ಪ್ರಾರಂಭೋತ್ಸವ ಮಾಡಿದವರು ಶ್ರೀ. ಡಿ. ವಿ. ಗುಂಡಪ್ಪನವರು. ಮೊದಲ ಭಾಷಣ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರಿಂದ ನಡೆಯಿತು. ಸಂಘ ಈ ಒಂಬತ್ತು ವರ್ಷಗಳಲ್ಲಿ ಮಂಡ್ಯದ ಸಹಕಾರ ಸಂಘಗಳು, ವಕೀಲರ ಸಂಘ, ಪೌರಸಭೆ, ನಾಟಕ ಸಂಘಗಳಿಂದಲೂ ಶ್ರೀ.ಗಳಾದ ಅರಳೆ ಸಂಗಪ್ಪನವರು, ಬಿ. ಧರಣಪ್ಪನವರು, ಎನ್. ಶಾಮಣ್ಣನವರು, ಮೇಜರ್ ಸುಬ್ಬರಾಜ ಅರಸಿನವರು, ಕಂಟ್ರಾಕ್ಟರು ಲಿಂಗಣ್ಣನವರೇ ಮುಂತಾದ ಮಹಾಜನರ ಉದಾರವಾದ ಪ್ರೋತ್ಸಾಹದಿಂದ ಅಭಿವೃದ್ಧಿಗೆ ಬಂದು ಪರಿಷತ್ತಿನ ಅಂಗಸಂಸ್ಥೆಯಾಗಿ ಅನೇಕ ಬಗೆಯಲ್ಲಿ ಕನ್ನಡದ ಕೆಲಸಗಳನ್ನು ಮಾಡುತ್ತ ಬಂದಿದೆ. ಗ್ರಾಮಾಂತರಗಳಲ್ಲಿ ಅಕ್ಷರಪ್ರಚಾರ ಮಾಡುವುದು, ಸಣ್ಣ ಪುಸ್ತಕಗಳನ್ನು ಪ್ರಕಟಿಸುವುದು ಸಂಘದ ಮುಖ್ಯ ಉದ್ದೇಶಗಳಾಗಿವೆ. ಸಂಘಕ್ಕೆ ಮಂಡ್ಯ ಜಿಲ್ಲೆಯ ನಾಗರಿಕರೆಲ್ಲರೂ ಇನ್ನೂ ಹೆಚ್ಚಿನ ಪ್ರೋತ್ಸಾಹ ನೀಡಿ ಅದನ್ನು ಪೋಷಿಸಬೇಕೆಂದು ಪ್ರಾರ್ಥಿಸುತ್ತೇವೆ.

# ಕನ್ನಡ ನುಡಿ

**ಶುಕ್ರವಾರ, ಜೂನ್ ೧೧, ೧೯೪೩**

## ಠಾಕೂರ್ ಪಾರಿತೋಷಿಕ

ಭಾರತದ ವಿವಿಧ ಭಾಷೆಗಳಲ್ಲಿ ಪ್ರಕಟವಾಗುವ ಅತ್ಯಂತ ಉತ್ತಮ ರೀತಿಯ ಗ್ರಂಥಕ್ಕೆ ರವೀಂದ್ರನಾಥ ಠಾಕೂರರ ಹೆಸರಿನಲ್ಲಿ, ನೊಬೆಲ್ ಪಾರಿತೋಷಿಕದಂತೆ, ಒಂದು ಬಹುಮಾನವನ್ನು ಇಡುವುದಾಗಿ ಅಖಿಲಭಾರತ ರವೀಂದ್ರನಾಥ ಠಾಕೂರ ಸ್ಮಾರಕ ಸಮಿತಿಯವರು ನಿರ್ಧರಿಸಿರುವುದಾಗಿ ಸಮಿತಿಯ ಕಾರ್ಯದರ್ಶಿಗಳಾದ ಶ್ರೀ. ಪಿ. ಎನ್. ಬ್ಯಾನರ್ಜಿ, ಎಂ.ಎಲ್.ಎ. ಅವರು ಪ್ರಕಟನೆ ಹೊರಡಿಸಿದ್ದಾರೆ. ಇದನ್ನು ಕೇಳಿ ಭಾರತದ ಪ್ರತಿಯೊಂದು ಪ್ರಾಂತದವರೂ ಸಂತೋಷಪಡುವುದರಲ್ಲಿ ಸಂದೇಹವಿಲ್ಲ. ರವೀಂದ್ರನಾಥ ಠಾಕೂರರು ತಮ್ಮ ಹಿರಿಯ ಕೃತಿಗಳಿಂದ ಒಟ್ಟು ಭಾರತ ಖಂಡಕ್ಕೇ ಖ್ಯಾತಿಯನ್ನು ಗಳಿಸಿದರು. ಅವರು ಬಂಗಾಳದ ಕವಿ ನಿಜ. ಆದರೆ ಲೋಕ ಸಹಜವಾಗಿಯೆ ಅವರನ್ನು ಭರತಖಂಡದ ಕವಿ ಎಂದು ಗೌರವಿಸಿತು. ಸ್ಮಾರಕ ಸಮಿತಿಯವರು ಈ ರಾಷ್ಟ್ರ ಕವಿಯ ಹೆಸರಿನಲ್ಲಿ ನಡಸಬೇಕೆಂದಿರುವ ವಿಶ್ವಭಾರತಿಯ ಯೋಗಕ್ಷೇಮವೇ ಮುಂತಾದ ಎಲ್ಲ ಹಿರಿಯ ಯೋಜನೆಗಳಿಗೂ ನಾಡಿನ ಎಲ್ಲ ಕಡೆಯ ಶ್ರೀಮಂತರೂ ಕಲಾಪ್ರೇಮಿಗಳೂ ಮುಕ್ತಹಸ್ತದಿಂದ ಸಹಾಯಮಾಡಿ, ಯೋಜನೆಗಳು ಕಾರ್ಯಕಾರಿಯಾಗುವಂತೆ ಮಾಡುವರೆಂದು ಹಾರೈಸುತ್ತೇವೆ.

ಕರ್ನಾಟಕದ ಪರವಾಗಿ ಒಂದು ಮಾತು. ರವೀಂದ್ರರು ತಮ್ಮ ತಾರುಣ್ಯದಲ್ಲಿ ಒಮ್ಮೆ ಕರ್ನಾಟಕಕ್ಕೆ ಬಂದಿದ್ದುದು ಅನೇಕ ದೃಷ್ಟಿಗಳಿಂದ ಮಹತ್ವ ಪೂರ್ಣವಾದ ಸಂದರ್ಭ.

ರವೀಂದ್ರನಾಥ ಠಾಕೂರರಿಗೆ ಆಗ ೨೨ ವರ್ಷ. ೧೮೮೩–೮೪ರಲ್ಲಿ ಅವರ ಅಣ್ಣ ಶ್ರೀ. ಸತ್ಯೇಂದ್ರನಾಥ ಠಾಕೂರರು ಕಾರವಾರದಲ್ಲಿ ಡಿಸ್ಟ್ರಿಕ್ಟ್ ಜಜ್ಜರಾಗಿದ್ದರು. ಅವರನ್ನು ಕಾಣಲು ಠಾಕೂರರು ಕಾರವಾರಕ್ಕೆ ಬಂದರು. ಬಂಧು ಸಮಾಗಮವಾಯಿತು. ಇದರಿಂದ ಅವರಿಗೆ ದೊರೆತ ಸಂತೋಷಕ್ಕಿಂತ ಕನ್ನಡ ನಾಡಿನ ಆ ಪ್ರಾಂತದಲ್ಲಿಯ ಪ್ರಕೃತಿ ಸಾನ್ನಿಧ್ಯದಲ್ಲಿ ಅವರು ಪಡೆದ ಅನುಭವದ ಆನಂದ ಕೋಟಿ ಪಾಲು ಹೆಚ್ಚು. ಈ ಅನುಭವವನ್ನು ಅವರು ತಮ್ಮ ಆತ್ಮಕಥೆ ("ಜೀವನ ಸ್ಮೃತಿ")ಯಲ್ಲಿ ಮುಕ್ತಕಂಠದಿಂದ ನೆನೆದಿದ್ದಾರೆ. ಆ ಭಾಗವನ್ನು ಓದುವಾಗ ನಮ್ಮ ಆದಿ ಕವಿ ಪಂಪನ ನೆನಪು ಬರುತ್ತದೆ. ಕಾರವಾರವನ್ನವರು ಬಣ್ಣಿಸುವುದು ಹೀಗೆ:

"ಕರ್ನಾಟಕದ ಪ್ರಧಾನ ನಗರ; ಏಲಕ್ಕಿ ಲತೆಯ ಚಂದನ ತರುವಿನ ತವರು; ಮಲಯಾಚಲದ ದೇಶ. ಕ್ಷುದ್ರ ಶೈಲಮಾಲಾ ವೇಷ್ಟಿತವಾದ ಸಮುದ್ರತೀರದ ಈ ನಗರ ಅದರ ನಾಗರೀಮೂರ್ತಿ ಪ್ರಕಾಶಕ್ಕೆ ಬಾರದಷ್ಟು ನಿಭೃತವಾಗಿ ಪ್ರಚ್ಛನ್ನವಾಗಿದೆ . . . ಮೂರ್ತಿಮತ್ತಾದ ವ್ಯಾಕುಲತೆ ಅನಂತತೆಯನ್ನು ಅಪ್ಪಿಕೊಳ್ಳಲು ಹೋಗುತ್ತಿದೆಯೋ ಎಂಬಂತೆ ಈ ಅರ್ಧಚಂದ್ರಾಕಾರದ ವೇಲಾಭೂಮಿ ಅಕೂಲನೀಲಾಂಬುರಾಶಿಗೆ ಅಭಿಮುಖವಾಗಿ ತನ್ನೆರಡೂ ತೋಳುಗಳನ್ನು ಚಾಚಿ ನಿಂತಿದೆ."

ರವೀಂದ್ರರ ಪ್ರತಿಭೆ ವಿಕಾಸಗೊಂಡು, ಅವರ ಬಾಲ ಸಾಹಿತ್ಯ ಪ್ರೌಢವಾಗಿ, ಇಂದು ಠಾಕೂರರ ಹೆಸರನ್ನು ಸ್ಮರಿಸಿದರೆ ಯಾವ ಒಂದು ವ್ಯಕ್ತಿ ಮಹತ್ವವೂ ಕವಿತಾ ಪರಿಣತಿಯೂ ಕಣ್ಮನಗಳ ಮುಂದೆ ಚಿತ್ರಿತವಾಗುತ್ತವೆಯೋ ಆ ಕವಿತ್ವದ ಮತ್ತು ವ್ಯಕ್ತಿತ್ವದ ಗಂಭೀರವಾದ ಬೆಳವಣಿಗೆಗೆ ಸ್ಫೂರ್ತಿ ಪ್ರೇರಣೆಗಳು ಅವರಿಗೆ ಒದಗಿದ್ದು ಕರ್ನಾಟಕದಲ್ಲಿ ಎಂದು ಹೆಮ್ಮೆಪಡುವ ಭಾಗ್ಯ ಕನ್ನಡಿಗರದಾಗಿದೆ.

ಕಾರವಾರದಲ್ಲಿದ್ದಾಗಲೇ ಅವರು ಒಂದು ರಾತ್ರಿ ಬೆಳದಿಂಗಳ ಸ್ನಾನಮಾಡಿ 'ಪೂರ್ಣಿಮಾ' ಕವಿತೆಯನ್ನು ರಚಿಸಿದರು. ಕಾರವಾರದ ಈ ಅನುಭವದ ಫಲವೇ 'ಪ್ರಕೃತಿ ಪರಿಶೋಧ'ವೆಂಬ ನಾಟಕ. ಹೀಗೆ ರವೀಂದ್ರರ ಜೀವನಕ್ಕೆ ಕರ್ನಾಟಕದ 'ದರ್ಶನ'ವು ರಸ ಭಾವ ಸಂಪತ್ತಿಯನ್ನು ಅನುಗ್ರಹಿಸಿತು. ಈ ಸಂದರ್ಭದಲ್ಲಿ ಈ ಸವಿನೆನಪು ನೆನೆಯುವುದು ನಮಗೆ ಬಹಳ ಹಿತವಾಗಿದೆ.

ರವೀಂದ್ರ ಪಾರಿತೋಷಿಕವು ನಾಡಿನಲ್ಲಿ ಮೇಲು ಮಟ್ಟದ ಸಾಹಿತ್ಯ ನಿರ್ಮಾಣಕ್ಕೆ ದೊಡ್ಡ ಪ್ರೋತ್ಸಾಹ ಕೊಡುವ ವ್ಯವಸ್ಥೆಯಾಗಿದೆ. ಇದು ಸಫಲವಾಗಲೆಂದು ಮತ್ತೊಮ್ಮೆ ಹಾರೈಸುತ್ತೇವೆ. ರವೀಂದ್ರ ಪಾರಿತೋಷಿಕವು ಸಾಹಿತ್ಯ ಕ್ಷೇತ್ರದಲ್ಲಿ ಹೊಸತನದ ಬೆಳಕನ್ನು ಕಾಣುತ್ತಿರುವ ಕನ್ನಡನಾಡಿನಲ್ಲೂ ಹಾಗೆಯೆ ಭಾರತದ ಪ್ರತಿಯೊಂದು ಪ್ರಾಂತದಲ್ಲೂ ಕೃತಿಸತ್ತ್ವವನ್ನು ಕೆರಳಿಸಲಿ!

## ಕವಿತೆ ಕೈ ಬಿಡಲಿಲ್ಲ

ಬಾಳ ಬಾಳಿನ ತಿವಿತ ತೊಡೆಯುವದು ಎಂದಿದ್ದೆ
ಜೀವ ಜೀವಾಳವಹ ಕವಿತೆಯನ್ನು.
ಕನಿಕರದ ತನಿ ಕಡಲೆ! ಅಮೃತಹಸ್ತದಿ ಕಾಯ್ದೆ
ಕವಿತೆ ಕೈಬಿಡದೆ ಕೂಡಿರುವದಿನ್ನೂ.

ಈ ಕಾವ್ಯ ಸುಂದರಿಯ ಗರಗರಿಕೆ ಕರಗುವದು
ದಿನದಿನದ ಗೂಳಿಗಾಳಿಗದ ಭರಕೆ;
ಹಳದಿಯೊಡೆಯುವಳೆಂದು ತಿಳಿದುದೆಲ್ಲವು ಇಂದು
ಸುಳ್ಳಾಯ್ತು. ಕರುಣಾಳು ನಿನ್ನ ಹರಕೆ!

ಮಾರು ಗಡಿಗೆಯ ಮುನ್ನ ಕುಂಬಾರ ಸುಡುವಂತೆ
ಬಾಳ್ವೆಯಾವಿಗೆಯಲ್ಲಿ ಸುಟ್ಟು ನೀನು
ಪೇಟೆಯಲಿ ಈ ಕವಿತೆ ಬೆಲೆಬಾಳುವಂತೆಸಗಿ
ದಯೆಗೆಯ್ದೆ! ನೆಲನೆಕ್ಕಿ ನಮಿಪೆ ನಾನು.

ನಂಜುಬಟ್ಟಲು ಕುಡಿದು ಪ್ರಹ್ಲಾದ ನಗುವಂತೆ
ನೀನೆನಗೆ ಬಡಿಸಿದೂಟವನೆ ಉಂಡು
ಕೊರಗದೆಯೆ ಮರುಗದೆಯೆ ಕುದಿಯದೆಯೆ ಕರುಬದೆಯೆ
ಹರಣ ಹಿಡಿದಿರುವೆ ಕಾವ್ಯಶ್ರೀ ಕಂಡು.

ಏನಾದರೇನಂತೆ ಮರೆಯಿಂದ ಬಂದೊಬ್ಬ
ಗುಚ್ಛೂರಿ ತಿವಿಯುವೊಲು ನೋಡು ತಂದೆ
ಕಷ್ಟಚಕ್ರವೆ ಬಹವು; ನಕ್ರನೊಲು ಎಳೆಯುವವು
"ಕಾಪಾಡು" – ನೀಡು ಈ ವರವನೊಂದೆ.

ಕರಗಸದ ಕೊರೆತದೊಲು ಇಬ್ಬಾಯ ಕಡುಗದೊಲು
ಸೂಜಿಮೇಲಿನ ಗರುಡಿಯಾಟದಂತೆ
ಎತ್ತಲೂ ಅಳುಕಿಸುವ ಚಿಂತೆಗಳ ಸಂತೆಯಲಿ
ಹದಿಬದೆಯು ಕವಿತೆ ಕೂಡಿಹಳು ಅಂತೆ!

ನವೆದೊಮ್ಮೆ ತೇಲ್ಗಣ್ಣು ಮೇಲ್ಗಣ್ಣು ಹಾಕುವಳು
ನೀನೇನೊ ಔಷಧಿಯ ಸಿಂಪಡಿಸಲು
ದಿವ್ಯತೇಜವ ಕೂಡಿ ಮಧುರ ಕಂಠದಿ ಹಾಡಿ
ಹೇ ದೇವ! ನಂದನವ ತಂದೀವಳು.

ನನ್ನ ಹೃದಯದ ಕೋಣೆ ಅಲ್ಲಿಹುದು ಈ ವೀಣೆ
ನೀನೆತ್ತಿ ನುಡಿಯಿಸುತ ಹಾಡ ಕಲಿಸು
ಕೆಡವಿ ಒಡೆದರೆ ನೀನು; ಸುಟ್ಟು ಸಿಡಿವೆನು ನಾನು
ಕವಿತೆ! ಕೈಬಿಡದಂತೆ ಕೈಗೂಡಿಸು.

ಜ. ಶ್ರೀ. ದೇಸಾಯಿ, ಕಲಬುರ್ಗಿ

# ಕೊಡಗಿನ ವೀರಶೈವ ಅರಸರು

(ಶ್ರೀ. ಎಂ. ಎಸ್. ಅನಂತಪದ್ಮನಾಭರಾವ್, ಮಡಿಕೇರಿ)

(ಕಳೆದ ಸಂಚಿಕೆಯಿಂದ ಮುಂದಕ್ಕೆ)

೧೭೮೨ರಲ್ಲಿ ಕೊಡಗರು ದಂಗೆಯೆದ್ದು ಸ್ವತಂತ್ರರಾದರು. ಆಗ ಹೈದರನು ಕರ್ಣಾಟಕದಲ್ಲಿ ಇಂಗ್ಲಿಷರೊಡನೆ ಯುದ್ಧ ಮಾಡುತ್ತಿದ್ದನು. ಇದೇ ಸಮಯದಲ್ಲೇ ಅವನೂ ವಿಧಿವಶನಾದನು. ಆಮೇಲೆ ಟಿಪ್ಪು ಗೊರೂರಿನಲ್ಲಿದ್ದ ರಾಜ ಕುಮಾರರನ್ನು ಪಿರಿಯಾಪಟ್ಟಣದಲ್ಲಿರಿಸಿದನು. ಹಿರಿಯವನಾದ ವೀರರಾಜನು ಹೆಂಡತಿ ಬಂಧುಗಳೊಡನೆ ೧೭೮೮ರಲ್ಲಿ ಸೆರೆಯಿಂದ ತಪ್ಪಿಸಿಕೊಂಡು ಹೆಂಡತಿಯನ್ನು ತುರ್ಚಿ ಎಂಬಲ್ಲಿ ಬಿಟ್ಟು ಕೋಟೆ ರಾಜನಾದ ವೀರವರ್ಮನಲ್ಲಿಗೆ ಬಂದನು. ಪೂರ್ವ ವೈರಿಯಾದ ಆತನಿಗೆ ಕಿಗ್ಗಟ್ಟು ನಾಡು, ಅಮ್ಮತ್ತಿ ನಾಡು, ಎಡೆ ನಾಲ್ಕು ನಾಡುಗಳನ್ನು ಬಿಟ್ಟುಕೊಟ್ಟು ತನ್ನ ಪ್ರಾಣವನ್ನುಳಿಸಿಕೊಳ್ಳಬೇಕಾದ ಪ್ರಸಂಗ ಬಂತು. ಆದರೆ ಶೀಘ್ರದಲ್ಲೆ ಕೊಡಗರ ಸಹಾಯದಿಂದ ವೀರವರ್ಮನನ್ನು ಸೋಲಿಸಿ ಆ ಒಪ್ಪಂದವನ್ನು ಮುರಿದನು. ತನಗಾಗಿ ಕಾದುವ ಕೊಡಗರಿಗೆ ಜಮ್ಮ, ಜಹಗೀರು, ಉಂಬಳಿಗಳನ್ನು ಕೊಟ್ಟನು. ಇದರಿಂದ ಉದ್ರೇಕಗೊಂಡ ಟಿಪ್ಪು ವೀರರಾಜನ ಮೇಲೆ ದೊಡ್ಡ ಯುದ್ಧದ ಯೋಜನೆಯನ್ನೇ ಮಾಡಿದನು. ಆದರೆ ಮಲೆಯಾಳದಲ್ಲಿ ದೊಡ್ಡ ದಂಗೆಯಾದ ಕಾರಣ ಟಿಪ್ಪು ಸಣ್ಣ ಸೈನ್ಯವನ್ನು ಕಳುಹಿಸಲು ಅದು ಹೆಗ್ಗಳದಲ್ಲಿ ಸೋತುಹೋಯಿತು.

ವೀರರಾಜನು ಒಂದೊಂದಾಗಿ ಕುಶಾಲ್‌ನಗರ, ಬೆಪ್ಪು ನಾಡು, ಭಾಗಮಂಡಲಗಳನ್ನು ವಶಪಡಿಸಿಕೊಂಡು ಕೊನೆಯಲ್ಲಿ ಮಡಿಕೇರಿಯನ್ನೂ ಹಿಡಿದನು. ಇಡಿಯ ಕೊಡಗಿಗೆ ಅರಸಾಗಿ 'ವೀರರಾಜೇಂದ್ರ' ಎನಿಸಿದನು. ಇವನೇ ರಾಜೇಂದ್ರನಾಮೆಯನ್ನು ಬರೆಯಿಸಿ ಈ ಯುದ್ಧಗಳ ವಿವರಗಳನ್ನು ಕೊಟ್ಟಿರುವನು.

ಇದೇ ಸಮಯದಲ್ಲಿ ಇಂಗ್ಲಿಷರಿಗೂ, ಕೊಡಗಿನ ಅರಸರಿಗೂ ಮೈತ್ರಿಯುಂಟಾಯಿತು. ೧೭೯೦ರಲ್ಲಿ ಇಬ್ಬರಿಗೂ ಒಂದು ಒಪ್ಪಂದವಾಯಿತು. ಬೊಂಬಾಯಿಯ ಗವರ್ನರಾದ ಸರ್ ರಾಬರ್ಟ್ ಏಬರ್‌ಕ್ರಾಂಬಿ ಎಂಬವನನ್ನು ವೀರರಾಜೇಂದ್ರನು ವೀರರಾಜಪೇಟೆಯಲ್ಲಿ ಭೇಟಿಯಾದನು.

ಟಿಪ್ಪು ಇಂಗ್ಲಿಷರೊಡನೆ ಒಪ್ಪಂದ ಮಾಡಿಕೊಂಡಾಗ ಲಿಂಗರಾಜನ ಒಪ್ಪಂದದ ಪ್ರಕಾರ ಮೈಸೂರು ಸಿಂಹಾಸನಕ್ಕೆ ಬರಬೇಕಾದ ೨೪,೦೦೦ ರೂಪಾಯಿಗಳ ಪೊಗದಿಯನ್ನೂ, ಮೈಸೂರರಸರು ಕೊಡಗಿನ ಅರಸರಿಗೆ ಬಿಟ್ಟುಕೊಟ್ಟಿದ್ದ ಪ್ರದೇಶಗಳನ್ನೂ ಇಂಗ್ಲಿಷರಿಗೆ ಬಿಟ್ಟುಕೊಟ್ಟನು. ವೀರರಾಜೇಂದ್ರನು ತನ್ನ ಭುಜಬಲ ಪರಾಕ್ರಮದಿಂದ ಕೊಡಗು ರಾಜ್ಯವನ್ನು ಮತ್ತೆ ಸ್ಥಾಪಿಸಿದ್ದನಾದರೂ ಇಂಗ್ಲಿಷರ ಒತ್ತಾಯಕ್ಕೆ ಬಗ್ಗಿ ಇದಕ್ಕೆ ಒಪ್ಪಬೇಕಾಯಿತು. ಟಿಪ್ಪುವಿಗೂ ಇಂಗ್ಲಿಷರಿಗೂ ನಡೆದ ಕೊನೆಯ ಯುದ್ಧದಲ್ಲಿ ಇಂಗ್ಲಿಷರಿಗೆ ಬಹುವಾಗಿ ವೀರರಾಜೇಂದ್ರನು ಸಹಾಯವಿತ್ತನು. ಆದರೆ ಈ ವೇಳೆಯಲ್ಲಿ ಇಂಗ್ಲಿಷ್ ಕಂಪೆನಿಯ ಅಧಿಕಾರಿಗಳ ವರ್ಗಾವರ್ಗಿಯ ಕಾರಣದಿಂದ ತನಗೆ ಯೋಗ್ಯವಾದ ಗೌರವ ದೊರೆಯಲಿಲ್ಲವೆಂದು ರಾಜನಿಗೆ ಅಸಮಾಧಾನವಾಯಿತು.

ಇವನು ೧೭೯೭ರಲ್ಲಿ ಅಬ್ಬಿ ಮಠಕ್ಕೆ ಜಹಗೀರುಗಳನ್ನು ಕೊಟ್ಟಿರುತ್ತಾನೆ. ಮಹದೇವಪುರ ಮಠ, ಕೊಡವಿ ಮಹಾಂತಸ್ವಾಮಿ ಮತ್ತು ಸಿದ್ಧಾಪುರ ಮಠಗಳಿಗೂ ಶಿವಪೂಜೆ ನಿರಂತರವಾಗಿ ನಡೆದು ಬರಬೇಕೆಂಬ ಉದ್ದೇಶದಿಂದ ಜಹಗೀರಿಗಳನ್ನು ಕೊಟ್ಟಿರುತ್ತಾನೆ. ಇವನಿಗೆ ಗಂಡು ಸಂತತಿಯಿಲ್ಲದ ಪ್ರಯುಕ್ತ ಹಿರಿಯ ಮಗಳಾದ ದೇವಮ್ಮಾಜಿಯೇ ಮುಂದೆ ರಾಣಿಯಾಗತಕ್ಕುದೆಂದು ಮರಣ ಶಾಸನ ಬರೆದಿಟ್ಟನು. ಅವಳ ಹೆಸರಿನಲ್ಲಿ ವಿಶೇಷ ಸಂಪತ್ತನ್ನೂ ಇರಿಸಿದನು. ಆದರೆ ಅವನ ತಮ್ಮನಾದ ಲಿಂಗರಾಜನು ಅಪ್ಪಣ್ಣ ದಿವಾನನ ಸಹಾಯದಿಂದ ತಾನೇ ದೊರೆಯಾದನು. ರಾಣಿಯಾದ ದೇವಮ್ಮಾಜಿಯು ತನಗಾಗಿ ಸಿಂಹಾಸನ ತ್ಯಾಗ ಮಾಡುವಂತೆ ಪ್ರೇರೇಪಿಸಿ ತನ್ನನ್ನು ವಿರೋಧಿಸಿದವರನ್ನು ಕೊಲ್ಲಿಸಿದನು. ಈ ಲಿಂಗರಾಜನು ಸ್ಫುರದ್ರೂಪಿಯೂ, ಕುಶಲ ಬೇಟೆಗಾರನೂ, ಕವಿಯೂ ಆಗಿದ್ದನು. ಆದರೆ ಈತನ ಕೃತಿಗಳಾವುವೂ ಸಿಕ್ಕಿರುವುದಿಲ್ಲ. ಸಾಮಾನ್ಯರಂತೆ ಉಡುಪನ್ನು ಧರಿಸುತ್ತಿದ್ದನು. ವಿಶೇಷ ಸಂದರ್ಭಗಳಲ್ಲಿ ಇಂಗ್ಲಿಷ್ ಜನರಲ್ಲನ ಉಡುಪನ್ನು ಧರಿಸುತ್ತಿದ್ದನು. ೯೦ ಆನೆಗಳು, ೪೫ ಕುದುರೆಗಳು, ಸ್ವಲ್ಪ ಸೈನ್ಯ ಮತ್ತು ನರ್ತಕಿಯರು ಇವೇ ದರ್ಬಾರಿನ ಮರ್ಯಾದೆಗಳಾಗಿದ್ದುವು: ರಾಜಧಾನಿಯಲ್ಲಿ ಶಿಕ್ಷಿತವಾದ ಸೈನ್ಯವೇನೂ ಇರಲಿಲ್ಲ. ಗೊರಿಲ್ಲಾ ಯುದ್ಧದಲ್ಲಿ ಕುಶಲರಾದ ಕೊಡಗರೇ ಯುದ್ಧ ಕಾಲದಲ್ಲಿ ಸಹಾಯ ಮಾಡುತ್ತಿದ್ದರು. ಇವನ ಆಳಿಕೆಯಲ್ಲಿ ಇವನ ನಾಯಿ ಸಾಕುತ್ತಿದ್ದ ಕುಂಟ ಬಸವನು ರಾಜನ ಆಪ್ತನಾಗಿ ಸೇನಾಧಿಕಾರಿಯಾಗಿ ದಿವಾನ ಪದವಿಗೇರಿದ್ದನು. ಈತನು ವೀರರಾಜೇಂದ್ರನು ಆರಂಭ ಮಾಡಿದ್ದ ಓಂಕಾರೇಶ್ವರ ದೇವಾಲಯವನ್ನು ಪೂರ್ತಿ ಮಾಡಿದನು.

ಲಿಂಗರಾಜೇಂದ್ರನು ಕಾಲವಾದಾಗ ಅವನ ಮಗ ಇಮ್ಮಡಿ ವೀರರಾಜೇಂದ್ರನಿಗೆ ೨೦ ವರ್ಷ ವಯಸ್ಸಾಗಿತ್ತು. ದಿವಾನ್ ಕುಂಟ ಬಸವನ ಅಧಿಕಾರಕ್ಕೆ ಚ್ಯುತಿಯಿಲ್ಲವಾಯಿತು. ಕೊಡಗಿಗೆ ಬಂದಿದ್ದ ಇಬ್ಬರು ಬ್ರಿಟಿಷ್ ಅಧಿಕಾರಿಗಳನ್ನು ಹಿಂದಿರುಗಲು ಬಿಡದೆ ಸೆರೆಯಲ್ಲಿಟ್ಟ ಕಾರಣ ರಾಜನು ಇಂಗ್ಲಿಷರ ಆಗ್ರಹಕ್ಕೊಳಗಾದನು. ಹಿಂದು ಮುಂದುಗಳನ್ನು ಪರಿಗಣಿಸದೆ ಅನೇಕ ನಿರಪರಾಧಿಗಳನ್ನು ಯಮಪಾಶಕ್ಕೆ ಗುರಿಪಡಿಸಿದನು. ಈ ವರ್ತಮಾನಗಳಿಂದ ಉದ್ರೇಕಗೊಂಡ ಇಂಗ್ಲಿಷ್ ರಾಜಕಾರಣಪಟುಗಳು ರಾಜನ ಅಭಿಪ್ರಾಯವನ್ನು ತಿಳಿಯ ಬಯಸಿದರು. ರಾಜನು ಯಾವ ಸಮಾಧಾನವನ್ನೂ ಕೊಡಲಿಲ್ಲ. ರಾಜನ ಆಗ್ರಹಕ್ಕೆ ಪಾತ್ರಳಾದ ಅವನ ಸಹೋದರಿ ದೇವಮ್ಮಾಜಿ ಗಂಡ ಚೆನ್ನಬಸವನೊಡನೆ ಬೆಂಗಳೂರಿಗೆ ಓಡಿಹೋಗಿ ತಲೆ ಮರಸಿಕೊಂಡಳು. ಈ ಕಾರಣದಿಂದ ಚೆನ್ನಬಸವನ ಸಹೋದರ ಮುದ್ದಯ್ಯನು ರಾಜನ ವಿಶ್ವಾಸಪಾತ್ರನಾದ ಅಧಿಕಾರಿಯಾಗಿದ್ದರೂ ಮೃತ್ಯುವಶನಾಗಬೇಕಾಯಿತು. ಇಂಗ್ಲಿಷರನ್ನು ಹೇಗಾದರೂ ಸೋಲಿಸಿ ತಾನೇ ಸ್ವತಂತ್ರನಾಗಿರಬೇಕೆಂಬ ಅಪೇಕ್ಷೆಯಿಂದ ರಾಜನು ರಣಜಿತಸಿಂಗನೊಡನೆ ಗುಪ್ತವಾಗಿ ಪತ್ರವ್ಯವಹಾರ ನಡಸಿದನು. ಆದರೆ ಇದು ಫಲಿಸಲಿಲ್ಲ.

ಕುಂಟ ಬಸವನು ದೊಡ್ಡ ವೀರರಾಜೇಂದ್ರನ ಮಕ್ಕಳಾದ ದೇವಮ್ಮಾಜಿಯನ್ನೂ, ಮಹದೇವಮ್ಮಾಜಿಯನ್ನೂ ಅಪ್ಪಂಗಾಲದಿಂದ ಕರೆತರಿಸಿ ಚಿತ್ರ ಹಿಂಸೆಯಿಂದ ಕೊಲೆಗೀಡುಮಾಡಿ, ವ್ಯಾಧಿಗ್ರಸ್ತರಾಗಿ ಕಾಲವಾದರೆಂದು ವರ್ತಮಾನ ಹರಡಿದನು. ರಾಜನ ಕ್ರೂರ ವರ್ತನೆಗಳಿಂದಲೂ, ದೇವಮ್ಮಾಜಿಯ ಮರಣದಿಂದಲೂ, ತಮ್ಮ ಅಧಿಕಾರಿಗಳ ಸೆರೆಯಿಂದಲೂ ಆಕ್ರೋಶಗೊಂಡ ಇಂಗ್ಲಿಷರು ನಾಗಪುರದ ರೆಸಿಡೆಂಟರನ್ನು ವಿಚಾರಣೆಗಾಗಿ ಮಡಿಕೇರಿಗೆ ಕಳುಹಿಸಿದರು. ರಾಜನು ಇಂಗ್ಲಿಷರಿಗೆ ತನ್ನ ರಾಜ್ಯದ ಮೇಲೆ ಯಾವ ಅಧಿಕಾರವೂ ಇಲ್ಲವೆಂದು, ೧೮೩೪ನೆಯ ಮಾರ್ಚಿ ೧೫ರಲ್ಲಿ ಬ್ರಿಟಿಷರ ಮೇಲೆ ಯುದ್ಧವನ್ನು ಸಾರಿದನು. ಕರ್ನಲ್ ಫ್ರೇಜರನು ಕುಶಾಲ್ ನಗರದ ಮಾರ್ಗವಾಗಿ ಕಾವೇರಿ ಹೊಳೆಯನ್ನು ದಾಟಲು, ಇವರನ್ನಿದಿರಿಸಲು ಸಾಧ್ಯವಿಲ್ಲವೆಂದು ದಿವಾನ್ ಅಪ್ಪಾರಂಡ ಬೋಪಯ್ಯನು ಕರ್ನಲ್ ಫ್ರೇಜರನನ್ನು ಕಂಡು ಸಂಧಿ ಪ್ರಸ್ತಾಪ ಮಾಡಿದನು.

ಯುದ್ಧಾರಂಭ ಕಾಲದಲ್ಲೇ ವೀರರಾಜನು ನಾಲ್ಕುನಾಡು ಅರಮನೆಗೆ ಹೊರಟುಹೋಗಿದ್ದನು. ಬ್ರಿಟಿಷ್ ಸೈನ್ಯವು ಕೊಡಗನ್ನು ನಾಲ್ಕು ಕಡೆಯಿಂದಲೂ ಮುತ್ತಿತು. ಭಯಗ್ರಸ್ತನಾದ ರಾಜನಿಗೆ ಪ್ರಾಣದಾನವನ್ನು ಮಾಡಿ ಅವನನ್ನು ಗೌರವದಿಂದ ಕಾಣುವುದಾಗಿ ಭರವಸೆಯಿತ್ತಮೇಲೆ ರಾಜನು ಮಡಿಕೇರಿಗೆ ಬಂದನು. ಇಷ್ಟರಲ್ಲೇ ಕುಂಟ ಬಸವನು ತಲೆ ಮರಸಿಕೊಂಡು ಆತ್ಮಹತ್ಯ ಮಾಡಿಕೊಂಡನು.

ಕೊಡಗಿನ ದಿವಾನರೂ, ಅಧಿಕಾರಿಗಳೂ, ಪ್ರಜೆಗಳೂ ರಾಜ್ಯವನ್ನು ಬ್ರಿಟಿಷ್ ಅಧಿಕಾರಕ್ಕೆ ಒಳಪಡಿಸಲು ಅಪೇಕ್ಷೆಪಟ್ಟ ಕಾರಣ ವೀರರಾಜೇಂದ್ರನು ಪದಚ್ಯುತನಾಗಬೇಕಾಯಿತು.

ಈ ಕಾಲದ ಸುಮಾರು ೧೬ ಶಾಸನಗಳು ಈಗಲೂ ಕೊಡಗಿನಲ್ಲಿವೆ.

## ಅರಸೀಕೆರೆಯಲ್ಲಿ ವಸಂತ ಸಾಹಿತ್ಯೋತ್ಸವ

ಅರಸಿಕೆರೆ ಕರ್ನಾಟಕ ಸಂಘದ ಆಶ್ರಯದಲ್ಲಿ ವಸಂತ ಸಾಹಿತ್ಯೋತ್ಸವ ಜೂನ್ ೭ನೆಯ ಸೋಮವಾರ ಶ್ರೀ. ಅಹೋಬಲ ರಾಯರ ಚತ್ರದಲ್ಲಿ ಪ್ರಾರಂಭವಾಯಿತು. ಹಿಂದೆಂದೂ ಸೇರದಿದ್ದ ಅಧಿಕ ಸಂಖ್ಯೆಯಲ್ಲಿ ಊರಿನ ಮಾನ್ಯಪುರುಷರೂ ಮಹಿಳೆಯರೂ ಉತ್ಸವಕ್ಕೆ ದಯಮಾಡಿಸಿದ್ದರು. ಮೊದಲನೆಯ ದಿನದ ಕಾರ್ಯ ಕಲಾಪಗಳ ಸಂಗ್ರಹ ವರದಿಯನ್ನು ಕೆಳಗೆ ಕೊಟ್ಟಿದೆ:

ಶಾಲಾವಿದ್ಯಾರ್ಥಿನಿಯರಿಂದ ಪ್ರಾರ್ಥನೆ ಆದಮೇಲೆ ಸಂಘದ ಕಾರ್ಯದರ್ಶಿಗಳಾದ ಶ್ರೀ. ಬಿ. ಸಿದ್ದಪ್ಪನವರು ಸ್ವಾಗತ ಭಾಷಣ ಮಾಡಿದರು. ಅನಂತರ ಜಿಲ್ಲಾಧಿಕಾರಿಗಳಾದ ಶ್ರೀ. ಎನ್. ಎಸ್. ಹಿರಿಯಣ್ಣಯ್ಯನವರು ಪ್ರಾರಂಭ ಭಾಷಣ ಮಾಡಿದರು.

ಶ್ರೀ. ಟಿ. ಆರ್. ಜಯರಾಯರು ಇಂಪಾಗಿ ಭಾರತ ವಾಚನ ಮಾಡಿದರು. ಆಮೇಲೆ ಪರಿಷತ್ತಿನ ಉಪಾಧ್ಯಕ್ಷರು ಮಾತನಾಡಿ ಪರಿಷತ್ತು ನಾಡಿನ ಸಂಘಗಳಿಂದ ನಿರೀಕ್ಷಿಸುವ ಸೇವೆ ಸಹಕಾರ ಗಳನ್ನು ವಿವರಿಸಿದರು.

ಬಳಿಕ ಮನೋರಂಜಕ ಕಾರ್ಯಕ್ರಮಗಳು ನಡೆದುವು. ಕುಮಾರಿ ಮೀನಾಕ್ಷಿಯವರಿಂದ ಸಂಗೀತ, ಕುಮಾರಿ ವಸಂತ ಅವರಿಂದ ಕಾವ್ಯವಾಚನ 'ರಾಮಾಶ್ವಮೇಧ'ದಿಂದ, ಕುಮಾರಿ ಸುಗಂಧ, ಕುಮಾರಿ ಸುಶೀಲ ಅವರಿಂದ ಭರತನಾಟ್ಯ ನಡೆದುವು. ಬಳಿಕ ಶ್ರೀ. ಕೆ. ಆರ್. ವೆಂಕಟದಾಸಪ್ಪ, ಶ್ರೀ. ಕೆ. ವಿಶ್ವೇಶ್ವರಯ್ಯ ಮತ್ತು ಗೆಳೆಯರಿಂದ ವಾದ್ಯವಾದನ ನಡೆಯಿತು. ಈ ಕಾರ್ಯ ಕ್ರಮಗಳೆಲ್ಲವೂ ಸಭೆಗೆ ಮೆಚ್ಚಿಕೆಯಾಯಿತು.

## ಪರಿಷತ್ತಿನ ಸುದ್ದಿ

### ವರ್ಷಾಶನ ಮುಂದುವರಿಸಿದ್ದಕ್ಕಾಗಿ ಮೈಸೂರು ಸರಕಾರಕ್ಕೆ ಕೃತಜ್ಞತೆ

ಮೈಸೂರು ಶ್ರೀಮನ್ಮಹಾರಾಜರವರ ಘನ ಸರ್ಕಾರದವರು ಪರಿಷತ್ತಿನ ಪ್ರಾರ್ಥನೆಯನ್ನು ಲಾಲಿಸಿ ಈ ಜುಲೈ ತಿಂಗಳಿನಿಂದ ಮೂರು ವರ್ಷದ ವರೆಗೆ **ವರ್ಷಾಶನವನ್ನು (೩,೦೦೦ರೂ)** ಮುಂದು ವರಿಸಿರುತ್ತಾರೆಂದು ತಿಳಿಸಲು ಸಂತೋಷಿಸುತ್ತೇವೆ. ಈ ಉಪಕಾರ ಕ್ಕಾಗಿ ಶ್ರೀಮನ್ಮಹಾರಾಜರವರ ಘನ ಸರಕಾರಕ್ಕೆ ನಮ್ಮ ಕೃತಜ್ಞತಾ ಪೂರ್ವಕವಾದ ವಂದನೆಗಳನ್ನು ಪರಿಷತ್ತಿನ ಪರವಾಗಿ ಸಮರ್ಪಿಸುತ್ತೇವೆ.

### ಪರಿಷತ್ತಿನ ಸದಸ್ಯರ ಬೆಳವಣಿಗೆ

**ಉದ್ಧಾರಕರು (೧೦೦೦ ರೂ.):** ಶ್ರೀಮಾನ್ ಕೆ. ವೆಂಕಟ ಸ್ವಾಮಿ ಅವರು, ಬರ್ಮಾ ಆಯಿಲ್ ಕಂಪನಿಯ ಏಜೆಂಟರು ಮತ್ತು ಹಿರಿಯ ವ್ಯಾಪಾರಿಗಳು, ಅರಸೀಕೆರೆ.

**ಸಹಾಯಕ ಸದಸ್ಯರು (೧೦೦ ರೂ.):** ಶ್ರೀ.ಗಳಾದ ೧. ಡಿ. ಕೃಷ್ಣಯ್ಯಂಗಾರ್ ಅವರು, ಸಬ್ ರಿಜಿಸ್ಟ್ರಾರರು, ೭೬೪, ಭಕ್ಷಿ ಬಸಪ್ಪನವರ ಗಾರ್ಡನ್ಸ್, ಹಳೇ ಅಗ್ರಹಾರ, ಮೈಸೂರು. ೨. ಮೀರ್ ಸಫ್ದರ್ ಹುಸೇನ್; ಬಿ.ಎ. ಅವರು, ಜಿಲ್ಲಾಧಿಕಾರಿಗಳು, ಮಂಡ್ಯ. ೩. ಕೆ. ನಾರಾಯಣಮೂರ್ತಿ ಅವರು, ಡಿಸ್ಟ್ರಿಕ್ಟ್ ಎಕ್ಸೈಜ್ ಆಫೀಸರು, ಮಂಡ್ಯ. ೪. ಎಂ. ಆರ್. ಪುಟ್ಟಸ್ವಾಮಯ್ಯ, ಕಂಟ್ರಾಕ್ಟರು, ಅರಸೀಕೆರೆ.

**ಸಾಮಾನ್ಯ ಸದಸ್ಯರು (೩ ರೂ.):** ಶ್ರೀ.ಗಳಾದ ೧. ಕೆ. ಕೆ. ನರಹರಿ ಶರ್ಮ ಅವರು, ೨೨, ಎರಡನೆಯ ರಸ್ತೆ, ಶಂಕರಪುರಂ, ಬೆಂಗಳೂರು. ೨. ಎನ್. ಎಸ್. ಶಿವರಾಮಯ್ಯನವರು, ೧೧೩, ಗವೀಪುರದ ಗುಟ್ಟಹಳ್ಳಿ, ಬೆಂಗಳೂರು.

### ನಾಟಕ ವಾಚನ

ತಾರೀಖು ೧೨-೬-೪೩ನೆಯ ಶನಿವಾರ ಸಂಜೆ ೭ ಗಂಟೆಗೆ ಪರಿಷನ್ಮಂದಿರದಲ್ಲಿ ಶ್ರೀ. ಬಿ. ಎಸ್. ರಾಮರಾಯರು, **ಕೈಲಾಸಂ ಅವರ "ಅನುಕೂಲಕ್ಕೊಬ್ಬಣ್ಣ"** ನಾಟಕವನ್ನು ವಾಚನ ಮಾಡುವರು.

### ಮಹಿಳಾ ಶಾಖೆ

೬-೬-೪೩ನೆಯ ಭಾನುವಾರ ಸಂಜೆ ಶ್ರೀ. ಎಂ. ಆರ್. ಲಕ್ಷಮ್ಮ ಎಂ.ಎ. ಅವರು 'ಹಳ್ಳಿಗರ ಆಸ್ತಿ' ಎಂಬ ವಿಚಾರ ಭಾಷಣ ಮಾಡಿದರು. ಮೈಸೂರು ಮಹಾರಾಣಿಯವರ ಶಾಲೆಯ ಅಧ್ಯಾಪಕರಾದ ಶ್ರೀ. ಲಕ್ಷಮ್ಮ ಕೃಷ್ಣಪ್ಪ ಎಂ.ಎ. ಅವರು ಅಧ್ಯಕ್ಷತೆ ವಹಿಸಿದ್ದರು.

ಉಪನ್ಯಾಸಕರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು: "ಹಳ್ಳಿಗರು ಬಡವರು; ಆದರೆ ಅವರಲ್ಲಿ ಸಂಸ್ಕೃತಿಯ ಸಂಪತ್ತಿಗೆ ಕೊರತೆ ಇಲ್ಲ. ಅವರ ಭಾಷೆ ಅವರ ಭಾಗ್ಯ. ಹೆದ್ದೊರೆ, ಉರಿಮಾರಿ, ಕಣಿಕಾತಿ, ಮಾಯಗಾರ ಇಂತಹ ಪ್ರಿಯವಾದ ಶಬ್ದಗಳನ್ನು ಅವರಿನ್ನೂ ಕೈಬಿಟ್ಟಿಲ್ಲ. ಅವರ ಸರಳವಾದ ಹಾಡುಗಳು ಕತೆಗಳು ಲಾವಣಿಗಳು ಇವನ್ನು ಒರೆದು ನೋಡಿದರೆ ಅವು ಉತ್ತಮ ಸಾಹಿತ್ಯವೆಂದು ನಾವು ಮನಗಾಣುವೆವು. ಈ ಸಾಹಿತ್ಯವನ್ನು ನಮ್ಮ ಹಿರಿಯ ಸಾಹಿತಿಗಳು ಕೆಲವರು ತಕ್ಕಮಟ್ಟಿಗೆ ಸಂಗ್ರಹಿಸಿ ಅದನ್ನು ಕನ್ನಡ ಜನಕ್ಕೆ ನೀಡಿರುವರು. ಆದರೆ ಇನ್ನೂ ಈ ಕೆಲಸ ಬಹಳವಾಗಿ ಉಳಿದಿದೆ. ಹಳ್ಳಿ ಜನದ ಕಸುಬುಗಳ ರೀತಿನೀತಿಗಳನ್ನೂ ಅವರ ಗಿಡಮೂಲಿಕೆಗಳ ಉಪಯೋಗಜ್ಞಾನವನ್ನೂ ನಾವು ಮೆಚ್ಚಬೇಕು. ಕನ್ನಡ ದೇಶದ ಹಳ್ಳಿಹಳ್ಳಿಗಳಲ್ಲಿರುವ ದೇವಸ್ಥಾನಗಳು ಶಾಸನಕಲ್ಲುಗಳು ಹಳ್ಳಿಜನರ ದೊಡ್ಡ ಆಸ್ತಿ. ಅನೇಕ ಹಳ್ಳಿಗಳಲ್ಲಿ ಜನರು ಬಡತನಕ್ಕೆ ರೋಗಕ್ಕೆ ತುತ್ತಾಗಿ ಸೋತು ಕಂಗೆಟ್ಟುಹೋಗಿರುವ ಕಾರಣ ಅವರ ಈ ಸಿರಿಯನ್ನು ಅಚ್ಚುಕಟ್ಟಾಗಿ ಕಾಪಾಡಿಕೊಂಡು ಹೆಮ್ಮೆಪಡುವ ಶಕ್ತಿ ಅವರಲ್ಲಿ ಉಡುಗಿ ಹೋಗಿದೆ. ಅವರ ಬಡತನವನ್ನು ಬಗೆಹರಿಸಿದರೆ ಅವರು ಚಟುವಟಿಕೆಯಿಂದ ಎಚ್ಚತ್ತುಕೊಳ್ಳುವುದರಲ್ಲಿ ಸಂಶಯವಿಲ್ಲ"

ನಮ್ಮ ಆರ್ಥಿಕ ಸ್ಥಿತಿ ಬೇಗ ಒಂದು ಸ್ಥಿಮಿತಕ್ಕೆ ಬಂದು ಪ್ರತಿ ಹಳ್ಳಿಯೂ ಮೊದಲಿನಂತೆ ಸಂಸ್ಕೃತಿಯ ಕೇಂದ್ರವಾಗಲೆಂದು ಅಧ್ಯಕ್ಷರು ಬಯಸಿದರು.

೯-೬-೪೩ನೆಯ ಬುಧವಾರ ಸಂಜೆ ಶ್ರೀ. ವೇದವಲ್ಲಿ ವಾಸುದೇವನ್ ಅವರು ಸೊಗಸಾಗಿ ಸುಶ್ರಾವ್ಯವಾಗಿ ಹಾಡಿ ಸಭಿಕರನ್ನು ಆನಂದಗೊಳಿಸಿದರು.

## ಕನ್ನಡ ಸುದ್ದಿ

**ಕನ್ನಡ ಸಾಹಿತಿಗಳ ಸಂಘ: ಬೆಂಗಳೂರು**

ಕನ್ನಡ ಸಾಹಿತಿಗಳ ಸಂಘದ ಆಶ್ರಯದಲ್ಲಿ ಶ್ರೀ. ಆ. ನಾರಾಯಣಸ್ವಾಮಿ ಅಯ್ಯರವರು ಈ ತಿಂಗಳು ಆರನೆಯ ತಾರೀಖು ಭಾನುವಾರ ಬೆಳಗ್ಗೆ ಶ್ರೀ. ಗೋಪಾಲಕೃಷ್ಣರಾಯರ ಮನೆಯಲ್ಲಿ ರವೀಂದ್ರರ ಕೊನೆಯ ಕತೆಗಳಾದ 'ರವಿವಾರ' ಮತ್ತು 'ಶೇಷಕತೆ'ಗಳ ತಮ್ಮ ಕನ್ನಡ ಅನುವಾದವನ್ನು ಓದಿದರು.

**ಮಿತ್ರ ಸಂಘ: ಬೆಂಗಳೂರು**

ತಾ॥ ೬-೬-೪೩ರಲ್ಲಿ ಮಿತ್ರ ಸಂಘದ ಸಕಲ ಸದಸ್ಯರ ಸಭೆಯಲ್ಲಿ ನಡೆದ ಕಾರ್ಯಕಾರೀ ಸಮಿತಿಯ ಅಧಿಕಾರಿಗಳ (೧೯೪೩-೪೪) ಆಯ್ಕೆಗಳು:

ಅಧ್ಯಕ್ಷರು: ಶ್ರೀ. ಬೇಲಿ ವಾಸುದೇವಮೂರ್ತಿಗಳು, ಬಿ.ಎ., ಎಲ್ ಎಲ್.ಬಿ.
ಉಪಾಧ್ಯಕ್ಷರು: ಶ್ರೀ. ಎಚ್. ಎಸ್. ದೊರೆಸ್ವಾಮಿಯವರು, ಬಿ.ಎಸ್‌ಸಿ.
ಕಾರ್ಯದರ್ಶಿಗಳು: ಶ್ರೀ. ಬಿ. ವೆಂಕಟರಾಯರು, ಬಿ.ಎಸ್‌ಸಿ.,
ಶ್ರೀ. ಬಿ. ವಿ. ನಾರಾಯಣರಾಯರು, ಬಿ.ಎಸ್‌ಸಿ. (ಆನರ್ಸ್)
ಕೋಶಾಧ್ಯಕ್ಷರು: ಶ್ರೀ. ವೈ. ವಿ. ರಾಮದಾಸರು, ಬಿ.ಎಸ್‌ಸಿ.
ಸಮಿತಿಯ ಸದಸ್ಯರು: ಶ್ರೀ.ಗಳಾದ ಕೆ. ಎನ್. ದೊರೆಸ್ವಾಮಿಯವರು, ನೀಲಕಂಠರಾಯರು, ಬಿ.ಎಸ್‌ಸಿ., ಕೆ. ಲಕ್ಷ್ಮೀನಾರಾಯಣರಾಯರು.

**ಕನ್ನಡ ಸಾಹಿತ್ಯ ಸಂಘ: ಕಲ್ಬುರ್ಗಿ**

ತಾ॥ ೬-೬-೪೩ನೆಯ ಸಾಯಂಕಾಲ ಶ್ರೀ. ಕುರಡಿ ಬಸಣ್ಣನವರು ಕನ್ನಡ ಸಾಹಿತ್ಯ ಸಂಘಕ್ಕೆ ಸಂದರ್ಶನವನ್ನಿತ್ತರು. ಶ್ರೀಯುತರು ಸಂಘದ ಕಾರ್ಯ ಕಲಾಪಗಳನ್ನು ನೋಡಿ ಸಂತೋಷಪಟ್ಟು ೩೧ ರೂ.ಗಳನ್ನು ಕಾಣಿಕೆಯಾಗಿ ಕೊಟ್ಟದ್ದಲ್ಲದೆ, ಮುಂದೆಯೂ ಸಹಾಯ ಮಾಡುವದಾಗಿ ವಾಗ್ದಾನ ಮಾಡಿದ್ದಾರೆ.

೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧½
ಬಿಡಿ ಪತ್ರಿಕೆ: ೬ ಕಾಸು



ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೩೪

ಬೆಂಗಳೂರು: ಶುಕ್ರವಾರ, ಜೂನ್ ೧೮, ೧೯೪೩

## ವಸಂತ ಸಾಹಿತ್ಯೋತ್ಸವ

**ಅರಸೀಕೆರೆಯಲ್ಲಿ** ನಡೆದ ವಸಂತ ಸಾಹಿತ್ಯೋತ್ಸವ ಸಮಯದಲ್ಲಿ ಹಾಸನ ಜಿಲ್ಲಾಧಿಕಾರಿಗಳಾದ ಶ್ರೀ. ಎನ್.ಎಸ್. ಹಿರಿಯಣ್ಣಯ್ಯನವರು ಮಾಡಿದ ಪ್ರಾರಂಭ ಭಾಷಣದ ಸಾರಾಂಶ:—

ಪ್ರಾತಃಸ್ಮರಣೀಯರಾದ ಕೀರ್ತಿಶೇಷ ಎಚ್. ವಿ. ನಂಜುಂಡಯ್ಯನವರು, ಕರ್ಪೂರ ಶ್ರೀನಿವಾಸರಾಯರು, ನಮ್ಮ ಮುಂದೆ ಈಗ ಇರುವ ಸರ್ ಎಂ. ವಿಶ್ವೇಶ್ವರಯ್ಯನವರು ಮೊದಲಾದ ಹಲವಾರು ಕನ್ನಡ ಭಕ್ತರ ತಪಃಫಲವಾಗಿ ಕನ್ನಡ ಸಾಹಿತ್ಯ ಪರಿಷತ್ತು ಈಗ್ಗೆ ಸುಮಾರು ಮೂವತ್ತು ವರ್ಷಗಳ ಹಿಂದೆ ಸ್ಥಾಪಿತವಾಗಿ ತಮ್ಮ ಹಿರಿತನದ ಅರಿವನ್ನು ಮರೆತಿದ್ದ ಕನ್ನಡಿಗರ ಏಳಿಗೆಗೆ ಅಸ್ತಿಭಾರವನ್ನು ಹಾಕಿದರು. ಅಂದಿನಿಂದ ಕನ್ನಡನಾಡಿನ ಶುಭೋದಯವಾಗಿ ಅನೇಕ ನಾಡಭಕ್ತರ ಅವಿಶ್ರಾಂತ ಶ್ರಮದಿಂದಲೂ ಅರಮನೆ ಗುರುಮನೆಗಳ ಸಹಾನುಭೂತಿಯಿಂದಲೂ ಮಹತ್ಕಾರ್ಯಗಳು ಕೈಕೊಳ್ಳಲ್ಪಟ್ಟವೆ. ಪ್ರಾರಂಭದಲ್ಲಿ ಕೇವಲ ಪಂಡಿತ ಸಂಸ್ಥೆ ಎಂದೆನಿಸಿಕೊಂಡಿದ್ದ ಸಾಹಿತ್ಯ ಪರಿಷತ್ತು ನಾನಾ ಕಡೆಗಳಲ್ಲಿ ಕರ್ಣಾಟಕ ಸಂಘಗಳ ಸ್ಥಾಪನೆಯಿಂದಲೂ, ಸಾಮಾನ್ಯ ಜನರಿಗೆ ಅರ್ಥವಾಗುವಂತಹ ಅನೇಕ ತೆರದ ಗ್ರಂಥಗಳ ಪ್ರಕಟನೆಯಿಂದಲೂ ಮತ್ತು ನಾನಾ ಕಡೆಗಳಲ್ಲಿ ಉಪನ್ಯಾಸ ಮಾಲೆಗಳಿಂದಲೂ ಈಗ ಜನಜೀವನದ ಸರ್ವತೋಮುಖವಾದ ಅಭಿವೃದ್ಧಿಗೆ ಒಂದು ಮುಖ್ಯ ಅಂಗವಾಗಿ ಪರಿಣಮಿಸಿರುವುದು ಅತ್ಯಂತ ಸ್ತೋತ್ರಾರ್ಹವಾಗಿದೆ. ಅನೇಕ ಕಾರಣಗಳಿಂದ ನಮ್ಮ ಸಂಸ್ಕೃತಿಗೂ ಮತ್ತು ನಮ್ಮ ನಾಡಿನ ಜನಗಳ ದಿನಚರಿಗೂ ಒಂದು ವಿಧವಾದ ಪ್ರತ್ಯೇಕತ್ವ ಉಂಟಾಗಿದ್ದುದು ನಮ್ಮ ಏಳಿಗೆಗೆ ಒಂದು ಮುಖ್ಯವಾದ ಅಡಚಣೆಯಾಗಿತ್ತೆಂದು ಹೇಳಬಹುದು. ವಿದ್ಯೆ, ಸಾಹಿತ್ಯ, ಸಂಸ್ಕೃತಿ ಇವು ಶಾಲೆಗಳಿಗೂ ವಿಶ್ವವಿದ್ಯಾನಿಲಯಗಳಿಗೂ ಮೀಸಲು; ಹಳ್ಳಿಯಲ್ಲಿರುವ ಸಾಮಾನ್ಯ ಜನಗಳಿಗೆ ಅಜ್ಞಾನ, ನಿರಕ್ಷರತೆ, ಮುಂತಾದ ಕತ್ತಲೆಯ ಮುಸುಕು. ಇದೇ ನಮಗೆ ಕಾಣಿಸುತ್ತಿದ್ದ ಶೋಚನೀಯವಾದ ದೃಶ್ಯ. ದೇವರ ಕೃಪೆಯಿಂದಲೂ, ಮತ್ತು ನಮ್ಮ ಹಿರಿಯರ ತಪಃಪ್ರಭಾವದಿಂದಲೂ ಈಗೀಗ ಶುಭ ಸೂಚನೆಗಳು ಕಾಣುತ್ತಿವೆ. ಸಾಮಾನ್ಯ ಮನುಷ್ಯನು ತನ್ನ ರಾಜ್ಯಕ್ಕೆ ಬರುತ್ತಲಿದ್ದಾನೆ. ನಮ್ಮ ಕರ್ಣಾಟಕ ಪರಿಷತ್ತು ಈ ಅಮೌಲ್ಯವಾದ ಮತ್ತು ಅತ್ಯಂತ ಆಶಾದಾಯಕವಾದ ಕ್ರಾಂತಿಯಲ್ಲಿ ಒಂದು ಮುಖ್ಯ ಪಾತ್ರವನ್ನು ವಹಿಸುತ್ತಿರುವುದು ನಮ್ಮೆಲ್ಲರಿಗೂ ಹೆಮ್ಮೆಯಾಗಿದೆ. ನಮ್ಮ ವಿದ್ವಾಂಸರುಗಳೂ ಸಾಹಿತ್ಯ ಶ್ರೇಷ್ಠರೂ ಹಳ್ಳಿಗಳಿಗೆ ಹೋಗಬೇಕು. ಹಳ್ಳಿಯವರು ಸಾಧ್ಯವಾದಷ್ಟು ವಿಶ್ವವಿದ್ಯಾನಿಲಯಗಳಿಗೆ ಮತ್ತು ಸಂಸ್ಕೃತಿಯ ಕೇಂದ್ರಗಳಾದ ಪಟ್ಟಣಗಳಿಗೆ ಹೋಗಬೇಕು. ಈ ಪರಸ್ಪರ ಬಳಕೆಯಿಂದಲೇ ನಮ್ಮ ನಾಡಿಗೆ ಏಳಿಗೆ. ಕರ್ಣಾಟಕ ಮಾತೆಯ ಸಂದೇಶ ಇಡಿಯ ನಾಡಿನ ಮೂಲೆ ಮೂಲೆಗಳಿಗೂ ಹರಡಬೇಕಾದರೆ ಈ ಭಾವನೆಯಿಂದ ಇಂತಹ ಉತ್ಸವಗಳು ಇನ್ನು ಮುಂದೆ ಹಳ್ಳಿ ಹಳ್ಳಿಗಳಲ್ಲೂ ನಡೆಯಬೇಕೆಂದು ಆಶಿಸುತ್ತೇನೆ. ಈ ಕರ್ಣಾಟಕ ಸಾಹಿತ್ಯ ಚಳುವಳಿಯನ್ನು ಪೂರ್ತಿ ಫಲಗೊಳಿಸಬೇಕಾದರೆ, ಅದಕ್ಕೂ ಸರ್ಕಾರದ ಮತ್ತು ಖಾಸಗಿ ಪಕ್ಷಗಳಿಂದ ನಡೆಸಲ್ಪಡುತ್ತಿರುವ ನಾನಾ ಗ್ರಾಮೋದ್ಧಾರ ಕಾರ್ಯಗಳಿಗೂ ನಿಕಟಬಾಂಧವ್ಯವನ್ನು ಉಂಟುಮಾಡಬೇಕು. ಇದನ್ನು ಸಾರ್ಥಕಗೊಳಿಸಬೇಕಾದರೆ ಯಾವ ರೀತಿ ಕಾರ್ಯಕ್ರಮಗಳನ್ನು ಕೈಕೊಳ್ಳಬೇಕೆಂಬ ವಿಚಾರವನ್ನು ಹಿರಿಯರೂ, ಸಾಹಿತ್ಯಾಭಿಮಾನಿಗಳೂ ಆದ ಶ್ರೀ. ಮಾಸ್ತಿಯವರಿಂದಲೂ ಮತ್ತು ನಮ್ಮ ಇತರ ಮಾನ್ಯ ಅತಿಥಿಗಳಿಂದಲೂ ಬರಬಹುದಾದ ಸಲಹೆಗಳನ್ನು ಕೇಳಲು ನಾವೆಲ್ಲರೂ ಕುತೂಹಲದಿಂದಿದ್ದೇವೆ.

ಈ ಸಮಯದಲ್ಲಿ ಕರ್ಣಾಟಕ ರತ್ನಸಿಂಹಾಸನ ಮಂಡಿತರಾದ ಮೈಸೂರೊಡೆಯರು ಸಾಹಿತ್ಯ ಪೀಠದಲ್ಲಿಯೂ ಮಂಡಿಸಿ ಬದ್ಧಕಂಕಣರಾಗಿ ನಿಂತಿರುವುದನ್ನು ಸ್ಮರಿಸುವುದು ನಮ್ಮ ಕರ್ತವ್ಯ. ಈ ಕರ್ಣಾಟಕ ಚಳುವಳಿಯನ್ನು ಹೂಡಿದ ನಮ್ಮ ಹಿರಿಯರ ಶ್ರಮ ಸಾರ್ಥಕವಾಯಿತೆಂದೂ ನಮ್ಮ ಮೈಸೂರು ಸಿಂಹಾಸನ ಬೃಹತ್ಕರ್ಣಾಟಕದ ಶಿರೋಮಣಿಯಾಗಿ ಪ್ರಜ್ವಲಿಸುವುದೆಂದೂ ನಂಬಿರುವ ಆಶಾವಾದಿಗಳಲ್ಲಿ ನಾವುಗಳೂ ಸೇರಿದ್ದೇವೆ. ಕನ್ನಡ ನಾಡು ನುಡಿಗಳ ಈ ಹುಚ್ಚು ಸರ್ವತ್ರ ಸಾಂಕ್ರಾಮಿಕವಾಗಿ ಏರ್ಪಡಲಿ, ಗರ್ಭಗುಡಿಯಲ್ಲೇ ಇದ್ದು ಭಕ್ತರಿಂದ ಸೇವೆ ಹೊಂದುತ್ತಿದ್ದ ಕರ್ಣಾಟಕ ಸಾಹಿತ್ಯ ದೇವತೆ ಇನ್ನು ಮುಂದೆ ಉತ್ಸವ ಮೂರ್ತಿಯಾಗಿ ಹಳ್ಳಿ ಹಳ್ಳಿಗೂ ಬಿಜಮಾಡಲಿ. ಹಿಂದೆ ಹಿರಿದಾಗಿ ಬಾಳಿ ಈಗ ಕಡುಬಡವಾಗಿರುವ ಕನ್ನಡ ನಾಡು ಬೇಗ ಮಂಗಳದ ಮನೆಯಾಗಲಿ ಎಂಬುದೇ ನಮ್ಮ ಆಕಾಂಕ್ಷೆ, ನಮ್ಮ ನಿರೀಕ್ಷಣೆ. ಧರೆ ಜ್ಞಾನ ಧರ್ಮಗಳಿಂದ ಬಾಳಲಿ. ಶ್ರೀ ಜಯನು ನಿಡುಕಾಲ ನಮ್ಮನ್ನಾಳಲಿ. ಕನ್ನಡಿಗರ ಉಸಿರಾಗಿ ಕನ್ನಡ ಬಾಳಲಿ ಎಂಬ ಪ್ರಾರ್ಥನೆಯಿಂದ ಈ ವಸಂತೋತ್ಸವವನ್ನು ಪ್ರಾರಂಭಿಸುತ್ತೇನೆ.

**ಚೆನ್ನರಾಯಪಟ್ಟಣದಲ್ಲಿ** ನಡೆದ ಉತ್ಸವ ಕಾಲದಲ್ಲಿ ಸ್ವಾಗತ ಸಮಿತಿಯ ಅಧ್ಯಕ್ಷರಾದ ಶ್ರೀ. ಎನ್. ದೇವರಾಜೇ ಅರಸಿನವರು ಮಾಡಿದ ಭಾಷಣದ ಸಾರಾಂಶ.

ಸಂಘ ಹುಟ್ಟಿ ಇಂದಿಗೆ ಹತ್ತು ವರ್ಷಗಳು ತುಂಬಿದವು. ಒಂದು ಸಂಸ್ಥೆಯ ಜೀವನದಲ್ಲಿ ಇದೇನೂ ಅಷ್ಟು ದೊಡ್ಡ ಕಾಲವಲ್ಲದಿದ್ದರೂ ಪರಿಮಿತ ಜೀವಿಗಳಾದ ವ್ಯಕ್ತಿಗಳ ಜೀವಮಾನದಲ್ಲಿ ಇದು ಗಣನೀಯವಾದ ಕಾಲವೆಂಬುದರಲ್ಲಿ ಅಭ್ಯಂತರವಿಲ್ಲ. ಸಂಘದ ಇಷ್ಟು ಕಾಲದ ಆಯುಷ್ಯದಲ್ಲಿ ಅನೇಕ ಮಾನ್ಯ ವಿದ್ವಾಂಸರು ಇಲ್ಲಿಗೆ ದಯಮಾಡಿಸಿದ್ದಾರೆ. ೧೦ ವರ್ಷದಲ್ಲಿ ಮುನ್ನೂರಕ್ಕೆ ಮೇಲ್ಪಟ್ಟ ಕಾರ್ಯಕ್ರಮಗಳು ನಡೆದಿವೆ. ಸಂಘದವರು ಅನೇಕ ನಾಟಕಗಳನ್ನು ಶ್ರೇಷ್ಠ ರೀತಿಯಲ್ಲಿ ಅಭಿನಯಿಸಿದ್ದಾರೆ. ಸಣ್ಣ ಕಥೆಗಳ ಸಂಗ್ರಹವೊಂದನ್ನು ಅಚ್ಚುಹಾಕಿಸಿದ್ದಾರೆ. ಇವೆಲ್ಲವೂ ಅಸಾಧಾರಣವಾದ ಕೆಲಸಗಳೇ. ಕೇವಲ ನಾಲ್ಕು ಸಾವಿರ ಪ್ರಜಾ ಸಂಖ್ಯೆಯುಳ್ಳ ಸಣ್ಣ ಊರಿನಲ್ಲಿ ಇಂತಹ ಸಂಸ್ಥೆಯೊಂದನ್ನು ಕಟ್ಟಿ ನಡಸುವುದು ಸುಲಭದ ಮಾತೇನೂ ಅಲ್ಲ. ಆದರೂ ಆಗಾಗ ಸಂಘಕ್ಕೆ ಕಷ್ಟದ ದಿವಸಗಳು ಒದಗದೇ ಹೋಗಿಲ್ಲ. ೧೦ ವರ್ಷಗಳೂ ಅದರ ಕಾರ್ಯಕ್ರಮ ಒಂದೇ ಗತಿಯಲ್ಲಿ ನಡೆಯುತ್ತ ಬಂದಿದೆಯೆಂದು ಹೇಳಲಾಗುವುದಿಲ್ಲ.

ನಮ್ಮ ನಗರದ ಮಹಾಜನರು ತುಂಬಾ ಉದಾರವಾಗಿ ಶಕ್ತಿ ಮೀರಿ ಸಹಾಯ ಮಾಡಿದ್ದಾರೆ; ಮಾಡುತ್ತಿದ್ದಾರೆ. ಸ್ಥಳೀಯ

(೧೭೫ನೆಯ ಪುಟಕ್ಕೆ)

# ಕನ್ನಡ ನುಡಿ

**ಶುಕ್ರವಾರ, ಜೂನ್ ೧೮, ೧೯೪೩**

## ಪರಿಷತ್ತಿನ ಉದ್ಧಾರಕರು

ಅರಸೀಕೆರೆಯ ಹಿರಿಯ ವ್ಯಾಪಾರಿಗಳೂ, ಅಲ್ಲಿಯ ಕರ್ನಾಟಕ ಸಂಘದ ಅಧ್ಯಕ್ಷರೂ ಆದ ಶ್ರೀ. ಕೆ. ವೆಂಕಟಸ್ವಾಮಿ ಅವರು ಪರಿಷತ್ತಿಗೆ ೧,೦೦೦ ರೂಪಾಯಿಗಳನ್ನು ನೀಡಿ **ಉದ್ಧಾರಕ** ವರ್ಗದ ಸದಸ್ಯರಾಗಿದ್ದಾರೆಂಬ ಸಂತೋಷದ ಸುದ್ದಿಯನ್ನು ಕಳೆದ ಸಂಚಿಕೆಯಲ್ಲಿಯೆ ತಿಳಿಸಿತ್ತು. ಇವರ ಈ ಹಿರಿಯ ದಾನಕ್ಕಾಗಿ ಪರಿಷತ್ತು ಕೃತಜ್ಞತೆಯ ವಂದನೆಗಳನ್ನು ಅರ್ಪಿಸುತ್ತದೆ.

### ಕರ್ನಾಟಕ ಸಂಘ, ಅರಸೀಕೆರೆ

ಅರಸೀಕೆರೆ ಕರ್ನಾಟಕ ಸಂಘಕ್ಕೆ ಕಟ್ಟಡವನ್ನು ಕಟ್ಟಿಸಲು ಏರ್ಪಾಟು ನಡಸುತ್ತಿರುವುದಾಗಿಯೂ ಈಗಾಗಲೇ ೨,೦೦೦ ರೂ.ಗಳ ಸಂಗ್ರಹವಾಗಿರುವುದಾಗಿಯೂ ಕೇಳುತ್ತೇವೆ. ಮೈಸೂರು ಬ್ಯಾಂಕಿನ ಅರಸೀಕೆರೆ ಶಾಖೆಯ ವ್ಯವಸ್ಥಾಪಕರಾದ ಶ್ರೀ. ಟಿ. ಸುಬ್ಬಕೃಷ್ಣಯ್ಯನವರೂ ಸ್ಥಳದ ಇತರ ಮಾನ್ಯ ಮಹನೀಯರೂ ಸಂಘಕ್ಕೆ ನೆರವಾಗಿ ಉಪಕಾರ ಮಾಡುತ್ತಿದ್ದಾರೆ. ಪರಿಷತ್ತಿನ ಕೆಲಸ ನಾಡಿನಲ್ಲೆಲ್ಲ ಪರಿಣಾಮಕಾರಿಯಾಗಿ ನಡೆಯಲು ಅದರೊಂದಿಗೆ ಕರ್ನಾಟಕ ಸಂಘಗಳೂ ನಾಡಿಯ ಹಾಗೆ ದುಡಿಯಬೇಕಾಗಿದೆ.

ಪರಿಷತ್ತಿನ ಅಂಗಸಂಸ್ಥೆಯಾದ ಶಿವಮೊಗ್ಗ ಕರ್ನಾಟಕ ಸಂಘ ಸ್ವಂತ ಕಟ್ಟಡ ಕಟ್ಟಿ ಕನ್ನಡವ ಕೆಲಸವನ್ನು ಚೆನ್ನಾಗಿ ಮಾಡುತ್ತಿರುವುದು. ಈ ಸಂಘದ ಮೇಲ್ಪಂಕ್ತಿ ನಾಡಿನ ಇತರ ಸಂಘಗಳಿಗೆ ಸ್ಫೂರ್ತಿಯನ್ನು ಕೊಡುವಂಥದಾಗಿದೆ. ಈ ಒಂದೊಂದು ಸಂಘಕ್ಕೂ ಸ್ಥಳದ ಕನ್ನಡ ಅಭಿಮಾನಿಗಳಾದ ಶ್ರೀಮಂತರ ಹಾಗೂ ಮಹಾಜನರ ತುಂಬು ಪ್ರೋತ್ಸಾಹ ಒದಗಿಬಂದು ಶಾರದೆಯ ಗುಡಿಗಳು ಎಲ್ಲೆಲ್ಲೂ ಹಬ್ಬಿ ಕನ್ನಡದ ಕೆಲಸ ಸಂತತವಾಗಿ ನಡೆಯುವಂತಾಗಲೆಂದು ಹಾರೈಸುತ್ತೇವೆ.

## ವಯಸ್ಕರಿಗಾಗಿ ರಾಮಾಯಣ ಪ್ರಕಟನೆ

ಮೈಸೂರು ಸಂಸ್ಥಾನದ ಅಕ್ಷರ ಪ್ರಚಾರ ಸಮಿತಿಯವರು ಇದುವರೆಗೆ ಅಕ್ಷರಸ್ಥರನ್ನಾಗಿ ಮಾಡಿರುವ ವಯಸ್ಕರಿಗಾಗಿ ಕೆಲವು ಪುಸ್ತಕಗಳನ್ನು 'ವಯಸ್ಕರ ಪುಸ್ತಕ ಮಾಲೆ'ಯಾಗಿ ಪ್ರಕಟಿಸುತ್ತಿದ್ದಾರಷ್ಟೆ. ಅಕ್ಷರ ಕಲಿತವರು ಈ ಪುಸ್ತಕಗಳನ್ನು ಓದುವ ಆಸಕ್ತಿಯನ್ನು ತೋರಿಸುತ್ತಿದ್ದರೂ "ನಮಗೆ ಓದುವ ಆಸೆ ಹುಟ್ಟಿಸಿದ್ದೀರಿ; ನಾವು ರಾಮಾಯಣ ಮಹಾಭಾರತಗಳನ್ನು ಓದುವಂತೆ ಸಹಾಯ ಮಾಡಿ. ಇಲ್ಲದಿದ್ದರೆ ನಾವು ಓದು ಕಲಿತು ಏನು ಸಾರ್ಥಕವಾಯಿತು?" ಎಂದು ಕೇಳುತ್ತಿದ್ದಾರಂತೆ. ಭರತ ಖಂಡದ ಸಂಸ್ಕೃತಿಯ ಎರಡು ಕಣ್ಣುಗಳಂತಿರುವ ಈ ಕಾವ್ಯಗಳಲ್ಲಿ ನಮ್ಮ ಜನ ಆಸಕ್ತಿ ತೋರಿಸುವುದು ಸಹಜವೆ. ನಡೆದ ಕತೆಯೊ ನಡೆಯದ್ದೊ ಅಂತೂ ವಾಲ್ಮೀಕಿ ವ್ಯಾಸರ ವಾಣಿಗಳು ಇಂದಿಗೂ ಭಾರತೀಯರ ಬದುಕನ್ನು ಹಸನಾಗಿಸಲು ಒದಗುತ್ತಿವೆ.

ಹೊಸದಾಗಿ ಅಕ್ಷರ ಕಲಿತ ವಯಸ್ಕರ ಈ ಬಯಕೆಯನ್ನು ನಡಸಿಕೊಡುವ ಉದ್ದೇಶದಿಂದ ಮೈಸೂರು ಅಕ್ಷರ ಪ್ರಚಾರ ಸಮಿತಿಯವರು ವಯಸ್ಕರ ಪುಸ್ತಕ ಮಾಲೆಯಲ್ಲಿ ಇಡಿಯ ರಾಮಾಯಣವನ್ನು ಕಥೆಯ ರೂಪದಲ್ಲಿ ಪ್ರಕಟಿಸುವ ಯೋಜನೆಯನ್ನು ಪರ್ಯಾಲೋಚಿಸುತ್ತಿದ್ದಾರೆ. ಸುಮಾರು ೧೫೦೦ ಪುಟಗಳ ಪ್ರಮಾಣದ ೧೨ ಸಂಪುಟಗಳಲ್ಲಿ ಒಟ್ಟು ರಾಮಾಯಣದ ಕತೆಯನ್ನು ಸುಲಭವಾದ ಗದ್ಯಶೈಲಿಯಲ್ಲಿ ಪ್ರಕಟಿಸಬೇಕೆಂಬ ಸಂಕಲ್ಪವಿದೆಯೆಂದು ಕೇಳುತ್ತೇವೆ. ಕತೆಯ ಸಂಗ್ರಹ ಧಾಟಿ ಮುಂತಾದ ವಿವರಗಳ ಬಗ್ಗೆ ಶ್ರೀಗಳಾದ ಡಿ. ವಿ. ಗುಂಡಪ್ಪನವರು, ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯನವರು, ರಾಜಸೇವಾಪ್ರಸಕ್ತ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು, ಡಿ. ಸಿ. ಸುಬ್ಬರಾಯಪ್ಪನವರು, ಬಿ. ವೆಂಕೋಬರಾಯರು, ಕೆ. ವಿ. ಪುಟ್ಟಪ್ಪನವರು, ಬಿ. ಆರ್. ಪುಟ್ಟನಂಜಪ್ಪನವರು, ತೀ. ನಂ. ಶ್ರೀಕಂಠಯ್ಯನವರು, ನಂ. ಶಿವರಾಮ ಶಾಸ್ತ್ರಿಗಳು – ಈ ಮಹನೀಯರ ಸಲಹೆಯನ್ನು ಕೋರಲಾಗಿದೆಯಂತೆ.

ಅಕ್ಷರ ಪ್ರಚಾರ ಸಮಿತಿಯ ಈ ಯೋಜನೆಗೆ ಗೆಲವಾಗಲೆಂದು ಹಾರೈಸುತ್ತೇವೆ. ರಾಮಾಯಣದಂತೆಯೆ ಮಹಾಭಾರತವನ್ನೂ ಇವುಗಳಂತೆಯೆ ಭರತಖಂಡದ ಸಂಸ್ಕೃತಿಯ ಪ್ರತಿನಿಧಿಗಳಾಗಿರುವ ಇತರ ಗ್ರಂಥಗಳನ್ನೂ ವಯಸ್ಕರ ಪುಸ್ತಕ ಮಾಲೆಯಲ್ಲಿ ಸೇರಿಸುವ ಸುಯೋಗ ಆದಷ್ಟು ಬೇಗ ಒದಗಿಬರಲೆಂದೂ ಹಾರೈಸುತ್ತೇವೆ.

## ವಿಶ್ವವಿದ್ಯಾನಿಲಯಕ್ಕೆ ಇನ್ನೊಂದು ಕನ್ನಡ ನಿಧಿ

ಆಯುರ್ವೇದ ಮತ್ತು ಯುನಾನಿ ವೈದ್ಯ ಪ್ರಸಾರಕ್ಕೆಂದು ಗ್ರಾಮೋದ್ಧಾರ ನಿಧಿಗೆ ಒಂದು ಲಕ್ಷ ರೂಪಾಯಿಗಳ ಉದಾರ ದಾನವನ್ನು ನೀಡಿರುವ ಬೆಂಗಳೂರಿನ ಪ್ರಸಿದ್ಧ ವಾಣಿಜ್ಯ ಪಟುಗಳಾದ ಶ್ರೀ. ಎಲ್. ಎಸ್. ವೆಂಕಾಜಿರಾಯರು ಈಚೆಗೆ ಮೈಸೂರು ವಿಶ್ವವಿದ್ಯಾನಿಲಯಕ್ಕೆ ೫,೦೦೦ ರೂಪಾಯಿಗಳನ್ನು ದಾನ ಮಾಡಿ, ಅದರ ಮೇಲೆ ಬರುವ ಬಡ್ಡಿಯಿಂದ, ಕನ್ನಡದಲ್ಲಿ ಹೆಚ್ಚು ಅಂಕಗಳನ್ನು ಪಡೆದು ಇಂಟರ್‌ಮೀಡಿಯೆಟ್ ತರಗತಿಯಲ್ಲಿ ಓದುವ ವಿದ್ಯಾರ್ಥಿಗಳಿಗೆ ವೇತನವನ್ನೂ ಕರ್ನಾಟಕ ಸಂಸ್ಕೃತಿಯ ವಿಷಯವಾಗಿ ಪ್ರಬಂಧಗಳನ್ನು ಬರಮಾಡಿಕೊಂಡು ಅವುಗಳಲ್ಲಿ ಅತ್ಯುತ್ತಮವೆನ್ನಿಸಿಕೊಳ್ಳುವ ಪ್ರಬಂಧಕ್ಕೆ ಬಹುಮಾನವನ್ನೂ ಕೊಡಬೇಕೆಂದು ತಮ್ಮ ಉದ್ದೇಶವನ್ನು ತಿಳಿಸಿರುತ್ತಾರೆ. ಈ ದಾನವನ್ನು ನಾವು ಬಹಳ ಸಂತೋಷದಿಂದ ಸ್ವಾಗತಿಸಿ, ದಾತರನ್ನು ಅಭಿನಂದಿಸುತ್ತೇವೆ. ಇದೇ ರೀತಿ ಇತರ ಶ್ರೀಮಂತರೂ ಕನ್ನಡದ ಮುನ್ನಡೆಗೆ ಬಿಡುಗೈಯಿಂದ ದಾನ ಮಾಡುತ್ತ ಉಪಕಾರ ಮಾಡಬೇಕೆಂದು ಪ್ರಾರ್ಥಿಸುತ್ತೇವೆ.

## ಅಭಿನಂದನೆ

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಮನಶ್ಶಾಸ್ತ್ರದ ಅಧ್ಯಾಪಕರಾಗಿರುವ ಶ್ರೀ. ಎನ್. ಎಸ್. ನಾರಾಯಣಶಾಸ್ತ್ರಿಗಳಿಗೆ ವಿಶ್ವವಿದ್ಯಾನಿಲಯ **ಡಿ.ಲಿಟ್.** ಎಂಬ ಪ್ರಶಸ್ತಿಯನ್ನು ಕೊಟ್ಟು ಗೌರವಿಸಿರುವುದೆಂದು ಕೇಳಿ ಕನ್ನಡಿಗರು ಸಂತೋಷಪಡುವುದರಲ್ಲಿ ಸಂದೇಹವಿಲ್ಲ. ಶ್ರೀ. ನಾರಾಯಣಶಾಸ್ತ್ರಿಗಳು ಹಿರಿಯ ಮನಶ್ಶಾಸ್ತ್ರಜ್ಞರು. ಅಲ್ಲದೆ ಅಭಿನಯ ಕಲೆಯಲ್ಲಿ ನುರಿತವರು. ಕನ್ನಡದಲ್ಲಿ ಮನಶ್ಶಾಸ್ತ್ರ ವಿಷಯದಲ್ಲಿ ಗ್ರಂಥರಚನೆ ಮಾಡಿರುವುವಲ್ಲದೆ 'ಪಂಚರಾತ್ರ' ಮುಂತಾದ ಕೃತಿಗಳನ್ನು ರಚಿಸಿದ್ದಾರೆ.

ಇವರು ಹಿಂದೆ ಅಖಿಲ ಭಾರತ ವೈಜ್ಞಾನಿಕ ಸಮ್ಮೇಳನದ ಮನಶ್ಶಾಸ್ತ್ರ ಶಾಖೆಯ ಅಧ್ಯಕ್ಷರಾಗಿ ದೇಶ ವಿದೇಶಗಳಲ್ಲಿ ಗೌರವ ಪಡೆದಿರುವರು.

ಹೀಗೆ ಮಾನ್ಯರಾಗಿರುವ ಮಹನೀಯರಿಗೆ ನಮ್ಮ ವಿಶ್ವವಿದ್ಯಾನಿಲಯದಿಂದ ದೊರೆತಿರುವ ಪ್ರಶಸ್ತಿಗಾಗಿ ಅವರನ್ನು ನಾವು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇವೆ. ಮೇಲಾಗಿ, ಈ ಪ್ರಶಸ್ತಿಯನ್ನು ಕೊಡುವ ಏರ್ಪಾಟನ್ನು ವಿಶ್ವವಿದ್ಯಾನಿಲಯ ರೂಢಿಗೆ ತಂದದ್ದು ಈಚೆಗೆ. ಮೊದಲನೆಯ ಪ್ರಶಸ್ತಿಯನ್ನು ಪಡೆದವರು ಶ್ರೀ. ನಾರಾಯಣಶಾಸ್ತ್ರಿಗಳೇ. ಆದ್ದರಿಂದ ಕನ್ನಡಿಗರ ಸಂತೋಷ ಇಮ್ಮಡಿ.

## ಸಾದರ ಸ್ವೀಕಾರ

**ಜಹನಾರ** (ಕವಿತೆ): ಬರೆದವರು ಮತ್ತು ಪ್ರಕಾಶಕರು: ಶ್ರೀ. ಎಸ್. ವಿ. ಪರಮೇಶ್ವರಭಟ್ಟ, ಎಂ.ಎ. ಅವರು, ಕನ್ನಡ ಅಧ್ಯಾಪಕರು, ಇಂಟರ್ ಮೀಡಿಯೆಟ್ ಕಾಲೇಜು, ತುಮಕೂರು.

ಕ್ರೌನ್ ಅಷ್ಟಪತ್ರ ೪೯ ಪುಟಗಳು. ಬೆಲೆ ಸಾ. ಪ್ರತಿ ೮ ಆಣೆ. ಸುಂದರ ಪ್ರತಿ ೧೨ ಆಣೆ.

### ವಸಂತ ಸಾಹಿತ್ಯೋತ್ಸವ

(೧೫೭ನೆಯ ಪುಟದಿಂದ)

ಅಧಿಕಾರಿ ವರ್ಗದವರು ಬೆಂಬಲ ಕೊಟ್ಟಿದ್ದಾರೆ. ಇವರೆಲ್ಲರ ಉಪಕಾರಗಳೂ ಚಿರಸ್ಮರಣೀಯವಾಗಿವೆ. ಮುಖ್ಯವಾಗಿ ವರ್ತಕ ಮಂಡಲಿಯವರ ಆರ್ಥಿಕ ಸಹಾಯ ಸ್ತೋತ್ರಾರ್ಹವಾಗಿದೆ.

ಯಾವಾಗಲೂ ನಮ್ಮ ನಾಡಿನ ಸೇವೆಯಲ್ಲಿ ನಿರತರಾಗಿ, ಕನ್ನಡ ಸಂಸ್ಕೃತಿಯ ಬೆಳಕನ್ನು ಎಲ್ಲ ಕಡೆಗೂ ಹರಡುತ್ತಿರುವ ಶ್ರೀಮಾನ್ ರಾಜಸೇವಾಸಕ್ತ ವೆಂಕಟೇಶಯ್ಯಂಗಾರ್ ಅವರ ಪರಿಚಯ ಹೊಸದಲ್ಲ. ನಮ್ಮ ನಾಡಿನಲ್ಲಿ ಅವರನ್ನರಿಯದ ಮಗುವಿಲ್ಲ. ಅವರ ವಿದ್ವತ್ತೂ, ಜ್ಞಾನವೂ ನಮ್ಮ ಜನದ ಅಭ್ಯುದಯಕ್ಕಾಗಿ ವಿನಿಯೋಗವಾಗುವಂತೆ ಸರ್ವೇಶ್ವರನು ಅನುಗ್ರಹಿಸಲಿ; ಅವರ ಸೇವಾ ಕಾರ್ಯ ನೂರ್ಮಡಿಯಾಗಿ ಹೆಚ್ಚಲಿ.

ನಮ್ಮ ಡಿಸ್ಟ್ರಿಕ್ಟಿನ ಡೆಪ್ಯುಟಿ ಕಮಿಷನರಾಗಿದ್ದ ಶ್ರೀ. ಎನ್. ಎಸ್. ಹಿರಿಯಣ್ಣಯ್ಯನವರು ಕನ್ನಡದಲ್ಲಿ ಬಹಳ ಆಸಕ್ತಿಯುಳ್ಳವರು. ಅದರ ಪುರೋಭಿವೃದ್ಧಿಗಾಗಿ ತುಂಬಾ ಪ್ರೋತ್ಸಾಹ ನೀಡುತ್ತಿದ್ದಾರೆ. ಅವರ ಆಶ್ರಯದಲ್ಲಿ ಎಲ್ಲ ಕಲೆಗಳೂ ಅಭಿವೃದ್ಧಿ ಹೊಂದುವುದರಲ್ಲಿ ಸಂದೇಹವಿಲ್ಲ. ಕಾರ್ಯ ಗೌರವದಿಂದ ಈ ದಿವಸ ಅವರು ಅಧ್ಯಕ್ಷತೆ ವಹಿಸಲು ಸಾಧ್ಯವಾಗದಿದ್ದುದಕ್ಕಾಗಿ ವಿಷಾದಿಸಬೇಕಾಗಿದೆ.

ಇಂದು ಉತ್ಸವದಲ್ಲಿ ಭಾಗ ವಹಿಸಲು ದಯಮಾಡಿಸಿರುವ ವಿದ್ವನ್ಮಿತ್ರರಿಗೆಲ್ಲ ನಮ್ಮ ವಂದನೆಗಳು ಸಲ್ಲಬೇಕಾಗಿವೆ.

ನಮ್ಮ ಸಂಘದ ಕೀರ್ತಿಗೆ ಕಾರಣರಾಗಿರುವವರು ತಾವೇ. ನಾವುಗಳಲ್ಲ. ಕಳೆದ ಹತ್ತು ವರ್ಷಗಳಲ್ಲಿ ನಮಗೆ ಬಗೆ ಬಗೆಯಲ್ಲಿ ಸಹಾಯ ಮಾಡಿರುವ ಮಹನೀಯರುಗಳನ್ನು ಮರೆಯುವಂತಿಲ್ಲ. ಸಂಘದ ಪ್ರಾರ್ಥನೆಯಂತೆ ಅನೇಕ ಕನ್ನಡ ಸಾಹಿತಿಗಳು ದಯಮಾಡಿಸಿ ಉಪನ್ಯಾಸಾದಿ ಕಾರ್ಯಕ್ರಮಗಳನ್ನು ನಡಸಿಕೊಟ್ಟಿರುತ್ತಾರೆ.

ಶ್ರೀಯುತರುಗಳಾದ ಸರ್ ಮಿರ್ಜಾ ಎಂ. ಇಸ್ಮಾಯಿಲ್, ಮೊತಮುದ್ ಉಲ್-ಮುಲ್ಕ್ ಎಂ. ಜಿ. ಮೇಖ್ರಿ, ಜೆ. ಎಂ. ಇಮಾಂ, ಟಿ. ರಾಮಯ್ಯ, ಎನ್. ಎಸ್. ಹಿರಿಯಣ್ಣಯ್ಯ, ಮಹಮ್ಮದ್ ಇಸ್ಮಾಯಿಲ್ ಷರೀಫ್ ಮೊದಲಾಗಿ ಅಧಿಕಾರಿ ವರ್ಗದವರು ಸಂಘಕ್ಕೆ ಬಗೆ ಬಗೆಯಾಗಿ ಸಹಾಯ ಮಾಡಿದ್ದಾರೆ. ಇವರೆಲ್ಲರಿಗೂ ನಾವು ಕೃತಜ್ಞರಾಗಿದ್ದೇವೆ.

ಈ ಉತ್ಸವದಲ್ಲಿ ಅಧ್ಯಕ್ಷತೆಯನ್ನು ವಹಿಸಿ ಕಾರ್ಯಕಲಾಪಗಳನ್ನು ನಡಸಿಕೊಡಬೇಕೆಂದು ನಮ್ಮ ಅಸಿಸ್ಟೆಂಟ್ ಇಂಜನೀಯರ್ ರವರಾದ ಶ್ರೀಮಾನ್ ಎಂ. ಕೃಷ್ಣಸ್ವಾಮಿಯವರನ್ನು ಪ್ರಾರ್ಥಿಸುತ್ತೇವೆ.

**ಹಳೇಬೀಡಿನಲ್ಲಿ** ವಸಂತ ಸಾಹಿತ್ಯೋತ್ಸವ ಜೂನ್ ೧೦ನೆಯ ಗುರುವಾರ ಶ್ರೀ ಹೊಯ್ಸಳೇಶ್ವರ ಸ್ವಾಮಿಯ ದೇವಸ್ಥಾನದಲ್ಲಿ, ಸಂಜೆ ೬–೩೦ಕ್ಕೆ ಪ್ರಾರಂಭವಾಯಿತು. ಗ್ರಾಮದ ಮಾನ್ಯ ಪುರುಷರೂ ಮಹಿಳೆಯರೂ ಮತ್ತು ಅಕ್ಕಪಕ್ಕದ ಗ್ರಾಮದವರೂ ಈ ಉತ್ಸವಕ್ಕೆ ದಯಮಾಡಿಸಿದ್ದರು.

ಶಾಲಾ ವಿದ್ಯಾರ್ಥಿನಿಯರಿಂದ ದೇವತಾ ಪ್ರಾರ್ಥನೆಯೂ, ಸ್ವಾಗತ ಗೀತೆಯೂ ನಡೆದುವು. ಅನಂತರ ಸಕಲೇಶಪುರದ ಸಬ್-ಡಿವಿಜನ್ ಅಧಿಕಾರಿಗಳಾದ ಶ್ರೀ. ಎನ್. ಲಕ್ಷ್ಮಣರಾಯರು ಪ್ರಾರಂಭ ಭಾಷಣ ಮಾಡಿದರು.

ಶ್ರೀ. ಎಸ್. ವಿ. ಶ್ರೀನಿವಾಸರಾಯರು ವಯಸ್ಕರ ವಿದ್ಯಾಭ್ಯಾಸದ ವಿಷಯದಲ್ಲಿ ಸ್ವಾರಸ್ಯವಾದ ಭಾಷಣ ಮಾಡಿದರು. ಶ್ರೀ. ಟಿ. ಆರ್. ಜಯರಾಯರು ಇಂಪಾಗಿ ಭಾರತ ವಾಚನ ಮಾಡಿದರು. ಅನಂತರ ಶ್ರೀ. ಕೆ. ವಿ. ರಾಘವಾಚಾರ್ಯರು 'ಜನ್ನನ ಯಶೋಧರ ಚರಿತ್ರೆ' ಯನ್ನು ಕುರಿತು ಉಪನ್ಯಾಸ ಮಾಡಿದರು.

೨ನೆಯ ದಿನ ಸಂಜೆ ಶ್ರೀ. ಕೆ. ಸಂಪದ್ಗಿರಿರಾಯರು ಭಗವದ್ಗೀತೆಯನ್ನು ಕುರಿತು ಉಪನ್ಯಾಸ ಮಾಡಿದರು. ಶ್ರೀ. ಟಿ. ಆರ್. ಜಯರಾಯರಿಂದ ಭಾರತ ವಾಚನವೂ ಮತ್ತು ದೇವರ ನಾಮಗಳ ಹಾಡಿಕೆಯೂ ಆದ ಮೇಲೆ ರಾಜಸೇವಾಪ್ರಸಕ್ತ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು "ಭಾರತೀಯ ಸಂಸ್ಕೃತಿಯ ಮುನ್ನೋಟ" ಎಂಬ ವಿಷಯವಾಗಿ ಉಪನ್ಯಾಸ ಮಾಡಿದರು.

ಅಧ್ಯಕ್ಷತೆ ವಹಿಸಿದ್ದ ಸಕಲೇಶಪುರದ ಸಬ್-ಡಿವಿಜನ್ ಅಧಿಕಾರಿಗಳಾದ ಶ್ರೀ. ಎನ್. ಲಕ್ಷ್ಮಣರಾಯರ ಭಾಷಣ ನಡೆಯಿತು. ಸ್ಥಳೀಯ ಸಂಘದ ಕಾರ್ಯದರ್ಶಿಗಳಾದ ಶ್ರೀ. ಎಚ್. ಪಿ. ಸುಬ್ಬರಾಯರು ಅಧ್ಯಕ್ಷರಿಗೂ ಸಾಹಿತ್ಯ ಪರಿಷತ್ತಿನವರಿಗೂ ಸಂಘದ ಪರವಾಗಿ ವಂದನಾರ್ಪಣೆಯನ್ನು ಸಲ್ಲಿಸಿದರು.

**ಚೆನ್ನರಾಯಪಟ್ಟಣದಲ್ಲಿ** ೧೩–೬–೪೩ನೆಯ ಭಾನುವಾರ ಸಂಜೆ ೬–೩೦ಕ್ಕೆ ವಸಂತ ಸಾಹಿತ್ಯೋತ್ಸವ ಪ್ರಾರಂಭವಾಯಿತು. ಅಧ್ಯಕ್ಷತೆ ವಹಿಸಲು ಸಮ್ಮತಿಸಿದ್ದ ಹಾಸನ ಜಿಲ್ಲಾಧಿಕಾರಿಗಳಾದ ಶ್ರೀ. ಎನ್. ಎಸ್. ಹಿರಿಯಣ್ಣಯ್ಯನವರು ಅನಿವಾರ್ಯಕಾರಣದಿಂದ ಉತ್ಸವಕ್ಕೆ ಬರಲು ಆಗಲಿಲ್ಲ. ಹೊಳೆನರಸೀಪುರದ ಸಬ್ ಡಿವಿಜನ್ನಿನ ಅಸಿಸ್ಟೆಂಟ್ ಎಂಜನಿಯರಾದ ಶ್ರೀ. ಎಂ. ಕೃಷ್ಣಸ್ವಾಮಿ, ಬಿ. ಇ. ಅವರು ಅಧ್ಯಕ್ಷತೆ ವಹಿಸಿ ಕಾರ್ಯಕ್ರಮಗಳನ್ನು ನಡಸಿ ಕೊಟ್ಟರು. (ವರದಿಯನ್ನು ಮುಂದಿನವಾರ ಕೊಡಲಾಗುವುದು)

ಪರಿಷತ್ತಿನ ಉಪಾಧ್ಯಕ್ಷರಾದ ಶ್ರೀ. ವೆಂಕಟೇಶ ಅಯ್ಯಂಗಾರ್ ಅವರು ಮಾತನಾಡಿ ಉತ್ಸವವನ್ನು ಯಶಸ್ವಿಯಾಗಿ ನಡಸಿಕೊಟ್ಟ ಮಹನೀಯರಯರನ್ನೆಲ್ಲ ಪರಿಷತ್ತಿನ ಪರವಾಗಿ ವಂದಿಸಿ, ಕೇಂದ್ರ ಸಂಸ್ಥೆಯಾದ ಪರಿಷತ್ತಿಗೆ ಸದಸ್ಯರಾಗಿ ಸಹಾಯ ಮಾಡಬೇಕೆಂದೂ ಸ್ಥಳದಲ್ಲಿ ಪರಿಷತ್ತಿನ ಶಾಖೆಯಂತೆ ದುಡಿಯುವ ಕರ್ನಾಟಕ ಸಂಘವನ್ನು ಬಲಪಡಿಸಬೇಕೆಂದೂ ಪ್ರಾರ್ಥಿಸಿದರು.

### ಗಾದೆಗಳು*

(ಶ್ರೀ. ಎಚ್. ಎಸ್. ಅಚ್ಚಪ್ಪನವರು, ಮೈಸೂರು)

'ರೂಢಿಯ ಮಾತೇ ಗಾದೆ; ನಾಡಿನ ನಡತೆಯೇ ನಿಯಮ' ಎಂಬ ಗಾದೆಯಿಂದ ಗಾದೆಯ ಹುಟ್ಟನ್ನು ನಾವು ಅರಿಯಬಹುದು. ನೀರಿನ ಸೆಳೆತಕ್ಕೆ ಸಿಕ್ಕಿದ ಕಲ್ಲುಗಳು ಬಹುಕಾಲಾನಂತರ ನುಣುಪಾಗುವಂತೆ, ನಿತ್ಯಜೀವನದಲ್ಲಿ ಬಳಕೆಯಲ್ಲಿರುವ ಅನೇಕ ಮಾತುಗಳು ಹಲವು ಕಾಲಾನಂತರ ಸಂಸ್ಕಾರಪಡೆದು ಗಾದೆಗಳಾಗುತ್ತವೆ.

ದೈನಂದಿನ ವ್ಯವಹಾರದಲ್ಲಿ ಬಳಕೆಯಲ್ಲಿರುವ 'ಕಡ ಹುಟ್ಟಿ ಬಡವ ಕೆಟ್ಟ'; 'ತುತ್ತು ತೂಕ ಕೆಡಿಸಿತು'; 'ತುಂಬಿದ ಕೊಡ ತುಳುಕುವುದಿಲ್ಲ' ಎಂಬ ನಾಣ್ಣುಡಿಗಳನ್ನು ಪರಿಶೀಲಿಸಿದರೆ ಗಾದೆಗಳು ಹೇಗೆ ಬೆಳೆದು ಅಭಿವೃದ್ಧಿಗೆ ಬರುತ್ತಿವೆ ಎಂಬುದು ವ್ಯಕ್ತವಾಗುವುದು. ಇಂಥ ಗಾದೆಗಳನ್ನು ಎಲ್ಲ ಭಾಷೆಗಳಲ್ಲಿಯೂ ಕಾಣಬಹುದು.

ಮಾನವನ ಸ್ವಭಾವ ಎಲ್ಲಾ ಭಾಗಗಳಲ್ಲಿಯೂ ಒಂದೇ ಎಂಬುದನ್ನೂ ಗಾದೆಗಳ ಸಾರೂಪ್ಯದಿಂದ ತಿಳಿಯಬಹುದು. 'ತುಂಬಿದ ಕೊಡ ತುಳುಕುವುದಿಲ್ಲ' ಎಂಬ ಕನ್ನಡ ಗಾದೆಗೆ ಸಮವಾದಿಯಾಗಿ ತಮಿಳಿನಲ್ಲಿ 'ನಿರೈಕ್ಕುಡಂ ನೀರ್ ತುಳುಂಬಾದು' ಎಂಬ ಗಾದೆಯೂ, ತೆಲುಗಿನಲ್ಲಿ 'ನಿಂಡುಕುಂಡ ತೊನಕದು' ಎಂಬ ಸಾಮತಿಯೂ ಇವೆ. ಒಂದೊಂದು ದೇಶದ ಮತ್ತು ಅಲ್ಲಿಯ ಜನಗಳ ವಿಶಿಷ್ಟ ಶೀಲ ಸ್ವಭಾವಗಳನ್ನು ಗಾದೆಗಳಿಂದ ಅರಿಯಬಹುದು. ಉದಾಹರಣೆಗಳು: 'ಉಪ್ಪಿಕ್ಕಿದವರನ್ನು ಮುಪ್ಪಿನ ತನಕ ನೆನೆ,' 'ನಾಡು ಬೆಳೆದರೆ ಹಾಡಿಕೊಂಡು ಉಣಬಹುದು', 'ಧರ್ಮಪ್ಪ ನಮ್ಮಪ್ಪ; ಕರ್ಮಪ್ಪ ನಿಮ್ಮಪ್ಪ.'

ಮಾನವನ ಮನಸ್ಸಿನಲ್ಲಿ ಸ್ಫುರಿಸುವ ಸೂಕ್ಷ್ಮವಾದ ಭಾವಗಳೂ ಪರಂಪರಾನುಗತವಾಗಿ ಬಂದಿರುವ ತತ್ತ್ವಾನ್ವೇಷಣದ ಸಾರವೂ, ಮಾನವನ ಮುನ್ನಡೆಗೆ ಸಹಕಾರಿಯಾದ ನೀತಿಯ ಅತ್ಯುತ್ತಮ ಅಂಶಗಳೂ ಗಾದೆಗಳಲ್ಲಿ ರೂಪುಗೊಂಡಿರುವುದು ಕಂಡುಬರುತ್ತವೆ. 'ಮನಸ್ಸಿನಂತೆ ಮಹದೇವ', 'ತನ್ನ ತಾನರಿತರೆ ಸುಜ್ಞಾನಿ', 'ರೀತಿ ತಪ್ಪಿದರೂ

* ಮಂಡ್ಯದಲ್ಲಿ (೫–೬–೪೩) ನಡೆದ ವಸಂತ ಸಾಹಿತ್ಯೋತ್ಸವದ ಸಂದರ್ಭದಲ್ಲಿ ಮಾಡಿದ ಭಾಷಣದ ಸಾರಾಂಶ.

ನೀತಿಯಿರಬೇಕು' ಎಂಬ ನಾಣ್ಣುಡಿಗಳು ಮೇಲಿನ ಅಭಿಪ್ರಾಯಗಳನ್ನು ಪುಷ್ಟೀಕರಿಸುತ್ತವೆ.

ವೇದಗಳು ಮಹರ್ಷಿಗಳ ಜ್ಞಾನಭಂಡಾರ ಹೇಗೊ ಹಾಗೆ ಗಾದೆಗಳು ಜನಸಾಮಾನ್ಯರ ಅನುಭವಾಮೃತ. 'ಗಾದೆಯ ಮರ್ಮ ಅರಿತವ ವೇದದ ಮರ್ಮ ಅರಿತಾನು' ಎಂದು ಹೇಳುವ ಮಾತಿನ ಸತ್ಯಾಂಶವನ್ನು 'ನೆಕ್ಕುವ ನಾಯಿಗೆ ಲಿಂಗವೇನು, ಪೀಠವೇನು?' ಎಂಬ ಪರಮಾರ್ಥ ತುಂಬಿ ತುಳುಕುತ್ತಿರುವ ಗಾದೆಯೊಂದನ್ನು ನೋಡಿದರೆ ತಿಳಿಯುತ್ತದೆ.

ನಾಲ್ಕು ಮಾತಿನಲ್ಲಿ ಹೇಳುವುದಾದರೆ, ಗಾದೆಗಳು ಮಾನವನ ಮುನ್ನಡೆಗೆ ಸಹಕಾರಿಯಾದ ಬೆಡಗಿನ ಮಾತುಗಳು; ಬೆಳಕಿನ ಕಿಡಿಗಳು. ಪ್ರತಿಯೊಬ್ಬರೂ ಅದನ್ನು ಶಾಸ್ತ್ರರೀತಿಯಲ್ಲಿ ಅರಿತು, ಅಭ್ಯಾಸದಲ್ಲಿ ತಂದು, ಅವುಗಳಲ್ಲಿ ಅಡಕವಾಗಿರುವ ಜ್ಞಾನವನ್ನು ಮನನ ಮಾಡಿಕೊಂಡು ತಮ್ಮಲ್ಲಿರುವ ನ್ಯೂನತೆಗಳನ್ನು ಹೋಗಲಾಡಿಸಿಕೊಂಡಲ್ಲಿ ಜೀವನವನ್ನು ಧರ್ಮಮಯವಾಗಿಯೂ ಸುಖಮಯವಾಗಿಯೂ ಮಾಡಿಕೊಳ್ಳಬಹುದು.

## ಪರಿಷತ್ತಿನ ಸುದ್ದಿ

### ಪರಿಷತ್ತಿನ ವಸಂತ ಸಾಹಿತ್ಯೋತ್ಸವಕ್ಕೆ ಸಹಾಯ

| | |
|---|---|
| ಸ್ಥಳೀಯ ಸಂಸ್ಥೆಗಳ ಸಚಿವರಾದ ಶ್ರೀ. ಎಚ್. ಬಿ. ಗುಂಡಪ್ಪ ಗೌಡರು | ೨೫ ರೂ. |
| ಬೆಂಗಳೂರು ಸಿಟಿ ಕೋ-ಆಪರೇಟಿವ್ ಬ್ಯಾಂಕ್ | ೨೫ ರೂ. |
| ದಿವಾನ್ ಬಹದ್ದೂರ್ ಶ್ರೀ. ಟಿ. ಭುಜಂಗರಾಯರು, ಬಸವನಗುಡಿ (ಹಿಂದೆ ಕೊಟ್ಟ ಹಣದ ಜತೆಗೆ) | ೩ ರೂ. |
| ಒಟ್ಟು | ೫೩ ರೂ. |

### ಪರಿಷತ್ತಿನ ಸದಸ್ಯರ ಬೆಳವಣಿಗೆ

**ಸಹಾಯಕ ಸದಸ್ಯರು (೧೦೦ ರೂ.)**: ಶ್ರೀ.ಗಳಾದ ಎಚ್. ಬಿ. ಗುಂಡಪ್ಪಗೌಡ, ಬಿ.ಎ., ಬಿ.ಎಲ್. ಅವರು, ಸ್ಥಳೀಯ ಸಂಸ್ಥೆಗಳ ಸಚಿವರು, ಬೆಂಗಳೂರು.

**ಸಾಮಾನ್ಯ ಸದಸ್ಯರು (೩ ರೂ.)**: ಶ್ರೀ. ಎಸ್. ರಾಮಚಂದ್ರರಾವ್ ಅವರು, ಸಬ್ ಅಸಿಸ್ಟೆಂಟ್ ಸರ್ಜನ್, ಮಿಂಟೋ ಆಸ್ಪತ್ರೆ, ಬೆಂಗಳೂರು.

ಅರಸೀಕೆರೆ, ಹಳೇಬೀಡು, ಬೇಲೂರು, ಹಾಸನ, ಚೆನ್ನರಾಯಪಟ್ಟಣ ಮೊದಲಾದ ಕಡೆಗಳಲ್ಲಿನ ಹಲವು ಮಹನೀಯರು ಪರಿಷತ್ತಿನ ಸದಸ್ಯರಾಗಿರುತ್ತಾರೆಂದು ತಿಳಿಸಲು ಸಂತೋಷವಾಗುತ್ತದೆ. ಇವರ ಹೆಸರುಗಳನ್ನು ಮುಂದಿನ ವಾರದ 'ನುಡಿ'ಯಲ್ಲಿ ಕೊಡಲಾಗುತ್ತದೆ.

## ಕನ್ನಡ ಸುದ್ದಿ

**ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ**

ಸಂಘದ ಕಾರ್ಯದರ್ಶಿಗಳು ಹೀಗೆ ಬರೆಯುತ್ತಾರೆ:

ಕರ್ನಾಟಕ ವಿದ್ಯಾವರ್ಧಕ ಸಂಘದ ಸಾಮಾನ್ಯ ಸಭೆಯ ವಾರ್ಷಿಕ ಅಧಿವೇಶನ ೨೭-೬-೧೯೪೩ನೆಯ ಭಾನುವಾರ ಸಾಯಂಕಾಲ ೪-೩೦ ಗಂಟೆಗೆ ಶ್ರೀ ಚಾಮರಾಜ ಮಂದಿರದಲ್ಲಿ ಸೇರುವುದು.

ವಿಷಯುಗಳು: ೧. ೧೯೪೨-೪೩ನೆಯ ವರುಷದ ಆಯವ್ಯಯ ಪತ್ರಿಕೆ ಮತ್ತು ವರದಿಯನ್ನು ಓದಿ ಸ್ವೀಕರಿಸುವುದು.

೨. ಗ್ರಂಥಕರ್ತರಿಗೆ ಸಲ್ಲಬೇಕಾಗಿದ್ದ ೮೫-೦-೦ ರೂ. ಗಳ ಬಗ್ಗೆ ಕಾರ್ಯಕಾರಿ ಮಂಡಲ ಮಾಡಿರುವ ನಿರ್ಣಯಕ್ಕೆ ಒಪ್ಪಿಗೆ ಕೊಡುವುದು.

೩. ಇನಾಮು ಫಂಡನ್ನು ಪ್ರತ್ಯೇಕ ನಿಧಿಯಾಗಿ ಏರ್ಪಡಿಸಿ ಈ ವರುಷದಲ್ಲಿ ನಾಲ್ಕು ನೂರು ರೂಪಾಯಿಗಳನ್ನು ಕಾಯಂ ಠೇವಾಗಿ ಇಡತಕ್ಕದ್ದೆಂದು ಕಾರ್ಯಕಾರಿ ಮಂಡಲ ಮಾಡಿರುವ ನಿರ್ಣಯವನ್ನು ಒಪ್ಪುವುದು.

೪. ೧೯೪೩-೪೪ರ ಬಗ್ಗೆ ಕಾರ್ಯಕಾರಿ ಮಂಡಲದವರು ಸಿದ್ಧಪಡಿಸಿದ ಆಯವ್ಯಯದ ಮುಂಗಡ ಪತ್ರಿಕೆಯ ಅಂಗೀಕಾರ.

೫. ೧೯೪೩-೪೪ನೆಯ ವರುಷದ ಬಗ್ಗೆ ಸಾಮಾನ್ಯ ಸಭೆಯ ಅಧಿಕಾರಿಗಳನ್ನೂ ಕಾರ್ಯಕಾರೀಮಂಡಲದ ಸದಸ್ಯರನ್ನೂ ಆ ಮಂಡಲದ ಅಧ್ಯಕ್ಷರನ್ನೂ ಆರಿಸುವುದು. ಗೌರವ ಲೆಕ್ಕಪರೀಕ್ಷಕರನ್ನು ನೇಮಿಸುವುದು.

೬. ಶಾಂತೇಶ ವಾಚನಾಲಯದ ಸಮಿತಿಗೆ ಒಬ್ಬರು ಕಾರ್ಯದರ್ಶಿಗಳು ಮತ್ತು ಇಬ್ಬರು ಸದಸ್ಯರ ಆಯ್ಕೆ.

೭. ಸಂಘದ ಬಹುಮಾನಕ್ಕಾಗಿ ಬರುವ ಗ್ರಂಥಗಳನ್ನು ಪರೀಕ್ಷಿಸಿ ಅಭಿಪ್ರಾಯವನ್ನು ಕೊಡಲು ವಿದ್ವಾಂಸ ಮಂಡಲವನ್ನು ನಿಯಮಿಸುವುದು.

೮. ಅಧ್ಯಕ್ಷರ ಅಪ್ಪಣೆಯಿಂದ ಇತರ ವಿಷಯುಗಳು.

**ಕನ್ನಡ 'ವರ್ಥ ಪ್ರಾಯಿಜ' ಪರೀಕ್ಷೆ — ೧೯೪೩**

ಧಾರವಾಡದ ಟ್ರೈನಿಂಗ್ ಕಾಲೇಜಿನ ಪ್ರಿನ್ಸಿಪಾಲರಾದ ಶ್ರೀ. ಎಚ್.ಎಸ್. ತೊರಗಲ್ ಅವರು ಹೀಗೆ ಬರೆಯುತ್ತಾರೆ:

ಈ ವರ್ಷದ ವರ್ಥ ಪ್ರಾಯಿಜ ಪರೀಕ್ಷೆ ತಾ. ೨೬-೮-೪೩ನೆಯ ಗುರುವಾರ ದಿವಸ ಪ್ರಾರಂಭವಾಗಿ ಮುಂದಿನ ಎರಡು ದಿವಸಗಳಲ್ಲಿಯೂ ನಡೆಯುವುದು.

ಈ ಪರೀಕ್ಷೆಗೆ ಕುಳಿತುಕೊಳ್ಳುವ ಉಮೇದುವಾರರು ತಮ್ಮ ಅರ್ಜಿಯನ್ನು ತಾ. ೧-೮-೪೩ಕ್ಕೆ ಅಥವಾ ಅದಕ್ಕೂ ಮೊದಲೆ ಮ|| ಎಜುಕೇಶನಲ್ ಇನ್‌ಸ್ಪೆಕ್ಟರ್ ದಕ್ಷಿಣಭಾಗ, ಧಾರವಾಡ ಅವರಿಗೆ ಮುಟ್ಟುವಂತೆ ಕಳುಹಿಸಿ ಕೊಡತಕ್ಕದ್ದು.

ಈ ಪರೀಕ್ಷೆಯ ಸಂಬಂಧದ ಹೆಚ್ಚಿನ ವಿವರಗಳನ್ನು ಪ್ರಾಥಮಿಕ ಶಿಕ್ಷಣ ಮಾಸಪತ್ರಿಕೆಯ ೧೯೪೨ನೆಯ ಇಸವಿಯ ಮೇ ತಿಂಗಳ ಸಂಚಿಕೆಯ ೨೫ನೆಯ ಪುಟದಲ್ಲಿಯೂ, ಕನ್ನಡ ನುಡಿಯಲ್ಲಿಯೂ (೨೪-೭-೧೯೪೨) ಪ್ರಕಟಿಸಲಾಗಿದೆ.

**ಹಾಸನ: ಕರ್ನಾಟಕ ಸಂಘ**

೧೬-೬-೪೩ನೆಯ ಬುಧವಾರ ಸಂಘದಲ್ಲಿ ಶ್ರೀ. ಕೆ. ವಿ. ರಾಘವಾಚಾರ್ಯರು ಜನ್ನನ 'ಯಶೋಧರ ಚರಿತೆ'ಯ ವಿಷಯವಾಗಿ ಉಪನ್ಯಾಸ ಮಾಡಿದರು. ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರೂ 'ಭಾರತೀಯ ಸಂಸ್ಕೃತಿಯ ಮುನ್ನೋಟ'ವನ್ನು ಕುರಿತು ಮಾತನಾಡಿದರು. ಜಿಲ್ಲಾಧಿಕಾರಿಗಳಾದ ಶ್ರೀ. ಎನ್. ಎಸ್. ಹಿರಿಯಣ್ಣಯ್ಯನವರು ಅಧ್ಯಕ್ಷತೆ ವಹಿಸಿದ್ದರು.

**ಶಿವಮೊಗ್ಗಾ: ಕರ್ನಾಟಕ ಸಂಘ**

೮-೬-೪೩ನೆಯ ಮಂಗಳವಾರ ಶ್ರೀ. ಕೆ. ಎಲ್. ಕಸ್ತೂರಿ ರಂಗಾಚಾರ್, ಎಂ.ಎಸ್‌ಸಿ. ಅವರು "ಕಾಳಿದಾಸ" ಎಂಬ ವಿಷಯವನ್ನು ಕುರಿತು ಉಪನ್ಯಾಸ ಮಾಡಿದರು.

೧೦-೬-೪೩ನೆಯ ಗುರುವಾರ ಶ್ರೀ. ರಾಜರತ್ನಂ ಅವರು "ಶಾಕ್ಯಪುತ್ರಿಯರು" ಎಂಬ ವಿಷಯವನ್ನು ಕುರಿತು ಉಪನ್ಯಾಸ ಮಾಡಿದರು.

**ಮಿತ್ರ ಸಂಘ: ಬೆಂಗಳೂರು**

ಶ್ರೀ. ಕೆ. ಎನ್. ದೊರೆಸ್ವಾಮಿಯವರು ೧೨-೬-೪೩ನೆಯ ಶನಿವಾರ ಕಾದಂಬರಿಗಳನ್ನು ಕುರಿತು ಉಪನ್ಯಾಸ ಮಾಡಿದರು. ಕನ್ನಡದಲ್ಲಿ ಪ್ರಕಟವಾಗಿರುವ ಕೆಲವು ಕಾದಂಬರಿಗಳನ್ನು ಉದಾಹರಿಸಿ ಕನ್ನಡ ಕಾದಂಬರಿಗಳ ಪ್ರಗತಿಯನ್ನು ಚಿತ್ರಿಸಿದರು.

### ಅಖಿಲ ಭಾರತ ಪ್ರಗತಿಶೀಲ ಬರಹಗಾರರ ಚತುರ್ಥ ಪರಿಷತ್ತು

ಅಖಿಲ ಭಾರತದ ಪ್ರಗತಿಶೀಲ ಬರಹಗಾರರ ಚತುರ್ಥ ಸಮ್ಮೇಳನ ಮೇ ತಾ|| ೨೨ರ ಮೊದಲ್ಗೊಂಡು ಮೂರು ದಿನಗಳ ತನಕ ಜರುಗಿತು. ೧೫೦ರಷ್ಟು ಮಂದಿ ಪ್ರತಿನಿಧಿಗಳು ದೇಶದ ವಿವಿಧ ಭಾಗಗಳಿಂದ ಬಂದು ನೆರೆದಿದ್ದರು. ಬಹುಮಂದಿ ಸಂದರ್ಶಕರಾಗಿ ಬಂದಿದ್ದರು.

ಅಖಿಲ ಭಾರತ ಪ್ರಗತಿಶೀಲ ಬರಹಗಾರರ ಸಂಘದ ಹೊಸ ಕಾರ್ಯಕಾರಿ ಸಮಿತಿಯ ಆಯ್ಕೆ ನಡೆಯಿತು. ಶ್ರೀ. ಸಜ್ಜದ್ ಜಹೀರ್ ಅಧ್ಯಕ್ಷರು, ಶ್ರೀಯುತರು ಅಬ್ಬಾಸ್ [ಮುಂಬಯಿ] ಮತ್ತು ವಿಷ್ಣು ದೇವ್ [ಕಲ್ಕತ್ತ] ಇವರು ಜತೆ ಕಾರ್ಯದರ್ಶಿಗಳು.

ಅಖಿಲ ಕರ್ನಾಟಕ ಪ್ರಗತಿಶೀಲ ಬರಹಗಾರರ ಸಂಘ ಮುಂಬಯಿಯ ಈ ಮಹನೀಯರನ್ನೊಳಗೊಂಡಿದೆ: ಶ್ರೀಯುತರು ವಿ. ಎಂ. ಇನಾಮದಾರ, ಕೃಷ್ಣಕುಮಾರ (ಜತೆ ಕಾರ್ಯದರ್ಶಿಗಳು), ಎಚ್. ಕೆ. ಎ. ಕುಂದ್ರನ್, ಎ. ವೆಂಕಟರಾವ್, ಎಚ್. ಎಸ್. ಪಾಟೀಲ್, ಕೆ. ಎನ್. ಗಾಯ್‌ತೊಂಡೆ, ಆರ್. ಎ. ದೇಶಪಾಂಡೆ, ಜಿ. ಕೆ. ಬೆಟಗೇರಿ (ಸದಸ್ಯರು), ಪ್ರೊ. ಆರ್. ವಿ. ಜಾಗೀರದಾರರು (ಅಧ್ಯಕ್ಷರು).

೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧
ಬಿಡಿ ಪತ್ರಿಕೆ: ೬ ಕಾಸು




ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೩೫

ಬೆಂಗಳೂರು: ಶುಕ್ರವಾರ, ಜೂನ್ ೨೫, ೧೯೪೩

## ಲಕ್ಕುಂಡಿ

(ಒಂದು ನೋಡತಕ್ಕ ಐತಿಹಾಸಿಕ ಸ್ಥಳ)

'ಹಿತ್ತಿಲ ಗಿಡ ಮದ್ದಲ್ಲ' ಎಂಬ ಗಾದೆಯಂತೆ ಹತ್ತಿರದ ಸ್ಥಳ ಮೆಚ್ಚಲ್ಲ ಎಂದೂ ಹೇಳಬಹುದು. ನಮ್ಮ ಸುತ್ತುಮುತ್ತು ಇರುವ ನೋಡತಕ್ಕ ಅನೇಕ ಸ್ಥಳಗಳನ್ನು ನಾವು ನೋಡದೆ ಇದ್ದುಬಿಡುತ್ತೇವೆ. ಇಡಿಯ ಕನ್ನಡ ನಾಡನ್ನು ನೋಡುವುದಿರಲಿ, ನಮ್ಮ ಊರಿನ ಹತ್ತು ಹರಿದಾರಿಯಲ್ಲಿದ್ದ ಸುಂದರ ಸ್ಥಳಗಳನ್ನು ಕನ್ನಡಿಗರಾದ ನಾವು ಕಂಡು ನಲಿಯದಿದ್ದರೆ ಕನ್ನಡ ದರ್ಶನವು ಬೆಳೆಯುವುದು ಹೇಗೆ?

ಒಂದು ದಿನ ಮಿತ್ರರೊಡನೆ ಮಾತಿನಲ್ಲಿ **ಲಕ್ಕುಂಡಿಯ** ವಿಷಯ ಹೊರಟಿತು. ಅಲ್ಲಿ ಅಸಂಖ್ಯ ಪ್ರಾಚೀನ ಗುಡಿಗಳಿವೆಯೆಂದು ಯಾರೋ ಹೇಳಿದರು. ಅದು ಎಷ್ಟು ದೂರ ಎಂದರೆ ಗದಗಿನಿಂದ ಆರೇ ಮೈಲು ಎಂದು ತಿಳಿಯಿತು. ಗದಗಿನಲ್ಲಿ ಈ ಬಿಡುವು ಕಳೆಯುತ್ತಿದ್ದ ನನಗೆ ಎಡವಿಬಿದ್ದರೆ ಲಕ್ಕುಂಡಿಯೆಂದಾಯಿತು. ಹಾಗಿದ್ದರೆ ಒಂದು ದಿನ ಅಲ್ಲಿಗೆ ಹೋಗುವುದು ಎಂದು ಗೊತ್ತಾಗಿ ಹತ್ತು ಹದಿನೈದು ಜನ ಕೂಡಿ ಹೊರಟೆವು. ಚಕ್ಕಡಿಯಲ್ಲಿ ಖಾದ್ಯ ಪದಾರ್ಥಗಳನ್ನಿಟ್ಟು ಎಲ್ಲರೂ ಕಾಲುನಡಿಗೆಯಿಂದ ಸಾಗಿ ದಾರಿ ಹಿಡಿದೆವು. ರೇಲ್ವೆ ಮೋಟರುಗಳ ಹಾವಳಿ ಹೆಚ್ಚಿದ ಈ ಕಾಲದಲ್ಲಿ ಕಾಲುನಡಿಗೆಯ ಧಾವತಿಯೂ ಒಂದು ಸುಖ ಕೊಟ್ಟಿತು. ಹಾದಿಯಲ್ಲಿ ಉಕ್ಕಿದ ಹುರುಪು–ಹರಟೆ–ನಗೆಗಳಿಂದ ಉಲ್ಲಾಸ ಮಿಕ್ಕಿತು. ಉದ್ದಕ್ಕೂ ಸೂರ್ಯನು ಕೃಪೆಮಾಡಿದನು, ಮೋಡದಲ್ಲಿ ಮರೆಯಾಗಿದ್ದು ಹಿತವಾದ ಬಿಸಿಲನ್ನು ಮಾತ್ರ ಶೋಧಿಸಿ ಕಳುಹುತ್ತಿದ್ದನು. ಲಕ್ಕುಂಡಿಯು ಕಣ್ಣಿಗೆ ಬಿದ್ದೊಡನೆ ಅದರ ಗುಡಿ ಶಿಖರಗಳು ಕೈಮಾಡಿ ಕರೆದವು. ಊರ ಮುಂದೆ ಹೋಗಲು ಅಲ್ಲಲ್ಲಿ ಖಿಲವಾಗಿ ಬಿದ್ದ ಮಣ್ಣಿನ ಕೋಟೆ ಗೋಡೆ ಕಂಡಿತು. ಕಂದುಕವಂತೂ ಮುಚ್ಚಿಹೋಗಿ ಈಗ ಹಾದಾಡುವ ದಾರಿಯಾಗಿದೆ. ಹೊಯ್ಸಳ ವೀರಬಲ್ಲಾಳನ ರಾಜಧಾನಿಯಾಗಿತ್ತೇ ಇದು ಎಂದು ಕೆಲ ಮಿತ್ರರು ನಗೆಯಾಡಿದರು. "ಹೌದು ಆಗಿನಂತೆ ಈಗಿಲ್ಲ ಇಷ್ಟೆ" ಎಂದು ಹೇಳಿದೆ. ಹೊಯ್ಸಳರ ಹಳೆಬೀಡು ಈಗ ಮಣ್ಣಿನ ಗೂಡಾಗಿದೆ. ಎಂದಮೇಲೆ ತೀರ ದಕ್ಷಿಣದಲ್ಲಿ ಸೈನಿಕ ಆಯಕಟ್ಟಿನ ರಾಜಧಾನಿಯಾದ ಲಕ್ಕುಂಡಿ ೬೦೦ ವರುಷಗಳಮೇಲೆ ಹೀಗಾಗಿದ್ದರೆ ಏನಚ್ಚರಿ? ನೀರುನಿಡಿ, ತೋಟದ ಪಟ್ಟಿಯಿಂದ ಊರು ಸಮೃದ್ಧವೆಂದು ತೋರಿತು. ಮುಸುಕಿನ ಬಾವಿಯ ತೋಟಕ್ಕೆ ಹೋಗಿ ಊಟದ ಪಂತಿಯನ್ನು ಸೊಗಸಾಗಿ ಮಾಡಿ ಮಿತ್ರಮಂಡಳಿಯು ಭಾರವಾದ ಹೊಟ್ಟೆಯಿಂದ ಗುಡಿಗಳನ್ನು ನೋಡಲು ನಡೆಯಿತು.

ಗುಡಿಗಳೆಲ್ಲ ಜಕಣಾಚಾರಿಯ ಕಟ್ಟಡಗಳೆಂದು ಹೆಸರಾಗಿವೆ. ಹೆಚ್ಚಾಗಿ ಹೊಯ್ಸಳರ ಕಾಲದಲ್ಲಿ ಅವು ನಿರ್ಮಿತವಾಗಿರಬೇಕು. ವಾಸ್ತುಶಿಲ್ಪದ ಬಗೆ ಬೇಲೂರು ಹಳೆಬೀಡುಗಳನ್ನು ನೆನಪಿಗೆ ತರುತ್ತದೆ. ಅಲ್ಲಿದ್ದುವು ಹೆಚ್ಚಾಗಿ ಶಿವಾಲಯಗಳು. ಮಾಣಿಕೇಶ್ವರ ಎಂಬಲ್ಲಿ ಲಿಂಗದ ಪಿಂಡಿಕೆಯಲ್ಲಿ ಹೊಳೆವ ಬೆಳಕಿನ ಬಿಂದುವು ಕತ್ತಲೆಯಲ್ಲಿಯೂ ಕಾಣುತ್ತದೆ. ಅಂಥ ಮಿರುಗಿನ ಹರಳನ್ನು ಅಲ್ಲಿ ಕೂಡಿಸಿದ್ದಾರೆ, ಅಂತೇ ಮಾಣಿಕೇಶ್ವರ ಎಂದು ಹೆಸರು. ಶಿವನ ಮೂರನೆಯ ಕಣ್ಣನ್ನು ಕಲಾವಿದ ಕಾಣಿಸಿದ್ದಾನೆ ಎಂದರು ಒಬ್ಬ ರಸಿಕರು. ಮುಂದೆ ಮಾಳವೇಶ್ವರ, ಸಿದ್ದೇಶ್ವರ ಮುಂತಾದ ದೇವಸ್ಥಾನಗಳನ್ನು ಲಗುಬಗೆಯಿಂದ ನೋಡಿದ್ದಾಯಿತು. ಅವುಗಳಲ್ಲಿ ತುಂಬ ಕನ್ನಡ ಶಿಲಾಶಾಸನಗಳಿವೆ. ಒಂದರಲ್ಲಿ 'ಲೊಕ್ಕಿಗುಂಡಿ' ಎಂದು ಸ್ಪಷ್ಟವಾಗಿ ಲಕ್ಕುಂಡಿಯ ಪ್ರಾಚೀನ ಹೆಸರನ್ನು ಕಾಣಿಸಿದೆ. ಆ ಹೆಸರು ಹೇಗೆ ಬಂತು ಎಂದು ಆಮೇಲೆ ಊರ ಹಿರಿಯರೊಡನೆ ಮಾತಾಡುವಾಗ ಲಕ್ಷಕುಂಡಗಳು ಅಲ್ಲಿದ್ದವೆಂದೂ ಅನೇಕ ಯಜ್ಞಯಾಗಗಳನ್ನು ಮಾಡಿದ ಅಗ್ರಹಾರವೆಂದು ಲಕ್ಕುಂಡಿಯ ಖ್ಯಾತಿಯಿರುವುದೆಂದೂ ತಿಳಿಯಿತು. ಅದರಿಂದ ಲೊಕ್ಕಿಗುಂಡಿ ಇದು ಲಕ್ಷಕುಂಡದ ಅಪಭ್ರಂಶವೆಂದು ಅರ್ಥವಾಯಿತು. ಕೃತಪುರಮಹಾತ್ಮೆಯಲ್ಲಿ ಲಕ್ಕುಂಡಿಗೆ 'ಲೋಖಂಡಪುರ' ಎಂದು ಹೇಳಿರುವುದಾಗಿ ಸಾಧಿಸುತ್ತಿದ್ದ ಮಿತ್ರರೊಬ್ಬರು ಈ ಹೊಸ ವ್ಯುತ್ಪತ್ತಿಗೆ ಬೆರಗಾದರು. ತಮ್ಮದು ನಿಜವಿರಬಾರದೇಕೆ ಎಂದು ಕೇಳಿದರು. "ಕೃತಪುರವೆಂಬುದು ಗದಗಿನ ಮೂಲ ಹೆಸರೆಂಬುದು ಎಷ್ಟು ನಿಜವೋ ಅಷ್ಟೇ ಲಕ್ಕುಂಡಿಗೆ ಲೋಖಂಡಪುರ ಎಂಬುದು" ಎಂದು ಹೇಳಿದೆ. ಹೆಸರುಗಳ ಸಂಸ್ಕೃತೀಕರಣವು ಎಲ್ಲ ಸ್ಥಳ ಪುರಾಣಕಾರರಿಂದ ಕನ್ನಡ ನಾಡಿನ ತುಂಬ ಆಗಿದೆ, ಕೆಲಮಟ್ಟಿಗೆ ಚರಿತ್ರೆಯನ್ನು ಮರೆಮಾಡಿದೆ. ಲಕ್ಕುಂಡಿಯ ಎಲ್ಲ ಗುಡಿಗಳಲ್ಲಿ ವಿಶ್ವೇಶ್ವರ ಗುಡಿಯೇ ಶ್ರೇಷ್ಠವಾದದ್ದು. ಅಂತೇ ದಕ್ಷಿಣದ ಕಾಶಿಯೆಂದು ಅದರ ಪ್ರಸಿದ್ಧಿ. ಗುಡಿ ಆಕಾರದಲ್ಲಿ ಚಿಕ್ಕದು, ಅಲ್ಲದೆ ಮೂರ್ತಿಶಿಲ್ಪದ ಕೆಲಭಾಗ ಮುಕ್ಕಾಗಿದೆ, ಮಸಕಾಗಿದೆ. ಆದರೂ ಅದರ ಅದ್ಭುತ ಕಲೆ ಇನ್ನೂ ಕೂಡ ಬೆರಗುಗೊಳಿಸುವಂತಿದೆ. ಮುಖ್ಯವಾಗಿ ಅದರ ಎರಡುಕಡೆ ಬಾಗಿಲುಗಳ ಚೌಕಟ್ಟುಗಳ ಪಟ್ಟಿಗಳನ್ನು ನೋಡಬೇಕು. ಅಲ್ಲಿಯ ಕೆತ್ತನೆಯ ಕೆಲಸದಲ್ಲಿ ಅಂಥ ನಯವಿದೆ, ವೈವಿಧ್ಯವಿದೆ, ವೈಭವವಿದೆ. ಒಂದು ದ್ವಾರಬಂಧಕ್ಕೆ ಒಂಬತ್ತು ಪಟ್ಟಿಗಳಿದ್ದು ಅದರಲ್ಲಿ ಬಗೆಬಗೆಯ ಮರಬಳ್ಳಿ, ಪಶುಪಕ್ಷಿ, ನೃತ್ಯಗೀತದ ನಿಲುವುಗಳನ್ನು ಕೆತ್ತಲಾಗಿದೆ. ಸಣ್ಣ ಎಡೆಯಲ್ಲಿ ಒಳಗೆ ಪೊಳ್ಳಿಟ್ಟು ಮಾಡಿದ ಕುಸುರುಗೆಲಸ ಶ್ಲಾಘ್ಯವಾಗಿದೆ. ಅಲ್ಲಲ್ಲಿಯ ಮೂರ್ತಿಗಳಲ್ಲಿ ಜೀವಕಳೆ ಎದ್ದುಕಾಣುತ್ತದೆ. ಕಂಬಗಳ ಕಟ್ಟುಗೆ, ಮೇಲ್ಮಟ್ಟಿನಲ್ಲಿಯ ಸಹಸ್ರದಲಕಮಲರಚನೆ ಸೊಗಸಾಗಿವೆ.

ನೇಮಿಜಿನನ ಬಸ್ತಿಯೊಂದಿದೆ. ಅದರ ಹೊರಗಡೆ ಬಯಲಿನಲ್ಲಿ ಎರಡು ಭಿನ್ನವಾದ ಜಿನಪ್ರತಿಮೆಗಳಿವೆ. ಬಸ್ತಿಯನ್ನು ನೋಡಿದರೆ ಅದು ಮೊದಲು ದೇವಸ್ಥಾನವಾಗಿರಬೇಕೆಂದು ತೋರಿತು. ಹಾಗೇ ನಾಗರೇಶ್ವರ ಗುಡಿಯನ್ನು ನೋಡಿದರೆ ಅದು ಮೊದಲು ಬಸ್ತಿಯಾಗಿರಬೇಕೆಂದು ತಿಳಿಯಿತು. ವೀರಭದ್ರ, ದುರ್ಗೆ, ಬಸವೇಶ್ವರ ಇವರ ಗುಡಿಗಳಲ್ಲದೆ ನಾರಾಯಣದೇವರ ಗುಡಿಯೊಂದಿದೆ. ಅದರ ಮೇಗಡೆಯ ಒಂದು ಕೋಣೆಯಲ್ಲಿದ್ದು ಹಣಮಂತರಾಯರೆಂಬ ಪ್ರಸಿದ್ಧ ಯೋಗಿಗಳು ತಪಸ್ಸುಮಾಡುತ್ತಿದ್ದರಂತೆ. ಸುಮಾರು ಇಪ್ಪತ್ತು ವರುಷಗಳ ಹಿಂದೆ ಅವರು ಕಾಶಿಯಲ್ಲಿ ಜಲಸಮಾಧಿಯನ್ನು ಹೊಂದಿದರು. ಈ ಎಂಟು ಹತ್ತು ಗುಡಿಗಳು ಈಗ ತಲೆದೋರುತ್ತವೆ. ಹಾಗಾದರೆ ಅಸಂಖ್ಯ ಗುಡಿಗಳೆಲ್ಲಿ? ಎಂದರೆ ಲಕ್ಕುಂಡಿಯ ಮನೆಮನೆಯ ಗೋಡೆ, ಹೊಲದ ಒಡ್ಡು ಮುಂತಾದ್ದರಲ್ಲಿ ಎಂದು ಉತ್ತರ. ಊರಲ್ಲಿ ಸುತ್ತಿ

(೧೭೯ನೆಯ ಪುಟಕ್ಕೆ)

# ಕನ್ನಡ ನುಡಿ

**ಶುಕ್ರವಾರ, ಜೂನ್ ೨೫, ೧೯೪೮**

## ಪ್ರಗತಿಪರ ಸಾಹಿತ್ಯ

ಈ ಸಂಚಿಕೆಯ ಬೇರೆ ಕಡೆಯಲ್ಲಿ ಅಖಿಲಭಾರತ ಪ್ರಗತಿಪರ (Progressive) ಬರಹಗಾರರ 'ನಾಲ್ಕನೆಯ ವಾರ್ಷಿಕ ಸಮ್ಮೇಳನದ ಕಾರ್ಯಕಲಾಪಗಳ ಸಂಕ್ಷೇಪ ವರದಿಯನ್ನು ಕೊಟ್ಟಿವೆ. ಸಮ್ಮೇಳನದಲ್ಲಿ ಭಾಗವಹಿಸಿದ ಬೇರೆ ಬೇರೆ ಭಾಷೆಗಳ ಪ್ರತಿನಿಧಿಗಳು ಮಾಡಿದ ಭಾಷಣಗಳನ್ನು ಗಮನಿಸಿದರೆ 'ಪ್ರತಿಕೂಲ ಮತ್ತು ಮರ್ದಕ ಶಕ್ತಿಗಳನ್ನು' ಪ್ರತಿಭಟಿಸುವ ಪ್ರಗತಿಪರವಾದ ಬರವಣಿಗೆ ನಮ್ಮಲ್ಲಿ ಹೆಚ್ಚಬೇಕೆಂಬ ಹಾರೈಕೆ ಆ ಮಾತುಗಳಲ್ಲಿ ಅಡಕವಾಗಿರುವುದು ಸ್ಪಷ್ಟವಾಗುವುದು.

ಹೊಸ ಬರವಣಿಗೆಯಲ್ಲಿ ನಾವೆಲ್ಲ ನಿರೀಕ್ಷಿಸುವ ಪ್ರಗತಿಗುಣವನ್ನು ಒಟ್ಟು ಭರತಖಂಡದ ದೃಷ್ಟಿಯಿಂದ ಮತ್ತು ಒಟ್ಟು ಜಗತ್ತಿನ ದೃಷ್ಟಿಯಿಂದ ಎರಡು ಬಗೆಯಾಗಿ ವಿವೇಚಿಸಬಹುದು.

ಈಗ ಭರತಖಂಡದಲ್ಲಿ ಬಿಡುಗಡೆಯ ಪ್ರಶ್ನೆ ಬಹು ಜರೂರಿನ ಪ್ರಶ್ನೆಯಾಗಿ ಎಲ್ಲರನ್ನೂ ಬಾಧಿಸುತ್ತಿದೆ. ರಾಜಕೀಯವಾಗಿ ಮಾತ್ರವಲ್ಲ, ಎಲ್ಲ ಕಡೆಯಿಂದಲೂ ಬಿಡುಗಡೆಹೊಂದಿ ಜನಜೀವನದ ಒಟ್ಟು ಮೇಲ್ಮೆಯನ್ನು ಸಾಧಿಸಲು ಇಂದು ಭಾರತ ತವಕಪಡುತ್ತಿದೆ. ಆದರೆ ಪ್ರಗತಿಗೆ ವಿರೋಧವಾಗಿ ಹೆಡೆಯೆತ್ತಿರುವ ಪ್ರತಿಗಾಮಿ (Reactionary) ಶಕ್ತಿಗಳನ್ನೆಲ್ಲ ಎದುರಿಸಿ ಮೊದ್ದ ಕಾಳಗವನ್ನೇ ಹೂಡಬೇಕಾಗಿದೆ. ಅಜ್ಞಾನ ನಿವಾರಣೆ; ಕುರುಡು ಸಂಪ್ರದಾಯಗಳ ವಿಸರ್ಜನೆ; ಕೆಲಸದಲ್ಲಿ ವಿವೇಕ; ನಡತೆಯಲ್ಲಿ ವಿನಯ ಔದಾರ್ಯಗಳು;—ಒಟ್ಟಿನಲ್ಲಿ, ಹೊರಪ್ರಭಾವವಾವುದಕ್ಕೋ ಒಳಗಾಗಿ ಹೊಲಬುಗೆಟ್ಟಿರುವ ನಮ್ಮ ಬದಕು ನಮ್ಮ ಪುರಾತನ ಸಂಸ್ಕೃತಿಯ ಪ್ರಸನ್ನತೆ ಗಂಭೀರತೆಗಳನ್ನು ಮರಳಿ ಪಡೆಯಲು ಮಾಡುವ ಕಾರ್ಯಕ್ಕೆ ಅಡ್ಡ ಬರುವವನ್ನೆಲ್ಲ ಧೈರ್ಯದಿಂದ ಎದುರಿಸಬೇಕಾಗಿದೆ.

ಹೀಗೆ ಪ್ರಗತಿವಿರೋಧ ಶಕ್ತಿಗಳ ಮರ್ದನ ಕಾರ್ಯ ವ್ಯಕ್ತಿಯ ಜೀವನದಲ್ಲಿ ಮೊದಲಾಗಿ ಇಡಿಯ ರಾಷ್ಟ್ರ ಜೀವನಕ್ಕೆ ಹರಡಬೇಕಾಗಿದೆ. ಭರತಖಂಡದ ಎಲ್ಲ ಪ್ರಾಂತಗಳೂ ಕೈಗೊಳ್ಳಬೇಕಾದ ಸಮಾನಯೋಜನೆ ಇದು. ಸಾಹಿತಿಯಾದವನು ಈ ಸಮಸ್ಯೆಗಳಿಂದ ದೂರವಿರುವುದು ಕಷ್ಟ. ಅವನ ಆಲೋಚನೆಯ ಸೀಮೆಗೆ ಈ ಸಮಸ್ಯೆಗಳು ಒಂದು ದಿನ ಅಲ್ಲ ಒಂದು ದಿನ ನುಗ್ಗಿ ಪರಿಹಾರವನ್ನು ಬೇಡುತ್ತವೆ. ಆದ್ದರಿಂದ ಇಂದು ಸಾಹಿತಿ ತನ್ನ ಪಾಲಿನ ಕರ್ತವ್ಯವನ್ನು ಅರಿತು ಧೈರ್ಯದಿಂದ ಅದನ್ನು ನಿರ್ವಹಿಸಬೇಕಾಗಿದೆ.

ಭಾರತದ ನಾನಾ ಪ್ರಾಂತಗಳ ಸಾಹಿತಿಗಳು ಈ ರಾಷ್ಟ್ರ ಸಮಸ್ಯೆಗಳಿಗೆ ಮನಸ್ಸುಕೊಟ್ಟಾಗ ಎಂಥ ಮನೋಧರ್ಮವನ್ನು ಮೈಗೂಡಿಸಿಕೊಳ್ಳಬೇಕೆಂಬುದನ್ನು ಮಹಾತ್ಮಾ ಗಾಂಧಿಯವರ ಮಾತುಗಳಲ್ಲಿ ಸಂಗ್ರಹಿಸಬಹುದು.

"ಹಿತವಾದ ಹುರುಡಿನಿಂದ ಕೂಡಿದ ಪ್ರಾಂತಭಾವನೆ ಮೊದಲಿಂದ ಇತ್ತು; ಮುಂದೆಯೂ ಇರುವುದು. ಹಿತಕರವಾದ 'ವೈಷಮ್ಯ'ಗಳು ಇಲ್ಲದೆ ಹೋಗಿದ್ದರೆ ಪ್ರತ್ಯೇಕ ಪ್ರಾಂತ ರಚನೆಯ ಕೂಗಿನಲ್ಲಿ ಅರ್ಥವಿಲ್ಲದೆ ಹೋಗುತ್ತಿತ್ತು. ಆದರೆ ನಮ್ಮ ಪ್ರಾಂತೀಯತೆ ಸಂಕುಚಿತ ಭಾವನೆಗಳಿಗೆ ಎಡೆಗೊಡಬಾರದು. ಭರತಖಂಡದ ಭಾಗಗಳೆ ಆಗಿರುವ ಈ ಪ್ರಾಂತಗಳ ಬೇರೆತನದಿಂದ ಒಟ್ಟು ನಾಡಿನ ಹಿತ ಬೆಳೆಯುವಂತಿರಬೇಕು. ರವೀಂದ್ರನಾಥ ಠಾಕೂರರ ಹಿರಿಯ ಸೇವೆ ವಂಗ ಪ್ರಾಂತಕ್ಕೆ ಹೆಸರು ತಂದಿದ್ದರೆ, ಹಾಗೆಯೆ ಭರತಖಂಡಕ್ಕೂ ತಂದಿದೆ. ದಾದಾಭಾಯಿ ನವರೋಜಿಯವರು ಪಾರಸಿಗಳಿಗಾಗಿ ಮಾತ್ರ ಬಾಳಲಿಲ್ಲ; ಮುಂಬಯಿ ನಗರಕ್ಕೆ ಮಾತ್ರವೆಂದು ಬದುಕಲಿಲ್ಲ. ಇಡಿಯ ಭರತ ಖಂಡದ ಯೋಗಕ್ಷೇಮಕ್ಕಾಗಿ ಅವರ ಬಾಳು ತೇಯಿತು......ನಾಡನ್ನು ಒಂದಕ್ಕೊಂದಕ್ಕೆ ಸಂಬಂಧವಿರದಂತೆ ಬೇರೆ ಬೇರೆಯಾಗಿ ವಿಭಾಗಿಸುವ ಒಂದೊಂದು ಪ್ರಯತ್ನವನ್ನೂ ನಾವು ವಿರೋಧಿಸಬೇಕು. ಸ್ವತಂತ್ರ ಚೈತನ್ಯಶಾಲಿಯಾದ ರಾಷ್ಟ್ರವಾಗಿ ಬೆಳೆದು, ಜಗತ್ತಿನ ಪ್ರಗತಿಗೆ ತನ್ನದೇ ಆದ ಒಂದು ವಿಶಿಷ್ಟ ರೀತಿಯಲ್ಲಿ ನೆರವಾಗುವುದು ಭರತಖಂಡದ ಹಣೆಯಲ್ಲಿ ಬರೆದಿದೆ. ನಮ್ಮ ದೇಶಾಭಿಮಾನಕ್ಕೆ ಎಂದಿಗೂ ಯಾವ ಮಜಲಿನಲ್ಲೂ ಪ್ರತ್ಯೇಕತೆಯ ಕಳಂಕ ಅಂಟಬಂದಿಲ್ಲ. ನಾವು ಭಾರತ ಪ್ರಜೆಗಳು ಮಾತ್ರವಲ್ಲ. ವಿಶ್ವಪ್ರಜೆಗಳು ಕೂಡ ಎಂದು ಹೇಳಬಲ್ಲ ಕಾಲ ಬಂದೇ ಬರಬೇಕು, ಬರುತ್ತದೆ. ಸ್ವತಂತ್ರ ಭಾರತದ ಪ್ರಜೆಗಳಿಗಾಗಿ ಬಾಳುವ ಮನೋಧರ್ಮವನ್ನು ಮೈಗೂಡಿಸಿಕೊಂಡ ಹೊರತು ಆ ಕಾಲ ಬರುವುದಿಲ್ಲ. ವಿಷಮಯವಾದ ಪ್ರಾಂತೀಯತೆಯನ್ನು ಬೆಳಸಿದೆವಾದರೆ, ಅಂಥ ಮನೋಧರ್ಮ ನಮ್ಮ ಪಾಲಿಗೆ ಇಲ್ಲವಾಗುವುದು. ವ್ಯಕ್ತಿ ಜೀವನದಿಂದ ರಾಷ್ಟ್ರೀಯ ಋಜುಜೀವನ ಹೊಮ್ಮಿ ಹರಡಬೇಕು. ವ್ಯಕ್ತಿಗಳಾಗಿಯಾಗಲಿ, ಪ್ರಾಂತಗಳಾಗಿಯಾಗಲಿ ನಮ್ಮಲ್ಲಿಯ ಅತ್ಯುತ್ತಮವಾದ ಬೆಳಸನ್ನೂ ಫಲವನ್ನೂ ನಮ್ಮೆಲ್ಲರ ತಾಯ್ನಾಡಿಗೆ ಮುಡಿಪಾಗಿ ಒಪ್ಪಿಸಬೇಕು."

[**ಹರಿಜನ**: ೨೨-೭-೧೯೪೬]

ಇನ್ನು ಜಗತ್ತಿನ ದೃಷ್ಟಿಯಿಂದ ಸಾಹಿತಿಯ ಕರ್ತವ್ಯವೇನೆಂಬ ಮಾತು. ವಾಹನ ಸಂಚಾರ ಸೌಕರ್ಯ ಬೆಳೆದಂತೆಲ್ಲಾ, ಪ್ರಪಂಚದ ರಾಷ್ಟ್ರಗಳ ಮಧ್ಯೆ ಇರುವ ದೂರಗಳೇನೊ ಕಡಮೆಯಾಗುತ್ತಿವೆ. ಆದರೆ ಮಾನವನ ಹೃದಯ ಮನಸ್ಸುಗಳು ಹತ್ತಿರವಾಗಲಿಲ್ಲ; ರಾಜಕೀಯ ಸಾಮಾಜಿಕ ಆರ್ಥಿಕ ಕ್ಷೇತ್ರಗಳಲ್ಲಿ ಹೊಯ್ದಾಡುತ್ತಿರುವ ಭಾವನೆ ವಾದಗಳು ನೂರು ಬಣ್ಣದವು ಸಾವಿರ ಅರ್ಥದವು. ವಿಚಾರ ಲೋಕದಲ್ಲಿ ಮಾತ್ರವಲ್ಲದೆ ಕಾರ್ಯಕ್ಷೇತ್ರದಲ್ಲೂ ಗೊಂದಲ ಹೆಚ್ಚಾಗಿ ಇಂದು ಜಗತ್ತಿನ ಬಹುಭಾಗ ಕುರುಕ್ಷೇತ್ರವಾಗಿದೆ. ಪ್ರಗತಿ ತತ್ವಗಳ ಕಾಪಿಗೆಂದು ನಿಂತವರಂತೆಯೆ ಪ್ರಗತಿವಿರೋಧ ಶಕ್ತಿಗಳನ್ನು ಬೆಳಸಿರುವವರೂ ತಮ್ಮ ಪಂಥಕ್ಕೆ ಜನವನ್ನು ಒಲಿಸಿಕೊಳ್ಳಲು ಪತ್ರಿಕೆಗಳನ್ನೂ ಬಾನ್‌ದನಿಗಳನ್ನೂ ಬಳಸಿಕೊಳ್ಳುತ್ತಿದ್ದಾರೆ. ಪರಿಸ್ಥಿತಿ ಹೀಗಿರುವಾಗ ಪ್ರಗತಿ ಶಕ್ತಿಯಾವುದು ಪ್ರಗತಿವಿರೋಧ ಶಕ್ತಿಯಾವುದು ಎಂದು ಜನಕ್ಕೆ ತಿಳಿಯಹೇಳುವ ಗುರುವಾಗಿ ಬರಹಗಾರನು ತನ್ನ ಕರ್ತವ್ಯವನ್ನು ಮಾಡಬೇಕಾಗಿದೆ.

ಆದುದರಿಂದ ರಾಜ್ಯ ಸೂತ್ರಗಳನ್ನು ನಡೆಸುತ್ತಿರುವ ನಾಯಕರಿಗೇ ಈ ಬೃಹತ್‌ಸಮಸ್ಯೆಯ ವಿವೇಚನೆಯನ್ನು ಬಿಟ್ಟು ಸಾಹಿತಿಯಾದವನು ತೆಪ್ಪಗೆ ಕುಳಿತುಕೊಳ್ಳಬಲ್ಲನೆ? ಕುಳಿತುಕೊಳ್ಳಬಹುದೆ? ಲೇಖನಿ ಖಡ್ಗಕಿಂತ ಬಲವಾದದ್ದು (Pen is mightier than the Sword) ಎಂಬ ಉಕ್ತಿಯಂತೆ ಲೇಖನಿಗೆ ಶಾಪಾನುಗ್ರಹ ಶಕ್ತಿಯಿದೆ. ಆದುದರಿಂದ ಸಾಹಿತಿ ತನ್ನ ಲೇಖನಿಯ ಅನುಗ್ರಹ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳುವುದಕ್ಕಿಂತ ಮೇಲಾದ ಜಗದ್ಧಿತ ಯಾವುದಿದೆ?

ಮೂರು ವರ್ಷಗಳ ಹಿಂದೆ ಅಮೆರಿಕದಲ್ಲಿ ಬರಹಗಾರರ ಜಗತ್‌ಸಮ್ಮೇಳನ (The World Congress of Writers) ನಡೆಯಿತು. ಆಗ ಅಲ್ಲಿ ಸೇರಿದ್ದ ಕೆಲವು ಸುಪ್ರಸಿದ್ಧ ಸಾಹಿತಿಗಳು ಸಾಹಿತಿ ಲೋಕಕ್ಕೆಂದು ಬೀರಿದ ಕೆಲವು ಸಂದೇಶಗಳನ್ನು ಇಲ್ಲಿ ಕೊಡಬಹುದು.

ಹೆಂಡ್ರಿಕ್ ವಿಲ್ಲೆಮ್ ವಾನ್ ಲೂನ್ (Hendrik Willem Van Loon) ಅವರ ಅಭಿಪ್ರಾಯ ಇದು:

"ಮಾನವ ಜನಾಂಗದ ಭವಿಷ್ಯತ್ತು ಬರಹಗಾರನು ತಾನು ಬರೆಯುವ ಬರಹಕ್ಕಾಗಿ ಬಳಸುವ ಶಾಯಿಯನ್ನವಲಂಬಿಸಿದೆ. ಆವನ ನಿಜವಾದ ನಿಶ್ಚಿತಾಭಿಪ್ರಾಯವೇ ಆ ಶಾಯಿ. ಮತ್ತು ಆವನ ಧೀರವಾದ ಹಸ್ತವೂ ಚಿತ್ತವೂ ತಕ್ಕ ಮಾರ್ಗದರ್ಶನ ನೀಡಬೇಕಾಗಿದೆ."

ಯಿಡ್ಡಿಷ್—ಅಮೆರಿಕನ್, ಸಾಹಿತಿ ಶೊಲೆಮ್ ಆಷ್ (Sholem Asch) ಅವರು ಸಾಹಿತಿಗೆ ಕೊಡುವ ಎಚ್ಚರಿಕೆ ಇದು:

"ಬರಹಗಾರರೆ, ನೀವು ಬಳಸುವ ಒಂದೊಂದು ಮಾತನ್ನೂ ಮಾನವನ ಮುಂದಿಡುವ ಮುನ್ನ ಚೆನ್ನಾಗಿ ತೂಗಿ ಅದರ ಸಾರ್ಥಕ್ಯವನ್ನು ಗಮನಿಸಿ. ಬಳಸಿದ ಮಾತು ಜನ ಜನಾಂಗಗಳನ್ನು ಕೂಡಿಸುವುದೊ ಬೇರ್ಪಡಿಸುವುದೊ ಎಂದು ಆಲೋಚಿಸಿ. ಬೇಸೆಗೊಂಡ ಜನಕ್ಕೆ ಇಂದು ಲೇಖಕ ಕೊಡುವ ಬರಹದ ಮುಖ್ಯ ಉದ್ದೇಶ ಇದೇ ಆಗಿದೆ."

ಮಾತು ಸಿಡಿಲಾಗಿ ಮಾರಕವಾಗದೆ ಅಮೃತಬಿಂದುವಾಗಿ ಜನಕ್ಕೆ ಶ್ರೇಯಸ್ಸನ್ನು ನೀಡಬೇಕೆಂಬ ಈ ಧ್ಯೇಯವನ್ನು ಆಂದ್ರೆ ಮೌರಾ (Andre Maurois) ಎಂಬ ಪ್ರಸಿದ್ಧ ಫ್ರೆಂಚ್ ಸಾಹಿತಿ ಈ ರೀತಿ ಒತ್ತಿ ಹೇಳುತ್ತಾರೆ:

"ಮಾತುಗಳು ಬಾಂಬುಗಳಿಗಿಂತ ಭೀಕರ; ವಿಷವಾಯುವಿಗಿಂತ ಘೋರ. ಆದ್ದರಿಂದ, ಬಳಸುವ ಇಂಥ ಕೆಲವು ಮಾತುಗಳ ದುಷ್ಪರಿಣಾಮವನ್ನು ಲೇಖಕರು ಮನಗಾಣಬಲ್ಲವರಾದರೆ ನಿಘಂಟುಗಳ ಮೇಲೆ ಕೆಂಪು ಶಾಯಿಯಲ್ಲಿ ಬರೆದ "ಬಾಂಬುಗಳು, ಜಾಗರೂಕತೆಯಿಂದ ಕೈಯಾಡಿ" ಎಂಬ ದೊಡ್ಡಕ್ಷರಗಳನ್ನು ಬರೆದ ಚೀಟಿಗಳನ್ನು ಅಂಟಿಸಿಕೊಡಬೇಕಾಗುವುದು. ಮಾತಿನ ಹೊಟ್ಟೆ ನೋಡಿ ಅರ್ಥಸ್ಫೂರ್ತಿಯ ತಿರುಳು ಅದೇ ಎಂದು ಮರುಳಾಗಬೇಡ ಎಂದು ಪ್ರಸಿದ್ಧ ಜರ್ಮನ್ ಲೇಖಕನು ಹಿಂದೆ ಆಡಿರುವ ಮಾತು ಇಂದಿಗೂ ಎಷ್ಟು ನಿಜ! ಇಂದಿನ ವಿಷಮ ಸನ್ನಿವೇಶದಲ್ಲಿ ಬರಹಗಾರರು ಸಿಡಿಲ್ನುಡಿಗಳನ್ನು ಸೆರೆಯಿಟ್ಟು, ಮಿಕ್ಕವುಗಳನ್ನು ವಿವೇಚನೆಯಿಂದ ಬಳಸುತ್ತ ವಾಚಕ ಜನಕ್ಕೆ ಸತ್ಯವನ್ನೆ, ಇಡಿಯ ಸತ್ಯವನ್ನೆ, ಸತ್ಯವನ್ನು ಮಾತ್ರವೇ ತಿಳಿಸಬೇಕು. ಹೀಗೆ ಮಾಡುವುದರಿಂದ ಶಾಂತಿ ಸ್ಥಾಪನೆಯ ಕಾರ್ಯಕ್ಕೆ ಬರಹಗಾರನಿಂದ ಬೇಕಾದಷ್ಟು ಸಹಾಯವಾಗುವುದು.

[ಪಿ.ಇ.ಎನ್.]

'ಸೃಷ್ಟಿ ಸಾಹಿತ್ಯ'ದಲ್ಲಿ ಎದ್ದು ಕಾಣಬೇಕಾದ ಗುಣಗಳೆಂದರೆ ವಿಚಾರ ಸ್ವಾತಂತ್ರ್ಯ ಮತ್ತು ಮಾನವನ ವ್ಯಕ್ತಿತ್ವ ವಿಷಯದಲ್ಲಿ ಗೌರವ. ಇಂಥ ಗುಣವಿರುವ ಬರವಣಿಗೆ ಹಟ್ಟುವಂದು ನಾಗರಿಕತೆಯ ಮೇಲ್ಮಟ್ಟವನ್ನು ಅದು ಪ್ರತಿಬಿಂಬಿಸುವುದು. ಜಗತ್ತಿನ ಒಂದೊಂದು ರಾಷ್ಟ್ರದ ಬರಹಗಾರರೂ ತಮ್ಮ ಬರವಣಿಗೆಯ ಕೆಲಸವನ್ನು ಈ ದೊಡ್ಡ ದೃಷ್ಟಿ ಧ್ಯೇಯಗಳಿಂದ ಮುಂದುವರಿಸಿ ಲೋಕಕಲ್ಯಾಣಕ್ಕೆ ನೆರವಾಗುವುದು ಉಚಿತವೆಂದು ಹೇಳಬಯಸುತ್ತೇವೆ.

---

## ಲಕ್ಕುಂಡಿ

[೧೩೭ನೆಯ ಪುಟದಿಂದ]

ದಲ್ಲೆಲ್ಲ ಈ ಮುರುಕುಗಳು ಕಣ್ಣಿಗೆ ಬೀಳುತ್ತವೆ. ಊರನ್ನು ಅಗೆದರೆ ಇನ್ನೂ ಹಲವು ಗುಡಿಗಳು ಕಾಲಗರ್ಭದಿಂದ ಹೊರಬೀಳಬಹುದು. ಅಲ್ಲಲ್ಲಿ ಕೆಲವು ವೀರಗಲ್ಲುಗಳು ಕಾಣುತ್ತವೆ. ಇದರಿಂದ ವೀರಬಲ್ಲಾಳನ ಭಟರ ವೀರಭೂಮಿಯೆಂದು ಲಕ್ಕುಂಡಿ ಮೆರೆಯುತ್ತದೆ. ಅಲ್ಲದೆ ಅದು ಅನೇಕ ಶಾಸ್ತ್ರಪಂಡಿತರ ಮತ್ತು ಯಜ್ಞಕಾರರಾದ ಶೈವಬ್ರಾಹ್ಮಣರ ದೊಡ್ಡಕೇಂದ್ರವಾಗಿತ್ತೆಂದೂ ತೋರುತ್ತದೆ.

ಗದುಗಿನ ಹತ್ತಿರದ ಈ ಲಕ್ಕುಂಡಿ, ಕುಕನೂರ ಬಳಿಯ ಇಟಗಿ, ಶೇಡಬಾಳ ಸಮೀಪದ ಖಿದರಾಪುರ– ಇಂಥ ಹಲವಾರು ಸ್ಥಳಗಳು ಕನ್ನಡ ಸಂಸ್ಕೃತಿಯ ಕಲಾಸಂಪತ್ತಿಯ ಪುಣ್ಯಕ್ಷೇತ್ರಗಳಾಗಿವೆ. ಇವುಗಳಲ್ಲಿ ಒಂದನ್ನಾದರೂ ಕಂಡೆವಲ್ಲ ಎಂದು ಲಕ್ಕುಂಡಿಯ ಯಾತ್ರೆಯನ್ನು ಒಂದು ದಿನದಲ್ಲಿ ಮಾಡಿದ ಮಿತ್ರರು ನೆನೆನೆನೆದು ಹಿಗ್ಗುತ್ತಿದ್ದಾರೆ.

—ರಂ.ಶ್ರೀ. ಮುಗಳಿ.

## ವಸಂತ ಸಾಹಿತ್ಯೋತ್ಸವ

**ಅರಸೀಕೆರೆಯಲ್ಲಿ :**

ಅರಸೀಕೆರೆಯಲ್ಲಿ ನಡೆದ ವಸಂತ ಸಾಹಿತ್ಯೋತ್ಸವದ ಎರಡನೆಯ ದಿನ (೮–೬–೪೩) ಕೆಳಗೆ ಕಂಡಂತೆ ಕಾರ್ಯಕಲಾಪಗಳು ನಡೆದವು.

ಶ್ರೀ ಕೆ. ವಿ. ರಾಘವಾಚಾರ್ಯರು 'ಸಾಕ್ರಟೀಸ'ನ ವಿಷಯವಾಗಿಯೂ, ಶ್ರೀ ಎಸ್. ವಿ. ಶ್ರೀನಿವಾಸರಾಯರು 'ಯಶೋಧರಾ' ನಾಟಕದ ವಿಚಾರವಾಗಿಯೂ ಭಾಷಣ ಮಾಡಿದರು.

ಶ್ರೀಮತಿ ಸಿ. ಎನ್. ರತ್ನಾಬಾಯಿಯವರು ನಾಡಿನ ಉದ್ಧಾರ ಕಾರ್ಯದಲ್ಲಿ ಹೆಂಗಸರು ಹೇಗೆ ನೆರವಾಗಬಹುದೆಂಬ ವಿಚಾರವನ್ನು ಕುರಿತು ಮಾತನಾಡಿದರು.

ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು 'ಭಾರತೀಯ ಸಂಸ್ಕೃತಿಯ ಮುನ್ನೋಟ'ವನ್ನು ಕುರಿತು ಭಾಷಣ ಮಾಡಿದರು.

ಬಳಿಕ ಮೊದಲ ದಿನದ ಕಾರ್ಯಕ್ರಮದಂತೆಯೆ ನೃತ್ಯ ಕಾವ್ಯ ವಾಚನಗಳು ನಡೆದವು. ಕಾರ್ಯದರ್ಶಿಗಳಾದ ಶ್ರೀ ಸಿದ್ದಪ್ಪನವರಿಂದ ವಂದನಾರ್ಪಣೆಯಾಗಿ ಉತ್ಸವ ಮುಗಿಯಿತು.

ಉತ್ಸವದ ವಿಶೇಷ ಸಂಗತಿ ಎಂದರೆ, ಉತ್ಸವದಲ್ಲಿ ಭಾಗವಹಿಸಿದವರಿಗೆ ಕೆಳಗೆ ಕಂಡಂತೆ ಪಾರಿತೋಷಕಗಳನ್ನು ಹಂಚಿದುದು. ನರ್ತನ ಮಾಡಿದ ಹೆಣ್ಣುಮಕ್ಕಳಿಗೆ ಪದಕ ಮತ್ತು ಲೋಲಕ್ಕು; ಕಾವ್ಯವಾಚನ ಮಾಡಿದ ಬಾಲಕಿಗೆ ಬೆಳ್ಳಿಯ ಬಟ್ಟಲು; ವಾದ್ಯವಾದನ ನಡಸಿದ ಶ್ರೀ. ರಾಮದಾಸ್ ಮತ್ತು ಗೆಳೆಯರಿಗೆ ಬೆಳ್ಳಿಯ ಬಟ್ಟಲು ಮತ್ತು ಭಾರತ ವಾಚನ ಮಾಡಿದ ಶ್ರೀ. ಜಯರಾಯರಿಗೆ ಬೆಳ್ಳಿಯ ಬಟ್ಟಲು.

**ಚೆನ್ನರಾಯಪಟ್ಟಣದಲ್ಲಿ :**

ಕನ್ನಡ ಸಾಹಿತ್ಯ ಪರಿಷತ್ತಿನವರು ಚೆನ್ನರಾಯಪಟ್ಟಣದ ಕರ್ನಾಟಕ ಸಂಘದ ಆಶ್ರಯದಲ್ಲಿ ಏರ್ಪಡಿಸಿದ್ದ ವಸಂತ ಸಾಹಿತ್ಯೋತ್ಸವದ ಮೊದಲನೆಯ ದಿನದ ಕಾರ್ಯಕ್ರಮ ಟೌನ್ ಹಾಲಿನಲ್ಲಿ ತಾ. ೧೩–೬–೧೯೪೩ನೆಯ ಸಂಜೆ ಹೊಳೆನರಸೀಪುರದ ಅಸಿಸ್ಟೆಂಟ್ ಇಂಜನಿಯರಾದ ಶ್ರೀ. ಕೃಷ್ಣಸ್ವಾಮಿ, ಬಿ.ಇ. ಅವರ ಅಧ್ಯಕ್ಷತೆಯಲ್ಲಿ ಪ್ರಾರಂಭವಾಯಿತು.

ದೇವತಾ ಪ್ರಾರ್ಥನೆಯಾದ ನಂತರ ಶ್ರೀ ಕೆ. ಸಂಪದ್ಗಿರಿರಾಯರು 'ರಾಷ್ಟ್ರೀಯ ಶಿಕ್ಷಣ' ವಿಷಯವನ್ನು ಕುರಿತು ವಿಚಾರಪೂರ್ಣವಾಗಿ ಭಾಷಣ ಮಾಡಿದರು.

ಶ್ರೀ ಟಿ. ಆರ್. ಜಯರಾಯರು ಆಧುನಿಕ ಕವಿಗಳಿಂದ ರಚಿತವಾದ ಕೆಲವು ಕವಿತೆಗಳನ್ನು ಬಹಳ ಚೆನ್ನಾಗಿ ಹಾಡಿದರು.

ಈ ಊರಿನ ಸಂಸ್ಕೃತ ಪಾಠಶಾಲೆಯ ಸಾಹಿತ್ಯ ವಿದ್ವಾಂಸರಾದ ಶ್ರೀ. ಕೆ. ಸೀತಾರಾಮ ಶಾಸ್ತ್ರಿಗಳು 'ಕಲಾ ಸೃಷ್ಟಿಯಲ್ಲಿ ಕಾಳಿದಾಸನ ದೃಷ್ಟಿ' ಎಂಬ ವಿಚಾರವಾಗಿ ಅರ್ಥಗರ್ಭಿತವಾಗಿ ಭಾಷಣಮಾಡಿ, ಬಹಳ ಸಣ್ಣ ವಿಚಾರಗಳಲ್ಲಿ ಕೂಡ ಕಾಳಿದಾಸನು ತೋರಿಸಿರುವ ಜಾಗರೂಕತೆಯನ್ನು ಉದಾಹರಣೆಗಳೊಡನೆ ವಿವರಿಸಿದರು.

ಶ್ರೀ. ಕೆ. ವೀರಭದ್ರಶೆಟ್ಟರು ಭಾರತದಲ್ಲಿ ವಿರಾಟಪರ್ವದ ಕೆಲವು ಭಾಗವನ್ನು ಸುಶ್ರಾವ್ಯವಾಗಿ ಪಠಿಸಿದರು.

ಶ್ರೀ. ಎಂ. ಎಸ್. ಪುಟ್ಟೇಗೌಡರು ಕೆಲವು ಹಳ್ಳಿಯ ಹಾಡುಗಳನ್ನು ರಸವತ್ತಾಗಿ ಪಠಿಸಿದರು.

ಅಧ್ಯಕ್ಷರು ಭಾಷಣಮಾಡುತ್ತಾ ಸಂಘಕ್ಕೆ ಒಂದು ಕಟ್ಟಡ ಆವಶ್ಯಕವೆಂದೂ ಶಿಲಾ ಪ್ರತಿಷ್ಠಾಪನ ಮಹೋತ್ಸವ ನಡೆದು ೧½ ವರ್ಷವಾದರೂ ಕಟ್ಟಡವೇಳದಿರುವುದು ವಿಷಾದ-ಪ್ರಕರಣವೆಂದೂ ಕೂಡಲೇ ಈ ಊರಿನ ಮಹನೀಯರು ಕಟ್ಟಡ ಕಟ್ಟಲು ಸಹಾಯ ಮಾಡಬೇಕೆಂದೂ ಪ್ರಾರ್ಥಿಸಿಕೊಂಡರು. ವಂದನಾರ್ಪಣೆಯೊಂದಿಗೆ ಮೊದಲು ದಿನದ ಕಾರ್ಯಕಲಾಪಗಳು ಮುಕ್ತಾಯವಾದವು.

ಉತ್ಸವದ ಎರಡನೆಯ ದಿನದ ಕಾರ್ಯಕಲಾಪಗಳು ಟೌನ್ ಹಾಲಿನಲ್ಲಿ ಶ್ರೀ. ಕೃಷ್ಣಸ್ವಾಮಿ ಅವರ ಅಧ್ಯಕ್ಷತೆಯಲ್ಲಿ ೧೪–೬–೪೩ರಲ್ಲಿ ಪ್ರಾತಃಕಾಲ ೧೦ ಗಂಟೆಗೆ ದೇವತಾ ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು.

ಶ್ರೀ. ಸಂಪದ್ಗಿರಿರಾಯರು ಶ್ರೀ. ಕೈಲಾಸಂ ಅವರ 'ಟೊಳ್ಳುಗಟ್ಟಿ'ಯ ಎರಡನೆಯ ಭಾಗವಾದ 'ತಾಳಿಕಟ್ಟೋಕೆ ಕೂಲೀನೆ' ಎಂಬ ನಾಟಕದಲ್ಲಿನ ಕೆಲವು ರಸವತ್ತಾದ ದೃಶ್ಯಗಳನ್ನು ಓದಿದರು. ಅನಂತರ "ಈಗಿನ ಉತ್ಕಟಪರಿಸ್ಥಿತಿಯಲ್ಲಿ ಆಹಾರ ಪದಾರ್ಥಗಳ ಮೇಲೆ ಸರಕಾರದ ಹತೋಟಿ ಅತ್ಯಾವಶ್ಯಕ" ಎಂಬ ವಿಷಯವಾಗಿ ಒಂದು ಚರ್ಚಾಗೋಷ್ಠಿ ನಡೆಯಿತು. ಸೂಚನೆಯ ಪರವಾಗಿ ಶ್ರೀ.ಗಳಾದ ಎಂ. ತಮ್ಮಯ್ಯ, ಕೆ. ಸೀತಾರಾಮಶಾಸ್ತ್ರಿ ಮತ್ತು ಹೆಚ್. ವಿ. ರಾಧಕೃಷ್ಣ ಇವರುಗಳು ಮಾತನಾಡಿದರು. ವಿರೋಧವಾಗಿ ಶ್ರೀ.ಗಳಾದ ಸಿ. ಕೃಷ್ಣ, ಸಿ. ಆರ್. ಶ್ರೀನಿವಾಸ ಅಯ್ಯಂಗಾರ್ ಮತ್ತು ಎಂ. ಎಸ್. ಶೇಷಾದ್ರಿ ಅಯ್ಯಂಗಾರ್ ಇವರುಗಳು ಮಾತನಾಡಿದರು.

ಸಾಯಂಕಾಲ ಪ್ರಾರ್ಥನೆ, ಗಾಯನ ಸಮಾಜದ ಚಾಲಕರಾದ ಶ್ರೀ. ಬೇಲೂರಯ್ಯನವರ ಓಲಗವಾದನಂತರ ಪ್ರಾಥಮಿಕ ಬಾಲಿಕಾ ಶಾಲೆಯ ಹುಡುಗಿಯರುಗಳಿಂದ ಜಡೆ ಕೋಲಾಟ ಮತ್ತು ಧ್ರುವಚರಿತ್ರೆ ನಾಟಕಗಳ ಪ್ರದರ್ಶನವೂ ಆದಿ ಕರ್ನಾಟಕ ಬಾಲಕಿಯಾದ ಕುಮಾರಿ ಗಿಡ್ಡಮ್ಮನಿಂದ ಹಾಡಿಕೆಯೂ ಆದುವು.

ಅನಂತರ ಶ್ರೀ. ಕೃಷ್ಣ ಅವರು 'ಮಾನವ ಜೀವನದ ಸಮಸ್ಯೆ' ಎಂಬ ಉಪನ್ಯಾಸ ಮಾಡಿದರು.

ಆಮೇಲೆ ರಾಜಸೇವಾಪ್ರಸಕ್ತ ಶ್ರೀ. ಎಂ. ವೆಂಕಟೇಶ ಅಯ್ಯಂಗಾರ್ ಅವರು 'ಭಾರತೀಯ ಸಂಸ್ಕೃತಿಯ ಮುನ್ನೋಟ'

ಎಂಬ ವಿಚಾರವಾಗಿ ಉಪನ್ಯಾಸ ಮಾಡುತ್ತ, ಪ್ರಪಂಚ ಸಹೋದರತ್ವದಲ್ಲಿ ಭಾರತದ ಹಿರಿಯ ಅಣ್ಣ ಇದ್ದಹಾಗೆಂದೂ ತನ್ನ ವೈಶಿಷ್ಟ್ಯಗಳನ್ನು ಬಿಟ್ಟು ಇತರ ರಾಷ್ಟ್ರಗಳನ್ನು ಅನುಕರಿಸುವುದರಿಂದ ಸುಖವಾಗಲಿ ಶಾಂತಿಯಾಗಲಿ ದೊರೆಯಲಾರದೆಂದೂ, ನಮ್ಮ ಸಂಸ್ಕೃತಿಯಲ್ಲಿ ಮುಖ್ಯವಾದ ಧರ್ಮವನ್ನು ಕಾಪಾಡಿಕೊಂಡು ಬಂದಲ್ಲಿ ಅದು ನಮ್ಮನ್ನು ಕಾಪಾಡುವುದೆಂದೂ ಹೇಳಿ, ನಮ್ಮ ಸಂಸ್ಕೃತಿಯ ವೈಶಿಷ್ಟ್ಯಗಳಾದ ಸರ್ವಧರ್ಮ ಸಮನ್ವಯ, ದಾನ ಮನೋಧರ್ಮ ಮತ್ತು ನಮ್ಮ ಸಮಾಜದಲ್ಲಿ ಹೆಂಗಸರಿಗಿರುವ ಉನ್ನತ ಸ್ಥಾನ ಇವುಗಳನ್ನು ವಿವರಿಸಿದರು.

ರಾತ್ರಿ ೧೦ ಗಂಟೆಗೆ ವಿವಿಧ ವಿನೋದಾವಳಿ ನಡೆಯಿತು. ಶ್ರೀ. ಟಿ. ಆರ್. ಜಯರಾಯರು ದೇವರ ನಾಮಗಳನ್ನು ಹಾಡಿದರು. ಶ್ರೀ. ರಾಮಚಂದ್ರರಾಯರು ಕಳ್ಳನ ಮತ್ತು ಕಂಸನ ದೃಶ್ಯಗಳನ್ನೂ ಶ್ರೀ. ಹೆಚ್. ರಾಧಾಕೃಷ್ಣರವರು ಯಕ್ಷಿಣಿಯನ್ನೂ ಬಹಳ ಚೆನ್ನಾಗಿ ಅಭಿನಯಿಸಿದರು. ರಾಷ್ಟ್ರೀಯ ಗೀತೆಯೊಂದಿಗೆ ಸಮಾರಂಭ ಮುಕ್ತಾಯವಾಯಿತು.

## ಪರಿಷತ್ತಿನ ಸುದ್ದಿ

### ಪರಿಷತ್ತಿನ ಸದಸ್ಯರ ಬೆಳವಣಿಗೆ

**ಸಹಾಯಕ ಸದಸ್ಯರು (೧೦೦ ರೂ.):** ಶ್ರೀ.ಗಳಾದ ೧. ಎಂ. ಕೃಷ್ಣಸ್ವಾಮಿ ಅವರು, ಬಿ.ಇ., ಅಸಿಸ್ಟೆಂಟ್ ಇಂಜನಿಯರು, ಹೊಳೆನರಸೀಪುರ. ೨. ಎನ್. ದೇವರಾಜ ಅರಸ್ ಅವರು, ಅಮಲ್ದಾರರು, ಚೆನ್ನರಾಯಪಟ್ಟಣ. ೩. ಕೆ. ವಿ. ಪುಟ್ಟಪ್ಪನವರು, ಎಂ.ಎ., ಕನ್ನಡ ಅಸಿಸ್ಟೆಂಟ್ ಪ್ರೊಫೆಸರು, ಸೆಂಟ್ರಲ್ ಕಾಲೇಜು, ಬೆಂಗಳೂರು.

**ಸಾಮಾನ್ಯ ಸದಸ್ಯರು (೬ ರೂ.):** ಶ್ರೀ.ಗಳಾದ ೧. ಅರಕೆರೆ ಸುಬ್ಬರಾಯರು, ಅಡ್ವೊಕೇಟರು, ಹಾಸನ. ೨. ಕೆ. ನಾರಾಯಣಸ್ವಾಮಿ ಅವರು, ಬಿ.ಇ., ಅಸಿಸ್ಟೆಂಟ್ ಇಂಜಿನಿಯರು, ಸಕಲೇಶಪುರ.

**ಸಾಮಾನ್ಯ ಸದಸ್ಯರು (೩ ರೂ.):** ೧. ಶ್ರೀಮತಿ ನೂರ್ ಜಹಾನ್ ಅವರು, ಬೆಂಗಳೂರು. ೨. ಶ್ರೀ. ಕೆ. ಎಸ್. ಕೃಷ್ಣಸ್ವಾಮಿ ಅವರು, ೩೦, ಜೆಣ್ಣೆ ಗೋವಿಂದಪ್ಪನವರ ರಸ್ತೆ, ಬಸವನಗುಡಿ, ಬೆಂಗಳೂರು.

### ಮೈಸೂರು ಪ್ರಾಂತ ಸಮಿತಿ: ಉಪನ್ಯಾಸ

**ತಾ|| ೨೬-೬-೧೯೪೩ನೆಯ ಶನಿವಾರ ಸಂಜೆ ೭ ಗಂಟೆಗೆ** ಪರಿಷನ್ಮಂದಿರದಲ್ಲಿ ತಾಯಿನಾಡು ಮತ್ತು ಡೆಯ್ಲಿ ನ್ಯೂಸ್ ಪತ್ರಿಕೆಗಳ ಒಡೆಯರಾದ ಶ್ರೀ. ಪಿ. ಆರ್. ರಾಮಯ್ಯನವರು "ಪತ್ರಿಕೋದ್ಯೋಗದ ಕೆಲವು ಅನುಭವಗಳು" ಎಂಬ ವಿಷಯವಾಗಿ ಭಾಷಣಮಾಡುತ್ತಾರೆ.

### ಮಹಿಳಾ ಶಾಖೆ
### ಕವಿತೆಗಳ ಪಠನ ಗೋಷ್ಠಿ

**ತಾ|| ೨೭-೬-೪೩ನೆಯ ಭಾನುವಾರ ಸಂಜೆ ೫-೩೦ ಗಂಟೆಗೆ** ಪರಿಷನ್ಮಂದಿರದಲ್ಲಿ ಮಹಿಳಾ ಶಾಖೆಯ ಆಶ್ರಯದಲ್ಲಿ "ಕವಿತೆಗಳ ಪಠನ ಗೋಷ್ಠಿ" ನಡೆಯುತ್ತದೆ.

ಶ್ರೀಮತಿ ಸೌ|| ಎಸ್. ಜಿ. ವೆಂಕಟಸುಬ್ಬಮ್ಮನವರು ದಯಮಾಡಿ ಅಧ್ಯಕ್ಷತೆ ವಹಿಸಲು ಒಪ್ಪಿರುವರು.

**ಕಾರ್ಯಕ್ರಮ:** ೧. ಪ್ರಾರ್ಥನೆ, ೨. ಕವಿತೆಗಳ ಪಠನ, ೩. ಗೀತೆಗಳ ಹಾಡುಗಾರಿಕೆ, ೪. ಅಧ್ಯಕ್ಷರ ಭಾಷಣ, ೫. ವಂದನಾರ್ಪಣೆ.

## ಕನ್ನಡ ಸುದ್ದಿ

**ಅರಸೀಕೆರೆ ಕರ್ನಾಟಕ ಸಂಘದ ಕಟ್ಟಡದ ಶಂಕುಸ್ಥಾಪನೋತ್ಸವ**

೨೭—೬—೪೩ ನೆಯ ಭಾನುವಾರ ಬೆಳಗ್ಗೆ ೯ ಘಂಟೆಗೆ ರಾಜಸೇವಾಸಕ್ತ ಶ್ರೀ. ಬಿ. ಎಂ. ಶ್ರೀಕಂಠಯ್ಯನವರು ಅರಸೀಕೆರೆ ಕರ್ನಾಟಕ ಸಂಘದ ಕಟ್ಟಡದ ಶಂಕುಸ್ಥಾಪನೋತ್ಸವವನ್ನು ನೆರವೇರಿಸುತ್ತಾರೆ.

**ಮೈಸೂರು ದೇಶದ ವಿದ್ಯಾಶಾಲಾ ಪಂಡಿತಮಂಡಲ ಮಹಾಸಮ್ಮೇಳನ**

ಈ ತಿಂಗಳು ತಾ. ೨೫, ೨೬, ೨೭ನೆಯ ದಿನಗಳಲ್ಲಿ ಪಂಡಿತ ಮಂಡಲದ ಒಂಬತ್ತನೆಯ ಮಹಾಸಮ್ಮೇಳನ ಮೈಸೂರು ಶ್ರೀಮನ್ಮಹಾರಾಜರವರ ಸಂಸ್ಕೃತ ಮಹಾಪಾಠಶಾಲೆಯ ಸಭಾಂಗಣದಲ್ಲಿ ನಡೆಯುವುದು. ಹೈಕೋರ್ಟ್ ನ್ಯಾಯಾಧೀಶರಾದ ರಾಜಧರ್ಮಪ್ರಸಕ್ತ ಶ್ರೀ. ಎ. ಆರ್. ನಾಗೇಶ್ವರಯ್ಯರ್, ಬಿ.ಎ., ಬಿ.ಎಲ್. ಅವರು ತಾ. ೨೫-೬-೪೩ನೆಯ ಪ್ರಾತಃಕಾಲ ೯ ಗಂಟೆಗೆ ಪ್ರಾರಂಭೋತ್ಸವವನ್ನು ನೆರವೇರಿಸುತ್ತಾರೆ. ಶ್ರೀಮನ್ ಮಹಾರಾಜರವರ ಕಾರ್ಯದರ್ಶಿಗಳಾದ ಶ್ರೀ. ಕೆ. ಗುರುದತ್, ಬಿ.ಎ. ಅವರು ಅಧ್ಯಕ್ಷತೆಯನ್ನು ವಹಿಸುತ್ತಾರೆ.

**ಹೈದರಾಬಾದು: ಕರ್ನಾಟಕ ಸಾಹಿತ್ಯ ಮಂದಿರ**

ತಾ. ೨೧, ೨೨, ೨೩ ಮೇ ೧೯೪೩. ಈ ಮೂರು ದಿವಸ ಹೈದರಾಬಾದು ಕರ್ನಾಟಕ ಸಾಹಿತ್ಯ ಮಂದಿರದ ವಾರ್ಷಿಕೋತ್ಸವ ಪ್ರೊ. ಆರೂರ ಸೀತಾರಾಮರಾವ, ಪ್ರೊ. ರಾಮಚಂದ್ರರಾವ ಪಟವಾರಿ, ಶ್ರೀ. ಬಿ. ಜಿ. ಚಿಮ್ಮಲಗಿಯವರ ಅಧ್ಯಕ್ಷತೆಯಲ್ಲಿ ಯಶಸ್ವಿಯಾಗಿ ನಡೆಯಿತು. ಶ್ರೀ. ಜೆ.ಬಿ. ಉಪಾಧ್ಯಾಯ, ಬಿ.ಎ. ಅವರು ಕನ್ನಡ ಗ್ರಂಥಾಲಯಗಳ ಮೇಲೆ ಮತ್ತು ಶ್ರೀ. ಪಾಂಡುರಂಗಾಚಾರ್ಯ ವೈದ್ಯ (ಬಿ.ಎ. ಕನ್ನಡ ಜಾಣ) ಇವರು ನಾಗರಿಕತೆ ಮೇಲೆ ಭಾಷಣ ಮಾಡಿದರು. ಶ್ರೀ. ಎಸ್. ಎಂ. ನಾಯಕರು ಕಾವ್ಯಗಾಯನ ಮಾಡಿದರು.

ಈ ವಾರ್ಷಿಕೋತ್ಸವದಲ್ಲಿ ಕನ್ನಡ ವಸಂತ ಸಾಹಿತ್ಯೋತ್ಸವವನ್ನು ಸಾಹಿತ್ಯ ಮಂದಿರದ ಪರವಾಗಿ ನಡಸಲಾಯಿತು. ಇದರಲ್ಲಿ ಸಾಹಿತ್ಯ ಪರಿಷತ್ತಿನ ನಿಜಾಮ ಕರ್ನಾಟಕ ಪ್ರಾಂತ ಸಮಿತಿಯವರು ಕೂಡಿದ್ದರು.

ತಾ. ೨೧-೫-೪೩ನೆಯ ದಿವಸ ನಡೆದ ಸಭೆಯಲ್ಲಿ ಶ್ರೀ. ಬೆನಗಲ್ ರಾಮರಾಯರ ಮತ್ತು ಹೈದರಾಬಾದಿನ ಪ್ರೊ. ಟಿ. ರಾಮರಾಯರ ನಿಧನದ ಬಗ್ಗೆ ಸಂತಾಪಸೂಚಕ ಗೊತ್ತುವಳಿಗಳ ಅಂಗೀಕಾರವಾಯಿತು.

ತಾ. ೨೩-೫-೪೩ನೆಯ ದಿವಸ ನಡೆದ ಸಾಹಿತ್ಯ ಮಂದಿರದ ಸಾಧಾರಣ ಸಭೆಯಲ್ಲಿ ಪ್ರೊ. ಡಿ.ಕೆ. ಭೀಮಸೇನರಾಯರು ಪುನಃ ಅಧ್ಯಕ್ಷರಾಗಿ ಆರಿಸಿಬಂದರು. ಶ್ರೀಮತಿ ವಿಮಲಾದೇವಿ ಮೇಲ್ಕೋಟೆಯವರು ಉಪಾಧ್ಯಕ್ಷರಾಗಿಯೂ ಶ್ರೀ. ಗುರುಭೀಮಾಚಾರ್ಯರು ಮತ್ತೆ ಕಾರ್ಯದರ್ಶಿಯಾಗಿಯೂ ಶ್ರೀ. ಕಾಗಲಕರ ಶ್ರೀನಿವಾಸರಾಯರು, ಶ್ರೀ. ವಿಜಯಾಚಾರ್ಯ ಆಶ್ರೀತ ಮತ್ತು ಶ್ರೀಮತಿ ಶಾಂತಾದೇವಿ ಕುಲಕರ್ಣಿಯವರು ಮತ್ತೆ ಸದಸ್ಯರಾಗಿಯೂ ಆರಿಸಿಬಂದರು.

**ವಿಜಾಪುರ: ರಾವ್‌ಬಹದ್ದೂರ್ ಹಳಕಟ್ಟಿಯವರ ವರ್ಧಂತ್ಯುತ್ಸವ**

೧೦-೬-೪೩ನೆಯ ದಿವಸ ಸರದಾರ ಆಲಮೇಲ ದೇಶಮುಖರ ಅಧ್ಯಕ್ಷತೆಯಲ್ಲಿ ಶೆಪರ್ಡಹಾಲಿನಲ್ಲಿ ಸಭೆಗೂಡಿ, ಶ್ರೀ. ಹಳಕಟ್ಟಿಯವರ ವರ್ಧಂತ್ಯುತ್ಸವವನ್ನು ತಾ. ೨-೭-೪೩ನೆಯ ದಿವಸ ನೆರವೇರಿಸತಕ್ಕದ್ದೆಂದು ತೀರ್ಮಾನವಾಯಿತು. ಉತ್ಸವದ ದಿನ ಶ್ರೀ. ಹಳಕಟ್ಟಿಯವರಿಗೆ ಮಾನಪತ್ರವನ್ನೂ ನಿಧಿಯನ್ನೂ ಸಮರ್ಪಿಸಲಾಗುವುದು.

ವರ್ಧಂತಿ ನಿಧಿಗೆ ತಮ್ಮ ಕಾಣಿಕೆ ಕಳಿಸಬೇಕೆಂದಿರುವ ಮಹನೀಯರು ಆದಷ್ಟು ತೀವ್ರವಾಗಿ ಕಳಿಸಿಕೊಡಬೇಕಾಗಿ ವಿನಂತಿ.

**ಬೊಂಬಾಯಿ ಮೆಟ್ರಿಕ್ಯುಲೇಷನ್ ಪರೀಕ್ಷೆ**
**ಕರ್ನಾಟಕಕ್ಕೆ ಪ್ರಥಮಸ್ಥಾನ**

ಬೊಂಬಾಯಿ ಪ್ರಾಂತದ ಮೆಟ್ರಿಕ್ ಪರೀಕ್ಷೆಯಲ್ಲಿ ಹಾವೇರಿ ಹೈಸ್ಕೂಲು ವಿದ್ಯಾರ್ಥಿಯಾದ ಶ್ರೀ ಜಿ. ಜಿ. ಅರ್ಜಿಕ ಅವರು ಪ್ರಾಂತಕ್ಕೆಲ್ಲಾ ಪ್ರಥಮ ಸ್ಥಾನದಲ್ಲಿ ಉತ್ತೀರ್ಣರಾಗಿದ್ದಾರೆ. ಧಾರವಾಡದ ಆಂಗ್ಲೋ ಕನ್ನಡ ಗರ್ಲ್ಸ್ ಹೈಸ್ಕೂಲಿನ ವಿದ್ಯಾರ್ಥಿನಿಯಾದ ಕುಮಾರಿ ವತ್ಸಲಾ ಪಾಟೀಲ್ ಅವರು ಶಂಕರ ಶೇಟ್ ಅವರ ಪಾರಿತೋಷಕವನ್ನೂ ಇತರ ಹಲವು ಪಾರಿತೋಷಿಕಗಳನ್ನೂ ಪಡೆದಿದ್ದಾರೆ. ಈ ಶಂಕರಶೇಟ್ ಪಾರಿತೋಷಕ ಬೊಂಬಾಯಿ ವಿಶ್ವವಿದ್ಯಾಲಯದಲ್ಲಿ ಎಂದಿನಿಂಲೂ ಬಹಳ ಮಹತ್ವದ್ದಾಗಿದೆ. ಶ್ರೀ. ಶಿವರಾಮ ಮಹಾದೇವ ಪರಾಂಜಪೆ, ಶ್ರೀ. ಸೇನಾಪತಿ ಬಾಪಟ್, ಶ್ರೀ. ಆರ್. ಡಿ. ರಾನಡೆ ಮುಂತಾದವರು ಈ ಪಾರಿತೋಷಕ ಪಡೆದಿದ್ದರು. ಈಗ ಇದು ಈ ಕರ್ನಾಟಕ ಯುವತಿಗೆ ದೊರೆತಿದೆ. ಇದಲ್ಲದೆ ಈ ವರ್ಷದ ಬೊಂಬಾಯಿ ಮೆಟ್ರಿಕ್ ಪರೀಕ್ಷೆಯಲ್ಲಿ ಮೊದಲಿನ ೧೦ ಸ್ಥಾನಗಳಲ್ಲಿ ೭ ಜನ ವಿದ್ಯಾರ್ಥಿಗಳು ಕರ್ನಾಟಕದವರೇ ಇದ್ದಾರೆ. ಕರ್ನಾಟಕಕ್ಕೇ ಇದು ಗೌರವ ತರುವಂತಹದು.

೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

## ಅಖಿಲ ಭಾರತ ಪ್ರಗತಿಪರ ಲೇಖಕರ ನಾಲ್ಕನೆಯ ಪರಿಷತ್ತು

ಗಿರಗಾಂವಿನ ಮಾರವಾರಿ ವಿದ್ಯಾಲಯದಲ್ಲಿ ಸಮ್ಮೇಳನ ಕೂಡಿತು. ಸಭಾರಂಗದ ಹೊರಗೆ ಪ್ರಗತಿಪರ ಬರಹಗಾರರ ಕೃತಿಗಳೂ ಬಂಗಾಳದ ಪುರೋಗಾಮಿ ಕಲಾವಿದರ ಚಿತ್ರಗಳೂ ಪ್ರದರ್ಶನಕ್ಕೆ ಇಡಲ್ಪಟ್ಟಿದ್ದುವು.

ಶ್ರೀಯುತರು ಜೋಶ್ ಮಲಿಹಾಬಾದಿ (ಉರ್ದು), ರಾಹುಲ್ ಸಂಕೀರ್ತ್ಯಾಯನ್ (ಹಿಂದಿ), ತಾರಾಶಂಕರ್ ಬ್ಯಾನರ್ಜಿ ಮತ್ತು ಮನೋರಂಜನ್ ಭಟ್ಟಾಚಾರ್ಯ (ಬಂಗಾಳಿ), ಧರ್ಮರಾವ್ (ತೆಲುಗು), ಎಸ್. ಎ. ಡಾಂಗೆ (ಮರಾಠಿ), ಜಿತುಭಾಯ್ ಮೆಹತಾ (ಗುಜರಾತಿ), ಪ್ರೊ. ಜಾಗಿರದಾರ್ (ಕನ್ನಡ), ಇವರು ವಿವಿಧ ಭಾಷಾ ವಿಭಾಗಗಳ ಅಧ್ಯಕ್ಷರಾಗಿ ಪೀಠಗಳನ್ನು ಅಲಂಕರಿಸಿದ್ದರು.

ಆರಂಭದ ದಿನ ಮುಂಜಾನೆ ಬೇರೆ ಬೇರೆ ಭಾಷೆಗಳ ಬರಹಗಾರರು ಬೇರೆ ಬೇರೆಯಾಗಿಯೇ ಕೂಟಗಳನ್ನೇರ್ಪಡಿಸಿಕೊಂಡು ತಮ್ಮ ತಮ್ಮ ಪ್ರದೇಶಗಳ ಪ್ರಗತಿಪರ ಸಾಹಿತ್ಯವನ್ನು ಕುರಿತು ವಿಚಾರವಿನಿಮಯ ಮಾಡಿದರು.

ಮಧ್ಯಾಹ್ನ ಪರಿಷತ್ತಿನ ಉದ್ಘಾಟನೆ ನಡೆಯಿತು. ಸ್ವಾಗತ ಸಮಿತಿಯ ಅಧ್ಯಕ್ಷರಾದ ಶ್ರೀ. ಕೆ. ಎ. ಅಬ್ಬಾಸ್ ಅವರು ಪ್ರತಿನಿಧಿಗಳನ್ನೂ ಸಂದರ್ಶಕರನ್ನೂ ಸ್ವಾಗತಿಸಿ ಭಾಷಣವಿತ್ತರು.

ಅಖಿಲ ಭಾರತ ಪ್ರಗತಿಪರ ಬರಹಗಾರರ ಸಂಘದ ಕಾರ್ಯದರ್ಶಿ ಡಾ. ಆಲೀಮ್ ಅವರು ವರದಿಯನ್ನೊಪ್ಪಿಸಿದರು.

### ಕೆಲವು ಭಾಷಣಗಳ ಸಾರ

ಮರಾಠಿ ಅಧ್ಯಕ್ಷರಾದ ಶ್ರೀ. ಎಸ್. ಎ. ಡಾಂಗೆ ಅವರು ದೀರ್ಘಭಾಷಣವಿತ್ತು ಮರಾಠಿ ಸಾಹಿತ್ಯ ಉನ್ನತಿ – ಅವನತಿಗಳ ಮಧ್ಯೆ ಹೇಗೆ ತೊಳಲುತ್ತ ಬಂದಿತೆಂಬುದನ್ನು ವಿವರಿಸಿ, "ಜನರಿಗಾಗಿ ಬರೆಯುತ್ತೇವೆ ಎಂದು ಬರಿಯ ಸೋಗು ಹಾಕಿಕೊಳ್ಳುವುದು ಕೊನೆಗಾಣಬೇಕು. 'ಕಲೆಗಾಗಿ ಮಾತ್ರ ಕಲೆ' ಎಂಬ ಮಾತೂ ಮರೆತುಹೋಗಬೇಕು. ಪ್ರತಿಕೂಲ ಮತ್ತು ಮರ್ದಕ ಶಕ್ತಿಗಳನ್ನು ಪ್ರತಿಭಟಿಸುವ ಪ್ರಗತಿಪರ ಸಾಹಿತ್ಯ ಬೆಳೆಯಬೇಕು" ಎಂದು ಹೇಳಿದರು.

ಗುಜರಾತಿನ ಅಧ್ಯಕ್ಷರಾದ ಶ್ರೀ. ಜಿತುಭಾಯ್ ಮೆಹತಾ ಅವರೂ, ತೆಲುಗು ಅಧ್ಯಕ್ಷರಾದ ಧರ್ಮರಾಯರೂ ಭಾಷಣಗಳನ್ನಿತ್ತರು. ತಮ್ಮ ೩೫ ವರ್ಷಗಳ ಸಾಹಿತ್ಯ ಜೀವನದಲ್ಲಿ [ಅವರಿಗೀಗ ೫೫ ವರ್ಷ ಪ್ರಾಯ.] ತಾವು ಪಟ್ಟ ಕಷ್ಟಗಳನ್ನು ವಿವರಿಸಿ, ಬಂಡವಾಳಗಾರರ ಅನ್ಯಾಯವನ್ನು ಧರ್ಮರಾಯರು ವಿವರಿಸಿದರು. ಪ್ರಗತಿಪರ ಸಾಹಿತ್ಯದ ಪ್ರಕಟನೆಗಳಿಗೆ ಉಂಟಾಗಿರುವ ಕಾಗದದ ಅಭಾವವು ತಪ್ಪಬೇಕು ಎಂದು ಕೋರಿದರು. ಮಧ್ಯಾಹ್ನ ಪುನಃ ಪರಿಷತ್ತು ಕೂಡಿದಾಗ ಬಂಗಾಳದ ಪರವಾಗಿ ಶ್ರೀ. ಸತ್ಯೇಂದ್ರ ಮುಖರ್ಜಿಯವರು ಮಾತನಾಡುತ್ತ "ಸಂಪ್ರದಾಯಗಳು ಮುರಿದು ಬೀಳುತ್ತಿವೆ; ಕಟ್ಟು ಕಟ್ಟಳೆಗಳು ಒಡೆದುಹೋಗುತ್ತಿವೆ; ಜಗತ್ತಿನ ಹೊಸ ನಿರ್ಮಾಣದತ್ತ ನಾವು ಸಾಗುತ್ತಿದ್ದೇವೆ" ಎಂದರು.

ಕನ್ನಡ ವಿಭಾಗದ ಅಧ್ಯಕ್ಷರಾದ ಜಾಗಿರದಾರರು "ಈ ಯುದ್ಧವು ಜಗತ್ತಿನ ಭವಿತವ್ಯವನ್ನು ನಿರ್ಧರಿಸುವುದು. ಆ ಕುರಿತು ನಮ್ಮ ಧೋರಣೆಯನ್ನು ಸ್ಪಷ್ಟಪಡಿಸುವುದು ಅಗತ್ಯವಿದೆ. ನಾನು ರಾಜಕಾರಣಜ್ಞನಲ್ಲ, ನನಗೆ ರಾಜಕಾರಣದಲ್ಲಿ ಅಭಿರುಚಿಯಿಲ್ಲ. ಅರ್ಥಶಾಸ್ತ್ರವನ್ನು ನಾನು ಅರಿತವನಲ್ಲ; ಆದರೆ ನನಗೆ ಬರಹಗಾರರಲ್ಲಿ ವಿಶ್ವಾಸವಿದೆ" ಎಂದು ಹೇಳಿ, ಕನ್ನಡ ಸಾಹಿತ್ಯವು ೨೦೦೦ ವರ್ಷಗಳಷ್ಟು ಹಳೆಯದೆಂದೂ ಮರ್ದನಕ್ಕೆದಿರಾಗಿ ಹಿಂದಿನ ಬರಹಗಾರರು ಕೂಡ ಹೇಗೆ ಹೋರಾಡುತ್ತಿದ್ದರೆಂದೂ ವಿವರಿಸಿದರು.

ಉರ್ದು ಕವಿಯಾದ ಶ್ರೀ. ಜೋಶ್ ಮಲಿಹಾಬಾದಿ ಅವರು ಮರ್ದನಕ್ಕೆ ಮಣಿಯದ ಕವಿಹೃದಯವನ್ನು ಕುರಿತು ಮಾತನಾಡಿದರು.

ಶ್ರೀ. ಅಬ್ಬಾಸ್ ಅವರು ಪರಿಷತ್ತಿನ ಪ್ರಧಾನ ನಿರ್ಣಯವನ್ನು ಮುಂದಿಟ್ಟರು. ಸಾಮ್ರಾಜ್ಯಶಾಹಿ ಪ್ರಭುತ್ವ, ಫ್ಯಾಸಿಸ್ಟ್‌ವಾದ, ಬಂಡವಾಳಶಾಹಿ ಮತ್ತಿತರ ಎಲ್ಲಾ ಪ್ರತಿಕೂಲ ಶಕ್ತಿಗಳನ್ನು ಪ್ರಗತಿಶೀಲ ಬರಹಗಾರರು ಪ್ರತಿಭಟಿಸಬೇಕು; ಸ್ವತಂತ್ರ ಜಗತ್ತಿನಲ್ಲಿ ಸ್ವತಂತ್ರ ಭಾರತವನ್ನು ನಿರ್ಮಿಸುವುದಕ್ಕಾಗಿ ನಿರಂತರ ದುಡಿಯಬೇಕು ಎಂದು ಆ ನಿರ್ಣಯದಲ್ಲಿ ವ್ಯಕ್ತಗೊಳಿಸಲಾಗಿತ್ತು. ಈ ನಿರ್ಣಯವೂ ಇತರ ಹಲವು ನಿರ್ಣಯಗಳೂ ಸರ್ವಾನುಮತದಿಂದ ಸ್ವೀಕೃತವಾದುವು.

ಮಹಾರಾಷ್ಟ್ರದ ಹಿರಿಯ ಪ್ರಗತಿಶೀಲ ಬರಹಗಾರರಾದ ಮಾಮಾ ವಾರೇರ್‌ಕರ್ [ಪ್ರಾಯ ೬೦] ಅವರು ಬಳಿಕ ಮಾತನಾಡಿ, "ಕೂಲಿಕಾರರು ತಮ್ಮ ಸಂಘಗಳನ್ನು ಸ್ಥಾಪಿಸುವಂತೆ ಬಡ ಬರಹಗಾರರೂ ಒಂದಾಗಿ ತಮ್ಮ ಹಕ್ಕುಗಳನ್ನು ಪಡೆಯುವ ಕಾಲವಿದು" ಎಂದರು.

ತಾ. ೨೫ರಲ್ಲಿ ಅಖಿಲ ಕರ್ಣಾಟಕ ಪ್ರಗತಿಪರ ಬರಹಗಾರರ ಸಂಘವೊಂದು ಮುಂಬಯಿಯಲ್ಲಿ ಸ್ಥಾಪಿಸಲ್ಪಟ್ಟಿತು. ಈ ಸಂಘದ ಪ್ರಧಾನ ಕಾರ್ಯಾಲಯ ಮುಂಬಯಿಯಲ್ಲೇ ಇರತಕ್ಕುದೆಂದು ಗೊತ್ತಾಯಿತು. ಬೆಂಗಳೂರು, ಮಂಗಳೂರು, ಧಾರವಾಡ ಮುಂತಾದ ಕೇಂದ್ರಗಳಲ್ಲಿ ಪ್ರಾದೇಶಿಕ ಸಮಿತಿಗಳು ರಚಿಸಲ್ಪಡುವುವು. ಈ ಸಮಿತಿಗಳು ಮುಂಬಯಿಯ ಸಂಘದ ಆಶ್ರಯದಲ್ಲಿ ದುಡಿಯಬೇಕಾಗುವುದು. ಪ್ರಧಾನ ಸಂಘ ಅಖಿಲ ಭಾರತ ಪ್ರಗತಿಪರ ಬರಹಗಾರರ ಸಂಘದ ಅಂಗವಾಗಿ ಕೆಲಸ ಮಾಡುವುದು.

ಪರಿಷತ್ತಿನ ಕೊನೆಯ ದಿನವಾದ ತಾ|| ೨೮ರಲ್ಲಿ ಮಾಮಾ ವಾರೇರ್‌ಕರರ ಅಧ್ಯಕ್ಷತೆಯಲ್ಲಿ ಸಭೆ ಸೇರಿದಾಗ ಶ್ರೀ. ಕುಳಕುಂದ ಶಿ. ರಾಯರು, ಛಿದ್ರ ಛಿದ್ರವಾಗಿರುವ ಕರ್ಣಾಟಕದಲ್ಲಿ ಸಾಹಿತ್ಯ ಸಂಸ್ಕೃತಿಗಳ ಬೆಳವಣಿಗೆಗೆ ತಡೆಯಾಗಿರುವ ಕಾರಣಗಳು, ಇತ್ತೀಚೆಗೆ ಆರಂಭವಾಗಿರುವ ಪ್ರಗತಿಪರ ಬರಹಗಾರರ ಚಳವಳಿ – ಈ ವಿಷಯಗಳ ಕುರಿತು ಮಾತನಾಡಿದರು.

ಶ್ರೀ. ಸುಬ್ರಮಣ್ಯಂ ಅವರು ತಮಿಳು ವರದಿಯೊಪ್ಪಿಸಿದರು.

ಶ್ರೀ. ಎಸ್. ಕೆ. ಆಚಾರ್ಯ ಇವರು ಬಂಗಾಳದ ಪರವಾಗಿಯೂ ಶ್ರೀ. ಬಿ. ಜಿ. ತಿಲಕ ಇವರು ಆಂಧ್ರದ ಪರವಾಗಿಯೂ ವರದಿಗಳನ್ನೊಪ್ಪಿಸಿದರು.

ಅಖಿಲ ಭಾರತ ಪ್ರಗತಿಪರ ಬರಹಗಾರರ ಪರಿಷತ್ತಿನ ಕಾರ್ಯ ಸಮಿತಿಯೂ ಅಖಿಲ ಕರ್ನಾಟಕ ಸಮಿತಿಯೂ ರಚಿತವಾದುವು. ಈ ಸಮಿತಿಗಳ ಸದಸ್ಯರ ಹೆಸರುಗಳನ್ನು ಹಿಂದಿನ ಸಂಚಿಕೆಯಲ್ಲಿ ಕೊಟ್ಟಿದೆ.

## ಆಧುನಿಕ ಉತ್ಕಲ ಸಾಹಿತ್ಯ

(ಶ್ರೀ. ಎ. ನಾರಾಯಣಸ್ವಾಮಿ ಅಯ್ಯರ್ ಅವರು)

ಭಾರತವರ್ಷದ ಪ್ರಾಂತಗಳಲ್ಲೆಲ್ಲಾ ಉತ್ಕಲವು ಅತಿ ಬಡ ಪ್ರಾಂತವೆಂದು ಆಧುನಿಕ ಅರ್ಥಶಾಸ್ತ್ರಜ್ಞರ ಅಭಿಮತ. ಇಂದು ಬಂಗಾಲ ಬ್ರಹ್ಮದೇಶಗಳ ಮುಖ್ಯ ನಗರಗಳಲ್ಲಿ ಅಡಿಗೆಯ ಕೆಲಸ, ಕ್ಷೌರ ಕೆಲಸ, ಮನೆಗೆಲಸ, ಮೂಟೆ ಹೊರುವುದು, ಗಾಡಿ ಎಳೆಯುವುದು ಮೊದಲಾದ ಕೆಲಸಗಳಲ್ಲಿ ಅಸಂಖ್ಯ ಉತ್ಕಲೀಯರು ದುಡಿದು ಹೊಟ್ಟೆಹೊರೆಯುತ್ತಿರುವರು. ಉತ್ಕಲದ ಇತಿಹಾಸವನ್ನು ಅಧ್ಯಯನ ಮಾಡಿದರೆ ಅದರ ಗತವೈಭವವೂ ಕಾಲಪುರುಷನ ವಿಚಿತ್ರಲೀಲೆಯೂ ಗೋಚರವಾಗುವುವು.

ಸುದೂರ ಪ್ರಾಚ್ಯದ ದ್ವೀಪಸ್ತೋಮಗಳಿಗೆ ವಲಸೆ ಹೋಗಿ ಭಾರತೀಯ ನಾಗರಿಕತೆ ಮತ್ತು ಸಂಸ್ಕೃತಿಗಳನ್ನು ಹರಡಿದವರಲ್ಲಿ ಉತ್ಕಲರೂ ಹೆಚ್ಚು ಪರಿಶ್ರಮ ಪಟ್ಟಿರುವರೆಂದು ಇತಿಹಾಸಜ್ಞರು ಹೇಳುವರು.* ಉತ್ಕಲದ ಹತ್ತಿಯ ಬಟ್ಟೆಯ ಆರ್ಥಿಕ ಪ್ರಾಮುಖ್ಯತೆಯ ವಿಷಯವಾಗಿ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಉಲ್ಲೇಖವಿದೆ. ಕಳಿಂಗ ದೇಶದಿಂದ ಬರುತ್ತಿದ್ದ ಒಂದು ಜಾತಿಯ ಹತ್ತಿಯ ಬಟ್ಟೆಗೆ 'ಕಿಳಿಂಗಂ' ಎಂದು ತಮಿಳು ದೇಶದಲ್ಲಿ ಹೆಸರಾಗಿದ್ದು – ಈಗಲೂ ಆ ಭಾಷೆಯಲ್ಲಿ ಹತ್ತಿಯ ಬಟ್ಟೆಗೆ 'ಕಿಳಿಂಗಂ' ಎಂಬ ಹೆಸರು ಪ್ರಚಾರದಲ್ಲಿದೆ.†

* R. D. Banerjee: 'History of Orissa'. Vols. I & II.

† Prof. S. K. Iyenger: Orissa, J. B. B. R. A. S. Vol. VIII Part I.

ಬಂಗಾಳದಲ್ಲಿ ಪ್ರಸಿದ್ಧವಾಗಿರುವ ಶಾಂತಿಪುರದ ಸೀರೆ ಪಂಚೆಗಳನ್ನು ನೇಯುತ್ತಿರುವವರು ಉತ್ಕಲದಿಂದ ಬಂಗಾಲಕ್ಕೆ ಹೋಗಿ ನೆಲಸಿದ ನೆಯ್ಗೆಯವರ ವಂಶೀಯರು. ಪೂರಿ, ಭುವನೇಶ್ವರ, ಕೋನಾರ್ಕದ ದೇವಾಲಯಗಳು ಉತ್ಕಲದ ವಾಸ್ತುಶಿಲ್ಪದ, ಉತ್ಕಲದ ಗತವೈಭವದ ನೀರವ ನಿದರ್ಶನ.

ಉತ್ಕಲ ಸಾಹಿತ್ಯದ ಆಧುನಿಕಪರ್ವದ ಆರಂಭ ಇಂಗ್ಲಿಷರ ಆಳಿಕೆಗೆ ಆ ದೇಶ ಒಳಪಟ್ಟ ಕಾಲದಿಂದ. ೧೬೩೩ನೆಯ ಸುಮಾರಿನಲ್ಲಿ ಇಂಗ್ಲಿಷರು ಉತ್ಕಲದಲ್ಲಿ ಮೊತ್ತಮೊದಲು ಕೋಠಿಯನ್ನಿಟ್ಟು ವ್ಯಾಪಾರ ಮಾಡತೊಡಗಿದರು. ಪ್ಲಾಸೀ ಯುದ್ಧದನಂತರ ಈ ಪ್ರಾಂತ ಈಸ್ಟ್ ಇಂಡಿಯಾ ಕಂಪೆನಿಯ ಆಡಳಿತಕ್ಕೆ ಸೇರಿದರೂ ಈ ದೇಶದಲ್ಲಿ ಕಂಪೆನಿಯ ಪೂರ್ಣಾಧಿಕಾರ ನಡೆಯಲಾರಂಭಿಸಿದ್ದು ಹತ್ತೊಂಬತ್ತನೆಯ ಶತಮಾನದ ಆರಂಭದಲ್ಲಿ.

ಈಸ್ಟ್ ಇಂಡಿಯಾ ಕಂಪೆನಿಯು ಆಂಗ್ಲ ಅಧಿಕಾರಿಗಳಿಗೆ ದೇಶೀಯ ಭಾಷೆಗಳ ಜ್ಞಾನವನ್ನುಂಟು ಮಾಡುವುದಕ್ಕಾಗಿ ೧೮೦೦ರಲ್ಲಿ ಕಲ್ಕತ್ತೆಯಲ್ಲಿ ಫೋರ್ಟ್ ವಿಲಿಯಂ ಕಾಲೇಜ್ ಎಂಬ ಸಂಸ್ಥೆ ಸ್ಥಾಪಿಸಲ್ಪಟ್ಟು, ಕಾಲೇಜಿನ ಉಪಯೋಗಕ್ಕಾಗಿ ಪುಸ್ತಕಗಳನ್ನು ಹಿಂದೀ ಬಂಗಾಲೀ, ಉರಿಯಾ ಮೊದಲಾದ ಭಾಷೆಗಳಲ್ಲಿ ತಯಾರಿಸಿದರು. ಕೆಲಕಾಲದನಂತರ ಸಿರಾಂಪುರದ ಮಿಷನ್ನಿನವರು ಕ್ರೈಸ್ತಮತ ಪ್ರಚಾರವನ್ನುದ್ದೇಶಿಸಿ ಕ್ರೈಸ್ತ ಮತೀಯ ಗ್ರಂಥಗಳ ಭಾಷಾಂತರವನ್ನು ಉರಿಯಾ ಭಾಷೆಯಲ್ಲಿ ಸಿದ್ಧಪಡಿಸಿದರು.

೧೮೨೨ರಲ್ಲಿ ಕ್ರೈಸ್ತಮತ ಪ್ರಚಾರಕ್ಕಾಗಿ ಪಾದ್ರಿಗಳು ಮೊತ್ತಮೊದಲು ಉತ್ಕಲದಲ್ಲಿ ನೆಲಸಿ ಮತಪ್ರಚಾರ ಮಾಡತೊಡಗಿದರು. ಇವರುಗಳಲ್ಲಿ ರೆ|| ಕ್ಯಾಂಪ್‌ಬೋನ್ ಮತ್ತು ರೆ|| ಲ್ಯಾಸಿ ಎಂಬವರು ಮುಖಂಡರು. ಈ ಪಾದ್ರಿಗಳು ಅಲ್ಲಲ್ಲಿ ವಿದ್ಯಾಲಯಗಳನ್ನಾರಂಭಿಸಿ ಮತಪ್ರಚಾರದೊಡನೆ ಉರಿಯ ನಿಘಂಟು, ವ್ಯಾಕರಣ ಮೊದಲಾದುವನ್ನು ರಚಿಸಿದರು.

ಕಂಪೆನಿಯ ಆಳಿಕೆ ಆರಂಭವಾಗಲು ಅದುವರೆಗೆ ಉತ್ಕಲದ ಕವಿ, ವಿದ್ವಾಂಸರುಗಳಿಗೆ ಸಿಕ್ಕುತ್ತಿದ್ದ ದೇಶೀಯ ರಾಜ ಮಹಾರಾಜರುಗಳ ಆಶ್ರಯ ಮರೆಯಾಯಿತು. ಈ ಕಾರಣದಿಂದ ಸಾಹಿತ್ಯದ ಮುನ್ನಡೆ ಕೆಲಕಾಲ ತಟಸ್ಥವಾಗಿತ್ತು. ೧೮೩೫ರಲ್ಲಿ ಪೂರಿಯಲ್ಲಿ ಸರ್ಕಾರೀ ವಿದ್ಯಾಲಯ ಸ್ಥಾಪಿಸಲ್ಪಟ್ಟಿತು. ಈ ಶಾಲೆಯಲ್ಲಿ ಕಲಿತು ಹೊರಬಿದ್ದವರಿಗೆ ಕೆಲಕಾಲದ ನಂತರ ತಮ್ಮ ಭಾಷೆಯ ಏಳಿಗೆಗಾಗಿ ದುಡಿಯಬೇಕೆಂಬ ಉತ್ಸಾಹ ಹುಟ್ಟಿತು.

೧೮೬೯ರಿಂದ ಉತ್ಕಲ ಸಾಹಿತ್ಯದ ಅಭಿವೃದ್ಧಿಯನ್ನುದ್ದೇಶಿಸಿ ಕಟಕ್, ಪೂರಿ ಮತ್ತು ಬಾಲಸೋರ್‌ಗಳಲ್ಲಿ ಹಲ ಸಾಹಿತ್ಯಕ ಸಂಸ್ಥೆಗಳು ಸ್ಥಾಪಿತವಾಗಿ ನಡೆದುಬಂದವು. ಇವುಗಳಲ್ಲಿ 'ಉತ್ಕಲೋಲ್ಲಾಸಿನೀ ಸಭಾ' (೧೮೬೯), 'ಕಟಕ್ ಸೊಸೈಟಿ (೧೮೬೯.ಮುಖಪತ್ರ–'ಉತ್ಕಲ ಹಿತೈಷಿಣಿ'); 'ಕಟಕ್ ಯಂಗ್‌ಮೆನ್ಸ್ ಲಿಟರೆರಿ ಅಸೋಷಿಯೇಷನ್' (೧೮೭೪.ಮುಖಪತ್ರ – 'ಉತ್ಕಲಪುತ್ರ'); 'ಕಟಕ್ ವೈ. ಯಂ. ಸಿ. ಎ.' ಮತ್ತು 'ಉತ್ಕಲ ಭಾಷೊದ್ದೀಪಿನೀ ಸಭಾ' ಎಂಬವು ಮುಖ್ಯವಾದವು. ಉತ್ಕಲ ಭಾಷೋದ್ದೀಪಿನೀ ಸಭೆ ೧೮೬೭ನೆಯ ಜುಲೈ ೨೮ರಲ್ಲಿ ಸ್ಥಾಪಿತವಾಯಿತು. ಈ ಸಂಸ್ಥೆಯ ಸ್ಥಾಪನೆ ಮತ್ತು ಮುನ್ನಡೆಗಾಗಿ ದುಡಿದವರಲ್ಲಿ ವಿಖ್ಯಾತ ವಂಗಕವಿ ದಿವಂಗತ ರಂಗಲಾಲ್ ಬ್ಯಾನರ್ಜಿಯವರೂ ಒಬ್ಬರು.

ಆಧುನಿಕ ಉತ್ಕಲ ಸಾಹಿತ್ಯದ ಏಳಿಗೆಗಾಗಿ ಅಪಾರ ಪರಿಶ್ರಮಪಟ್ಟು ಈ ಸಾಹಿತ್ಯದ ಕುಲಪುರೋಹಿತರೆಂದು ವಿಖ್ಯಾತರಾದವರು ಕೀರ್ತಿಶೇಷರಾದ ರಾಧಾನಾಥರಾಯ್ ಅವರು. ಇವರು ವಿದ್ಯಾ ಇಲಾಖೆಯಲ್ಲಿ ಅಧಿಕಾರಿಗಳಾಗಿದ್ದು ನಲವತ್ತು ವರ್ಷಗಳ ಕಾಲ ಅಖಂಡವಾಗಿ ದುಡಿದು ಭಾಷಾಸೇವೆ ಮಾಡಿದ್ದಲ್ಲದೆ ಹಲವು ತರುಣರಲ್ಲಿ ಉತ್ಸಾಹ ಹುಟ್ಟಿಸಿ ಕೆಲಸ ಮಾಡಿಸಿದರು. ಆಧುನಿಕ ಉತ್ಕಲ ಸಾಹಿತದಲ್ಲಿ ಕಾದಂಬರಿ ಸಾಹಿತ್ಯವನ್ನು ಆರಂಭಿಸಿದವರೂ ರಾಧಾನಾಥರಾಯ್ ಅವರೇ.

ರಾಧಾನಾಥರಂತೆಯೇ ಆಧುನಿಕ ಉತ್ಕಲ ಸಾಹಿತ್ಯಕ್ಕಾಗಿ ದುಡಿದು ಕೀರ್ತಿಗಳಿಸಿದವರು ದಿವಂಗತ ಮಧುಸೂದನರಾವ್ ಅವರು. (೧೮೫೩–೧೯೧೨) ಇವರು ಉತ್ಕಲದಲ್ಲಿ ನೆಲಸಿದ್ದ ಮಹಾರಾಷ್ಟ್ರರ ವಂಶದವರು. ಉತ್ಕಲ ಸಾಹಿತ್ಯದಲ್ಲಿ ಭಾವಗೀತ ಮತ್ತು ಸರಳರಗಳೆಗಳ ಹಾಗೂ ಹೊಸಗದ್ಯದ ಶೈಲಿಯ ನಿರ್ಮಾಪಕರು. ಇವರ ಕೃತಿಗಳನ್ನು ಓದಿ ದಿವಂಗತ ಬಂಕಿಂಚಂದ್ರರೂ, ರವೀಂದ್ರರೂ ಇವರನ್ನು ಬಾಯಿತುಂಬ ಹೊಗಳಿರುವರು.

ರೆ|| ಕಿಟೆಲ್‌ರವರು ಕನ್ನಡ ನಿಘಂಟನ್ನು ರಚಿಸಿ ನಮ್ಮ ಸಾಹಿತ್ಯದ ಸೇವೆ ಮಾಡಿದಂತೆ ಮಿ|| ಜಾನ್ ಲೆಡನ್ ಮತ್ತು ರೆ|| ಏಮ್ಸ್ ಸಟನ್ ಎಂಬವರು ಉರಿಯಾ ಭಾಷೆಯಲ್ಲಿ ನಿಘಂಟುಗಳನ್ನು ರಚಿಸಿರುವರು.

೧೮೬೬ರಲ್ಲಿ ಉತ್ಕಲದಲ್ಲಿ ತಲೆ ಹಾಕಿದ ಘೋರ ದುರ್ಭಿಕ್ಷದಿಂದ ದೇಶದ ಪ್ರಜೆಗಳಲ್ಲಿ ನಾಲ್ಕರಲ್ಲೊಂದು ಭಾಗ ಜನರು ಮೃತರಾದರು. ಈ ಕ್ಷಾಮದಿಂದ ದೇಶದ ಏಳಿಗೆಗೆ ಮಹಾ ಆತಂಕ ಒದಗಿ, ಸಾಹಿತ್ಯದ ಮುನ್ನಡೆಗೂ ಹಲವು ವಿಧದಲ್ಲಿ ಅಡ್ಡಿಯಾಯಿತು.

ಮುಂದೆ: ಮಧುಸೂದನರಾಯರ ಕೃತಿಗಳ ಪರಿಚಯ

## ಮಹಿಳಾ ಶಾಖೆ

ಕಳೆದ ಶುಕ್ರವಾರ ಸಂಜೆ ಶ್ರೀ ಸೌ. ಜಯದೇವಿಬಾಯಿ ಲಿಗಾಡೆ ಅವರು "ಕನ್ನಡ ಭಾಷೆಯ ಸದ್ಯದ ಪರಿಸ್ಥಿತಿ ಮತ್ತು ವೀರಶೈವ ಸಾಹಿತ್ಯದ ಗುರಿ" ಎಂಬ ವಿಷಯ ಕುರಿತು ಪರಿಷನ್ಮಂದಿರದಲ್ಲಿ ಭಾಷಣ ಮಾಡಿದರು. ಶ್ರೀ ಪಾರ್ವತಮ್ಮ ಪುಟ್ಟಣ್ಣಶೆಟ್ಟಿ ಅವರು ಸಭಾಧ್ಯಕ್ಷರಾಗಿದ್ದರು.

"ಕನ್ನಡ ನಾಡು ಹರಿದು ಹತ್ತಾರು ಆಡಳಿತಗಳಿಗೆ ಹಂಚಿಹೋಗಿರುವ ಕಾರಣ ಕನ್ನಡ ನುಡಿ ಪರಭಾಷೆಗಳ ಪ್ರಭಾವಕ್ಕೆ ಸಿಕ್ಕಿ ಸೋತು ಬಹಳ ಹೀನಸ್ಥಿತಿಗೆ ಬಂದಿದೆ. ಅದರಲ್ಲೂ ಸೊಲ್ಲಾಪುರದಂತಹ ಕನ್ನಡ ದೇಶದ ಗಡಿನಾಡುಗಳಲ್ಲಿ ಪರಭಾಷೆಗಳ ಆಕ್ರಮಣ ಹೇಳಲಿಕ್ಕೆ ತೀರದು. ಸೊಲ್ಲಾಪುರದಲ್ಲಿ ಮರಾಠಿಯ ಪ್ರಭಾವ ವಿಪರೀತವಾಗಿದ್ದರೆ ಇನ್ನಿತರ ಕಡೆಗಳಲ್ಲಿ ತೆಲಗು ಉರ್ದು ತಮಿಳು ಇಂಗ್ಲಿಷ್ ಭಾಷೆಗಳು ಕನ್ನಡವನ್ನು ಮೆಟ್ಟಿ ತಾವು ಮುಂದಾಗಿವೆ. ಕನ್ನಡಿಗರು ಬೇಗ ಎಚ್ಚತ್ತು, ಪರಭಾಷೆಯ ಮೋಹವನ್ನು ಕಿತ್ತೊಗೆದು, ಬಿರಿದ ನಾಡನ್ನು ಬೆಸೆದು, ಆ ನಾಡಿನಲ್ಲಿ ಮೆರೆವ ತಮ್ಮ ಭಾಷೆ ಹಿಂದಿನ ವೈಭವದಿಂದ ರಾರಾಜಿಸುವಂತೆ ವ್ರತ ಹೊತ್ತು ಕೆಲಸಮಾಡಬೇಕು.

ಮರಾಠಿಮಯವಾದ ಕನ್ನಡ ಪ್ರದೇಶದಿಂದ ಬಂದ ನಾನು ನಮ್ಮ ದುರವಸ್ಥೆಯನ್ನು ತಮ್ಮೊಡನೆ ಹೇಳಿಕೊಂಡೆನು. ಇನ್ನು ವೀರಶೈವ ಸಾಹಿತ್ಯದ ಗುರಿ ವಿಚಾರ ಎರಡು ಮಾತಾಡಲಿಚ್ಛಿಸುವೆನು. ವೀರಶೈವರು ಜನ ಸಾಮಾನ್ಯರಿಗೆ ತಿಳಿವನ್ನು ಹರಡಲು ಕನ್ನಡ ಭಾಷೆಯನ್ನು ಪಳಗಿಸಿದರು. ತಮ್ಮ ಮತದ ವಿಚಾರಗಳನ್ನೆಲ್ಲಾ ಎಷ್ಟೆ ಗಹನವಾದರೂ ಅದನ್ನು ಕನ್ನಡದಲ್ಲೇ ತಿಳಿಸಿದರು. ಈ ಪ್ರಯತ್ನದ ಫಲವಾಗಿ ನೂತನ ವಚನ ವಾಙ್ಮಯ ಪ್ರಚಾರಕ್ಕೆ ಬಂದಿತು. ಹಿರಿಯ ವೀರಶೈವ ಕವಿಗಳನೇಕರು ಅಚ್ಚಕನ್ನಡ ಛಂದಸ್ಸುಗಳಾದ ರಗಳೆ ಷಟ್ಪದಿ ತ್ರಿಪದಿ ಸಾಂಗತ್ಯ ಇವುಗಳಲ್ಲಿ ಕಾವ್ಯಗಳನ್ನು ಬರೆದು ಇವುಗಳ ಸತ್ವವನ್ನು ತಾವು ಕಂಡುಕೊಂಡು ಈಚೆಗೆ ಬಂದ ಕವಿಗಳಿಗೆ ಮೇಲ್ಪಂಕ್ತಿಯನ್ನು ಹಾಕಿದರು. ಜೈನ ಕವಿಗಳ ಕಾಲದಲ್ಲಿ ಕನ್ನಡ ಸಾಹಿತ್ಯ ಅರಮನೆಯಲ್ಲಿ ಸೆರೆಯಾಗಿತ್ತು; ಅವರು ಸಂಸ್ಕೃತವನ್ನು ಕನ್ನಡಕ್ಕೆ ತುಂಬಿ ವೃತ್ತ ಕಂದಗಳ ಗೆರೆಯನ್ನು ದಾಟದೆ ಪ್ರೌಢ ಚಂಪೂ ಕಾವ್ಯಗಳನ್ನು ಬರೆದರು. ಇವು ಉದ್ಗ್ರಂಥಗಳಾದರೂ ಬಹಳ ಪೆಡಸಾದ ಕಾರಣ ಜನಸಾಮಾನ್ಯರಿಗೆ ಇವುಗಳಿಂದ ಪ್ರಯೋಜನ ಪಡೆಯಲು ಸಾಧ್ಯವಿಲ್ಲ. ವೀರಶೈವರು ಎಲ್ಲರಿಗೂ ಭಕ್ತಿ ಜ್ಞಾನ ಆನಂದ ವೈರಾಗ್ಯ ವಿಚಾರ ತಿಳಿಸಲು ಹೊರಟು ಕನ್ನಡ ಕಾವ್ಯ ಪ್ರಪಂಚದಲ್ಲಿ ಹೊಸ ದಾರಿಯನ್ನು ತುಳಿದು ಉಪಕಾರ ಮಾಡಿರುವರು." ಎಂದು ಉಪನ್ಯಾಸಕರು ತಿಳಿಸಿದರು.

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಛಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧೨
ಬಿಡಿ ಪತ್ರಿಕೆ: ೬ ಕಾಸು




ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೩೬
ಬೆಂಗಳೂರು: ಶುಕ್ರವಾರ, ಜುಲೈ ೨, ೧೯೪೩

## ಪತ್ರಿಕೋದ್ಯೋಗ

೨೬-೬-೪೩ನೆಯ ಶನಿವಾರ ಮೈಸೂರು ಪ್ರಾಂತ ಸಮಿತಿಯ ಆಶ್ರಯದಲ್ಲಿ ಬೆಂಗಳೂರಿನ 'ತಾಯಿನಾಡು' ಮತ್ತು 'ಡೆಯ್ಲಿ ನ್ಯೂಸ್' ಪತ್ರಿಕೆಗಳ ಒಡೆಯರಾದ ಶ್ರೀ. ಪಿ. ಆರ್. ರಾಮಯ್ಯನವರು 'ಪತ್ರಿಕೋದ್ಯೋಗದ ಕೆಲವು ಅನುಭವಗಳು' ಎಂಬ ವಿಷಯವಾಗಿ ಪರಿಷನ್ಮಂದಿರದಲ್ಲಿ ಭಾಷಣ ಮಾಡಿದರು.

ಉಪಾಧ್ಯಕ್ಷರು ಉಪನ್ಯಾಸಕರನ್ನು ಸಭೆಗೆ ಪರಿಚಯ ಮಾಡಿಕೊಡುತ್ತ ಅವರ ಸಾರ್ವಜನಿಕ ಸೇವೆಯನ್ನು ಹೊಗಳಿದರು.

### ಭಾಷಣದ ಸಾರಾಂಶ

ಶ್ರೀ. ರಾಮಯ್ಯನವರು ಪೀಠಿಕೆಯಾಗಿ ಕನ್ನಡ ಪತ್ರಿಕೆಗಳಲ್ಲಿಯ ಭಾಷೆ ಸುಧಾರಣೆಹೊಂದುತ್ತಿದೆಯೆಂಮೂ ಜನಸಾಮಾನ್ಯವನ್ನು ಉದ್ದೇಶಿಸಿ ಪತ್ರಿಕೆಗಳನ್ನು ಹೊರಡಿಸಬೇಕಾಗಿರುವುದರಿಂದ ಸಾಹಿತ್ಯದ ಭಾಷೆಯ ಬಿಕ್ಕಟ್ಟು ಪ್ರೌಢ ಶೈಲಿಗಳನ್ನು ಬಿಡಬೇಕಾಗಿರುವುದು ಸ್ವಾಭಾವಿಕವಾಗಿದೆಯೆಂದೂ ಹೇಳಿದರು.

ಇಂಗ್ಲೆಂಡು ಮುಂತಾದ ದೇಶಗಳಲ್ಲಿ ಅಲ್ಲಿಯ ಹೆಂಗಸರು ಮತ್ತು ಕೂಲಿಕಾರರಿಗೆ ತಿಳಿಯಲೆಂದು ಪತ್ರಿಕೆಗಳ ಭಾಷೆಗೆ ಸುಲಭವಾದ ನೇರವಾದ ತಿಳಿಯಾದ ಶೈಲಿಯನ್ನು ಬಳಸುತ್ತಿದ್ದಾರೆಂದು ಹೇಳಿ, ಭಾರತದ ವೃತ್ತಪತ್ರಿಕೆಗಳ ಪ್ರಗತಿಗಾಗಿ ದುಡಿದಿರುವ ಲೋಕಮಾನ್ಯತಿಲಕರು, ಮಹಾತ್ಮ ಗಾಂಧಿಯವರು, ಮೋತಿಲಾಲ್ ಘೋಷ್ ಅವರು, ಸುರೇಂದ್ರನಾಥ್ ಬ್ಯಾನರ್ಜಿಯವರು, ಸುಬ್ರಹ್ಮಣ್ಯ ಅಯ್ಯರ್ ಅವರು, ಕಸ್ತೂರಿ ರಂಗಯ್ಯಂಗಾರರು, ಎಂ. ರಂಗಸ್ವಾಮಿ ಅಯ್ಯಂಗಾರರು, ಆನಿಬೆಸೆಂಟರು, ಸಿ. ವೈ. ಚಿಂತಾಮಣಿಯವರು ಮುಂತಾದ ಮಹನೀಯರ ಸೇವೆಯನ್ನೂ, ಕರ್ನಾಟಕದಲ್ಲಿ ಎಂ. ವೆಂಕಟಕೃಷ್ಣಯ್ಯನವರು, ಮುದವೀಡು ಕೃಷ್ಣರಾಯರು, ರಂಗನಾಥ ದಿವಾಕರ ಅವರು, ಡಿ. ವಿ. ಗುಂಡಪ್ಪನವರು ಮುಂತಾದ ಮಹನೀಯರ ಸೇವೆಯಿಂದ ಕನ್ನಡ ಪತ್ರಿಕೋದ್ಯಮ ನೀತಿಯಲ್ಲಿಯೂ ರೀತಿಯಲ್ಲಿಯೂ ಉಪಯುಕ್ತತೆಯಲ್ಲಿಯೂ ಮುಂದುವರಿಯಲು ಬಹಳ ಸಹಾಯವಾಗಿರುವುದನ್ನೂ ನೆನೆದರು.

"ಪತ್ರಿಕೋದ್ಯೋಗದ ಮೇಲ್ಮೆ ಸಮಾಜದಲ್ಲಿಯ ಪ್ರತಿಯೊಬ್ಬ ವ್ಯಕ್ತಿಯ ಗುಣ, ಸಿದ್ಧತೆ, ಗುರಿ–ಇವನ್ನು ಅವಲಂಬಿಸಿದೆ. ಒಟ್ಟು ಸಮಾಜದಲ್ಲಿ ಪ್ರಗತಿಯ ಹಾರೈಕೆ, ಸ್ವಾತಂತ್ರ್ಯಪ್ರೇಮ ಇದ್ದರೆ ಪತ್ರಿಕೆಗಳು ಹುಟ್ಟಲೂ, ಅವುಗಳಿಂದ ಬದುಕು ಬೆಳೆದು ನಾಡಿಗೆ ಶ್ರೇಯಸ್ಸು ಕೂಡಿಬರಲೂ ಸಾಧ್ಯವಾಗುವುದು. ಪತ್ರಿಕೆಗಳ ಪ್ರಭಾವ, ಅಧಿಕಾರ ನಾಡಿನ ಮೇಲ್ಮೆಯ ಗುರಿಯನ್ನು ಸಾಧಿಸಲೆಂದೇ ನಡೆಯುವುದರಿಂದ ಜನರ ಪ್ರೋತ್ಸಾಹ ಇವಕ್ಕೆ ಅಖಂಡವಾಗಿ ದೊರೆಯಬೇಕು. ದಾಸ್ಯದಲ್ಲಿ ಸಿಕ್ಕಿಬಿದ್ದಿರುವ ನಮ್ಮ ದೇಶಕ್ಕಂತೂ ಪತ್ರಿಕೆಗಳ ಸೇವೆ ಅತ್ಯಗತ್ಯ. ಸುದ್ದಿ ಟೀಕೆಗಳ ಸಂಗ್ರಹ ಕಾರ್ಯವೊಂದೇ ಪತ್ರಿಕೆಗಳ ಕೆಲಸವಲ್ಲ. ಜನಜೀವನದ ಕನ್ನಡಿಯಾಗಿ ದೇಶದ ಯೋಗಕ್ಷೇಮಕ್ಕೂ ಪ್ರಗತಿಗೂ ದುಡಿಯುವುದು ಪತ್ರಿಕೆಗಳ ಧ್ಯೇಯವೂ ವ್ರತವೂ ಆಗಿದೆ.

"ಇಂಗ್ಲೆಂಡು, ಅಮೆರಿಕಾ, ಜಪಾನ್ ಮುಂತಾದ ಹೊರದೇಶಗಳಲ್ಲಿ ಪತ್ರಿಕೆಗಳ ಪ್ರಚಾರ ೨೦–೩೦ ಲಕ್ಷಕ್ಕೆ ಏರಿದೆ. ನಮ್ಮ ದೇಶದಲ್ಲಾದರೋ ಸಾವಿರಗಳ ಸಂಖ್ಯೆಯನ್ನು ದಾಟಿ ಲಕ್ಷಕ್ಕೆ ಮುಟ್ಟಿಲ್ಲ. ಕಾರಣ ಒಂದು ಕಡೆ 'ಅಕ್ಷರ'; ಇನ್ನೊಂದು ಕಡೆ 'ಅರ್ಥ'. ನೂರಕ್ಕೆ ೭೦–೯೦ ಮಂದಿ ಅಕ್ಷರಸ್ಥರಿರುವ ಹೊರ ದೇಶಗಳಲ್ಲಿ ೨೦–೩೦ ಲಕ್ಷ ಪ್ರಚಾರವಿರುವುದು ಆಶ್ಚರ್ಯವಲ್ಲ. ನೂರಕ್ಕೆ ೧೦–೧೨ ಮಂದಿ ಮಾತ್ರ ಅಕ್ಷರಸ್ಥರಿರುವ ನಮ್ಮ ದೇಶದಲ್ಲಿ ಲಕ್ಷಗಟ್ಟಲೆ ಪ್ರಚಾರ ಸಂಖ್ಯೆ ಇರುವುದಾದರೂ ಹೇಗೆ?

ಮುಖ್ಯ ನಮ್ಮ ದೇಶ ರಾಜಕೀಯವಾಗಿ ಬಿಡುಗಡೆ ಪಡೆಯಬೇಕು. ಓದುಬರಹ ಹರಡಿ, ಓದುವವರ ಸಂಖ್ಯೆ ಹೆಚ್ಚಬೇಕು. ಓದುವವರ ಸಂಖ್ಯೆ ಎಂದರೆ ಒಂದೇ ಪತ್ರಿಕೆಯನ್ನು ಹತ್ತಾರು ಮಂದಿ ಸೇರಿ ಓದುವುದಲ್ಲ. ಕೊಂಡು ಓದಲು ಆರ್ಥಿಕ ಚೈತನ್ಯವೂ ಹೆಚ್ಚಾಗಿ, ಪತ್ರಿಕೆಗಳ ಸತ್ಯ ಸ್ಥಾಪನೆ, ನ್ಯಾಯಾನ್ಯಾಯ ವಿಮರ್ಶೆ, ಪರೋಪಕಾರ ಗುಣಗಳು ಸಂತತವಾಗಿ ನಡೆಯಲು ಆಸ್ಪದವಾಗಬೇಕು.

ನಮ್ಮ ಪತ್ರಿಕೆಗಳಿಗೆ ರಾಜಕೀಯವೇ ಮೂಲ. ಆರ್ಥಿಕ ವಿಚಾರವಲ್ಲ. ನಾನು 'ರಾಜಕೀಯ'ವೆಂಬ ಮಾತನ್ನು ವಿಶಾಲವಾದ ಅರ್ಥದಲ್ಲಿ ಬಳಸುತ್ತಿದ್ದೇನೆ. ಪತ್ರಿಕೋದ್ಯೋಗಿಯಾದವನು ರಾಜಕೀಯದಲ್ಲಿ ತೊಡಗಿದಾಗ ಈ ಪಂಥ ಆ ಪಂಥವೆಂದು ಯಾವುದಕ್ಕೂ ಅಂಟಿಕೊಳ್ಳದೆ ನಿರ್ಲಿಪ್ತನಾಗಿರಬೇಕು. ನ್ಯಾಯಕ್ಕೂ ಧರ್ಮಕ್ಕೂ, ಸತ್ಯಕ್ಕೂ ಮಾತ್ರ ಅವನು ಸದಾ ಅಂಟಿಕೊಂಡಿದ್ದು, ಪ್ರಜೆಗಳ ಕಡೆಯಿಂದ ತಪ್ಪಾಗಲಿ; ಸರಕಾರದ ಕಡೆಯಿಂದ ತಪ್ಪಾಗಲಿ, ನಿರ್ಮತ್ಸರನಾಗಿ, ನಿರ್ಭೀತಿಯಿಂದ, ನಿಷ್ಪಕ್ಷಪಾತತೆಯಿಂದ ಪತ್ರಿಕೋದ್ಯೋಗದ ತತ್ವಗಳನ್ನು ಕಾಪಾಡಿಕೊಂಡು ಬರಬೇಕು. ಸರಕಾರವೂ ಸಮಾಜವೂ ಜನತೆಯ ವಿಶ್ವವಿದ್ಯಾನಿಲಯವಾದ ಈ ಉದ್ಯೋಗವನ್ನು ಅದರ ಗೌರವಕ್ಕೆ ತಕ್ಕಂತೆ ಪೋಷಿಸಿಕೊಂಡು ಬರಬೇಕು."

ಪ್ರಾಂತಸಮಿತಿಯ ಅಧ್ಯಕ್ಷರಾದ ಶ್ರೀ. ಸಿ. ಕೆ. ವೆಂಕಟರಾಮಯ್ಯನವರು ಉಪನ್ಯಾಸಕರಿಗೆ ಧನ್ಯವಾದಗಳನ್ನು ಸಮರ್ಪಿಸಿದ ಮೇಲೆ ಸಭೆ ಮುಗಿಯಿತು.

---

## ಕನ್ನಡದಲ್ಲಿ ಪತ್ರಿಕೋದ್ಯಮ ಶಿಕ್ಷಣ

ಕನ್ನಡ ಪತ್ರಿಕೋದ್ಯಮ ಶಿಕ್ಷಣ ಕಲಿಯಬಯಸುವವರಿಗೆ ತಿಂಗಳಿಗೆ ೫೦ ರೂ.ಗಳ ಎರಡು ವಿದ್ಯಾರ್ಥಿವೇತನ ಕೊಡಲು ಹುಬ್ಬಳ್ಳಿ ಸಂಯುಕ್ತ ಕರ್ನಾಟಕ ಸಂಸ್ಥೆಯವರು ನಿರ್ಧರಿಸಿದ್ದಾರೆ. ಕನ್ನಡ ಆನರ್ಸ್‌ನಲ್ಲಿ ಪ್ರಥಮ ತರಗತಿಯಲ್ಲಿ ತೇರ್ಗಡೆಯಾಗಿರುವವರಿಗೆ ಮಾತ್ರ ಈ ವೇತನ ಪಡೆಯುವ ಅವಕಾಶವಿದೆಯೆಂದೂ ೧೫-೭-೪೩ರಿಂದ ಎರಡು ವರ್ಷ ಈ ವೇತನಗಳನ್ನು ಕೊಡಲಾಗುವುದೆಂದೂ 'ಸಂಯುಕ್ತ ಕರ್ನಾಟಕ' ಪತ್ರಿಕೆಯ ಸಂಪಾದಕರಾದ ಶ್ರೀ. ಮೊಹರೆ ಹನುಮಂತರಾಯರು ತಿಳಿಸುತ್ತಾರೆ.

# ಕನ್ನಡ ನುಡಿ

**ಶುಕ್ರವಾರ, ಜುಲೈ ೨, ೧೯೪೩**

## ಒಂದು ದೊಡ್ಡ ವ್ಯಕ್ತಿ ಮರೆಯಾಯಿತು

**ರಾಜಕಾರ್ಯಪ್ರವೀಣ ಶ್ರೀ. ಎನ್. ಎಸ್. ಸುಬ್ಬರಾಯರು** ಹೋದ ಮಂಗಳವಾರ ರಾತ್ರಿ ಅನಿರೀಕ್ಷಿತವಾಗಿ ಕಾಲವಶರಾದ ರೆಂದು ತಿಳಿದು ಬಹಳ ವಿಷಾದಿಸುತ್ತೇವೆ. ಅವರ ನಿಧನದಿಂದ ಭಾರತಕ್ಕೆ ಅದರಲ್ಲಿಯೂ ಕರ್ನಾಟಕಕ್ಕೆ ತುಂಬಿ ಬರಲಾರದ ಒಂದು ದೊಡ್ಡ ನಷ್ಟವಾಗಿರುತ್ತದೆ. ಅಗ್ರಪಂಕ್ತಿಯ ಮೇಧಾವಿಗಳೆಂದೂ, ವಿದ್ಯಾನಿಧಿಯೆಂದೂ, ಅರ್ಥ ಶಾಸ್ತ್ರದಲ್ಲಿ ಅದ್ವಿತೀಯ ಪಾಂಡಿತ್ಯವುಳ್ಳವರೆಂದೂ ನೂತನ ಭಾರತದ ನಿರ್ಮಾಣದಲ್ಲಿ ಅತ್ಯಂತ ಶ್ರದ್ಧೆ ಆದರಗಳನ್ನು ತೋರಿದವರೆಂದೂ ಲೋಕ ಅವರನ್ನು ಮೆಚ್ಚಿಕೊಂಡಿತ್ತು.

ಮೈಸೂರಿನ ಮತ್ತು ಬೆಂಗಳೂರಿನ ಕಾಲೇಜುಗಳಲ್ಲಿ ಶ್ರೀ. ಎನ್. ಎಸ್. ಸುಬ್ಬರಾಯರು ವಿದ್ಯಾಭ್ಯಾಸಮಾಡಿ ತಮ್ಮ ಸಹಪಾಠಿಗಳ ಮನಸ್ಸಿನ ಮೇಲೆ ಪರಿಣಾಮವನ್ನುಂಟುಮಾಡಿದರು ; ಮತ್ತು ತಮ್ಮ ಉಪಾಧ್ಯಾಯರುಗಳ ಅಚ್ಚುಮೆಚ್ಚಿನ ಶಿಷ್ಯರಾಗಿದ್ದರು. ಪರೀಕ್ಷೆಗಳಲ್ಲಿ ಯಾವಾಗಲೂ ಅಗ್ರಸ್ಥಾನವನ್ನು ಪಡೆಯುತ್ತಿದ್ದರು. ಕೆಲವುಕಾಲ ಮದರಾಸ್ ಕ್ರಿಶ್ಚಿಯನ್ ಕಾಲೇಜಿನಲ್ಲಿಯೂ ವ್ಯಾಸಂಗಮಾಡಿ ಅಲ್ಲಿಯ ಉಪಾಧ್ಯಾಯರುಗಳ ಗೌರವವನ್ನು ಸಂಪಾದಿಸಿದರು. ಬಿ. ಎ. ಡಿಗ್ರಿಯಲ್ಲಿ ಸ್ವರ್ಣಪದಕಗಳನ್ನೂ ಬಹುಮಾನಗಳನ್ನೂ ಪಡೆದರು. ಮೊದಲಿಂದಲೂ ಅವರಿಗೆ ಸಾಹಿತ್ಯದಲ್ಲಿಯೂ ಅರ್ಥಶಾಸ್ತ್ರದಲ್ಲಿಯೂ ಒಂದೇ ಸಮನಾದ ಅಭಿರುಚಿಯೂ ಶಕ್ತಿಯೂ ಇತ್ತು. ಬಿ. ಎ. ಡಿಗ್ರಿ ಬಹುಮಾನ ಪುಸ್ತಕವಾಗಿ ಜೊಎಟ್ (Jowet) ಅವರ **ಪ್ಲೇಟೋವಿನ ಸಂವಾದಗಳು** (Dialogues of Plato) ಎಂಬ ಪುಸ್ತಕವನ್ನು ಆರಿಸಿಕೊಂಡರು. ಆ ಬಳಿಕ ಮೈಸೂರು ಸರ್ಕಾರದವರು ಸುಬ್ಬರಾಯರನ್ನು ಇಂಗ್ಲೆಂಡಿಗೆ ವಿದ್ಯಾಭ್ಯಾಸಕ್ಕಾಗಿ ಕಳಿಸಿಕೊಟ್ಟರು. ಅಲ್ಲಿ ಐ.ಸಿ.ಎಸ್. ಪರೀಕ್ಷೆಗೆ ಅವರಿಗೆ ಪ್ರವೇಶದ ಹಕ್ಕು ಇರದ್ದರಿಂದ ಕೇಂಬ್ರಿಜ್ಜಿನಲ್ಲಿ ಅರ್ಥಶಾಸ್ತ್ರವನ್ನು ಅಭ್ಯಾಸ ಮಾಡಿ ಅಲ್ಲಿ ಎಂ.ಎ. ಡಿಗ್ರಿ ಪಡೆದರು. ಹಾಗೆಯೇ 'ಲಾ' ಪರೀಕ್ಷೆಯನ್ನೂ ಮಾಡಿದರು. ಅರ್ಥಶಾಸ್ತ್ರದಲ್ಲಿ ಪ್ರಖ್ಯಾತರಾದ ಪ್ರೊ. ಮಾರ್ಷಲ್ ಅವರು ಸುಬ್ಬರಾಯರ ಗುರುಗಳು; ಈಗ ಬಹಳ ಪ್ರಸಿದ್ಧಿಗೆ ಬಂದಿರುವ ಡಾ. ಕೇನ್ಸ್ ಅವರು ಅವರ ಸಹಪಾಠಿಗಳು. ಆಗಲೆ ಆ ವಿಶ್ವವಿದ್ಯಾನಿಲಯದ ವಿದ್ವನ್ಮಣಿಗಳಲ್ಲಿ ಸುಬ್ಬರಾಯರು ತಮ್ಮ ಪ್ರತಿಭೆಯನ್ನು ಪ್ರದರ್ಶಿಸಿದ್ದರು.

ಅಲ್ಲಿಂದ ಭಾರತಕ್ಕೆ ಹಿಂತಿರುಗಿ ಬಂದ ಮೇಲೆ ತಮ್ಮ ಸ್ವದೇಶದ ಪ್ರೀತಿಯ ಗುರುತಾಗಿ ಬೌದ್ಧ ಗ್ರಂಥವಾದ 'ಜಾತಕ'ಗಳನ್ನು ಆಮೂಲಾಗ್ರವಾಗಿ ಸಂಶೋಧನ ಮಾಡಿ **ಪುರಾತನ ಭಾರತದ ಆರ್ಥಿಕ ಮತ್ತು ರಾಜಕೀಯ ಪರಿಸ್ಥಿತಿಗಳು** (Economic and Political Conditions in Ancient India) ಎಂಬ ಪ್ರಬಂಧವನ್ನು ಬರೆದು ಕೇಂಬ್ರಿಜ್ ಯೂನಿವರ್ಸಿಟಿಯ ಬಹುಮಾನವನ್ನು ಪಡೆದರು.

ಅವರು ಮೈಸೂರಿಗೆ ಬಂದ ಕೂಡಲೆ ಮಹಾರಾಜರವರ ಕಾಲೇಜಿನಲ್ಲಿ ಪ್ರೊಫೆಸರಾಗಿ ನೇಮಕವಾಗಿ ಇಂಗ್ಲಿಷು, ಚರಿತ್ರೆ ಮತ್ತು ಅರ್ಥಶಾಸ್ತ್ರಗಳನ್ನು ಬೋಧಿಸುತ್ತಾ ಸಾವಿರಾರು ವಿದ್ಯಾರ್ಥಿಗಳ ಪ್ರೀತಿ ಗೌರವಗಳನ್ನು ಗಳಿಸಿದರು. ಅವರು ಗೋಪ್ಯವಾಗಿ ಎಷ್ಟೋ ಬಡ ವಿದ್ಯಾರ್ಥಿಗಳಿಗೆ ಸಹಾಯಮಾಡಿದರು. ಯಾವ ವಿದ್ಯಾರ್ಥಿಯ ಹೆಸರನ್ನಾಗಲಿ ಸಂಗತಿಯನ್ನಾಗಲಿ ಅವರು ಮರೆಯಲಿಲ್ಲ. ಶೀಘ್ರದಲ್ಲಿಯೆ ಅದೇ ಕಾಲೇಜಿನ ಪ್ರಿನ್ಸಿಪಲ್ ಆದರು. ೧೯೧೬ರಲ್ಲಿ ಸ್ಥಾಪಿತವಾದ ಮೈಸೂರು ವಿಶ್ವವಿದ್ಯಾನಿಲಯದ ಯೋಜನೆಯನ್ನು ತಯಾರು ಮಾಡುವುದರಲ್ಲಿ ಇವರೂ ಸೇರಿದ್ದರು. ೧೯೨೭ ರಿಂದ ೩೭ರ ವರೆಗೆ ಹತ್ತು ವರ್ಷಗಳ ಕಾಲ ವಿದ್ಯಾ ಇಲಾಖೆಯ ಡೈರೆಕ್ಟರಾಗಿ ಇದ್ದುಕೊಂಡು ದೇಶದ ಪ್ರಾಥಮಿಕ ಮತ್ತು ಮಧ್ಯಮ ದರ್ಜೆಯ ವಿದ್ಯಾಭ್ಯಾಸವನ್ನು ಸಾಧ್ಯವಾದ ಮಟ್ಟಿಗೂ ಸುಧಾರಿಸಿದರು. ಕನ್ನಡವನ್ನು ಬೋಧನ ಭಾಷೆಯನ್ನಾಗಿ ಮಾಡಿ, ಉದ್ಯೋಗಗಳನ್ನು ಐಚ್ಛಿಕವಾಗಿ ತೆಗೆದುಕೊಳ್ಳುವುದಕ್ಕೆ ಸೌಕರ್ಯಗಳನ್ನುಂಟುಮಾಡಿದರು.

೧೯೩೭ರಿಂದ ೧೯೪೨ರ ವರೆಗೆ ವಿಶ್ವವಿದ್ಯಾನಿಲಯದ ಸ್ಥಾನಪತಿಗಳಾಗಿ ಅಲ್ಲಿಯೂ ವಿದ್ಯಾರ್ಥಿಗಳ ಸೌಕರ್ಯ ಅಭಿವೃದ್ಧಿಗಳ ಮತ್ತು ಉದ್ಯಮ ಶಿಕ್ಷಣಕ್ಕೆ ಡಿಪ್ಲೊಮ ಪ್ರಶಸ್ತಿಯ (Diploma Courses) ಏರ್ಪಾಡುಗಳನ್ನು ಮಾಡಿ, ಒಟ್ಟಿನಮೇಲೆ ವಿಶ್ವವಿದ್ಯಾನಿಲಯದ ಔನ್ನತ್ಯ ಗಾಂಭೀರ್ಯಗಳನ್ನು ಹೆಚ್ಚಿಸುವ ಯೋಜನೆಗಳ ಕಡೆಗೆ ಯಾವಾಗಲೂ ದೃಷ್ಟಿಯನ್ನು ಇಟ್ಟುಕೊಂಡಿದ್ದರು. ಭಾರತದ ಅಖಿಲ ವಿಶ್ವವಿದ್ಯಾನಿಲಯಗಳ ಸಮಿತಿಗೆ (All India Inter-University Board) ಮೊದಲು ಕಾರ್ಯದರ್ಶಿಗಳಾಗಿದ್ದು ಆಮೇಲೆ ಅಧ್ಯಕ್ಷರಾಗಿದ್ದರು. ವಿದ್ಯಾಭ್ಯಾಸದ ಮತ್ತು ಆರ್ಥಿಕ ವಿಷಯಗಳ ಮೇಲೆ ಭಾಷಣಗಳನ್ನು ಮಾಡಲು ಅನೇಕ ವೇಳೆ ಹೊರಗಿನ ಭಾರತೀಯ ಸಂಸ್ಥೆಗಳಿಂದ ಆಹ್ವಾನಗಳನ್ನು ಸ್ವೀಕರಿಸುತ್ತಿದ್ದರು. ಮದರಾಸು ವಿಶ್ವವಿದ್ಯಾನಿಲಯದಲ್ಲಿ ೧೯೩೬-೩೭ರಲ್ಲಿ ಕೊಟ್ಟ ಉಪನ್ಯಾಸಗಳ ತಳಹದಿಯ ಮೇಲೆ **ಆರ್ಥಿಕ ಸಂಯೋಜನೆಯ ಕೆಲವು ಅಂಶಗಳು** (Some aspects of Economic planning—1935) ಎಂಬ ಗ್ರಂಥವನ್ನು ಪ್ರಕಟಿಸಿದರು. ಈ ಆರ್ಥಿಕ ಪಾಂಡಿತ್ಯದ ಫಲವಾಗಿ ಇವರನ್ನು ಇಂಡಿಯಾ ಸರ್ಕಾರದವರು ಸುಂಕದ ಸಮಿತಿಯ (Tariff Board) ಸದಸ್ಯರನ್ನಾಗಿ ನೇಮಿಸಿದ್ದರು. ನಿವೃತ್ತರಾದ ಮೇಲೆ ಅಲಹಾಬಾದು ವಿಶ್ವವಿದ್ಯಾನಿಲಯದಲ್ಲಿ ಆರ್ಥಿಕ ಶಾಸ್ತ್ರದ ಪ್ರೊಫೆಸರಾಗಿ ಒಂದು ಅರ್ಥಶಾಸ್ತ್ರದ ಗ್ರಂಥವನ್ನು ಸಿದ್ಧಪಡಿಸುತ್ತಿದ್ದರು. ಈ ಪುಸ್ತಕ ಶೀಘ್ರದಲ್ಲಿ ಪ್ರಕಟನಾಗುವುದೆಂದು ಹಾರೈಸುತ್ತೇವೆ.

ಚಿಕ್ಕಂದಿನಿಂದಲೂ ಸುಬ್ಬರಾಯರು ತಮ್ಮ ಮೇಧಾವಿತನವನ್ನು ತೋರ್ಪಡಿಸುತ್ತಿದ್ದುದೇ ಅಲ್ಲದೆ ದೊಡ್ಡ ಆದರ್ಶಗಳನ್ನು ಇಟ್ಟುಕೊಂಡಿದ್ದರು. ಇಂಗ್ಲೆಂಡಿಗೆ ಹೋಗಿ ಪ್ರೌಢ ವಿದ್ಯೆಯನ್ನು ಪೂರ್ಣಗೊಳಿಸಿಕೊಳ್ಳಬೇಕೆಂದೂ, ಸ್ವದೇಶದ ವಿದ್ಯಾಭ್ಯಾಸವನ್ನು ತಮ್ಮ ಸೇವೆಯ ಮೂಲಕ ಉತ್ತಮಗೊಳಿಸಬೇಕೆಂದೂ, ಸಮಾಜದ ರೀತಿ ನೀತಿಗಳಲ್ಲಿ ಸುಧಾರಕರಾಗಬೇಕೆಂದೂ, ಭಾರತದ ರಾಜಕೀಯ ಸುಧಾರಣೆಗಳನ್ನು ತಮ್ಮ ಜೀವಮಾನದಲ್ಲಿ ಕಾಣಬೇಕೆಂದೂ ಹಾರೈಸುತ್ತಿದ್ದರು. ಭಗವಂತನು ಅವರ ಆಕಾಂಕ್ಷೆಗಳನ್ನು ಬಹುಮಟ್ಟಿಗೆ ದಯಪಾಲಿಸಿದನೆಂದು ಹೇಳಬಹುದು. ದೇಶಪ್ರೇಮಿಗಳಾಗಿ ಮೈಸೂರಿನ ಅಭ್ಯುದಯಕ್ಕಾಗಿ ಎಷ್ಟೋ ಶ್ರಮಿಸಿದ ಮಾಜಿ ದಿವಾನರಾದ ಸರ್ ಮಿರ್ಜಾ ಇಸ್ಮಾಯಿಲ್ ಅವರ ಜತೆಯಲ್ಲಿ, ಲಂಡನಿನಲ್ಲಿ ನಡೆದ ರೌಂಡ್ ಟೇಬಲ್ ಕಾನ್ಫರೆನ್ಸಿನಲ್ಲಿ ಭಾಗವಹಿಸಿದ್ದರು. ಮೈಸೂರಿನಲ್ಲಿ ಡಾ|| ಸೀಲ್ ಅವರ ಅಧ್ಯಕ್ಷತೆಯಲ್ಲಿ ರಾಜಕೀಯ ಸುಧಾರಣೆಗಳ ಸಮಿತಿಯನ್ನು ಏರ್ಪಡಿಸಿದಾಗಲೂ, ಸರ್ಕಾರದವರು ತೆರಿಗೆ ಪುನರ್ವ್ಯವಸ್ಥೆಯ ಸಮಿತಿಯನ್ನು ಏರ್ಪಡಿಸಿವಾಗಲೂ (೧೯೨೭) ಸುಬ್ಬರಾಯರು ಸದಸ್ಯರಾಗಿದ್ದು ತಮ್ಮ ಅನುಭವವನ್ನು ಒದಗಿಸಿಕೊಟ್ಟರು. ರಾಜಕೀಯದಲ್ಲಿ ಅಭ್ಯುದಯ ಪಂಥವನ್ನು ಹಿಡಿದು ಯಾವ ಉದ್ಯಮ ನಡೆಯಬೇಕಾದರೂ ತಮ್ಮ ಸಹಾನುಭೂತಿ ಸಹಕಾರಗಳನ್ನು ಕೊಡುತ್ತಿದ್ದರು.

ಸುಬ್ಬರಾಯರು ದೇಶದ ಪುರೋಭಿವೃದ್ಧಿಗೆ ದೇಶ ಭಾಷೆಯ ಉನ್ನತಿ ಅತ್ಯಾವಶ್ಯಕವೆಂಬುದನ್ನು ಚೆನ್ನಾಗಿ ಮನಗಂಡಿದ್ದರು. ಅವರು ಎಷ್ಟು ಅರ್ಥಶಾಸ್ತ್ರದ ಪಂಡಿತರೊ ಅಷ್ಟೆ ಸಾಹಿತ್ಯದ



ರಾಜಕಾರ್ಯಪ್ರವೀಣ ಶ್ರೀ. ಎಸ್. ಎಸ್. ಸುಬ್ಬರಾಯರು

ಪಂಡಿತರೂ ಆಗಿದ್ದರು. ಹೈಸ್ಕೂಲಿನಲ್ಲಿ ಕನ್ನಡವನ್ನು ಮಾಧ್ಯಮವಾಗಿ ಏರ್ಪಡಿಸಿದರು. ಇದು ಮುಂದೆ ವಿಶ್ವವಿದ್ಯಾನಿಲಯದಲ್ಲಿಯೂ ಕನ್ನಡ ಬರುವುದಕ್ಕೆ ಮೊದಲನೆಯ ಮೆಟ್ಟಲೆಂದು ಅವರು ಭಾವಿಸಿದ್ದರು. ವಿಶ್ವವಿದ್ಯಾನಿಲಯದಲ್ಲಿ "ಪ್ರಬುದ್ಧ ಕರ್ಣಾಟಕ"ದ ಸ್ಥಿತಿಗತಿಗಳನ್ನು ಉತ್ತಮಗೊಳಿಸಿ ಸಾಹಿತ್ಯ, ಶಾಸ್ತ್ರ ಎರಡೂ ಕನ್ನಡಕ್ಕೆ ಇಳಿಯುವಂತೆ ಬೆಂಬಲ ಕೊಟ್ಟರು. ಉಪನ್ಯಾಸಗಳನ್ನು ಕನ್ನಡದಲ್ಲಿಯೇ ಹೆಚ್ಚಿಸಿ ಅವುಗಳು ಗ್ರಂಥ ರೂಪದಲ್ಲಿ ಉಳಿಯುವಂತೆ "ಪ್ರಚಾರ ಪುಸ್ತಕಮಾಲೆ"ಯನ್ನು ಪ್ರಕಟಿಸುವ ಏರ್ಪಾಡು ಮಾಡಿದರು ಮತ್ತು ಇದು ಬಲು ಸುಲಭವಾದ ಬೆಲೆಯಲ್ಲಿ ಎಲ್ಲರ ಕೈಗೂ ದೊರಕುವಂತೆ ಮಾಡಿದರು. ಪಂಡಿತರ ಅಭ್ಯುದಯಕ್ಕಾಗಿ ಮೈಸೂರು ದೇಶದ ವಿದ್ಯಾಶಾಲಾ ಪಂಡಿತ ಮಂಡಲವನ್ನು ಸ್ಥಾಪಿಸಿ ಅದರ ಮೊದಲನೆಯ ಅಧ್ಯಕ್ಷರಾಗಿದ್ದರು. ಕನ್ನಡ ಸಾಹಿತ್ಯ ಪರಿಷತ್ತಿನ ವಿಷಯದಲ್ಲಿ ಅವರಿಗೆ ತುಂಬಾ ಅಭಿಮಾನವೂ ಉತ್ಸಾಹವೂ ಇತ್ತು. ವಿದ್ಯಾ ಇಲಾಖೆಯ ಡೈರೆಕ್ಟರಾಗಿಯೂ, ವಿಶ್ವವಿದ್ಯಾನಿಲಯದ ಸ್ಥಾನಪತಿಗಳಾಗಿಯೂ ಪರಿಷತ್ತಿಗೆ ಬೇಕಾದಷ್ಟು ಸಹಾಯ ಮಾಡಿದ್ದಾರೆ. ೧೯೩೫ರಲ್ಲಿ ಬೊಂಬಾಯಿಯಲ್ಲಿ ನಡೆದ ಇಪ್ಪತ್ತೊಂದನೆಯ ಸಾಹಿತ್ಯ ಸಮ್ಮೇಳನಕ್ಕೆ ಅಧ್ಯಕ್ಷರಾಗಿ ಜಗತ್ತಿನ ಪ್ರಮುಖ ಭಾಷೆಗಳಲ್ಲಿ ಕನ್ನಡದ ಸ್ಥಾನವನ್ನು ನಿರ್ದೇಶಿಸಿ ಕನ್ನಡಿಗರು ವಿಶ್ವದೃಷ್ಟಿಯನ್ನು ಇಟ್ಟುಕೊಂಡು ಅರ್ಹತೆಯ ಸ್ಥಾನವನ್ನು ಪಡೆಯಬೇಕೆಂದು ಉಪದೇಶಿಸಿ ಅಮೋಘವಾದ ಭಾಷಣವನ್ನು ಮಾಡಿದರು. ಇವರನ್ನು ಕಳೆದುಕೊಂಡದ್ದು ಪರಿಷತ್ತಿಗೆ ಅಪಾರವಾದ ನಷ್ಟವಾಗಿದೆ.

ಸುಬ್ಬರಾಯರು ದೇಶದ ಪ್ರಮುಖ ಕಾರ್ಯಕ್ಷೇತ್ರಗಳಲ್ಲಿ ಗಣ್ಯರಾಗಿದ್ದುದೇ ಅಲ್ಲ, ಕನ್ನಡ ಕ್ಷೇತ್ರದಲ್ಲಿ ಪೂರ್ಣಾಭಿಮಾನಿಗಳಾಗಿದ್ದುದೇ ಅಲ್ಲ, ವ್ಯಕ್ತಿತ್ವದಲ್ಲಿ ಕೂಡ ಗೌರವ ಸ್ಥಾನದಲ್ಲಿರುವವರಿಂದ ಗೌರವವನ್ನು ಪಡೆದಿದ್ದರು. ಅವರ ವಿದ್ಯಾರ್ಥಿಗಳಾಗಿದ್ದವರಲ್ಲಿ ಅನೇಕರು ಸರ್ಕಾರದಲ್ಲಿಯೂ ಇತರ ಕ್ಷೇತ್ರಗಳಲ್ಲಿಯೂ ಗಣ್ಯರಾಗಿದ್ದಾರೆ. ಅವರೆಲ್ಲರೂ ಸುಬ್ಬರಾಯರವರ ವಿಶ್ವಾಸ, ಘನತೆ, ಪಾಂಡಿತ್ಯಗಳನ್ನು ಸರ್ವದಾ ನೆನೆಯುತ್ತಿದ್ದಾರೆ. ಅವರ ಬುದ್ಧಿ ಕೌಶಲ್ಯ, ಜ್ಞಾಪಕಶಕ್ತಿ, ಖಚಿತವಾದ ಪಾಂಡಿತ್ಯ, ಸ್ಪಷ್ಟವಾದ ಪ್ರತಿಪಾದನೆ, ಉನ್ನತ ಆದರ್ಶಗಳು, ಸಮಯದಲ್ಲಿ ಈ ಆದರ್ಶಗಳಿಗಾಗಿ ನಿಷ್ಠುರವಾಗಿ ಆಡಿದರೂ ಅವರ ಬೆಣ್ಣೆಯಂತಹ ಮೃದುವಾದ ಹೃದಯ, ಹಿಡಿದ ಕೆಲಸದಲ್ಲಿ ಧೈರ್ಯ ಸ್ಥೈರ್ಯಗಳು ಮುಂತಾದ ಅನೇಕ ಸುಗುಣಗಳನ್ನು ತಮ್ಮ ಜೀವನದ ಸತ್ಪ್ರೇರಣೆಗಳಾಗಿ ಮಾಡಿಕೊಂಡಿರುತ್ತಾರೆ.

ಶ್ರೀ ಸುಬ್ಬರಾಯರು ನಮ್ಮ ಕಣ್ಣಿಗೆ ಮರೆಯಾದರೂ ಅವರ ಜೀವನವೂ, ಆದರ್ಶವೂ, ಕೀರ್ತಿಯೂ, ಎಂದಿಗೂ ಮರೆಯಾಗಲಾರವು. ಕರ್ನಾಟಕದಲ್ಲಿ ಅಜರಾಮರವಾದ ಯಶಸ್ಸು ಅವರದು. ಭಗವಂತನು ಅವರ ಆತ್ಮಕ್ಕೆ ಸದ್ಗತಿಯನ್ನೂ ಅವರ ಕುಟುಂಬ ವರ್ಗಕ್ಕೆ ಶಾಂತಿ ಸಮಾಧಾನಗಳನ್ನೂ ದಯಪಾಲಿಸಲೆಂದು ಪ್ರಾರ್ಥಿಸುತ್ತೇವೆ.

---

## ಕರ್ನಾಟಕ ಸಂಘ, ಅರಸೀಕೆರೆ

### ಕಟ್ಟಡದ ಶಂಕುಸ್ಥಾಪನೋತ್ಸವ

೨೭-೬-೧೯೪೩ ನೆಯ ಭಾನುವಾರ ಬೆಳಗ್ಗೆ ಅರಸೀಕೆರೆ ಕರ್ನಾಟಕ ಸಂಘದ ಕಟ್ಟಡದ ಶಂಕುಸ್ಥಾಪನೆಯನ್ನು ಪರಿಷತ್ತಿನ ಹಿಂದಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀ. ಬಿ. ಎಂ. ಶ್ರೀಕಂಠಯ್ಯನವರು ನೆರವೇರಿಸಿದರು.

ಉತ್ಸವಕ್ಕಾಗಿ ಸಂಘದ ಕಟ್ಟಡದ ನಿವೇಶನದಲ್ಲಿ ಹಾಕಿದ್ದ ಸುಂದರವಾದ ಚಪ್ಪರದಲ್ಲಿ ಅನೇಕ ಪುರಜನರು ಸಡಗರದಿಂದ ನೆರೆದಿದ್ದರು. ಪರಿಷತ್ತಿನ ಪರವಾಗಿ ಕಾರ್ಯದರ್ಶಿಗಳಾದ ಶ್ರೀ. ಬಿ. ವೆಂಕೋಬರಾಯರು ಉತ್ಸವಕ್ಕೆ ದಯಮಾಡಿಸಿದ್ದರು.

ಶಾಲೆಯ ಹೆಣ್ಣುಮಕ್ಕಳಿಂದ ಪ್ರಾರ್ಥನೆಯಾದ ಮೇಲೆ ಶ್ರೀ. ಜಿ. ಎ. ರಾಮಸ್ವಾಮಿ ಅಯ್ಯಂಗಾರರು ಉತ್ಸವಕ್ಕೆ ಯಶಸ್ಸು ಕೋರಿ ಬಂದಿದ್ದ ಶುಭ ಸಂದೇಶಗಳನ್ನು ಓದಿದರು. ಹಾಸನ ಜಿಲ್ಲಾಧಿಕಾರಿಗಳಾದ ಶ್ರೀ. ಎನ್. ಎಸ್. ಹಿರಿಯಣ್ಣಯ್ಯನವರೂ, ಸಕಲೇಶಪುರ ಸಬ್ ಡಿವಿಜನ್ನಿನ ಅಧಿಕಾರಿಗಳಾದ ಶ್ರೀ. ಎನ್. ಲಕ್ಷ್ಮಣರಾಯರೂ ಸಂದೇಶಗಳನ್ನು ಕಳಿಸಿದ್ದರು.

ಬಳಿಕ ಸಂಘದ ಪರವಾಗಿ ಶ್ರೀ. ಸಿದ್ದಪ್ಪನವರು 'ಶ್ರೀ'ಯವರಿಗೆ ಬಿನ್ನವತ್ತಳೆಯನ್ನು ಓದಿ ಒಪ್ಪಿಸುತ್ತ 'ಕನ್ನಡ ನಾಡ ನುಡಿಯ ನಾಯಕರೂ ಆಚಾರ್ಯರೂ ಆದ ತಾವು ಈ ಮಂದಿರದ ಕೀರ್ತಿಯೂ ಕಾರ್ಯವೂ ಎಲ್ಲ ಕಾಲಕ್ಕೂ ನಡೆದು ಬರುವಂತೆ ಆಶೀರ್ವದಿಸಬೇಕೆಂದು ಬೇಡುತ್ತೇವೆ' ಎಂದು ಬಿನ್ನವಿಸಿದರು. ಬಿನ್ನವತ್ತಳೆಯಲ್ಲಿ, 'ಶ್ರೀ'ಯವರು ಕನ್ನಡಕ್ಕೆ ಒಂದು ಹೊಸನೋಟ, ನಡಗೆ ಮತ್ತು ಜೀವಶಕ್ತಿಯನ್ನು ತಂದುಕೊಟ್ಟಿರುವುದು, ಪ್ರತಿಭಾಶಾಲಿಗಳಾದ ಕೃತಿಕಾರರ ಮತ್ತು ವಿಮರ್ಶಕರ ಪಡೆಯನ್ನು ಕಟ್ಟಿ ಕನ್ನಡದ ಸೇವೆಗಾಗಿ ಅವರನ್ನು ಹೂಡಿರುವುದು, ಹೊಸಕನ್ನಡ ಸಾಹಿತ್ಯ ನಿರ್ಮಾಣಕ್ಕೆ ಆಧಾರವೂ ಆಶ್ರಯವೂ ಆಗಿ ಪರಿಷತ್ತು, ಮೈಸೂರು ವಿಶ್ವವಿದ್ಯಾನಿಲಯ ಮುಂತಾದ ಸಂಸ್ಥೆಗಳಿಗೆ ಬಿಡುಗೈಯಿಂದ ಸಾವಿರಾರು ರೂಪಾಯಿ ದಾನ ಮಾಡಿರುವುದು ಮುಂತಾದ ಅವರ ಬಹುಮುಖವಾದ ಕನ್ನಡ ಸೇವೆಯನ್ನು ಪ್ರಶಂಸೆ ಮಾಡಲಾಗಿದೆ.

'ಶ್ರೀ'ಯವರು ತಮ್ಮ ಭಾಷಣದ ಮೊದಲಲ್ಲಿ ಅರಸೀಕೆರೆ ಕರ್ನಾಟಕ ಸಂಘದ ಕಟ್ಟಡದ ಶಂಕುಸ್ಥಾಪನೆ ಮಾಡಲು ತಮ್ಮನ್ನು ಆಹ್ವಾನಿಸಿದುದಕ್ಕಾಗಿ ಸಂಘದ ಅಧ್ಯಕ್ಷರಿಗೂ ಸದಸ್ಯರಿಗೂ ಕೃತಜ್ಞತೆಯನ್ನು ಸಮರ್ಪಿಸಿ, ಈ ಕೆಲಸವನ್ನು ಸಂತೋಷದಿಂದ ನೆರವೇರಿಸುವುದಾಗಿ ಹೇಳಿದರು.

"ಕನ್ನಡದ ಎಲ್ಲ ಮುಖದ ಏಳಿಗೆಗೆ ಕರ್ನಾಟಕ ಏಕೀಕರಣವೇ ಮದ್ದು; ಈಗ ನಮ್ಮ ನಾಡು ಹತ್ತಾರು ಭಾಗಗಳಾಗಿ ಹಂಚಿ ಹೋಗಿದೆ. ರಾಜಕೀಯವಾಗಿಯೂ ಸಂಸ್ಕೃತಿಯ ದೃಷ್ಟಿಯಿಂದಲೂ ಏಕೀಕರಣವಾಗಲೇ ಬೇಕು. ಯುದ್ಧಾನಂತರ ಅನೇಕ ಬದಲಾವಣೆಗಳಾಗುವುದು ಖಂಡಿತ. ಆಗ ಕನ್ನಡಿಗರೆಲ್ಲರೂ ಒಂದೇ ಬಾವುಟದ ಅಡಿಗೆ ಬರುವಂತಾಗುವುದೆಂದು ಹಾರೈಸೋಣ.

ಅರಸೀಕೆರೆ ಕರ್ನಾಟಕ ಸಂಘ ಈ ಹತ್ತುವರ್ಷಗಳು ಶ್ರದ್ಧೆಯಿಂದ ಕೆಲಸ ಮಾಡಿದೆ. ಮೊದಲ ಫಲವಾಗಿ ಸಂಘಕ್ಕೆ ಕಟ್ಟಡ ಕಟ್ಟಿಕೊಳ್ಳುವ ಸುಯೋಗ ಬಂದಿದೆ. ಕಟ್ಟಡದ ನಿಧಿಗೆ ಕಾಣಿಕೆ ಸಲ್ಲಿಸಿದವರಲ್ಲಿ ಮುಸಲ್ಮಾನ ಸೋದರರೂ ಇದ್ದಾರೆಂದು ಕೇಳಿ ನನಗೆ

ಬಹಳ ಸಂತೋಷವಾಗಿದೆ. ಕನ್ನಡ ಮಾತೆಯ ಕಣ್ಣಲ್ಲಿ ಎಲ್ಲರೂ ಸಮಾನರೇ. ಎಲ್ಲರೂ ಅವಳ ಮಕ್ಕಳೇ.

ಸಂಘದ ಕಾರ್ಯಗಳನ್ನು ಈ ಪಟ್ಟಣದಷ್ಟಕ್ಕೇ ಮಿತಿಮಾಡಿಕೊಳ್ಳದೆ ಇಡಿಯ ತಾಲ್ಲೂಕಿಗೆ ಹರಡಬೇಕೆಂದು ಪ್ರಾರ್ಥಿಸುತ್ತೇನೆ. ತಾಲ್ಲೂಕಿನ ಪ್ರತಿಯೊಂದು ಮುಖ್ಯವಾದ ಹಳ್ಳಿಯಲ್ಲೂ ಅಕ್ಷರ ಪ್ರಚಾರ, ಉಪನ್ಯಾಸ, ಭಾರತವಾಚನ ಹೊಸ ಅಭಿಪ್ರಾಯಗಳ ಪ್ರಸಾರ ಮೊದಲಾದ ಕಾರ್ಯಕ್ರಮಗಳನ್ನು ಏರ್ಪಡಿಸಿ, ಒಂದು ಬೆಳಕಿನ ಕೇಂದ್ರವಾಗಿ, ಜನರಲ್ಲಿ ಬಾಳಿನ ನಯವನ್ನು ಹರಡುತ್ತೀರೆಂದು ನಂಬಿದ್ದೇನೆ. ಸಂಘಕ್ಕೂ ಪರಿಷತ್ತಿಗೂ ಸದಸ್ಯರನ್ನು ಸೇರಿಸಿಕೊಂಡು ಪರಿಷತ್ತು ನಾಡಿಗೆಲ್ಲ ಎಂದು ನಡಸುತ್ತಿರುವ ಸೇವೆಗೆ ಸಹಕಾರ ನೀಡಬೇಕಾಗಿ ಬಿನ್ನವಿಸುತ್ತೇನೆ." ಎಂದು ಹೇಳಿ ಕಟ್ಟಡದ ಶಂಕುಸ್ಥಾಪನೆಯನ್ನು ನೆರವೇರಿಸಿದರು.

ಅರಸೀಕೆರೆಯ ಅಮಲ್ದಾರರಾದ ಶ್ರೀ. ಎಚ್. ಡಿ. ಪುಟ್ಟಯ್ಯನವರಿಂದ ಧನ್ಯವಾದ ಸಮರ್ಪಣೆಯಾಗಿ ಉತ್ಸವ ಮುಗಿಯಿತು.

## ಮೈಸೂರು ದೇಶದ ವಿದ್ಯಾಶಾಲಾ ಪಂಡಿತಮಂಡಲ

ಮೈಸೂರು ಶಾಲಾ ಪಂಡಿತ ಮಂಡಲದ ೯ನೆಯ ಸಮ್ಮೇಳನ ೨೫ನೆಯ ತಾರೀಖು ಬೆಳಗ್ಗೆ ೯ ಗಂಟೆಗೆ ಸಂಸ್ಕೃತ ಪಾಠಶಾಲಾ ಸಭಾಂಗಣದಲ್ಲಿ ಶ್ರೀಮನ್ಮಹಾರಾಜರ ಕಾರ್ಯದರ್ಶಿ ಶ್ರೀ. ಕೆ. ಗುರುದತ್ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ರಾಜಧರ್ಮಪ್ರಸಕ್ತ ಶ್ರೀ. ಎ.ಆರ್. ನಾಗೇಶ್ವರಯ್ಯರ್ ಅವರು ಆರಂಭಭಾಷಣ ಮಾಡಿದರು. ಸಂಸ್ಥಾನದ ಎಲ್ಲಾ ಕಡೆಗಳಿಂದಲೂ ಪಂಡಿತರುಗಳು ಆಗಮಿಸಿದ್ದರು.

ಸ್ವಾಗತ ಸಮಿತಿಯ ಅಧ್ಯಕ್ಷರಾದ ರಾಜಸೇವಾಸಕ್ತ ಶ್ರೀ. ಅಂಬಳೆ ಸುಬ್ರಹ್ಮಣ್ಯ ಅಯ್ಯರ್ ಅವರು ಸ್ವಾಗತಭಾಷಣ ಮಾಡಿದರು.

ರಾಜಧರ್ಮಪ್ರಸಕ್ತ ಶ್ರೀ. ನಾಗೇಶ್ವರ ಅಯ್ಯರ್ ಅವರು ಆರಂಭ ಭಾಷಣ ಮಾಡಿ "ಪಂಡಿತರುಗಳು ಸಂಸ್ಕೃತ ಜ್ಞಾನಭಂಡಾರವನ್ನು ಕನ್ನಡದ ಮೂಲಕ ಸಾರ್ವಜನಿಕರಿಗೆ ಒದಗಿಸಿಕೊಡಬೇಕು" ಎಂದು ಹೇಳಿದರು.

### ಅಧ್ಯಕ್ಷರ ಭಾಷಣ

ಅಧ್ಯಕ್ಷರು ವಿಚಾರ ಪೂರ್ಣ ಭಾಷಣಮಾಡಿ ಭಾರತೀಯ ಸಂಸ್ಕೃತಿ ದರ್ಶನವನ್ನು ಎಲ್ಲರಿಗೂ ಮಾಡಿಸಿದರು. ಸೂಕ್ಷ್ಮದ ಮಟ್ಟದಿಂದ ಸ್ಥೂಲಕ್ಕೆ ಇಳಿದು ನಮ್ಮ ಸಂಸ್ಕೃತಿ ಹೇಗೆ ನಾಶವಾಗುತ್ತಿರುವ ವಿಷಯವನ್ನು ಪ್ರಸ್ತಾವಿಸಿದರು.

"ಪಾಂಡಿತ್ಯವೆಂದರೆ ಭಾಷಾಜ್ಞಾನವಲ್ಲ. ಧ್ಯಾನಲಬ್ಧವಾದ ನಿಜವಾದ ಜ್ಞಾನವೇ ಪಾಂಡಿತ್ಯ. ಬರಿಯ ಶಬ್ದಾಡಂಬರ ಪಾಂಡಿತ್ಯವಲ್ಲ. ಈ ಧ್ಯಾನಕ್ಕೆ ವಾಕ್ಕೇ ಆಧಾರ. ಧ್ಯಾನಮೂಲವಾದ ವಾಕ್ಕಿಗೆ ವಿಶೇಷವಾದ ಪ್ರಭಾವವಿದೆ; ಶಕ್ತಿಯಿದೆ. ನಮ್ಮಲ್ಲಿ ವಾಕ್ಕು ಮಂತ್ರ; ವಾಕ್ಶಕ್ತಿಯೆಂದರೆ ಮಂತ್ರಶಕ್ತಿ.

ವಾಕ್ ಬರಿಯ ವ್ಯವಹಾರದ ಮಾತಲ್ಲ ವಾಕ್–ಅರ್ಥಗಳೆರಡೂ ಹೊಂದಿಕೊಂಡು ಸಂಪುಷ್ಟವಾಗಿದ್ದ ಕಾಲ ಹೋಗಿ ಪದಕ್ಕೂ ಅರ್ಥಕ್ಕೂ ಕ್ರಮೇಣ ವೈಷಮ್ಯ ಬಂತು. ಅರ್ಥ ಹೀನವಾದ ಬರಿಯ ಶಬ್ದ ಕಟ್ಟಿಕೊಂಡೇನು? ಅದು ನಿಷ್ಫಲ.

ವಸ್ತುವಿಜ್ಞಾನವೆಂದು ೪೦–೫೦ ವರ್ಷಗಳಿಂದ ಪಾಶ್ಚಾತ್ಯರಲ್ಲಿ ಜಿಜ್ಞಾಸೆ ನಡೆಯಿತು. ಈ ವಿಜ್ಞಾನಶಾಸ್ತ್ರ ಪ್ರಾಬಲ್ಯವೇ ಪಂಡಿತರ ಅವನತಿಗೆ ಕಾರಣ. ಶಿವ-ಶಕ್ತಿಯರಂತೆ ವಾಕ್ ಅರ್ಥಗಳಿಗೆ ಒಮ್ಮುಖವಾದ ಏಳಿಗೆ ಬೇಕು.

ಸ್ಥೂಲ, ಸೂಕ್ಷ್ಮ ಎರಡಿವೆ. ಸ್ಥೂಲವಾದ್ದೇ ನಿಜ, ಸೂಕ್ಷ್ಮವಾದ್ದಲ್ಲ ಎಂಬ ಹಟ ತಪ್ಪು; ಸೂಕ್ಷ್ಮಸ್ಥೂಲಗಳ ಬೆಲೆ ತಲೆಕೆಳಗಾಗಬಾರದು. ಹಾಗೆ ಆದುದೇ ಇಳೆಯ ಅವನತಿಗೆ ಕಾರಣ, ಇಂದಿನ ಯುದ್ಧದ ವಿನಾಶಕ್ಕೆಲ್ಲ ಈ ಸ್ಥೂಲ ಸೂಕ್ಷ್ಮ ವಿಪರ್ಯಾಸವೇ ಕಾರಣ. ಇದರಿಂದ ಹಗಲು ರಾತ್ರಿಯೂ ರಾತ್ರಿ ಹಗಲೂ ಆಗುತ್ತದೆ. ನಮ್ಮ ವಿದ್ಯೆ ಸೂಕ್ಷ್ಮದ್ದು, ಅದೇ ಹೆಚ್ಚಿನದು.

ಸಂಸ್ಕೃತ ಅನಂತವಾದ್ದು. ಕಾರಣಾಂತರದಿಂದ ಈಗ ಅದಕ್ಕೆ ಕೊಂಚ ಧಕ್ಕೆ ಬಡಿದಿದ್ದರೂ ಅದಕ್ಕೆ ಅವನತಿಯೇ ಇಲ್ಲ.

ಪಂಡಿತರು ಪದಕ್ಕೆ ಸರಿಯಾದ ಅರ್ಥ ಸಂಸ್ಕಾರಮಾಡಿ ಸಂಸ್ಕೃತಿ ಕಾಪಾಡಬೇಕು, ವಾಙ್ಮಹಿಮೆಯನ್ನು ಪುನಃ ಸ್ಥಾಪಿಸಬೇಕು. ವೇದಗಳಲ್ಲಿ ವಾಕ್ಕಿನ ವರ್ಣನೆ ಅಪಾರವಾಗಿದೆ. ದೇವರಿದ್ದಾನೆಂಬ ಹೇಳಿಕೆಗಿಂತ ವಾಕ್ಕಿನಲ್ಲಿ ಶಕ್ತಿಯಿದೆಯೆಂಬುದು ವಿಶ್ವಸನೀಯವೆಂದು ತಿಳಿಯಬೇಕು. ಸೂಕ್ಷ್ಮದಲ್ಲಿ ವಿಶ್ವಾಸವಿರದವರಿಗೆ ನಮ್ಮ ಸಂಸ್ಕೃತಿಯೇ ಅರ್ಥವಾಗದು.

ಆಧುನಿಕ ವಿದ್ಯಾಭ್ಯಾಸ ಭೂಪಠದಂತೆ. ಪ್ರಾಚೀನ ವಿದ್ಯಾಭ್ಯಾಸ ಎಕರೆ ಹೊಲದಂತೆ. ಹೊಲದಲ್ಲಿ ಬೆಳೆ ಬೆಳೆದೀತೇ ವಿನಾ ಭೂಪಠದಲ್ಲಲ್ಲ. ಈ ಶಬ್ದಮೋಹ, ವ್ಯವಹಾರವ್ಯಾಮೋಹಗಳನ್ನು ಬಿಟ್ಟು, ಇದಕ್ಕೆಲ್ಲ ಮೂಲವಾದ ಧ್ಯಾನ ಸಮಾಧಿಗಳನ್ನು ವಾಕ್ಕಿನಿಂದ ಪಡೆವ ಸಾಧನೆ ಮಾಡಬೇಕು.

ಪಂಡಿತರು ಸಮದರ್ಶಿಗಳಾಗಬೇಕು. 'ವಿದ್ಯಾವಿನಯ ಸಂಪನ್ನೇ ಪಂಡಿತಾಃ ಸಮದರ್ಶಿನ' ಎಂದು ಗೀತೆಯಲ್ಲಿ ಹೇಳಿದ ಸಮದರ್ಶನವನ್ನು ಅವರು ಸಾಧಿಸಬೇಕು."

## ಪರಿಷತ್ತಿನ ಸುದ್ದಿ

### ಪರಿಷತ್ತಿನ ಸದಸ್ಯರ ಬೆಳವಣಿಗೆ

**ಸಹಾಯಕ ಸದಸ್ಯರು (೧೦೦ ರೂ.):** ರಾಜಮಂತ್ರಪ್ರವೀಣ ಶ್ರೀ. ಎ.ವಿ. ರಾಮನಾಥನ್, ಬಿ.ಎ. ಅವರು, ದಿವಾನರು ಭರತಪುರ ಸಂಸ್ಥಾನ.

**ಸಾಮಾನ್ಯ ಸದಸ್ಯರು (೩ ರೂ.):** ಶ್ರೀ. ಬಿ. ಶ್ರೀನಿವಾಸಮೂರ್ತಿಯವರು, ೧೪, ಮದನ್ ಸ್ಟ್ರೀಟ್, ಕಲ್ಕತ್ತೆ.

### ಸಂತಾಪ ಸೂಚಕ ಸಭೆ

ಹಿರಿಯ ಕನ್ನಡಿಗರೂ, ಪ್ರಸಿದ್ಧ ಅರ್ಥಶಾಸ್ತ್ರಜ್ಞರೂ, ಮೈಸೂರು ಸಂಸ್ಥಾನದ ವಿದ್ಯಾಭ್ಯಾಸ ಇಲಾಖೆ, ಮೈಸೂರು ವಿಶ್ವವಿದ್ಯಾನಿಲಯಗಳಲ್ಲಿ ಮುಖ್ಯಾಧಿಕಾರಿಗಳಾಗಿದ್ದು, ಕನ್ನಡದ ಶಿಕ್ಷಣಕ್ಕೆ ಬಹಳವಾಗಿ ಸಹಾಯ ಮಾಡಿದವರೂ, ಮುಂಬಯಿಯಲ್ಲಿ ೧೯೩೫ರಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದವರೂ ಆದ ರಾಜಕಾರ್ಯಪ್ರವೀಣ ಶ್ರೀ. **ಎನ್.ಎಸ್. ಸುಬ್ಬರಾಯರು** ಕಾಲಾಧೀನರಾದುದಕ್ಕಾಗಿ ಸಂತಾಪವನ್ನು ಸೂಚಿಸಲು ನಾಳೆ **೨-೭-೪೩ನೆಯ ಶುಕ್ರವಾರ ಸಂಜೆ ೬-೩೦ಕ್ಕೆ ಪರಿಷನ್ಮಂದಿರದಲ್ಲಿ** ಸಭೆ ಸೇರುವುದು.

### ಮಹಿಳಾ ಶಾಖೆ

**೬-೭-೪೩ನೆಯ ಮಂಗಳವಾರ ಸಂಜೆ ೫-೩೦ ಗಂಟೆಗೆ** ಪರಿಷನ್ಮಂಧಿರದಲ್ಲಿ ಶ್ರೀಮತಿ ಸೌ॥ ವಿಜಯಾಬಾಯಿ ಅವರಿಂಧ **ವೀಣಾವಾದನ** ನಡೆಯುವುದು.

೨೭-೬-೪೩ನೆಯ ಸಂಜೆ ಶ್ರೀಮತಿ ಸೌ. ಎಸ್. ಜಿ. ವೆಂಕಟಸುಬ್ಬಮ್ಮನವರ ಅಧ್ಯಕ್ಷತೆಯಲ್ಲಿ ಕವಿತೆಗಳ ಪಠನ ಗೋಷ್ಠಿ ನಡೆಯಿತು.

'ಮಡಕೇರಿಲಿ ರತ್ನ', 'ಹಳ್ಳಿಯ ಚಲುವೆ', 'ಕುಣಿಯೋಣ ಬಾರ', 'ಶಾನುಭೋಗರ ಮಗಳು', 'ರತ್ನನ ಪ್ರಪಂಚ', 'ಹೀಗೂ ಉಂಟೆ?', 'ಬಡಾಯಿ ಬುಳ್ಳ', 'ಕನ್ನಡ ನಾಡಿನ ಸ್ಥಿತಿ', 'ಆಡುವೆ ಆಟ ಆಡುವೆ' ಈ ಕವಿತೆಗಳನ್ನು ಶ್ರೀಮತಿಯರಾದ ಲಲಿತ, ಸರೋಜ, ಸುಶೀಲ, ಕಾತ್ಯಾಯಿನಿ, ಪಾರ್ವತಮ್ಮ, ಅಖಿಲ, ನಾಗರತ್ನ ಇವರು ಸೊಗಸಾಗಿ ಪಠಿಸಿದರು.

'ಕಾದಿರುವಳು ಶಬರಿ', 'ಬಲ್ಲವನು ನಾನೆಂದು ಬಲು ಮೆರೆದೆ', 'ಬೃಂದಾವನದೊಳಗಾಡುವನ್ಯಾರೆ', 'ಸ್ವಾಗತ', 'ಸಕಲಕೆಲ್ಲಕೆ ನೀನೆ', 'ವನಸುಮದೊಳೆನ್ನ ಜೀವನವು', 'ನೀಮಾಯದೊಳಗೊ ನಿನ್ನೊಳು ಮಾಯವೊ' ಈ ಗೀತೆಗಳನ್ನು ಶ್ರೀಮತಿಯರಾದ ಶಾಂತ, ಸುಶೀಲ, ಜಯ, ಲೀಲ, ವಿಮಲ, ಸ್ವರ್ಣಾಂಬ ಇವರು ಸುಶ್ರಾವ್ಯವಾಗಿ ಹಾಡಿದರು.

ಪಂಪ ಭಾರತ, ಕುಮಾರವ್ಯಾಸ ಭಾರತ ಈ ಮಹಾ ಕಾವ್ಯಗಳಿಂದ ಶ್ರೀಮತಿಯರಾದ ಕಾಂತಿಮತಿ, ಕಮಲ, ಸ್ವರ್ಣಾಂಬ ಇವರು ಪದ್ಯಗಳನ್ನು ಗಮಕದೊಡನೆ ಮಧುರವಾಗಿ ಪಠಿಸಿದರು.

ಗೋಷ್ಠಿ ಯಶಸ್ವಿಯಾಗಿ ನೆರವೇರಲು ನೆರವಾದ ಎಲ್ಲ ಮಹಿಳೆಯರನ್ನೂ ಅಧ್ಯಕ್ಷರು ಅಭಿನಂದಿಸಿ, ಹೆಣ್ಣುಮಕ್ಕಳು ತಾವೇ ಕವನಗಳನ್ನು ಕಟ್ಟಿ ಪಠಿಸಿ ಹಾಡುವ ಗೋಷ್ಠಿಯೊಂದು ನಡೆಯುವ ಸುದಿನ ಬೇಗ ಬರಲೆಂದು ಹರಸಿದರು.

೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧॥
ಬಿಡಿ ಪತ್ರಿಕೆ: ೬ ಕಾಸು




ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೩೭

ಬೆಂಗಳೂರು: ಶುಕ್ರವಾರ, ಜುಲೈ ೯, ೧೯೪೩

## ಜನತೆಯ ವಿದ್ಯಾಭ್ಯಾಸ

ನಮ್ಮ ದೇಶದ ಜನತೆಯಲ್ಲಿ ವಿದ್ಯಾಭ್ಯಾಸ ಹರಡುವ ವಿಚಾರ ಕುರಿತು ಮೊನ್ನೆಯ (ತಾ॥ ೩-೭-೧೯೪೩) 'ಹಿಂದೂ' ಪತ್ರಿಕೆಯಲ್ಲಿ ವಿಚಾರಪೂರ್ಣವಾದ ಅಗ್ರಲೇಖನ ಬಂದಿದೆ. ಅಲ್ಲಿ ಪ್ರಸ್ತಾವಿಸಿರುವ ಅಂಶಗಳು ವಯಸ್ಕರ ವಿದ್ಯಾಭ್ಯಾಸದಲ್ಲಿ ಆಸಕ್ತಿಯುಳ್ಳವರೂ, ನಮ್ಮ ನಾಡಿನ ಸರ್ಕಾರಗಳೂ ಗಮನಿಸತಕ್ಕುವಾಗಿವೆ.

ನಮ್ಮ ಸೀಮೆಯಲ್ಲಿ (ಅಂದರೆ, ಭರತಖಂಡದಲ್ಲಿ) ವಯಸ್ಕರ ವಿದ್ಯಾಭ್ಯಾಸಕ್ಕೆ ಸಾಕಾದಷ್ಟು ಗಮನ ಕೊಡುತ್ತಿಲ್ಲವೆಂಬ ಸಂಗತಿ ಎಲ್ಲರಿಗೂ ತಿಳಿದಿರುವ ವಿಷಯವೇ. ಮೈಸೂರು ಸಂಸ್ಥಾನದಲ್ಲೇನೊ ಈ ಬಗ್ಗೆ ಕಾರ್ಯಪ್ರಯತ್ನ ಮೊದಲಾಗಿ, ಉತ್ಸಾಹಶಾಲಿಗಳಾದ ಕಾರ್ಯಕರ್ತರ ದುಡಿಮೆಯ ಫಲವಾಗಿ ಶುಭಸೂಚನೆಗಳು ತೋರಹತ್ತಿವೆ. ಆದರೆ ಈಗ ಅಲ್ಲಿ ನಡೆಯುತ್ತಿರುವ ಕಾರ್ಯದ ಪ್ರಮಾಣದಿಂದ ಹೇಳುವುದಾದರೆ, ಇದುವರೆಗೆ ನಡೆದಿರುವ ಅಥವಾ ಮುಂದೆ ಸದ್ಯದಲ್ಲಿ ನಡೆಯಬಹುದಾದ ಕೆಲಸ ಗಣನೀಯವೇನಲ್ಲ. 'ಬರಿ ಕೈಗಿಂತ ಹಿತ್ತಾಳೆ ಕಡಗ ಲೇಸು' ಎಂಬ ಸಮಾಧಾನಕ್ಕೇನೋ ಅವಕಾಶವಿದೆ.

ಆದರೂ, ಇತರ ದೇಶಗಳಲ್ಲಿನ ಅನುಭವದಿಂದ ವಿಚಾರ ಮಾಡಿದರೆ, ಯುದ್ಧಾನಂತರದ ವಿದ್ಯಾಭ್ಯಾಸ ವ್ಯವಸ್ಥೆಯಲ್ಲಿ ವಯಸ್ಕರ ವಿದ್ಯಾಭ್ಯಾಸ ಪದ್ಧತಿಗಳ ವಿಸ್ತರಣೆ ಅತ್ಯಂತ ಪ್ರಮುಖ ಅಂಗವಾಗಿ ಪರಿಣಮಿಸಬಹುದಾಗಿ ಕಾಣುತ್ತದೆ. ಇಂಗ್ಲೆಂಡಿನಲ್ಲಂತೂ ಹೀಗಾಗುವುದೆಂದು ಹೇಳಲು ಬೇಕಾದಷ್ಟು ಪ್ರಮಾಣಗಳಿವೆ. ಅಲ್ಲಿನ ಒಬ್ಬ ನಾಡನಾಯಕರು (Lord Zetland), ವಸತಿ ಸೌಕರ್ಯ ಉಳ್ಳ ವಯಸ್ಕರ ಶಿಕ್ಷಣಕ್ಕಾಗಿ (Residential Adult Education) ಜನತೆಯ ಕಾಲೇಜುಗಳನ್ನು ತೆರೆಯಲು ದೊಡ್ಡ ಗ್ರಾಮಭವನಗಳನ್ನು ಬಿಟ್ಟುಕೊಡಬೇಕೆಂದು ಅವುಗಳ ಒಡೆಯರನ್ನು ಈಗಾಗಲೇ ಬೇಡಿಕೊಂಡಿದ್ದಾರೆ; ವಿದ್ಯಾಭಿಮಾನಿಗಳಾದ ಮತ್ತೊಬ್ಬ ಮುಂದಾಳುಗಳು, (Sir Richard Livingstone, President of the Board of Education) ವಸತಿ ಸೌಕರ್ಯಯುಕ್ತ ವಯಸ್ಕರ ವಿದ್ಯಾಭ್ಯಾಸ ಪದ್ಧತಿಯನ್ನು ಗ್ರೇಟ್ ಬ್ರಿಟನ್ನಿನ ವಿದ್ಯಾಭ್ಯಾಸ ವ್ಯವಸ್ಥೆಯ ಒಂದು ಕ್ರಮವಾದ ಭಾಗವನ್ನಾಗಿಯೇ ಮಾಡಬೇಕೆಂದು ಅಲ್ಲಿನ ವಿದ್ಯಾಭ್ಯಾಸ ಮಂಡಲದ ಅಧ್ಯಕ್ಷರಲ್ಲಿ ಬಿನ್ನವಿಸಿಕೊಂಡಿದ್ದಾರೆ. 'ಎಳೆಯರ ವಿದ್ಯಾಭ್ಯಾಸಕ್ಕೆ ತಕ್ಕಷ್ಟು ಅವಕಾಶವೊದಗಿಸಬೇಕಾದ್ದು ಎಷ್ಟುಮಟ್ಟಿಗೆ ಜರೂರೋ ವಯಸ್ಕರ ವಿದ್ಯಾಭ್ಯಾಸಕ್ಕೂ ಸರಿಯಾದ ಸೌಕರ್ಯಗಳನ್ನು ಕಲ್ಪಿಸಬೇಕಾದ್ದು ಅದೇ ಮಟ್ಟಿಗೆ ಜರೂರು' ಎಂಬ ಸೂಚನೆಗೆ ಸರ್ಕಾರದ ಸಮ್ಮತಿಯನ್ನು ದೊರಕಿಸಿಕೊಳ್ಳಲು ಮಾಡುತ್ತಿರುವ ಈ ಪ್ರಯತ್ನಗಳು ಇಡಿಯ ರಾಷ್ಟ್ರಕ್ಕೇ ಗ್ರಾಹ್ಯ ಎಂದು 'ಟೈಂಸ್' ಪತ್ರಿಕೆ ಹೇಳಿರುವುದು ಗಮನಾರ್ಹವೆಂದು 'ಹಿಂದೂ' ಅಭಿಪ್ರಾಯಪಡುತ್ತದೆ. ಈಗ ಬ್ರಿಟನ್ನಿನಲ್ಲಿ ವಯಸ್ಕರ ವಿದ್ಯಾಭ್ಯಾಸ ವಿಸ್ತರಣೆಯ ಚಳವಳಿಗೆ ಹೆಚ್ಚಿನ ಪ್ರಚೋದನೆ ದೊರೆಯಲು ಕಾರಣ ಎರಡು. ಒಂದು: ವಸತಿ ಸೌಕರ್ಯ ಉಳ್ಳ ವಯಸ್ಕರ ವಿದ್ಯಾಭ್ಯಾಸವನ್ನು ಒದಗಿಸುತ್ತಿರುವ ಆರೇಳು ಕಾಲೇಜುಗಳಲ್ಲಿ ತೋರಿಬಂದಿರುವ ಯಶಸ್ವಿತೆ; ಎರಡು: ಸೈನ್ಯ ಖಾತೆಯೂ ಕಾರ್ಮಿಕ ಯೋಜನೆಗಳ ಸಚಿವ ಶಾಖೆಯೂ ಒದಗಿಸಿಕೊಡುತ್ತಿರುವ ವಿಶೇಷತೆರದ ಶಿಕ್ಷಣಗಳ ಅನುಭವ. ಯುದ್ಧ ಕಾಲದ ಯೋಜನೆಗಳ ಅನುಭವದ ಪಾಠ ಶಾಂತಿ ಕಾಲದಲ್ಲಿ ನಷ್ಟವಾಗಲು ಬಿಡಕೂಡದು. ಶಾಂತಿ ಕಾಲದಲ್ಲಿ ಜನರಿಗೆ ಬಿಡುವಿರುತ್ತದೆ; ಆಗಿನ ಸಂದರ್ಭಗಳಿಗೆ ಈ ಯೋಜನೆಗಳನ್ನು ತಕ್ಕಂತೆ ಅಳವಡಿಸಿಕೊಳ್ಳಬಾರದು ಯಾಕೆ? – ಎಂಬ ಪ್ರಶ್ನೆ ಸಹಜವಾಗಿ ಏಳುತ್ತದೆ.

ಬ್ರಿಟನ್ನಿನಲ್ಲಿ ಯುದ್ಧದ ಪ್ರಯುಕ್ತ ಒಟ್ಟು ಜನತೆಗೇ ಈಗ ಒಂದು ವಿಶೇಷ ತೆರದ ಶಿಕ್ಷಣ ದೊರೆಯುತ್ತಿದೆ, ನಿಜ. ಉದಾಹರಣೆಗೆ, ಆಹಾರ ಸಚಿವ ಶಾಖೆ ತನ್ನ ಶಾಖೆಗೆ ನೇಮಿಸಿಕೊಳ್ಳುವ ಹೊಸಬರಿಗೆ ಲಂಡನ್ನಿನ ಅರ್ಥಶಾಸ್ತ್ರ ಪಾಠಶಾಲೆಯಲ್ಲಿ ಆ ವಿಷಯದ ಪಾಠಕ್ಕೆ ಏರ್ಪಾಡು ಮಾಡುತ್ತದೆ. ಯುದ್ಧ ಮುಗಿದ ಮೇಲೂ ವಯಸ್ಕರಿಗೆ ಅವರ ಬಿಡುವು ಹೊತ್ತಿನಲ್ಲಿ ಯಾವ ಬಗೆಯ ಶಿಕ್ಷಣ ಕೊಡಬೇಕೆಂಬುದನ್ನು ಕುರಿತು ತಜ್ಞರು ಈಗಾಗಲೇ ವಿಚಾರ ಮಾಡುತ್ತಿದ್ದಾರೆ. ಈಗ ಯುದ್ಧ ಕಾರ್ಯಕ್ಷೇತ್ರದಲ್ಲಿ ತೊಡಗಿರುವ ವಯಸ್ಕರಿಗೆ ಆಮೇಲೆ ಕೊಡತಕ್ಕ ಕಸಬು ಸಂಬಂಧವಾದ ಶಿಕ್ಷಣವಾಗಲಿ ಅಥವಾ ಸಾಮಾನ್ಯ ವಿದ್ಯಾಭ್ಯಾಸವಾಗಲಿ ಆಧುನಿಕವಾಗಿರಬೇಕು, ಅತ್ಯಂತ ಅಲ್ಪ ಕಾಲದಲ್ಲಿ ಮುಗಿಯುವಂತಿರಬೇಕು. ಮತ್ತು ಮನೋರಂಜಕವಾಗಿರಬೇಕು; ಯುದ್ಧಕಾರ್ಯ ಕ್ಷೇತ್ರದಲ್ಲಿ ಗಂಟೆಗೆ ೩೦೦ ಮೈಲಿ ಆಕಾಶ ಸಂಚಾರ ಮಾಡುವ ಅಥವಾ, ಪ್ರತಿದಿನವೂ ಸಾವನ್ನೆದುರಿಸುವ ಸೈನಿಕರಿಗೆ ಈಗ ರೂಢಿಯಲ್ಲಿರುವ ವಿದ್ಯಾಭ್ಯಾಸ ಪದ್ಧತಿ ಒಗ್ಗದೆ ಹೋಗಬಹುದು – ಎಂಬುದಾಗಿ ಸಿಡ್ನಿ ಮಾರಿಸ್ ಎಂಬವರು ಸೂಚಿಸಿದ್ದಾರೆ.

ಈ ಸೂಚನೆಯನ್ನು ನಾವು ಕೂಡ ಕೂಲಂಕಷವಾಗಿ ಪರ್ಯಾಲೋಚಿಸಬೇಕಾಗಿದೆ. ನಮ್ಮ ದೇಶದ ಅಪಾರ ಜನಸಂಖ್ಯೆಯಲ್ಲಿ ಒಂದು ಅಲ್ಪಭಾಗ ಮಾತ್ರ ಸೈನ್ಯ ಸಂಬಂಧವಾದ ಕಾರ್ಯಗಳಲ್ಲಿ ತೊಡಗಿರಬಹುದಾದ ಸಂಭವವಿರುವುದರಿಂದ, ಯುದ್ಧ ಮುಗಿದ ಮೇಲೆ ಇಂಗ್ಲೆಂಡಿನಲ್ಲಿ ಇರುವ ಸಮಸ್ಯೆಯೇ ನಮ್ಮಲ್ಲಿಯೂ ಇರುತ್ತದೆಂದು ಹೇಳುವುದಕ್ಕಾಗುವುದಿಲ್ಲ. ವಿವಿಧ ಯುದ್ಧೋದ್ಯಮಗಳ ಕಾರಣದಿಂದ ನಮ್ಮ ಜನರಲ್ಲಿ ಈಗ ನಿರುದ್ಯೋಗಸಮಸ್ಯೆ ಬಹುಮಟ್ಟಿಗೆ ಕಡಿಮೆಯಾಗಿದ್ದರೂ, ಯುದ್ಧ ಕಾಲದಲ್ಲಿ ಇಂಗ್ಲೆಂಡ್ ಅಮೆರಿಕಗಳಂಥ ರಾಷ್ಟ್ರಗಳ ಒಟ್ಟು ಜನತೆಗೆ ದೊರೆಯುತ್ತಿರುವ ವಿಶೇಷ ತರದ ಶಿಕ್ಷಣವಾದರೂ ನಮ್ಮ ಜನಕ್ಕೆ ಇಲ್ಲಿ ಈಗ ದೊರೆಯುತ್ತಿದೆಯೆಂದು ಹೇಳಲಾಗುವುದಿಲ್ಲ. ಇನ್ನೊಬ್ಬರಿಗಾಗಿ ದುಡಿಮೆ ನಮ್ಮ ಜನದ ಪಾಲಿಗೆ ಈಗ ಬಂತೆ ಹೊರತು, ಕಲಿಮೆ ಬರಲಿಲ್ಲ; ಬರಲು ಸಾಧ್ಯವೂ ಇಲ್ಲ. ಹೀಗೆಂದು ನಿರಾಶರಾದರೆ ಪ್ರಯೋಜನವಿಲ್ಲ. ಯುದ್ಧ ಕಾಲದಲ್ಲಿ ಎಷ್ಟುಮಟ್ಟಿಗೆ ಸಾಧ್ಯವೋ ಅಷ್ಟುಮಟ್ಟಿಗೆ ಈ ವಯಸ್ಕ ವಿದ್ಯಾಭಾಸದ ಚಳವಳಿಯನ್ನು ಮುಂದೊತ್ತಿ ನಾಳಿನ ಭಾರತದ ಭವಿಷ್ಯರೂಪಣ ಕಾರ್ಯದಲ್ಲಿ ಹೆಚ್ಚುಹೆಚ್ಚು ಮಂದಿ ಭಾಗವಹಿಸಲು ಸಾಧ್ಯವಾಗುವಂತೆ ಮಾಡಬೇಕಾದ್ದು ನಮ್ಮ ಕರ್ತವ್ಯ. ಮತ್ತು, ಈ ವಯಸ್ಕರ ವಿದ್ಯಾಭ್ಯಾಸದ ವ್ಯಾಸಂಗಕ್ರಮ ಮುಂತಾದುವನ್ನು ವ್ಯವಸ್ಥೆಗೊಳಿಸುವಲ್ಲಿ ಇಂದಾಗಲಿ, ಯುದ್ಧ ಮುಗಿದ ಮೇಲಾಗಲಿ ನಮ್ಮ ದೇಶದ ಸ್ಥಿತಿಗತಿಗಳನ್ನು ಗಮನದಲ್ಲಿಟ್ಟುಕೊಳ್ಳುವುದು ಮೇಲು. ಅದು ಹೇಗಾದರೂ, ನಮ್ಮ ದೇಶಕ್ಕೆ ಅನುಗುಣವಾದ ವಯಸ್ಕ ವಿದ್ಯಾಭ್ಯಾಸದ ಕಾರ್ಯಯೋಜನೆಯನ್ನು ಜರೂರಾಗಿ ಸಿದ್ಧಗೊಳಿಸಬೇಕಾಗಿದೆ. ಸಾಧ್ಯವಾದರೆ, ಈ ಯೋಜನೆ ಒಟ್ಟು ಭರತಖಂಡಕ್ಕೆ ಅನ್ವಯಿಸುವಂತಿದ್ದರೆ ಹೆಚ್ಚು ಪ್ರಯೋಜನಕರ.

# ಕನ್ನಡ ನುಡಿ

**ಶುಕ್ರವಾರ, ಜುಲೈ ೯, ೧೯೪೩**

---

## ಅಭಿನಂದನೆ

### ರಾವ್‌ಬಹದ್ದೂರ್ ಫ. ಗು. ಹಳಕಟ್ಟಿಯವರು

ತಾ. ೨-೭-೧೯೪೩ನೆಯ ಶುಕ್ರವಾರ ವಿಜಾಪುರದಲ್ಲಿ ರಾವ್‌ಬಹದ್ದೂರ್ ಫ. ಗು. ಹಳಕಟ್ಟಿಯವರ ೬೪ನೆಯ ವರ್ಷ ವರ್ಧಂತ್ಯುತ್ಸವ ವಿಜೃಂಭಣೆಯಿಂದ ನಡೆಯಿತು. ಆ ಸಮಯದಲ್ಲಿ ಶ್ರೀ. ಹಳಕಟ್ಟಿಯವರಿಗೆ ಮಾನಪತ್ರವನ್ನೂ ನಿಧಿಯನ್ನೂ ಸಮರ್ಪಿಸಲಾಯಿತು.

ಶ್ರೀ. ಹಳಕಟ್ಟಿಯವರನ್ನೂ ಅವರ ಕನ್ನಡದ ಸೇವೆಯನ್ನೂ ನಾಡು ಬಲ್ಲುದು. ವಚನವಾಙ್ಮಯದ ಪ್ರಚಾರದಲ್ಲಿ ಅವರು ತೋರಿಸಿದ ಶ್ರದ್ಧೆ ಶ್ರಮ ತ್ಯಾಗಗಳು ಅಪಾರವಾದವು. ಇವರ ಸಾರ್ವಜನಿಕ ಜೀವನ ಸಮೃದ್ಧವಾಗಿ ನಡೆದು ಬಂದಿದೆಯೆನ್ನುವುದಕ್ಕೆ ಇವರು ಅಧ್ಯಕ್ಷರಾಗಿಯೂ ಸದಸ್ಯರಾಗಿಯೂ ಭಾಗವಹಿಸಿ ನಾಡಸೇವೆ ಮಾಡಿರುವ ಸಂಸ್ಥೆಗಳಲ್ಲಿ ಕೆಲವನ್ನು ಇಲ್ಲಿ ನೆನೆಯಬಹುದು: ಕನ್ನಡ ಸಾಹಿತ್ಯ ಪರಿಷತ್ತು: ೧೯೨೬ರಲ್ಲಿ ಬಳ್ಳಾರಿ ಸಮ್ಮೇಳನದ ಅಧ್ಯಕ್ಷರಾಗಿದ್ದರು; ಮುಂಬಯಿ ಅಸೆಂಬ್ಲಿಯ ಮತ್ತು ವಿಶ್ವವಿದ್ಯಾನಿಲಯದ ಸೆನೆಟಿನ ಸದಸ್ಯರಾಗಿದ್ದರು. ಅಖಿಲ ಭಾರತ ವೀರಶೈವ ಮಹಾಸಭೆಯ ಧಾರವಾಡದ ಅಧಿವೇಶನಕ್ಕೆ ಅಧ್ಯಕ್ಷರಾಗಿದ್ದರು. ಕರ್ನಾಟಕ ಏಕೀಕರಣ ಪರಿಷತ್ತಿನ ಅಧ್ಯಕ್ಷರಾಗಿದ್ದರು. ವಿಜಾಪುರ ಸ್ಕೂಲ್ ಬೋರ್ಡಿನಲ್ಲಿ ಸೇರಿ ಬೇಕಾದಷ್ಟು ಸುಧಾರಣೆಗಳನ್ನು ಮಾಡಿದರು.

ಹಿಂದೆ ಇವರು ನಡಸುತ್ತಿದ್ದ 'ನವಕರ್ಣಾಟಕ' ದಿನ ಪತ್ರಿಕೆಯ ಮತ್ತು ಈಗ ೧೭ ವರ್ಷಗಳಿಂದಲೂ ನಡಸುತ್ತಿರುವ 'ಶಿವಾನುಭವ' ಮಾಸ ಪತ್ರಿಕೆಯ ಮೂಲಕ ಕನ್ನಡದ ನವಜಾಗೃತಿಗೆ ಬಹಳ ನೆರವು ನೀಡುತ್ತ ಬಂದಿದ್ದಾರೆಂದು ಕನ್ನಡಿಗರು ಸಂತೋಷದಿಂದ ಸ್ಮರಿಸುತ್ತಿರುವರು.

ಹೀಗೆ ಶ್ರೀ. ಹಳಕಟ್ಟಿಯವರ ಸೇವೆ ಬಹುಮುಖವಾಗಿ ಬಹು ಕ್ಷೇತ್ರಗಳಲ್ಲಿ ನಡೆದು ಅವರ ಉಜ್ವಲವಾದ ದೇಶಭಕ್ತಿಯನ್ನು ಪ್ರಜೆಗಳೂ ಪ್ರಭುತ್ವದವರೂ ಮೆಚ್ಚಿಕೊಂಡಿದ್ದಾರೆ. ದೇವರು ಈ ಮಹನೀಯರಿಗೆ ದೀರ್ಘಾಯುರಾರೋಗ್ಯ ಭಾಗ್ಯವನ್ನು ನೀಡಲೆಂದು ನಮ್ಮ ವಾಚಕರ ಪರವಾಗಿ **ನುಡಿ** ಪ್ರಾರ್ಥಿಸುತ್ತದೆ.

---

## ಕಾವ್ಯಗಾಯನ ಕಲೆ

(ಶ್ರೀ. ಬಿ. ಎಸ್. ರಾಮಾಚಾರ್ಯರು, ಸಂತೆಬೆನ್ನೂರು)

ಹಾಡೇ ಜೀವನದ ಆದಿ; ಹಾಡೇ ಜೀವನದ ಹಾದಿ; ಹಾಡೇ ಜೀವನದ ಮುಕ್ತಿ. ತಾಯ್ನುಡಿಯ ಕಾವ್ಯವನ್ನು ಹಾಡುವುದಕ್ಕೆ ಕಾವ್ಯಗಾಯನವೆಂದು ಹೆಸರು.. ಇದಕ್ಕೆ ಗಮಕ ಕಲೆಯೆಂತಲೂ ಕರೆಯುವರು. ನಾದದಲ್ಲಿ ನುಡಿ ಬೆರಸುವ ಕಲೆ.

ಇದು ಹೊಸದೇ? ಅಲ್ಲ. ನುಡಿ ಹೊರಹೊಮ್ಮಿದಾಗಿನಿಂದಲೂ ನುಡಿ ನಾದ ಬೆರೆತು ಬರುತ್ತಿವೆ. ಷಟ್ಪದಿಗಳಂತೆ ಹಳ್ಳಿಗಳಲ್ಲಿಯೂ ಇದರ ಅಭ್ಯಾಸ ಚೆನ್ನಾಗಿದೆ. ಲಾವಣಿ, ಸಾಂಗತ್ಯ, ಕೋಲುಪದ, ಯಕ್ಷಗಾನಗಳ ಹಾಡು ಬರದೆ ಇರುವ ಹಳ್ಳಿಗಳೆ ಅಪರೂಪ.

ಆದರೂ ಹಬ್ಬಿಲ್ಲ: ಬೆಳೆ ಹಾಳುಮಾಡುವ ಕಳೆಯಿಂದ, ಬಂದಳಿಕೆಯ ಕಾಟದಿಂದ. ಈ ಕೇಡನ್ನು ನಿವಾರಿಸುವ ಕಾಲ ಬಂದಿದೆ. ಅರಿತ ವ್ಯವಸಾಯ ಮಾಡುವಂತೆ ಅರಿತ ನುಡಿಯಲ್ಲಿ ಹಾಡುವುದು ಆನಂದವಲ್ಲವೆ? ಫಲವೂ ಉಂಟು. ತಿಳಿಯದ ಭಾಷೆಯ ಹಾಡುಗಳನ್ನೂ, ಭಾಷೆ ತಿಳಿಯದೆ ಹಾಡುವವರನ್ನೂ ಕೇಳಿ ನಮಗೆ ಸಾಕಾಗಿದೆ. ಸಾಹಿತ್ಯ ಸೊನ್ನೆಯಾದ ಹಾಡು ಹಾಡೇ? ಸಂಗೀತವೇ?

ಕಾವ್ಯ ಗಾಯನಕ್ಕೆ ಸಾಹಿತ್ಯ ಮೊದಲನೆಯ ಅಂಗ. ಅನಂತರ ಸಂಗೀತ ಎರಡೂ ಬೆರೆತರೆ ತುಂಬ ಸುಖ. ಇಲ್ಲದಿದ್ದರೆ ಒಕ್ಕಣ್ಣು. ಸಾಹಿತ್ಯದ ಭಾವ, ರಸಗಳನ್ನು ಕೆಡಿಸದೆ ಶ್ರುತಿಯಲ್ಲಿ ಲಯಬದ್ಧವಾಗಿ ಹಾಡುವುದೇ ಈ ಕಲೆಯ ರೀತಿ. ಅನಾವಶ್ಯಕವಾಗಿ ಪದಗಳನ್ನು ಎಳೆಯಕೂಡದು. ರಸಕ್ಕೆ ತಕ್ಕ ರಾಗ ಕೂಡಬೇಕು. ಅಳುವಾಗ ಅಳುವ ರಾಗ, ಕುಣಿಯುವಾಗ ಕುಣಿಯುವ ರಾಗ. ಕವಿಯ ಭಾವ ಪರರಾಗವನ್ನು ಚೆಲ್ಲಬೇಕು. ನಿಲಿಸುವಾಗ ಸೂಕ್ಷ್ಮವಾಗಿ ನಿಲಿಸಬೇಕು. ಅತಿ ಕೂಡದು. ಕೇಳುವವರಿಗೆ ಆನಂದದಾಯಕವಾಗಿರಬೇಕು.

ಇದು ಸಾಧ್ಯವೆ? ನಮ್ಮ ಕಾವ್ಯವನ್ನು ಹಾಡಬಹುದೆ? ಹೊಸ ಕವನಗಳಿಗೆ ಛಂದಸ್ಸಿದೆಯೆ? ರಾಗವಿದೆಯೆ? ಹಾಡಲು ಬರುತ್ತದೆಯೆ? ಎಂಬ ನಿರಾಶೆಯ ಬಾಣಗಳನ್ನು ಹೂಡುವವರು ಕೆಲವರಿರುವರು. ಅವರದು ತಪ್ಪಿಲ್ಲ. ಆದರೆ ಅರಿಯದ ದೋಷ. ಕೇಳುವುದೇನೋ ನ್ಯಾಯ. ಅನುರಾಗವಿದ್ದರೆ ರಾಗ. ಹಾಡೇ ನುಡಿ; ನುಡಿಯೇ ಹಾಡು. ಹಳೆಯ ಕಾವ್ಯದ ಕಂದ, ವೃತ್ತ, ಷಟ್ಪದಿ, ರಗಳೆಗಳು ಛಂದೋಬದ್ಧವಾಗಿದೆ. ಲಯಕ್ಕೆ ಸಿಗುತ್ತದೆ. ಕೀರ್ತನೆಗಳನ್ನು ರಾಗ ತಾಳಕ್ಕೆ ಅನುಸಾರವಾಗಿ ಮಾಡಿದ್ದಾರೆ. ಲಾವಣಿ ಸಾಂಗತ್ಯ ಇವುಗಳನ್ನು ಗತಿಗನುಸಾರವಾಗಿಯೇ ಹಾಡುವುದು, ಇವುಗಳದೇನೂ ತಂಟೆಯಿಲ್ಲ. ಎಲ್ಲಿ ಹೋಗಿ ಹೊಸ ಕವಿತೆಗಳ ಮೇಲ್ಲೆ ಕಣ್ಣು. ಹೊಸ ಕವಿತೆಗಳಲ್ಲಿಯೂ ಕೂಡ ಹಾಡುಕಬ್ಬಗಳಿವೆ. ಅವುಗಳಲ್ಲಿ ಕೆಲವನ್ನು ಗತಿಗೆ ಬರೆದಿದಾರೆ. ಅದೇ ಗತಿಗೆ ಓಡಿಸಿದರಾಯಿತು. ತಾಳ ನಿಲ್ಲುತ್ತದೆ. ಇನ್ನು ರಾಗದ ಚಿಂತೆ. ಕೇಳುವುದಕ್ಕೆ ಇಂಪಾಗಿದ್ದರೆ ಸಾಲದೆ?

ಕಾವ್ಯ ಗಾಯನಕ್ಕೆ ವಸ್ತು ಕಡಮೆಯೇ? ಕೀರ್ತನೆ, ಕಂದ, ವೃತ್ತ, ಗೀತ, ಷಟ್ಪದಿ, ವಚನ, ರಗಳೆ, ಲಾವಣಿ, ಸಾಂಗತ್ಯ, ತ್ರಿಪದಿ, ಗೀತ ನಾಟಕ ಮತ್ತು ಹೊಸ ಕವನಗಳೇ ಇದರ ಭಂಡಾರ. ಕಂದ ವೃತ್ತಗಳಿಗೆ ಹಳೆಯ ಕಾವ್ಯಗಳೇ ಎತ್ತಿದ ಕೈ. ಷಟ್ಪದಿಗೆ ಕುಮಾರವ್ಯಾಸ, ಜೈಮಿನಿಗಳಿದಾರೆ. ವಚನಗಳಿಗೆ ಅಕ್ಕಮಹಾದೇವಿ, ಬಸವೇಶ್ವರರಿದ್ದಾರೆ. ರಗಳೆಗಳಿಗೆ ಹರಿಹರ, ತ್ರಿಪದಿಗೆ ಸರ್ವಜ್ಞ, ಸಾಂಗತ್ಯಕ್ಕೆ ಹೊನ್ನಮ್ಮ ಇವರಿಗಿಂತ ಬೇಕೆ? ಲಾವಣಿ 'ಲಾಟ್ ಗಟ್ಟಲೆ' ಇವೆ. ಲಾವಣಿ ಧಾಟಿಯ ಹೊಸ ಕವಿತೆಗಳಿಗೆ ಶ್ರೀ. ಬೇಂದ್ರೆಯವರಿದಾರೆ. ಕೀರ್ತನೆಗಳಿಗೆ ಕನಕದಾಸ ಪುರಂದರದಾಸರುಗಳಿದಾರೆ. ಸರಿ, ಹೊಸ ಕನ್ನಡ ಕವನಗಳು ಕಣಜ ತುಂಬ ಇವೆ. ಹೊಸ ಕನ್ನಡ ಗೀತೆಗಳೂ ಇವೆ. ಆದ್ದರಿಂದ ಕಡಮೆ ಏನೂ ಇಲ್ಲ. ಬಳಕೆಗೆ ಬಂದಿಲ್ಲ, ಅಭ್ಯಾಸ ಮಾಡಿಲ್ಲ, ತಾಳ್ಮೆಯಿಲ್ಲ, ಇಷ್ಟವಿಲ್ಲ.

ನಮ್ಮಲ್ಲಿ ಕವಿತೆಗಳನ್ನು ಓದುವವರೂ ಕಡಮೆ. ಕೆಲವರಿಗೆ ಅನಾದರ. ಕೆಲವರಿಗೆ ಅಸೂಯೆ. ಕೆಲವರಿಗೆ ಕೇಳಲೂ ಕೂಡ ಸಹನೆಯಿಲ್ಲ. ಕೆಲವರು ಕೇಳಿಯೂ ಮೆಚ್ಚುವುದು ಕಷ್ಟ. ಶೋಚನೀಯ ಎಂದು ಸುಮ್ಮನೆ ಕುಳಿತರಾಯಿತೆ? ಇವರುಗಳನ್ನೆಲ್ಲಾ ಒಪ್ಪಿಸಬೇಕಾದರೆ ಏನು ಮಾಡಬೇಕು? ಕಲ್ಲಾದರೂ ಕರಗುತ್ತದೆ. ಕೇಳುತ್ತದೆ. ಇಂಪಾದ ಗಾಯನಕ್ಕೆ ಕಿವಿಗೊಡದೆ ಇರುವವನು ಮಾನವನೇ? ಆಧುನಿಕ ಕವಿತೆಗಳಲ್ಲಿ, ಸಹಜತೆ, ಸರಳತೆ, ನವೀನತೆ ಇವೆ; ಭಾವಾರ್ಥಗಳ, ನವರಸಗಳ, ಪ್ರಕೃತಿಯ ಸೊಬಗಿದೆ; ನೃತ್ಯವಿದೆ. ಎಲ್ಲರಿಗೂ ತಿಳಿಯುವಂತಿವೆ. ಆದರೆ, ಸುಶ್ರಾವ್ಯವಾಗಿ ಹಾಡುವವರಾಗಬೇಕು. ಕಾವ್ಯ ಎಲ್ಲರಿಗೂ ತಿಳಿಯುವಂತಿರಬೇಕು. ರಾಜಸ್ಥಾನದ ಕಾವ್ಯ ಮಾತ್ರವೇ ಕಾವ್ಯವೇ?

ಹೊಸ ಕವನಗಳಲ್ಲಿ ಎಲ್ಲವನ್ನೂ ಹಾಡಲು ಬರುವುದೇ? ಎಂಥವನ್ನು ಹಾಡಬೇಕು? ಉತ್ತರ ಕಷ್ಟ. ಇವುಗಳಲ್ಲಿ ಉದ್ದವಾದದ್ದಿವೆ, ಮೊಟಕಾದದ್ದಿವೆ. ಎಲ್ಲ ಕವಿತೆಗಳನ್ನೂ ಹಾಡಲು ಸಾಧ್ಯವಿಲ್ಲದಿರಬಹುದು. ಹಾಡಲು ಸಾಧ್ಯವಾಗುವವು ಹಲವಿವೆ. ಒಟ್ಟನಲ್ಲಿ ಎಲ್ಲರಿಗೂ ಮೆಚ್ಚಿಗೆಯಾದ, ಜಾತಿ ಭೇದಗಳಲ್ಲದ ಭಾವರಂಜನೆಯಾದ ಸರಳ ಕವಿತೆಗಳನ್ನಾರಿಸಿ ಹಾಡುವುದು ಕ್ರಮ. ಹಾಡುವವರ ಮತ್ತು

ಕೇಳುವವರ ಇಷ್ಟದಂತೆ ಇದು ಬದಲಾಯಿಸುವುದು. ಸನ್ನಿವೇಶ, ಕಾಲ ದೇಶಗಳಂತೆಯೂ ವ್ಯತ್ಯಾಸವಾಗುವುದು. ಕವಿಗಳ ಮತ್ತು ಕವನಗಳ ಪರಿಚಯ, ಅದರಲ್ಲಿ ಅನುರಾಗ ಇದ್ದರೆ ರಾಗ ತಾನಾಗಿಯೆ ಭಾವಾರ್ಥಗಳನ್ನು ಹಿಂಬಾಲಿಸುವುದು.

ಕವನಗಳನ್ನು ಮತ್ತು ಕಾವ್ಯ ಭಾಗಗಳನ್ನಾರಿಸುವುದೂ ಒಂದು ಕಲೆ. ಸಾಹಿತಿಗಳೂ ಗಾಯಕರೂ ಕಲೆತು ಈ ಕೆಲಸ ಮಾಡುವುದು ಮೇಲು. ಕವಿಯು ಗಾಯಕನಿಗೆ ರಸವತ್ ಕವಿತೆಗಳನ್ನು ತಿಳಿಸಿದರೆ, ಗಾಯಕನು ಸರಿಯಾದ ರಾಗ ಕೊಡುವನು. ಕೊನೆಗೆ ಜನರ ಮೆಚ್ಚಿಗೆಯನ್ನು ಪಡೆದರೆ, ಅದು ಸರಿಯಾಗಿದೆಯೆಂದರಿಯಬೇಕು.

ನಾಡಿನ ಹಿರಿಯ ಗಮಕಿಗಳಾದ ಶ್ರೀ.ಗಳಾದ ಬಿಂದೂರಾಯರವರು, ಸಂಪತ್ಕುಮಾರಾಚಾರ್ಯರವರು ಮತ್ತು ಕೃಷ್ಣರಾಯರವರು ಇವರುಗಳೂ ಇವರ ಶಿಷ್ಯರು ಕೆಲವರೂ ಬಹಳ ಶ್ರಮದಿಂದ ಈ ಕಲೆಯನ್ನು ಅಭಿವೃದ್ಧಿಪಡಿಸುತ್ತಿರುವರು. ಭಾರತ ಪಠಣದಲ್ಲಿ ಇವರೆಲ್ಲರೂ ಕೊಡುತ್ತಿರುವ ಸೊಡೆ ಬಹಳ ರುಚಿಯಾಗಿದೆ. ಕರ್ನಾಟಕದಲ್ಲೆಲ್ಲ ಈ ಕಲೆಯನ್ನು ಸಾರುತ್ತಿದ್ದಾರೆ. ಆಧುನಿಕ ಕವಿಗಳಾದ ಶ್ರೀ.ಗಳಾದ ಬೇಂದ್ರೆ, ವಿ. ಸೀತಾರಾಮಯ್ಯ, ಪುಟ್ಟಪ್ಪ, ಮುಗಳಿ, ಕಾರಂತ, ಮೊದಲಾದವರು ತಮ್ಮ ಮತ್ತು ಇತರರ ಕವನಗಳ ಗಾಯನ ರಸಾಯನವನ್ನು ಹಂಚುತ್ತಿದ್ದಾರೆ. ಈಚೀಚೆಗೆ ಆಸ್ಥಾನ ವಿದ್ವಾನ್ ತಿಟ್ಟೆ ಕೃಷ್ಣಯ್ಯಂಗಾರ್ ಅವರೇ ಮೊದಲಾದ ಕೆಲವು ಗಾಯಕರು ಆಧುನಿಕ ಕವಿತೆ ಗೀತೆಗಳನ್ನು ಸಂಗೀತ ಸಭೆಗಳಲ್ಲಿ ಹಾಡುತ್ತಿದ್ದಾರೆ.

ಕರ್ನಾಟಕದಲ್ಲಿ ಇಷ್ಟೇ ಜನ ಪ್ರಚಾರಕರು ಸಾಕೆ? ಸಾಲದು. ಪ್ರತಿಯೊಬ್ಬ ಕನ್ನಡಿಗನೂ ಕಾವ್ಯಗಾಯನ ಪ್ರೇಮಿಯಾಗಬೇಕಾದರೆ ಮಾಡಬೇಕಾದ ಕಾರ್ಯಗಳೇನು? ಈ ಕಾರ್ಯಕ್ಕೆ ಯಾರು ಯಾರು ಭಾಗಿಗಳಾಗಬೇಕು? ಏನು ಹಾಡಬೇಕೆಂಬ ಪ್ರಶ್ನೆಗಳಿಗೆ ಪರಿಷತ್ತಿನಂಥ ಸಂಸ್ಥೆಗಳು ದಾರಿ ತೋರಿಸಬೇಕು.

(೧) ಕವಿಗಳು ಉತ್ತಮವಾದ ಹಾಡು ಕಬ್ಬಗಳನ್ನೂ ಕೃತಿಗಳನ್ನೂ ರಚಿಸಬೇಕು. ಅವರು ಅವನ್ನು ಹಾಡಿ ತೋರಿಸಬೇಕು. ತಮ್ಮ ಕವನಗಳನ್ನು ಸಂಗೀತ ತಿಳಿದ ಮತ್ತು ಅಭಿರುಚಿ ಇರುವವರ ಮುಂದೆ ಹಾಡಬೇಕು. ಹಾಡು ಬಾರದ ಕವಿ ಹಾಡುವುದನ್ನು ಕಲಿತು ಬರೆದರೆ ಆತನ ಕವನಗಳಿಗೆ ಬೆಲೆ ಏರುತ್ತದೆ. (೨) ಸಂಗೀತದಲ್ಲಿ ಅಭಿರುಚಿಯಿರುವ ಮತ್ತು ಸಂಗೀತ ಬರುವ ನಾಡಿನ ತರುಣ ತರುಣಿಯರೆಲ್ಲರೂ ಮೊದಲು ಈ ಕಾರ್ಯವನ್ನು ಪ್ರಾರಂಭಿಸಬೇಕು. (೩) ಕನ್ನಡ ಸಾಹಿತ್ಯ ಪರಿಷತ್ತು 'ಕಾವ್ಯಗಾಯನ ಮಾಲೆ'ಗಳನ್ನು ಈ ಕಲೆಯನ್ನು ಚೆನ್ನಾಗಿ ಅರಿತವರಿಂದ ನೆರವು ಪಡೆದು ಸ್ವರಜೋಡಣೆ ಮಾಡಿ ಪ್ರಕಟಿಸಬೇಕು. ಈ ಕಲೆಗೆ ಪ್ರತ್ಯೇಕ ಒಂದು ಸಮಿತಿಯನ್ನೇರ್ಪಡಿಸಬೇಕು. ಗಾಯಕರಿಗೆ ಪ್ರಚಾರ ಮಾಡಲು ಹುರುಪು ಕೊಡಬೇಕು. ಪ್ರತಿ ವರ್ಷವೂ ತಪ್ಪದೆ ಕರ್ನಾಟಕ ಕಾವ್ಯಗಾಯನ ಸ್ಪರ್ಧೆ ಏರ್ಪಡಿಸಬೇಕು. (೪) ವಿದ್ಯಾ ಇಲಾಖೆಯವರು ಬಾಲಕ ಬಾಲಕಿಯರಿಗೆ ಕಾವ್ಯಗಾಯನ ಕಲೆಯಲ್ಲಿ ಶಿಕ್ಷಣ ಕೊಡುವ ವ್ಯವಸ್ಥೆ ಮಾಡಬೇಕು. ಸಂಗೀತ ಉಪಾಧ್ಯಾಯರುಗಳಿಗೆ ಈ ಕಲೆಯನ್ನು ಅಭ್ಯಾಸ ಮಾಡುವಂತೆ ಒತ್ತಾಯಪಡಿಸಬೇಕು. (೫) ಪ್ರತಿ ಜಿಲ್ಲೆಯ ಮತ್ತು ತಾಲ್ಲೂಕಿನ ಕರ್ಣಾಟಕ ಸಂಘಗಳೂ ಉಪಾಧ್ಯಾಯ ಸಂಘಗಳೂ ಈ ಕಲೆಯ ಪ್ರಚಾರವನ್ನು ಕೈಕೊಂಡು ನೆರವಾಗಬೇಕು. ಕರ್ನಾಟಕ ಸಂಘಗಳಲ್ಲಿ ಮಹಾಜನರಿಗೂ ಶಾಲೆಗಳಲ್ಲಿ ಮಕ್ಕಳಿಗೂ ಕಾವ್ಯಗಾಯನ ಸ್ಪರ್ಧೆಗಳನ್ನಿಟ್ಟು ಹುರುಪು ಕೊಡಬೇಕು. (೬) ಬಾಲಕ ಬಾಲಕಿಯರು ತಾವು ಸಂಗೀತ ಚಿತ್ರಕಲೆಗಳಿಗೆ ಎಷ್ಟು ಬೆಲೆಯನ್ನು ಕೊಟ್ಟು ಶ್ರಮದಿಂದ ಕಲಿತುಕೊಳ್ಳುವರೋ ಅದಕ್ಕಿಂತ ಹೆಚ್ಚಾಗಿ ಕನ್ನಡ ಗೀತಗಳಿಗೆ ಶ್ರಮವಹಿಸಬೇಕು. ತಾಯಿ ತಂದೆಯರು ಮನೆಗಳಲ್ಲಿ ತಮ್ಮ ಮಕ್ಕಳು ಈ ಕಲೆಯನ್ನು ಕಲಿಯಲು ಪ್ರೋತ್ಸಾಹ ಕೊಡಬೇಕು. (೭) ಹಾಡನ್ನು ಚೆನ್ನಾಗಿ ಅರಿತ ಸಾಹಿತಿಗಳು ಬರೆದರೆ ಸಂಗೀತಗಾರರು ಅದನ್ನು ಸರಿಯಾದ ರಾಗ ತಾಳದಿಂದ ಹಾಡಿದರೆ ನಾಡು ಕುಣಿಯದೆ ನಿಂತೀತೆ? ಇಂಥವರು ಅಭ್ಯಾಸ ಮಾಡಿದರೆ ಬಹಳ ಸಂತೋಷ. ಅವರ ಜ್ಞಾನದ ಬೆಲೆ ಏರುವುದಲ್ಲದೆ ಕಾವ್ಯದ ಬೆಲೆ ಏಕೆ, ನಾಡಿನ ಬೆಲೆ ಏರುವುದು. (೮). ಬಾನ್‌ದನಿಯವರು ದಿನವೂ ಹದಿನೈದು ನಿಮಿಷಗಳಾದರೂ ಕಾರ್ಯಕ್ರಮದಲ್ಲಿ ಕರ್ನಾಟಕ ಕಾವ್ಯಗಾಯನವನ್ನು ಮೀಸಲಾಗಿಡಬೇಕು. ನಾಡಿನ ಸುಪ್ರಸಿದ್ಧ ಕವಿಗಳ ಕಾವ್ಯವನ್ನು ಹಾಡುವಂತೆ ಏರ್ಪಡಿಸಬೇಕು. ಗೀತ ನಾಟಕಗಳನ್ನು ಆಡಿಸಬೇಕು.

---

## ಸಂತಾಪ ಸೂಚಕ ಸಭೆ

ರಾಜಕಾರ್ಯಪ್ರವೀಣ ಶ್ರೀ. ಎನ್. ಎಸ್. ಸುಬ್ಬರಾಯರ ನಿಧನಕ್ಕಾಗಿ ಸಂತಾಪ ಸೂಚಿಸಲು ಪರಿಷನ್ಮಂದಿರದಲ್ಲಿ ೨-೭-೪೩ನೆಯ ಶುಕ್ರವಾರ ಸಂಜೆ ಸಭೆ ನಡೆಯಿತು. ರಾವ್ ಬಹದ್ದೂರ್ ಶ್ರೀ. ಬಿ. ವೆಂಕಟೇಶಾಚಾರ್, ಎಂ. ಎ., ಎಫ್. ಇನ್ಸ್‌ಟ್. ಪಿ. ಅವರು ಅಧ್ಯಕ್ಷತೆ ವಹಿಸಿದ್ದರು.

ಉಪಾಧ್ಯಕ್ಷರು ತಮ್ಮ ಮೊದಲ ಮಾತಿನಲ್ಲಿ ಶ್ರೀಮಾನ್ ಸುಬ್ಬರಾಯರ ನಿಧನದಿಂದ ಪರಿಷತ್ತಿಗೆ ದೊಡ್ಡ ನಷ್ಟವಾಗಿದೆಯೆಂದು ಹೇಳಿ, ದಿವಂಗತರ ಹಿರಿಯ ವ್ಯಕ್ತಿತ್ವವನ್ನೂ ಪಾಂಡಿತ್ಯವನ್ನೂ ಕನ್ನಡದ ಸೇವೆಯನ್ನೂ ಪ್ರಶಂಸೆ ಮಾಡಿದರು.

ಬಳಿಕ, ಬಳ್ಳಾರಿಯಿಂದ ದಯಮಾಡಿಸಿದ್ದ ವಿದ್ವಾನ್ ಶ್ರೀ. ಎಂ. ಜಿ. ವೆಂಕಟೇಶಯ್ಯನವರೂ, ಸೆಂಟ್ರಲ್ ಕಾಲೇಜಿನಲ್ಲಿ ಇಂಗ್ಲಿಷ್ ವಿಭಾಗದ ಅಸಿಸ್ಟೆಂಟ್ ಪ್ರೊಫೆಸರಾಗಿರುವ ಶ್ರೀ ಕೆ. ಅನಂತರಾಮಯ್ಯನವರೂ, ಗೌ|| ಪ್ರೆಸ್ಸಿನ ನಿವೃತ್ತ ಸೂಪರಿಂಟೆಂಡೆಂಟರಾದ ಶ್ರೀ. ಬಿ. ಪುಟ್ಟಯ್ಯನವರೂ, ಮೈಸೂರು ಸರ್ಕಾರದ ಟ್ರಾನ್ಸ್‌ಲೇಟರಾದ ಶ್ರೀ. ಸಿ. ಕೆ. ವೆಂಕಟರಾಮಯ್ಯನವರೂ ಉಪನ್ಯಾಸಮಾಡಿ ಶ್ರೀಮಾನ್ ಸುಬ್ಬರಾಯರು ತಮ್ಮ ಶಿಷ್ಯರಲ್ಲಿ ಇಟ್ಟಿದ್ದ ವಾತ್ಸಲ್ಯ, ಉಪಕಾರ ಬುದ್ಧಿ, ಅವರ ಪಾಂಡಿತ್ಯ, ಸ್ಮರಣಶಕ್ತಿ, ಪ್ರತಿಭೆ, ಬೋಧನಸಾಮರ್ಥ್ಯ, ನಯವಾದ ನಡತೆ ಮುಂತಾದ ಸುಗುಣಗಳನ್ನು ಮನಮುಟ್ಟುವಂತೆ ನೆನೆದರು.

ಅಧ್ಯಕ್ಷರು ತಮ್ಮ ಮಾತಿನಲ್ಲಿ, ತಾವು ಸೆಂಟ್ರಲ್ ಕಾಲೇಜಿನಲ್ಲಿ, ೧೯೦೧ ರಲ್ಲಿ ಅಧ್ಯಾಪಕರಾಗಿದ್ದಾಗ ಶ್ರೀಮಾನ್ ಸುಬ್ಬರಾಯರು ವಿದ್ಯಾರ್ಥಿಯಾಗಿ ಕಾಲೇಜಿಗೆ ಸೇರಿದರೆಂದೂ ಆಗಲೇ ತಾವು ಅವರಲ್ಲಿ ಹುದುಗಿದ್ದ ತೇಜಸ್ಸನ್ನು ಗುರುತಿಸಿದುದಾಗಿಯೂ ಹಿಂದಿನ ಸವಿನೆನಪನ್ನು ನೆನೆದರು. ಸಾಹಿತ್ಯದಲ್ಲೂ ಶಾಸ್ತ್ರ ವಿಷಯಗಳನ್ನೂ ಅವರಿಗಿದ್ದ ಗಾಢವಾದ ಆಸಕ್ತಿ, ವಿದ್ಯಾಭ್ಯಾಸ ಇಲಾಖೆಯಲ್ಲಿಯೂ ವಿಶ್ವವಿದ್ಯಾನಿಲಯದಲ್ಲಿಯೂ ಅಧಿಕಾರಿಗಳಾಗಿದ್ದಾಗ್ಗೆ ತೋರಿಸಿದ ವ್ಯವಸ್ಥಾಪಕ ಶಕ್ತಿ, ಕಾರ್ಯಸಾಧನ ನೈಪುಣ್ಯ, ದೇಶದ ಏಳಿಗೆಯ ನಾನಾ ಪ್ರಯತ್ನ ಯೋಜನೆಗಳಿಗೆ ತಮ್ಮ ಅರ್ಥಶಾಸ್ತ್ರ ಜ್ಞಾನದ ಲಾಭವನ್ನು ಕೊಟ್ಟು ಉಪಕಾರಮಾಡಿದುದು, ಅವರ ಮೃದು ಸ್ವಭಾವ ಮುಂತಾದ ಗುಣಗಳನ್ನು ನೆನೆದು, ಕಾಲಾಧೀನರಾಗುವ ಮುಂಚೆ ಅವರು ಅರ್ಥಶಾಸ್ತ್ರ ವಿಷಯವಾಗಿ ಬರೆಯುತ್ತಿದ್ದ ಗ್ರಂಥವನ್ನು ತಮ್ಮ 'ಜೀವಮಾನದ ಕೃತಿ' (Life Work) ಎಂದು ಹೇಳುತ್ತಿದ್ದರು; ಅದು ಮುಗಿಯುವ ಮುಂಚೆಯೇ ಅವರು ದೈವಾಧೀನರಾದುದು ನಾಡಿನ ದೌರ್ಭಾಗ್ಯ ಎಂದು ದುಃಖವನ್ನು ಸೂಚಿಸಿದರು.

ಬಳಿಕ ಕೆಳಗೆ ಕೊಟ್ಟಿರುವ ನಿರ್ಣಯವನ್ನು ಸಭೆ ಅಂಗೀಕರಿಸಿತು.

### ಸಂತಾಪ ಸೂಚಕ ನಿರ್ಣಯ

ಪರಿಷತ್ತಿನ ಹಿರಿಯ ಅಭಿಮಾನಿಗಳಾಗಿದ್ದು, ಮೈಸೂರು ವಿದ್ಯಾಭ್ಯಾಸ ಇಲಾಖೆಯ ಮತ್ತು ಮೈಸೂರು ವಿಶ್ವವಿದ್ಯಾನಿಲಯದ ಮುಖ್ಯಾಧಿಕಾರಿಗಳಾಗಿ ಕನ್ನಡದ ಮುನ್ನಡೆಗೆ ಸಹಾಯಕರಾದವರೂ, ಅದರಲ್ಲೂ ಮತ್ತು ಮಾಧ್ಯಮಿಕ ಉತ್ತಮ ಶಾಲೆಗಳ ತರಗತಿಗಳಲ್ಲಿ ಕನ್ನಡವನ್ನು ಶಿಕ್ಷಣ ಭಾಷೆಯಾಗಿ ಮಾಡಿ ನಾಡಿಗೆ ಉಪಕಾರ ಮಾಡಿದವರೂ, ೧೯೩೫ ರಲ್ಲಿ ಮುಂಬಯಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಅಧ್ಯಕ್ಷರಾಗಿ ಇಡಿಯ ಕನ್ನಡನಾಡಿನ ಗೌರವವನ್ನು ಪಡೆದವರೂ, ಪ್ರಸಿದ್ಧ ಅರ್ಥಶಾಸ್ತ್ರಜ್ಞರಾಗಿ, ಭರತಖಂಡದ ಉನ್ನತಿಯನ್ನು ಸದಾ ಹಾರೈಸುತ್ತ ನಾನಾ ಪ್ರಕಾರವಾಗಿ ಸೇವೆ ಸಲ್ಲಿಸುತ್ತಿದ್ದವರೂ ಆದ ರಾಜಕಾರ್ಯಪ್ರವೀಣ ಶ್ರೀಮಾನ್ ಎನ್. ಎಸ್. ಸುಬ್ಬರಾವ್, ಎಂ. ಎ. (ಕ್ಯಾಂಟಬ್)

ಬಾರ್-ಅಟ್-ಲಾ ಅವರು ೨೯-೬-೧೯೪೩ನೆಯ ಮಂಗಳವಾರ ರಾತ್ರಿ ಕಾಲಾಧೀನರಾದುದಕ್ಕಾಗಿ ಪರಿಷನ್ಮಂದಿರದಲ್ಲಿ ನೆರೆದಿರುವ ಕನ್ನಡಿಗರ ಈ ಸಭೆ ತೀವ್ರವಾದ ಸಂತಾಪವನ್ನು ವ್ಯಕ್ತಪಡಿಸುತ್ತದೆ. ಈ ಮಹನೀಯರ ನಿಧನದಿಂದ ಕರ್ನಾಟಕಕ್ಕೆ ಮಾತ್ರವಲ್ಲದೆ ಭರತಖಂಡಕ್ಕೇ ಅಪಾರ ನಷ್ಟ ಉಂಟಾಗಿದೆ. ಭಗವಂತನು ದಿವಂಗತರ ಆತ್ಮಕ್ಕೆ ಸದ್ಗತಿ ಕೊಡಲೆಂದೂ, ಅವರ ಬಂಧು ಮಿತ್ರರಿಗೆ ಶಾಂತಿ ಸಮಾಧಾನಗಳನ್ನು ನೀಡಲೆಂದೂ ಈ ಸಭೆ ಪ್ರಾರ್ಥಿಸುತ್ತದೆ.

ಪರಿಷತ್ತಿನ ಕಾರ್ಯದರ್ಶಿಗಳಿಂದ ವಂದನಾರ್ಪಣೆಯಾಗಿ ಸಭೆ ಮುಗಿಯಿತು.

## ಪರಿಷತ್ತಿನ ಸುದ್ದಿ

### ಪರಿಷತ್ತಿನ ಸದಸ್ಯರ ಬೆಳವಣಿಗೆ

**'ಆಶ್ರಯದಾತ' (೨೫೦ ರೂ.) :** ಶ್ರೀ. ಲೋಕಸೇವಾ ನಿರತ ಪಟೇಲ್ ದೊಡ್ಡೇಗೌಡರು, ಕಡಬ, (ಗುಬ್ಬಿ ತಾಲ್ಲೂಕ್).

**ಸಹಾಯಕ ಸದಸ್ಯರು (೧೦೦ ರೂ.) :** ಶ್ರೀ.ಗಳಾದ (೧) ಎನ್. ಎಸ್. ಹಿರಿಯಣ್ಣಯ್ಯ, ಎಂ.ಎ. ಅವರು, ಡೆಪ್ಯುಟಿ ಕಮಿಷನರು, ಹಾಸನ. (೨) ವಿಸ್. ಎ. ಶ್ರೀನಿವಾಸನ್ ಅವರು, ಎಂ.ಎ.ಟಿ. ಆಚಾರ್ಯ ಮತ್ತು ಕಂಪೆನಿ, ಬೆಂಗಳೂರು.

ವಾರ್ಷಿಕ ಅಂಗಸಂಸ್ಥೆ : ಮಹಿಳಾ ಸದನ, ದೇವರಾಜ ಮೊಹಲ್ಲಾ, ಮೈಸೂರು.

### ಮೈಸೂರು ಪ್ರಾಂತ ಸಮಿತಿ

೧. ಕೊಳಲು ವಾದನ : **೧೨-೭-೪೩ನೆಯ ಸೋಮವಾರ ಸಂಜೆ ೭ ಗಂಟೆಗೆ** ಪರಿಷನ್ಮಂದಿರದಲ್ಲಿ ಶ್ರೀ. ಬಿ. ಶಂಕರರಾಯರ **ಕೊಳಲು ವಾದನ** ನಡೆಯುತ್ತದೆ. ಜೊತೆಗೆ ಶ್ರೀ. ಬಿ. ರಾಜಶೇಖರರಾಯರ ಹಾರ್ಮೋನಿಯಂ ವಾದನ ನಡೆಯುತ್ತದೆ.

೨. ಉಪನ್ಯಾಸ: **೧೪-೭-೪೩ನೆಯ ಬುಧವಾರ ಸಂಜೆ ೭ ಗಂಟೆಗೆ** ಪರಿಷನ್ಮಂದಿರದಲ್ಲಿ ಡಾ. ಪಿ. ಕೃಷ್ಣರಾಯರು, ಬಿ.ಎಸ್.ಸಿ., ಎಂ.ಬಿ., ಬಿ.ಎಸ್., ಡಿ.ಟಿ.ಎಂ. ಅಂಡ್ ಎಚ್. ಅವರು **ರಕ್ತನಿಧಿ** (Blood Bank) ಎಂಬ ವಿಷಯವಾಗಿ ದೀಪ ಚಿತ್ರ ಸಹಿತ ಉಪನ್ಯಾಸ ಮಾಡುತ್ತಾರೆ.

## ಕನ್ನಡ ಸುದ್ದಿ

### 'ಜೀವನ'ದ ವಾಚಕರಲ್ಲಿ ಅರಿಕೆ

ಹಲವು ಅಪರಿಹಾರ್ಯ ಕಾರಣಗಳಿಂದ 'ಜೀವನ'ದ ಜುಲೈ ಸಂಚಿಕೆ ಜುಲೈ ತಿಂಗಳಲ್ಲಿ ಪ್ರಕಟವಾಗುವುದಿಲ್ಲ. ಜುಲೈ ಮತ್ತು ಅಕ್ಟೋಬರ ಸಂಚಿಕೆಗಳು ಕೂಡಿದ ಒಂದು ಸಂಚಿಕೆ ಅಕ್ಟೋಬರ ತಿಂಗಳಲ್ಲಿ ಪ್ರಕಟವಾಗುವುದು. ಅದರಲ್ಲಿ ಶ್ರೀ. ಅರವಿಂದ ಘೋಷರ ವಿಚಾರ ಪ್ರಣಾಲಿಯನ್ನು ವಿವರಿಸುವ ಕೆಲವು ಲೇಖನಗಳು ಬರಲಿವೆ. **— ಸಂಪಾದಕರು.**

**ಬೆಂಗಳೂರು : ಬಿ. ಕೆ. ಮರಿಯಪ್ಪನವರ ವಿದ್ಯಾರ್ಥಿನಿಲಯ ಸಂಘ**

ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯ, ಎಂ.ಎ., ಎಲ್‌ಎಲ್.ಬಿ. ಅವರು ತಾ. ೧೧-೭-೪೩ನೆಯ ಭಾನುವಾರ ಸಂಜೆ ೬-೩೦ಕ್ಕೆ ಸಂಘದ ಆರಂಭ ಭಾಷಣ ಮಾಡುವರು. ವಿಷಯ: ಸಂಸ್ಕೃತಿ ಸೇವೆ

### ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ

ತಾ. ೪-೭-೪೩ ರವಿವಾರ ಸಂಜೆ ೭ ಗಂಟೆಗೆ ಸಂಘದ ಪರವಾಗಿ ಶ್ರೀ. ಎಸ್. ಎಸ್. ಸುಬ್ಬರಾಯರ ನಿಧನದ ಬಗ್ಗೆ ದುಃಖ ಸೂಚಕ ಸಭೆ ಕೂಡಿದ್ದಿತು. ಕರ್ನಾಟಕ ಕಾಲೇಜಿನ ಅರ್ಥಶಾಸ್ತ್ರ ಪ್ರೊಫೆಸರರಾದ ಶ್ರೀ ಎಸ್. ಕೆ. ಮುರಂಜನ ಅವರು ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದರು. ಪ್ರೊ. ಆರ್. ವ್ಹಿ. ಜಾಗಿರದಾರ ಎಂ. ಎ. (ಲಂಡನ್) ಅವರು ದುಃಖ ಸೂಚನೆಯ ಗೊತ್ತುವಳಿಯನ್ನು ಸಭೆಯ ಮುಂದೆ ಇಡುತ್ತ, ದಿವಂಗತರ ಸೇವೆಯನ್ನು ಪ್ರಶಂಸೆಮಾಡಿದರು. ಶ್ರೀ. ಆಲೂರ ವೆಂಕಟರಾಯರು ಗೊತ್ತುವಳಿಯನ್ನು ಅನುಮೋದಿಸಿ ಮಾತನಾಡಿದರು.

ಅಧ್ಯಕ್ಷರು ಮಾತನಾಡಿದ ಮೇಲೆ ಗೊತ್ತುವಳಿಯ ಸ್ವೀಕಾರವಾಗಿ ಸಭೆ ಮುಗಿಯಿತು.

### ಸಾಮಾನ್ಯ ಸಭೆಯ ವಾರ್ಷಿಕ ಅಧಿವೇಶನ

ಕರ್ನಾಟಕ ವಿದ್ಯಾವರ್ಧಕ ಸಂಘದ ಸಾಮಾನ್ಯ ಸಭೆಯ ವಾರ್ಷಿಕ ಅಧಿವೇಶನವು ಶ್ರೀಮಾನ್ ಲಕ್ಷ್ಮಣರಾವ್ ಮುತಾಲಿಕ ದೇಸಾಯಿ ಅವರ ಅಧ್ಯಕ್ಷತೆಯಲ್ಲಿ ೨೭-೬-೪೩ ಸಂಜೆ ಸಂಘದ ಸಭಾ ಭವನದಲ್ಲಿ ಸೇರಿದ್ದಿತು. ಕಳೆದ ವರುಷದ ಲೆಕ್ಕದ ಪತ್ರಿಕೆಗಳು, ಕಾರ್ಯಕಲಾಪಗಳ ವರದಿ ಮುಂತಾದವುಗಳನ್ನು ಸಭೆ ಸ್ವೀಕರಿಸಿದನಂತರ ಹೊಸ ವರುಷದ ಬಗ್ಗೆ ಅಧಿಕಾರಿಗಳ ಆಯ್ಕೆ ನಡೆಯಿತು. ಶ್ರೀ. ಜಿ. ಆರ್. ನಲವಡಿ ಬಿ.ಎ., ಎಲ್‌ಎಲ್.ಬಿ., ಎಂ.ಎಲ್.ಎ. ಅವರು ಅಧ್ಯಕ್ಷರಾಗಿ ಆರಿಸಲ್ಪಟ್ಟರು. ಉಪಾಧ್ಯಕ್ಷರಲ್ಲೊಬ್ಬರಾದ ಶ್ರೀ. ಬೆನಗಲ್ ರಾಮರಾಯರ ನಿಧನದಿಂದ ತೆರಪಾದ ಸ್ಥಳದಲ್ಲಿ ಶ್ರೀ. ರಾಮನಾಥರಾವ್ ಎನ್. ನಾಡಿಗೇರ, ಡಿಸ್ಟ್ರಿಕ್ಟ್ ಜಜ್ಜರು, ಸಾಂಗಲಿ ಅವರನ್ನು ನೇಮಿಸಲಾಯಿತು.

ಕಾರ್ಯಕಾರಿ ಮಂಡಲ:- ಕಾರ್ಯಾಧ್ಯಕ್ಷರು : ಪ್ರೊ. ಶಿ. ಶಿ. ಬಸವನಾಳ ಎಂ.ಎ. ಕೋಶಾಧ್ಯಕ್ಷರು: ಶ್ರೀ. ಎಸ್.ಎಸ್. ಮಳೀಮಠ ಬಿ.ಎ., ಎಲ್ ಎಲ್.ಬಿ. ಗೌರವ ಕಾರ್ಯದರ್ಶಿಗಳು : ಡಾ. ಕೆ. ಎಸ್. ಕಮಲಾಪೂರ ಎಂ.ಬಿ. ಬಿ.ಎಸ್., ಶ್ರೀ. ಎಸ್. ಎಸ್. ನೆಗಳೂರ ಎಂ.ಎ. ಬಿ.ಟಿ. ಸದಸ್ಯರು : ಶ್ರೀಗಳಾದ ೧. ಪ್ರೊ. ಆರ್. ವ್ಹಿ. ಜಾಗೀರದಾರ ಎಂ.ಎ. (ಲಂಡನ್) ೨. ಕೃ. ಶ್ರೀ. ಬೆಟಗೇರಿ ಸಂಪಾದಕರು 'ಜಯಂತಿ' ೩. ಶಂ. ಬಾ. ಜೋಶಿ, ಸಾಧನಕೇರೆ, ೪. ಶಿ.ಎ. ಗುಮ್ಮಗೋಳ ಬಿ.ಎ. ೫. ಅಮ್ಮಿನಭಾವಿ ತಮ್ಮಣರಾಯರು ೬. ಪೋದ್ದಾರ ಶ್ರೀನಿವಾಸರಾಯರು ೭. ಟಿ.ಎಂ. ಹರಪನಹಳ್ಳಿ, ಎಲ್ ಎಲ್. ಎಮ್. ೮. ಎಂ.ಜಿ. ವಿರೂಪಾಕ್ಷನ್ಣ ೯. ದೇಶಪಾಂಡೆ ಶ್ರೀಪತಿರಾಯರು.

### ಶ್ರೀ ವಿದ್ಯಾರಣ್ಯರ ಪುಣ್ಯತಿಥಿ

೩೦-೬-೪೩ ಸಂಜೆ ಶ್ರೀ ವಿದ್ಯಾರಣ್ಯರ ಪುಣ್ಯತಿಥಿಯನ್ನು ಆಚರಿಸಲಾಯಿತು. ಕನ್ನಡ ಸಂಶೋಧನ ಸಮಿತಿಯ ಸಂಚಾಲಕರಾದ ಶ್ರೀ. ಆರ್.ಎಸ್. ಪಂಚಮುಖಿ ಅವರು ಅಧ್ಯಕ್ಷತೆ ವಹಿಸಿದ್ದರು. ಶ್ರೀ.ಗಳಾದ ಶಂ.ಬಾ. ಜೋಶಿಯವರೂ ಬೆಟಗೇರಿ ಕೃಷ್ಣಶರ್ಮರೂ ಮಾತನಾಡಿ ಕರ್ನಾಟಕ ರಾಜ್ಯವನ್ನು ಕಟ್ಟಿದ ಕನ್ನಡದ ಕುಲಗುರು ವಿದ್ಯಾರಣ್ಯರು ಬಾಳಿದ ಜೀವನವನ್ನೂ ಮಾಡಿದ ಕೆಲಸವನ್ನೂ ನೆನೆದು ಇಂದು ಕನ್ನಡಿಗರ ಕರ್ತವ್ಯವೇನೆಂದು ವಿವರಿಸಿದರು. ಅಧ್ಯಕ್ಷರಾದ ಶ್ರೀ. ಆರ್.ಎಸ್. ಪಂಚಮುಖಿ ಅವರು ದಕ್ಷಿಣ ಭಾರತದ ಹಿಂದೂ ಸಂಸ್ಕೃತಿಯನ್ನು ಉಳಿಸಿದ ಪುಣ್ಯ ಶ್ರೀ ವಿದ್ಯಾರಣ್ಯರದಾಗಿದೆ ಎಂದು ಹೇಳಿ ಅವರ ಜೀವನ ಕಾರ್ಯಗಳನ್ನು ಸಂಶೋಧನಾತ್ಮಕವಾಗಿ ವಿವರಿಸಿದರು.

**ಕರ್ನಾಟಕ ಸಂಘ, ಸಂತೆಬೆನ್ನೂರು : ಕುಮಾರವ್ಯಾಸ ಭಾರತ ಸಪ್ತಾಹ** -

ಪ್ರಾರಂಭ ೧೪-೬-೪೩ ರಿಂದ. ಈ ಸಂಘದ ಆಶ್ರಯದಲ್ಲಿ ಗಮಕ ವಿದ್ವಾನ್ ಶ್ರೀಮಾನ್ ಸಂತೆಬೆನ್ನೂರು ಜಿ. ಬಿಂದೂರಾಯರವರು ಅಮೋಘವಾಗಿ, ಏಳು ದಿವಸಗಳು ಸುಶ್ರಾವ್ಯವಾಗಿ ಭಾರತ ವಾಚನ ಮಾಡಿದರು. ಅವರು ಪಠಿಸಿದ ಭಾಗಗಳು-

(೧) ದೂರ್ವಾಸಾತಿಥ್ಯ. (೨) ಕೃಷ್ಣಸಂಧಾನ. (೩) ಊರ್ವಶೀ ಶಾಪ. (೪) ಕಾಮ್ಯಕ ವನಕ್ಕೆ ಶ್ರೀಕೃಷ್ಣಾಗಮನ. (೫) ಕರ್ಣ ಕುಂತೀ ಸಂವಾದ. (೬) ಕೃಷ್ಣಸಂಧಾನಕ್ಕೆ ಪೂರ್ವಭಾಗ. (೭) ಕಿರಾತಾರ್ಜುನೀಯ.

ಸದಸ್ಯರು ಗಮಕ ವಿದ್ವಾಂಸರಿಗೆ ಸತ್ಕಾರವನ್ನೇರ್ಪಡಿಸಿ ಫಲಪುಷ್ಪ ತಾಂಬೂಲಾದಿಗಳನ್ನಿತ್ತು ಬೀಳ್ಕೊಟ್ಟರು.

ತಾ. ೧೭-೬-೪೩ ರಲ್ಲಿ ಸಂತೆಬೆನ್ನೂರು ಮಾಧ್ಯಮಿಕ ಶಾಲೆ ಬಾಲಕರ್ನಾಟಕ ಸಂಘದ ಆಶ್ರಮದಲ್ಲಿ ಜಿಲ್ಲಾ ವಿದ್ಯಾಧಿಕಾರಿಗಳಾದ ಶ್ರೀಮಾನ್ ಡಿ. ನರಸಿಂಹನ್, ಎಂ.ಎಸ್.ಸಿ.ಬಿ.ಕಾಮ್ ಅವರು ಹೊಸ ವರ್ಷಾರಂಭ ಭಾಷಣವನ್ನು ಮಾಡಿದರು. "ಕನ್ನಡ ನುಡಿಯನ್ನೂ ನಡತೆಯನ್ನೂ ಬಳಸಲು ಬೆಳಸಲು ಶಾಲಾ ವಿದ್ಯಾರ್ಥಿಗಳು, ಬೋಧಕರು ಮತ್ತು ಪೋಷಕರು ನಿಷ್ಕಾಮಕರ್ಮದಿಂದ ಕೆಲಸಮಾಡಬೇಕು" ಎಂದರು.



೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಜಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

ನನ್ನ ಹಳ್ಳಿಯ ಪ್ರವಾಸ

## ೩. ಸಾವಾಸಿಹಳ್ಳಿ

ಸಾವಾಸಿಹಳ್ಳಿ ಹಗರೆಗೆ ಸುಮಾರು ಎರಡು ಮೈಲಿ ಉತ್ತರದಲ್ಲಿದೆ. ಮೊದಲನೆಯ ಬಾರಿ ಅಕ್ಟೋಬರಿನಲ್ಲಿ ನಾವು ಸಾವಾಸಿಹಳ್ಳಿಗೆ ಹೋದಾಗ ಅಲ್ಲಿ ಯಾವ ಶಾಸನವೂ ಸಿಕ್ಕಲಿಲ್ಲ. ಊರವರೆಲ್ಲ ಒಮ್ಮತದಿಂದ "ಅಂತಾ ಕಲ್ಲುಗಿಲ್ಲು ನಮ್ಮೂರಾಗೆ ಇಲ್ಲೇ ಇಲ್ಲ" ಎಂದು ಸಾಧಿಸಿಬಿಟ್ಟರು. ಆದರೆ ನಮಗೆ ಮಾತ್ರ ಸರಿಯಾಗಿ ಹುಡುಕಿದರೆ ಒಂದಾದರೂ ಸಿಕ್ಕಬಹುದೆಂಬ ಅನುಮಾನವಿದ್ದೇ ಇತ್ತು. ಕಾರಣ ಅಂತಹ ಹೆಸರು ಅದರದು !

ಸಾವಾಸಿಗಳು ಕಾಶ್ಮೀರದಿಂದ ಬಂದು ಇಲ್ಲಿ ನೆಲಸಿದ ಬ್ರಾಹ್ಮಣರೆಂದು ಹಾಸನದ ೭೧ನೆಯ ಶಾಸನ ಹೇಳುತ್ತದೆ.

"ತತ್ಪಾದ ಪದ್ಮೋಪಜೀವಿನೋ ಸ್ವಸ್ತಿ ಶ್ರೀ **ಜೈಭಟಯ್ಯ** ನಾಯಕರಂನ್ವಯಂ, ಸ್ವಸ್ತಿ ಶ್ರೀ **ಕಾಶ್ಮೀರರಾಷ್ಟ್ರ** ಕ್ರಮರಾಜಗೂಲ ವಿಷಯ ಭವನಾಶ್ರಯ ಭದ್ರಾಹುಗ್ರಾಮ ಭಾರ್ಗವಗೋತ್ರ ಪಿತಾಮಹಂ, **ಭೂನಿದೇವ** ...... ಪಿತಾ **ಜೋಯಲದೇವ** ಮಾತಾ **ಗಂಗಾದೇವೀ** ಮಾತಾಮಹ ವಶಿಷ್ಟಗೋತ್ರ **ರುದ್ರಘೋಶಂ,** ಶ್ವಶುರರು ಶ್ರೀಮತ್ **ಸಾವಾಸಿ ತಂತ್ರಾಧಿಷ್ಟಾಯಕಂ,** ವೈಕಾನಸಗೋತ್ರಭೂಜ ಭಟಯ ನಾಯಕ, ಭಾವ ಶ್ರೀಮನ್ಮಹಾ ಪ್ರಧಾನಂ ಮಾಧವಯ್ಯ ದಣ್ಣಾಯಕರು, ಶ್ವಶುರೇ ಶ್ರೀ ಅಬ್ಬವ್ವೆಯರು, ಸ್ವಸ್ತಿಶ್ರೀಮತ್ಸಾವಾಸಿ ತಂತ್ರಾಧಿಷ್ಟಾಯಕಂ, ಮಹಾ ಪಸಾಯ್ತಂ".

ಎಂದು ಮುಂತಾದ ಇದರ ಒಕ್ಕಣೆಯನ್ನು ನೋಡಿದರೆ ಸಾವಾಸಿಗಳು ಕಾಶ್ಮೀರ ದೇಶದಿಂದ ಬಂದುದು ಮಾತ್ರವಲ್ಲದೆ, ಅವರಲ್ಲಿ ಮೇಧಾವಿಗಳೆನಿಸಿದ ಕೆಲವರು ಹೊಯ್ಸಳ ರಾಜರಿಗೆ ಆಪ್ತರಾಗಿದ್ದಿರಬಹುದು. ಅದರಿಂದ ಸಾವಾಸಿ ಎಂಬ ಹೆಸರು ಪಡೆದಿರಬಹುದು ಎಂದು ಊಹಿಸಲವಕಾಶವಾಗುತ್ತದೆ.

ಮತ್ತು ಸೊರಬ ತಾಲ್ಲೂಕಿನ ೧೭೦ನೆಯ ಶಾಸನದಲ್ಲಿ–

"ಶ್ರೀಮನ್ ಮಹಾಪ್ರಧಾನಂ ಸಾವಾಸಿಗಳ್ ಅಧಿಷ್ಟಾಯಕಂ ... ಮನೆವೆಗ್ಗಡೆ ದಂತನಾಯಕಂ."

ಎಂದಿರುವ ಕಡೆ ರೈಸ್‌ರವರು ಸಾವಾಸಿ ಪದಕ್ಕೆ Guards of female apartments (ಅಂದರೆ ಅಂತಃಪುರದ ರಕ್ಷಕರು) ಎಂಬರ್ಥ ಕೊಟ್ಟಿದಾರೆ.

ಹೇಗೊ ಸಾವಾಸಿಗಳ ನಾಮಾಂಕಿತ ತಕ್ಕಮಟ್ಟಿನ ಮಹತ್ವವನ್ನು ಸೂಚಿಸುತ್ತದೆ. ಅಂದಮೇಲೆ ಒಂದೆರಡು ಶಾಸನಗಳಾದರೂ ಇರಲಿಕ್ಕೇಬೇಕು ಎಂದು ನಾವು ನಿಶ್ಚಯಿಸಿ ನವೆಂಬರಿನಲ್ಲಿ ಮತ್ತೆ ಅದರ ದಾರಿ ಹಿಡಿದೆವು.

ಕಾಲುಹಾದಿ. ಕೆಮ್ಮಣ್ಣು ಮರಳು ಹಾಕಿ ಜಡಿದಂತಿದ್ದ ಗಟ್ಟಿ ನೆಲ. ರಸ್ತೆಯ ಇಕ್ಕೆಲದಲ್ಲೂ ಹೊರವಾಗಿ ಬೆಳೆದ ಸಿರಿಪಲಗದ ಅಥವಾ ಮುನುಗುನ ಹುಲ್ಲು. ನವರಾತ್ರಿಯಲ್ಲಿ ಇದೇ ಹಾದಿ ನಡೆದಾಗ ನಾನು ಹುಲ್ಲಿನ ಮೃದು ಹಸುರು ಬಣ್ಣವನ್ನೂ, ಎಳಸಾದ ತೋರ ಮೊಗ್ಗೆಯಂತಿದ್ದ ಅದರ ಮೋತೆಯ ಬೆಡಗನ್ನೂ, ಒಳಗೆ ಹೆಣೆದ ಮೃದು ರೇಶ್ಮೆ ದಾರದಂತಿದ್ದ ಚಾಕೊಲೇಟು ಬಣ್ಣದ ಐದಾರು ನಾರುಗಳನ್ನೂ ನೋಡಿ ತುಂಬ ಮೆಚ್ಚಿದ್ದೆ. ಯಾರೋ ಇದು ಮುಳ್ಳಿನ ಹುಲ್ಲು ಎಂದಾಗ ನಂಬಲೇ ಇಲ್ಲ.

ಆದರೆ, ಒಂದೇ ತಿಂಗಳ ತರುವಾಯ ಈ ಪುಟ್ಟ ಪ್ರಪಂಚದಲ್ಲಿ ಎಂತಹ ಅದ್ಭುತ ಅವಾಂತರ ನಡೆದಿದೆ ! ಮೋತೆಗಳು ಬಲಿತು ಬಣ್ಣವನ್ನು ನೀಗಿ ಬಾಯರಳಿಸಿ ಚೂಪಾದ, ಕಪ್ಪಾದ ಆರು ಕೂರಂಬುಗಳನ್ನು ಚಾಚಿದ್ದುವು. ಈ ಅಂಬುಗಳು ಕಾದಿದ್ದು ಪಥಿಕರ, ಅದರಲ್ಲೂ ಸೀರೆಯವರ ಬಟ್ಟೆಯೊಳ ಹೊಕ್ಕು ಅವರ ಮಾನಖಂಡದ ಭಾಗವನ್ನು ಜೇಡರ ಬಲೆಯಂತೆ ಕೀರಿ ರಕ್ತಮಯವಾಗಿ ಮಾಡುತ್ತಿದ್ದುವು. ನಿರ್ಭಾಗ್ಯ ದಾರಿಹೋಕರು ನಡೆಯುವುದಕಿಲ್ಲ ಕಾಲು ಊರಿ; ನಡೆಯದೆ ಇರುವುದಕ್ಕೂ ಇಲ್ಲ. ಕಾಲ ಜಾರುತ್ತದೆ; ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ. ಎಲ್ಲೆಲ್ಲಿ ನೋಡಿದರೂ ಅವೇ. ಕುಳಿತು ಕೀಳೋಣವೆಂದರೆ ಗಂಟೆಗಳ ಕಾಲ ಶ್ರಮಿಸಿದರೂ ತೀರದು. ಅಷ್ಟೇ ಅಲ್ಲ, ಅಂಬು ಕಿತ್ತು ಬಂದರೂ ಹಿಡಿ ಅಲ್ಲೇ ಉಳಿಯುತ್ತಿತ್ತು. "ಸೀರೆ ಹರಿದರೂ ಇವು ಹೋಗುವುದಿಲ್ಲ" ಎಂದು ಊರವರು ಹೇಳಿದ ಮಾತು ಆರು ತಿಂಗಳಾದ ಮೇಲೆ ಈಗಲೂ ಅವುಗಳಲ್ಲಿ ಹತ್ತಾರು ಅಂಬಿನ ಹಿಡಿ, ಪುರಲೆಗಳು ಅಂಟಿರುವುದನ್ನು ನೋಡಿದಾಗ ನೆನಪಿಗೆ ಬರುತ್ತದೆ.

ಮುಂದುವರಿದೆವು. ಬಲದ ಗುಡ್ಡದ ಸಾಲು ಸಮಾಚೀನವಾಗಿ ಕಂಡಿತು. ಕಡೆಗೊಮ್ಮೆ ನೆಲದ ಉಬ್ಬಿನ ನಡುವೆ ಗೆರೆಯಂತೆ ತೋರಿತು. ಅದೇ ಸಾವಾಸಿಹಳ್ಳಿಯ ಬಳಿಯ ತೊರೆಯಿರಬೇಕೆಂದು ಊಹಿಸಿದೆವು. ಇತ್ತಕಡೆಯವರು ಅದನ್ನು 'ಕಾಗೆ ಹಳ್ಳ'ವೆಂದು ಕರೆಯುತ್ತಾರೆ. ಹಳ್ಳದ ದಂಡೆಯಲ್ಲಿ ಒಂದು ಕಲ್ಲು ಮಂಟಪ ಗೋಚರಿಸಿತು. ದಾರಿಹೋಕನೊಬ್ಬನಿಂದ ಅದರ ಹೆಸರು 'ವಡ್ಡರ ಮಂಟಪವೆಂದು' ತಿಳಿದೆವು. ನಿಜಕ್ಕೂ ಅದು ಎಲ್ಲೆಲ್ಲಿಂದಲೋ ಕಂಬ, ಹೊರ ಸುತ್ತಿನ ವಿಗ್ರಹ ಎಲ್ಲವನ್ನೂ ಕಲೆಹಾಕಿ ಅಡ್ಡಾದಿಡ್ಡಿಯಾಗಿ ಕಟ್ಟಿದ 'ವಡ್ಡ ಕಟ್ಟಡ'ವೇ ಆಗಿತ್ತು. ನಾಲ್ಕೈದು ಒಳ್ಳೆಯ ಬಳಪದ ಕೆತ್ತನೆ ಕಂಬಗಳ ಭಾಗ, ಒಂದು ಭಿನ್ನವಾದ ಮಹಿಷಾಸುರ ಮರ್ದಿನಿಯ ಚಿತ್ರ, ಒಂದು ದ್ವಾರಪಾಲಕಿಯ ಚಿತ್ರ, ಮತ್ತೆರಡು ಪುರುಷ ವಿಗ್ರಹಗಳು. ಒಟ್ಟಾರೆ, ಮಂಟಪದ ಜೋಡಣೆ ನಾಜೂಕನ್ನು ಅರಿಯದ ಗೃಹಿಣಿ ತೇಪೆಕೆಲಸ ಮಾಡಿದಂತಿತ್ತು.

ಮಂಟಪದ ಮುಂದೆ ಒಂದು ಮುರಿದ ವೀರಗಲ್ಲು ಬಿದ್ದಿತ್ತು; ಅದರಲ್ಲಿ ಎಂದಿನಂತೆ ಮೂರು ಆಯತಗಳು. ಕೈಲಾಸ, ವಿಮಾನ, ಕತ್ತಿಯ ವೀರ, ಹೊಯ್ಸಳ ಕನ್ನಡಾಕ್ಷರಗಳು ನಡುವೆ ಕೆತ್ತಿವೆ.

"ಸ್ವಸ್ತಿ ಶ್ರೀಮನ್ಮಹಾಮಂಡಳೇಶ್ವರ ತ್ರಿಭುವನಮಲ್ಲ ತಳಕಾಡು ಕೊಂಗುನಂಗಲಿ ನೊಣಂಬವಾಡಿ ಬನವಸೆ ಹಾನುಂಗಲ್ಲುಗೊಂಡ ಭುಜಬಳವೀರಗಂಗ ಹೊಯ್ಸಣ ನಾರಸಿಂಹ ದೇವರು ದೋರಸಮುದ್ರನ ನೆಲೆ ವೀಡಿನಲು ಸು[ಖಸಂಕಥಾವಿನೋದ] ದಿಂದ ಪ್ರಿಥ್ವೀರಾಜ್ಯಗೆಯ್ವುತ್ತಮಿರೆ ...ತ್ಸರದ ಮಾರ್ಗ್ಗಶಿರ ಬಹುಳ ೯ರ ... ಲು ಆಣಢಲ್ಲೆಯ ಘಟ್ಟವರಿತ ... ಕಾದಿ ತುಱುವ ಮಗುಳ್ಚಿ ಆಚೆಯ ನಾಯಕ ಸುರಲೋಕ ..."

ಮುಂದೆ ಮುರಿದು ಹೋಗಿದೆ. ಅನ್ಯಾಯವಾಗಿ ಸಂವತ್ಸರದ ಹೆಸರೇ ಮಸಣಿಸಿರಬೇಕೆ ! ಅಂತೂ ಒಬ್ಬಾನೊಬ್ಬ ನಾಯಕ ಆಂಡಲೆ ಅಂದರೆ ಬೇಲೂರಿಗೆ ೬–೮ ಮೈಲಿ ದೂರವಿರುವ ಹಳ್ಳಿಯಲ್ಲಿ ಹಸುಗಳನ್ನು ಕಾಪಿಡಲು ಕಾದಿ ಮೃತನಾದ. ಇಷ್ಟು ವಿಷಯಸಂಗ್ರಹವಾದಂತಾಯ್ತು.

ಅಲ್ಲಿಂದ ಹುಡುಕಿಕೊಂಡು ಊರ ಕೆರೆಯ ಅಂಗಳದಲ್ಲಿರುವ ಈಶ್ವರ ದೇವಾಲಯವನ್ನು ಸೇರಿದೆವು. ಸಣ್ಣ ಒಂದಂಕಣದ ಗುಡಿ. ಒಳಗೆ ಬಸವಣ್ಣ ವಿಘ್ನೇಶ್ವರ ಸಪ್ತಮಾತೃಕೆಯರು. ಇವಲ್ಲದೆ ನಾಲ್ಕೈದು ಮುರಿಬಸವಣ್ಣಗಳು. ಒಂದನ್ನು ತೆಗೆದುಕೊಂಡು ಹೋಗಿಬಿಡಲೇ ಎಂದು ಉಕ್ಕಿದ ಕೆಟ್ಟ, ಆದರೆ ಮಾನವಸಹಜ, ಪ್ರವೃತ್ತಿಯನ್ನು ಅಡಗಿಸಿದ್ದಾಯಿತು.

ಈ ದೇವಾಲಯ ದ್ವಾರದ ಎರಡು ಬದಿಗಳಲ್ಲೂ ವೀರಗಲ್ಲುಗಳನ್ನು ನೆಟ್ಟಿದ್ದರು. ಆದರೆ ಎರಡೂ ಎಣ್ಣೆಯ ಮಣುಕಿನಿಂದ ಕೆಟ್ಟು ಹೋಗಿದ್ದುವು. ಎಷ್ಟು ಕಷ್ಟಪಟ್ಟು ತೊಳೆದು ಉಜ್ಜಿದರೂ ಪ್ರಯೋಜನಕಾರಿಯಾಗಲಿಲ್ಲ. 'ನಿನ್ನ ಹಿತ ನನ್ನನ್ನು ತಿನ್ನುವುದು' ಎಂದು ಎಳೆಯ ಮಗು ಎಳೆದು ಹಿಂಸಿಸಿ ಮುದ್ದಿಡುವ ತನ್ನ ಬಂಧುವಿಗೆ ಹೇಳಬಯಸುವುದಂತೆ. ಹಾಗೆಯೇ ಭಕ್ತನ ಸೇವೆ ಕೆಲವು ವೇಳೆ ಚರಿತ್ರ ಸಂಶೋಧಕನ ಕೈ ಕಟ್ಟಿ, ಅವನ ಕೆಲಸಕ್ಕೆ ಪೂರಕವಾಗುವ ಬದಲು ಮಾರಕವಾಗಿ ಪರಿಣಮಿಸುತ್ತದೆ.

ಬಲಭಾಗದ ವೀರಗಲ್ಲು ಅಷ್ಟು ಕೆಟ್ಟಿರಲಿಲ್ಲ. ಅದರ ಮುಂದೆ ಢುಲಗಿಸಿದ್ದ ಹಾಸುಗಲ್ಲನ್ನು ತೆಗೆದರೆ ತಳದ ಅಕ್ಷರಗಳು ಕಾಣಬಹುದೆಂಬ ಆಸೆಯಿಂದ ಅದನ್ನು ಎಬ್ಬಿದೆವು. ಹತ್ತು ಹನ್ನೆರಡು ಕೆಂಪು ಚುಕ್ಕೆ ಬಾಯ ಕರಿ ಇಲಿಮರಿಗಳು–ಕೇವಲ ಜಿರಳೆಯ ಗಾತ್ರಕ್ಕಿದ್ದುವು–

ಸಣ್ಣ ಕುಳಿಯೊಂದರಿಂದ ಎದ್ದು ದಿಕ್ಕೆಟ್ಟು ಹರಿದಾಡಿದುವು. ಕೆಲವಿನ್ನೂ ಕಣ್ಣೇ ಬಿಟ್ಟಿರಲಿಲ್ಲವಂತೆ.

ಇಲಿಗಳನ್ನು ಚೆದರಿಸಿದ್ದೊಂದೇ, ಹೆಚ್ಚಿಗೇನೂ ಫಲಕಾರಿಯಾಗಲಿಲ್ಲ. ಒಟ್ಟು ವೀರಗಲ್ಲಿನ ವಿಷಯ ಹೀಗಿತ್ತು:

"ಸ್ವಸ್ತಿ ಶ್ರೀಮತ್ ಪ್ರತಾಪ ಚಕ್ರವರ್ತ್ತಿ ಶ್ರೀ ವೀರ ಬಲ್ಲಾಳ ದೇವರಸರು ಮನೆಯ ಪ್ರಧಾನ ಬಿಟ್ಟಯ ದಂಣ್ನಾಯಕರ **ಬಲು ಮನುಷ್ಯ** ಚಿಣ್ಣೆಯ ನಾಯಕನು ಖರ ಸಂವತ್ಸರದ ಮಾಘ ಶುದ ಸಪ್ತಮಿಯಾದಿವಾರದ ವಂ . . . ಕದೇಕ ಅಜಿಸರಕೊಂದ . . ." ಮುಂದೆ ಹೋಗಿದ್ದಿತು.

ವೀರಬಲ್ಲಾಳನ ಆಳಿಕೆಯಲ್ಲಿ ಖರಸಂವತ್ಸರದ ಮಾಘ ಶುದ್ಧ ಸಪ್ತಮಿ ಕ್ರಿ.ಶ. ೧೧೭೨, ನಾಲ್ಕನೆಯ ಜನವರಿಗೆ ತಾಳೆಯಾಗುತ್ತದೆ. ಆದರೆ ಅಂದು ಆದಿವಾರವಾಗುವುದಿಲ್ಲ, ಮಂಗಳವಾರವಾಗುತ್ತದೆ. ಈ ಬಗೆಯ ಕಾಲವ್ಯತ್ಯಾಸಗಳು ಇನ್ನೂ ಅನೇಕ ಶಾಸನಗಳಲ್ಲಿ ಕಂಡು ಬರುತ್ತವೆ. ಇದಕ್ಕೆ ಕಾರಣ? ಆಗಿನ ಪಂಚಾಂಗ ನಿರ್ಮಾಣದಲ್ಲಿ ಲೋಪದೋಷಗಳಿರಬಹುದೆ? ಅಥವಾ ವರ್ಷದ ಹೆಸರನ್ನೇ ತಪ್ಪಾಗಿ ಕೊಟ್ಟಿರಬಹುದೆ? ಮಸಲ, ಮಂಗಳವಾರ ಶುಭವಲ್ಲವೆಂಬ ನಂಬಿಕೆಯಿಂದ ಭಾನುವಾರವನ್ನೇ ಉಪಯೋಗಿಸಿಕೊಂಡಿರಬಹುದೆ? ಯಾವುದೂ ನಿಷ್ಕರ್ಷೆಯಾಗುವಂತಿಲ್ಲ.

ಎಡಕ್ಕೆ ಸಿಲಿಸಿದ್ದ ವೀರಗಲ್ಲು ದೊಡ್ಡದಿದ್ದರೂ ಬಹಳಮಟ್ಟಿಗೆ ಹೋಗಿತ್ತು. ಮೇಲಿನ ಅಡ್ಡಪಟ್ಟಿಯಂತು ತೀರ ಅಸ್ಪಷ್ಟ. ನಡುವಣದರಲ್ಲಿ:

"ರಾಜೇಂದ್ರ . . . ಚಾರ್ಯ . . . ಕಾವ . . . . . ಪೊವಿಸಳ-ನಾರಸಿಂಹದೇವರು ಸುಖಸಂಕಥವಿ . . . ನಾಡವಲ ನಾಳ ನಾಯಕ . . . ಬುತೆಯನಾಯಕನು **ಸಂಗ್ರಾಮ**-ಡಿದೇವಲೋಕಕ್ಕೆ ಸಂದನು, ಮಂಗಳ ಮಹಾಶ್ರೀ ಶ್ರೀ ಶ್ರೀ"

ರಾಜೇಂದ್ರ ಜೀಹಚಾರ್ಯ ಅಥವಾ ರಾಜೇಂದ್ರ ದೇವಾಚಾರ್ಯ ಎಂಬುದು ನಾರಸಿಂಹನ ಬಿರುದಿರಬಹುದೆ?

ಇಷ್ಟೆಲ್ಲ ಕಾರುಬಾರು ನಾವು ನಡಸುತ್ತಿರುವುದನ್ನು ಕುತೂಹಲದಿಂದ ನೋಡುತ್ತ ನಿಂತಿದ್ದ ಒಬ್ಬ ಹಳ್ಳಿಗ ನೋಟಕನು "ಗಂಗಡಿಕಾರ ಹನುಮಂತೇಗೌಡರ ಗದ್ದೆಯಲ್ಲಿ ಒಂದು ಕಾಡು ಕಲ್ಲಿನ ಶಾಸನವಿದೆ" ಎಂದು ತಿಳಿಸಿದ. ಕಾಡುಕಲ್ಲಿನದು! ಅಂದರೆ ಅದು ಬಳಪದ ಸಂಪ್ರದಾಯಕ್ಕೆ ಈಚಿನದಿರಬೇಕು. ಇಲ್ಲವೇ ಪ್ರಾಚೀನವಾದುದಿರಬೇಕು. ಬಹಳ ಆತುರ ಮನಸ್ಸಿನಿಂದ ಅತ್ತ ಕಡೆ ಹೊರಟೆವು. ಮನಸ್ಸು ಧಾವಿಸುತ್ತಿದ್ದರೂ, ಗದ್ದೆಯ ತೆವರಿಯ ಮೇಲೆ ಬೆಳೆದ ಅದೊಂದು ಬಗೆಯ ಒರಟು ಹುಲ್ಲಿನ ಗುಪ್ಪೆಯನ್ನು ದಾಟಿ ಹೋಗುವುದು ಬಹಳ ನಿಧಾನವೇ ಆಯಿತು. ಪೈರು ಆಗತಾನೆ ಹೊನ್ನ ಬಣ್ಣಕ್ಕೆ ತಿರುಗಲೋ ಬೇಡವೋ ಎಂದು ಯೋಚಿಸುವಂತಿತ್ತು. ಅದರೊಳಗಿನ ನೀರು ಹರಿಯಲು ಶಕ್ತಿಯಿಲ್ಲದೆ ಮೆಲ್ಲಮೆಲ್ಲನೆ ಅಲುಗಾಡುತ್ತಿದ್ದಿತು. ಆ ಗದ್ದೆಯ ಮಧ್ಯೆ ನೀರು ಹರಿದುದರಿಂದ ಸ್ವಚ್ಛವಾಗಿದ್ದ ಮೇಲ್ಭಾಗದಿಂದ ಕೂಡಿದ ಕಾಡುಗಲ್ಲಿನ ಶಾಸನವೊಂದು ಮುಖನೇಲಾಗಿ ಬಿದ್ದಿತ್ತು. ಯಾವ ಭಾಗವೂ ಮುರಿದಿರಲಿಲ್ಲ. ಯಾವ ಅಕ್ಷರವೂ ಮುಕ್ಕಾಗಿರಲಿಲ್ಲ; ಪ್ರತಿಯೊಂದು ಅಕ್ಷರವೂ ಸ್ಪಷ್ಟವಾಗಿ, ಆಳವಾಗಿ ಕೆತ್ತಿದ್ದಿತು.

ಆದರೇನು, ನನಗೆ ಮಾತ್ರ ಓದಲು ಬರುವಂತಿಲ್ಲ. ಅಲ್ಲೊಂದು ಇಲ್ಲೊಂದು ಅಕ್ಷರದ ನೆಲೆ ಗೊತ್ತುಹಿಡಿದೆ. ಅಷ್ಟು ಶಾಸನ ಹಳೆಯದೆಂದು ಅರ್ಥವಾಯಿತು. ಅಕ್ಷರಗಳ ಸ್ವಭಾವವನ್ನು ನೋಡಿ ಅವು ಗಂಗರದಿರಬಹುದೆನ್ನಿಸಿತು.

ಮುಂದೆ ಅಚ್ಚನ್ನು ನಮ್ಮ ತಂದೆಯವರಿಗೆ ತೋರಿಸಿದಾಗ ಅವರು ಹೀಗೆ ಓದಿದರು:

"ಸ್ವಸ್ತಿಶ್ರೀ **ಶ್ರೀಪುರುಷ** ಮಹಾರಾಜರ್ ಪ್ರಿತು ವಿ ರಾಜ್ಯಂಗೆಯೆ **ಲೋಕಗಳ್ಕೆ ಪೊಸ ಊರಂ** ಬ್ರಮ್ಮದೆ ಕೊಟ್ಟು ಪೇವರ್ಗ್ಗ ಮೂಗಣ್ಡುಗ ಜೆಡನ ಪುಣ್ಕೊಟ್ಟುದು ಇದನಳಿದೋನ್ ಪಞ್ಚ ಮಹಾಪಾತಕನಕ್ಕುಂ"

ಅಂತೂ, ಆ ದಿನ ಸಾವಾಸಿಗಳನ್ನು ಕುರಿತ ಶಾಸನವು ಸಿಕ್ಕದಿದ್ದರೂ ಅಪರೂಪವೆನಿಸಿದ ಶ್ರೀಪುರುಷನ (ಕ್ರಿ.ಶ. ೭೨೬-೭೭೬) ಶಾಸನವು ದಕ್ಕಿತಲ್ಲ ಎಂದು ಮನಸ್ಸು ಸಮಾಧಾನಗೊಂಡಿತು. ಹಾಗೇ ಶಾಸನದಲ್ಲಿ ಹೇಳಿರುವ, ಲೋಕಗಳ್ಳನು ಬ್ರಹ್ಮದೇಯವಾಗಿ ಕೊಟ್ಟ ಪೊಸ ಊರು ಇಲ್ಲೆಲ್ಲಾದರೂ ಇರಬಹುದೇ ಎಂದು ವಿಚಾರಿಸಿ ನೋಡಿದೆವು. ಸಾವಾಸಿಹಳ್ಳಿಗೆ ಪಡುವಲ ದಿಕ್ಕಿನಲ್ಲಿ ಒಂದು ಮೈಲು ಫಾಸಲೆಯೊಳಗಾಗಿ ಹೊಸಳ್ಳಿ ಎಂಬ ಬದುಕಿ ಬಾಳಿದ ಊರ ಪಾಳೊಂದು ಇರುವುದೆಂದು ಪತ್ತೆಯಾಯಿತು. ಅಲ್ಲಿ ಹುಡುಕಿಸಿದೆವು. ಆದರೆ ಬೇರೆ ಯಾವ ಶಾಸನವಾಗಲಿ ಅಥವಾ ಹಳೆಯ ದೇವಾಲಯಗಳಾಗಲಿ ಅಲ್ಲಿ ಕಣ್ಣಿಗೆ ಬೀಳಲಿಲ್ಲ. ಅಲ್ಲಿಗೆ ಸಾವಾಸಿಹಳ್ಳಿಯ ಕತೆ ಮುಗಿಯಿತೆಂದು ನಾವು ತೀರ್ಮಾನಿಸಿದೆವು.

**— ಎಂ. ಆರ್. ಲಕ್ಷ್ಮಮ್ಮ**

---

## ಅನ್ಯೋಕ್ತಿಗಳು

### ಜಲಧಿ

ರತ್ನಗಳ ರಾಸಿಯೇ ತುಂಬಿಹುದು ನಿನ್ನಲ್ಲಿ
ನಿನ್ನೊಡಲ ನೋಟವೂ ನೀಲಮೇಘಕೆ ಸಾಟಿ!
ಏನಾದಡೇಂ ಜಲಧಿ, ಬಾಯಾರಿ ಬಂದವನ
ಬಳಲಿಕೆಯ ಬೇಗೆಯನು ಕಳೆವೆಯೇನೈ?

### ಕೋಗಿಲೆ

ಕಾಡ ಬೀಡನು ಮಾಡಿ ಕಳೆಯುವುದು ಕೆಲಕಾಲ.
ಬೇಸರವೆ? ಬಿಡು ಚಿಂತೆ, ಲೇಸಹುದು ಕೋಗಿಲೆಯೆ!
ಇಮ್ಮಾವು ತಳಿತಂದು, ಅಳಿವಿಂಡು ನುಡಿದಂದು
ಬಂದು ನೀ ನಲಿದಾಡು, ತಡೆವರಾರು?

### ಸಾರಂಗ

ದಂತಿಗಳ ನೆತ್ತಿಯೊಳ್ ಬಿಡಿಮುತ್ತ ಬಗೆದುಂಡ
ಸಿಂಗನಲಿ ಸರಸವೇ ಮತಿಗೇಡಿ ಸಾರಂಗ!
ಕೂಗು ಕೇಳಿಸದೇನು? ನೆಚ್ಚಿರುವ ಅರಸಿಯರು
ಕಣ್ಣೀರ ಕರೆಯರೇ ದಿಕ್ಕೆಟ್ಟು ಬಳಲಿ!

### ಬಕ

ಇಂಪಾದ ದನಿಯುಂಟೆ ಕೋಗಿಲೆಯ ದನಿಯಂತೆ?
ಬೆಡಗಿನಾ ನಡೆಯುಂಟೆ ಅರಸಂಚೆಯಂತೆ?
ಬಣ್ಣದಿಂ ಚೆನ್ನಾದ ಗರಿಯುಂಟೆ ನವಿಲಂತೆ?
ಉಂಟುಂಟು ವ್ರತವೆಂಬ ಗುಣವೊಂದು ಬಕಗೆ!

### ಅರಸಂಚೆ

ತಿಳಿಗೊಳನ ತಿಳಿನೀರ ಮನದಣಿಯ ಸೇವಿಸಿದೆ,
ಮೆಲ್ದು ತಾವರೆದಂಟ ಹಸಿವನಡಗಿಸಿದೆ.
ತಾಪವಾರಿಸಿಕೊಂಡೆ ತಾವರೆಯ ತಂಪಿನಲಿ
ಕೊಳನ ಋಣ ತೀರಿಸಿದೆಯೆಂತು ಅರಸಂಚೆ?

### ಸರಸಿ

ಆಗಸವನಾಶ್ರಯಿಸಿ ಹಾರಿದುವು ಹಕ್ಕಿಗಳು;
ಪೂತ ಮಾವನು ಸಾರಿ ಬದುಕುವುದು ದುಂಬಿ;
ದಿನ ದಿನಕೆ ಬತ್ತುತಿಹೆ, ಕಿರಿದು ಕಿರಿದಾಗುತಿಹೆ,
ನಚ್ಚಿರುವ ಮೀನುಗಳ ಗತಿಯೇನು ಸರಸಿ?

### ಸುರ-ನರರು

ಸುಧೆಯುಂಟು ಸವಿಯಲಿಕೆ, ಮನೆಯುಂಟು ನೆಲಸಲಿಕೆ
ತೊಡಲುಂಟು ಒಡವೆಗಳು, ಬದುಕೆ ಮತಿಯಿಲ್ಲ!
ಪುಣ್ಯದಲಿ ದೊರಕಿದಾ ಪದವಿಯಲಿ ಸುರ-ನರರು
ದಣಿಯೆಂದು, ಆಳೆಂದು ದಣಿವರಯ್ಯ!

**—ಶ್ರೀ ಗುಹ**

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ : ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ : ಆಣೆ ೧॥
ಬಿಡಿ ಪತ್ರಿಕೆ : ೬ ಕಾಸು




ಸಂಪಾದಕ :
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈ ಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೩೮
ಬೆಂಗಳೂರು : ಶುಕ್ರವಾರ, ಜುಲೈ ೧೬, ೧೯೪೩

### ರಾಜಕಾರ್ಯಪ್ರವೀಣ

## ಶ್ರೀಮಾನ್ ಎನ್. ಎಸ್. ಸುಬ್ಬರಾಯರು

೧

ಕಾಲಾಧೀನರಾದ ಶ್ರೀಮಾನ್ ಎನ್. ಎಸ್. ಸುಬ್ಬರಾಯರ ಅತಿ ದೊಡ್ಡ ಶಿಷ್ಯವೃಂದದಲ್ಲಿ ನಾನೊಬ್ಬ. ನಾನು ಮೈಸೂರು ಮಹಾರಾಜಾ ಕಾಲೇಜನ್ನು ಪ್ರವೇಶಿಸಿದಾಗ, ಅವರು ಅರ್ಥಶಾಸ್ತ್ರದ ಅಧ್ಯಾಪಕರಾಗಿದ್ದರು; ಮತ್ತು ೫-೬ ತಿಂಗಳಲ್ಲಿಯೇ ಪ್ರಿನ್ಸಿಪಾಲರ ಸ್ಥಾನಕ್ಕೇರಿದರು. ನಾನು ಕಾಲೇಜು ಸೇರಿದ ಮೊದಲ ವಾರದಲ್ಲಿಯೇ ಅವರ ಕೃಪಾದೃಷ್ಟಿ ನನ್ನ ಮೇಲೆ ಬಿತ್ತು. ನಾನು ತರಗತಿಯಲ್ಲಿ ಕುಳಿತಿರುವಾಗ, ಗಂಟೆ ಮುಗಿದ ಮೇಲೆ, ತಮ್ಮನ್ನು ಕಾಣಬೇಕೆಂದು ಅವರು ನನಗೆ ಹೇಳಿದರು. ಕಾರಣವೇನೂ ತಿಳಿಯದೆ, ನನಗೆ ಸ್ವಲ್ಪ ಅಂಜಿಕೆಯಾಯಿತು. ಪ್ರಾರಂಭದಲ್ಲಿ ಅವರನ್ನು ಕಂಡರೆ ನನಗೆ ಸ್ವಲ್ಪ ಹೆದರಿಕೆಯಿತ್ತು.

ಅಪ್ಪಣೆ ಪ್ರಕಾರ, ಅವರನ್ನು ಕಾಣಲು ಹೋದೆನು. "ಓದಿ ಬರೆಯುವಾಗ, ನೀನು ಪುಸ್ತಕವನ್ನು ಕಣ್ಣಿನ ಹತ್ತಿರ ಹಿಡಿದುಕೊಳ್ಳುವೆ ಯಾಕೆ ? ಕಣ್ಣು ಸರಿಯಿಲ್ಲವೋ ?" ಎಂದು ಕೇಳಿದರು. "ಇಲ್ಲ, ಕನ್ನಡಕವನ್ನು ತೆಗೆದುಕೊಳ್ಳಬೇಕೆಂದಿದ್ದೇನೆ" ಎಂದು ಹೇಳಲು, "ಇದುವರೆಗೆ ಯಾತಕ್ಕೆ ಹಾಗೆ ಮಾಡಲಿಲ್ಲ; ಹಣವಿಲ್ಲವೊ ?" ಎಂದರು. ನಾನು ಹಣಬೇಕೆಂದು ಕೇಳದಿದ್ದರೂ ಕೂಡ, ನನಗೆ ಸ್ವಲ್ಪ ಹಣವನ್ನು ಕೊಟ್ಟು ಒಡನೆ ಕನ್ನಡಕವನ್ನು ತೆಗೆದುಕೊಳ್ಳಬೇಕೆಂದು ಸಲಹೆ ಕೊಟ್ಟರು. ಕಷ್ಟ ದೆಶೆಯಲ್ಲಿದ್ದ ಬಡವಿದ್ಯಾರ್ಥಿಗಳನ್ನು ಕಂಡು ಹಿಡಿದು, ಸಹಾಯ ನೀಡುತ್ತಿದ್ದ ಕರುಣಾಶಾಲಿಗಳು ಅವರು.

ಅರ್ಥಶಾಸ್ತ್ರವನ್ನು ಬೋಧಿಸುವಾಗ, ಇತರರು ಅನೇಕ ಉಪನ್ಯಾಸಗಳಲ್ಲಿ ಹೇಳುವಷ್ಟು ವಿಷಯವನ್ನು ಅವರು ಒಂದು ಉಪನ್ಯಾಸದಲ್ಲಿ, ಸಂಗ್ರಹಿಸಿ, ಆದರೂ ವಿಶದವಾಗಿ, ಹೇಳುತ್ತಿದ್ದರು. ಅವರು ಬಹಳ ಶುದ್ಧವಾದ, ಹೊಳಪುಳ್ಳ ಇಂಗ್ಲೀಷಿನಲ್ಲಿ ಬೋಧಿಸುತ್ತಿದ್ದರು. ಅವರ ಭಾಷೆ ಸುಲಲಿತವಾದರೂ ಬಿಗಿಯುಳ್ಳದ್ದು; ಗಾಢವಾದ ಪುಷ್ಟವಾದ ಭಾಷೆ. ಅವರು ಒಂದು ಗಂಟೆಯ ಉಪನ್ಯಾಸದಲ್ಲಿ, ವಿದ್ಯಾರ್ಥಿಗಳ ಮನಸ್ಸನ್ನು ಜ್ಞಾನಮಾರ್ಗದಲ್ಲಿ ಬಹುದೂರ ಕೊಂಡೊಯ್ಯುತ್ತಿದ್ದರು. ಗಂಟೆಯಾದ ಮೇಲೆ, ನಮ್ಮ ಮನಸ್ಸಿನ ಆಯಾಸವು ತೋರಿಬರುತ್ತಿತ್ತು; ಆದರೆ ಅವರು ಬೋಧಿಸುತ್ತಿದ್ದಾಗ, ನಾವು ಮಗ್ನರಾಗಿರುತ್ತಿದ್ದೆವು.

ಶ್ರೀಮಾನ್ ಸುಬ್ಬರಾಯರು, ಅರ್ಥಶಾಸ್ತ್ರ ಒಂದೇ ಅಲ್ಲ, ಯೂರೋಪಿನ ಚರಿತ್ರೆಯನ್ನೂ ಬೋಧಿಸುತ್ತಿದ್ದರು. ಚರಿತ್ರೆಯನ್ನು ಓದುತ್ತಿದ್ದ ವಿದ್ಯಾರ್ಥಿಗಳು ಅವರ ಪ್ರತಿಭಾಶಕ್ತಿಯನ್ನೂ, ಅಸದೃಶ ಜ್ಞಾಪಕಶಕ್ತಿಯನ್ನೂ, ಸ್ಫೂರ್ತಿದಾಯಕವಾದ ಭಾಷೆಯನ್ನೂ ಮೆಚ್ಚಿ ಕೊಂಡಾಡುತ್ತಿದ್ದರು. ನಾನು ಅರ್ಥಶಾಸ್ತ್ರದ ಜೊತೆಗೆ, ಚರಿತ್ರೆಯನ್ನೂ ಐಚ್ಛಿಕ ಪಾಠವಾಗಿ ತೆಗೆದುಕೊಳ್ಳಲಿಲ್ಲವಲ್ಲಾ ಎಂದು ವ್ಯಸನಪಡುತ್ತಿದ್ದೆನು.

ಪ್ರಿನ್ಸಿಪಾಲರಾಗಿದ್ದಾಗ ಅವರಿಗೆ ಅನೇಕ ಗಂಟೆಗಳ ಕಾಲ ಆಫೀಸಿನಲ್ಲಿಯೇ ದುಡಿಯುತ್ತಿದ್ದರು. ಆದರೂ ಪಾಠ ಹೇಳುವ ಕರ್ತವ್ಯವನ್ನು ಹಿಂದಿನಂತೆಯೇ ಶ್ರದ್ಧೆಯಿಂದ ನಿರ್ವಹಿಸುತ್ತಿದ್ದರು.

## ಕನ್ನಡ ಸಾಹಿತ್ಯ ಸಂಘ, ಕಲಬುರ್ಗಿ

### ಸಾಹಿತ್ಯೋತ್ಸವ ೧೯೪೩.

ಮಹಾಶಯರಲ್ಲಿ ವಿಜ್ಞಾಪನೆಗಳು :

ನಿಜಾಮ ಕರ್ನಾಟಕದ ಗಂಡುಮೆಟ್ಟಾದ **ಕಲಬುರ್ಗಿಯಲ್ಲಿ** ಕನ್ನಡ ಸಾಹಿತ್ಯ ಸಂಘ ಕಳೆದ ಎರಡು ವರ್ಷಗಳಿಂದ ಕನ್ನಡ ಭಾಷೆ ಮತ್ತು ಸಂಸ್ಕೃತಿಗಳ ಪುನರುದ್ಧಾರ ಮತ್ತು ಏಳ್ಗೆಗಾಗಿ ಪ್ರಯತ್ನಿಸುತ್ತಲಿದೆ. ಕನ್ನಡ ನಾಡಿನ ಗಡಿಯಲ್ಲಿರುವ ಇಲ್ಲಿಯ ಜನತೆಗೆ ಕನ್ನಡ ಭಾಷೆಯ ಘನತೆ ಮತ್ತು ವೈಭವಗಳ ಪರಿಚಯಮಾಡಿಕೊಡುವ ಉದ್ದೇಶದಿಂದ ಇದೇ **ಜುಲೈ ೨೩-೨೪-೨೫** ಈ ದಿನಗಳಲ್ಲಿ **ಸಾಹಿತ್ಯೋತ್ಸವ**ವನ್ನು ಆಚರಿಸಬೇಕೆಂದು ನಿಶ್ಚಯಿಸಿ ಈ ಉತ್ಸವ ಸಮಾರಂಭಕ್ಕಾಗಿ ಕನ್ನಡನಾಡಿನ ಹಲವೆಡೆಗಳಿಂದ ಪ್ರಸಿದ್ಧ ವಿದ್ವಾಂಸರನ್ನೂ ಕಲಾವಿದರನ್ನೂ ಆಹ್ವಾನಿಸಲಾಗಿದೆ.

ಇದೇ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಸಮಿತಿಯ ಸಭೆ ನಮ್ಮ ಆಹ್ವಾನದ ಪ್ರಕಾರ ಜುಲೈ ೨೪ ದಿವಸ ನಡೆಯಲಿದೆ. ಕಾರ್ಯಸಮಿತಿಯ ಸಭೆಗಾಗಿ ಆಗಮಿಸಿದ ಸಾಹಿತಿಗಳ ಸಹಾಯ ಸಹಕಾರಗಳಿಂದ ಎಲ್ಲ ಕಾರ್ಯಕ್ರಮಗಳು ಜರುಗಲಿವೆ.

ಎಲ್ಲ ಕನ್ನಡ ಪ್ರೇಮಿಗಳು ನಮ್ಮ ಈ ಸಾಹಿತ್ಯೋತ್ಸವದಲ್ಲಿ ಭಾಗವಹಿಸಿ ಉಪಕಾರ ಮಾಡಬೇಕೆಂದು ಪ್ರಾರ್ಥಿಸುತ್ತೇವೆ.

ಜ. ಶ್ರೀ. ದೇಸಾಯಿ
ದ. ಹ. ಕುಲಕರ್ಣಿ
ಗೌ. ಕಾರ್ಯದರ್ಶಿಗಳು.

ರಾಯ ಪಾಂಡುರಂಗರಾವ್
ದೇಶಮುಖ
ಅಧ್ಯಕ್ಷ.

---

ಒಂದು ದಿನ, ಪಾಠದ ಕಾಲದಲ್ಲಿ, ಫರ್ಗ್ಯುಸನ್ ಕಾಲೇಜಿನ ಪ್ರಸ್ತಾಪ ಬಂತು. "ನಾನು ಒಂದು ರಾಷ್ಟ್ರೀಯ ವಿದ್ಯಾಸಂಸ್ಥೆಯ ಅಧ್ಯಾಪಕನಾಗಿ ಸೇವೆ ಸಲ್ಲಿಸಬೇಕೆಂದಿದ್ದೆನು. ಆದರೆ ಈ ಪ್ರಪಂಚ ನಮ್ಮನ್ನು ಬಿಡುವುದಿಲ್ಲ. (ಹಣವನ್ನು) ಗಳಿಸಿ ವ್ಯಯಮಾಡುವುದರಲ್ಲಿ ನಮ್ಮ ಆತ್ಮಶಕ್ತಿಯನ್ನು ವ್ಯರ್ಥವಾಗಿ ಕಳೆಯುತ್ತೇವೆ" ಎಂದು ವರ್ಡ್ಸ್‌ವರ್ತ್ ಕವಿಯ ವಚನವನ್ನು ಎತ್ತಿ ಹೇಳಿದರು.

ಮತ್ತೊಂದುದಿನ ಪಾಠದ ಕಾಲದಲ್ಲಿ ಅವರು ಹೇಳಿದ ಮಾತು, ಜ್ಞಾನಾರ್ಜನೆಯಲ್ಲಿ ತೊಡಗಿರುವ ಪ್ರತಿಯೊಬ್ಬನೂ ಜ್ಞಾಪಕದಲ್ಲಿಡಬೇಕಾದಂಥ ಮಾತು. "ನಾನು ಈಗ (ಪದಾರ್ಥಗಳ) ಬೆಲೆಯ ವಾದವನ್ನು (The Theory of Value) ನಿಮ್ಮ ಮುಂದಿಡಲು ಪ್ರಯತ್ನಿಸುತ್ತೇನೆ. ೧೦-೧೫ ವರ್ಷಗಳ ಹಿಂದೆ, ಈ ವಿಷಯವನ್ನು ಕೂಲಂಕಷವಾಗಿ ಹೇಳಬಲ್ಲೆನೆಂದು ತಿಳಿದಿದ್ದೆನು. ಈಗಲಾದರೋ ನನ್ನ ಜ್ಞಾನಭಂಡಾರವು ಮೋಡದಂತೆ; ಕೇವಲ ರೂಪರಹಿತ (all nebulous)." ದೊಡ್ಡ ಗ್ರಂಥಗಳನ್ನು ಓದಿ, ಮನನಮಾಡಿದ ಹಾಗೆಲ್ಲಾ, ತಮ್ಮ ಜ್ಞಾನಕ್ಕಿಂತ ಅಜ್ಞಾನವೇ ನೂರ್ಮಡಿಯಾಗಿದೆ ಎಂದು ಅವರಿಗೆ ವೇದ್ಯವಾಗುತ್ತಿತ್ತು. ಪದಾರ್ಥಗಳ "ಬೆಲೆ" ಎಂದರೇನು ಅದನ್ನು ನಿಷ್ಕರ್ಷಿಸುವುದು ಹೇಗೆ, ಎಂಬುದನ್ನು ಅವರು ಸ್ಪಷ್ಟವಾಗಿ ಹೇಳಲಾರೆನೆಂದರು. ನಾವಾದರೋ ಪದಾರ್ಥಗಳ ಬೆಲೆ ಹಾಗಿರಲಿ, ವ್ಯಕ್ತಿಗಳ ಬೆಲೆಯನ್ನೇ ನಿರ್ದಿಷ್ಟವಾಗಿ ಹೇಳಬಲ್ಲೆವು, ಜನಗಳ ಯೋಗ್ಯತೆಯನ್ನೇ ತ್ರಾಸಿನಲ್ಲಿ ತೂಗಬಲ್ಲೆವು. ನಮ್ಮ

(೧೯೭ನೆಯ ಪುಟಕ್ಕೆ)

# ಕನ್ನಡ ನುಡಿ

**ಶುಕ್ರವಾರ, ಜುಲೈ ೧೬, ೧೯೪೩**

## ಪರಿಷತ್ತಿಗೆ ೨,೦೦೦ ರೂಪಾಯಿ ನಿಧಿಯ ದಾನ

ಪರಿಷತ್ತಿನ ಮಾನ್ಯ ಸದಸ್ಯರೂ ಕಡೂರು ಜಿಲ್ಲೆಯ ಪ್ರಮುಖ ಕಾಫೀ ಪ್ಲಾಂಟರೂ ಆದ **ಶ್ರೀ. ಜಾವಳಿ ಗಣೇಶರಾಯರು** ತಮ್ಮ ಸ್ವರ್ಗವಾಸಿಗಳಾದ ಪೂಜ್ಯ ಮಾತಾಪಿತೃಗಳ ಹೆಸರಿನಲ್ಲಿ ಪರಿಷತ್ತಿಗೆ **೨,೦೦೦ ರೂಪಾಯಿ**ಗಳನ್ನು ದಾನ ಮಾಡಿ ಮಹೋಪಕಾರ ಮಾಡಿರುತ್ತಾರೆ ಎಂಬುದಾಗಿ ತಿಳಿಸಲು ಅತ್ಯಂತ ಸಂತೋಷವಾಗುತ್ತದೆ. ಈ ದಾನಕ್ಕಾಗಿ ಪರಿಷತ್ತು ಕನ್ನಡಿಗರ ಪರವಾಗಿ ಹೃತ್ಪೂರ್ವಕವಾದ ಕೃತಜ್ಞತೆಗಳನ್ನು ಅವರಲ್ಲಿ ಸಮರ್ಪಿಸುತ್ತದೆ.

ಪರಿಷತ್ತು ಕನ್ನಡಿಗರೆಲ್ಲರ ಪ್ರತಿನಿಧಿಯಾಗಿ ಕನ್ನಡದ ಕೆಲಸವನ್ನು ಮಾಡುತ್ತಿದೆ. ಈ ಕೆಲಸವನ್ನು ಚಿತ್ತಕ್ಕೆ ತಂದುಕೊಂಡು ನಾಡಿನ ಹಿರಿಯ ಧನಿಕರು ಆಗಿಂದಾಗ್ಗೆ ಹೀಗೆ ಪ್ರೋತ್ಸಾಹ ನೀಡುತ್ತಿರುವುದು ಪರಿಷತ್ತಿನ ಭಾಗ್ಯವಾಗಿದೆ.

ಈ ಹೊಸ ನಿಧಿಯನ್ನು ಕನ್ನಡದ ಯಾವ ಕೆಲಸಕ್ಕೆ ವಿನಿಯೋಗ ಮಾಡಬಹುದೆಂಬುದನ್ನು ಕುರಿತು ದಾತರಲ್ಲಿ ಬಿನ್ನೈಸಿಕೊಂಡದ್ದಾಗಿದೆ. ಅವರ ಬಯಕೆಯಂತೆ ನಿಧಿಯನ್ನು ಅವರ ಪೂಜ್ಯ ಮಾತಾಪಿತೃಗಳ ಹೆಸರಿನಲ್ಲಿ ಕನ್ನಡದ ಒಂದು ಮುಖ್ಯವಾದ ಕೆಲಸಕ್ಕೆ ವಿನಿಯೋಗ ಮಾಡಲಾಗುವುದು.

ಹೀಗೆಯೆ ನಾಡಿನ ಇತರ ಧನಿಕರೂ ತಮ್ಮ ಧಾನಧರ್ಮ ಕಾರ್ಯಗಳಿಗೆ ಪರಿಷತ್ತಿನಂಥ ಸರಸ್ವತೀ ಪೀಠವೂ ಪಾತ್ರವೆಂದು ಭಾವಿಸಿ, ಕನ್ನಡಕ್ಕೆ ಪ್ರಸನ್ನರಾಗಬೇಕೆಂದೂ, ಉದಾರವಾಗಿ ದಾನ ಮಾಡುವುದರ ಮೂಲಕ ಈ ಸಂಸ್ಥೆಯ ತಿಳಿವು ನಲಿವುಗಳ ಪ್ರಚಾರ ಕಾರ್ಯ ದೊಡ್ಡ ರೀತಿಯಲ್ಲಿ ಸಾರೋದ್ಧಾರವಾಗಿ ನಡೆಯುವುದಕ್ಕೆ ನೆರವಾಗಬೇಕೆಂದೂ ಪ್ರಾರ್ಥಿಸುತ್ತೇವೆ.

---

ತಮ್ಮ ಪೂಜ್ಯ ಮಾತಾ ಪಿತೃಗಳ ಹೆಸರಿನಲ್ಲಿ
ಪರಿಷತ್ತಿಗೆ
೨,೦೦೦ ರೂಪಾಯಿಗಳನ್ನು ದಾನಮಾಡಿರುವ



ಪರಿಷತ್ತಿನ ಮಾನ್ಯ ಸದಸ್ಯರೂ ಕಡೂರು ಜಿಲ್ಲೆಯ
ಪ್ರಮುಖ ಕಾಫೀ ಪ್ಲಾಂಟರೂ ಆದ
**ಶ್ರೀಮಾನ್ ಜಾವಳಿ ಗಣೇಶರಾಯರು**

---

### ರಾವ್‌ಬಹದ್ದೂರ್
## ಪಿ. ಜಿ. ಹಳಕಟ್ಟಿಯವರ ವರ್ಧಂತ್ಯುತ್ಸವ

ತಾ|| ೨-೭-೪೩ ನೆಯ ದಿವಸ ಸಾಯಂಕಾಲ ೬|| ಗಂಟೆಗೆ ವಿಜಾಪುರದಲ್ಲಿ ಸರದಾರ ರಾವ್ ಬಹದ್ದೂರ್ ಆಲಮೇಲ ದೇಶಮುಖರ ಅಧ್ಯಕ್ಷತೆಯಲ್ಲಿ ರಾವ್‌ಬಹದ್ದೂರ್ ಹಳಕಟ್ಟಿಯವರ ೬೪ನೆಯ ವರ್ಷದ ವರ್ಧಂತ್ಯುತ್ಸವ ಬಹು ಸಾಂಗವಾಗಿ ನಡೆಯಿತು.

ನಾಡಿನ ನಾನಾ ಭಾಗಗಳಿಂದ ಶುಭಸಂದೇಶಗಳೂ ಮಾನ್ಯ ಅಥಿತಿಗಳನ್ನು ಗೌರವಿಸಿ ಬರೆದ ಕವಿತೆ ಹಾಡು ಲೇಖನಗಳೂ ಬಂದಿದ್ದುವು.

ಅಭಿನಂದನಪರವಾದ ಹಲವು ಭಾಷಣಗಳಾದ ಮೇಲೆ ಕಾರ್ಯದರ್ಶಿಗಳು ವಿಜಾಪುರದ ಮಹಾಜನರ ಮತ್ತು ಹತ್ತಾರು ಸಂಸ್ಥೆಗಳ ಪರವಾಗಿ ಶ್ರೀ. ಹಳಕಟ್ಟಿಯವರು ಮಾಡಿದ ಪವಿತ್ರವಾದ ನಾಡುನುಡಿ ಸೇವೆಯ ಗೌರವಾರ್ಥವಾಗಿ ಮಾನಪತ್ರವನ್ನು ಓದಿ ಹೇಳಿದರು. ಅಧ್ಯಕ್ಷರು ಮಾನಪತ್ರವನ್ನೂ ನಿಧಿಯನ್ನೂ ಪೂಮಾಲೆಯೊಡನೆ ಶ್ರೀ. ಹಳಕಟ್ಟಿಯವರಿಗೆ ಸಮರ್ಪಿಸಿದರು.

ಬಿನ್ನವತ್ತಳೆಯ ಕೆಲವು ಭಾಗಗಳನ್ನಿಲ್ಲಿ ಕೊಟ್ಟಿದೆ :

“ಶಿವಶರಣರ ವಚನ ಗ್ರಂಥಗಳು; ಹರಿಹರನ ರಗಳೆಗಳು ಇವೇ ಮೊದಲಾದ ಪ್ರಾಚೀನ ಗ್ರಂಥ ಸಂಶೋಧನೆ ಮತ್ತು ಪ್ರಕಟನೆಗಳಿಂದ ನೀವು ಮಾಡಿದ ಸಾಹಿತ್ಯ ಸೇವೆಯು ಅತ್ಯಂತ ಅಮೌಲ್ಯವಾದುದು. ನೀವು ಅನೇಕ ಕಾರ್ಯರಂಗಗಳಲ್ಲಿ ಭಾಗ ವಹಿಸುತ್ತ ಬಂದರೂ ನೀವು ನಿಮ್ಮ ಆಯುಷ್ಯದ ಮಹತ್ವದ ಭಾಗವನ್ನು ವಚನ ಸಾಹಿತ್ಯ ಸಂಶೋಧನೆಗಾಗಿಯೇ ಮೀಸಲಾಗಿರಿಸಿ ಆ ಮೂಲಕ ವೀರಶೈವ ಸಂಸ್ಕೃತಿಯನ್ನು ಎಲ್ಲೆಡೆಯಲ್ಲಿಯೂ ಬೀರುತ್ತಿರುವ ನಿಮ್ಮ ಪ್ರಯತ್ನವು ಬಹು ಪ್ರಶಂಸನೀಯವಾಗಿದೆ. ಕೆಲವು ವರ್ಷಗಳ ಹಿಂದೆ ವಚನ ಗ್ರಂಥಗಳು ವಾಙ್ಮಯದಲ್ಲಿ ಎಣಿಸಲ್ಪಡುತ್ತಿರಲಿಲ್ಲ. ಆದರೆ ನಿಮ್ಮ ಪ್ರಯತ್ನಗಳ ಫಲವಾಗಿ ಇವುಗಳಿಗೆ ಕನ್ನಡ ಸಾಹಿತ್ಯದಲ್ಲಿ ಉಚ್ಚ ಸ್ಥಾನವು ದೊರೆತಿರುತ್ತದೆ. ಮತ್ತು ಶಿವಶರಣರ ವಿಷಯವಾಗಿ ಮೊದಲು ಇದ್ದ ತಪ್ಪು ತಿಳುವಳಿಕೆಗಳು ದೂರವಾಗಹತ್ತಿರುತ್ತವೆ.

ಕಳೆದ ೧೭ ವರುಷಗಳಿಂದಲೂ ನೀವು **‘ಶಿವಾನುಭವ’** ಪತ್ರಿಕೆಯನ್ನು ಹೊರಡಿಸಿ ಅದರ ಮುಖಾಂತರ ವೀರಶೈವ ಸಾಹಿತ್ಯ, ಇತಿಹಾಸ, ತತ್ವಜ್ಞಾನ ಮೊದಲಾದವುಗಳನ್ನು ಹೊರಪಡಿಸುತ್ತಿರುವ ನಿಮ್ಮ ಪವಿತ್ರ ಸೇವೆಯು ಚಿರಸ್ಮರಣೀಯವಾಗಿದೆ. ಅದೇ ಮೇರೆಗೆ **‘ನವಕರ್ನಾಟಕ’** ಪತ್ರಿಕೆಯ ಮುಖಾಂತರವಾಗಿ ಕಳೆದ ೧೪ ವರ್ಷಗಳಿಂದಲೂ ಸಾಮಾಜಿಕ, ರಾಜಕೀಯ, ವಾಙ್ಮಯ ವಿಷಯಗಳನ್ನು ಉದಾರ ಮತ್ತು ಉದಾತ್ತ ಧ್ಯೇಯದಿಂದಲೂ ನಿಷ್ಪಕ್ಷಪಾತ ಬುದ್ಧಿಯಿಂದಲೂ ಪ್ರಸ್ತಾಪಿಸುತ್ತಿರುವದು ನಿಮ್ಮ ವಿಧಾಯಕ ಕಾರ್ಯಧೋರಣದ ದ್ಯೋತಕವಾಗಿದೆ.

ಇಲ್ಲಿಯವರೆಗೆ ನೀವು ನಿಮಗೊದಗಿದ ಶಾರೀರಿಕ, ಮಾನಸಿಕ, ಮತ್ತು ಆರ್ಥಿಕ ಕಷ್ಟನಷ್ಟಗಳಿಗೆ ಎದೆಗುಂದದೆ ಕೇವಲ ಸ್ವಾರ್ಥತ್ಯಾಗದಿಂದಲೂ ಸತತೋದ್ಯೋಗದಿಂದಲೂ ಧೈರ್ಯದಿಂದಲೂ ವಚನಕಾರರ, ಹರಿಹರ ಮೊದಲಾದ ಪುರಾತನ ಗ್ರಂಥಕರ್ತರ ಸುಮಾರು ೬೦ ಮಹತ್ವದ ಗ್ರಂಥಗಳನ್ನು ಪ್ರಕಟಗೊಳಿಸಿ ಕನ್ನಡ ಸಾಹಿತ್ಯಕ್ಕೆ ಬಹು ದೊಡ್ಡ ಕಾಣಿಕೆಯನ್ನು ಸಲ್ಲಿಸಿದ್ದೀರಿ.

ನೀವು ಮಾಡಿದ ಕಾರ್ಯಕಲಾಪಗಳು ಒಂದಲ್ಲ, ಎರಡಲ್ಲ, ಬಹುಮುಖವಾಗಿ ಹರಿದಿರುವುದನ್ನು ನೋಡಿ, ನೀವು ಒಂದು

ವ್ಯಕ್ತಿಯಲ್ಲ, 'ಬಹುವಿಧ ಕಾರ್ಯಗಳ ಸಂಸ್ಥೆಯಾಗಿದ್ದೀರೆಂದು ಹೇಳಲು ನಮಗೆ ಒಳ್ಳೆಯ ಹೆಮ್ಮೆಯೆನಿಸುತ್ತದೆ. ಪರಮಾತ್ಮನು ನಿಮಗೆ ಆಯುರಾರೋಗ್ಯವನ್ನು ಹೆಚ್ಚಿಸಿ ಇದಕ್ಕಿಂತಲೂ ಹೆಚ್ಚಾದ ಸೇವೆಯನ್ನು ನಿಮ್ಮಿಂದ ನಮ್ಮ ನಾಡಿಗೆ, ಸಮಾಜಕ್ಕೆ, ಸಾಹಿತ್ಯಕ್ಕೆ ಸಲ್ಲುವಂತೆ ಮಾಡಲೆಂದು ಆ ದಯಾಘನನನ್ನು ಕುರಿತು ಅನನ್ಯ ಭಾವದಿಂದ ಪ್ರಾರ್ಥಿಸುತ್ತೇವೆ."

ಶ್ರೀ. ಹಳಕಟ್ಟಿಯವರು ತಮಗೆ ಗೌರವಾದರಗಳನ್ನು ತೋರಿಸಿದ ಎಲ್ಲ ಸಂಸ್ಥೆಯವರಿಗೆ ತಮ್ಮ ಆಭಾರಗಳನ್ನು ವ್ಯಕ್ತಗೊಳಿಸಿ, ತಮಗೆ ಸಲ್ಲಿಸಿದಂಥ ನಿಧಿಯನ್ನು ತಮ್ಮ ಸ್ವಂತಕ್ಕೆ ಉಪಯೋಗಿಸಿಕೊಳ್ಳದೆ ಸಮಾಜ ಸಾಹಿತ್ಯ ಸೇವೆಗಳಿಗಾಗಿಯೇ ಸಲ್ಲಿಸುವೆವೆಂದು ಬಿನ್ನವಿಸಿದರು.

ಅಧ್ಯಕ್ಷರು ತಮ್ಮ ಹಾಗೂ ರಾವ್‌ಬಹದ್ದೂರ್ ಹಳಕಟ್ಟಿಯವರ ೪೦ ವರ್ಷದ ಮಿತ್ರತ್ವವನ್ನು ಹೊಗಳಿ ಶ್ರೀ. ಹಳಕಟ್ಟಿಯವರು ಮಾಡಿದ ಸಾಹಿತ್ಯ ಸೇವೆ ಸಾರ್ವಜನಿಕ ಸೇವೆಗಳನ್ನು ಕೊಂಡಾಡಿ, ಪರಮಾತ್ಮನು ಶ್ರೀ. ಹಳಕಟ್ಟಿಯವರ ಆಯುರಾರೋಗ್ಯವನ್ನು ಹೆಚ್ಚಿಸಿ ಅವರಿಂದ ಇನ್ನೂ ಹೆಚ್ಚು ಸೇವೆಯಾಗುವಂತೆ ಮಾಡಲೆಂದು ಕೋರಿದರು.

ಶ್ರೀ. ಹಳಕಟ್ಟಿಯವರು ತಮ್ಮ ವರ್ಧಂತಿಯ ಶುಭದಿವಸದಲ್ಲಿ ಹೊರಡಿಸಿದ ಶಿವಾನುಭವ ಶಬ್ದಕೋಶ, ಗುರುಬಸವ ಕವಿಕೃತ ಅವಧೂತಗೀತೆ, ಕೆಳದಿ ಅರಸರ ವಂಶಾವಳಿ, ಕೊಡಗಿನ ರಾಜೇಂದ್ರನಾಮೆ, ಶಿವಶರಣರ ಪದಗಳು – ಭಾಗ ೧. ಈ ಐದು ಗ್ರಂಥಗಳನ್ನು ಅಧ್ಯಕ್ಷರು ಸಭೆಯಲ್ಲಿ ಪ್ರಕಟಗೊಳಿಸಿದರು.

---

## ಉತ್ಕಲ ಸಾಹಿತ್ಯದ ನೂತನ ಪಥಪ್ರವರ್ತಕರು

### ದಿವಂಗತ ಮಧುಸೂದನರಾಯರು

(ಲೇಖಕರು: ಶ್ರೀ. ಅ. ನಾರಾಯಣಸ್ವಾಮಿ ಅಯ್ಯರ್ ಅವರು)

ಒರಿಸ್ಸಾದಲ್ಲಿ ಆಂಗ್ಲರ ಆಳಿಕೆ ಆರಂಭವಾಗುವ ಮೊಂಚೆ ನೆಲಸಿದ್ದ ಮಹಾರಾಷ್ಟ್ರ ಮನೆತನವೊಂದರಲ್ಲಿ ೧೮೫೩ನೆಯ ಜನವರಿ ೨೯ರಲ್ಲಿ ಮಧುಸೂದನರಾಯರು ಜನ್ಮವೆತ್ತಿದರು. ಇವರ ತಂದೆ ಭಗೀರಥರಾವ್ ಅವರು ಪೋಲೀಸ್ ಇಲಾಖೆಯಲ್ಲಿದ್ದರು. ಮಧುಸೂದನರ ಐದನೆಯ ವಯಸ್ಸಿನಲ್ಲಿ ಅವರ ತಾಯಿ ತೀರಿಹೋದರು. 'ಗೋಪ' ಎಂಬ ಹಳ್ಳಿಯ ಶಾಲೆ, ಅನಂತರ ಭುವನೇಶ್ವರ ಮತ್ತು ಪೂರಿಯ ಸ್ಕೂಲುಗಳಲ್ಲಿ ಇವರ ವಿದ್ಯಾವ್ಯಾಸಂಗ ನಡೆದು ೧೮೭೧ರಲ್ಲಿ ಎಫ್. ಎ. ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಇಲ್ಲಿಗೆ ಇವರ ಶಾಲೆಯ ಜೀವನ ಕೊನೆಗಂಡಿತು. ಜಾಜ್‌ಪೂರ್ ಎಂ. ಇ. ಸ್ಕೂಲಿನಲ್ಲಿ ೪೫ ರೂ. ವೇತನದಮೇಲೆ ಮುಖ್ಯೋಪಾಧ್ಯಾಯರಾಗಿ ಸೇರಿದರು. ಜಾಜ್‌ಪೂರಿನಿಂದ ಬಾಲಾಸೋರ್ ಕಟಕನ ಶಾಲೆಗಳಲ್ಲಿ ಕೆಲಸಮಾಡಿ ೧೮೮೦ನೆಯ ಸುಮಾರಿಗೆ ೧೦೦ ರೂ. ವೇತನದಮೇಲೆ ಸ್ಕೂಲುಗಳ ಡೆಪ್ಯುಟಿ ಇನ್ಸ್‌ಪೆಕ್ಟರಾದರು. ಇದೀಗ ಇವರ ಕರ್ಮ ಜೀವನ. ಆದರೆ ಇವರ ಸಾಹಿತ್ಯ ಜೀವನವೇ ಇವರಿಗೆ ಶಾಶ್ವತ ಕೀರ್ತಿಯನ್ನು ಗಳಿಸಿದ್ದು. ಇವರ ಕೃತಿಗಳು:– ಪ್ರಣಯೇರ್ ಅದ್ಭುತ ಪರಿಣಾಮ್ ೧೮೭೩; ಕವಿತಾವಳಿ, ಎರಡು ಭಾಗಗಳು ೧೮೭೩–೭೪; ಛಂದಮಾಲಾ ಭಾಗ I (೧೮೮೦–೮೧); ಸಂಗೀತಮಾಲಾ ಭಾಗ I, II (೧೮೯೪–೯೬); ಹೇಮಮಾಲಾ (೧೮೯೭); ಬಾಲ ರಾಮಾಯಣ (೧೯೦೧. ಅಪೂರ್ಣ); ವಸಂತ ಗಾಥಾ (ಕಾಲ ಗೊತ್ತಿಲ್ಲ); ಕುಸುಮಾಂಜಲಿ (೧೯೦೩); ಉತ್ತರ ರಾಮ ಚರಿತ (೧೯೦೭–೮); ಮಹರ್ಷಿ ದೇವೇಂದ್ರನಾಥ ಠಾಕೂರರ ಜೀವನ ಚರಿತೆ (೧೯೦೮); ಚಾಮುಂದರಾಜ ಪ್ರಶಸ್ತಿ (ಶ್ಲೋಕ); ಹಿಮಾಚಲೆ– ಉದಯ ಉತ್ಸವ (೧೯೦೨); 'ಉತ್ಕಲ ಸಾಹಿತ್ಯ ಪತ್ರಿಕೆ'ಯಲ್ಲಿ ಪ್ರಕಟವಾಗಿದ್ದ ವಿವಿಧ ಕವನಗಳ ಸಂಕಲನ ಇವುಗಳಲ್ಲದೆ ಶಿಶು ಸಾಹಿತ್ಯದಲ್ಲಿಯೂ ಹಲವು ಹೊಸ ಕೃತಿಗಳನ್ನು (೧೯೦೮–೧೯೧೨) ರಚಿಸಿರುವರು.

ಬಾಲ್ಯಾವಸ್ಥೆಯಲ್ಲಿ ಮಧುಸೂದನರ ಗುಣ ನಡೆ ನುಡಿಗಳನ್ನು ಕಂಡು ಹಲವರು ಮುಗ್ಧರಾಗಿದ್ದರು. ದಿವಂಗತ ದ್ವಿಜೇಂದ್ರಲಾಲರಾಯರು (ವಿಖ್ಯಾತ ವಂಗ ನಾಟಕ ರಚಯಿತರು.) ಇವರನ್ನು ಕಂಡಾಗ ರಾಮತನು ಲಹರಿಯವರನ್ನು (ಆ ಕಾಲದಲ್ಲಿ ಆಧುನಿಕ ವಂಗ ಸಾಹಿತ್ಯಕ್ಕಾಗಿ ದುಡಿದವರಲ್ಲೊಬ್ಬರು) ಕಂಡಂತೆ ಆಯಿತೆಂದಿರುವರು. ಬ್ರಾಹ್ಮ ಸಮಾಜದ ಆಚಾರ್ಯರಾಗಿದ್ದ ಪಂಡಿತ ಶಿವನಾಥ ಶಾಸ್ತ್ರಿಗಳು ಇವರನ್ನು 'ಎರಡನೆಯ ವಿದ್ಯಾಸಾಗರ' ಎಂದು ಹೊಗಳಿರುವರು. ಬಂಗಾಲೀ ಸಾಹಿತ್ಯದಲ್ಲಿ ನೂತನ ಛಂದಸ್ಸಿನ ಕವನಗಳನ್ನು ರಚಿಸಿದ ಮೈಕೆಲ್ ಮಧುಸೂದನರಂತೆ, ಉತ್ಕಲ ಸಾಹಿತ್ಯದ ಹೊಸ ಶೈಲಿಯ ಗದ್ಯ ಪದ್ಯಗಳನ್ನು ರಚಿಸಿರುವವರು ಮಧುಸೂದನರಾಯರು. ಇವರ ರಚನೆಗಳನ್ನು ಓದಿ, ಶ್ರೀ. ಬಂಕಿಮಚಂದ್ರರೂ, ಶ್ರೀ. ರವೀಂದ್ರರೂ ಇವರನ್ನು ಹೊಗಳಿರುವರು. ರವೀಂದ್ರರು ಹೀಗೆ ಹೇಳಿರುವರು. "ಹೆಸರನ್ನು ನೋಡಿದರೆ ಇವರು ಮಹಾರಾಷ್ಟ್ರರೆಂದು ಭಾಸವಾಗುತ್ತಿದೆ. ಆದರೆ ಬಂಗಾಲೀ ಸಾಹಿತ್ಯದಲ್ಲಿ ಇಂತಹ ಕವನಗಳನ್ನು ಹುಟ್ಟು ಬಂಗಾಲಿಯಲ್ಲದ (Non-Bengali) ಯಾರೂ ರಚಿಸಿಲ್ಲ. ಈ ಕವಿಯ ರಚನೆಗಳಲ್ಲಿ ಪ್ರಾಚೀನ ಭಾರತದ ಅರುಣೋದಯದ, ಮಂಜಿನಿಂದ ಶುಭ್ರಗೊಳಿಸಲ್ಪಟ್ಟ ಪವಿತ್ರ ನೂತನ ಜ್ಯೋತಿಯು ಅತಿ ಪರಿಶುದ್ಧವಾದ ಮಹತ್‌ಪ್ರಕಾಶದ ಶೈಲಿಯಲ್ಲಿ ಶೋಭಿಸುತ್ತಿರುವುದನ್ನು ಕಾಣಬಹುದು. ಬಹುಜನ ಬಂಗಾಲೀ ಲೇಖಕರ ರಚನೆಗಳಲ್ಲಿ ವಾಸ್ತವವಾದ ಪ್ರಾಚೀನ ಗಂಧವನ್ನು ಕಾಣಲಾರೆವು, ಆದರೆ 'ಋಷಿ ಚಿತ್ರ'ದಲ್ಲಿ ಪ್ರಾಚೀನವೂ ಗಂಭೀರವೂ ಆದ ವಾಣಿ ಮೊಳಗುತ್ತಿದೆ."

ಮಧುಸೂದನರ 'ಹಿಮಾಚಲೆ ಉದಯ ಉತ್ಸವ'ವೆಂಬ ಕವನದಲ್ಲಿ ಬರುವ ಭೂಮಿ ವ್ಯೋಮಗಳ ಮಿಲನದ ವರ್ಣನೆ ಪ್ರಕೃತಿ ವರ್ಣನೆಯ ಅಪೂರ್ವ ಉದಾಹರಣೆ.

ಕೀ ಅಪೂರ್ವ ಕೀ ರಹಸ್ಯಮಯ ಪರಷೊರೇ
ಭರು ಅಚಿ ಸರ್ವಪ್ರಾಣ ಮಹಾ ಹರಷೊರೇ
ಹೇ ಅನಾದಿ ಹೇ ಅನಂತ ರಸ– ಪ್ರಶ್ರವಣ
ಮೋರ್ ಆದಿ ಅಂತ – ರಸೇ ರಸೇ ನಿಮಗ್ನ
ಆಜಿ ಮೋರ್ ನೇತ್ರೋತ್ಸವ, ಶ್ರೀ ನೇತ್ರ ತುಮ್ಭಾಡ
ನಿಮಗ್ನ ಮುಗ್ಧ ದೃಷ್ಟಿ ಏ ಮೋ ನಯನೊರ

ಮಧುಸೂದನರಿಗಿದ್ದ ಭಾರತ ಪ್ರೇಮವನ್ನು ಅವರ ಈ ಕವನದಲ್ಲಿ ಕಾಣಬಹುದು.

ಎಹಿ ಕೀ ಸೇ ಪುಣ್ಯಭೂಮಿ ಭುವನವಿದಿತ
ಸುವಿಸ್ತೀರ್ಣ ರಂಗಭೂಮಿ ಆರ್ಯ ಗೌರವೇರ್ ?
ಎಹಿ ಕೀ ಭಾರತೊ, ಜಾರ್ ಮಹಿಮಾ ಸಂಗೀತ
ಗಂಭೀರ– ಝುಂಕಾರೆ ಪೂರ್ಣ ದಿಗ ದಿಗಂತರ ?
ಎಹಿ ಕೀ ಸೆ ಸುಮನೊಗ್ನ ಆಶಾ ಸರೋವರ
ಜಾರ್ ಜ್ಞಾನಾಮೃತ ಪಾನೆ– ಕೃತಾರ್ಥ ಧರಣೀ ?
ಜಾರ್ ತೇಜೊಬಿಭಾಷಿತ ದೇಶ ದೇಶಾಂತರ್ ?
ಎಹಿ ಕೀ ಸೇ ವಸುಧಾರ್ ಸಮುಜ್ವಲ ಮಣಿ ?
ಎಹಿ ಕೀ ಅಮೃತಮಯಿ ಮೃತ್ಯುಂಜಯ ಸಂತಾನ ಜನನೀ ?

ಮಧುಸೂದನರು ಪ್ರಾಚೀನ ಭಾರತದ ಆಧ್ಯಾತ್ಮಿಕ ಮತ್ತು ಆಧಿಭೌತಿಕ ಕೀರ್ತಿಯ ಕನಸನ್ನು ಕಂಡಿದ್ದರೆಂಬುದು ಅವರ ರಚನೆಗಳಿಂದ ವ್ಯಕ್ತವಾಗುವುದು.

ಆಧಾರ ಗ್ರಂಥಗಳು – ಕಲ್ಕತ್ತಾ ರಿವ್ಯೂದಲ್ಲಿ ಅಚ್ಚಾಗಿರುವ ಪ್ರೊ. ಪ್ರಿಯರಂಜನ ಸೇನ, ಎಂ.ಎ. ಅವರ ಲೇಖನಗಳು.

---

### ಕರ್ನಾಟಕ ಸಾಹಿತ್ಯ ಮಂದಿರ, ಹೈದರಾಬಾದು

ಮೈಸೂರು ವಿಶ್ವವಿದ್ಯಾನಿಲಯದ ಹಿಂದಿನ ಸ್ಥಾನಪತಿಗಳೂ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರೂ ಕನ್ನಡ ಪ್ರೇಮಿಗಳೂ ಅರ್ಥಶಾಸ್ತ್ರ ಪ್ರವೀಣರೂ ಮತ್ತು ರಾಜನೀತಿ ವಿಶಾರದರೂ ಆಗಿದ್ದ ರಾಜಕಾರ್ಯಪ್ರವೀಣ ಶ್ರೀ. ಎನ್. ಎಸ್. ಸುಬ್ಬರಾಯರ ಅಕಾಲ ನಿಧನಕ್ಕಾಗಿ ಕರ್ನಾಟಕ ಸಾಹಿತ್ಯ ಮಂದಿರದ ಸದಸ್ಯರು ತಮ್ಮ ಅಪಾರ ಸಂತಾಪವನ್ನು ಸೂಚಿಸುತ್ತ ಭಗವಂತನು ಮೃತರ ಆತ್ಮಕ್ಕೆ ಶಾಂತಿಯನ್ನೂ ಮತ್ತು ಅವರ ಕುಟುಂಬದವರಿಗೆ ಸಮಾಧಾನವನ್ನೂ ದಯಪಾಲಿಸಲೆಂದು ಪ್ರಾರ್ಥಿಸಿದರು.

# ಪರಿಷತ್ತಿನ ಸುದ್ದಿ

## ಕಾರ್ಯ ಸಮಿತಿ ಸಭೆ

ಇದೇ ತಿಂಗಳು ೨೪ನೆಯ ತಾರೀಖು ಶನಿವಾರ ಬೆಳಗ್ಗೆ **ಕಲಬುರ್ಗಿಯಲ್ಲಿ** ನಡೆಯಲಿದೆ.

## ಉಪಾಧ್ಯಕ್ಷರ – ಕಾರ್ಯದರ್ಶಿಗಳ ಪ್ರವಾಸ

ಇದೇ ತಿಂಗಳು ೧೯ನೆಯ ತಾರೀಖಿನಿಂದ ಪರಿಷತ್ತಿನ ಉಪಾಧ್ಯಕ್ಷರು ರಾಜಸೇವಾಪ್ರಸಕ್ತ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ಮತ್ತು ಕಾರ್ಯದರ್ಶಿಗಳು ಶ್ರೀ. ಬಿ. ವೆಂಕೋಬರಾಯರು ಹೈದರಾಬಾದ್ ಪ್ರಾಂತದಲ್ಲಿ ಈ ಕೆಳಗಿನಂತೆ ಪ್ರವಾಸ ಕೈಗೊಂಡಿದ್ದಾರೆ.

## ಕಾರ್ಯಕ್ರಮ

**ತಾ. ೧೯ ಜುಲೈ ೧೯೪೩:** ಬೆಂಗಳೂರು ಬಿಟ್ಟು ಆ ರಾತ್ರಿ ರಾಯಿಚೂರು ತಲಪುವುದು.

**೨೦:** ರಾಯಿಚೂರು.

**೨೧:** ಸುರಪುರ.

**೨೨:** ಯಾದಗಿರಿ.

**೨೩, ೨೪ ಮತ್ತು ೨೫:** ಕಲಬುರ್ಗಿ.

**೨೬:** ಸೊಲ್ಲಾಪುರ.

**೨೮:** ಬಿದರೆ.

**೩೦ ಮತ್ತು ೩೧:** ಹೈದರಾಬಾದು.

## ಪರಿಷತ್ತಿನ ಸದಸ್ಯರ ಬೆಳವಣಿಗೆ

**ಸಹಾಯಕ ಸದಸ್ಯರು (೧೦೦ ರೂ.):** ಶ್ರೀ.ಗಳಾದ ೧. ಎಸ್. ಎಂ. ರಾಮಸ್ವಾಮಿ ಅವರು, ಪ್ಲಾಂಟರು, ಸಕಲೇಶಪುರ. ೨. ಎಂ. ಜಿ. ಲಕ್ಷ್ಮೀನರಸು, ಬಿ.ಕಾಂ., ಅವರು, ಕಿಂಗ್ಸ್‌ವೇ, ಸಿಕಂದ್ರಾಬಾದ್. ೩. ಡಾಕ್ಟರ್ ಎಂ. ಅಣ್ಣಾಜಪ್ಪನವರು, ಮಾಡರನ್ ಫಾರ್ಮಸಿ, ಧನ್ವಂತರಿ ರಸ್ತೆ, ಮೈಸೂರು. ೪. ಸಿ. ಕೈ. ವೆಂಕಟರಾಮಯ್ಯನವರು, ಎಂ.ಎ., ಎಲ್‌ಎಲ್.ಬಿ., ಮೈಸೂರು ಸರ್ಕಾರದ ಕನ್ನಡ ಟ್ರಾನ್ಸ್‌ಲೇಟರು, ಬೆಂಗಳೂರು. (ಬದಲಾವಣೆ) ೫. ಸಿ. ನರಸಿಂಹಯ್ಯನವರು, ಬಿ.ಎ., ಬಿ.ಎಲ್., ಎಂ.ಎಲ್.ಸಿ., ಅಡ್ವೋಕೇಟರು, ಲಕ್ಷ್ಮೀಪುರ, ಮೈಸೂರು.

**ಸಾಮಾನ್ಯ ಸದಸ್ಯರು (೬ ರೂ.)** ೧. ಶ್ರೀಮತಿ ಶಾರದಮ್ಮನವರು, ನಂ: ೩೩, ನಾರ್ತ್‌ರೋಡ್, ಬಸವನಗುಡಿ. ೨. ಶ್ರೀ. ಎಂ. ಕಾಳಪ್ಪನವರು, ಜಮೀನ್ದಾರರು, ೩೬೩, ೭ ನೆಯ ಮೆಯ್ನ್ ರಸ್ತೆ, ಮಲ್ಲೇಶ್ವರ, ಬೆಂಗಳೂರು.

**ಸಾಮಾನ್ಯ ಸದಸ್ಯರು (೩ ರೂ.):** ಶ್ರೀ.ಗಳಾದ ೧. ಸಿ. ವಿ. ಸುಬ್ಬರಾಯರು, ವಿದ್ಯಾರ್ಥಿ, ಅಗ್ರಹಾರ, ಕ್ಲೋಸ್ಪೇಟೆ. ೨. ಕೆ. ಬಿ. ಮಾನಪ್ಪನವರು, ಮೈಸೂರು ರಿಯಾಸತ್ ಹಿಂದೀ ಪ್ರಚಾರ ಸಮಿತಿ, ಬಸವನಗುಡಿ. ೩. ಜಿ. ಕರಿಸಿದ್ದಯ್ಯನವರು, ಮ್ಯಾನೇಜರು, ಮೈಸೂರು ಬ್ಯಾಂಕ್, ಕೋಟೆ ಶಾಖೆ, ಬೆಂಗಳೂರು.

## ಸಾಹಿತ್ಯ ಪರೀಕ್ಷೆಗಳು

ಅನೇಕ ಕೇಂದ್ರಗಳಲ್ಲಿ ತರಗತಿಗಳು ಬಹಳ ತಡವಾಗಿ ಪ್ರಾರಂಭವಾಗಿದೆಯೆಂದು ತಿಳಿದುಬಂದಿದೆ. ಆ ಕಾರಣ **ಪರೀಕ್ಷೆಗಳನ್ನು ಆಗಸ್ಟ್ ತಿಂಗಳ ಕೊನೆಯ ವಾರದಲ್ಲಿ** ನಡಸಲಾಗುತ್ತದೆ. **ಅಪೇಕ್ಷಾಪತ್ರಗಳನ್ನು ಆಗಸ್ಟ್ ೮ನೆಯ** ತಾ|| ಒಳಗಾಗಿ ಪ್ರವೇಶ ಧನದೊಂದಿಗೆ ತಲಪುವಂತೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

## ಮಹಿಳಾ ಶಾಖೆ

**೧೭-೭-೧೯೪೩ನೆಯ ಶನಿವಾರ ಸಂಜೆ ೫-೩೦ ಗಂಟೆಗೆ** ಪ್ರಸಿದ್ಧ ಗಮಕಿಗಳಾದ ಶ್ರೀ. ಸೌ|| ಲಲಿತಮ್ಮನವರು **ತಿರುಪಾಣಿ ನಾಟಕ ವಾಚನ** ಮಾಡುವರು.

೬-೭-೪೩ನೆಯ ಮಂಗಳವಾರ ಸಂಜೆ ಶ್ರೀ. ಸೌ|| ವಿಜಯಾಬಾಯಿ ಅವರು ಒಂದು ಗಂಟೆಕಾಲ ಬಹಳ ಇಂಪಾಗಿ ವೀಣಾ ವಾದನ ಮಾಡಿದರು.

# ಕನ್ನಡ ಸುದ್ದಿ

**ಮೈಸೂರು: ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರ ಜಯಂತಿ**

ದಿವಂಗತ ಶ್ರೀಮನ್ಮಹಾರಾಜ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರ ಜಯಂತಿ ಉತ್ಸವ ಇದೇ ತಿಂಗಳು ೧೯ನೆಯ ತಾ|| ಸೋಮವಾರ ಸಂಜೆ ೬-೩೦ ಗಂಟೆಗೆ ಮೈಸೂರು ರಂಗಾಚಾರ್ಲು ಸ್ಮಾರಕ ಭವನದಲ್ಲಿ ನಡೆಯುತ್ತದೆ. ಸ್ಥಳೀಯ ಸಂಸ್ಥೆಗಳ ಮಂತ್ರಿಗಳಾದ ಶ್ರೀ. ಎಚ್. ಬಿ. ಗುಂಡಪ್ಪಗೌಡರವರು ಅಧ್ಯಕ್ಷತೆ ವಹಿಸುತ್ತಾರೆ.

**ಮೈಸೂರು ಸಂಸ್ಥಾನದ ಅಕ್ಷರ ಪ್ರಚಾರ ಸಮಿತಿ**

ಅಕ್ಷರ ಪ್ರಚಾರದ ಸೂಪರ್‌ವೈಸರುಗಳ ಶಿಕ್ಷಣಕ್ಕಾಗಿ ಮೈಸೂರು ಅಕ್ಷರ ಪ್ರಚಾರ ಸಮಿತಿಯವರು ತರಗತಿಯೊಂದನ್ನು ತೆರೆದಿರುತ್ತಾರೆ. ಸದರಿ ತರಗತಿಯು ೧೫ ದಿನಗಳ ಕಾಲ ನಡೆಯುತ್ತದೆ. ಪ್ರತಿ ಸಂಜೆಯೂ ಒಂದೊಂದು ಮುಖ್ಯ ವಿಷಯದ ಮೇಲೆ ಉಪನ್ಯಾಸ ಮಾಡಲಾಗುತ್ತದೆ. ಶ್ರೀ.ಗಳಾದ ಡಿ. ಎಸ್. ಗಾರ್ಡನ್, ಟಿ. ಕೃಷ್ಣಮೂರ್ತಿ, ಎನ್. ಎಸ್. ನಾರಾಯಣಶಾಸ್ತ್ರಿ, ಕೆ. ವಿ. ನಾರಾಯಣ್, ಎಸ್. ವಿ. ಶ್ರೀನಿವಾಸರಾವ್, ವಿ. ಸೀತಾರಾಮಯ್ಯ, ಬಿ. ಕುಪ್ಪಸ್ವಾಮಿನಾಯ್ಡು, ಎ. ಶೇಷಯ್ಯಂಗಾರ್, ಸಿ. ರಂಗಾಚಾರ್, ಬಿ. ಎಸ್. ಕೇಶವನ್, ಜಿ. ಹನುಮಂತರಾವ್ ಮತ್ತು ಎಸ್. ವಿ. ರಾಜಾರಾಂ ಅಯ್ಯಂಗಾರ್ ಇವರುಗಳು ವಿವಿಧ ವಿಷಯಗಳ ಮೇಲೆ ಉಪನ್ಯಾಸ ಮಾಡಲು ಒಪ್ಪಿರುತ್ತಾರೆ.

ಶಿಕ್ಷಣ ತರಗತಿಯ ಆರಂಭೋತ್ಸವ ೬-೭-೪೩ನೆಯ ಮಂಗಳವಾರ ಸಂಜೆ ಮಹಾರಾಜಾ ಕಾಲೇಜಿನಲ್ಲಿ ನಡೆಯಿತು. ಶಿಕ್ಷಣಶಾಸ್ತ್ರ ಅಧ್ಯಾಪಕರಾದ ಡಾ|| ಎಂ. ಸಿದ್ದಲಿಂಗಯ್ಯನವರು ತರಗತಿಯ ಆರಂಭೋತ್ಸವ ನಡಸಿ ಭಾಷಣ ಮಾಡಿದರು.

**ಕನ್ನಡ ಚರ್ಚೆ**

ಮಹಾರಾಜಾ ಕಾಲೇಜು ಕರ್ಣಾಟಕ ಸಂಘದ ಆಶ್ರಯದಲ್ಲಿ 'ದೇವರು ನಮಗೆ ಈಗ[illegible]ಕಾಗಿಲ್ಲ' ಎಂಬ ವಿಷಯದ ಮೇಲೆ ಚರ್ಚೆ ನಡೆಯಿತು. ಶ್ರೀ. ಕೆ. ವೆಂಕಟರಾಮಪ್ಪನವರು ಅಧ್ಯಕ್ಷತೆ ವಹಿಸಿದ್ದರು.

## ಮಲೆನಾಡಿನಲ್ಲಿ ಸಾಹಿತ್ಯ ಪ್ರಚಾರ

ಶರಣಸಾಹಿತ್ಯ ಮತ್ತು ಸ್ವತಂತ್ರ ಕರ್ಣಾಟಕ ಪತ್ರಿಕೆಗಳ ಸಂಪಾದಕರಾದ ಕೀರ್ತನಕೇಸರಿ ವೇ|| ಬಿ. ಶಿವಮೂರ್ತಿ ಶಾಸ್ತ್ರಿಗಳು ಕಾರ್ಯಗೌರವದಿಂದ ೨೫-೬-೪೩ರಿಂದ ೫-೭-೪೩ರ ವರೆಗೆ ಶಿವಮೊಗ್ಗಾ ಜಿಲ್ಲೆಯಲ್ಲಿ ಸಂಚರಿಸಿ ಹಲವು ಕಡೆ ಭಾಷಣ ಮಾಡಿ ಸಾಹಿತ್ಯ ಪ್ರಚಾರ ಮಾಡಿದರು.

ಅಲ್ಲದೆ ವೇ|| ಬಿ. ಶಿವಮೂರ್ತಿ ಶಾಸ್ತ್ರಿಗಳು ಕೆಳದಿ, ಇಕ್ಕೇರಿ, ಬಿದನೂರು, ಉಡುತಡಿ, ಬಳ್ಳಿಗಾವೆ, ಜಂಬೂರು, ತಾಳಗುಂದ ಮೊದಲಾದ ಐತಿಹಾಸಿಕ ಸ್ಥಳಗಳನ್ನು ಸಂದರ್ಶಿಸಿ ಅಲ್ಲಿನ ಪ್ರಾಚೀನ ಚರಿತ್ರೆಯನ್ನು ಸಂಗ್ರಹಿಸಿ ತೆರಳಿದರು. ಶಾಸ್ತ್ರಿಗಳ ಈ ಪ್ರವಾಸದಿಂದ ಮಲೆನಾಡಿನ ಜನರಲ್ಲಿ ಸಾಹಿತ್ಯಾಭಿರುಚಿ ಹೆಚ್ಚಿತೆಂದು ಹೇಳಬಹುದಾಗಿದೆ.

**ಮಿತ್ರ ಸಂಘ, ಬೆಂಗಳೂರು**

ಮಿತ್ರಸಂಘದ ಆಶ್ರಯದಲ್ಲಿ ೧೦-೭-೪೩ನೆಯ ಶನಿವಾರ ವಿಶ್ವಕರ್ಣಾಟಕದ ಉಪಸಂಪಾದಕರಾದ ಶ್ರೀ. ತ.ರಾ. ಸುಬ್ಬರಾಯರು ಶ್ರೀ. ಕೆ.ಟಿ. ರಾಮಾಚಾರ್ಯರ ಅಧ್ಯಕ್ಷತೆಯಲ್ಲಿ "ಸಾರ್ಥಕ ಸಾಹಿತ್ಯ" ಎಂಬ ವಿಷಯದ ಮೇಲೆ ಭಾಷಣ ಮಾಡಿದರು.

"ಕವಿ, ರಾಜವನದ ಕೋಗಿಲೆ ಮಾತ್ರ ಆಗಬಾರದು. ಕಬ್ಬನ್ ಪಾರ್ಕ್ ರೇಡಿಯೋ ಆಗಬೇಕು. ಕವಿ ಕಾಣಬೇಕಾದುದು ಸತ್ಯವನ್ನು. ಕವಿ ಕಾಣಬೇಕಾದ ಸತ್ಯ ವ್ಯಕ್ತಿಗಳ ಮಟ್ಟವನ್ನು ಮೀರಿರಬೇಕು. ಅದು ಬರಿಯ ಜೀವನದ ಪ್ರತಿಬಿಂಬವಲ್ಲ. ಕವಿ ಕಾಣುವ ಪ್ರೇಮ ವಿಶ್ವಪ್ರೇಮ. ವ್ಯಕ್ತಿಯ ಸುತ್ತಲೂ ಒಂದು ಚಕ್ರವ್ಯೂಹವನ್ನು ಕಟ್ಟಿದರೆ ಅದು ಪ್ರೇಮವಾಗಲಾರದು. ಆದರೆ ಕೇವಲ ಲೋಭವಾದೀತು. ಕವಿ ಕಾಣಬೇಕಾದ ಸೌಂದರ್ಯ ಆಂತರಿಕ ಸೌಂದರ್ಯ.

ಮಹಾತ್ಮರೊಮ್ಮೆ 'ಬದುಕಿಗಿಂತ ದೊಡ್ಡ ಕಲೆ ಇದೆಯೇ' ಎಂದು ಕೇಳಿದ್ದಾರೆ. ಹುಚ್ಚಾಪಟ್ಟೆ ಕಲ್ಲುಬೀರುವವರಿಗೆಲ್ಲ ಗುರಿ ಸಿಕ್ಕದು. ತನ್ನ ದೇಶದ ಎದೆ ಹೇಗೆ ಮಿಡಿಯುತ್ತಿದೆಯೋ ಅಂತೆಯೇ, ಕವಿ ಹೃದಯದ ವೀಣೆಯೂ ಮಿಡಿದರೆ ಅಂದು ಹುಟ್ಟಿದ ಸಾಹಿತ್ಯ ಸಾರ್ಥಕವಾದೀತು. ಬೃಹನ್ನಳೆಯಾದ ಪಾರ್ಥನನ್ನು ಗಾಂಡೀವದ ನೆನಪು ಯುದ್ಧಭೂಮಿಗೆ ಎಳೆತಂದಂತೆ, ನಮ್ಮ ನಾಡಿನ ಬಡತನವು (ಎಲ್ಲದರಲ್ಲಿಯೂ) ಸಾಹಿತಿಯ ಮೂಲಕ ಜನಕ್ಕೆ ತನ್ನ ಅಂತಶ್ಶಕ್ತಿಯ ನೆನಪನ್ನಿತ್ತು, ಮುಂದಿನ ನವೋದಯಕ್ಕೆ ನೆರವಾದೀತಲ್ಲವೆ?"

೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

## ರಾಜಕಾರ್ಯಪ್ರವೀಣ ಎನ್. ಎಸ್. ಸುಬ್ಬರಾಯರು

(೧೯೩ನೆಯ ಪುಟದಿಂದ)

ತೀರ್ಮಾನಗಳೆಲ್ಲಾ, ಹಿತೋಪದೇಶದಲ್ಲಿ ಉಕ್ತವಾಗಿರುವ ಕುರುಡರ ತೀರ್ಮಾನಗಳಂತೆ, ಅಂಧಕಾರಮಯವಾದವು. ಒಬ್ಬ ಕುರುಡನಿಗೆ ಆನೆಯು ಕಂಬದಂತಿದೆಯೆಂದು ತೋರಿತು; ಮತ್ತೊಬ್ಬ ಕುರುಡನಿಗೆ ಅದು ಗೋಡೆಯೋಪಾದಿಯಲ್ಲಿತ್ತು.

ಬಿ. ಎ. ಪರೀಕ್ಷೆಯಲ್ಲಿ ತೇರ್ಗಡೆಯಾದಮೇಲೆ, ನಾನು ಎಂ. ಎ. ಪರೀಕ್ಷೆಗೆ ಓದಲು ಅರ್ಥಶಾಸ್ತ್ರದ ತರಗತಿಯನ್ನು ಮೊದಲು ಸೇರಿ, ಆಮೇಲೆ ಇಂಗ್ಲಿಷ್ ಸಾಹಿತ್ಯದ ತರಗತಿಯನ್ನು ಸೇರಿದೆನು. ಆದಷ್ಟು ಕ್ಷಿಪ್ರದಲ್ಲಿ ನನ್ನ ಹಿಟ್ಟನ್ನು ನಾನು ಸಂಪಾದಿಸಬೇಕಾಗಿದ್ದದ್ದರಿಂದ, ಒಂದು ಪಾಠವನ್ನು ಬಿಟ್ಟು ಮತ್ತೊಂದನ್ನು ತೆಗೆದುಕೊಂಡೆನು. ಶ್ರೀಮಾನ್ ಸುಬ್ಬರಾಯರಿಗೆ ಇದರಿಂದ ಸ್ವಲ್ಪ ವ್ಯಥೆಯಾಯಿತು. ಈ ವ್ಯಥೆಯಿಂದಲೋ ಅಥವಾ ಕೆಲಸಮಾಡಿದ ಆಯಾಸದಿಂದಲೋ ಒಂದು ದಿನ ಒಂದು ಕಠಿಣವಾದ ಮಾತನ್ನು ಹೇಳಿದರು. "ನೀನು ನನ್ನ ಕಾಲವನ್ನು ವ್ಯರ್ಥಮಾಡುತ್ತಿದ್ದೀಯೆ" ಎನ್ನಲು, ನಾನು ಇನ್ನು ಮುಂದೆ ಹಾಗೆ ಮಾಡುವುದಿಲ್ಲವೆಂದು, ಕೋಪದಿಂದ ಮರು ಮಾತಾಡಿ, ಪುನಃ ಅವರನ್ನು ನೋಡಲು ಹೋಗಲಿಲ್ಲ. ಆದರೆ ಅವರಿಗೆ ನನ್ನಲ್ಲಿ ಹೆಚ್ಚು ಪ್ರೀತಿ. ನಾನು ಸಾಹಿತ್ಯದ ತರಗತಿಯಲ್ಲಿದ್ದಾಗ, ಒಂದು ದಿನ ಅವರಿಂದ ನನಗೆ ಒಂದು ಚೀಟಿ ಬಂತು. ತಮ್ಮನ್ನು ಬಂದು ಕಾಣಬೇಕೆಂದು ಅವರು ಬರೆದಿದ್ದರು. ಆ ಚೀಟಿಯ ಮೇಲೆಯೇ "ನನಗೆ ತಮ್ಮನ್ನು ಕಾಣಲು ವಿರಾಮವಿಲ್ಲ" ಎಂದು ಒರಟು ಮಾತು ಬರೆದು ಕಳುಹಿಸಿದೆನು. ಇದಾದ ೨-೩ ವಾರಗಳಲ್ಲಿ, ನಾನು ಕಾಲೇಜಿನ ಮಹಡಿಯನ್ನು ಏರಿ ಹೋಗುತ್ತಿದ್ದಾಗ, ಅವರು ಎದುರಿಗೆ ಬಂದು ನನ್ನನ್ನು ಕುರಿತು "ನಾನು ಪ್ರಿನ್ಸಿಪಾಲ್ ಆದ ಮಾತ್ರಕ್ಕೆ ನಾನು ಮನುಷ್ಯನಲ್ಲವೇ? (Am I not human, though I am the Principal?) ನನ್ನ ಕುಂದು ಕೊರತೆಗಳನ್ನು ನನ್ನ ವಿದ್ಯಾರ್ಥಿಗಳು ಎಣಿಸಬಹುದೇ?" ಎಂದರು. ಅವರಲ್ಲಿ ಭಕ್ತಿ ಮತ್ತು ವಿಶ್ವಾಸವಿದ್ದ ನನಗೆ ಬಹಳ ವ್ಯಸನವಾಯಿತು. "ನಾನು ಅಪರಾಧಿ, ತಾವಲ್ಲ" ಎಂದು ಉತ್ತರ ಕೊಟ್ಟೆನು.

ನಾನು ಎಂ. ಎ. ಪರೀಕ್ಷೆಯಲ್ಲಿ ತೇರ್ಗಡೆಯಾದ ಮೇಲೆ, ಕಾಲೇಜನ್ನು ಬಿಡುವಾಗ, ಅವರನ್ನು ಹೋಗಿ ಕಂಡೆನು. ಸಾಯಂಕಾಲ ೫ರಿಂದ ೭॥ ಗಂಟೆಯ ವರೆಗೆ, ಕಾಲೇಜಿನ ಮಹಡಿಯ ವರಾಂಡದಲ್ಲಿ, ನನ್ನೊಡನೆ ಸುತ್ತಾಡುತ್ತಾ ಕುಶಲ ಪ್ರಶ್ನೆ ಬೆಳಸಿದರು, ಅನೇಕ ಹಿತೋಕ್ತಿಗಳನ್ನು ಹೇಳಿದರು. ಕೊನೆಯಲ್ಲಿ ಅವರು ಹೇಳಿದ ಪ್ರಿಯ ವಚನವನ್ನು ನಾನು ಎಂದಿಗೂ ಮರೆಯಲಾರೆ: "ನೀನೂ ನನ್ನಂತೆಯೇ ಮುಂಗೋಪಿ, ನಾನು ಬಹಳ ನಿಷ್ಠುರಕ್ಕೊಳಗಾಗಿದೇನೆ. ಕೋಪ ಬಂದಾಗ ಅದನ್ನು ತಡೆಯಬೇಕು."

ಪ್ರೌಢ ಪಾಠವನ್ನು ಹೇಳುವುದರಲ್ಲಿ ಹೇಗೆ ದಕ್ಷರೋ ಹಾಗೆಯೇ ರಾಜಕಾರ್ಯದಲ್ಲೂ ಅವರು ದಕ್ಷರು. ವಿದ್ಯಾಭ್ಯಾಸದ ಇಲಾಖೆಯ ಮುಖ್ಯಾಧಿಪತಿಗಳಾಗಿದ್ದಾಗಲೂ, ವಿಶ್ವವಿದ್ಯಾನಿಲಯದ ಸ್ಥಾನಪತಿಗಳಾಗಿದ್ದಾಗಲೂ ಅವರ ಅಸಾಧಾರಣವಾದ ವ್ಯವಸ್ಥಾಪಕ ಶಕ್ತಿ ವ್ಯಕ್ತವಾಯಿತು. ಅವರು ಮಾಡಿದ ಅನೇಕ ಸುಧಾರಣೆಗಳನ್ನೂ, ಅವರು ನಿರ್ಮಿಸಿದ ವಿದ್ಯಾ ಸಂಸ್ಥೆಗಳನ್ನೂ ಇಲ್ಲಿ ವರ್ಣಿಸಲು ಸಾಧ್ಯವಿಲ್ಲ. ಅವರು ಮಾಡಿದ ಮಾರ್ಪಾಟುಗಳೆಲ್ಲಾ, ವಿದ್ಯಾವಂತರಾದ ಯುವಕರು ಸಾಧುವಾದ ಜೀವನ ಮಾರ್ಗವನ್ನು ಪಡೆಯಲು ಸಹಾಯಕವಾಗಿವೆ.

ಅವರು ಮೃತರಾಗುವುದಕ್ಕೆ ಒಂದು ವಾರದ ಹಿಂದೆ ಅವರನ್ನು ಸಂದರ್ಶಿಸುವ ಯೋಗ ನನಗಿತ್ತು. ಅವರ ಕೇವಲ ಮಿತ್ರರಾದ ಶ್ರೀಮಾನ್ ಎಸ್. ವಿ. ರಂಗಣ್ಣನವರೂ, ನಾನೂ ಅವರನ್ನು ಕಾಣಲು ಹೋದೆವು. ನಾವು ಬರುತ್ತೇವೆಂದು ತಿಳಿದು, ಅವರು ಬಾಗಿಲಿನಲ್ಲಿಯೇ ನಿಂತು, ಎದುರು ನೋಡುತ್ತಿದ್ದರು. ನಾವು ಹೋದಾಗ ಬಹಳ ಪ್ರೀತಿಯಿಂದ ಬರಮಾಡಿಕೊಂಡು, ಟೀ ಮತ್ತು ಬಿಸ್ಕತ್ತುಗಳನ್ನು ಕೊಟ್ಟರು. ಅಲಹಾಬಾದಿನ ವಿಶ್ವವಿದ್ಯಾನಿಲಯದ ಕಾರ್ಯಕಲಾಪಗಳ ವಿಚಾರವಾಗಿಯೂ, ಇಲ್ಲಿಯ ವಿಶ್ವವಿದ್ಯಾನಿಲಯದ ವಿಚಾರವಾಗಿಯೂ, ಸುಮಾರು ಒಂದೂವರೆ ಗಂಟೆ ಕಾಲ ಮಾತ್ನಾಡುತ್ತಿದ್ದೆವು. "ಪ್ರಯಾಗಕ್ಕೆ, ನಾನು ಅಲ್ಲಿರುವಾಗಲೇ ಬನ್ನಿ; ನಿಮ್ಮ ಮನೆಯವರನ್ನೆಲ್ಲಾ ಕರೆದುಕೊಂಡು ಬನ್ನಿ. ಯಾತ್ರೆ ಮಾಡಿದಂತಾಗುತ್ತೆ" ಎಂದು ಆಹ್ವಾನವಿತ್ತರು. "ಅಗತ್ಯವಾಗಿ ಬರುತ್ತೇನೆ; ನನ್ನ ಗುರುಗಳು ಅಲ್ಲಿರುವಾಗ, ನಾನು ಎರಡು ಬಗೆಯಲ್ಲಿ ಯಾತ್ರೆ ಮಾಡಿದಂತಾಗುತ್ತೆ" ಎಂದು ನಾನು ಉತ್ತರ ಕೊಟ್ಟೆನು. ಅವರು ಇಷ್ಟು ಬೇಗ ಭೂಲೋಕದ ಪ್ರಯಾಗವನ್ನು ದಾಟಿ ಹೋಗುವರೆಂದು ನಾನು ಅರಿತಿರಲಿಲ್ಲ.

ವಿಶಾಲ ಹೃದಯರಾದ, ವಿಶಾಲ ಬುದ್ಧಿಯುಳ್ಳ ಜನರಿಗೆ ಸಲ್ಲತಕ್ಕದ್ದು, ಕೇವಲ ಕಿಷ್ಕಿಂಧ ಪ್ರಪಂಚವಲ್ಲ (not a Cribbed and confined World), ಕೇವಲ ಪ್ರಾಂತ ಸ್ವರ್ಗವಲ್ಲ (not a Provincial Paradise); ಅವರಿಗೆ ಸಲ್ಲತಕ್ಕದ್ದು, ವಿಶ್ವ ವಿಶಾಲವಾದ ಅತಿ ದಿವ್ಯ ತೇಜೋಮಯವಾದ ಪ್ರಪಂಚ (an ampler ether and diviner air). ಅಂಥವರಿಗೆ ಅಪೇಕ್ಷಿತವಾದ, ದೇವರು ಕರುಣಿಸಬಹುದಾದ, ಸದ್ಗತಿ 'ಬೃಹದಾರಣ್ಯಕ'ದಲ್ಲಿ ಉಕ್ತವಾಗಿದೆ:

ಅಸತೋ ಮಾ ಸದ್ಗಮಯ।
ತಮಸೋ ಮಾ ಜ್ಯೋತಿರ್ಗಮಯ।
ಮೃತ್ಯೋರ್ಮಾ ಅಮೃತಂ ಗಮಯ!

— ಕೆ. ಅನಂತರಾಮಯ್ಯ
(ಅಧ್ಯಾಪಕರು, ಸೆಂಟ್ರಲ್ ಕಾಲೇಜು, ಬೆಂಗಳೂರು.)

೨

ಒಟ್ಟು ಭರತಖಂಡದಲ್ಲೇ ಪ್ರಖ್ಯಾತರಾದ ಮೇಧಾವಿ ಶ್ರೇಷ್ಠರಲ್ಲೊಬ್ಬರೆನಿಸಿದ್ದ ರಾಜಕಾರ್ಯಪ್ರವೀಣ ಶ್ರೀಮಾನ್ ಎನ್. ಎಸ್. ಸುಬ್ಬರಾವ್, ಎಂ.ಎ., ಬಾರ್-ಅಟ್-ಲಾ., ಅವರು ಜೂನ್ ತಿಂಗಳು ೨೯ನೆಯ ತಾರೀಖು ರಾತ್ರಿ ಕಾಲವಶರಾದ ಕಾರಣ, ನಮ್ಮೆಲ್ಲರಿಗೂ ಅತ್ಯಂತ ವಿಷಾದವುಂಟಾಗಿದೆ. ಅವರ ಕುಟುಂಬದವರ ದುಃಖಕ್ಕಂತೂ ಪಾರವೇ ಇಲ್ಲ. ಅವರ ಅಕಾಲಮರಣದಿಂದ ಭಾರತೀಯರ ಮತ್ತು ವಿದೇಶೀಯರ ಪ್ರೀತಿಗೌರವಗಳನ್ನು ಗಳಿಸಿದ್ದ ಪ್ರಭಾವಶಾಲಿಗಳಾದ ಕನ್ನಡಿಗರೊಬ್ಬರು ಕಣ್ಮರೆಯಾದಂತಾಯಿತು.

ದಿವಂಗತರು ವಿದ್ಯಾರ್ಥಿದೆಶೆಯಲ್ಲಿದ್ದಾಗ ಎಲ್ಲ ಪರೀಕ್ಷೆಗಳಲ್ಲಿಯೂ ಪ್ರಥಮಸ್ಥಾನವನ್ನು ಪಡೆದು ಉತ್ತೀರ್ಣರಾದರು. ವಿಲಾಯಿತಿಗೆ ಹೋಗಿ ತಮ್ಮ ವ್ಯಾಸಂಗದಿಂದಲೂ ಬುದ್ಧಿಶಕ್ತಿಯಿಂದಲೂ ಅಲ್ಲಿಯವರನ್ನು ಕೂಡ ಬೆರಗುಮಾಡಿ, ದೊಡ್ಡ ದೊಡ್ಡ ಪರೀಕ್ಷೆಗಳಲ್ಲಿ ಅತ್ಯಂತ ಉತ್ತಮ ವರ್ಗದಲ್ಲಿ ತೇರ್ಗಡೆ ಹೊಂದಿ, ಅರ್ಥಶಾಸ್ತ್ರ ಪಾರಂಗತರೆಂಬ ಖ್ಯಾತಿಯನ್ನು ಗಳಿಸಿ,ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಅರ್ಥಶಾಸ್ತ್ರದ ಮತ್ತು ಇಂಗ್ಲಿಷ್ ಭಾಷೆಯ ಅಧ್ಯಾಪಕರಾಗಿ ('ಪ್ರೊಫೆಸರ್' ಆಗಿ) ನೇಮಕವಾದರು: ತಮ್ಮ ಉದ್ದಾಮ ಪಾಂಡಿತ್ಯ ಪ್ರತಿಭೆಗಳ ಪ್ರಭಾವದಿಂದಲೂ, ತಮ್ಮ ಬೋಧನಾ ಸಾಮರ್ಥ್ಯದಿಂದಲೂ ವಿದ್ಯಾರ್ಥಿಗಳಿಗೆ ಅಚ್ಚುಮೆಚ್ಚಾದರು. ಆಗ್ಗೆ ಅವರಿಗೆ ಇಪ್ಪತ್ತೈದೇ ವರ್ಷ ವಯಸ್ಸು. ಆ ಬಳಿಕ ಒಂಬತ್ತು ವರ್ಷಗಳಿಗೇ ಅದೇ ಕಾಲೇಜಿನ 'ಪ್ರಿನ್ಸಿಪಾಲ್' ಹುದ್ದೆಯನ್ನಲಂಕರಿಸಿ ೧೯೨೭ನೆಯ ಇಸವಿಯ ವರೆಗೂ ಆ ಹುದ್ದೆಯಲ್ಲಿದ್ದು ವಿದ್ಯಾಭ್ಯಾಸದ ಇಲಾಖೆಯ ಮುಖ್ಯಾಧಿಕಾರಿಗಳಾಗಿ ನೇಮಕವಾದರು. ಅವರಿಗೆ ಕನ್ನಡದ ಮೇಲಿದ್ದ ಮಮತೆಯ ಪರಿಣಾಮವಾಗಿ ಸಂಸ್ಥಾನದ ಹೈಸ್ಕೂಲುಗಳಲ್ಲಿ ಭಾಷೇತರ ವಿಷಯಗಳನ್ನು ಕನ್ನಡದಲ್ಲೇ ಬೋಧಿಸುವ ವ್ಯವಸ್ಥೆ ಆಚರಣೆಗೆ ಬಂದು ಪರಮೋಪಕಾರವಾಯಿತು. ಅವರು ನಮ್ಮ ವಿಶ್ವವಿದ್ಯಾನಿಲಯದ 'ವೈಸ್‌ಛಾನ್ಸೆಲರ್' ಹುದ್ದೆಯಲ್ಲಿದ್ದಾಗ ಕನ್ನಡದಲ್ಲಿ ಪ್ರಚಾರ ಗ್ರಂಥಮಾಲೆಯ ಪುಸ್ತಕಗಳ ಪ್ರಕಟಣೆಯೇ ಮುಂತಾದ ವ್ಯವಸ್ಥೆಗಳು ನಡೆದು ಕನ್ನಡಿಗರಿಗೆ ಉಪಕಾರವಾಯಿತು. ಮುಂಬಯಿ ನಗರದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಅವರು ಚುನಾಯಿತರಾದುದೂ, ಅಖಿಲ ಭಾರತೀಯ ವಿಶ್ವವಿದ್ಯಾನಿಲಯಗಳ ಸಭೆ ಮುಂತಾದುವುಗಳ ಕಾರ್ಯಕಲಾಪಗಳಲ್ಲಿ

ವಿಚಕ್ಷಣೆಯಿಂದ ಅವರು ಭಾಗವಹಿಸಿದುದೂ, ತಮ್ಮ ಜೊತೆಯವರ ಪ್ರೀತಿ ಗೌರವಗಳಿಗೆ ಪಾತ್ರರಾಗಿ ಅವರು ಪ್ರಸಿದ್ಧರಾದುದೂ ಮೈಸೂರು ಸಂಸ್ಥಾನದವರೆಲ್ಲರೂ ಹೆಮ್ಮೆಪಡಬೇಕಾದ ವಿಚಾರಗಳೇ ಸರಿ. ಅವರ ಅಕಾಲ ಮರಣದಿಂದ ನಮ್ಮ ನಾಡಿಗೆ ದೊಡ್ಡ ನಷ್ಟವುಂಟಾಗಿದೆ. ಇಷ್ಟು ದೊಡ್ಡವರನ್ನು ಕಳೆದುಕೊಳ್ಳಬೇಕಾಯಿತಲ್ಲಾ ಎಂದು ಇತರರಂತೆಯೇ ನಾನೂ ವಿಷಾದಪಡುತ್ತಿದ್ದೇನೆ.

ವಿದ್ಯಾರ್ಥಿಗಳಲ್ಲಿ ಶ್ರೀಮಾನ್ ಸುಬ್ಬರಾಯರವರಿಗೆ ಬಹಳ ಪ್ರೀತಿ. ಒಂದು ಸಲ ತಲೆಯನ್ನು ತಗ್ಗಿಸಿಕೊಂಡು ನಡೆಯುತ್ತಿದ್ದ ಒಬ್ಬ ವಿದ್ಯಾರ್ಥಿಯನ್ನು ಕಂಡು ಮಾರನೆಯ ದಿನ ಅತನನ್ನು ತಮ್ಮಲ್ಲಿಗೆ ಬರಮಾಡಿಕೊಂಡು, "ತಲೆಯನ್ನೆತ್ತಿಕೊಂಡು, ಎದೆಯನ್ನು ಮುಂದಕ್ಕೆ ಚಾಚಿಕೊಂಡು ದಿಟ್ಟತನದಿಂದ ನಡೆಯಬೇಕು. ಇದರಿಂದ ಆರೋಗ್ಯಕ್ಕೂ ಸಾಧಕ. ನಮ್ಮ ದೇಶದ ವಿದ್ಯಾರ್ಥಿಗಳೇ ನಮ್ಮ ಭಾಗ್ಯ" ಎಂದು ಆದರದಿಂದ ಬುದ್ಧಿ ಹೇಳಿದರಂತೆ. ನಮ್ಮ ದೇಶದ ವಿದ್ಯಾರ್ಥಿಗಳ ಯೋಗಕ್ಷೇಮದಲ್ಲಿ ಅವರಿಗೆ ತೀವ್ರಾಸಕ್ತಿ, ಬಡವರಾದ ವಿದ್ಯಾರ್ಥಿಗಳಿಗೆ ಸಹಾಯ ಮಾಡುವುದರಲ್ಲಿ ಅವರಿಗೆ ಪರಮಾದರ. ಇದಕ್ಕೆ ಲೆಕ್ಕವಿಲ್ಲದಷ್ಟು ನಿದರ್ಶನಗಳಿವೆ. ಇಂದು ಅನೇಕರ ಹೃದಯಗಳಲ್ಲಿ ಕೃತಜ್ಞತೆಯ ನಂದಾದೀಪಗಳು ಬೆಳಗುತ್ತಿವೆ. ಒಂದು ಸಲ ಒಬ್ಬ ವಿದ್ಯಾರ್ಥಿ ಅವರ ಬಳಿಗೆ ಹೋಗಿ "ತಮ್ಮ ಮನೆಯಲ್ಲಿ ಒಂದು 'ವಾರ' ಕೊಟ್ಟರೆ ಉಪಕಾರವಾಗುತ್ತದೆ. ದಯವಿಟ್ಟು ಕೊಡಬೇಕು. ಈಗ ಮೂರು 'ವಾರ'ಗಳು ಸಿಕ್ಕಿವೆ. ತಾವೂ ಒಂದು 'ವಾರ' ಕೊಡಬೇಕು" ಎಂದ. ರಾಯರು "ಹೀಗೆ 'ವಾರ' ಮಾಡಿಕೊಂಡರೆ, ಇದರಿಂದ ವ್ಯಾಸಂಗಕ್ಕೆ ತೊಂದರೆಯಾಗುವುದಿಲ್ಲವೆ ?" ಎಂದು ಕೇಳಿದರು. ಆ ವಿದ್ಯಾರ್ಥಿ "ಬಡವರಾಗಿ ಹುಟ್ಟುವುದೇ ತೊಂದರೆಪಡುವುದಕ್ಕೆ; ದಯವಿಟ್ಟು ಒಂದು 'ವಾರ' ಕೊಡಬೇಕು" ಎಂದು ಉತ್ತರ ಹೇಳಿದ. ರಾಯರು "ಏಳು 'ವಾರ'ಗಳೂ ಒಂದೇ ಕಡೆ ದೊರೆತರೆ ವ್ಯಾಸಂಗಕ್ಕೆ ಅನುಕೂಲವಲ್ಲವೆ?" ಎಂದು ಪ್ರಶ್ನೆ ಮಾಡಿದರು. ಆ ವಿದ್ಯಾರ್ಥಿಗೆ ಆಶ್ರಯಕೊಟ್ಟು ಆದರಿಸಿದರು. ಪುಸ್ತಕಗಳನ್ನು ಕೊಳ್ಳುವುದಕ್ಕಾಗಲಿ, ಬಟ್ಟೆಗಳನ್ನು ಕೊಳ್ಳುವುದಕ್ಕಾಗಲಿ, ಪರೀಕ್ಷೆಗೆ ಹಣವನ್ನು ಕಟ್ಟುವುದೇ ಮುಂತಾದ ವೆಚ್ಚಗಳಿಗಾಗಲಿ ಹಣವಿಲ್ಲದ ವಿದ್ಯಾರ್ಥಿಗಳಿಗೆ ಅವರು ಸಂತೋಷದಿಂದ ಸಹಾಯಮಾಡುತ್ತಿದ್ದರು. ನನಗೆ ಅವರ ಪರಿಚಯ ಲಾಭವಾದ ಸನ್ನಿವೇಶವನ್ನು ಕೂಡ ಇದೇ ಸಂದರ್ಭದಲ್ಲಿ ಅತ್ಯಂತ ಕೃತಜ್ಞತೆಯಿಂದ ಸೂಚಿಸಬಹುದಾಗಿದೆ. ನಾನು ಸೆಂಟ್ರಲ್ ಕಾಲೇಜಿನಲ್ಲಿ ಜೂನಿಯರ್ ಬಿ. ಎ. ತರಗತಿಗೆ ಸೇರಿದಾಗ ನಮ್ಮ ಹಿರಿಯರು ಆ ಒಂದು ವರ್ಷ ಕಾಲ ಎಂದಿನಂತೆ ಸಹಾಯ ಮಾಡಲು ಅನುಕೂಲವಾಗಲಿಲ್ಲ. ಹಾಗೆ ತಾತ್ಕಾಲಿಕವಾಗಿ ಒದಗಿದ ತೊಂದರೆಯ ದೆಸೆಯಿಂದ ಪಠ್ಯ ಪುಸ್ತಕಗಳಲ್ಲಿ ಎರಡನ್ನು ಕೊಳ್ಳುವುದು ನನಗೆ ಅಸಾಧ್ಯವಾಯಿತು. ನಾನು ಧನಿಕರೊಬ್ಬರ ಸಹಾಯವನ್ನು ಬೇಡಿದೆ. ನನ್ನ ದುರದೃಷ್ಟದಿಂದ ಅವರು "ನೀನು 'ಟೆಕ್ಸ್ಟ್ ಬುಕ್' ಯಾಕೆ 'ಪರ್ಚೇಸ್' ಮಾಡಬೇಕು ? 'ಕಾಪಿ' ಮಾಡಿಕೊಂಡು ಓದಿಬಿಟ್ಟರಾಯಿತು." ಎಂದರು. ನಾನು "ಅಗತ್ಯವಾಗಿ 'ಕಾಪಿ' ಮಾಡಿಕೊಂಡೇನು. ಅಷ್ಟು ದಿನ ಅವೆರಡನ್ನೂ ಎರವಲಾಗಿ ಕೊಟ್ಟರಬಲ್ಲ ಮಹರಾಯನನ್ನೆಲ್ಲಿ ತರಲಿ ?" ಎಂದು ಕೇಳಿದೆ. ಅವಿಧೇಯನಾದ ತಲೆಹರಟೆಯವನೆಂಬ ಅರ್ಥದ ಇಂಗ್ಲಿಷ್ ಮಾತುಗಳನ್ನು ಕೇಳಿ ಹೊರಟು ಬಂದೆ. ನಾನು ಸಹಾಯವನ್ನು ಬೇಡಿದ ಮತ್ತೊಂದು ಕಡೆಯೂ ಸಹಾಯ ದೊರೆಯಲಿಲ್ಲ. ಶ್ರೀಮಾನ್ ಸುಬ್ಬರಾಯರವರ ಔದಾರ್ಯದ ವಿಚಾರವನ್ನು ಕೇಳಿದ್ದ ಕಾರಣ, ಅವೆರಡು ಪುಸ್ತಕಗಳನ್ನೂ ಕೊಳ್ಳಲು ನನಗೆ ನಾಲ್ಕೂಮುಕ್ಕಾಲು ರೂಪಾಯಿಗಳು ಬೇಕಾಗಿದ್ದ ವಿಷಯವನ್ನು ಸೂಚಿಸಿ ನನಗೆ ಹಣವನ್ನು ಕಳುಹಿಸಿ ಉಪಕಾರಮಾಡಬೇಕೆಂದು ಪ್ರಾರ್ಥಿಸಿ ಕಾಗದ ಬರೆದೆ. ಎರಡು ಮೂರು ದಿನಗಳದ ಮೇಲೆ ಐದು ರೂಪಾಯಿಗಳಿಗೆ ಅವರು 'ಮನಿ ಆರ್ಡರ್' ಕಳುಹಿಸಿದರು. ಅಲ್ಲದೆ, ಆ ವರ್ಷದ ವ್ಯಾಸಂಗದಲ್ಲಿ ಮುಂದೆ ಉಳಿದಿದ್ದ ಏಳು ತಿಂಗಳ ಕಾಲ ಪ್ರತಿ ತಿಂಗಳೂ ಐದು ರೂಪಾಯಿಗಳನ್ನು ಬೆಂಗಳೂರಿನ ತಮ್ಮ ಸನ್ಮಿತ್ರರೊಬ್ಬರ ಬಳಿಗೆ ನನಗಾಗಿ ಕಳುಹಿಸುವುದಾಗಿ ತಿಳಿಸಿ ಪ್ರೋತ್ಸಾಹಿಸಿ ವಿಶ್ವಾಸದಿಂದ ಪತ್ರ ಬರೆದರು. ಅವರ ಸನ್ಮಿತ್ರರೂ, ನನ್ನ ಮಾನ್ಯ ಹಿತಚಿಂತಕರಲ್ಲೊಬ್ಬರೂ ಆದ ಆ ಮಹಾಶಯರು ಏಳು ತಿಂಗಳುಗಳ ಕಾಲ ಆ ರೀತಿ ಅವರಿಂದ ಬಂದ ಹಣವನ್ನು ನನಗೆ ಕೊಡುತ್ತಿದ್ದುದಲ್ಲದೆ ಆಗಾಗ ಭಾಷಾಂತರದ ಕೆಲಸವನ್ನು ಕೊಟ್ಟು ತಾವೂ ಉದಾರವಾಗಿ ಆ ಅವಧಿಯಲ್ಲಿ ನನಗೆ ಧನ ಸಹಾಯ ಮಾಡಿ ಉಪಕರಿಸಿದರು. ಶ್ರೀಮಾನ್ ಸುಬ್ಬರಾಯರವರಲ್ಲಿ ಆಗ್ಗೆ ನನ್ನ ಕೃತಜ್ಞತೆಯನ್ನು ಸೂಚಿಸಿ ನಾನು ಬೆಂಗಳೂರು ಕಾಲೇಜು ವಿದ್ಯಾರ್ಥಿಯಾಗಿದ್ದೂ ನನಗೆ ಅವರು ಸಹಾಯ ಮಾಡಿದುದಕ್ಕಾಗಿ ನಾನು ಬಹಳ ಋಣಿಯೆಂದು ಬಿನ್ನೈಸಿದಾಗ, ಅವರು ಸ್ವಲ್ಪ ನಕ್ಕು "Is Bangalore in Africa ?" ಎಂದು ಕೇಳಿದರು. ಮುಂದಿನ ವರ್ಷ ನಾನು ಅವರ ಸಹಾಯವನ್ನು ಪ್ರಾರ್ಥಿಸಬೇಕಾದ ಅವಶ್ಯಕತೆಯಿರಲಿಲ್ಲ. ನನ್ನ ಬಿ. ಎ. ವ್ಯಾಸಂಗ ಪೂರೈಸಿದ ಮೇಲೊಂದು ದಿನ ಅವರು "ನಿಮಗೆ ನಾನು ಸೀನಿಯರ್ ಬಿ. ಎ. ಕ್ಲಾಸಿನಲ್ಲೂ ಸಹಾಯಮಾಡಬೇಕಾಗಿತ್ತು. ನನಗೂ ತೋರಲಿಲ್ಲ. ನೀವೂ ಬರಲಿಲ್ಲ" ಎಂದು ಅಕ್ಕರೆಯಿಂದ ಹೇಳಿದರು. ನಾನು ನನ್ನ ಕೃತಜ್ಞತೆಯನ್ನು ಮತ್ತೊಮ್ಮೆ ಸೂಚಿಸಿ, "ಸಹಾಯ ಪಡೆಯುವ ಅವಶ್ಯಕತೆ ಇದ್ದ ಪಕ್ಷಕ್ಕೆ ನಾನೇ ಬಂದು ಪ್ರಾರ್ಥಿಸುತ್ತಿದ್ದೆ. ತಮ್ಮ ಔದಾರ್ಯದ ಪ್ರಯೋಜನ ಮತ್ತಾರಿಗಾದರೂ ದೊರತೇ ಇರಬೇಕು. ತಮ್ಮಂಥ ಹಿರಿಯರಿರುವುದು ನಮ್ಮ ಪುಣ್ಯ" ಎಂದು ಬಿನ್ನಹಮಾಡಿದೆ. ನಮ್ಮ ವಿಶ್ವವಿದ್ಯಾನಿಲಯದಲ್ಲಿ ನಡೆದ ಗ್ರಂಥ ರಚನೆಯ ಸ್ಪರ್ಧೆಯಲ್ಲಿ ನನಗೆ ಏಳುನೂರು ರೂಪಾಯಿಗಳ ಬಹುಮಾನ ಬಂದಾಗ ಅವರು ನನ್ನನ್ನು ಅಭಿನಂದಿಸಿ ಆಡಿದ ಮಾತುಗಳು ನಾನು ಪ್ರೀತಿ ಗೌರವಗಳಿಂದ ಕಂಬನಿಯ ಕಾಣಿಕೆಯನ್ನೊಪ್ಪಿಸುವಂತೆ ಮಾಡಿದುವು. ಅವರು ನನ್ನಲ್ಲಿ ಪ್ರೀತ್ಯಾದರಗಳನ್ನು ತೋರಿಸಿ, ನಾನು ಬರೆದಿರುವ ಗ್ರಂಥಗಳ ವಿಚಾರವಾಗಿ ಆಡಿರುವ ಶ್ಲಾಘನೆಯ ಮಾತುಗಳಿಗಾಗಿ ನಾನು ಎಷ್ಟು ಕೃತಜ್ಞನಾಗಿದ್ದರೂ ಸಾಲದು.

ಔದಾರ್ಯವೂ, ಸೌಜನ್ಯವೂ, ಸರಳತೆಯೂ ಅವರ ಹುಟ್ಟು ಗುಣಗಳಾಗಿದ್ದುವು. ವಿದ್ಯಾಭ್ಯಾಸದ ಇಲಾಖೆಯ ಮುಖ್ಯಾಧಿಕಾರಿಗಳಾಗಿ ಒಂದು ಸಲ ಅವರು ಪರಸ್ಥಳಕ್ಕೆ ಪ್ರವಾಸ ಹೋಗಿದ್ದಾಗ್ಗೆ, ತಮಗೂ ತಮ್ಮ ಜೊತೆಯವರಿಗೂ ಊಟದ ಏರ್ಪಾಡಿನ ವೆಚ್ಚಕ್ಕೆಂದು ಗುಮಾಸ್ತರಿಗೆ ಹಣವನ್ನು ಕೊಟ್ಟಿದ್ದರು. ಬೆಂಗಳೂರಿಗೆ ಹಿಂತಿರುಗಿದ ಮೇಲೆ ಆ ಗುಮಾಸ್ತರು ವೆಚ್ಚವಾಗದೆ ಉಳಿದಿದ್ದ ಹಣವನ್ನು ಒಪ್ಪಿಸಿದಾಗ, "ಖರ್ಚಾಗಬೇಕೆಂತಲೇ ನಾನು ಹಣ ಕೊಟ್ಟದ್ದು. ನೀವುಗಳೆಲ್ಲ ಸುಖವಾಗಿ ಊಟಮಾಡದೆ ಮಿಗಿಸಬೇಕೆಂದಲ್ಲ" ಎಂದು ಹೇಳಿದರು. ಗುಮಾಸ್ತರು "ಅಜೀರ್ಣವಾಗಬಹುದೆಂದು ತೋರುವ ಮಟ್ಟಿಗೂ ಪುಷ್ಕಳವಾಗಿ ಮೃಷ್ಟಾನ್ನ ಭೋಜನ ಮಾಡಿದೆವು" ಎಂದರು. ಶ್ರೀಮಾನ್ ಸುಬ್ಬರಾಯರು, "ಈ ಹಣಕ್ಕೆ ಹಣ್ಣು ತರಿಸಿ ತಿಂದಿದ್ದರೆ ಅಜೀರ್ಣವಾಗುತ್ತಿರಲಿಲ್ಲವಲ್ಲಾ ! ಹಾಗೆ ಮಾಡಬಾರದಾಗಿತ್ತೆ ?" ಎಂದು ಹೇಳಿ ನಕ್ಕರು.

ಶ್ರೀಮಾನ್ ಸುಬ್ಬರಾಯರವರಿಗೆ ಸಂಗೀತ, ನಾಟಕ ಮುಂತಾದ ಲಲಿತ ಕಲೆಗಳಲ್ಲಿ ಪರಮಾದರ; ನಮ್ಮ ನಾಡು ನುಡಿಗಳ ಮೇಲೆ ಉಜ್ವಲ ಪ್ರೇಮ; ದೇಶಬಾಂಧವರಲ್ಲಿ ಮಮತೆ ವಾತ್ಸಲ್ಯಗಳು; ಅರ್ಥಶಾಸ್ತ್ರದಲ್ಲಿಯೂ, ಸಾಹಿತ್ಯದಲ್ಲಿಯೂ, ಅನನ್ಯ ಸುಲಭವಾದ ಉದ್ದಾಮ ಪಾಂಡಿತ್ಯ. ಇಷ್ಟು ದೊಡ್ಡವರಾದ ದೇಶಬಾಂಧವರನ್ನು ಕಳೆದುಕೊಂಡೆವಲ್ಲಾ – ಎಂಬ ದುಃಖ ಅವರ ಪರಿಚಯ ಲಾಭವನ್ನು ಪಡೆದಿದ್ದವರೆಲ್ಲರ ಹೃದಯವನ್ನೂ ಹಿಂಡುತ್ತಿರುವಲ್ಲಿ ಅವರ ಬಂಧುಮಿತ್ರರ ದುಃಖವೆಷ್ಟು ಗಾಢವೆಂಬುದನ್ನು ವರ್ಣಿಸಬೇಕಾದುದೇ ಇಲ್ಲ. ಸರ್ವಶಕ್ತನಾದ ಭಗವಂತನು ಅವರ ಆತ್ಮಕ್ಕೆ ಶಾಂತಿಯನ್ನೀಯಲೆಂದೂ, ಅವರ ಕುಟುಂಬದವರೆಲ್ಲರಿಗೂ ವಿಯೋಗದುಃಖವನ್ನು ಸಹಿಸಲು ಶಕ್ತಿಯನ್ನು ದಯಪಾಲಿಸಲೆಂದೂ ಪ್ರಾರ್ಥಿಸುತ್ತಿರುವವಲ್ಲಿ ನಾನೂ ಒಬ್ಬ.

— ಸಿ. ಕೆ. ವೆಂಕಟರಾಮಯ್ಯ

(ಸರ್ಕಾರದ ಕನ್ನಡ ಟ್ರಾನ್ಸ್‌ಲೇಟರು, ಬೆಂಗಳೂರು)

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧೨
ಬಿಡಿ ಪತ್ರಿಕೆ: ೬ ಕಾಸು



ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈ ಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೩೯
ಬೆಂಗಳೂರು: ಶುಕ್ರವಾರ, ಜುಲೈ ೨೩, ೧೯೪೩

ರಾಜಕಾರ್ಯಪ್ರವೀಣ

## ಶ್ರೀಮಾನ್ ಎನ್. ಎಸ್. ಸುಬ್ಬರಾಯರು

೩

ಸ್ವರ್ಗೀಯ ಶ್ರೀಮಾನ್ ಎನ್. ಎಸ್. ಸುಬ್ಬರಾಯರು, ಮುಂಬಯಿ ಪಟ್ಟಣದಲ್ಲಿ ನೆರವೇರಿದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನವನ್ನು ಸ್ವೀಕರಿಸಿದಾಗ್ಗೆ ಇವರಿಗೂ ನನಗೂ ತುಂಬಾ ಪರಿಚಯವಾಯಿತು.

ನಾನು ಶ್ರೀ ಯಾಜ್ಞವಲ್ಕ್ಯ ಮಹಾ ಮುನಿಗಳ ಚರಿತ್ರೆಯನ್ನು ಬರೆದು ಪ್ರಸಿದ್ಧ ಮಾಡಿದ ಬಳಿಕ ಮೈಸೂರಿಗೆ ಹೋದೆನು. ನಾನು ಯಾವ ಸ್ಥಳಕ್ಕೆ ಹೋದರೂ ಆಯಾ ಸ್ಥಳದ ಮಹಾ ಜನರನ್ನು ಕಂಡು, ಅವರೊಡನೆ ವಿಚಾರ ವಿನಿಮಯ ಮಾಡುವುದೊಂದು ಸಂಪ್ರದಾಯವನ್ನೇ ಇಟ್ಟುಕೊಂಡಿದ್ದೇನೆ. ಇದಕ್ಕನುಸರಿಸಿ, ಈ ಮಹನೀಯರನ್ನು ಕಾಣುವುದಕ್ಕಾಗಿ ಇವರ ಗೃಹಕ್ಕೆ ಹೋದೆನು.

ಮಹಾದ್ವಾರದ ಬಳಿಯಲ್ಲಿ ನಿಂತಿದ್ದ ಜವಾನನ ಕೈಯಲ್ಲಿ ಶ್ರೀ ಯಾಜ್ಞವಲ್ಕ್ಯರ ಚರಿತ್ರೆಯನ್ನು ಕೊಟ್ಟು, "ಇದನ್ನು ಒಳಗೆ ಹೋಗಿ ಸಾಹೇಬರ ಕೈಯಲ್ಲಿ ಕೊಡು" ಎಂದು ಹೇಳಿ ಕಳುಹಿಸಿದೆನು. ಅದೇ ಮೇರೆಗೆ ಅವನು ಮಾಡಲು, ಆ ಕ್ಷಣವೇ ಸುಬ್ಬರಾಯರು ಹೊರಗೆ ಬಂದು, "ಏನ್ರಿ, ರಾಜಪುರೋಹಿತರೇ, ಹೊರಗೆ ಏಕೆ ನಿಂತಿರಿ? ಹಾಗೆಯೇ ಒಳಗೆ ಬಂದುಬಿಡಬೇಕಾಗಿತ್ತು" ಎಂದು ಮಮತೆಯ ಮತ್ತು ವಾತ್ಸಲ್ಯದ ಧ್ವನಿಯಿಂದ ನುಡಿದರು. ತದನಂತರ ನಾವಿಬ್ಬರೂ ಒಳಗೆ ಹೋಗಿ ಕುಳಿತ ಬಳಿಕ ಶ್ರೀ ಯಾಜ್ಞವಲ್ಕ್ಯರ ಚರಿತ್ರೆಯನ್ನು ಕೈಯಲ್ಲಿ ತೆಗೆದುಕೊಂಡು "ಈ ಚರಿತ್ರೆಯನ್ನು ಬರೆದು, ಕನ್ನಡ ಭಾಷೆಗೆ ಒಳ್ಳೆಯ ಉಪಕಾರ ಮಾಡಿದಿರಿ" ಎಂದು ಹೇಳುತ್ತ ಹೇಳುತ್ತ, ಶ್ರೀ ಯಾಜ್ಞವಲ್ಕ್ಯರು ತಮ್ಮ ಪತ್ನಿಯಾದ ಮೈತ್ರೇಯಿ ದೇವಿಗೆ ಜ್ಞಾನೋಪದೇಶಮಾಡಿದ "ಸ ಹೋವಾಚ ನವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋಭವತ್ಯಾತ್ಮನಸ್ತು ಕಾಮಾಯ ಪತಿಃ ಪ್ರಿಯೋಭವತಿ!" (ಬೃಹದಾರಣ್ಯಕ ಅ. ೨, ಬ್ರಾ.. ೪) ಎಂದು ಪ್ರಾರಂಭಮಾಡಿ, ಈ ಉಪನಿಷದ್ಭಾಗವನ್ನು ಸಂಪೂರ್ಣವಾಗಿಯೇ ಬಾಯಿಪಾಠ ಹೇಳಿಬಿಟ್ಟರು! ಇದನ್ನು ಕೇಳಿ ನನಗೆ ಪರಮಾಶ್ಚರ್ಯವಾಯಿತು. ಆಗ ನಾನು ಕೌತುಕದ ಧ್ವನಿಯಿಂದ "ತಮಗೆ ಈ ಉಪನಿಷತ್ತು ಮುಖೋದ್ಗತವಾಗಿಬಿಟ್ಟಿರುತ್ತದೆ!" ಎಂದು ಗೌರವ ಪುರಸ್ಸರವಾಗಿ ನುಡಿದು, ಸಂತೋಷವನ್ನು ವ್ಯಕ್ತಪಡಿಸಿದೆನು. ಇವರ ವಿದ್ಯಾವ್ಯಾಸಂಗವು ವಿಶಾಲವಾಗಿದ್ದಿತು: ಇಷ್ಟೆ ಅಲ್ಲ ಇವರ ಹೃದಯವೂ ಧಾರಾಳವಾಗಿದ್ದಿತೆಂಬುದು ಇವರು ನನಗೆ ಮಾಡಿದ ಆತಿಥ್ಯದಿಂದ ಚೆನ್ನಾಗಿ ವ್ಯಕ್ತವಾಯಿತು.

ಇಂಥ ಪುಣ್ಯಶ್ಲೋಕರ ಆತ್ಮಕ್ಕೆ ಪರಮಾತ್ಮನು ಶಾಂತಿಯನ್ನೀಯಲೆಂದು ಆತನನ್ನು ಪ್ರಾರ್ಥಿಸುತ್ತೇನೆ.

— ನಾ. ಶ್ರೀ. ರಾಜಪುರೋಹಿತ
ಇತಿಹಾಸ ಸಂಶೋಧಕ, ಧಾರವಾಡ.

## ಹೈದರಾಬಾದಿನ ಪ್ರಾಚೀನ ಸಂಸ್ಕೃತಿ

ಪ್ರಾಚೀನ ವಸ್ತು ಸಂಶೋಧನ ಖಾತೆಯ ಚಟುವಟಿಕೆಗಳ ಕೆಲ ನೋಟಗಳು

ಪ್ರಾಚೀನ ವಸ್ತು ಸಂಶೋಧನ ಖಾತೆಯ ಇತ್ತೀಚಿನ ಪ್ರಕಟನೆಗಳಿಂದ ಕೆಲವು ಉದ್ಧರಣಗಳನ್ನು ಇಲ್ಲಿ ಕೊಡಲಾಗಿದೆ:—

ವೇಳೂರು ಮತ್ತು ಅಜಂತಗಳ ಗವಿಗಳನ್ನು ಜೀರ್ಣೋದ್ಧಾರ ಮಾಡಲಾಯಿತು.

ಪ್ರಾಚೀನ ವಸ್ತು ಸಂಶೋಧನ ಖಾತೆಯ ಮುಖ್ಯಾಧಿಕಾರಿಗಳು ಭಾರತ ಸರಕಾರದ ಶಾಸನಜ್ಞರಾದ ಡಾ. ಎನ್. ಪಿ. ಚಕ್ರವರ್ತಿ, ಪಿ.ಎಚ್‌ಡಿ. ಇವರ ಸಹಕಾರದಿಂದ ಅಜಂತ ಮತ್ತು ವೇಳೂರಿನಲ್ಲಿದ್ದ ಶಾಸನಗಳನ್ನು ವಿವರವಾಗಿ ಪರಿಶೀಲಿಸಿದರು.

### ಮೋಹಕ ಖಡ್ಗ

ಚಿತ್ರ ವಸ್ತು ಪ್ರದರ್ಶನಾಲಯದಲ್ಲಿದ್ದ ಶಸ್ತ್ರಾಸ್ತ್ರಗಳಲ್ಲಿ ಒಂದು ಕತ್ತಿ ಬಹಳ ಮನೋಹರವಾದುದು. ಹಿಡಿ ಮತ್ತು ತುದಿಯಲ್ಲಿ ನಾಗರಿ ಲಿಪಿಯನ್ನೂ ಭಾರತದ ವೀರನಾದ ಭೀಷ್ಮನನ್ನೂ ಬ್ರಹ್ಮ, ವಿಷ್ಣು ಮತ್ತು ಶಿವಮೂರ್ತಿಗಳನ್ನೂ ಕೆತ್ತಲಾಗಿದೆ. ಬಂಗಾರದಲ್ಲಿ ಕೆತ್ತಿದ ಶಾಸನವು ವೀರಭೀಷ್ಮನು ಮರಣಶಯ್ಯೆಯಲ್ಲಿ ಮಾಡಿದ ಸ್ತುತಿಯಿಂದ ಕೂಡಿದೆ. ಆದರೆ ಮೊದಲು ಇನ್ನೊಂದು ಹಿಡಿಯಿಂದ ಕೂಡಿರಬಹುದಾದ ಅಲಗಿನ ಮೇಲೆ ಮಾತ್ರ ಇದನ್ನು ಮಾಡಿದ 'ಇಜಿಪ್ಟದ ಮಹಮ್ಮದ'ನ ಹೆಸರು ಮತ್ತು ಇನ್ನಿತರ 'ಅರಬಿ ಪ್ರಾರ್ಥನೆ'ಗಳನ್ನು ಕೊರೆಯಲಾಗಿದೆ.

ಕಲ್ಲೂರಿನಲ್ಲಿ ಒಂದು ಗುಂಡಿಗೆ ಸುರಂಗ ಹಾಕುವಾಗ ಅಕಸ್ಮಾತ್ತಾಗಿ ಅದರ ತಳದಲ್ಲಿ ಸಂಯುಕ್ತಪ್ರಾಂತದ ಫತೇಗಡದಲ್ಲಿ ಸಿಕ್ಕಿದಂಥ ತಾಮ್ರದ ಮೂರು ಕತ್ತಿಗಳು ಸಿಕ್ಕಿದುವು. ಸರ್ ಜಾನ್‌ಮಾರ್ಷಲ್ ಅವರು ಕೇಂಬ್ರಿಜ್ ಭಾರತ ಚರಿತ್ರೆಯ ಮೊದಲನೆಯ ಸಂಪುಟದಲ್ಲಿ ಫತೇಗಡ ಕತ್ತಿಗಳನ್ನು ಕುರಿತು ಉಲ್ಲೇಖಿಸಿದ್ದಾರೆ. ಕಲ್ಲೂರು ಮತ್ತು ಮಸ್ಕಿಯಲ್ಲಿ ಸಿಕ್ಕಿದ ವಸ್ತುಗಳಲ್ಲಿ ಹೆಚ್ಚು ಹೋಲಿಕೆಯಿದ್ದರೂ ಕಲ್ಲೂರಿನಲ್ಲಿ ನಾಲ್ಕು ಕಾಲಿನ ಪಿಂಗಾಣಿ ಭರಣಿಯ ತುಣುಕೊಂದು ಮತ್ತು ಅವುಗಳ ಮಣ್ಣಿನ ಮುಚ್ಚಳಗಳಿಂತಿದ್ದ ನಾಲ್ಕು ಚೂರುಗಳು ಸಿಕ್ಕಿವೆ. ಅಮೂಲ್ಯವೂ ಮತ್ತು ದುರ್ಲಭವೂ ಆದ ಕೆಲವು ತೂತು ತೂತುಗಳ ಮಡಕೆಗಳು ಸಿಕ್ಕಿವೆ.

### ಹೊಸ ಶಾಸನಗಳು

ವರಂಗಲ್ಲು ಜಲ್ಲೆಯಲ್ಲಿ ಹೊಸ ಶಾಸನಗಳಿಗಾಗಿ ಪದ್ಧತಿಶೀರವಾದ ಪರಿಶೀಲನೆಯನ್ನು ನಡಸಲಾಗಿ ಒಂಬತ್ತು ಶಾಸನಗಳು ಸಿಕ್ಕಿವೆ.

ಸಂಸ್ಥಾನದ ತೆಲುಗು ಶಾಸನದ ಸಮಗ್ರವಾದ ಸಂಕಲನವೊಂದನ್ನು ಅಚ್ಚು ಮಾಡಲಾಗಿದೆ. ಅದರಲ್ಲಿ ಮಧ್ಯಯುಗೀನ (ಕ್ರಿ. ಶ. ೮ರಿಂದ ೧೨ನೆಯ ಶತಮಾನ) ದಕ್ಕನಿನ ಸಾಹಿತ್ಯಕ ಚಳವಳಿಗಳನ್ನೊಂದೆಯಲ್ಲದೆ ರಾಜಕೀಯ ಸಂಸ್ಥೆಗಳನ್ನೂ ಮತ್ತು ಆಗಿನ ಕಾಲದ ಜನರ ಸಾಮಾಜಿಕ ಮತ್ತು ಧಾರ್ಮಿಕ ಜೀವನವನ್ನೂ ವರ್ಣಿಸಲಾಗಿದೆ.

— ಹೈದರಾಬಾದ್ ಸಮಾಚಾರ

# ಕನ್ನಡ ನುಡಿ

**ಶುಕ್ರವಾರ, ಜುಲೈ ೨೩, ೧೯೪೩**

## ಅಕ್ಷರತೆಯ ನಂದಾದೀಪ

ಬ್ರಿಟನ್ನಿನಲ್ಲಿ ನಡಸಲು ಉದ್ದೇಶಿಸಿರುವ ವಿದ್ಯಾಭ್ಯಾಸ ಸುಧಾರಣೆಯ ಯೋಜನೆಯನ್ನು ೧೬-೭-೧೯೪೩ ನೆಯ ದಿನ ಬ್ರಿಟಿಷ್ ಸರ್ಕಾರ ಪ್ರಕಟಪಡಿಸಿದೆ. ಈ ಯೋಜನೆಯ ಕೆಲವು ಅಂಶಗಳು ಇವು:

೧. ಕಡೆಯಪಕ್ಷ ೧೫ ವರ್ಷ ವಯಸ್ಸಾಗುವವರೆಗೆ ಎಲ್ಲ ಮಕ್ಕಳೂ ಶಾಲೆಯಲ್ಲಿ ಇರಬೇಕು.

೨. ಆಮೇಲೆ, ಶಾಲೆಗೆ ಹೋಗುವ ಮಕ್ಕಳ ವಯಸ್ಸಿನ ಮಿತಿ ೧೬ ಕ್ಕೆ ಹೆಚ್ಚಿಸಬೇಕು.

೩. ೧೧ ನೆಯ ವಯಸ್ಸಿನವರೆಗೆ ಎಲ್ಲ ಮಕ್ಕಳಿಗೂ, ಆಧುನಿಕ ಪ್ರಾಥಮಿಕ ವಿದ್ಯಾಭ್ಯಾಸ; ಆ ವಯಸ್ಸು ಕಳೆದ ಮೇಲೆ 'ಸೆಕೆಂಡರಿ' ವಿದ್ಯಾಭ್ಯಾಸ.

೪. ಆವಶ್ಯಕವಾದ ಕಡೆಗಳಲ್ಲೆಲ್ಲ 'ನರ್ಸರಿ' ಶಾಲೆಗಳು (ಶಿಶು ವಿಹಾರಗಳು).

೫. ೧೮ ನೆಯ ವಯಸ್ಸಿನವರೆಗೆ, ಕೆಲಸದ ವೇಳೆಗಳಲ್ಲಿ ಕೆಲ ಕಾಲ ಅವಧಿಯ ಕಡ್ಡಾಯವಾದ ವಿದ್ಯಾಭ್ಯಾಸ.

೬. ಸುಧಾರಿಸಿದ ಔದ್ಯೋಗಿಕ ಹಾಗೂ ವಯಸ್ಕ ವಿದ್ಯಾಭ್ಯಾಸ.

೭. ಶಿಕ್ಷಣದ ಅಗತ್ಯವಾದ ಒಂದು ಭಾಗವಾಗಿ ಮತಧರ್ಮ ಬೋಧೆಯನ್ನು ನೀಡಲು ಸದ್ಯದ ಶಿಕ್ಷಣ ಕಾನೂನನ್ನು ತಿದ್ದುಪಡಿ ಮಾಡುವುದು.

೮. ಮಕ್ಕಳ ಆರೋಗ್ಯ ಮತ್ತು ನೆಮ್ಮದಿಯ ರಕ್ಷಣೆಗಾಗಿ ಇನ್ನೂ ಹೆಚ್ಚಿನ ಸೌಕರ್ಯಗಳನ್ನು ಕಲ್ಪಿಸುವುದು.

೯. ತರಗತಿಗಳಲ್ಲಿ ಓದುವ ಮಕ್ಕಳ ಸಂಖ್ಯೆಯನ್ನು ಕ್ರಮವಾಗಿ ಕಡಮೆಮಾಡಿ ಹೆಚ್ಚು ಶಾಖಾ ತರಗತಿಗಳನ್ನು ತೆರೆಯುವುದು.

೧೦. ಸೆಕೆಂಡರಿ ಶಿಕ್ಷಣದ ಪಾಠಕ್ರಮವನ್ನು ಮಾರ್ಪಡಿಸುವುದು.

೧೧. ಬಡ ಮಕ್ಕಳು ವಿಶ್ವವಿದ್ಯಾನಿಲಯಕ್ಕೆ ಸೇರಿ ವಿದ್ಯಾಭ್ಯಾಸ ಮಾಡಲು ಅವರಿಗೆ ಹೆಚ್ಚಿನ ಸೌಕರ್ಯಗಳನ್ನು ಕಲ್ಪಿಸುವುದು.

೧೨. ಉಪಾಧ್ಯಾಯರಿಗೆ ಈಗ ಕೊಡುತ್ತಿರುವ ಶಿಕ್ಷಣದಲ್ಲಿ ಸುಧಾರಣೆ ತರುವುದು.

ಈ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಬ್ರಿಟಿಷ್ ಸರ್ಕಾರ ವರ್ಷವೊಂದಕ್ಕೆ ೬೭ ಮಿಲಿಯನ್ ಪೌಂಡು ಎಂದರೆ ಸುಮಾರು ೧೨೦ತ್ತಿ ಕೋಟಿ ರೂಪಾಯಿ ವೆಚ್ಚ ಮಾಡುವುದಂತೆ. ಮತ್ತು ಯೋಜನೆಯನ್ನು ನಡಸಲು ೭೦,೦೦೦ ಉಪಾಧ್ಯಾಯರ ಪಡೆ ಬೇಕಂತೆ.

ಕೆಲವು ವಾರಗಳ ಹಿಂದೆ 'ಕನ್ನಡ ನುಡಿ'ಯಲ್ಲಿ (ತಾ|| ೪-೬-೪೩) ಅಮೆರಿಕದಲ್ಲಿ ವಯಸ್ಕರ ವಿದ್ಯಾಭ್ಯಾಸವನ್ನು ಎಷ್ಟು ದೊಡ್ಡ ಪ್ರಮಾಣದಲ್ಲಿ ನಡಸುತ್ತಿದ್ದಾರೆಂಬ ಒಂದು ಚಿತ್ರವನ್ನು ಕೊಟ್ಟು, ನಮ್ಮ ದೇಶ ಕಲಿಯಬೇಕಾದ ಪಾಠವೇನೆಂದು ವಿಚಾರ ಮಾಡಿದ್ದೆವು. ಈಗ ಬ್ರಿಟಿಷ್ ಸರ್ಕಾರ ತನ್ನ ರಾಷ್ಟ್ರದ ಮುಂದಿಟ್ಟಿರುವ ದೊಡ್ಡ ಯೋಜನೆ ಜಗತ್ತಿಗೆಲ್ಲ ಪತ್ರಿಕೆಗಳ ಮೂಲಕ ಪ್ರಚಾರವಾಗಿದೆ. ಅಕ್ಷರತೆಯಲ್ಲಿ ಬಹಳ ಹಿಂದೆ ಬಿದ್ದಿರುವ ಭಾರತೀಯರು ಇಂಥ ಒಂದು ಯೋಜನೆಯನ್ನು ದೊಡ್ಡ ಪ್ರಮಾಣದಲ್ಲಿ ಕೈಕೊಂಡು ಇಡಿಯ ಭರತಖಂಡಕ್ಕೆ ಅನ್ವಯಿಸಿ ನಡಸುವುದು ಯಾವ ಕಾಲಕ್ಕೆ? ಅಕ್ಷರತೆಯಲ್ಲಿ ಸೇಕಡ ೭೦-೮೦ರ ಸಂಖ್ಯೆಯನ್ನು ದಾಟಿರುವ ರಾಷ್ಟ್ರಗಳು ಶಿಕ್ಷಣ ಕ್ಷೇತ್ರದಲ್ಲಿ ಹೀಗೆ ಇನ್ನೂ ಮುಂದುಮುಂದಕ್ಕೆ ಹೋಗಿ ಸುಧಾರಣೆ ನಡಸಿ ಜನತೆಯನ್ನು ಮೇಲಕ್ಕೆತ್ತುತ್ತಿರುವಾಗ, ನಮ್ಮ ಜನ ಕಣ್ಣು ತೆರೆಯುವುದು ಎಂದಿಗೆ?

ಇಂಥ ಪ್ರಶ್ನೆಗಳು ಎದ್ದರೆ, 'ನಾವು ಏನು ಮಾಡೋಣ? ಕಾಲ ಪರಿಸ್ಥಿತಿಯ ದೋಷ' ಎಂದು ಯಾರೂ ಸುಮ್ಮನೆ ಕುಳಿತುಕೊಳ್ಳುವಂತಿಲ್ಲ. ಒಂದು ಕಾಲದಲ್ಲಿ ಎಂದರೆ, ಮೂರು ನಾಲ್ಕು ವರ್ಷಗಳ ಹಿಂದೆ ಕಾಂಗ್ರೆಸ್ ಮಂತ್ರಿಮಂಡಲಗಳು ಪ್ರಾಂತಗಳಲ್ಲಿ ಆಡಳಿತ ನಡಸುತ್ತಿದ್ದಾಗ್ಗೆ ಕೈಗೊಳ್ಳಲಾದ ವಯಸ್ಕರ ವಿದ್ಯಾಭ್ಯಾಸ ಚಳವಳಿಯ ಮೊದಮೊದಲ ಕಾರ್ಯಗಳಿಂದ, ಹೊಲಬುಗೆಟ್ಟಿದ್ದ ನಮ್ಮ ನಾಡಿಗೆ ವಾಸ್ತವವಾಗಿ ಮುನ್ನಡೆಯ ಪಥ ಗೋಚರಿಸಿತೆಂಬ ಶುಭಚಿಹ್ನೆಗಳು ತೋರಿಬಂದುವು. ಆಮೇಲೆ ನಾನಾ ಸಂಭವ ಪ್ರಭಾವಗಳ ಫಲವಾಗಿ ಈ ಚಳವಳಿಗೆ ಹಿಡಿದ ಜೋಮು ಈಚೆಗೆ ಸ್ವಲ್ಪ ಸ್ವಲ್ಪ ಬಿಟ್ಟು ಮತ್ತೆ ಚಟುವಟಿಕೆ ಪ್ರಾರಂಭವಾಗಿದೆ. ನಮ್ಮ ಮೈಸೂರು ಸಂಸ್ಥಾನದಲ್ಲಂತೂ ಖಾಸಗಿಯಾಗಿ ಆರಂಭವಾದ ವಯಸ್ಕರ ಶಿಕ್ಷಣ ಚಳವಳಿಗೆ ಸರಕಾರವ ಮತ್ತು ಸ್ಥಳೀಯ ಸಂಸ್ಥೆಗಳ ಆಶ್ರಯ ದೊರೆತು ಕೆಲಸ ಚೆನ್ನಾಗಿ ನಡೆಯುವ ಆಸೆ ಮೂಡಿದೆ. ಇದು ಏನೆಂದರೂ ಶಿಕ್ಷಣದ ಒಂದು ಭಾಗಕ್ಕೆ ಸಂಬಂಧಿಸಿದ್ದಾಯಿತು; ನಾಡಿನಲ್ಲಿ ಈಗ ಇರುವ ಅಕ್ಷರ ಬಾರದ ವಯಸ್ಕರ ಉದ್ಧಾರದ ಮಾತಾಯಿತು. ಮೊಳಕೆಯಲ್ಲೇ ಮಾಡಬೇಕಾದ ಕೃಷಿ ತಪ್ಪಿಹೋಗಿ ಗಿಡ ಬೆಳೆದು ಕಾಡಾದಮೇಲೆ ಮಾಡುವ ಕಷ್ಟದ ಬೇಸಾಯವಾಯಿತು. ಅಷ್ಟೇ ಅಲ್ಲ, – ಪ್ರಥಮ, ಮಧ್ಯಮ, ಉತ್ತಮ ಎಂಬೀ ಮೂರು ಮೆಟ್ಟಲಲ್ಲಿ ತಕ್ಕ ಸುಧಾರಣೆ ಮಾಡದೆ,– ಕಡ್ಡಾಯವಾಗಿ ಓದುಬರಹ ಕಲಿಯಬೇಕಾದ ವಯಸ್ಸನ್ನು ನಿಷ್ಕರ್ಷಿಸಿ ಶಾಸನ ಮಾಡದೆ – ಈಗಿನ ವ್ಯವಸ್ಥೆಯನ್ನೇ ಅಲ್ಲಿ ಇಲ್ಲಿ ಅಲ್ಪ ಸ್ವಲ್ಪ ಸುಧಾರಣೆ ಮಾಡಿ ಮುಂದುವರಿಸಿದರೆ ಅಕ್ಷರವೇ ಬಾರದವರ, ಕಲಿತಿದ್ದರೂ ಕಲಿತ ಅಕ್ಷರವನ್ನು ಮರೆತು ಮತ್ತೆ ಅನಕ್ಷರಸ್ಥರಾಗುವವರ ಸಂಖ್ಯೆ ವರ್ಷ ವರ್ಷವೂ ಹೆಚ್ಚುವ ಭೀತಿಯೂ ಇದೆ. ಆದ್ದರಿಂದ, ತಳಹದಿಯಿಂದ ಸುಧಾರಣೆ ಪ್ರಾರಂಭವಾಗಿ ಶಿಕ್ಷಣದ ಎಲ್ಲ ಮಟ್ಟಗಳನ್ನು ವ್ಯಾಪಿಸಬೇಕು.

ಈಗ ಯುದ್ಧಕಾಲ; ಈ ಎಲ್ಲ ಆಲೋಚನೆಗಳಿಗೆ ಬಿಡುವಿಲ್ಲ, ಯುದ್ಧ ಮುಗಿದು ಶಾಂತಿ ಮೂಡಲಿ, ಆಮೇಲೆ ಯೋಚಿಸೋಣ ಎಂದು ಯಾರೂ ಅಭಿಪ್ರಾಯಪಡಲಾರರು. ವೈರಿವರ್ಗವನ್ನು ಎದುರಿಸಿ ಕಾದಾಡುತ್ತಿರುವ ಮಿತ್ರರಾಷ್ಟ್ರಗಳಲ್ಲಿ ಅಗ್ರಗಣ್ಯವಾದ ಬ್ರಿಟನ್ನಿನ ಸರಕಾರ, ಯುದ್ಧಸಮಸ್ಯೆ ಎಂದು ತಲ್ಲೀನವಾಗದೆ ಶಿಕ್ಷಣಸಮಸ್ಯೆಗಳನ್ನೂ ಗಮನಿಸಿ, ಬಹು ದೊಡ್ಡ ವೆಚ್ಚಕ್ಕೆ ಸಿದ್ಧವಾಗಿರುವುದನ್ನು ನೋಡಿದರೆ ನಮ್ಮ ಸರಕಾರಗಳೂ ಬೇಗ ಎಚ್ಚತ್ತು ಕಾರ್ಯಮುಖವಾಗಬೇಕೆಂದು ಒತ್ತಾಯ ಮಾಡಬೇಕೆನ್ನಿಸುತ್ತದೆ. ಸರಕಾರದ್ದೇ ಕರ್ತವ್ಯ ಎಂದು ಮಹಾಜನರಾದರೂ ಉದಾಸೀನವನ್ನು ತಾಳಲಾಗದು. ಇದು ಮುಖ್ಯವಾಗಿ ಸರಕಾರದ ಕರ್ತವ್ಯ ನಿಜ. ಆದರೆ ನಾಡಿನಲ್ಲಿ ಪ್ರತಿ ಮನೆಯಲ್ಲಿಯೂ ಅಕ್ಷರತೆಯ ನಂದಾದೀಪ ಬೆಳಗುವ ಆಸೆ ಸುವ್ಯಕ್ತವಾಗಬೇಕು; ಶಿಕ್ಷಣತಜ್ಞರು ಸಮಸ್ಯೆಯನ್ನು ವಿವೇಚಿಸಿ ಸರಕಾರಕ್ಕೆ ಸಲಹೆ ಕೊಡಬೇಕು. ಧನಿಕರಾದ ಮಹನೀಯರು ನೆರವಾಗಿ ತಮ್ಮ ಪಾಲಿನ ಕರ್ತವ್ಯವನ್ನು ನಿರ್ವಹಿಸಿ, ದೊಡ್ಡ ಪ್ರಮಾಣದ ಯೋಜನೆಯನ್ನು ಕೈಕೊಳ್ಳಲು ಸರಕಾರಕ್ಕೆ ಧೈರ್ಯವನ್ನು ಕೊಟ್ಟು ನೆರವಾಗಬೇಕು.

ಇಂದಿನ ಪ್ರಜಾಪ್ರಾಬಲ್ಯದ ಕಾಲದಲ್ಲಿ ಅಕ್ಷರ ವಿದ್ಯೆಯ ಮಹತ್ವವನ್ನು ಒತ್ತಿ ಹೇಳಬೇಕಾಗಿಲ್ಲ. ನಾಡಿನಲ್ಲಿ ಅಕ್ಷರ ಬಾರದವರ ಸಂಖ್ಯೆ,– ಮಕ್ಕಳಲ್ಲಿ, ಪ್ರೌಢರಲ್ಲಿ – ಎಷ್ಟೆಂಬುದರ ಗಣತಿಯನ್ನು ಕಣ್ಣಮುಂದಿಟ್ಟುಕೊಂಡು, ಸರಿಯಾಗಿ ಯೋಜನೆಯನ್ನು ರಚಿಸಬೇಕು. ವಿದ್ಯಾವಂತರು ಈ ಬಗ್ಗೆ ಇನ್ನೂ ಹೆಚ್ಚಿನ ಆಸಕ್ತಿವಹಿಸಿ ಬೆಳಕನ್ನೂ ಅರಿವನ್ನೂ ಹರಡುವುದನ್ನು ನಿತ್ಯೋತ್ಸವವಾಗಿ ನಡಸಲು ಸಂಕಲ್ಪಮಾಡಬೇಕು. ಇದುವರೆಗೆ ವ್ಯಕ್ತವಾಗಿರುವ ಉದಾಸೀನದ, ಅಲ್ಪತೃಪ್ತಿಯ ಭಾವಗಳು ಹೋಗಿ ದೊಡ್ಡ ಆಸೆಗಳನ್ನು ಮನಸ್ಸಿನಲ್ಲಿ ತುಂಬಿಕೊಂಡು ಮಹಾಸಾಧನಗಳನ್ನು ಸಾಧಿಸುವ ಬುದ್ಧಿ ಮೂಡಿದರೆ ನಾಡಿಗೆ ಶುಭವಾಗುವುದು.

## ಮೈಸೂರಿನಲ್ಲಿ ಅಕ್ಷರ ಪ್ರಚಾರ

### ಸಂಸ್ಥಾನದ ಅಕ್ಷರ ಪ್ರಚಾರ ಸಮಿತಿಯ ವಾರ್ಷಿಕ ವರದಿ (೧೯೪೨-೪೩)

ಇಡಿಯ ಸಂಸ್ಥಾನದಲ್ಲಿ ಅಕ್ಷರ ಪ್ರಚಾರ ಕಾರ್ಯವನ್ನು ಸುವ್ಯವಸ್ಥಿತವಾಗಿ ನಡಸಲು ಈ ಸಮಿತಿ ೧೮ ತಿಂಗಳ ಹಿಂದೆ ಸ್ಥಾಪಿತವಾಯಿತು. ಇದಕ್ಕೆ ಮೊದಲು ಮೈಸೂರು ನಗರದಲ್ಲಿ ನಗರ ಸಮಿತಿಯೂ ಕೋಲಾರ ಮುಂತಾದ ಸಂಸ್ಥಾನದ ಇತರ ಕಡೆಗಳಲ್ಲಿ ಖಾಸಗಿ ಮಹನೀಯರೂ ನಡಸಿದ್ದ ಕಾರ್ಯವನ್ನು ಮನಸ್ಸಿಗೆ ತಂದುಕೊಂಡು ಸಂಸ್ಥಾನಾದ್ಯಂತವಾಗಿ ಮಾಡಬೇಕಾದ ಮುಂದಿನ ಕೆಲಸವನ್ನು ಈ ಸಮಿತಿಯೇ ವಹಿಸಿಕೊಂಡಿತು.

ಅಕ್ಷರಜ್ಞಾನವುಂಟಾದ ಮೇಲೆ ಶಿಕ್ಷಣವನ್ನಲ್ಲಿಗೇ ಬಿಡದೆ ಓದನ್ನು ಆಚರಣೆಯಲ್ಲಿಟ್ಟುಕೊಳ್ಳುವ ಅಭ್ಯಾಸವನ್ನು ಅವರಿಗೆ ಉಂಟುಮಾಡಿ ಕೊಡುವ ಕಡೆಗೇ ಕೇಂದ್ರ ಸಮಿತಿ ಹೆಚ್ಚು ಗಮನಕೊಡುತ್ತ ಬಂತು.

ವರ್ಷಾರಂಭದಲ್ಲಿ ಕೇಂದ್ರ ಸಮಿತಿಯವರು ಸಂಸ್ಥಾನದ ಬೇರೆ ಬೇರೆ ಕಡೆ ೧೫೦ ಶಾಲೆಗಳನ್ನು ತೆರೆಯುವ ಆಲೋಚನೆ ಮಾಡಿದರು. ಇದಕ್ಕೆ ಸರ್ಕಾರದವರು ೩೨,೦೦೦ ರೂ.ಗಳನ್ನು ಕೊಡುವರೆಂದೂ ಸ್ಥಳೀಯ ಸಂಸ್ಥೆಗಳು ಮತ್ತು ಇತರ ಕಡೆಗಳಿಂದ ೨೦,೭೦೦ ರೂ.ಗಳನ್ನು ನಿರೀಕ್ಷಿಸಿತು. ಆದರೆ ಸರ್ಕಾರದವರು ೨೦,೦೦೦ರೂ.ಗಳನ್ನು ಮಂಜೂರು ಮಾಡಿದ್ದಾರೆ. ಸ್ಥಳೀಯ ಸಂಸ್ಥೆಗಳ ವಾಗ್ದಾನ ೧೪,೧೦೦ ರೂ.ಗಳು.

ಇದುವರೆಗೆ ಸಂಸ್ಥಾನದಲ್ಲೆಲ್ಲ ೪೮೮ ವರ್ಗಗಳನ್ನು ತೆರೆಯಲಾಗಿದೆ. ಅವುಗಳಲ್ಲಿ ೬,೨೦೧ ಮಂದಿ ಶಿಕ್ಷಣ ಪಡೆಯುತ್ತಿದ್ದಾರೆ. ೧೭೯ ತರಗತಿಗಳಲ್ಲಿ ಶಿಕ್ಷಣ ಕಾರ್ಯ ಪೂರ್ಣ ನೆರವೇರಿತು. ೧,೯೫೨ ವಿದ್ಯಾರ್ಥಿಗಳಿಗೆ ಪ್ರಶಸ್ತಿ ಕೊಡಲಾಯಿತು. ಈ ವರ್ಷ ಕನಿಷ್ಠಪಕ್ಷ ೬,೨೦೧ ವಿದ್ಯಾರ್ಥಿಗಳಿಗಾದರೂ ಪೂರ್ಣ ಅಕ್ಷರಜ್ಞಾನವುಂಟು ಮಾಡಿ ಕೊಡಬೇಕೆಂಬುದು ಸಮಿತಿಯ ಆಸೆ.

ವರ್ಗಗಳು ನಡೆಯುತ್ತಿವೆಯೇ ಇಲ್ಲವೇ ಎಂಬುದನ್ನು ನೋಡಿಕೊಳ್ಳಲು 'ಸೂಪರ್‌ವೈಜರ್' ಗಳನ್ನು ನೇಮಿಸಲಾಗಿದೆ. ಹಳ್ಳಿಗಾಡುಗಳಲ್ಲಿ ಆದಿಕರ್ಣಾಟಕರು ಈ ವರ್ಗಗಳಲ್ಲಿ ವಿಶೇಷ ಆಸಕ್ತಿ ತೋರಿಸಿ ಕಲಿಯುತ್ತಿದ್ದಾರೆ. ಮೈಸೂರು ಜಿಲ್ಲೆಯಲ್ಲಿ ಆದಿ ಕರ್ಣಾಟಕರಿಗಾಗಿಯೇ ೧೨ ತರಗತಿಗಳನ್ನು ತೆರೆಯಲಾಗಿದೆ. ಇದಕ್ಕಾಗಿ ಮತ್ತೆ ೮,೦೦೦ ರೂಗಳನ್ನ ಒದಗಿಸಬೇಕೆಂದು ಸರ್ಕಾರವನ್ನು ಕೇಳಲಾಗಿದೆ. ಹಳ್ಳಿಗಾಡುಗಳಲ್ಲಿ ವಿಶೇಷವಾಗಿ ತರಗತಿಗಳನ್ನು ತೆರೆದ ಯಶಸ್ಸು ಮೈಸೂರು ಜಿಲ್ಲಾ ಸಮಿತಿಗೆ ಸೇರಿದೆ.

ಶ್ರೀ ಕೃಷ್ಣರಾಜೇಂದ್ರ ಮಿಲ್ಸ್ (ಮೈಸೂರು), ಸ್ಪನ್‌ಸಿಲ್ಕ್ ಫ್ಯಾಕ್ಟರಿ (ಚೆನ್ನಪಟ್ಟಣ), ಸಿಲ್ಕ್ ಫಿಲೇಚರ್ಸ್, ಲಿಮಿಟೆಡ್ (ಟಿ. ನರಸೀಪುರ), ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ (ಭದ್ರಾವತಿ) ಈ ಕೈಗಾರಿಕೆ ಸಂಸ್ಥೆಗಳಲ್ಲಿ ಶಿಕ್ಷಣ ವರ್ಗಗಳನ್ನು ತೆರೆಯಲಾರಂಭಿಸಿದ್ದಾರೆ. ಕೆಲವು ಪುಸ್ತಕಗಳನ್ನು ಪ್ರಕಟಿಸುತ್ತಿದ್ದಾರೆ. ತಮ್ಮ ಕೆಲಸಗಾರರಿಗಾಗಿ ಪುಸ್ತಕ ಭಂಡಾರ ತೆಗೆದಿದ್ದಾರೆ.

ಶ್ರೀ ಕೃಷ್ಣರಾಜೇಂದ್ರ ಮಿಲ್ಲಿನವರು ಅಕ್ಷರ ಪ್ರಚಾರಕ್ಕೆ ಬಹುಮುಖವಾಗಿ ನೆರವಾಗುತ್ತಿದ್ದಾರೆ. ವಯಸ್ಕರ ವಿದ್ಯಾಭ್ಯಾಸ ಪುಸ್ತಕ ಮಾಲೆಯ ಒಂದು ಪುಸ್ತಕಕ್ಕೆ ('ನಮ್ಮ ಹಿಟ್ಟು ಬಟ್ಟೆಗಳು') ದ್ರವ್ಯ ಸಹಾಯ ಮಾಡಿದ್ದಲ್ಲದೆ ಒಂದು ತರಗತಿಗಾಗಿ ಸ್ವಂತ ಕಟ್ಟಡ ಕಟ್ಟಿಸಿ, ಪುಸ್ತಕ ಭಂಡಾರ ತೆರೆಯುವ ವ್ಯವಸ್ಥೆ ಮಾಡಿದ್ದಾರೆ. ತಮ್ಮ ಮಿಲ್ಲಿನಲ್ಲಿ ಕೆಲಸ ಮಾಡುವ ಅನಕ್ಷರಸ್ಥರು ತರಗತಿಗಳಿಗೆ ಸೇರಲು (ಹಾಗೆ ಸೇರಿದ ಪ್ರತಿ ವಿದ್ಯಾರ್ಥಿಗೂ ಬೋನಸ್ಸು ಕೊಡುವುದರ ಮೂಲಕ) ಪ್ರೋತ್ಸಾಹ ಕೊಟ್ಟು ಶಿಕ್ಷಣದ ವೆಚ್ಚವನ್ನೂ ನಿರ್ವಹಿಸುತ್ತಾರೆ.

ಕ್ಲೋಸ್‌ಪೇಟೆ ಗ್ರಾಮ ಯೋಗಕ್ಷೇಮ ಸಮಿತಿಯವರು ಹತ್ತು ತರಗತಿಗಳನ್ನು ನಡಸುತ್ತಿದ್ದಾರೆ. ಕೃಷ್ಣರಾಜಸಾಗರ, ತಿಪ್ಪಗೊಂಡನಹಳ್ಳಿಗಳಲ್ಲಿ ಅಕ್ಷರ ಶಿಕ್ಷಣಕ್ಕಾಗಿ ಮರಾಮತ್ ಶಾಖೆಯವರು ಹಣವನ್ನೊದಗಿಸುತ್ತಿದ್ದಾರೆ.

ಮೈಸೂರು ಸಮಿತಿಯವರು ಹೆಂಗಸರಿಗಾಗಿ ಏಳು ತರಗತಿಗಳನ್ನು ನಡಸುತ್ತಿದ್ದಾರೆ. ಬೆಂಗಳೂರು ನಗರದಲ್ಲೂ ಸಹ ಹೆಂಗಸರಿಗಾಗಿ ಕೆಲವು ತರಗತಿಗಳನ್ನು ತೆರೆಯಲಾಗಿದೆ.

ತರಗತಿಗಳಿಗೆ ಸುಶಿಕ್ಷಿತ ಉಪಾಧ್ಯಾಯರನ್ನು ನೇಮಿಸಲು ಉಪಾಧ್ಯಾಯರ ಶಿಕ್ಷಣ ವರ್ಗಗಳು ಸಂಸ್ಥಾನದ ನಾನಾ ಕಡೆ ಸ್ಥಾಪಿಸಲಾಯಿತು. ೪೪೪ ಮಂದಿಗೆ ತರಪೇತು ಕೊಡಲಾಯಿತು.

ಹೊಸದಾಗಿ ಅಕ್ಷರ ಕಲಿತವರಿಗೆ ಬೇಕಾಗುವ ಪುಸ್ತಕಗಳನ್ನು ಬರೆಯಿಸಲಾಗುತ್ತಿದೆ. ಇದುವರೆಗೆ ೧೦,೦೦೦ ರೂ.ಗಳಿಗಿಂತ ಹೆಚ್ಚಿನ ಬೆಲೆಯ ಚಿಕ್ಕ ಪುಸ್ತಕಗಳನ್ನು ಪ್ರಕಟಿಸಿದೆ. 'ಬೆಳಕು' ಎಂಬ ವಾರ ಪತ್ರಿಕೆಯನ್ನು ನಡಸುತ್ತಿದೆ.

ಪುಸ್ತಕ ಭಂಡಾರದ ವ್ಯವಸ್ಥೆ ಜಿಲ್ಲೆ ಜಿಲ್ಲೆಗೂ ಹರಡುತ್ತಿದೆ. ೮೫ ಪಟ್ಟಣಗಳಲ್ಲಿಯೂ ೧೩ ಹಳ್ಳಿಗಳಲ್ಲಿಯೂ ಪುಸ್ತಕ ಭಂಡಾರ ತೆರೆದಿರುವುದಲ್ಲದೆ ವಯಸ್ಕರ ಶಿಕ್ಷಣದ ಆವಶ್ಯಕತೆಯನ್ನು ಕುರಿತು ಪ್ರಚಾರ ಭಾಷಣಗಳನ್ನು ಮಾಡಿತು. ಶಿಕ್ಷಣ ಶಾಖೆಯವರು ದೀಪ ಚಿತ್ರಗಳನ್ನು ಕೊಟ್ಟು ನೆರವಾಗಿದ್ದಾರೆ.

ಗ್ರಾಮ ಪುನರುಜ್ಜೀವನ ಕಾರ್ಯದೊಂದಿಗೆ ವಯಸ್ಕರ ಶಿಕ್ಷಣ, ಲೈಬ್ರರಿ ವ್ಯವಸ್ಥೆಗಳನ್ನು ಮಾಡಬೇಕೆಂದು ಸಮಿತಿಯವರು ವರದಿಮಾಡಿ ಸರಕಾರಕ್ಕೊಪ್ಪಿಸಿದರು. ಇದಕ್ಕೆ ೧,೩೨,೦೦೦ ರೂ.ಗಳ ವೆಚ್ಚವಾಗುವುದೆಂದು ಹೇಳಿದರು. ಸರಕಾರದವರು ಅವರ ಸಲಹೆಗಳನ್ನು ಅಂಗೀಕರಿಸಿ ೮೦,೦೦೦ ರೂ.ಗಳನ್ನು ಕೊಡಲೊಪ್ಪಿದರು. ಗ್ರಾಮ ಪುನರುಜ್ಜೀವನ ಕಾರ್ಯಕ್ಕೆ ಸರಕಾರದವರು ಆರಿಸಿದ ಜನರಿಗೆ ಅಕ್ಷರ ಪ್ರಚಾರ, ವಯಸ್ಕರ ಶಿಕ್ಷಣ ಕಾರ್ಯಗಳಲ್ಲಿ ಶಿಕ್ಷಣ ಕೊಡಲಾಯಿತು.

ಸರಕಾರದವರು ಕೊಟ್ಟದ್ದು ೨೩,೦೦೦ ರೂ.ಗಳು. ಸ್ಥಳೀಯ ಸಂಸ್ಥೆಗಳು ಕೊಟ್ಟದ್ದು ೧೦,೫೧೮ ರೂ.ಗಳು. ಇದರಲ್ಲಿ ೧,೧೨೦ ರೂ.ಗಳು ಲೈಬ್ರರಿಗಳಿಗಾಗಿಯೇ ಕೊಟ್ಟದ್ದು. ವೆಚ್ಚ ೧೮,೦೦೦ ರೂ.ಗಳನ್ನು ಮುಟ್ಟಿತು. ಮೇ ಒಂದನೆಯ ತಾರೀಖಿನ ದಿನ ಸರಕಾರದವರು ವಚನ ಕೊಟ್ಟಂತೆ ಹೆಚ್ಚು ಹಣ ಸಹಾಯ ಮಾಡಿದರೆ ಮುಂದಿನ ವರ್ಷಕ್ಕೆ ಕೊಂಚ ಶಿಲ್ಕು ಉಳಿಯುವುದೆಂದು ಧೈರ್ಯವಾಗಿ ಹೇಳಬಹುದು.

ಸಂಸ್ಥಾನದ ಸಮಿತಿಯ ಈ ಹದಿನೆಂಟು ತಿಂಗಳ ಕೆಲಸ ಮಹಾಜನರ ಮುಂದಿದೆ. ಅವರಿಗೆ ಒದಗಿರುವ ಜನಬಲ ಧನಬಲಗಳನ್ನು ನೋಡಿದರೆ ಆಗಿರುವ ಕೆಲಸಕ್ಕಾಗಿ ಹರ್ಷಪಡಬೇಕಾಗಿದೆ. ಸಾರ್ವಜನಿಕರ ಕಡೆಯಿಂದ, ಅದರಲ್ಲೂ ಧನಿಕ ಮಹಾಶಯರ ಕಡೆಯಿಂದ ಇನ್ನೂ ಹೆಚ್ಚಿನ ಬೆಂಬಲ ದೊರೆತು, ಸರಕಾರ ಸ್ಥಳೀಯ ಸಂಸ್ಥೆಗಳು ಇದುವರೆಗೆ ನೀಡುತ್ತಿರುವ ಪೋಷಣೆ ಇಮ್ಮಡಿಯಷ್ಟಾಗಿ ಅಕ್ಷರ ಪ್ರಚಾರ ಕೆಲಸ ನಿಲುಗಡೆಯಿಲ್ಲದೆ ನಡೆದು ನಮ್ಮ ನಾಡ ಅಕ್ಷರತೆಯ ಮಟ್ಟ ಬೇಗ ಏರಲೆಂದು ಹಾರೈಸುತ್ತೇವೆ.

## "ಭಾರತದಲ್ಲಿ ಸಾಹಿತ್ಯ ಮತ್ತು ಬರಹಗಾರಿಕೆ"

ಬೆಳಗಾಮಿನ ಪ್ರೊಫೆಸರ್ ಕೆ. ಆರ್. ಶ್ರೀನಿವಾಸ ಅಯ್ಯಂಗಾರ್ ಅವರು ಬರೆದಿರುವ "ಭಾರತದಲ್ಲಿ ಸಾಹಿತ್ಯ ಮತ್ತು ಬರಹಗಾರಿಕೆ" ಎಂಬ ಗ್ರಂಥ ಪಿ. ಇ. ಎನ್. ಕ್ಲಬ್ಬಿನ ಪುಸ್ತಕ ಮಾಲೆಯಲ್ಲಿ ಈಚೆಗೆ ಪ್ರಕಟವಾಗಿದೆ. ಪ್ರಸಿದ್ಧ ಸಾಹಿತಿಗಳಾದ ಶ್ರೀ. ಇ. ಎಂ. ಫಾರ್ಸ್ಟರ್ ಅವರು ಮುನ್ನುಡಿ ಬರೆದು ಗ್ರಂಥ ಪರಿಚಯ ಮಾಡಿಕೊಟ್ಟಿದ್ದಾರೆ.

ಶ್ರೀ. ಶ್ರೀನಿವಾಸ ಅಯ್ಯಂಗಾರ್ ಅವರು ತಮ್ಮ ಗ್ರಂಥದಲ್ಲಿ, ಪೂರ್ವ ದೇಶಗಳಿಗೆ ಪಾಶ್ಚಿಮಾತ್ಯ ಸಂಸ್ಕೃತಿಯ ಸಂಪರ್ಕ ಒದಗಿದಂದಿನಿಂದ ಇಂದಿನವರೆಗೆ ನಡೆದಿರುವ ಪರಿಣಾಮವನ್ನು ಸ್ಥೂಲವಾಗಿ ವಿವರಿಸಿ, ಭಾರತದ ಬೇರೆ ಬೇರೆ ಪ್ರಾಂತ ಭಾಷೆಗಳ ಸಮಕಾಲೀನ ಬರವಣಿಗೆಯ ಸಂಕ್ಷೇಪ ಅವಲೋಕನವನ್ನು ಕೊಟ್ಟಿದ್ದಾರೆ. ಅಲ್ಲದೆ, ಪಶ್ಚಿಮ ದೇಶಗಳಲ್ಲಿ ಹುಟ್ಟುತ್ತಿರುವಂತೆ ನಮ್ಮ ದೇಶದಲ್ಲಿ ಗುಣದಲ್ಲೂ ಪ್ರಮಾಣದಲ್ಲೂ ಗಂಭೀರವಾದ, ವಿಚಾರಪೂರ್ಣವಾದ, ಚೈತನ್ಯಯುಕ್ತವಾದ ಬರವಣಿಗೆ ಏಕೆ ಹುಟ್ಟುತ್ತಿಲ್ಲವೆನ್ನುವುದಕ್ಕೆ ಕಾರಣಗಳನ್ನು ಚರ್ಚಿಸಿದ್ದಾರೆ.

"ಇಂಡಿಯದೊಡನೆ ಇನ್ನೂರು ವರ್ಷಗಳ ರಾಜಕೀಯ ಸಂಬಂಧ ಇದ್ದರೂ ಇಂಗ್ಲೆಂಡಿನಲ್ಲಿ ನಮಗೆ ಭಾರತೀಯ ಸಂಸ್ಕೃತಿಯ ವಿಚಾರ ಏನೂ ಗೊತ್ತಿಲ್ಲ" ಎಂದು ಫ್ಲಾರ್ಸ್‌ಟರ್ ಅವರು ಹೇಳಿರುವುದನ್ನು ನೋಡಿದರೆ ಶ್ರೀ. ಅಯ್ಯಂಗಾರ್ ಅವರ ಗ್ರಂಥದಂತಹ ಪ್ರಕಟನೆ ಎಷ್ಟು ಅಗತ್ಯವಾಗಿತ್ತೆಂದು ಗೊತ್ತಾಗುವುದು. ಸಾಹಿತ್ಯವನ್ನು ಕುರಿತು ಇಂಥ ಪ್ರಕಟನೆಗಳಂತೆಯೆ ಭಾರತೀಯ ಕಲೆಗಳು, ಸಂಗೀತ, ವಿದ್ವತ್ತು ಮೊದಲಾದವುಗಳನ್ನು ಕುರಿತೂ ಗ್ರಂಥಗಳು ಹುಟ್ಟಿದಲ್ಲಿ, ಪಶ್ಚಿಮ ದೇಶಗಳಿಗೆ ನಮ್ಮ ನಾಡಿನ ನಿಜವಾದ ಪರಿಚಯವುಂಟಾಗುವಂತೆ ಆದೀತೆಂದೂ, ನಮ್ಮ ದೇಶದಲ್ಲಿ ಇದುವರೆಗೆ ನಡೆದಿರುವ ಕೃತಿ ನಿರ್ಮಾಣದ ಬಗ್ಗೆ ಆಸಕ್ತಿ ಹೆಚ್ಚಿ, ಮುಂದೆ ಇನ್ನೂ ಮೇಲುಮಟ್ಟದ ಕೃತಿಗಳನ್ನು ಬರೆಯುವಂತೆ ಪ್ರೇರಣೆಯೊದಗುವುದೆಂದೂ ಹಾರೈಸಬಹುದಾಗಿದೆ.

## ಕನ್ನಡ ಸಾಹಿತ್ಯ ಸಂಘ, ಕಲಬುರ್ಗಿ

### ಸಾಹಿತ್ಯೋತ್ಸವ ಕಾರ್ಯಕ್ರಮ

**೨೩ ಜುಲೈ ಶುಕ್ರವಾರ** ಸಂಜೆ ೬-೩೦ ರಿಂದ ೭-೩೦ ವರೆಗೆ (ಸಭೇಶಾನಂದ ಮಂದಿರ ಬ್ರಹ್ಮಪುರ)

(೧) ರಾಜಸೇವಾಪ್ರಸಕ್ತ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್, ಎಂ.ಎ. ಅವರ ಉಪನ್ಯಾಸ — '**ವಾಲ್ಮೀಕಿ ರಾಮಾಯಣ.**'

(೨) ಶ್ರೀ. ಎಂ. ಎಸ್. ಅನಂತಪದ್ಮನಾಭರಾಯರ ಕಾವ್ಯ ಗಾಯನ.

ರಾತ್ರಿ ೮ ರಿಂದ ೯-೩೦ (ನಗರ ಭವನ)

(೧) ಶ್ರೀ. ವಿ. ಕೃ. ಗೋಕಾಕ, ಬಿ.ಎ. (ಆಕ್ಸನ್) ಅವರ ಉಪನ್ಯಾಸ.

(೨) ಶ್ರೀ. ರಂ. ಶ್ರೀ. ಮುಗಳಿ, ಎಂ.ಎ., ಬಿ.ಟಿ. ಅವರ ಉಪನ್ಯಾಸ — '**ಆದಿಪಂಪನ ಸಂಸ್ಕೃತಿ.**'

**೨೪ ಜುಲೈ ಶನಿವಾರ** ಸಂಜೆ ೮ರಿಂದ ೯-೩೦ (ನಗರ ಭವನ)

ಸುಬೇದಾರ ರಾದ ಶ್ರೀ. ಖಾನಮಹಮ್ಮದ ಅಮೀರ ಅಲೀಖಾನ, ಎಚ್.ಸಿ.ಎಸ್. ಇವರ ಅಧ್ಯಕ್ಷತೆಯಲ್ಲಿ ಪ್ರಶಸ್ತಿ ಪ್ರದಾನ ಸಮಾರಂಭ; ಮತ್ತು

(೧) ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ ಉಪನ್ಯಾಸ — '**ಕರ್ನಾಟಕ ಜನತೆಯ ಸಂಸ್ಕೃತಿ.**'

(೨) ಶ್ರೀ. ವಿ. ಕೃ. ಗೋಕಾಕ್ ಅವರ ಉಪನ್ಯಾಸ.

ರಾತ್ರಿ ೧೦ ರಿಂದ ೧೧ (ಮಲ್ಲಿಕಾರ್ಜುನ ಮಠ)

ಶ್ರೀ. ವ್ಯಾಕರಣತೀರ್ಥ ಚಂದ್ರಶೇಖರ ಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ

(೧) ಶ್ರೀ. ಪ್ರೊ. ವ್ಹಿ. ಬಿ. ನಾಯಕ, ಎಂ.ಎ., ಎಲ್‌ಎಲ್.ಬಿ. ಅವರ ಉಪನ್ಯಾಸ — '**ವ್ಯಾಸನ ವಿಶಾಲ ದೃಷ್ಟಿ.**'

(೨) ಶ್ರೀ. ರಂ. ಶ್ರೀ. ಮುಗಳಿಯವರ ಕಾವ್ಯ ಗಾಯನ

**೨೫ ಜುಲೈ ಆದಿತ್ಯವಾರ** ಸಂಜೆ ೬ ರಿಂದ ೭ (ವಿಠ್ಠಲ ಮಂದಿರ)

ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ ಉಪನ್ಯಾಸ — '**ಭಾರತೀಯ ಸಂಸ್ಕೃತಿಯ ಮುನ್ನೋಟ.**'

ರಾತ್ರಿ ೭-೩೦ ರಿಂದ ೯-೩೦ (ನಗರ ಭವನ)

(೧) ಶ್ರೀ. ಕೆ. ವಿ. ರಾಘವಾಚಾರ್, ಎಂ.ಎ., ಬಿ.ಟಿ. ಅವರ ಉಪನ್ಯಾಸ — '**ಗ್ರೀಕರ ರುದ್ರನಾಟಕಗಳು.**'

(೨) ಶ್ರೀ. ಬಿ. ವೆಂಕೋಬರಾವ್, ಬಿ.ಎ. ಅವರ ಉಪನ್ಯಾಸ — '**ಕರ್ನಾಟಕದ ವಾಸ್ತುಶಿಲ್ಪ**', (ದೀಪ ಚಿತ್ರದೊಡನೆ).

ಜ. ಶ್ರೀ. ದೇಸಾಯಿ, ದ. ಹ. ಕುಲಕರ್ಣಿ
ಗೌ. ಕಾರ್ಯದರ್ಶಿಗಳು

**ಸೊಲ್ಲಾಪುರ: ಕನ್ನಡ ಸಂಘ**

ಸೊಲ್ಲಾಪುರ ಡಿ. ಎ. ವ್ಹಿ ಕಾಲೇಜಿನ ಕನ್ನಡ ಸಾಹಿತ್ಯ ಸಂಘದ ಸಭೆಯು ಜುಲೈ ೧೧ನೆಯ ದಿನ ಕೂಡಿ ಪ್ರೊ. ವ್ಹಿ. ಬಿ. ನಾಯಕರನ್ನು ಅಧ್ಯಕ್ಷರನ್ನಾಗಿಯೂ ಪ್ರೊ. ಎಚ್. ಬಿ. ಕೊಣ್ಣೂರ ಮತ್ತು ಪ್ರೊ. ಟಿ. ಎನ್. ನರಸಿಂಗರಾವ ಇವರನ್ನು ಉಪಾಧ್ಯಕ್ಷರನ್ನಾಗಿಯೂ ಶ್ರೀ. ವರದರಾಜ ಆದ್ಯ ಮತ್ತು ಶ್ರೀ. ರಾಜಶೇಖರ ಮುಡಕಿ ಇವರನ್ನು ಗೌರವ ಕಾರ್ಯದರ್ಶಿಗಳನ್ನಾಗಿಯೂ ಆರಿಸಲಾಯಿತು.

ಇದೇ ತಿಂಗಳ ೨೬ನೆಯ ಸಂಘದ ಹೊಸ ವರ್ಷದ ಪ್ರಾರಂಭೋತ್ಸವವನ್ನು ರಾಜಸೇವಾಪ್ರಸಕ್ತ ಶ್ರೀಮಾನ್ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ನೆರವೇರಿಸುವುದಾಗಿ ಒಪ್ಪಿದ್ದಾರೆ.

## ಪರಿಷತ್ತಿನ ಸುದ್ದಿ

### ಶ್ರೀಮನ್ಮಹಾರಾಜರವರ ವರ್ಧಂತ್ಯುತ್ಸವ

**ತಾ॥ ೨೨-೭-೧೯೪೩ನೆಯ ಗುರುವಾರ ಬೆಳಗ್ಗೆ ೧೦ ಗಂಟೆಗೆ** ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ, ಮೈಸೂರು ಮಹಾರಾಜರವರೂ ಕರ್ನಾಟಕ ರತ್ನ ಸಿಂಹಾಸನಾಧೀಶ್ವರರೂ ಆದ **ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್** ಅವರ ಇಪ್ಪತ್ತೈದನೆಯ **ವರ್ಷ ವರ್ಧಂತ್ಯುತ್ಸವವನ್ನು** ಆಚರಿಸಲು ಸಾರ್ವಜನಿಕ ಸಭೆ ಸೇರುತ್ತದೆ.

ಶ್ರೀಮಾನ್ ಬಿ. ಪುಟ್ಟಯ್ಯ, ಬಿ.ಎ., ಅವರು ಅಧ್ಯಕ್ಷತೆ ವಹಿಸಲು ಒಪ್ಪಿರುತ್ತಾರೆ.

### ಪರಿಷತ್ತಿನ ಸದಸ್ಯರ ಬೆಳವಣಿಗೆ

**ಸಹಾಯಕ ಸದಸ್ಯರು (೧೦೦ ರೂ.):** ಶ್ರೀ.ಗಳಾದ ೧. ಟಿ. ರಾಮಯ್ಯನವರು, ಬಿ.ಎ., ಜಿಲ್ಲಾಧಿಕಾರಿಗಳು, ಕೋಲಾರ. ೨. ಎಸ್. ನಾರಾಯಣರಾಯರು, ಎಂ.ಎ., ಸಿವಿಲ್ ಸಪ್ಲೈಸ್ ಡೈರೆಕ್ಟರು, ಬೆಂಗಳೂರು. ೩. ಶ್ರೀಮತಿ ಸೋಫಿಯ ವಾಡಿಯಾ ಅವರು, ಸಂಪಾದಕರು, 'ಇಂಡಿಯನ್ ಪಿ.ಇ.ಎನ್.' ಮತ್ತು 'ಆರ್ಯನ್ ಪಾತ್', ಮುಂಬಯಿ.

### ಕವಿತೆಗಳ ವಾಚನ

**ತಾ॥ ೨೪-೭-೧೯೪೩ನೆಯ ಶನಿವಾರ ಸಂಜೆ ೭ ಗಂಟೆಗೆ** ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಶ್ರೀ. ಟಿ. ಆರ್. ಜಯರಾಯರಿಂದ **ಆಧುನಿಕ ಕವಿತೆಗಳ ವಾಚನ** ನಡೆಯುತ್ತದೆ.

## ಕನ್ನಡ ಸುದ್ದಿ

### ಷಡಕ್ಷರ ಕವಿ ಪ್ರಶಸ್ತಿ

ವೀರಶೈವ ಕವಿಗಳಲ್ಲಿ ಹೆಸರಾಂತ ಷಡಕ್ಷರ ಕವಿಯ ಪ್ರಶಸ್ತಿ ಗ್ರಂಥವನ್ನು ಪ್ರಕಟಿಸಬೇಕೆಂಬುದಾಗಿ ಷಡಕ್ಷರ ಕವಿ ಪ್ರಶಸ್ತಿ ಗ್ರಂಥ ಪ್ರಕಟನಾ ಸಮಿತಿಯವರು ಉದ್ದೇಶಿಸಿರುತ್ತಾರೆ. ಕನ್ನಡ ಸಾಹಿತಿಗಳು ಈ ಕವಿಯ ಕಾವ್ಯಗಳನ್ನು ಕುರಿತು ವಿದ್ವತ್ಪೂರ್ಣವಾದ ಲೇಖನಗಳನ್ನು ೧೯೪೪ನೆಯ ಇಸವಿ ಜನವರಿ ೩೧ನೆಯ ತಾರೀಖಿನ ಒಳಗಾಗಿ ಸಮಿತಿಯವರಿಗೆ ದಯೆಯಿಟ್ಟು ಕಳುಹಿಸಿಕೊಟ್ಟು ನೆರವಾಗಬೇಕೆಂದು ಪ್ರಾರ್ಥನೆ.

ಬೆಂಗಳೂರು
೨೦-೭-೧೯೪೩

ಓ. ಎಸ್. ಲಿಂಗಣ್ಣಯ್ಯ
ಡಿ. ರೇಣುಕಾಚಾರ್ಯ

**ಸಂತೇಬೆನ್ನೂರು: ಕರ್ನಾಟಕ ಸಂಘ**

ಈ ಸಂಘದ ಆಶ್ರಯದಲ್ಲಿ ತಾ. ೧೫-೭-೧೯೪೩ರಲ್ಲಿ ಶ್ರೀ. ಗುರುಸ್ವಾಮಿಯವರು ಸುಶ್ರಾವ್ಯವಾಗಿ ಬಸವಣ್ಣನವರ ಮತ್ತು ಮಹಾದೇವಿಯಕ್ಕನವರ ಗೀತೆಗಳನ್ನು ಹೊಸಧಾಟಿಯಲ್ಲಿ ಹಾಡಿದರು. ಶ್ರೀ. ಬಿ. ಎಸ್. ರಾಮಾಚಾರ್ಯ ಅವರು ಪಿಟೀಲು ವಾದನದಿಂದ ಗಾಯಕರಿಗೆ ಸಹಾಯವನ್ನಿತ್ತರು. ಹಿರಿಯ ಕಾರ್ಯದರ್ಶಿಗಳಾದ ಶ್ರೀ. ದೇಶಪಾಂಡೆ ಶೇಷಗಿರಿರಾಯರು ವಂದನೆಗಳನ್ನರ್ಪಿಸಿದರು. 'ಸಿರಿಗನ್ನಡಂಗಲ್ಗೆ' ಘೋಷಿಸಿದನಂತರ ಸಭೆ ಚೆದುರಿತು.

**ತುಮಕೂರು: ಸನ್ಮಿತ್ರ ಸಂಘ**

ತಾ॥ ೧೭-೭-೧೯೪೩ನೆಯ ಶನಿವಾರ ಶ್ರೀಮಾನ್ ಅ. ನ. ಕೃಷ್ಣರಾಯರು ಸಂಘದ ಆರಂಭ ಭಾಷಣ ಮಾಡಿದರು.

**ಬೆಳಗಾಂವಿ: ಲಾ ಕಾಲೇಜು ಕರ್ನಾಟಕ ಸಂಘ**

ಪ್ರತಿ ವರ್ಷದಂತೆ, ನ್ಯಾಯ ವಿಶ್ವವಿದ್ಯಾನಿಲಯದಲ್ಲಿ ವರ್ಷದ ಸರ್ವಸಾಧಾರಣ ಸಭೆ ನಡೆದು, ಶ್ರೀ. ಹೆಚ್. ಬಿ. ದಾತಾರವರನ್ನೂ ಶ್ರೀ. ಆರ್. ವೆಂಕೋಬರಾವ್ ಅವರನ್ನೂ ಕಾರ್ಯದರ್ಶಿಗಳನ್ನಾಗಿ ಆರಿಸಲಾಯಿತು. ಶ್ರೀ. ವೀಣಾ ರಾಮಾಶಾಸ್ತ್ರಿಗಳು ಮೊದಲಾದ ಘನತೆವೆತ್ತರನ್ನು ಕಾರ್ಯಕಾರಿ ಸಮಿತಿಗೆ ಆರಿಸಲಾಯಿತು.

೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ : ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ : ಆಣೆ ೧॥
ಬಿಡಿ ಪತ್ರಿಕೆ : ೬ ಕಾಸು




ಸಂಪಾದಕ :
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ

ಬೆಂಗಳೂರು : ಶುಕ್ರವಾರ, ಜುಲೈ ೩೦, ೧೯೪೩

ಸಂಚಿಕೆ ೪೦

### ಪರಿಷತ್ತಿನಲ್ಲಿ
## ಶ್ರೀಮನ್ಮಹಾರಾಜರವರ ವರ್ಧಂತ್ಯುತ್ಸವ

ತಾ॥ ೨೨-೭-೧೯೪೩ನೆಯ ಗುರುವಾರ ಬೆಳಗ್ಗೆ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಕರ್ನಾಟಕ ರತ್ನ ಸಿಂಹಾಸನಾಧೀಶ್ವರರಾದ ಮೈಸೂರು ಮಹಾರಾಜರವರು **ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್ ಅವರ ೨೫ನೆಯ ವರ್ಷವರ್ಧಂತ್ಯುತ್ಸವವನ್ನು** ಆಚರಿಸಲು ಸಾರ್ವಜನಿಕ ಸಭೆ ಸೇರಿದ್ದಿತು. ಮೈಸೂರು ಸರ್ಕಾರದ ಅಚ್ಚುಕೂಟದ ನಿವೃತ್ತ ಮೇಲ್ವಿಚಾರಕರೂ ಪರಿಷತ್ತಿನ ಅಚ್ಚುಕೂಟದ ಮೇಲ್ವಿಚಾರಕರೂ ಆದ ಶ್ರೀ. ಬಿ. ಪುಟ್ಟಯ್ಯ, ಬಿ.ಎ. ಅವರು ಸಭಾಧ್ಯಕ್ಷತೆ ವಹಿಸಿದ್ದರು.

### ಅಧ್ಯಕ್ಷರ ಭಾಷಣ

ಶ್ರೀ. ಟಿ. ಆರ್. ಜಯರಾಯರಿಂದ ಪ್ರಾರ್ಥನೆ ಆದಮೇಲೆ ಶ್ರೀ. ಪುಟ್ಟಯ್ಯನವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು :

ನಾವು ಈದಿನ ಈ ಶುಭ ಮುಹೂರ್ತದಲ್ಲಿ ನಮ್ಮನ್ನಾಳುವ ಶ್ರೀಮನ್ಮಹಾರಾಜರವರಾದ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಅವರ ೨೫ನೆಯ ವರ್ಧಂತ್ಯುತ್ಸವವನ್ನು ಆಚರಿಸಿ ಮಹಾಸ್ವಾಮಿಯವರಿಗೆ ನಮ್ಮ ರಾಜಭಕ್ತಿಯಾದ ಶುಭಾಶಯಗಳನ್ನು ಸಮರ್ಪಿಸುವುದಕ್ಕಾಗಿ ಇಲ್ಲಿ ನೆರದಿದ್ದೇವೆ.

ಮಹಾಸ್ವಾಮಿಯವರು ಹಿಂದಿನ ಮಹಾಯುದ್ಧ ಮುಗಿದು ಮಿತ್ರ ರಾಷ್ಟ್ರೀಯರಿಗೆ ವಿಜಯ ಲಭಿಸಿದ ತರುಣದಲ್ಲಿ ಜನ್ಮ ತಾಳಿದರು. ಆದುದರಿಂದಲೆ ಅವರಿಗೆ **ಶ್ರೀ ಜಯಚಾಮರಾಜರು** ಎಂದು ನಾಮಕರಣವಾಯಿತು. ಈಗ ನಡೆಯುತ್ತಿರುವ ಘೋರ ಯುದ್ಧದಲ್ಲಿ ಮಿತ್ರ ರಾಷ್ಟ್ರೀಯರಿಗೆ ನೆರವಾಗಿ ಸಕಲ ಸಹಾಯ ಸಂಪತ್ತುಗಳನ್ನು ಒದಗಿಸುವ ಅವಕಾಶ ಮಹಾಸ್ವಾಮಿಯವರಿಗೆ ಲಭಿಸಿದೆ. ಈ ಯುದ್ಧ ನಮ್ಮ ಪರ ದಿಗ್ವಿಜಯವಾಗಿ ಪರಿಣಮಿಸುವುದು ಸಿದ್ಧವಾಗಿರುವುದರಿಂದ ನಮ್ಮ ಮಹಾಸ್ವಾಮಿಯವರಿಗೆ 'ದಿಗ್ವಿಜಯ ಚಾಮರಾಜ ಒಡೆಯರು' ಎಂಬ ನಾಮಾಂಕಿತವೂ ಸಿದ್ಧವಾಗಿದೆ.

ಮಹಾಸ್ವಾಮಿಯವರ ವಿದ್ಯಾವ್ಯಾಸಂಗ ತಮ್ಮ ಪೂಜ್ಯ ತಂದೆ ದೊಡ್ಡಪ್ಪಂದಿರುಗಳ ನೇತೃತ್ವದಲ್ಲಿ ವಿತರಣೆಯಿಂದ ನಡೆಯಿತು. ಮೈಸೂರು ಸಂಸ್ಥಾನ ಮಾದರಿ ಸಂಸ್ಥಾನವೆಂದೂ ರಾಮರಾಜ್ಯವೆಂದೂ ಖ್ಯಾತಿಗಳಿಸಿದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರವರ ಮೇಲ್ವಿಚಾರಣೆಯಲ್ಲಿ ಮಹಾಸ್ವಾಮಿಯವರು ಪಡೆದ ವ್ಯಾಸಂಗ ಎಷ್ಟು ಅಮೂಲ್ಯವಾದುದೆಂದು ನಾವು ಸುಲಭವಾಗಿ ಊಹಿಸಬಹುದಾಗಿದೆ. ಸ್ವದೇಶ ಮತ್ತು ಅನ್ಯದೇಶೀಯ ವಿದ್ಯಾನಿಪುಣರಲ್ಲಿ ಮಹಾಸ್ವಾಮಿಯವರ ಶಿಕ್ಷಣ ಬಹು ತೃಪ್ತಿಕರವಾಗಿ ಬೆಳೆಯಿತು. ಅನಂತರ ಮಹಾಸ್ವಾಮಿಯವರು ದೇಶೀಯ ಪಾಠಶಾಲೆಗಳಲ್ಲಿಯೇ ಮೈಸೂರು ಮಕ್ಕಳ ಅಕ್ಕಪಕ್ಕಗಳಲ್ಲಿ ಕುಳಿತು ತಮ್ಮ ಶಿಕ್ಷಣವನ್ನು ಮುಂದುವರಿಸಿದರು. ಮೈಸೂರು ವಿಶ್ವವಿದ್ಯಾನಿಲಯದ ಪಟ್ಟ ಪರೀಕ್ಷೆಯಲ್ಲಿ ಯಶಸ್ವಿಗಳಾಗಿ ತೇರ್ಗಡೆಹೊಂದಿ ಅನೇಕ ಬಹುಮಾನಗಳನ್ನು ಗೆದ್ದು ಮೈಸೂರು ಪ್ರಜೆಗಳಿಗೆ ಹೆಮ್ಮೆಯನ್ನುಂಟುಮಾಡಿದರು.

ಅನಂತರ ಮಹಾಸ್ವಾಮಿಯವರು ಮೈಸೂರು ಸಂಸ್ಥಾನ, ಭಾರತ ಭೂಮಿ, ಯೂರೋಪು ಮತ್ತು ಜಪಾನ್‌ದೇಶಗಳಲ್ಲಿ ಸಂಚರಿಸಿ ಪ್ರಪಂಚದ ಅನುಭವ ಪಡೆದರು. ನಮ್ಮ ಸಂಸ್ಥಾನದ ಕೋರ್ಟು ಕಛೇರಿಗಳಿಗೂ ಇತರ ಸಂಸ್ಥೆಗಳಿಗೂ ಭೇಟಿಕೊಟ್ಟು ರಾಜ್ಯಾಡಳಿತ ವಿಚಾರಗಳಲ್ಲಿ ಪರಿಶ್ರಮ ಹೊಂದಿದರು.

ಈ ಪ್ರಕಾರ ಸುಶಿಕ್ಷಣ ಪಡೆದ ಮಹಾಸ್ವಾಮಿಯವರು ಕೇವಲ ಮೂರು ವರ್ಷಗಳ ಹಿಂದೆ ಪಟ್ಟಾಭಿಷಿಕ್ತರಾಗಿ ರತ್ನ ಸಿಂಹಾಸನಾರೂಢರಾದರು. ಆಗ ಅವರು ತಮ್ಮ ಪ್ರೀತಿಪಾತ್ರರಾದ ಪ್ರಜೆಗಳಿಗೆ ಒಂದು ಸಂದೇಶವನ್ನು ದಯಪಾಲಿಸಿ ತಮ್ಮನ್ನೂ ತಮ್ಮ ಸರ್ವಸ್ವವನ್ನೂ ಸಂಸ್ಥಾನದ ಜನರ ಸೇವೆಗಾಗಿ ಸಮರ್ಪಿಸಿರುವುದಾಗಿ ಅಪ್ಪಣೆ ಕೊಡಿಸಿದ ಸುವರ್ಣ ವಾಕ್ಯಗಳು ಮಹಾಸ್ವಾಮಿಯವರ ಆತ್ಮತ್ಯಾಗವನ್ನೂ ಪ್ರಜಾವಾತ್ಸಲ್ಯವನ್ನೂ ಪ್ರದರ್ಶಿಸಿ ಪ್ರಜೆಗಳಿಗೆ ಅಮಿತಾನಂದವನ್ನು ಉಂಟುಮಾಡಿದುವು.

ಈ ಮೂರು ವರ್ಷಗಳಿಂದ ಮಹಾಸ್ವಾಮಿಯವರ ಆಳಿಕೆ ಪ್ರಜಾಹಿತಕಾಂಕ್ಷೆ ಮತ್ತು ಸರ್ವ ಸಮನ್ವಯ ದೃಷ್ಟಿಯಿಂದ ನಡೆಯುತ್ತಿದೆ. ಅರಿತ ನುರಿತ ಪ್ರಧಾನ ಶಿರೋಮಣಿ ಅಮಾತ್ಯ ಶಿರೋಮಣಿಗಳೇ ಆದಿಯಾಗಿ ಪ್ರಜಾಸೇವಾಸಕ್ತರಾದ ಸಚಿವರುಗಳ ಮಂತ್ರಾಲೋಚನ ಸಹಾಯದಿಂದ ರಾಜ್ಯಭಾರ ಸುಸೂತ್ರವಾಗಿ ಮುಂದುವರಿಯುತ್ತಿದೆ.

ಮೇಲಾಗಿ, ಮಹಾಸ್ವಾಮಿಯವರ ದೈವಭಕ್ತಿ ಭಗವದಾರಾಧನೆಗಳ ದೆಸೆಯಿಂದ ರಾಜ್ಯಾಡಳಿತದಲ್ಲಿ ಸತ್ಯ ಧರ್ಮಗಳು ಪರಿಪಾಲಿತವಾಗುತ್ತಿವೆ.

ಮಹಾಸ್ವಾಮಿಯವರು ನಮ್ಮ ಕನ್ನಡ ಸಾಹಿತ್ಯ ಪರಿಷತ್ತಿಗೆ ಅಮೋಘವಾದ ಉಪಕಾರವನ್ನು ಮಾಡಿ ನಮ್ಮನ್ನು ಅನುಗ್ರಹಿಸುತ್ತಿದ್ದಾರೆ. ಆರನೆಯ ವಸಂತ ಸಾಹಿತ್ಯೋತ್ಸವ ಸಭಾರಂಭವನ್ನು ಕೃಪೆಯಿಟ್ಟು ನೆರವೇರಿಸಿಕೊಟ್ಟು ಕನ್ನಡ ನಾಡು ನುಡಿ ಸಾಹಿತ್ಯಗಳಲ್ಲಿ ತಮಗಿರುವ ಅಪ್ರತಿಮ ಪ್ರೇಮವನ್ನು ಪ್ರದರ್ಶಿಸಿದ್ದಾರೆ. ಪರಿಷತ್ತಿನ ಘನ ಪೋಷಕರಾಗಿದ್ದುಕೊಂಡು ನಮ್ಮ ಕಾರ್ಯಕಲಾಪಗಳಿಗೆ ಸ್ಫೂರ್ತಿಯನ್ನು ದಯಪಾಲಿಸಿದ್ದಾರೆ. ಪ್ರತಿ ವಸಂತೋತ್ಸವಕ್ಕೂ ದ್ರವ್ಯ ಸಹಾಯ ನೀಡುತ್ತಿದ್ದಾರೆ. ಮತ್ತು ತಮ್ಮ ಸರ್ಕಾರದಿಂದ ಪರಿಷತ್ತಿಗೆ ಹೆಚ್ಚಿನ ದ್ರವ್ಯ ಸಹಾಯ ಒದಗುವಂತೆ ಉಪಕರಿಸಿದ್ದಾರೆ. ಮಹಾಸ್ವಾಮಿಯವರ ಕನ್ನಡ ಪ್ರೇಮ ಕನ್ನಡ ರಾಜ್ಯದ ಏಕೀಕರಣಕ್ಕೆ ಬೆಂಬಲ ಕೊಟ್ಟಿದೆ: ಮೈಸೂರು ಸಂಸ್ಥಾನಾಧೀಶ್ವರರು ಕರ್ನಾಟಕ ಸಾಮ್ರಾಜ್ಯಾಧೀಶರಾಗುವ ಸಂಭವವನ್ನು ಇದು ಮುನ್‌ಸೂಚಿಸುತ್ತಿದೆ. ಮೈಸೂರು ಸಂಸ್ಥಾನವು ವಿಜಯನಗರ ಸಾಮ್ರಾಜ್ಯದ ವೈಶಿಷ್ಟ್ಯ, ವೈಖರಿ ಮತ್ತು ವೈಭವಗಳನ್ನು ತಳೆದು ರಾರಾಜಿಸುವ ಚಿನ್ಹೆಗಳು ಕಾಣಬರುತ್ತಿವೆ. ಮೈಸೂರಿನ ಧವಳ ಕೀರ್ತಿ ದಿಗಂತ ವಿಶ್ರುತವಾಗಿ ಆಚಂದ್ರಾರ್ಕವಾಗಿ ಬೆಳಗುವ ಆಶಾಕಿರಣಗಳು ಮೂಡಿಬರುತ್ತಿವೆ.

ಇಂತಹ ಮಹಾಸ್ವಾಮಿಯವರನ್ನು ಪಡೆದಿರುವ ಪ್ರಜೆಗಳಾದ ನಾವು ಧನ್ಯರು. ರಾಜರೇ ಪ್ರತ್ಯಕ್ಷ ದೇವರು ಎಂಬುದು ನಮ್ಮ ನಂಬಿಕೆ. ಮಹಾಸ್ವಾಮಿಯವರು ದೇವರಂತೆ ನಮಗೆ ವರಪ್ರದಾನಗಳನ್ನು ಕೊಟ್ಟು

(೨೦೪ನೆಯ ಪುಟಕ್ಕೆ)

# ಕನ್ನಡ ನುಡಿ

**ಶುಕ್ರವಾರ, ಜುಲೈ ೩೦, ೧೯೪೩**

## ಶ್ರೀ ಜಯಚಾಮರಾಜ ಒಡೆಯರವರ ಇಪ್ಪತ್ತೈದನೆಯ ವರ್ಷ ವರ್ಧಂತಿ

೨೨-೭-೪೩ನೆಯ ಗುರುವಾರ ಮೈಸೂರು ಸಂಸ್ಥಾನದಲ್ಲೆಲ್ಲ ಕರ್ನಾಟಕ ರತ್ನ ಸಿಂಹಾಸನಾಧೀಶ್ವರರೂ, ಪರಿಷತ್ತಿನ ಮಹಾ ಪೋಷಕರೂ ಆದ ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರು **ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್** ಅವರ ೨೫ನೆಯ ವರ್ಷ ವರ್ಧಂತ್ಯುತ್ಸವ ಬಹಳ ವಿಜೃಂಭಣೆಯಿಂದ ನಡೆಯಿತು. ಆ ದಿನ ಪರಿಷನ್ಮಂದಿರದಲ್ಲಿ ಶ್ರೇಯಃಪ್ರಾರ್ಥನೆಯ ಸಭೆ ಶ್ರೀಮಾನ್ ಬಿ. ಪುಟ್ಟಯ್ಯ. ಬಿ.ಎ. ಅವರ ಅಧ್ಯಕ್ಷತೆಯಲ್ಲಿ ನೆರವೇರಿತು. ವರದಿಯನ್ನು ಬೇರೆ ಕಡೆ ಕೊಟ್ಟಿದೆ.

ಮಹಾಸ್ವಾಮಿಯವರು ಪರಿಷತ್ತಿನ ಕಾರ್ಯಕಲಾಪಗಳಲ್ಲಿ ಅತ್ಯಂತ ಗಾಢವಾದ ಮಮತೆ ಆಸಕ್ತಿಗಳನ್ನು ತೋರಿಸಿ ಬಹು ವಿಧವಾಗಿ ಉಪಕಾರ ಮಾಡುತ್ತ ಅನುಗ್ರಹಿಸುತ್ತಿರುವುದನ್ನು ಎಷ್ಟು ನೆನೆದರೂ ಸಾಲದಾಗಿದೆ. ಪರಿಷತ್ತಿನ ಪರವಾಗಿ ಮಹಾಸ್ವಾಮಿಯವರಿಗೆ ಶ್ರೇಯಸ್ಸನ್ನು ಕೋರಿ ರಾಜಭಕ್ತಿ ವಿಶ್ವಾಸಗಳನ್ನು ತಂತಿ ಕೊಟ್ಟು ನಿವೇದಿಸಿಕೊಳ್ಳಲಾಯಿತು.

ಮಹಾಸ್ವಾಮಿಯವರು ರಾಜ್ಯಭಾರ ವಹಿಸಿಕೊಂಡು ಮೂರು ವರ್ಷಗಳಾಗುತ್ತ ಬಂದುವು. ಅವರು ಆಡಳಿತದಲ್ಲಿ ತೋರಿಸುತ್ತಿರುವ ಪ್ರಗತಿ ಮನೋಭಾವವೂ ಪ್ರಜೆಗಳ ಹಿತಚಿಂತನೆಯಲ್ಲಿ ತೋರಿಸುತ್ತಿರುವ ಗಾಢವಾದ ಆಸಕ್ತಿಯೂ ಎಲ್ಲರಲ್ಲೂ ವಿಶ್ವಾಸ ಗೌರವಗಳನ್ನು ಹೆಚ್ಚಿಸುತ್ತಿವೆ. ನಾಡಿನ ಕೀರ್ತಿಯನ್ನು ಹಬ್ಬಿಸುತ್ತಿವೆ. ಮಹಾಸ್ವಾಮಿಯವರ ಕನ್ನಡದ ಪ್ರೇಮ ಮೈಸೂರ ಗಡಿದಾಟ, ಕನ್ನಡ ನಾಡ ಒಟ್ಟು ಮುನ್ನಡೆಯನ್ನು ಹಾರೈಸಿ ಅವರಿಂದ ಅನೇಕ ವೇಳೆ ಪ್ರೋತ್ಸಾಹಕವಾದ ವಾಕ್ಯಗಳನ್ನಾಡಿಸಿದೆ.

ಮಹಾಸ್ವಾಮಿಯವರಿಗೆ ಭಗವಂತನು ಆಯುರಾರೋಗ್ಯಾದಿ ಸಕಲ ಭಾಗ್ಯವನ್ನು ಕರುಣಿಸಲೆಂದೂ ಪ್ರಭುಗಳ ಕೃಪಾಮಯವೂ ಪ್ರಗತಿಪರವೂ ಆದ ಆಳಿಕೆಯಿಂದ ನಾಡು ಇನ್ನೂ ಹೆಚ್ಚಿನ ಶ್ರೇಯಸ್ಸನ್ನು ಪಡೆಯಲೆಂದೂ ಪರಿಷತ್ತು ಹಾರೈಸುತ್ತದೆ.

ಯದು ಸಂತಾನ ಶ್ರೀ ಚಿರಕಾಲ ಆಳಿ ಬಾಳಲಿ.

### ವರ್ಧಂತಿಯ ಪ್ರಶಸ್ತಿಗಳು: ಅಭಿನಂದನೆ

ಈ ಸಲ ವರ್ಧಂತಿಯ ವಿಶೇಷದರ್ಬಾರಿನಲ್ಲಿ ಶ್ರೀಮನ್ಮಹಾರಾಜರವರು ಮೈಸೂರಿನ ಹಿರಿಯರು ಕೆಲವರಿಗೆ ಅವರ ರಾಜಭಕ್ತಿ ದೇಶಸೇವೆಗಳನ್ನು ಮೆಚ್ಚಿ ಪ್ರಶಸ್ತಿಗಳನ್ನು ಅನುಗ್ರಹಿಸಿದ್ದಾರೆ.

ರೆವಿನ್ಯೂ ಕಮೀಷನರಾದ ಶ್ರೀಮಾನ್ ಮಂಗಲಂ ಶೇಷಾದ್ರಿಯವರಿಗೂ ಫೈನಾನ್ಷಿಯಲ್ ಸೆಕ್ರೆಟರಿಯವರಾದ ಶ್ರೀಮಾನ್ ಮಾವತ್ತೂರು ವೀರರಾಜೆ ಅರಸಿನವರಿಗೂ 'ರಾಜಸೇವಾಪ್ರಸಕ್ತ'; ಬೆಂಗಳೂರಿನ ಪ್ರಸಿದ್ಧ ವ್ಯಾಪಾರ-ವಾಣಿಜ್ಯಪಟುಗಳಾದ ಶ್ರೀಮಾನ್ ಲೊಕ್ಕೂರು ಶ್ರೀನಿವಾಸಮೂರ್ತಿ ವೆಂಕಾಜಿರಾಯರಿಗೂ ಶ್ರೀಮಾನ್ ದೇವರಾವ್ ಶಿವರಾಮ್ ಉಭಯಕರ ಅವರಿಗೂ 'ಧರ್ಮಪ್ರಕಾಶ'; ಬ್ರಹ್ಮಶ್ರೀ ಮಹಾವಿದ್ವಾನ್ ಕುಕ್ಕೆ ಸುಬ್ರಹ್ಮಣ್ಯಶಾಸ್ತ್ರಿಗಳವರಿಗೆ 'ಪಂಡಿತರತ್ನ' ಎಂಬ ಬಿರುದುಗಳು ತಕ್ಕ ಮರ್ಯಾದೆಗಳೊಡನೆ ದೊರೆತಿವೆ.

ಈ ಮಹನೀಯರಲ್ಲಿ 'ಧರ್ಮಪ್ರಕಾಶ' ಪ್ರಶಸ್ತಿಯನ್ನು ಪಡೆದವರಿಬ್ಬರೂ ಪರಿಷತ್ತಿನ ಮಾನ್ಯ ಸದಸ್ಯರು. ಪಂಡಿತರತ್ನಂ ಶ್ರೀ. ಕುಕ್ಕೆ ಸುಬ್ರಹ್ಮಣ್ಯ ಶಾಸ್ತ್ರಿಗಳವರು ಪರಿಷತ್ತಿನ ಅನೇಕ ವಿದ್ವತ್ಸಭೆ ಸಮಾರಂಭಗಳಲ್ಲಿ ಭಾಗವಹಿಸಿ ಕನ್ನಡದ ಸೇವೆಗೆ ಬೆಂಬಲ ಕೊಟ್ಟು ಪ್ರೋತ್ಸಾಹಿಸುತ್ತಿರುವುದಲ್ಲದೆ, ಅವರ ಉಭಯ ಭಾಷಾ ಪಾಂಡಿತ್ಯದಿಂದ ನಾಡಿನ ವಿದ್ವತ್ ಪ್ರಪಂಚಕ್ಕೆ ಭೂಷಣರಾಗಿದ್ದಾರೆ. ಅವರು ಕಾಳಿದಾಸ ಮಹಾಕವಿಯ 'ಮೇಘ ಸಂದೇಶ'ದ ಚೆಲುವನ್ನು ಷಟ್ಪದೀ ರೂಪವಾಗಿ ಕನ್ನಡಕ್ಕೆ ಇಳಿಸಿ ಉಪಕಾರ ಮಾಡಿರುವುದನ್ನು ಎಲ್ಲರೂ ಬಲ್ಲವರಾಗಿದ್ದಾರೆ. ಪರಿಷತ್ತಿನ ಅಂಗಸಂಸ್ಥೆಯಾದ ಶಿವಮೊಗ್ಗ ಕರ್ನಾಟಕ ಸಂಘದ ಆಧಾರ ಸ್ತಂಭಗಳಲ್ಲೊಬ್ಬರಾಗಿ ಸಂಘದ ಬಹುಮುಖವಾದ ಏಳಿಗೆಗೆ ಸಹಾಯ ಮಾಡಿದವರಾಗಿದ್ದಾರೆ.

ಪ್ರಶಸ್ತಿಯನ್ನು ಪಡೆದಿರುವ ಈ ಮಹನೀಯರನ್ನೆಲ್ಲ ನಾವು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇವೆ. ಇವರೆಲ್ಲರ ನಾಡಸೇವೆ ದಿನ ದಿನಕ್ಕೂ ಹೆಚ್ಚಿ ನಾಡು ಎಲ್ಲ ಮುಖದಿಂದಲೂ ಏಳಿಗೆ ಹೊಂದಲೆಂದು ಹಾರೈಸುತ್ತೇವೆ.

### ಆಸ್ಥಾನ ವಿದ್ವಾನ್
### ಶ್ರೀ. ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರಿಗಳು

ಈ ಮೇಲ್ಕಂಡ ಮಹನೀಯರಲ್ಲದೆ, ಈ ವರ್ಷ ಬ್ರಹ್ಮಶ್ರೀ ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರಿಗಳವರನ್ನು ಮಹಾಸ್ವಾಮಿಯವರು ಆಸ್ಥಾನ ವಿದ್ವಾಂಸರನ್ನಾಗಿ ಮರ್ಯಾದಿಸಿ ಅನುಗ್ರಹ ಮಾಡಿರುತ್ತಾರೆಂದು ಕೇಳಿ ಹರ್ಷಿಸುತ್ತೇವೆ. ಶ್ರೀಮಾನ್ ಸುಬ್ರಹ್ಮಣ್ಯಶಾಸ್ತ್ರಿಗಳು ಸಂಸ್ಥಾನದ ಹಿರಿಯ ಪಂಡಿತ ಕುಟುಂಬಕ್ಕೆ ಸೇರಿದವರು. ವಾಲ್ಮೀಕಿ ರಾಮಾಯಣ, ಸ್ಕಾಂದ ಪುರಾಣ ಮುಂತಾದ ಸಂಸ್ಕೃತ ಗ್ರಂಥಗಳನ್ನು ಕನ್ನಡಿಸುತ್ತ ಜ್ಞಾನ ಪ್ರಸಾರ ಕಾರ್ಯದಲ್ಲಿ ನಿರತರಾಗಿರುವವರೂ ಆದ ಬ್ರಹ್ಮಶ್ರೀ ಸುಬ್ರಹ್ಮಣ್ಯಶಾಸ್ತ್ರಿಗಳಿಗೆ ದೊರೆತಿರುವ ಈ ರಾಜಮನ್ನಣೆಗಾಗಿ ಅವರನ್ನು ನಾವು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇವೆ. ಶ್ರೀಯುತರು ಪರಿಷತ್ತಿನ ಸದಸ್ಯರು. ಸಾಹಿತ್ಯ ಪರೀಕ್ಷೆ, ಗಮಕ ಕಲಾ ಪ್ರಚಾರ, ಕಾವ್ಯ ವಾಚನಾದಿ ಪರಿಷತ್ತಿನ ಚಟುವಟಿಕೆಗಳಲ್ಲಿ ನೆರವಾಗುವುದರ ಮೂಲಕವೂ, 'ಕನ್ನಡ ನುಡಿಗೆ' ಆಗಿಂದಾಗ್ಗೆ ಲೇಖನಗಳನ್ನು ಕೊಡುವುದರ ಮೂಲಕವೂ ಪರಿಷತ್ತಿಗೆ ಉಪಕಾರ ಮಾಡುತ್ತಿದ್ದಾರೆ. ಇವರ ಭಾಷಾಸೇವೆ ಇನ್ನೂ ಹೆಚ್ಚಿ ನಾಡಿಗೆ ಉಪಕಾರವಾಗಲೆಂದು ಹಾರೈಸುತ್ತೇವೆ.

---

### ಪರಿಷತ್ತಿನಲ್ಲಿ ಶ್ರೀಮನ್ಮಹಾರಾಜರವರ ವರ್ಧಂತ್ಯುತ್ಸವ

(೨೦೩ನೆಯ ಪುಟದಿಂದ)

ಕಾಪಾಡಲಿ. ಇಂತಹ ನೂರು ವರ್ಧಂತ್ಯುತ್ಸವಗಳನ್ನು ಆಚರಿಸುವ ಪುಣ್ಯ ಅವರ ಪ್ರಜೆಗಳಿಗೆ ಒದಗಿ ಬರುವಂತೆ ಭಗವಂತನು ಮಹಾಸ್ವಾಮಿಯವರಿಗೆ ಆಯುರಾರೋಗ್ಯ ಸನ್ಮಂಗಳಗಳನ್ನು ದಯಪಾಲಿಸಲಿ. ಶ್ರೀ ಚಾಮುಂಡೇಶ್ವರೀ ವರಪ್ರಸಾದೋದ್ಭವರಾದ ಮಹಾಸ್ವಾಮಿಯವರಿಗೂ ರಾಜಮನೆತನದವರಿಗೂ ಜಗದಾಂಬೆ ಸಮಸ್ತ ಸುಖ ಸೌಭಾಗ್ಯಗಳನ್ನಿತ್ತು ಕಾಪಾಡಲಿ.

ಬಳಿಕ ಕೆಳಗೆ ಕಂಡಂತೆ ಶ್ರೇಯಃಪ್ರಾರ್ಥನೆಯ ನಿರ್ಣಯವನ್ನು ಸಭೆ ಜಯಕಾರಗಳೊಡನೆ ಅಂಗೀಕರಿಸಿತು.

### ಶ್ರೇಯಃಪ್ರಾರ್ಥನೆಯ ನಿರ್ಣಯ

ಕರ್ನಾಟಕ ರತ್ನ ಸಿಂಹಾಸನಾಧೀಶ್ವರರೂ ಕನ್ನಡ ಸಾಹಿತ್ಯ ಪರಿಷತ್ತಿನ ಮಹಾಪೋಷಕರೂ ಆಗಿರುವ ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರು ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್ ಮಹಾಸ್ವಾಮಿಯವರ ೨೫ನೆಯ ವರ್ಷ ವರ್ಧಂತ್ಯುತ್ಸವದ ಪ್ರಯುಕ್ತ ಬೆಂಗಳೂರು ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಸೇರಿರುವ ಈ ಸಾರ್ವಜನಿಕ ಸಭೆ ಮಹಾಪ್ರಭುಗಳವರಿಗೆ ಜಗದೀಶ್ವರನು ಆಯುರಾರೋಗ್ಯ ವಿಜಯ ಐಶ್ವರ್ಯಾದಿ ಸಮಸ್ತ ಸನ್ಮಂಗಳಗಳನ್ನೂ ಕರುಣಿಸಲೆಂದು ಪ್ರಾರ್ಥಿಸುತ್ತದೆ; ಮತ್ತು ತನ್ನ ರಾಜಭಕ್ತಿ ವಿಶ್ವಾಸಗಳನ್ನು ಮಹಾಸ್ವಾಮಿಯವರಲ್ಲಿ ಅರಿಕೆ ಮಾಡಲು ಅಪ್ಪಣೆ ಬೇಡುತ್ತದೆ.

'ಕಾಯೌ ಶ್ರೀ ಗೌರಿ' ಹಾಡಿದಮೇಲೆ ಸಭೆ ಮುಗಿಯಿತು.

## ಜೀವನದಲ್ಲಿಯ ಉನ್ಮಾದ

(ಒಂದು ಪ್ರಬಂಧ)

(ಶ್ರೀ. ಎನ್. ಎಸ್. ಗದಗಕರ, ಬಿ.ಎ., ಧಾರವಾಡ.)

ಜೀವನವು ಕಟುವಾದುದು, ದುಃಖಮಯವಾದುದು ಎಂದು ಗೋಳಿಡುವವರನೇಕರು. ಕೆಲವರಿಗೆ ಅದೇ ಜೀವನವು ಉನ್ಮಾದದಿಂದ ತುಂಬಿ ತುಳುಕುವುದು. ಆದರೆ ಸಾಹಿತ್ಯದ ವಿಷಯವಾಗಿ ವಿವೇಚಿಸುವುದಾದರೆ, ಬರಿಯ ದುಃಖವಾದರೂ ನೈಜ ಸರಣಿಯಿಂದ ತೀರ ಮಾರ್ಮಿಕವಾಗಿ ಅಂದವಾಗಿ ಕವನ ರೂಪ ತಳೆದು ಹೃದಯ ಬುಗ್ಗೆಯಿಂದ ಎಷ್ಟು ಸಲ ಹೊರಸೂಸಿರಲಿಕ್ಕಿಲ್ಲ? 'Our Sweetest Songs are those that tell of Saddest Thoughts' ಎಂಬ ಶೆಲೆ ಮಹಾಕವಿಯ ನುಡಿ ಈ ಮಾತನ್ನೇ ಪುರಸ್ಕರಿಸುವುದು. ಶ್ರೀ. ಬೇಂದ್ರೆಯವರ 'ಮೂವತ್ತುಮೂರು ಕೋಟಿ', 'ಹಳ್ಳದ ದಂಡ್ಯಾಗ' ಎಂಬ ಕವನಗಳನ್ನು ಪರಿಶೀಲಿಸಿ ನೋಡಿದರೆ, ದುಃಖದ ಆವೇಗವೂ ನಿರಾಶೆಯ ನೆಲೆಯೂ ಅಪೂರ್ವವಾದುವೆಂದು ಹೊಳೆಯುವುದು.

ಜೀವನವೆಲ್ಲವೂ ಕಾರಿರುಳು ಎನ್ನುವುದು ತಪ್ಪು ಎಂದು ರಸಾನುಭವಿಗಳ ಅಭಿಪ್ರಾಯ. ಸಂಸಾರದ ಸಾರಸರ್ವಸ್ವವೆಂದರೆ ಉನ್ಮಾದವೇ ಎಂದು ಅವರ ನಂಬಿಕೆ. ಈ ಉನ್ಮಾದ ಸಜೀವ ವಸ್ತುಗಳಲ್ಲಿ ಚಟುವಟಿಕೆಗಳ ರೂಪವಾಗಿಯೂ ಇನ್ನೂ ಹಲವು ಬಗೆಗಳಲ್ಲಿ ಪ್ರಕಟಿಸಿಕೊಳ್ಳುವುದು. ಗಿಡಗಳು ಹೂ ಬಿಡುವುದು, ಕೋಗಿಲೆ ಗಿಳಿಗಳು ಸಂಗೀತ ಧಾರೆಯನ್ನು ಸುರಿಸುವುದು, ಹಸುಗೂಸುಗಳು ನಗುವುದು, ಕುಣಿದಾಡುವುದು, ಜಿಗಿದಾಡುವುದು, ತರುಣ ತರುಣಿಯರು ಹಗಲುಗನಸುಗಳ ಕಲ್ಪನಾ ಸಾಮ್ರಾಜ್ಯದಲ್ಲಿ ಲೋಲಾಡುವುದು ಮತ್ತು ಆಕಾಶಮುಟ್ಟುವ ಆಕಾಂಕ್ಷೆಗೂ ಹಂಬಲಿಸುವುದು, ಹಾಗೂ ಮನುಷ್ಯನು ಚಿಕಿತ್ಸಕನಾಗಿ ಸಾಹಸಕ್ಕೆ ಕೈಹಾಕುವುದು ಎಲ್ಲವೂ ಉನ್ಮಾದದಿಂದಲೇ. ಪಂದ್ಯಾಟದಲ್ಲಿ ಭಾಗ ತೆಗೆದುಕೊಂಡವರ ಮೊಗದಲ್ಲಿಯೂ, ಸೈಕಲ್ ಸವಾರರಲ್ಲಿಯೂ, ಕುದುರೆ ಹತ್ತಿದಾಗಲೂ ಉನ್ಮಾದ ಮೊಗದಲ್ಲಿ ಕಾಣಿಸಿಕೊಳ್ಳುವುದುಂಟು. ಅಷ್ಟು ದೂರ ಏಕೆ? ಲಹರಿಯ ಸೊತ್ತಾಗಿ ಬೀದಿಗುಂಟ ಅಲೆದಾಡುವ ಮಕ್ಕಳು ಸಿಳ್ಳು ಹಾಕುವುದು ಉನ್ಮಾದದ ದ್ಯೋತಕವಲ್ಲವೇ?

ಉನ್ಮಾದದ ದುರುಪಯೋಗವಾಗುವುದೇ ಹೆಚ್ಚು. ಅದೂ ಒಂದು ಬಗೆಯಿಂದ ಬ್ರಹ್ಮಾನಂದವನ್ನೂ ಪ್ರಶಾಂತತೆಯನ್ನೂ ಸೂರೆಗೊಳ್ಳಬಹುದೆಂದು ಎಷ್ಟೋ ಜನರಿಗೆ ಅರಿವಿಲ್ಲ. ಆದರೆ ಪ್ರತಿಭಾಶಾಲಿಗಳಾದ ಕವಿಗಳಿಗೆ, ಕಾದಂಬರಿಕಾರರಿಗೆ, ಪ್ರಬಂಧಕಾರರಿಗೆ ಮಾತ್ರ ಉನ್ಮಾದದ ಕಲ್ಪನೆ ಇದ್ದೇ ಇದೆ. ಅಂತೆಯೆ ಜೀವನದಲ್ಲಿ ಸಮರಸವಾಗಿರುವ ಪ್ರೇಮ, ಕಲಹ, ಸ್ವಾರ್ಥತ್ಯಾಗಗಳಿಗಿಂತಲೂ ಇನ್ನೂ ಹೆಚ್ಚಾಗಿ ರಕ್ತಗತವಾದುದೆಂದರೆ ಉನ್ಮಾದವೆಂದು ಅವರ ಗ್ರಹಿಕೆ, ಉನ್ಮಾದದ ಈ ಕಾರ್ಯರಂಗದಲ್ಲಿಯೇ ಪರಿಪಕ್ವ ಜ್ಞಾನವೂ ಆಧ್ಯಾತ್ಮಿಕ ದೃಷ್ಟಿಕೋನವೂ ಹುದುಗಿವೆ!

ಸಾಮಾನ್ಯವಾಗಿ ಉನ್ಮಾದದ ಉಗಮ ನಗೆಯ ಲಹರಿಯಲ್ಲಿ. ಉಳಿದ ಪ್ರಾಣಿಗಳಿಗೆ ಇಲ್ಲದ ಈ ನಗೆ ಮನುಷ್ಯನಿಗೆ ಇದೆ. ಅಗಲಿಕೆಯಿಂದ ಅಳುವುದಾದರೂ ಅವನ ಸೊತ್ತು ಇರಬಹುದು. ಸಪ್ತಸಮುದ್ರಗಳನ್ನು ಅಲ್ಲೋಲ ಕಲ್ಲೋಲವಾಗಿಸುವ ಈ ನಗೆ ಇಂದಿನ ಪ್ರಗತಿಪರ ಕನ್ನಡ ನುಡಿಯಲ್ಲಿ ಕಡಮೆಯೆ? ಶ್ರೀರಂಗರ ವ್ಯಂಗ್ಯ ಚಿತ್ರಗಳು, ಪ್ರಪಂಚವನ್ನೇ ತಿರುವು ಮುರುವು ಮಾಡಿನೋಡುವ ಶ್ರೀ. ಕಾರಂತರ ಬಗೆ, 'ಬಿಂಕದ ಸಿಂಗಾರಿ ಪಾತರಗಿತ್ತಿ ಪಕ್ಕ'ದಂತಹ ಕವನ ಸೃಷ್ಟಿ, ವಿವಿಧ ಹುಚ್ಚಾಟ ನಾಟ್ಯಛಟಾ ವ್ಯಂಗ್ಯಪ್ರಬಂಧಗಳೆಲ್ಲವೂ ಜೀವನದಲ್ಲಿಯ ಉನ್ಮಾದದ ಪ್ರತೀಕಗಳೆ! ಅಡಿಯಿಂದ ಮುಡಿಯ ವರೆಗೆ ಹೊರಸೂಸುವ ನಗೆಯ ಲಹರಿಯಿಂದಲೇ ಮನುಷ್ಯನ ಸ್ವಭಾವವನ್ನು ಕಂಡುಹಿಡಿಯಬಹುದು. ಕೊನೆಗೆ ಉನ್ಮಾದದ ಸುಳಿವಿಲ್ಲದವರು ಕಪಟಿಗಳು!

ದೈನಿಕ ಜೀವನದಲ್ಲಿ ಉನ್ಮಾದಕ್ಕೇನು ಕೊರತೆ? ಕ್ಷಣಕ್ಷಣಕ್ಕೆ ನಮಗೆ ಅದರ ಅರಿವಾಗುವುದುಂಟು. ಒಂದು ಬೆಟ್ಟದ ಪ್ರದೇಶ ಏರುವುದಿದೆ ಎನ್ನಿ. ಮೊದಲು ಏರುವ ಕೆಲಸವೆಂದರೆ ಎಷ್ಟು ಬೇಜಾರು, ಶ್ರಮ! ಕೊನೆಗೆ ಮನಸ್ಸಿನ ನಿರ್ಧಾರಕ್ಕೆ ಸೋತು ನಾವು ಏರಲು ಉಪಕ್ರಮಿಸಿ ತುಟ್ಟತುದಿಗೆ ಮುಟ್ಟಿದಾಗಿನ ಉನ್ಮಾದ ನಿಜವಾಗಿಯೂ ಅಸಾಮಾನ್ಯ. ಆಗ ನಾವು ಕೆಲಕಾಲ ಸೊಬಗಿನ ಸೋನೆ ಸವಿಯುವೆವು. ಅಲ್ಲಿಯ ತಂಗಾಳಿ ಮೆಲ್ಲನೆ ಗಲ್ಲಗಳಿಗೆ ಮುದ್ದಿಡುವುದು. ಪಚ್ಚಪಸಿರುಹುಲ್ಲು ಕಣ್ಣಿಗೆ ಹಬ್ಬವಾಗುವುದು. ಸುತ್ತಲು ದಿಟ್ಟಿ ಚೆಲ್ಲಿ ನೋಡಿದಾಗ ಸೃಷ್ಟಿದೇವಿ ನಮ್ಮನ್ನು ನಿಂತಲ್ಲಿಯೇ ನಿಲ್ಲಗೊಡುವುದಿಲ್ಲ. ನಿಂದ ನೆಲದ ಗುಣವೋ ಕಾಲಮಹಿಮೆಯೋ ಯಾರಿಗೆ ಗೊತ್ತು? ಮುಖ್ಯವಾಗಿ ಭಾವನೆಯ ಕ್ಷಿತಿಜ ಉನ್ಮಾದದ ಸೆರೆಸಿಕ್ಕು ವಿಶಾಲವಾಗುತ್ತ ನಡೆಯುವುದು. ಹಾಗೇ ಮನುಷ್ಯನ ಕೀಳುಮೇಲೆಂಬ ಭಾವನೆಗೆ ತಿಲಾಂಜಲಿ!

ಸಾಹಿತ್ಯ ಉನ್ಮಾದವನ್ನು ಹೆಚ್ಚಿಸುವುದಲ್ಲದೇ ಸಂಸ್ಕಾರದ ರೂಪಿಡುವುದು, ಆಧ್ಯಾತ್ಮಿಕ ಸರಣಿಯನ್ನು ಮೊಳಗಿಸುವುದು. ಪರದುಃಖಕ್ಕಾಗಿ ಸಹಾನುಭೂತಿಯಿಂದ ಕಣ್ಣೀರು ಇಡುವ ಪ್ರವೃತ್ತಿ ಸಾಹಿತ್ಯದಿಂದಲೇ ಉದ್ಭವಿಸಿದೆ. ಮಹಾನುಭವಿಗಳ ಚರಿತ್ರಾಂಶಗಳನ್ನು ಒದವಿಸುವುದಂತೂ ಅದರ ಹಿರಿಯ ಗುರಿ. ಇಂತು 'The days that make us happy make us wise' ಎಂದು ಭಾವಗರ್ಭಿತವಾಗಿ ಬಾಯರನ್ ಕವಿ ಉಸಿರಿದಂತೆ, ಸಾಹಿತ್ಯದಿಂದ ನಿರಂತರವೂ ಹೊರಚೆಲ್ಲುವ ಉನ್ಮಾದದಿಂದಲೇ ನಾವು ರಸಾನುಭವ ಪಡೆದು ಸಂಸ್ಕಾರವಂತರಾಗುವುದಿಲ್ಲವೇ?

---

### ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ

**ಸಂಸ್ಥಾಪನಾ ದಿನೋತ್ಸವ.**—ಜುಲೈ ೨೦ನೆಯ ಮಂಗಳವಾರ ಕರ್ನಾಟಕ ವಿದ್ಯಾವರ್ಧಕ ಸಂಘದ ಸಂಸ್ಥಾಪನಾ ದಿನೋತ್ಸವ ಶ್ರೀ. ರಾಮನಾಥರಾವ, ಎಸ್. ನಾಡಿಗೇರ, ನಿವೃತ್ತ ಜಜ್ಜರು, ಸಾಂಗಲಿ ಅವರ ಅಧ್ಯಕ್ಷತೆಯಲ್ಲಿ ಸಂಜೆ ವಿಜೃಂಭಣೆಯಿಂದ ನೆರವೇರಿತು. ಕುಮಾರಿ ವಿಮಲಾ ಮತ್ತು ಪ್ರಮಿಲಾ ಕಮಲಾಪೂರ ಇವರ ಕರ್ನಾಟಕ ಗೀತೆಯೊಡನೆ ಸಭೆಯ ಕಾರ್ಯ ಪ್ರಾರಂಭವಾದಮೇಲೆ ಶ್ರೀ. ಬೆಟಗೇರಿ ಕೃಷ್ಣಶರ್ಮರು ಅಧ್ಯಕ್ಷರ ಪರಿಚಯವನ್ನು ಮಾಡಿಕೊಟ್ಟು, ಅಧ್ಯಕ್ಷಸ್ಥಾನವನ್ನು ವಹಿಸುವಂತೆ ಶ್ರೀ. ರಾಮನಾಥರಾಯರನ್ನು ಬಿನ್ನವಿಸಿದರು. ಕಾರ್ಯದರ್ಶಿಗಳಾದ ಶ್ರೀ. ಎಸ್. ಎಸ್. ನೆಗಳೂರ ಅವರು ಪ್ರಾಸ್ತಾವಿಕವಾಗಿ ಮಾತನಾಡಿದರು. ಸಂಘದ ಇದುವರೆಗಿನ ಕಾರ್ಯವನ್ನೂ ಧ್ಯೇಯಗಳನ್ನೂ ವರ್ಣಿಸಿ, ಇನ್ನು ಮುಂದೆ ಸಂಘ ಮಾಡಬೇಕಾದ ಕಾರ್ಯವನ್ನು ಅವರು ವಿವರಿಸಿದರು.

ಉತ್ಸವದ ಅಂಗವಾಗಿ ಏರ್ಪಡಿಸಲಾಗಿದ್ದ ಸಾಹಿತ್ಯ ಸ್ಪರ್ಧೆಗಳಿಗೆ ಶ್ರೀ. ಶಂ. ಬಾ. ಜೋಶಿ, ಶ್ರೀ. ಕೃ. ಶ್ರೀ. ಬೆಟಗೇರಿ, ಶ್ರೀ. ಗುರುರಾವ ದೇಶಪಾಂಡೆ ಇವರು ಪರೀಕ್ಷಕರಾಗಿದ್ದರು.

ಅನಂತರ, ಮುಂಬಯಿ ವಿಶ್ವವಿದ್ಯಾಲಯದ ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಮೊದಲನೆಯ ನಂಬರು ಪಡೆದ ಹಾವೇರಿ ಹೈ ಸ್ಕೂಲಿನ ಶ್ರೀ. ಜಿ. ಜಿ. ಅರ್ಚಕ, ಅದೇ ಪರೀಕ್ಷೆಯಲ್ಲಿ ಉಚ್ಚ ತರಗತಿಯಲ್ಲಿ ಉತ್ತೀರ್ಣವಾಗಿ ಜಗನ್ನಾಥ ಶಂಕರಶೇಟ್ ಅವರ ಪ್ರಥಮ ಸಂಸ್ಕೃತ ಶಿಷ್ಯವೃತ್ತಿ ಮತ್ತು ಬೇರೆ ನಾಲ್ಕು ಪಾರಿತೋಷಿಕಗಳನ್ನು ದೊರೆಕಿಸಿದ ಕುಮಾರಿ ವತ್ಸಲಾ ಪಾಟೀಲ ಹಾಗೂ ಬಿ.ಎ. ಪರೀಕ್ಷೆಯಲ್ಲಿ ಕನ್ನಡವನ್ನು ಐಚ್ಛಿಕವಾಗುಳ್ಳ ವಿದ್ಯಾರ್ಥಿಗಳಲ್ಲಿ ಮೊದಲನೆಯ ವರ್ಗದ ಮೊದಲನೆಯ ನಂಬರು ಪಡೆದ ಲಿಂಗರಾಜ ಕಾಲೇಜಿನ ಶ್ರೀ. ಆರ್. ಸಿ. ಹಿರೇಮಠ ಈ ಮೂವರನ್ನು ಸಂಘದ ಪರವಾಗಿ ಅಭಿನಂದಿಸುವ ಕಾರ್ಯಕ್ರಮ ನಡೆಯಿತು. ಕುಮಾರಿ ವತ್ಸಲಾ ಪಾಟೀಲ ಅವರ ಬಗ್ಗೆ ಎ. ಕೆ. ಗರ್ಲ್ಸ್ ಹೈಸ್ಕೂಲಿನ ಅಧ್ಯಾಪಕರುಗಳಾದ ಶ್ರೀ. ಜಿ. ವ್ಹಿ. ಸಿದ್ಧೇಶ್ವರ್ ಶ್ರೀ. ಕಟ್ಟಿ, ಶ್ರೀ. ಎಸ್. ಎನ್. ನಾಯಕ ಇವರೂ ಪ್ರೊ. ಆರ್. ವ್ಹಿ. ಜಾಗೀರದಾರ ಅವರೂ ಮಾತನಾಡಿದರು.

ಆಮೇಲೆ, ಶ್ರೀ. ದೇಶಪಾಂಡೆ ಗುರುರಾಯರು ಕುಮಾರವ್ಯಾಸ ಭಾರತದೊಳಗಿನ ಹಲವು ಪದ್ಯಗಳನ್ನು ಸುಶ್ರಾವ್ಯವಾಗಿ ಹಾಡಿ ಸಭಿಕರ ಮನವನ್ನು ತಣಿಸಿದರು.

ಅಧ್ಯಕ್ಷರಾದ ಶ್ರೀ. ರಾಮನಾಥರಾಯರು ಅಭಿನಂದಿತ ವಿದ್ಯಾರ್ಥಿಗಳಿಗೆ ಸಂಘದ ಬಹುಮಾನವಾಗಿ 'ಕರ್ನಾಟಕ ಶಬ್ದಾನುಶಾಸನ ಪ್ರಕಾಶಿಕೆ' ಹಾಗೂ 'ಕಾವ್ಯಾವಲೋಕನ' ಗ್ರಂಥಗಳನ್ನು ಕೊಟ್ಟು, ಸಾಹಿತ್ಯ ಸ್ಪರ್ಧೆಗಳಲ್ಲಿ ಮೇಲಾದ ವಿದ್ಯಾರ್ಥಿಗಳಿಗೆ ಪಾರಿತೋಷಿಕಗಳನ್ನು ಹಂಚಿದರು. ಆ ಮೇಲೆ ತಮ್ಮ ಭಾಷಣದಲ್ಲಿ "ಸಾಂಗಲಿ ಅಂತಹ ಗಡಿಗಳಲ್ಲಿ ಕನ್ನಡಕ್ಕೆ ಇರುವ ತೊಂದರೆ ಎಷ್ಟು ಎಂಬುದನ್ನು ಬಣ್ಣಿಸಿ ಅಲ್ಲಿ ಮತ್ತು ಇತರ ಗಡಿಗಳಲ್ಲಿ ಈ ತೊಂದರೆಯ ನಿವಾರಣೆಗಾಗಿ ಕನ್ನಡ ಸಂಸ್ಥೆಗಳು ಇರುವುದು ಅವಶ್ಯವಾಗಿದೆ" ಎಂದು ಹೇಳಿದರು.

# ಪರಿಷತ್ತಿನ ಸುದ್ದಿ

## ಪರಿಷತ್ತಿನ ಸದಸ್ಯರ ಬೆಳವಣಿಗೆ

**ಉದ್ಧಾರಕರು (೧,೦೦೦ ರೂ.):** ಶ್ರೀಮಾನ್ ರಾಯ ಪಾಂಡುರಂಗರಾವ ದೇಶಮುಖ್ ಅವರು, ಗಲ್ಬರ್ಗ.

**ಆಶ್ರಯದಾತರು (೨೫೦ ರೂ.):** ಶ್ರೀಮಾನ್ ರಂಗರಾವ ಪಾಂಡುರಂಗ ದೇಸಾಯಿ ಅವರು, ರಾಯಿಚೂರು.

**ಸಹಾಯಕ ಸದಸ್ಯರು (೧೦೦ ರೂ.):** ಶ್ರೀ.ಗಳಾದ ೧. ಡಾ. ಭಗೀರಥರಾವ್ ದೇಶಪಾಂಡೆ ಅವರು, ರಾಯಿಚೂರು. ೨. ವ್ಯಾಕರಣತೀರ್ಥ ಚಂದ್ರಶೇಖರಶಾಸ್ತ್ರಿಗಳು, ಯಾದಗಿರಿ. ೩. ರುದ್ರಪ್ಪ ಶಿಣ್ಣೂರ ಅವರು, ಯಾದಗಿರಿ. ೪. ಡಾ. ಎಸ್. ಆರ್. ಕಂಠಿ ಅವರು, ಯಾದಗಿರಿ. ೫. ಕೊಂಕಲ್ ನಾರಾಯಣಪ್ಪನವರು, ಯಾದಗಿರಿ.

**ಸಾಮಾನ್ಯ ಸದಸ್ಯರು (೩ ರೂ.):** ಶ್ರೀ.ಗಳಾದ ೧. ಬಿ. ಎನ್. ಕೃಷ್ಣಮೂರ್ತಿ ಅವರು, ನಂ. ೫೩, ಮಾಡಲ್ ಹೌಸ್ ರಸ್ತೆ, ಬಸವನಗುಡಿ. ೨. ಸಿ. ಎಸ್. ಶ್ರೀನಿವಾಸ್ ಅವರು, ೧೭, ಶಂಕರ ಮಠದ ರಸ್ತೆ, ಶಂಕರಪುರ, ಬೆಂಗಳೂರು.

### ಮೈಸೂರು ಪ್ರಾಂತ ಸಮಿತಿ: ನಾಟಕ ವಾಚನ

ಆಸ್ಥಾನವಿದ್ವಾನ್ ಶ್ರೀ. ಎಂ. ಎಸ್. ಸುಬ್ರಹ್ಮಣ್ಯಶಾಸ್ತ್ರಿಗಳು **ತಾ|| ೩೧-೭-೪೩ನೆಯ ಶನಿವಾರ ಸಂಜೆ ೬ ಗಂಟೆಗೆ** ಪರಿಷನ್ಮಂದಿರದಲ್ಲಿ **"ವೇಣೀ ಸಂಹಾರ"** ನಾಟಕ ವಾಚನ ಮಾಡುವರು.

### ಮಹಿಳಾ ಶಾಖೆ

ಶ್ರೀ. ಸೌ. ಲಲಿತಮ್ಮನವರು ೧೭-೭-೧೯೪೩ನೆಯ ಶನಿವಾರ ಸಂಜೆ ತಿರುಪಾಣಿ ನಾಟಕ ವಾಚನ ಮಾಡಿದರು. ಈ ನಾಟಕದ ಹಲವು ಗೀತಗಳನ್ನು ವಿವಿಧ ರಾಗಗಳಲ್ಲಿ ಬಹಳ ಇಂಪಾಗಿ ಅವರು ಹಾಡಿದರು.

### ಪರಿಷತ್ತಿನ ಉಪಾಧ್ಯಕ್ಷರು ಮತ್ತು ಕಾರ್ಯದರ್ಶಿಗಳ ಪ್ರವಾಸ

**ರಾಯಿಚೂರು:** ತಾ|| ೧೯ನೆಯ ರಾತ್ರಿ ೯ ಗಂಟೆಗೆ ತಲಪಿದರು. ಶ್ರೀ. ರಂಗರಾವ್ ಪಾಂಡುರಂಗರಾವ್ ದೇಸಾಯಿಯವರು ಸ್ವಾಗತಿಸಿದರು. ಶ್ರೀ. ಜಿ. ಮಾಧವರಾವ ವಕೀಲರ ಮನೆಯಲ್ಲಿ ಬಿಡಾರ ಮಾಡಿದರು. ತಾ|| ೨೦ನೆಯ ಮಂಗಳವಾರ ಸಂಜೆ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು 'ವಾಲ್ಮೀಕಿಯ ಕವಿತೆ' ಎಂಬ ವಿಷಯವಾಗಿಯೂ, ಶ್ರೀ. ಬಿ. ವೆಂಕೋಬರಾಯರು 'ಕರ್ನಾಟಕ ವಾಸ್ತು ಶಿಲ್ಪ' ಎಂಬ ವಿಷಯವಾಗಿಯೂ ಭಾಷಣ ಮಾಡಿದರು. ಅನಂತರ ಕರ್ನಾಟಕ ತರುಣ ಸಂಘಕ್ಕೆ ಭೇಟಿ ಕೊಟ್ಟರು. ಅಲ್ಲಿನ ಸದಸ್ಯರು ಅಭಿನಯಿಸಿದ 'ಪುನರ್ಜನ್ಮ' ನಾಟಕವನ್ನು ನೋಡಿ ಸಂತೋಷಪಟ್ಟರು.

ಅದೇ ದಿನ ರಾತ್ರಿ ಯಾದಗಿರಿಗೆ ಪ್ರಯಾಣ ಮಾಡಿದರು. ವಕೀಲರಾದ ಶ್ರೀ. ದೀಕ್ಷಾಚಾರ್ಯರು ನಿಲ್ದಾಣದಲ್ಲಿ ಸ್ವಾಗತಿಸಿದರು. ಶ್ರೀ. ಜಗನ್ನಾಥರಾವ್ ವಕೀಲರ ಮನೆಯಲ್ಲಿ ಆತಿಥ್ಯ ಸ್ವೀಕರಿಸಿ, ನಿಜಾಂ ಕರ್ನಾಟಕ ಪರಿಷತ್ತಿನ ಅಧ್ಯಕ್ಷರಾದ ಶ್ರೀ. ಜನಾರ್ಧನರಾವ್ ದೇಸಾಯಿ ಅವರೊಡಗೂಡಿ ಸುರಪುರಕ್ಕೆ ಹೋದರು.

**ಸುರಪುರ:** ಅಲ್ಲಿನ ಪ್ರಮುಖರೊಡನೆ ಕನ್ನಡ ಚಳವಳಿಯ ಬಗ್ಗೆ ಪ್ರಸ್ತಾವಿಸಿ, ಸಮೀಪದಲ್ಲಿರುವ ರಂಗಂಪೇಟೆ ಗ್ರಾಮಕ್ಕೆ ಬೇಟಿ ಕೊಟ್ಟರು.

**ರಂಗಂಪೇಟೆ (ಸುರಪುರ): ಕನ್ನಡ ಸಾಹಿತ್ಯ ಸಂಘ**

ತಾ|| ೨೧-೭-೪೩ನೆಯ ದಿನ ಸಂಜೆ ೫ ಗಂಟೆಗೆ ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾದ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರೂ, ಕಾರ್ಯದರ್ಶಿಗಳಾದ ಶ್ರೀ. ಬಿ. ವೆಂಕೋಬರಾಯರೂ ಮೇಲ್ಕಂಡ ಸಂಘವನ್ನು ಸಂದರ್ಶಿಸಿ, ಸಂಘದ ಕೈಬರೆಹದ ತ್ರೈಮಾಸ ಪತ್ರಿಕೆಯಾದ 'ಅರುಣ' ಪತ್ರಿಕೆಯನ್ನು ನೋಡಿಸಿ ಆನಂದ ವ್ಯಕ್ತಪಡಿಸಿದರು. ಆಮೇಲೆ ಶ್ರೀ ನಗರೇಶ್ವರ ದೇವಸ್ಥಾನದಲ್ಲಿ ಸಂಘದ ಸದಸ್ಯರೂ ಇತರ ಸ್ಥಳೀಯ ಮಹನೀಯರೂ ಅವರೊಡನೆ ವಿಚಾರವಿನಿಮಯ ಮಾಡಿ ಕನ್ನಡದ ಏಳ್ಗೆಗಾಗಿ ಏನೇನು ಮಾಡಬೇಕೆಂಬ ವಿಷಯದಲ್ಲಿ ಚರ್ಚೆ ನಡಸಿದರು. ಆಮೇಲೆ ಶ್ರೀ. ಮಾಸ್ತಿಯವರು ನೆರೆದಿರುವ ಜನಕ್ಕೆಲ್ಲ ಉಪದೇಶ ಮಾಡಿದರು. ಅವರ ಸಂಗಡ ನಿಜಾಂ ಕರ್ನಾಟಕ ಪರಿಷತ್ತಿನ ಶ್ರೀ. ದೇಸಾಯಿ ಜನಾರ್ದನರಾಯರು ಆಗಮಿಸಿದ್ದರು.

[ಮೇಲ್ಕಂಡ ಸಂಘವು ಸ್ವಭಾನು ಸಂವತ್ಸರದ ಚೈತ್ರ ಶುದ್ಧ ಯುಗಾದಿ ಪ್ರತಿಪದೆಯ ಶುಭ ಮುಹೂರ್ತದಲ್ಲಿ ಸ್ಥಾಪಿತವಾಗಿ ಈ ಕೆಳಗಿನಂತೆ ಕಾರ್ಯಕರ್ತರು ಆರಿಸಿಬಂದರು.

ಅಧ್ಯಕ್ಷರು: ಶ್ರೀ. ಬೋಡಾ ರಾಮಣ್ಣನವರು. ಉಪಾಧ್ಯಕ್ಷರು: ಶ್ರೀ. ಕೆ. ಶ್ರೀನಿವಾಸಾಚಾರ್ಯ ಜಹಾಗಿರದಾರ. ಕೋಶಾಧ್ಯಕ್ಷರು: ಶ್ರೀ. ಎಂ. ಬುದ್ಧಿವಂತಶೆಟ್ಟಿ. ಕಾರ್ಯದರ್ಶಿ: ಶ್ರೀ. ರುದ್ರಸ್ವಾಮಿ. ಸಹಾಯ ಕಾರ್ಯದರ್ಶಿ: ಶ್ರೀ. ಸದಾಶಿವಭಟ್ಟ ರಾಜ್ಯೋಶಿ. ಹಣ ಸರಿಚಾಲಕರು: ಶ್ರೀ.ಗಳಾದ ಎಂ. ಶಿವಣ್ಣಾ, ಡಿ. ಗೋವಿಂದಪ್ಪ. ಸದಸ್ಯರು: ಶ್ರೀ.ಗಳಾದ ೧. ಕೆ. ಹನುಮಂತಯ್ಯ. ೨. ಪ್ರಧಾನಜಿ. ೩. ಕೃಷ್ಣಾಚಾರ್ಯ ಮಾಸ್ತರ. ೪. ಜಿ. ಅಡಿವಪ್ಪಾ. ೫. ಕೆ. ವೆಂಕಟಗಿರಿ. ೬. ಪಿ. ಗುರುಸ್ವಾಮಿ. ೭. ಬುದ್ಧಿವಂತಶೆಟ್ಟಿ. ೮. ಗುರಾಚಾರ್ಯ ಮಾಸ್ತರ. ೯. ಮಾಣೀಕರಾವ್.]

# ಕನ್ನಡ ಸುದ್ದಿ

**ಬೆಂಗಳೂರು: ಸೆಂಟ್ರಲ್ ಕಾಲೇಜು ಕರ್ಣಾಟಕ ಸಂಘ**

೨೯-೭-೪೩ ನೆಯ ಗುರುವಾರ ಸಂಜೆ ೬-೧೫ ಕ್ಕೆ ಕಾಲೇಜಿನ ಗಣಿತ ಭವನದಲ್ಲಿ ಶ್ರೀ ತೀ. ನಂ. ಶ್ರೀಕಂಠಯ್ಯ ಎಂ.ಎ., ಅವರು ಈ ವರ್ಷದ ಆರಂಭ ಭಾಷಣ ಮಾಡುತ್ತಾರೆ.

೧೬-೭-೧೯೪೩ ನೆಯ ಶುಕ್ರವಾರ ನಡೆದ ಸಂಘದ ಸಕಲ ಸದ್ಯಸರ ಸಭೆಯಲ್ಲಿ ಈ ವರ್ಷದ ಅಧಿಕಾರಿಗಳ ಆಯ್ಕೆಯಾಯಿತು.

ಅಧ್ಯಕ್ಷರು: ರಾಜಸೇವಾಸಕ್ತ ಶ್ರೀ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ. ಎಲ್. ಅವರು, ಗೌರವ ಅಧ್ಯಕ್ಷರು: ಪ್ರೊ|| ಎ. ಆರ್. ಕೃಷ್ಣಶಾಸ್ತ್ರಿ ಅವರು ಎಂ.ಎ., ಉಪಾಧ್ಯಕ್ಷರುಗಳು: ಶ್ರೀಗಳಾದ ಎಸ್. ವಿ. ರಂಗಣ್ಣನವರು ಎಂ.ಎ., ವಿ. ಟಿ. ತಿರುನಾರಾಯಣ ಅಯ್ಯಂಗಾರ್ಯರು ಎ.ಎ., ಮತ್ತು ಸೆಂಟ್ರಲ್ ಮತ್ತು ಇಂಟರ್‌ಮೀಡಿಯೆಟ್ ಕಾಲೇಜುಗಳ ಕನ್ನಡ ಅಧ್ಯಾಪಕರುಗಳಾದ ಕೆ. ವಿ. ಪುಟ್ಟಪ್ಪನವರು ಎಂ.ಎ., ತೀ. ನಂ. ಶ್ರೀಕಂಠಯ್ಯನವರು ಎಂ.ಎ., ಎಲ್. ಗುಂಡಪ್ಪನವರು ಎಂ.ಎ., ಕೆ. ವಿ. ರಾಘವಾಚಾರ್ಯರು ಎಂ.ಎ., ವರದಾಚಾರ್ಯರು; ಕಾರ್ಯದರ್ಶಿ: ಶ್ರೀ. ಟಿ. ಆರ್. ಜಯರಾಯರು. ಪ್ರತಿನಿಧಿಗಳು: ಶ್ರೀಗಳಾದ ಬಿ. ಪಿ. ಕೃಷ್ಣಶೆಟ್ಟಿಯವರು, ಬಿ. ರಾಮಕೃಷ್ಣರಾಯರು, ಬಿ. ಎಲ್. ಗುರರಾಜರಾಯರು, ಮರಿಪುಟ್ಟಣ್ಣನವರು, ವೇಣುಗೋಪಾಲ್ ಅವರು, ಶ್ರೀಮತಿ ಅನುಸೂಯಾಬಾಯಿಯವರು, ಗಂಗಾಧರಶಾಸ್ತ್ರಿಗಳವರು, ಎ.ಆರ್. ಚಂದ್ರಶೇಖರರಾಯರು.

**ಮಂಡ್ಯ: ಕರ್ಣಾಟಕ ಸಂಘ**

೨೬-೭-೪೩ ನೆಯ ದಿನ ಸಂಜೆ ಶ್ರೀ ಜಯಚಾಮರಾಜ ಪುರಭವನದಲ್ಲಿ ಕಾವ್ಯವಾಚನವನ್ನು ಏರ್ಪಡಿಸಲಾಗಿತ್ತು. ಶ್ರೀ. ಜಿ. ವೆಂಕಟಸುಬ್ಬಯ್ಯ (ಮೈಸೂರು ಅಕ್ಷರ ಪ್ರಚಾರ ಸಮಿತಿ) ಎಂ.ಎ., ಬಿ.ಟಿ. ಅವರು ಅಧ್ಯಕ್ಷತೆ ವಹಿಸಿದ್ದರು. ಪುರಪ್ರೌಢಶಾಲೆಯ ಅಧ್ಯಾಪಕರು ಶ್ರೀ. ಸಿ. ಕೆ. ಆನಂದರಾವ್ ಬಿ.ಎ., ಅವರು ವಿ. ಸೀ. 'ಅವರ ಮನೆದುಂಬಿಸುವುದು', ಶ್ರೀ ರಾಜರತ್ನಂ ಅವರ 'ರತ್ನನ ಪದ'ಗಳಲ್ಲಿ ಮೂರು, ಶ್ರೀ ಜಿ. ವಾಸುದೇವರಾವ್ 'ಅವರ ಭೈರವ' ಇವನ್ನು ತಕ್ಕ ವಿವರಣೆಗಳೊಡನೆ ಶ್ರಾವ್ಯವಾಗಿ ಪಠಿಸಿದರು. ಅನಂತರ ಶ್ರೀ ಜಿ. ವೆಂಕಟಸುಬ್ಬಯ್ಯನವರು ಕನ್ನಡ ಸಾಹಿತ್ಯದ ವಿವಿಧ ರಸೋತ್ಪಾದಕ ವಿಷಯಗಳನ್ನಧಿಕರಿಸಿ, ಶ್ರೀ. ಕೆ. ಎಸ್. ನರಸಿಂಹಸ್ವಾಮಿ, ಶ್ರೀ. ಕೆ.ವಿ. ಪುಟ್ಟಪ್ಪ ಇವರ ಕೃತಿಗಳಾದ 'ಮೈಸೂರು ಮಲ್ಲಿಗೆ', 'ಚಿತ್ರಾಂಗದಾ' ಎಂಬ ಕವಿತಾ ಭಾಗಗಳ ಉದಾಹರಣೆಗಳನ್ನು ಕೊಟ್ಟು, ಸುಲಲಿತವಾಗಿ ಉಪನ್ಯಾಸ ಮಾಡಿದರು. ಕಾರ್ಯದರ್ಶಿ ಚಿ. ನಾ. ವಿಶ್ವನಾಥ ಶಾಸ್ತ್ರಿಗಳು ಅಂದಿನ ಅಧ್ಯಕ್ಷರಿಗೆ ಮತ್ತು ವಾಚಕರಿಗೆ ವಂದನೆಗಳನ್ನು ಸಮರ್ಪಿಸಿದರು.

**ಬೆಂಗಳೂರು: ಸೆಯಿಂಟ್ ಜೋಸೆಫ್ಸ್ ಕಾಲೇಜು' ಕನ್ನಡ ಸಂಘ**

ಈ ಸಂಘದ ಅಧಿಕಾರಿಗಳ ಆಯ್ಕೆಗಳಲ್ಲಿ ಕೆಳಗೆ ಕಂಡ ಮಹನೀಯರುಗಳು ಆಯ್ದು ಬಂದಿದ್ದಾರೆ: ಶ್ರೀ. ಎಸ್. ಕೆ. ಚಿಕ್ಕಣ್ಣನವರು (ಉಪಾಧ್ಯಕ್ಷರು), ಶ್ರೀ.ಗಳಾದ ಟಿ. ಎಸ್. ವೆಂಕಟರಾಮಯ್ಯನವರು ಮತ್ತು ಎಸ್. ವೆಂಕಟರಾಯರು (ಕಾರ್ಯದರ್ಶಿಗಳು), ಶ್ರೀ. ಜಗದೀಶ್ ಅವರು (ಕೋಶಾಧಿಕಾರಿಗಳು).

೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧॥
ಬಿಡಿ ಪತ್ರಿಕೆ: ೬ ಕಾಸು




ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈ ಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೪೧

ಬೆಂಗಳೂರು: ಶುಕ್ರವಾರ, ಆಗಸ್ಟ್ ೬, ೧೯೪೩

### ರಾಜಸೇವಾಸಕ್ತ

## ಶ್ರೀ ಬೆಳ್ಳಾವೆ ವೆಂಕಟನಾರಾಯಣಪ್ಪನವರು

ರಾಜಸೇವಾಸಕ್ತ ಶ್ರೀಮಾನ್ ಬೆಳ್ಳಾವೆ ವೆಂಕಟನಾರಣಪ್ಪನವರು ಮೊನ್ನೆ ರಾತ್ರಿ ದೈವಾಧೀನರಾದರು. ಇವರಿಗೆ ಮೂರು ತಿಂಗಳಿಂದ ದೇಹದಲ್ಲಿ ಅಸ್ವಾಸ್ಥ್ಯ ಇದ್ದಿತಾದರೂ ಇಷ್ಟು ಬೇಗನೆ ಇವರು ನಮ್ಮನ್ನು ಅಗಲಿ ಹೋಗಬಹುದೆಂದು ಯಾರಿಗೂ ತೋರಲಿಲ್ಲ. ಈ ಸಲ ಅವರು ಖಾಯಿಲೆ ಬೀಳುವವರೆಗೆ ಅವರು ಏಕರೀತಿಯ ದೇಹದಾರ್ಢ್ಯದಿಂದ ದಿಟ್ಟವಾಗಿ ನಡೆಯುತ್ತಿದ್ದರು. ಇಂತಹ ಬಾಳಿಗೆ, ಇವರಿಗೆ ಆಗಿದ್ದ ೭೨ ವರುಷ ಎನ್ನುವುದು ಅಂತಹ ಮುಪ್ಪು ಕೂಡ ಅಲ್ಲ. ಹೀಗಿದ್ದೂ ಕನ್ನಡ ಇಂದು ಇವರನ್ನು ಕಳೆದುಕೊಂಡು ದುಃಖಪಡಬೇಕಾಗಿದೆ.

ಶ್ರೀಮಾನ್ ವೆಂಕಟನಾರಣಪ್ಪನವರು ಇಂದಿನ ಜನಕ್ಕೆ ಬಹು ಹಿಂದಿನವರೆಂದು ಕಾಣುವಂಥ ವ್ಯಕ್ತಿಯಾಗಿದ್ದರು. ಅವರು ಬಹು ಹಿಂದಿನವರು ಅಹುದು, ನಿಜ. ನಮ್ಮ ದೇಶದ ಹೊಸ ವಿದ್ಯಾಭ್ಯಾಸವನ್ನು ಪಡೆದ ಮೊದಮೊದಲ ತಲೆಮಾರಿನವರಾಗಿ ಇವರು ಹಿಂದಣ ಆಚಾರನಿಷ್ಠೆಗಳಿಗೆ ತುಂಬಾ ಬೆಲೆ ಕೊಡುವವರಾಗಿದ್ದರು. ವಿದ್ಯಾಭ್ಯಾಸ ಮಹಿಮೆಯಿಂದ ಅವರ ದೃಷ್ಟಿ ನವೀನವಾಗಿತ್ತು. ಪೂರ್ವದ ಸಂಸ್ಕಾರ ಅರ್ವಾಚೀನ ಸುಧಾರಣೆ ಅವಿರುದ್ಧವಾಗಿ ಬೆರೆತರೆ ಕಾಣಬಹುದಾದ ಬಾಳಿನ ಒಂದು ಹದ ಇವರ ಜೀವನದಲ್ಲಿ ಕಾಣುತ್ತಿತ್ತು.

ಶ್ರೀಯುತರು ತಾರುಣ್ಯದಲ್ಲಿಯೇ ಪ್ರೌಢವಿದ್ಯಾಮಂದಿರದಲ್ಲಿ ಅಧ್ಯಾಪಕರಾದರು. ತಮಗಿದ್ದ ಬುದ್ಧಿಶಕ್ತಿಯನ್ನೆಲ್ಲ ಉಪಯೋಗಿಸಿ ನಿರ್ವಂಚನೆಯಾಗಿ ವಿದ್ಯಾರ್ಥಿಗಳನ್ನು ತಿದ್ದುವುದು ಇವರ ವೈಶಿಷ್ಟ್ಯವಾಯಿತು. ತಮ್ಮಲ್ಲಿ ಕಲಿಯುತ್ತಿದ್ದ ವಿದ್ಯಾರ್ಥಿಗಳಿಗೆ ಶ್ರೀ ವೆಂಕಟನಾರಣಪ್ಪನವರು ತಮ್ಮ ಶಕ್ತಿಗೆ ಸಾಧ್ಯವಾದಷ್ಟೂ, ತಮ್ಮ ಶಕ್ತಿಗೆ ಮೀರಿದಷ್ಟೂ, ಸಹಾಯ ಮಾಡುತ್ತಿದ್ದರು. ತರುಣರಿಗಾಗಿ ಭೋಜನಕೂಟಗಳನ್ನು ಏರ್ಪಡಿಸಿದರು. ಅಲ್ಲಿ ಬಾಲಕರ ಊಟವಸತಿ ಮಾತ್ರವನ್ನಲ್ಲದೆ, ಅವರ ಓದನ್ನೂ ನಡೆಯನ್ನೂ ನೋಡಿಕೊಂಡ ಪ್ರಾಚೀನ ಯುಗದ ಗುರುಕುಲದ ಒಬ್ಬ ಋಷಿ ತನ್ನ ಶಿಷ್ಯರ ವಿಷಯದಲ್ಲಿ ಹೇಗೆ ಇದ್ದಿರಬಹುದೆಂಬುದನ್ನು ತಮ್ಮ ಬಾಳ್ವೆಯಲ್ಲಿ ಅನುಷ್ಠಾನಮಾಡಿ ತೋರಿಸಿದರು.

ಶ್ರೀ ವೆಂಕಟನಾರಣಪ್ಪನವರು ಇಂಗ್ಲಿಷ್ ಓದಿದ ಕಾಲದಲ್ಲಿ ಕನ್ನಡವನ್ನು ಕುರಿತ ಹಂಬಲ ಅಪೂರ್ವವಾಗಿತ್ತು. ಸುತ್ತಯಾರೂ ನೆನೆಯದಿದ್ದ ಕನ್ನಡದ ಸ್ಥಿತಿಯನ್ನು ಮನಸ್ಸಿಗೆ ತಂದುಕೊಂಡು ನಾಡನುಡಿಗಾಗಿ ದುಡಿಯತೊಡಗಿದ ಅತ್ಯಲ್ಪ ಸಂಖ್ಯೆಯ ಜನರಲ್ಲಿ ಇವರು ಒಬ್ಬರಾದರು. ಕನ್ನಡ ಸಾಹಿತ್ಯ ಪರಿಷತ್ತು ಏರ್ಪಡುವ ಕಾಲಕ್ಕೆ ಸಹಜವಾಗಿ ಅದರ ಕಾರ್ಯಕ್ರಮದಲ್ಲಿ ಒಂದು ಪ್ರಮುಖ ಭಾಗವನ್ನು ವಹಿಸಿಕೊಂಡರು.

ಪರಿಷತ್ತಿನಲ್ಲಿ ಇವರು ಮಾಡಿದ ಕೆಲಸವನ್ನು ವಿವರಿಸಲು ವಿಸ್ತಾರವಾದ ಒಂದು ಲೇಖನವೇ ಬೇಕು. ಒಂದು ಮಾತಿನಲ್ಲಿ ಹೇಳುವುದಾದರೆ ಈ ಸಂಸ್ಥೆಯ ಕೆಲಸದಲ್ಲಿ ಕಸಗುಡಿಸುವುದು ಮೊದಲು ಒಂದು ಉದ್ಗ್ರಂಥವನ್ನು ಸಂಪಾದಿಸುವುದರವರೆಗೆ

ಪರಿಷತ್ತಿನ ಸ್ಥಾಪಕ- ಸದಸ್ಯರಲ್ಲೊಬ್ಬರಾಗಿದ್ದು ಸಂಸ್ಥೆಯನ್ನು ಕಟ್ಟಿ
ನಾನಾ ಬಗೆಯಲ್ಲಿ ನಿಷ್ಠೆಯಿಂದ ಸೇವೆ ಮಾಡಿ ೩-೮-೪೩ನೆಯ
ಮಂಗಳವಾರ ರಾತ್ರಿ ಕಾಲಾಧೀನರಾದ
**ರಾಜಸೇವಾಸಕ್ತ ಶ್ರೀ. ಬೆಳ್ಳಾವೆ ವೆಂಕಟನಾರಾಯಣಪ್ಪನವರು**



ಘನತೆ ನಿಸರ್ಗಮಾಗೆ, ಗುಣಸಾಂದ್ರತೆ ನಿಶ್ಚಲಚಿತ್ತಮಾವಗಂ
ಮಿನುಗೆ, ಮಹಾರ್ಘಮಾರ್ಗದೊಳು ಮುನ್ನಡೆಗೊಂಡು ನಿಜಾನ್ವಯಕ್ಕೆ ಸಂ
ದನುಪಮ ಕೀರ್ತಿಯಂ ಬೆಳಗಿ, ಕನ್ನಡ ದೇವಿಯ ಪುತ್ರರತ್ನಮೆಂ
ದು ನುತಿಸೆ ನಾಡು ನಾಡೆ, ಗುಣಪೂರ್ಣ ಗುರೂತ್ತಮ ರತ್ನಮೆಂದು ತಾನ್

ಸಿರಿ ಬೆಳ್ಳಾವೆಯ ವೇಂಕಟ
ನರಯಣ ಕಲ್ಯಾಣ ನಾಮದಿಂ ರಾಜಿಸಿದಂ
ಪರಮನ ಕಂಠಾಭರಣದ
ವರಮಣಿ ತಾನಾಗಿ ಮರೆಯೆ ಮರುಗಿತು ಲೋಕಂ

— ಶ್ರೀ ಗುಹ

---

ಯಾವ ಸೇವೆಯನ್ನೂ ಇವರು ಮಾಡದೇ ಬಿಡಲಿಲ್ಲ. ಕಸಗುಡಿಸುವುದಕ್ಕೆ ಹಿಂಜರಿಯಲಿಲ್ಲ. ಸಂಪಾದಿಸುವುದಕ್ಕೆ ಹಿಗ್ಗಲಿಲ್ಲ. ಪರಿಷತ್ತಿನ ಸಿಬ್ಬಂದಿ ಕಡಮೆಯಾಗಿದ್ದ ಕಾಲದಲ್ಲಿ ಹಗಲೆನ್ನದೆ ಇರುಳೆನ್ನದೆ, ಯಾವ ಕೆಲಸ ಯಾರದು ಎನ್ನದೆ, ಸಾಕು ಎನ್ನದೆ, ಸೋತೆನೆನ್ನದೆ ಇವರು ಒಂದೇ ಸಮನೆ ಇಲ್ಲಿ ದುಡಿದರು. ಗಾಣದ ಎತ್ತಿನಂತೆ ದುಡಿಯುತ್ತ ಮಗುವನ್ನೆತ್ತಿಕೊಂಡ ತಾಯಂತೆ ನಲಿದರು. ಕರ್ಮಯೋಗಿ ಯಾರು ಎನ್ನುವುದಕ್ಕೆ ನಿದರ್ಶನರಾದರು.

ಕನ್ನಡ ಸಾಹಿತ್ಯ ಪರಿಷತ್ತಿಗೆ ಒಂದು ಕಟ್ಟಡ ಆಗುವುದಕ್ಕೆ ಕಾರಣರಾದವರಲ್ಲಿ ಇವರೊಬ್ಬರು.

ಹೊಸ ಕಾಲದ ತಿಳಿವನ್ನು ಕನ್ನಡಕ್ಕೆ ತರುವ ಉದ್ಯಮದಲ್ಲಿ ಶ್ರೀ. ವೆಂಕಟನಾರಣಪ್ಪನವರು ಮೊದಲಿಗರಾದರು. ಕನ್ನಡದಲ್ಲಿ ಇಂದಿಗೂ ಒಂದು ಭೌತಶಾಸ್ತ್ರ ವಿಷಯದ ಪತ್ರಿಕೆಯಿಲ್ಲ.

ಈಗಲೂ ಸಾಧ್ಯವಾಗದೆ ಇರುವ ಇಂತಹ ಕೆಲಸವನ್ನು ಶ್ರೀ. ವೆಂಕಟನಾರಣಪ್ಪನವರು ಇಪ್ಪತ್ತೈದು ವರ್ಷದ ಹಿಂದೆ ಮೊದಲು ಮಾಡಿದರು. ಹತ್ತಿರ ಇದ್ದವರ ಪ್ರಾಣಹಿಂಡಿ ತಮ್ಮ ಪ್ರಾಣ ವನ್ನಂತೂ ನಿರ್ಘೃಣವಾಗಿ ತೊಳಲಿಸಿ ಮೂರು ವರ್ಷ ಆ ಮಾಸಿಕ ಪತ್ರವನ್ನು ನಡಸಿದರು. ತಮ್ಮ ಅರ್ಜನೆಯ ಅಲ್ಪ ಸ್ವಲ್ಪ ಉಳಿತಾಯದ ಬಹು ಭಾಗವನ್ನು ಈ ಉತ್ಸಾಹದಲ್ಲಿ ವ್ಯಯ ಮಾಡಿ ಧನ್ಯರಾದರು.

ಹೊಸ ಕಾಲದ ಮುಂಬರಿವಿನ ಬಹು ವಿಧದ ಕೆಲಸದಲ್ಲಿ ಶ್ರೀಯುತರು ಮಾರ್ಗದರ್ಶಕರಾದರು. ವ್ಯವಸಾಯದ ಹೊಸ ಮಾರ್ಗದಲ್ಲಿ ಪ್ರಯೋಗಗಳನ್ನು ಕೈಕೊಂಡ ವಿದ್ಯಾವಂತ ಬೇಸಾಯ ಗಾರರಲ್ಲಿ ವೆಂಕಟನಾರಣಪ್ಪನವರು ಒಬ್ಬ ಪ್ರಮುಖರು. ಅಲ್ಲಿಯೂ ಇವರು ಹಣವನ್ನು ಕಳೆದುಕೊಂಡರೇ ಹೊರತಾಗಿ ಗಳಿಸಲಿಲ್ಲ. ಆದರೆ ಇವರ ಉತ್ಸಾಹ ಇದರಿಂದ ಕುಗ್ಗಲಿಲ್ಲ.

ನಿರುದ್ಯೋಗಿಗಳಾದ ವಿದ್ಯಾವಂತರಿಗೆಂದು ವ್ಯವಸಾಯದ ಹಾಡಿಗಳನ್ನು ಏರ್ಪಡಿಸುವ ಬಗ್ಗೆ ಮೈಸೂರು ಸರ್ಕಾರಕ್ಕೆ ಸಲಹೆ ಸಹಾಯವನ್ನು ನೀಡಿದ ಮುಖಂಡರಲ್ಲಿ ವೆಂಕಟನಾರಣಪ್ಪನವರು ಸೇರಿದ್ದರು.

ಸಹಕಾರ ಸಂಘ ಹಲವದರಲ್ಲಿ ಕೆಲಸ ಮಾಡುತ್ತ ಇವರು ಸಹಕಾರ ತತ್ವ ನಮ್ಮ ದೇಶದಲ್ಲಿ ಬೇರೂರಿ ಬಲಿಯುವುದಕ್ಕೆ ನೆರವಾದರು.

ವಿಶ್ವವಿದ್ಯಾನಿಲಯದಲ್ಲಿ ಸಭಾಸದರಾಗಿದ್ದು ಅದರ ಬೆಳವಣಿ ಗೆಗೆ ವಿಶೇಷವಾಗಿ ದುಡಿದರು. ಪಾಠ ಪುಸ್ತಕಗಳ ಸಮಿತಿಗಳಲ್ಲಿದ್ದು ನಿರ್ವಂಚನೆಯಿಂದ ಕೆಲಸ ಮಾಡಿದರು.

ಇವರ ಪ್ರಯತ್ನದಿಂದಲೇ ಮೈಸೂರು ಸರ್ಕಾರದವರು ಇಂಗ್ಲಿಷ್ – ಕನ್ನಡದ ಶಬ್ದಕೋಶದ ಉದ್ಯಮಕ್ಕೆ ಅನುಜ್ಞೆ ಕೊಟ್ಟದ್ದು. ಶ್ರೀಯುತರು ಆ ಕೋಶದ ಕಾರ್ಯದಲ್ಲಿ ಮೈಮರೆತು ಕೆಲಸ ಮಾಡಿದರು. ಕೋಶ ಅರ್ಧದಷ್ಟು ಅಚ್ಚಾಗಿದೆ, ಇನ್ನರ್ಧ ಸಿದ್ಧವಾಗಿದೆ. ಈ ಕಾರ್ಯದಲ್ಲಿ ಅವರ ದುಡಿತ ಎಷ್ಟೆಂದು ಕಂಡವರು ಶ್ರೀಯುತರು ಪ್ರಯೋಜನವನ್ನಪೇಕ್ಷಿಸದೆ ಎಷ್ಟು ಕಷ್ಟ ವನ್ನೂ ಹೊತ್ತುಕೊಳ್ಳುತ್ತಿದ್ದರೆಂಬುದನ್ನು ತಿಳಿಯುವರು.

ಪೂರ್ವದ ರೀತಿಯ ದೈವ ಭಕ್ತಿಗೆ ವೆಂಕಟನಾರಣಪ್ಪನವರು ಬಹು ಒಳ್ಳೆಯ ಮಾದರಿ. ಹಿಂದಿನ ಆಚಾರದ ನೇಮ ನಿಷ್ಠೆ ಯನ್ನು ಇವರು ಎಚ್ಚರ ತಪ್ಪದೆ ನಡಸಿಕೊಂಡು ಬಂದರು. ಒಂದು ದೇವಾಲಯವನ್ನು ಜನ ಸಹಾಯದಿಂದ ಕಟ್ಟಿಸಿ ತಾವೇ ಸ್ವತಃ ಪ್ರಯಾಸವನ್ನೆಣಿಸದೆ ನಡಸಿದರು. ಹಲವು ದೇವಾಲಯಗಳಲ್ಲಿ ವ್ಯವಸ್ಥಾಪಕರಾಗಿರುತ್ತಾ ಅಲ್ಲಿಯ ವ್ಯವಹರಣೆ ಚೆನ್ನಾಗಿರುವಂತೆ ನೋಡಿಕೊಂಡರು. ಪರಸ್ಥಳಕ್ಕೆ ಹೋದಾಗ ತಮ್ಮ ಮಡಿಯ ಕಾರಣದಿಂದ ಇತರರಿಗೆ ತೊಂದರೆಯಾಗಬಾರದೆಂದು ತಾವೇ ತಮ್ಮ ಅಡಿಗೆಯನ್ನು ಮಾಡಿಕೊಳ್ಳುತ್ತಿದ್ದರು. ತಾವೇ ಅಡಿಗೆ ಮಾಡಿಕೊಳ್ಳುವ ವೇಳೆ ವೆಂಕಟನಾರಣಪ್ಪನವರು ಮತ್ತೊಬ್ಬರು ಊಟದ ವಿಷಯ ತೊಂದರೆಪಡುವುದನ್ನು ನೋಡಿ ಸಹಿಸಲಾರರು. ಹೀಗಾಗಿ ಹಲವು ಸಲ ಇವರು ನಾಲ್ಕು ಜನಕ್ಕೆ ಅಡಿಗೆ ಮಾಡಿ ಉಳಿದ ಮೂವರಿಗೆ ಬಡಿಸಿ ಕೊನೆಗೆ ತಾವು ಊಟಮಾಡುವ ಪರಿಸ್ಥಿತಿ ಒದಗುತ್ತಿತ್ತು. ಜಮಖಂಡಿಯಲ್ಲಿ ಸಮ್ಮೇಳನ ನಡೆದಾಗ ಇವರು ಹೀಗೆ ಉದಯಕ್ಕೆ ಮೊದಲು ಅಡಿಗೆ ಮಾಡಿಟ್ಟು ಬೆಳಗೆಲ್ಲ ಸಮ್ಮೇಳನದ ಕೆಲಸದಲ್ಲಿ ಅಧ್ಯಕ್ಷರಾಗಿದ್ದು ಮಧ್ಯಾಹ್ನದ ಮೇಲೆ ಇತರರಿಗೆ ಬಡಿಸಿ ಆಮೇಲೆ ತಾವು ಊಟಮಾಡಿ ಮತ್ತೆ ಇಳಿ ಹೊತ್ತಿನಲ್ಲಿ ಸಭೆಯಲ್ಲಿ ಬಂದು ಕಾರ್ಯವನ್ನು ನಡಸಿದರು.

ಸತ್ಯದ, ಶ್ರಮದ, ಭಕ್ತಿಯ, ಸುಖವನ್ನು ಸವಿದು ಅರಿತ ಈ ಹಿರಿಯರು ತಮ್ಮ ಕಿರಿಯರಲ್ಲಿ ಅದೇ ಗುಣಗಳನ್ನು ನಿರೀಕ್ಷಿಸು ತ್ತಿದ್ದುದು ಸಹಜವಾಗಿದೆ. ಕಿರಿಯರು ಅವರ ನಿರೀಕ್ಷೆಗೆ ತಕ್ಕಂತೆ ನಡೆಯದ ವೇಳೆ ಅಸಮಾಧಾನಪಟ್ಟದ್ದೂ ಸಹಜವಾಗಿದೆ. ವೆಂಕಟ ನಾರಣಪ್ಪನವರು ಕಪಟವನ್ನರಿಯರು. ಆದಕಾರಣ ಅವರಿಗೆ ಅಸಮಾಧಾನವಾದ ವೇಳೆಯಲ್ಲಿ ಅವರು ಅದನ್ನು ನಾಲ್ಕು ಮಾತಿ ನಲ್ಲಿ ಸ್ಪಷ್ಟವಾಗಿ ತಿಳಿಸುವರು. ಇಂಥ ಮಾತನ್ನು ಕೆಲವರು ಕಠಿನ ನಿಷ್ಠುರ ಎಂದು ಹೇಳುವುದು ಕೂಡ ಸಹಜವೇ. ಆದರೆ ಕಪಟ ವನ್ನು ಹೇಗೆ ಅರಿಯರೊ ಹಾಗೆ ವೆಂಕಟನಾರಣಪ್ಪನವರು ಕುಲ್ಲನ್ನೂ ಅರಿಯರು. ವಿಷಯವನ್ನು ಕುರಿತು ಕೋಪ ಹೊರತಾಗಿ ಮನುಷ್ಯನನ್ನು ಕುರಿತು ಇವರಿಗೆ ಎಂದೂ ಕೋಪವಿಲ್ಲ. ವಾದ ಮುಗಿದ ಉತ್ತರ ಕ್ಷಣದಲ್ಲಿ ಅವರು ಪ್ರತಿವಾದಿಯೊಂದಿಗೆ ಸ್ನೇಹ ದಿಂದ ವರ್ತಿಸುವರು. ಯಾರಿಗೆ ಬರಬೇಕು ಇಂಥ ಸೌಜನ್ಯ? ಇದು ಬರಬೇಕಾದರೆ ಎಷ್ಟು ಜನ್ಮ ತಪಸ್ಸು ಮಾಡಬೇಕು, ದೈವ ಎಷ್ಟು ಅನುಗ್ರಹಿಸಬೇಕು!

ಇಂಥ ಮಾನ್ಯ ವ್ಯಕ್ತಿಯನ್ನು ಇಂದು ನಾವು ಕಳೆದುಕೊಂಡಿ ದ್ದೇವೆ. ಈ ವರ್ಷ ಪರಿಷತ್ತಿನ ಪಾಲಿಗೆ ಸ್ವಲ್ಪ ಕ್ರೂರವಾಗಿದೆ. ಆರು ತಿಂಗಳಾಗಿಲ್ಲ, ನಮ್ಮ ಸಂಸ್ಥೆ ತನ್ನ ಹಿರಿಯ ಸೇವಕರಲ್ಲಿ ಮೂವರನ್ನು ಕಳೆದುಕೊಂಡಿದೆ. ಇಂಥ ಹಿರಿಯರ ನಿಧನ ಪರಿಷತ್ತಿಗೆ ಅಪಾರ ನಷ್ಟ. ಆದರೆ ಒಂದು. ಇವರ ಒಡಲು ಅಳಿ ದರೂ ನೆನವು ಉಳಿದಿರುತ್ತದೆ. ಪರಿಷತ್ತಿನ ಕಟ್ಟಡದ ಸುತ್ತಣ ನೆಲ, ಗಿಡ, ಹುಲ್ಲು, ಪರಿಷತ್ತಿನಲ್ಲಿ ನಡೆಯುವ ಸಣ್ಣ ದೊಡ್ಡ ಎಲ್ಲ ಕೆಲಸ, ಎಲ್ಲವೂ ಶ್ರೀಮಾನ್ ವೆಂಕಟನಾರಣಪ್ಪನವರ ಸೇವೆಯ ಸೌರಭ ವನ್ನು ನೂರು ಕಾಲಕ್ಕೂ ಸೂಸುತ್ತ ಬರುವವು. ಬರುವ ತಲೆಮಾರು ಗಳ ಕನ್ನಡ ಸೇವಕರು ಇವರ ಸೇವಾಕ್ರಮದಿಂದ ಸ್ಫೂರ್ತಿಯನ್ನು ಪಡೆಯಲಿ, ಆ ಸ್ಫೂರ್ತಿಯಿಂದ ಒಸರುವ ಸೇವೆ ಇವರ ಸೇವೆಯ ಸಂಪ್ರದಾಯವನ್ನು ಎಳೆಹರಿಯದೆ ಬೆಳಸಲಿ. ಕನ್ನಡದ ಉತ್ಸವ ವನ್ನು ನಡಸಿದ ದುಡಿಮೆಗಾರರ ನಾಮಾವಳಿಯಲ್ಲಿ 'ವೆಂಕಟ ನಾರಣಪ್ಪ' ಎಂಬ ಹೆಸರು ಏಕರೀತಿ ಕಾಂತಿಯಿಂದ ಬೆಳಗಲಿ.

## ರಾಜಸೇವಾಸಕ್ತ ಬೆಳ್ಳಾವೆ ವೆಂಕಟನಾರಾಯಣಪ್ಪನವರ ಸ್ಮಾರಕ ಉಪನ್ಯಾಸ ನಿಧಿ

ರಾಜಸೇವಾಸಕ್ತ ಶ್ರೀ. ಬೆಳ್ಳಾವೆ ವೆಂಕಟನಾರಾಯಣಪ್ಪ ನವರ ಪ್ರಾರ್ಥಿವ ದೇಹ ೩-೮-೧೯೪೩ನೆಯ ರಾತ್ರಿ ಕಣ್ಮರೆಯಾದ ದುಃಖವಾರ್ತೆ ಕನ್ನಡಿಗರಿಗೆಲ್ಲ ತಿಳಿದಿದೆ. ನಾಡು ನುಡಿ ಜನತೆಗಾಗಿ ನಿರ್ವಂಚನೆಯಿಂದ ಅವಿಶ್ರಾಂತವಾಗಿ ದುಡಿದ ದಿವಂಗತರ ಸ್ಮಾರಕ ವಾಗಿ ವರ್ಷವರ್ಷವೂ ಕನ್ನಡದಲ್ಲಿ ಉಪನ್ಯಾಸಗಳನ್ನು ಏರ್ಪಡಿ ಸಲು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಒಂದು ನಿಧಿಯನ್ನು ಕೂಡಿಸ ಬೇಕೆಂದು ಮಿತ್ರರು ನಿಶ್ಚಯಿಸಿದ್ದಾರೆ. ಈ ನಿಧಿಗೆ ಬಡವರು ಭಾಗ್ಯವಂತರು ಎಲ್ಲರೂ ಸಹಾಯ ಮಾಡಿ ಹಿರಿಯರ ಹೆಸರಿಗೆ ತಕ್ಕ ಮೊತ್ತ ಒಂದು ಕೂಡುವಂತೆ ಸಹಕರಿಸಬೇಕಾಗಿ ಬಿನ್ನಹ. ಈ ಸಂಕಲ್ಪ ಶೀಘ್ರದಲ್ಲಿಯೇ ಕಾರ್ಯರೂಪವಾಗಬೇಕಾಗಿರುವುದ ರಿಂದ ಇನ್ನು ಹದಿನೈದು ದಿನಗಳ ಒಳಗಾಗಿ ಎಲ್ಲ ಹಣವನ್ನೂ ಕೂಡಿಸಬೇಕೆಂದು ನಿಶ್ಚಯಿಸಿದೆ. ಆದ್ದರಿಂದ ಹಣಕೊಡಬಯಸು ವವರು ದಯವಿಟ್ಟು ಇದೇ **ಆಗಸ್ಟ್ ೨೫ನೆಯ ತಾರೀಖಿನೊಳಗೆ** ತಮ್ಮ ಸಹಾಯವನ್ನು ಪರಿಷತ್ತಿನ ಕಾರ್ಯದರ್ಶಿಯವರ ಹೆಸರಿಗೆ ಕಳಿಸಿ ಕೊಡುವ ಉಪಕಾರ ಮಾಡಬೇಕಾಗಿ ಪ್ರಾರ್ಥನೆ.

ದಿವಂಗತರ ವಿದ್ಯಾರ್ಥಿಗಳು ಮಿತ್ರರು ಒಬ್ಬೊಬ್ಬರಿಗೂ ಪ್ರತ್ಯೇಕವಾಗಿ ಬರೆಯಲು ಕಾಲಾವಕಾಶ ಮೊದಲಾದ ಅನುಕೂಲ ಗಳು ಇಲ್ಲದ್ದರಿಂದ ಈ ಸಾರ್ವಜನಿಕ ಬಿನ್ನಹವನ್ನೇ ಒಬ್ಬೊಬ್ಬ ರಲ್ಲಿಯೂ ವ್ಯಕ್ತಿಶಃ ಮಾಡಿದ್ದಾಗಿ ಭಾವಿಸಿಕೊಂಡು ಈ ನಮ್ಮ ಮಿತ್ರರು ಹಿರಿಯರ ನೆನವಿನ ಕಾಣಿಕೆಗಾಗಿ ತಮ್ಮ ಕೈಯಲ್ಲಾದ್ದನ್ನು ಕಳಿಸಿಕೊಡುವ ಉಪಕಾರಮಾಡಬೇಕೆಂದು ಮತ್ತೊಮ್ಮೆ ಪ್ರಾರ್ಥನೆ. ಈ ಪ್ರಕಟನೆಯನ್ನು ನೋಡದೆ ಇರಬಹುದಾದ ತಮ್ಮ ಗೆಳೆಯರಿಗೆ ಈ ವಿಷಯವನ್ನು ತಿಳಿಸಿದರೆ ಹೆಚ್ಚು ಉಪಕಾರವಾಗುತ್ತದೆ.

ಬಿ. ವೆಂಕೋಬರಾವ್
ಕಾರ್ಯದರ್ಶಿ

ಮಾಸ್ತಿ ವೆಂಕಟೇಶ ಅಯ್ಯಂಗಾರ್
ಉಪಾಧ್ಯಕ್ಷ

## ಸಾಹಿತ್ಯೋತ್ಸವ, ಕಲ್ಬುರ್ಗಿ

**ಕನ್ನಡ ಸಾಹಿತ್ಯ ಸಂಘದ** ಆಶ್ರಯದಲ್ಲಿ ಜುಲೈ ತಿಂಗಳು ೨೩, ೨೪, ೨೫ ನೆಯ ದಿನಗಳಲ್ಲಿ ಜರುಗಿದ ಸಾಹಿತ್ಯೋತ್ಸವದ ವಿವರ ಕೆಳಗಿನಂತೆ ಇರುತ್ತದೆ.

ಮೊದಲನೆಯ ದಿನ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಪ್ರಸಕ್ತ ಶ್ರೀ. ಮಾಸ್ತಿ ವೆಂಕಟೇಶಯ್ಯಂಗಾರ್ ಎಂ.ಎ., ಅವರು ಬ್ರಹ್ಮಪುರ ಸಭೇಶಾನಂದ ಮಂದಿರದಲ್ಲಿ 'ವಾಲ್ಮೀಕಿ ರಾಮಾಯಣ'ದ ಮೇಲೆ ಸ್ವಾರಸ್ಯವಾದ ಭಾಷಣಮಾಡಿ ರಾಮಾಯಣ ಮತ್ತು ವಾಲ್ಮೀಕಿ ಮಹರ್ಷಿಗಳ ಅಜರಾಮರವಾದ ಕೀರ್ತಿಯನ್ನು ಎಲ್ಲರಿಗೂ ತಿಳಿಯಪಡಿಸಿದರು. ಆಮೇಲೆ ಶ್ರೀ. ಎಂ. ಎಸ್. ಅನಂತಪದ್ಮನಾಭರಾಯರು "ಕುಮಾರ ವ್ಯಾಸನ ಭಾರತ"ದಿಂದ ಪದ್ಯಗಳನ್ನು ಸುಶ್ರಾವ್ಯವಾಗಿ ಓದಿ ಸಭೆಯನ್ನು ಆನಂದಪಡಿಸಿದರು. ಅದೇ ದಿನ ರಾತ್ರಿ ನಗರ ಭವನದಲ್ಲಿ ಶ್ರೀ. ರಂ. ಶ್ರೀ. ಮುಗಳಿ ಹಾಗೂ ಶ್ರೀ. ಪ್ರಿನ್ಸಿಪಾಲ್. ವಿ. ಕೃ. ಗೋಕಾಕರು ಅನುಕ್ರಮವಾಗಿ "ಆದಿಪಂಪನ ಸಂಸ್ಕೃತಿ" ಮತ್ತು "ಕನ್ನಡ ನಾಟಕಕಾರರು" ಎಂಬ ವಿಷಯಗಳ ಮೇಲೆ ವಿದ್ವತ್ಪೂರ್ಣವಾದ ಉಪನ್ಯಾಸಗಳನ್ನು ಮಾಡಿದರು.

ಎರಡನೆಯ ದಿನ ಸಾಯಂಕಾಲ ನಗರ ಭವನದಲ್ಲಿ ಶ್ರೀ. ಮಹಮ್ಮದ್ ಅಮೀರ ಅಲಿಖಾನ್, ಎಚ್. ಸಿ. ಎಸ್. ಸುಬೇದಾರ, ಇವರ ಅಧ್ಯಕ್ಷತೆಯಲ್ಲಿ ಪ್ರಶಸ್ತಿ ಪತ್ರ ಪ್ರದಾನ ಸಮಾರಂಭ ಅತ್ಯಂತ ವಿಜೃಂಭಣೆಯಿಂದ ಜರುಗಿತು. ಶ್ರೀ. ಮಾಸ್ತಿಯವರು "ಕರ್ನಾಟಕ ಸಂಸ್ಕೃತಿ" ಎಂಬ ವಿಷಯದ ಮೇಲೆ ಕನ್ನಡದಲ್ಲಿಯೂ, ಶ್ರೀ. ಗೋಕಾಕರು "Duty is the daughter of the Voice of God" (ಕರ್ತವ್ಯ ದೇವವಾಣಿಯ ಕೂಸು) ಎಂಬ ವಿಷಯದ ಮೇಲೆ ಇಂಗ್ಲೀಷಿನಲ್ಲಿಯೂ ಅಮೋಘವಾದ ಉಪನ್ಯಾಸಗಳನ್ನು ಮಾಡಿದರು. ಅನಂತರ ಶ್ರೀ. ಮಹಮ್ಮದ ಅಮೀರ ಅಲ್ಲೀಖಾನರು ಸುಬೇದಾರ ಅವರು ಅಧ್ಯಕ್ಷ ಭಾಷಣವನ್ನು ಅಪ್ಪಣೆ ಕೊಡಿಸುತ್ತ ಶ್ರೀ. ಮಾಸ್ತಿಯವರ ಮತ್ತು ಶ್ರೀ. ಗೋಕಾಕರ ಭಾಷಣಗಳ ದಿವ್ಯ ಸಂದೇಶವನ್ನು ಪ್ರಶಂಸಿಸಿ, ಜನಾಂಗದ ಉನ್ನತಿಗೆ ಮಾತೃಭಾಷೆಯ ದ್ವಾರಾ ಶಿಕ್ಷಣ ಕೊಡುವುದೇ ಶ್ರೇಷ್ಠವಾದ ಮಾರ್ಗವೆಂದೂ, ಹೈದರಾಬಾದಿನಲ್ಲಿ ಉರ್ದು ಬೋಧ ಭಾಷೆಯಾದಂತೆ ಮೈಸೂರಿನಲ್ಲಿ ಕನ್ನಡವು ಬೋಧ ಭಾಷೆಯಾದರೆ ಕನ್ನಡರಿಗೆ ಬಹಳ ಉಪಕಾರವಾಗುವದೆಂಬ ಅಂಶವನ್ನು ವ್ಯಕ್ತಪಡಿಸಿದರು. ಅಂದೇ ರಾತ್ರಿ ಬಾಜಾರದಲ್ಲಿ ಮಲ್ಲಿಕಾರ್ಜುನ ಮಠದಲ್ಲಿ ಶ್ರೀ. ವ್ಯಾಕರಣತೀರ್ಥ ಚಂದ್ರಶೇಖರ ಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ ಶ್ರೀ. ವ್ಹಿ. ಬಿ. ನಾಯಕ. ಎಂ.ಎ., ಎಲ್‌ಎಲ್.ಬಿ. ಅವರು "ವ್ಯಾಸ ಮಹಾಕವಿ" ಎಂಬ ವಿಷಯದ ಮೇಲೆ ಎಲ್ಲರೂ ಮೆಚ್ಚುವಂತೆ ಭಾಷಣ ಮಾಡಿದರು. ಅನಂತರ ಶ್ರೀ. ಮುಗಳಿಯವರು ತಮ್ಮ ಮನೋಹರವಾದ "ಕಾವ್ಯಗಾನ"ದಿಂದ ಸಭಿಕರನ್ನು ಸಂತಸಗೊಳಿಸಿದರು.

ಮೂರನೆಯ ದಿನ ಶ್ರೀ. ಮಾಸ್ತಿಯವರು ಸ್ಟೇಶನ್ ವಿಠ್ಠಲ ಮಂದಿರದಲ್ಲಿ "ಭಾರತೀಯ ಸಂಸ್ಕೃತೀಯ ಮುನ್ನೋಟ" ಎಂಬ ವಿಷಯದ ಮೇಲೆ ಕಲ್ಬುರ್ಗಿಯ ನಾಗರಿಕರು ಎಂದೂ ಮರೆಯಲಾರದಂಥ ದೈವೀ ಸಂದೇಶದಿಂದ ಪೂರಿತವಾದ ಭಾಷಣವನ್ನು ಮಾಡಿ ಭರತಖಂಡದ ಧರ್ಮಸರಸ್ಸಿನಲ್ಲಿ ಯಾವ ಜನವಾದರೂ ಬಂದು ಧರ್ಮಕ್ಕೆ ಮಾತ್ರ ಉತ್ತರ ಹೇಳಿ ಜಲಪಾನ ಮಾಡಿ, ಅಮರರಾಗಬಹುದೆಂದು ಹೇಳಿದರು. ಇದಾದಮೇಲೆ ನಗರಭವನದಲ್ಲಿ ಶ್ರೀ. ಕೆ. ವಿ. ರಾಘವಾಚಾರ್. ಎಂ. ಎ., ಬಿ. ಟಿ. ಅವರು "ಗ್ರೀಕ ರುದ್ರ ನಾಟಕಗಳು" ಎಂಬ ವಿಷಯದ ಮೇಲೆ ಸಾರವತ್ತಾದ ಭಾಷಣಮಾಡಿದ ಮೇಲೆ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಗಳಾದ ಶ್ರೀ. ಬಿ. ವೆಂಕೋಬರಾಯರು ದೀಪಚಿತ್ರದ ಸಹಾಯದಿಂದ "ಕರ್ನಾಟಕದ ವಾಸ್ತುಶಿಲ್ಪ"ವನ್ನು ಕುರಿತು ಮಾತಾಡುತ್ತ, ಕನ್ನಡನಾಡಿನ ಕಲಾವೈಭವ ಕಣ್ಣಿಗೆ ಕಟ್ಟುವಂತೆ ಮಾಡಿದರು. ಅಂದಿನ ದಿನವೇ ಮಾನ್ಯ ಸುಬೇದಾರರಾದ ಶ್ರೀ. ಮಹಮ್ಮದ ಅಮೀರ ಅಲೀಖಾನ, ಎಚ್. ಸಿ. ಎಸ್. ಅವರು ಎಲ್ಲ ವ್ಯಾಖ್ಯಾತರಿಗೂ, ಸಾಹಿತ್ಯಸಂಘದ ಅಧಿಕಾರಿಗಳಿಗೂ, ಇತರ ಪ್ರತಿಷ್ಠಿತ ಗೃಹಸ್ಥರಿಗೂ, ಸಂತೋಷ ಕೂಟವನ್ನು ಏರ್ಪಡಿಸಿ ಗೌರವಿಸಿದರು.

ಉತ್ಸವದ ಕೊನೆಯಲ್ಲಿ ಕನ್ನಡ ಸಾಹಿತ್ಯ ಸಂಘದ ಅಧ್ಯಕ್ಷರಾದ ಶ್ರೀ. ರಾಯಪಾಂಡುರಂಗರಾಯ ದೇಶಮುಖ ಅವರು ಎಲ್ಲ ಉಪನ್ಯಾಸಕರಿಗೆ ಕೃತಜ್ಞತೆಗಳನ್ನು ಸಲ್ಲಿಸಿದರು. ಉಪಾಧ್ಯಕ್ಷ ಶ್ರೀ ಪದ್ಮನಾಭರು ಎಲ್ಲ ಕಾರ್ಯಕರ್ತರಿಗೆ ವಂದನೆಗಳನ್ನು ಅರ್ಪಿಸಿದ ತರುವಾಯ ಸಾಹಿತ್ಯೋತ್ಸವ ಮುಗಿಯಿತು.

## ಹೈದರಾಬಾದಿನಲ್ಲಿ ಕನ್ನಡ ಪ್ರಚಾರ

ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಪ್ರಸಕ್ತ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು, ಕಾರ್ಯದರ್ಶಿಗಳಾದ ಶ್ರೀ. ಬಿ. ವೆಂಕೋಬರಾಯರು, ಬಿ.ಎ., ಅವರು ಮತ್ತು ಶ್ರೀ. ಕೆ. ವಿ. ರಾಘವಾಚಾರ್ಯ, ಎಂ.ಎ., ಅವರು ೨೮ನೆಯ ಜುಲೈ ದಿನ ಸಂಜೆ ಸೊಲ್ಲಾಪುರದಿಂದ ಹೈದರಾಬಾದಿಗೆ ದಯಮಾಡಿಸಿದರು. ಸಿಕಂದರಾಬಾದಿನಲ್ಲಿ ಶ್ರೀ. ಸಿ. ರಂಗಾಚಾರ್ಯ, ಎಂ.ಎ., ಎಲ್‌ಎಲ್.ಬಿ., ಅಡ್ವೊಕೇಟ್ ಇವರ ಮನೆಯಲ್ಲಿ ತಂಗಿದರು. ಮಾರನೆಯ ದಿನ ಸ್ಥಳೀಯ ಸಂಸ್ಥೆಗಳಾದ ನೃಪತುಂಗ ಕನ್ನಡ ವಿದ್ಯಾಲಯ ಮತ್ತು ಶಾರದಾ ಕನ್ಯಾ ಶಾಲೆಯನ್ನು ಸಂದರ್ಶಿಸಿದರು. ಅದೇ ದಿನ ಸಂಜೆ ೪-೩೦ಕ್ಕೆ ಉಪಾಧ್ಯಕ್ಷರು ಉಸ್ಮಾನಿಯಾ ವಿಶ್ವವಿದ್ಯಾಲಯದ ಕನ್ನಡ ಸಂಘದಲ್ಲಿ ಪ್ರಾರಂಭ ಭಾಷಣವನ್ನು ಮಾಡಿದರು.

ಮರು ದಿನ (೩೦ನೆಯ ಜುಲೈ ಶುಕ್ರವಾರ) ಬೆಳಗ್ಗೆ ವಿದ್ಯಾರ್ಥಿ ಸಂಘದ ಪರವಾಗಿ ರೆಡ್ಡಿ ಹಾಸ್ಟೆಲಿನಲ್ಲಿ ಏರ್ಪಟ್ಟ ಕನ್ನಡ ಸಾಹಿತ್ಯ ಪರೀಕ್ಷೆಯ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಉಪಾಧ್ಯಕ್ಷರು ಪ್ರಶಸ್ತಿ ಪತ್ರಿಕೆಗಳನ್ನು ಹಂಚಿ, ಕನ್ನಡದ ಮುನ್ನಡೆ ಎಂದರೇನು ಎಂಬುದನ್ನು ಕೂಲಂಕಷವಾಗಿ ವಿವರಿಸಿದರು. ಮಧ್ಯಾಹ್ನ ೪ ಗಂಟೆಗೆ ವೀರಶೈವ ತರುಣ ಸಂಘದ ಪರವಾಗಿ ಡಾ. ಬಿ. ಆರ್. ನಾಯಕ ಅವರ ಮನೆಯಲ್ಲಿ ಪಂಡಿತ ಚಿದರೆಮಠ ವೀರಭದ್ರಶರ್ಮರ ಅಧ್ಯಕ್ಷತೆಯಲ್ಲಿ ಒಂದು ಸಾರ್ವಜನಿಕ ಸಭೆ ಜರುಗಿತು. ಉಪಾಧ್ಯಕ್ಷರು ಶಿವಾನುಭವವನ್ನು ಕುರಿತು ಸಂಕ್ಷೇಪವಾಗಿ ವಿವರಿಸಿ, ಸರ್ವಮತಸಮನ್ವಯ ದೃಷ್ಟಿಯಿಂದ ಮಾನವನ ಬಾಳು ಹೇಗೆ ತಿದ್ದಬಹುದೆಂಬುದನ್ನು ಬಸವಣ್ಣನವರ ಜೀವನದಿಂದ ಉದಾಹರಿಸಿ ತೋರಿ ಇಂಥ ವ್ಯಕ್ತಿಗಳು ಒಂದು ಕೂಟಕ್ಕೇ ಸೇರದೆ ಅಖಿಲ ಮಾನವ ಜಾತಿಗೇ ಸೇರಿರುವರೆಂದು ಸಾರಿದರು. ಸಂಜೆ ೬ ಗಂಟೆಗೆ ರೆಡ್ಡಿ ಹಾಸ್ಟೆಲಿನಲ್ಲಿ ಹೈದರಾಬಾದು ಕನ್ನಡ ಪ್ರಾಂತ ಸಮಿತಿಯಿಂದ ಏರ್ಪಟ್ಟ ಕಾರ್ಯಕ್ರಮಗಳಲ್ಲಿ ಶ್ರೀ. ಕೆ. ವಿ. ರಾಘವಾಚಾರ್ಯರು, ಉಪಾಧ್ಯಕ್ಷರು ಮತ್ತು ಕಾರ್ಯದರ್ಶಿಗಳು ಸಾಕ್ರೆಟೀಸ್, ವಾಲ್ಮೀಕಿಯ ಕವಿತೆ, ಕರ್ನಾಟಕದ ವಾಸ್ತು ಶಿಲ್ಪ ಇವುಗಳನ್ನು ಕುರಿತು ಕ್ರಮವಾಗಿ ಭಾಷಣ ಮಾಡಿದರು. ರೆಡ್ಡಿ ಹಾಸ್ಟೆಲ್ ಸಭಿಕರಿಂದ ತುಂಬಿ ಕಿಕ್ಕಿರಿದಿದ್ದಿತು.

ಮಾರನೆಯ ದಿನ ಬೆಳಗ್ಗೆ (೩೧ ಜುಲೈ) ಮತ್ತೆ ಶ್ರೀ. ಕೆ. ವಿ. ರಾಘವಾಚಾರ್ಯರು ಗ್ರೀಕ್ ರುದ್ರನಾಟಕಗಳ ಮೇಲೆ ಮತ್ತು ಉಪಾಧ್ಯಕ್ಷರು ಭಾರತೀಯ ಸಂಸ್ಕೃತಿಯ ಮುನ್ನೋಟದ ಮೇಲೆ ಭಾಷಣ ಮಾಡಿದರು. ಮಧ್ಯಾಹ್ನ ೩ ಗಂಟೆಗೆ ಶಾಲಿಬಂಡೆಯಲ್ಲಿರುವ ವೆಂಕಟೇಶ ಮೆಮೋರಿಯಲ್ ಸ್ಕೂಲನ್ನು ಸಂದರ್ಶಿಸಿದರು. ಸಂಜೆ ೫ ಗಂಟೆಗೆ 'ಎಂಗ್‌ಮೆನ್ಸ್ ಇಂಪ್ರುವ್ಮೆಂಟ್ ಸೊಸೈಟಿ'ಯ ನೇತೃತ್ವದಲ್ಲಿ ದಿವಾನ್ ಬಹದ್ದೂರ್ ಅರವಮುದು ಅಯ್ಯಂಗಾರ್ ಅವರ ಅಧ್ಯಕ್ಷತೆಯಲ್ಲಿ ಉಪಾಧ್ಯಕ್ಷರು 'Two Attitudes' ಎಂಬ ವಿಷಯದ ಮೇಲೆ ಇಂಗ್ಲಿಷಿನಲ್ಲಿ ಭಾಷಣ ಮಾಡಿದರು. ಸಂಜೆ ೬ ಗಂಟೆಗೆ ರೆಡ್ಡಿ ಹಾಸ್ಟೆಲಿನಲ್ಲಿ ವಿದ್ಯಾ ಮತ್ತು ನ್ಯಾಯ ಸಚಿವರಾದ ದಿ ಆನರೆಬಲ್ ನವಾಬ್ ಮೆಹದಿಯಾರ್ ಜಂಗ್ ಬಹಾದ್ದೂರ್ ಅವರ ಅಧ್ಯಕ್ಷತೆ

ಯಲ್ಲಿ 'Popular Culture in Karnataka' ಎಂಬ ವಿಷಯದ ಮೇಲೆ ಇಂಗ್ಲಿಷಿನಲ್ಲಿ ಸ್ವಾರಸ್ಯವಾದ ಭಾಷಣವನ್ನು ಮಾಡಿದರು. ಸಭೆಗೆ ಕನ್ನಡೇತರರಾದ ಮಹಾಜನರೂ ದಯಮಾಡಿಸಿದ್ದರು. ಹೈದರಾಬಾದ ಕನ್ನಡಿಗರ ಪರವಾಗಿ ಉಪಾಧ್ಯಕ್ಷರಿಗೆ ಒಂದು ಮಾನ ಪತ್ರವನ್ನು ಅರ್ಪಿಸಲಾಯಿತು. ರಾತ್ರಿ ೮-೧೫ ಗಂಟೆಗೆ ಹೈದರಾಬಾದ ಆಕಾಶವಾಣಿಯಿಂದ ಉಪಾಧ್ಯಕ್ಷರು 'ಪುರಂದರದಾಸರು' ಎಂಬ ವಿಷಯದ ಮೇಲೆ ಭಾಷಣವನ್ನು ಪ್ರಸರಿಸಿದರು.

ತಮ್ಮ ಎಲ್ಲ ಕಾರ್ಯಕ್ರಮಗಳಲ್ಲೂ ಉಪಾಧ್ಯಕ್ಷರು ಪರಿಷತ್ತಿನ ಸಂದೇಶವನ್ನೂ ಅದರ ಅಖಿಲ ಕರ್ಣಾಟಕದ ಸ್ವರೂಪವನ್ನೂ ವಿಶದೀಕರಿಸಿ ಕರ್ನಾಟಕದ ಎಲ್ಲ ಪ್ರಾಂತದವರು ತಮ್ಮ ಸಹಾಯ ಸಹಾನುಭೂತಿಯನ್ನು ಪರಿಷತ್ತಿಗೆ ಕೊಟ್ಟು ಬೆಳಸಬೇಕೆಂದು ಕೋರಿದರು.

## ಪರಿಷತ್ತಿನ ಸುದ್ದಿ

### ಪರಿಷತ್ತಿನ ಸದಸ್ಯರ ಬೆಳವಣಿಗೆ

**ಉದ್ಧಾರಕರು (೧,೦೦೦ ರೂ.) :** ಶ್ರೀ.ಗಳಾದ ೧. ಎಂ.ಜಿ. ಲಕ್ಷ್ಮೀನರಸು ಅವರು, ಬಿ.ಕಾಂ., ಕಿಂಗ್ಸ್‌ವೇ, ಸಿಕಂದ್ರಾಬಾದ್. ೨. ಧರ್ಮಪ್ರಕಾಶ ಎಲ್.ಎಸ್. ವೆಂಕಾಜಿರಾಯರು, ಪ್ರೊಪ್ರೈಟರು, ಲೊಕ್ಯೂರು ಮತ್ತು ಕಂಪೆನಿ, ಬೆಂಗಳೂರು. (ಸಹಾಯಕ ವರ್ಗದಿಂದ ಬದಲಾವಣೆ).

**ಪ್ರದಾತೃಗಳು (೫೦೦ ರೂ.) :** ಶ್ರೀ.ಗಳಾದ ೧. ಸಿ. ರಂಗಾಚಾರ್ಯರು, ಎಂ.ಎ., ಎಲ್‌ಎಲ್.ಬಿ., ಮಾರೆಡ್ಡಿಪಲ್ಲಿ, ಸಿಕಂದ್ರಾಬಾದ್. (ಸಹಾಯಕ ವರ್ಗದಿಂದ ಬದಲಾವಣೆ). ೨. ಎನ್. ಎಸ್. ರಾಘವನ್ ಅವರು, ಬಿ.ಎ., ಎಲ್‌ಎಲ್.ಬಿ., ಹೈಕೋರ್ಟ್ ವಕೀಲರು, ಮಾರೆಡ್ಡಿಪಲ್ಲಿ, ಸಿಕಂದ್ರಾಬಾದ್,

**ಸಹಾಯಕ ಸದಸ್ಯರು (೧೦೦ ರೂ.) :** ಶ್ರೀ.ಗಳಾದ ೧. ಮಧ್ವರಾವ್ ಅನ್ವಾರಿ ಅವರು, ಬಷೀರ್‌ಬಾಗ್ ರಸ್ತೆ, ಹೈದರಾಬಾದ್. ೨. ಕಾಗಲಕರ ಶ್ರೀನಿವಾಸರಾಯರು, ಬಿ.ಎ., ಎಲ್.ಎಲ್.ಬಿ., ಹೈಕೋರ್ಟ್ ವಕೀಲರು, ಹೈದರಾಬಾದ್. (ಆಜೀವ ಸದಸ್ಯತ್ವದಿಂದ ಬದಲಾವಣೆ). ೩. ಎಸ್. ಶ್ರೀಕಂಠಯ್ಯ ಅವರು, ಬಿ.ಎ., ಬಿ.ಎಲ್., ಅಡ್ವೊಕೇಟ್,, ಬಸವನಗುಡಿ, ಬೆಂಗಳೂರು.

**ಸಾಮಾನ್ಯ ಸದಸ್ಯರು (೭ ರೂ.) :** ಶ್ರೀ. ರಂಗರಾವ ಕನ್ನಾಳ ಅವರು, ಗುಲ್ಬರ್ಗ.

**ಸಾಮಾನ್ಯ ಸದಸ್ಯರು (೩ ರೂ.) :** ಶ್ರೀ. ಕೆ. ವೆಂಕಟರಾಮಯ್ಯನವರು, ಎಂ.ಎ., ಸೂಪರಿಂಟೆಂಡೆಂಟರು, ಫೈನಾನ್ಷಿಯಲ್ ಬ್ರಾಂಚ್, ಡಿ.ಪಿ.ಐ. ಅವರ ಕಚೇರಿ, ಬೆಂಗಳೂರು.

**ಅಂಗಸಂಸ್ಥೆ :** ಕರ್ನಾಟಕ ಸಂಘ, ಡಿ.ಎ.ವಿ. ಕಾಲೇಜು, ಸೊಲ್ಲಾಪುರ.

### ಸಂಗೀತ

ಸಂಗೀತವಿದ್ವಾನ್ ಶ್ರೀ. ಬಿ. ಎಸ್. ರಾಜಯ್ಯಂಗಾರ್ ಅವರು **೭-೮-೪೩ನೆಯ ಶನಿವಾರ ಸಂಜೆ ೬-೩೦ಕ್ಕೆ** ಪರಿಷನ್ಮಂದಿರದಲ್ಲಿ **ಹರಿದಾಸರ ಕೃತಿಗಳನ್ನು** ಹಾಡುತ್ತಾರೆ. ಪಿಟೀಲು ವಾದನ: ವಿದ್ವಾನ್ ಶ್ರೀ. ಬಿ. ಟಿ. ರಾಜಪ್ಪನವರು, ಮೃದಂಗ : ವಿದ್ವಾನ್ ಶ್ರೀ. ಬಿ. ಆರ್. ಶೇಷಾದ್ರಿ ಅವರು.

### ಉಪನ್ಯಾಸ

**೧೩-೮-೪೩ನೆಯ ಶುಕ್ರವಾರ ಸಂಜೆ ೭ ಗಂಟೆಗೆ** ಪರಿಷನ್ಮಂದಿರದಲ್ಲಿ ಶ್ರೀ. ಎಸ್. ರಾಮಚಂದ್ರರಾವ್, ಎಂ.ಎ. ಅವರು **ಸಂಸ್ಕೃತ ನಾಟಕಗಳ ಪ್ರಸ್ತಾವನೆಗಳು** ಎಂಬ ವಿಷಯವನ್ನು ಕುರಿತು ಉಪನ್ಯಾಸ ಮಾಡುತ್ತಾರೆ.

### ಸಂತಾಪ ಸೂಚಕ ಸಭೆ

ಪರಿಷತ್ತಿನ ಸ್ಥಾಪಕ ಸದಸ್ಯರಲ್ಲೊಬ್ಬರಾಗಿದ್ದು, ಪರಿಷತ್ತಿನ ಬೆಳವಣಿಗೆಗೆ ನಾನಾ ಪ್ರಕಾರಗಳಲ್ಲಿ ದುಡಿದ ರಾಜಸೇವಾಸಕ್ತ ಶ್ರೀ. ಬೆಳ್ಳಾವೆ ವೆಂಕಟನಾರಾಯಣಪ್ಪನವರ ನಿಧನಕ್ಕಾಗಿ ಸಂತಾಪ ಸೂಚಕ ಸಭೆ **೬-೮-೪೩ನೆಯ ಶುಕ್ರವಾರ ಸಂಜೆ ೭ ಗಂಟೆಗೆ** ಪರಿಷನ್ಮಂದಿರದಲ್ಲಿ ನಡೆಯುತ್ತದೆ.

ತಾಯಿನಾಡು ಮತ್ತು ಡೈಲಿ ನ್ಯೂಸ್ ಪತ್ರಿಕೆಗಳ ಮಾಲೀಕರಾದ ಶ್ರೀ. ಪಿ. ಆರ್. ರಾಮಯ್ಯನವರು ಅಧ್ಯಕ್ಷತೆ ವಹಿಸುತ್ತಾರೆ.

## ಕನ್ನಡ ಸುದ್ದಿ

**ಶಿವಮೊಗ್ಗ : ಕರ್ಣಾಟಕ ಸಂಘ**

ಕಳೆದ ಒಂದು ತಿಂಗಳಿನಿಂದ ಪ್ರತಿ ಭಾನುವಾರವೂ ಸಂಜೆ ಒಂದು ಗಂಟೆ ಹೊತ್ತು ವ್ಯಾಸಂಗಗೋಷ್ಠಿ ನಡೆಯುವಂತೆ ಏರ್ಪಡಿಸಿದೆ. ಉತ್ತಮವಾದ ಹಳಗನ್ನಡ ನಡುಗನ್ನಡ ಹೊಸಗನ್ನಡ ಗ್ರಂಥಗಳ ವಾಚನವನ್ನು ನಡಸುವ ಯೋಜನೆಯಿದೆ. ಮೊದಲಿಗೆ ಮುದ್ದಣ ಕವಿಯ 'ಅದ್ಭುತ ರಾಮಾಯಣ'ವನ್ನು ಶ್ರೀ. ಎಸ್. ವಿ. ಪರಮೇಶ್ವರಭಟ್ಟ, ಎಂ.ಎ. ಅವರು ಓದಿ ಹೇಳಿದರು. ೧-೮-೪೩ನೆಯ ಭಾನುವಾರದಿಂದ ಮುದ್ದಣ ಕವಿಯ 'ರಾಮಾಶ್ವಮೇಧ'ವನ್ನು ಕುರಿತು ಶ್ರೀ. ಎಸ್. ವಿಷ್ಣು ಭಟ್ಟ, ಬಿ.ಎ., ಎಲ್‌ಎಲ್.ಬಿ. ಅವರು ವಾಚನ ನಡಸುತ್ತಿದ್ದಾರೆ.

**ಶಿವಮೊಗ್ಗ : ಕರ್ಣಾಟಕ ಸಂಘ, ಇಂಟರ್‌ಮೀಡಿಯೆಟ್ ಕಾಲೇಜು**

ಸಂಸ್ಥಾನ ಅಕ್ಷರ ಪ್ರಚಾರ ಸಮಿತಿಯ ವ್ಯವಸ್ಥಾಪಕ ಕಾರ್ಯದರ್ಶಿಗಳಾದ ಶ್ರೀ. ಎಸ್. ವಿ. ಶ್ರೀನಿವಾಸರಾವ್, ಬಿ.ಎ., ಬಿ.ಟಿ. ಅವರು 'ನನಗೆ ಪ್ರಿಯವಾದ ಒಂದೆರಡು ಕನ್ನಡ ಪುಸ್ತಕಗಳು' ಎಂಬ ವಿಷಯವನ್ನು ಕುರಿತು ೩೦-೭-೪೩ನೆಯ ಶುಕ್ರವಾರ ಈ ವರ್ಷದ ಆರಂಭ ಭಾಷಣವನ್ನು ಮಾಡಿದರು. ಸಂಘದ ಅಧ್ಯಕ್ಷರಾದ ಶ್ರೀ. ಎಚ್. ರಾಮಸ್ವಾಮಿ ಅಯ್ಯಂಗಾರ್, ಎಂ.ಎಸ್.ಸಿ. ಅವರ ಸ್ವಾಗತ ಭಾಷಣವೂ, ಉಪಾಧ್ಯಕ್ಷರಾದ ಶ್ರೀ. ಎಸ್. ವಿ. ಪರಮೇಶ್ವರಭಟ್ಟ, ಎಂ.ಎ ಅವರ ಪರಿಚಯ ಭಾಷಣವೂ ಆದ ಮೇಲೆ, ಶ್ರೀ. ಶ್ರೀನಿವಾಸರಾಯರು ಮಾಸ್ತಿಯವರ 'ಯಶೋಧರಾ' ನಾಟಕವನ್ನೂ ಕಾರಂತರ 'ಬೆಟ್ಟದ ಜೀವ' ಕಾದಂಬರಿಯನ್ನೂ ತೆಗೆದುಕೊಂಡು ಈ ಎರಡು ಕೃತಿಗಳ ರಸಸ್ಥಾನಗಳನ್ನು ಹೃದಯಂಗಮವಾಗಿ ವಿವರಿಸಿ ಹೇಳಿದರು. ಕಾರ್ಯದರ್ಶಿಗಳಾದ ಶ್ರೀ. ಎಚ್.ಜಿ. ಗುರುಲಿಂಗಮೂರ್ತಿ ಅವರಿಂದ ವಂದನಾಸಮರ್ಪಣೆಯಾದ ಮೇಲೆ ಸಭೆ ಮುಗಿಯಿತು.

**ಚಿಕ್ಕನಾಯಕನಹಳ್ಳಿ : ಕನ್ನಡ ಸಂಘ ಸ್ಥಾಪನೆ**

೨೫-೭-೪೩ನೆಯ ಭಾನುವಾರ ತುಮಕೂರು ಜಿಲ್ಲೆಯ ತಾಲ್ಲೂಕು ಸ್ಥಳವಾದ ಚಿಕ್ಕನಾಯಕನಹಳ್ಳಿಯ ನಾಗರಿಕರು ಸಭೆ ಸೇರಿ ಕನ್ನಡ ಸಂಘವನ್ನು ಸ್ಥಾಪಿಸಿದರು. ಶ್ರೀ.ಗಳಾದ ಸಿ. ಎಚ್. ಲಿಂಗದೇವರು ಅಧ್ಯಕ್ಷರು, ಎಸ್. ಎಸ್. ಅನಂತರಂಗಾಚಾರ್ಯರು ಮತ್ತು ಜಿ. ವಿ. ನಾರಾಯಣ ಮೂರ್ತಿಗಳು ಕಾರ್ಯದರ್ಶಿಗಳು. ಸಂಘವನ್ನು ಪರಿಷತ್ತಿನ ಅಂಗಸಂಸ್ಥೆಯಾಗಿ ಮಾಡಿ ಕನ್ನಡದ ಕೆಲಸ ನಡಸುವ ತೀರ್ಮಾನವಾಗಿದೆ.

**ತುಮಕೂರು : ಇಂಟರ್‌ಮೀಡಿಯೆಟ್ ಕಾಲೇಜು ಸಂಘ**

ಸಂಘದ ಆಶ್ರಯದಲ್ಲಿ ೨೫-೭-೪೩ನೆಯ ಭಾನುವಾರ ಬೆಳಗ್ಗೆ ಶ್ರೀ. ಎಂ. ವಾಸುದೇವಮೂರ್ತಿ, ಬಿ.ಆಗ್. ಅವರು ಫಿರ್ದೂಸಿ ಕವಿಯ 'ಷಾಹ್‌ನಾಮಾ' ಎಂಬ ವಿಷಯವಾಗಿ ಉಪನ್ಯಾಸ ಮಾಡಿದರು.

## ಸಾದರ ಸ್ವೀಕಾರ

**ಶುಚಿ :** ಬರೆದವರು: ಶ್ರೀ. ಎಸ್.ವಿ. ರಂಗಣ್ಣನವರು, ಎಂ.ಎ., ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರ ಪುಸ್ತಕ ಮಾಲೆಯ ೪೬ನೆಯ ಪ್ರಕಟನೆ. ಬೆಲೆ ೪ ಆಣೆ.

**ಬೆಟ್ಟದ ಜೀವ :** ಬರೆದವರು: ಶ್ರೀ. ಕೆ. ಶಿವರಾಮ ಕಾರಂತರು, ಪುತ್ತೂರು ಧಾರವಾಡದ ಮನೋಹರ ಗ್ರಂಥಮಾಲೆಯ ೫೯-೬೦ನೆಯ ಪ್ರಕಟನೆ. ಬೆಲೆ ರೂ. ೧-೧೪-೦.

**ಹೂವಿನ ಹಾಸಿಗೆ :** ಬರೆದವರು: ಶ್ರೀ. ಹೊಯಿಸಳ ಅವರು. ಧಾರವಾಡದ ಮನೋಹರ ಗ್ರಂಥಮಾಲೆಯ ೬೧ನೆಯ ಪ್ರಕಟನೆ. ಬೆಲೆ ೧-೦-೦.

೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧೨
ಬಿಡಿ ಪತ್ರಿಕೆ: ೬ ಕಾಸು




ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿ ಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೪೨

ಬೆಂಗಳೂರು: ಶುಕ್ರವಾರ, ಆಗಸ್ಟ್ ೧೩, ೧೯೪೩

## ಪರಿಷನ್ಮಂದಿರದಲ್ಲಿ ಸಂತಾಪಸೂಚಕ ಸಭೆ

**ರಾಜಸೇವಾಸಕ್ತ ಶ್ರೀ. ಬೆಳ್ಳಾವೆ ವೆಂಕಟನಾರಾಯಣಪ್ಪ ನವರ** ನಿಧನದ ಬಗ್ಗೆ ೬-೮-೧೯೪೩ ನೆಯ ಶುಕ್ರವಾರ ಸಂಜೆ ಪರಿಷನ್ಮಂದಿರದಲ್ಲಿ ಸಾರ್ವಜನಿಕ ಸಭೆ ಸೇರಿತ್ತು. 'ತಾಯಿನಾಡು' ಮತ್ತು 'ಡೆಯ್ಲಿ ನ್ಯೂಸ್' ಪತ್ರಿಕೆಗಳ ಮಾಲಿಕರಾದ ಶ್ರೀ ಪಿ. ಆರ್. ರಾಮಯ್ಯನವರು ಸಭಾಧ್ಯಕ್ಷತೆ ವಹಿಸಿದ್ದರು.

ಪರಿಷತ್ತಿನ ಉಪಾಧ್ಯಕ್ಷರು ರಾಜಸೇವಾಪ್ರಸಕ್ತ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ಪರಿಷತ್ತಿನ ಪರವಾಗಿ ಮಾತನಾಡಿ,

ಈ ವರ್ಷ ಪರಿಷತ್ತಿಗೆ ಕ್ರೂರವಾಗಿದೆ. ಆರು ತಿಂಗಳೊಳಗಾಗಿ ನಾವು ಪರಿಷತ್ತಿಗಾಗಿ, ಕನ್ನಡಕ್ಕಾಗಿ ದುಡಿದ ಮೂವರು ಹಿರಿಯರನ್ನು ಕಳೆದುಕೊಂಡೆವು. ಬೆನಗಲ್ ರಾಮರಾಯರು, ಎನ್. ಎಸ್. ಸುಬ್ಬರಾಯರು ದೈವಾಧೀನರಾದ ದುಃಖ ಇನ್ನೂ ಆರದಿರುವಾಗ, ವೆಂಕಟನಾರಣಪ್ಪನವರನ್ನೂ ದೈವ ಒಯ್ದು ನಮ್ಮನ್ನು ಮತ್ತಷ್ಟು ದುಃಖಕ್ಕೆ ಈಡುಮಾಡಿದೆ. ವೆಂಕಟನಾರಣಪ್ಪನವರ ವಿದ್ವತ್ತು, ಸೌಜನ್ಯ ಕನ್ನಡದ ಮುನ್ನಡೆಗೆ ಬಹಳ ನೆರವಾಗಿದ್ದುವು. ಇಳಿವಯಸ್ಸಿನಲ್ಲಿಯೂ ಅವರು ಕನ್ನಡಕ್ಕೆ ಇನ್ನೂ ಬೇಕಾದಷ್ಟು ಕೆಲಸ ಮಾಡಬೇಕೆಂದಿದ್ದರು. ಈ ದಿನ ನಾವು ಒಬ್ಬ ತಂದೆಯನ್ನು, ಅಣ್ಣನನ್ನು, ಗುರುವನ್ನು ಕಳೆದುಕೊಂಡಂತೆ ನಮ್ಮ ಅವಸ್ಥೆಯಾಗಿದೆ."

ಎಂದು ಹೇಳಿ, ಶ್ರೀ ಪಿ. ಆರ್. ರಾಮಯ್ಯನವರು ಅಧ್ಯಕ್ಷರಾಗಿ ಸಭೆಯನ್ನು ನಡಸಿಕೊಡಬೇಕೆಂದು ಪ್ರಾರ್ಥಿಸಿದರು.

ಬಳಿಕ ಕೆಳಗೆ ಕಂಡಂತೆ ಶೋಕ ಭಾಷಣಗಳಾದುವು:

ಶ್ರೀ ವೆಂಕಟನಾರಾಯಣಪ್ಪನವರನ್ನು ಬಹಳ ಹಿಂದಿನಿಂದ ಬಲ್ಲ ಹಿರಿಯರಾದ ಶ್ರೀ. ಸಿ. ಎಂ. ವಿಜಯರಾಘವಾಚಾರ್ಯರು ತಮ್ಮ ಭಾಷಣದಲ್ಲಿ ದಿವಂಗತರ ಸುಗುಣಗಳು, ಕಾರ್ಯನಿಷ್ಠೆ, ವಿದ್ಯಾರ್ಥಿ ಪ್ರೇಮ, ಮೈತ್ರಿ, ಸೌಜನ್ಯ, ಶಾಸ್ತ್ರಪ್ರೇಮ, ದೈವಭಕ್ತಿಗಳನ್ನು ನೆನೆದು ಹೀಗೆ ಹೇಳಿದರು:

"ವೆಂಕಟನಾರಣಪ್ಪನವರು ಈ ದೇಹ ಪರೋಪಕಾರಕ್ಕಾಗಿ ಎಂದು ತಿಳಿದು, ಲೋಕ ಸಂಗ್ರಹಾರ್ಥವಾಗಿ ತಮ್ಮ ದೇಹವನ್ನು ಸವೆಯಿಸಿದರು. 'ಅದ್ವೇಷ್ಟಾ ಸರ್ವ ಭೂತಾನಾಂ' ಎಂದು ಮೊದಲಾಗಿ ಗೀತೆಯಲ್ಲಿ ಹೇಳಿರುವ ಭಕ್ತನ ಲಕ್ಷಣಗಳಿಗೆ ಇವರು ಮಾದರಿಯಾಗಿದ್ದರು. ಇಂಥ ಪ್ರಪನ್ನರಿಗೆ ಮೃತ್ಯು ಪ್ರಿಯ ಅತಿಥಿ; ಆದರೆ ಅಂಥವರನ್ನು ಕಳೆದುಕೊಂಡ ನಮ್ಮ ದುಃಖ ಅಪಾರ."

ಶ್ರೀ. ಬಿ. ಪುಟ್ಟಯ್ಯನವರು ಮಾತನಾಡುತ್ತ ದಿವಂಗತರಿಗೆ ಭೂ ವ್ಯವಸಾಯದಲ್ಲಿ ಇದ್ದ ಆಸಕ್ತಿಯನ್ನು ವಿವರಿಸಿ, ಹೀಗೆ ಹೇಳಿದರು:

"ಶ್ರೀಮಾನ್ ವೆಂಕಟನಾರಾಯಣಪ್ಪನವರ ದೇಶಸೇವೆ ಬಹುಮುಖವಾದುದು. ಅದರಲ್ಲಿಯೂ ಪರಿಷತ್ತಿಗಾಗಿ, ವೆಂಕಟನಾರಾಯಣಪ್ಪನವರೇ ಪರಿಷತ್ತು; ಪರಿಷತ್ತೇ ವೆಂಕಟನಾರಾಯಣಪ್ಪನವರು ಎನಿಸಿಕೊಳ್ಳುವಂತೆ ದುಡಿದರು. ಕನ್ನಡದ ಕೆಲಸಗಾರರಿಗೆ ಯಜಮಾನರು, ಗುರುಗಳು, ಮೇಸ್ತ್ರಿ ಆಗಿದ್ದವರು ಕಣ್ಮರೆಯಾದುದರಿಂದ ನಮಗೆ ಬಹಳ ದುಃಖವಾಗಿದೆ....

ಈ ಪ್ರಪಂಚದಲ್ಲಿ ಜನನ ಮರಣಗಳು ನಮ್ಮ ದಿನಚರಿಯ ಆಗುಹೋಗುಗಳು. ಹುಟ್ಟಿದವರು ಸಾಯಲೇಬೇಕು. ಆದರೆ ನಮ್ಮ ಬಾಳಿನ ಸವಿನೆನಪು ಉಳಿಯುವಂತೆ ಬದುಕಿ ಹೋಗಬೇಕಾದ್ದು ಮುಖ್ಯ. ಶ್ರೀಮಾನ್ ವೆಂಕಟನಾರಾಯಣಪ್ಪನವರು ಹೀಗೆ ಬದುಕಿ ಬಾಳಿ ಹೋಗಿದ್ದಾರೆ. ಅವರ ತುಂಬಿದ ಬಾಳಿನ ಜ್ಯೋತಿ ನಂದಾದೀವಿಗೆಯಾಗಿ ನಿಂತು ನಮ್ಮ ಜೀವನಕ್ಕೆ ಮಾರ್ಗದರ್ಶನವಾಗಲಿ, ನಮ್ಮ ಬಾಳಿಗೆ ತೇಜಸ್ಸು ಕೊಡಲಿ."

ರಾಜಸೇವಾಸಕ್ತ ಶ್ರೀ. ಎನ್. ಎಸ್. ಹಿರಿಯಣ್ಣಯ್ಯನವರು ಹೀಗೆ ಹೇಳಿದರು:

ಕಣ್ಮರೆಯಾದ ಈ ಹಿರಿಯ ಮಹನೀಯರ ಸುಗುಣಗಳ ಬರಿಯ ಕನ್ನಡ ಪ್ರಪಂಚದಲ್ಲಿ ಮಾತ್ರವೇ ಬೆಳಗಲಿಲ್ಲ. ಬಹು ವಿಸ್ತಾರವಾದ ಕಾರ್ಯಕ್ಷೇತ್ರ ಅವರದು. ಅವರ ಕನ್ನಡದ ಸೇವೆಯನ್ನು ಎಲ್ಲರೂ ಬಲ್ಲವರಾಗಿದ್ದಾರೆ. ಅವರ ಹಟ ಸ್ವಭಾವ ಎಲ್ಲರಿಗೂ ಗೊತ್ತಾಗಿದೆ. ಆದ್ದರಿಂದಲೇ ಅವರ ಈ ಮನೋಧರ್ಮ ಎಲ್ಲರಿಗೂ ಈಗ ನೆನಪಾಗುತ್ತಿದೆ. ನಿಜ. ಮಹಾತ್ಮಾ ಗಾಂಧಿಯವರಂತೆ, ಸರ್ ಎಂ. ವಿಶ್ವೇಶ್ವರಯ್ಯನವರಂತೆ ಇವರೂ ಸಹಜವಾಗಿಯೆ ನಿಷ್ಠೆ ದಕ್ಷತೆಗಳ ಜೊತೆಗೆ ಹಟದ ನೆರವನ್ನು ಪಡೆದುಕೊಂಡರು. ಇವರಂತೆ ನಿಷ್ಠೆಯಿಂದ ದೇಶಸೇವೆ ಮಾಡಿದವರು ಯಾವ ದೇಶದಲ್ಲೆ ಆಗಲಿ ವಿರಳ; ಅಂಥ ಮಹನೀಯರನ್ನು ಕಳೆದುಕೊಂಡದ್ದು ನಮ್ಮ ದೌರ್ಭಾಗ್ಯ."

ಶ್ರೀ. ಎಂ. ಎ. ನರಸಿಂಹಾಚಾರ್ಯರು ದಿವಂಗತರಿಗೆ ಸಹಕಾರ ಚಳವಳಿಯಲ್ಲಿದ್ದ ಆಸಕ್ತಿಯನ್ನು ಪ್ರಸ್ತಾವಿಸಿದರು.

ಬಳಿಕ ಶ್ರೀ.ಗಳಾದ ಎನ್. ಮಲ್ಲಿಕಾರ್ಜುನ ಶಾಸ್ತ್ರಿಗಳು, ರಾವ್ ಸಾಹೇಬ್ ಎಂ. ರಾಮರಾಯರು, ಡಿ. ಆರ್. ರಾಮಯ್ಯನವರು ಎಚ್. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ ಅವರು ದಿವಂಗತರ ಗುಣಗಾನ ಮಾಡಿ ಕಾಣಿಕೆಯೊಪ್ಪಿಸಿದರು.

ಅಧ್ಯಕ್ಷರಾದ ಶ್ರೀ. ಪಿ. ಆರ್. ರಾಮಯ್ಯನವರು ಮಾತನಾಡುತ್ತ, ಸತ್ಯಪ್ರೇಮ, ಕಾರ್ಯನಿಷ್ಠೆ, ಶ್ರದ್ಧೆ, ವಿನಯ, ಪ್ರಸನ್ನತೆ ಮುಂತಾದ ಸುಗುಣಗಳಿಂದ ಕೂಡಿದ ಶ್ರೀ ವೆಂಕಟನಾರಣಪ್ಪನವರ ವ್ಯಕ್ತಿತ್ವವನ್ನು ಹೊಗಳಿ, ಸೇವೆಯಲ್ಲಿ ಅಮರವಾದ ಅವರ ಉದಾತ್ತ ಜೀವನಕ್ಕೆ ತಕ್ಕಂತೆ ಒಂದು ಸ್ಮಾರಕ ಕಾರ್ಯವನ್ನು ಕೈಗೊಳ್ಳಬೇಕು ಎಂದು ಹೇಳಿ, ಕೆಳಗೆ ಕೊಟ್ಟಿರುವಂತೆ. ಸಂತಾಪ ನಿರ್ಣಯವನ್ನು ಸೂಚಿಸಿದರು.

### ಸಂತಾಪಸೂಚಕ ನಿರ್ಣಯ

ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪಕ ಸದಸ್ಯರಲ್ಲೊಬ್ಬರಾಗಿದ್ದು, ಅನೇಕ ವರ್ಷಗಳ ಕಾಲ ಅದರ ವಿವಿಧ ಕಾರ್ಯಕ್ಷೇತ್ರಗಳಲ್ಲಿ ಹಲವು ಬಗೆಗಳಿಂದ ದುಡಿದು ಅದರ ಪುರೋಭಿವೃದ್ಧಿಗೆ ನೆರವಾಗಿ, ೧೯೩೮ ರಲ್ಲಿ ಜಮಖಂಡಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನವನ್ನು ವಹಿಸಿದವರೂ ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್ – ಕನ್ನಡ ನಿಘಂಟುವಿನ ಪ್ರಧಾನ ಸಂಪಾದಕರೂ ಆಗಿ ತಮ್ಮ ವಿದ್ವತ್ತಿನಿಂದಲೂ ಸೌಜನ್ಯದಿಂದಲೂ ಕನ್ನಡದ ಮುನ್ನಡೆಗೆ ವಿಶೇಷವಾಗಿ ಸೇವೆ ಸಲ್ಲಿಸಿ ನಾಡ ಜನರೆಲ್ಲರ ಪ್ರೀತಿ ಗೌರವಗಳಿಗೆ ಪಾತ್ರರಾದ ರಾಜಸೇವಾಸಕ್ತ ಶ್ರೀಮಾನ್ ಬೆಳ್ಳಾವೆ ವೆಂಕಟನಾರಾಯಣಪ್ಪನವರು ತಾ॥ ೩-೮-೧೯೪೩ ನೆಯ ಮಂಗಳವಾರ ರಾತ್ರಿ ತಮ್ಮ ೭೨ ನೆಯ ವಯಸ್ಸಿನಲ್ಲಿ ದೈವಾಧೀನರಾದ ಬಗ್ಗೆ ಪರಿಷನ್ಮಂದಿರದಲ್ಲಿ ಸೇರಿರುವ ಈ ಸಾರ್ವಜನಿಕ ಸಭೆ ತನ್ನ ಸಂತಾಪವನ್ನು ವ್ಯಕ್ತಪಡಿಸುತ್ತದೆ. ಶ್ರೀಯುತರ ನಿಧನದಿಂದ ಪರಿಷತ್ತಿಗೂ ಇಡಿಯ ಕನ್ನಡನಾಡಿಗೂ ಅಪಾರ ನಷ್ಟ ಉಂಟಾಗಿದೆ. ಈ ಸಂದರ್ಭದಲ್ಲಿ ಶ್ರೀಯುತರ ಬಂಧು ಮಿತ್ರ ವರ್ಗಕ್ಕೆ ಉಂಟಾಗಿರುವ ವಿಯೋಗ ದುಃಖದಲ್ಲಿ ಈ ಸಭೆ ತನ್ನ ಅನುತಾಪವನ್ನು ವ್ಯಕ್ತಪಡಿಸುತ್ತದೆ; ಮತ್ತು ದಿವಂಗತರ ಆತ್ಮಕ್ಕೆ ಸದ್ಗತಿ ಕೊಡಲೆಂದು ಭಗವಂತನನ್ನು ಪ್ರಾರ್ಥಿಸುತ್ತದೆ.

ಸಭೆ ಎದ್ದು ನಿಂತು ಮೌನದೊಡನೆ ಸಂತಾಪ ಸೂಚಿಸದ ಮೇಲೆ, ಪರಿಷತ್ತಿನ ಕಾರ್ಯದರ್ಶಿಗಳು ದಿವಂಗತರ ಹೆಸರಿನಲ್ಲಿ ಪರಿಷತ್ತು ಯೋಜಿಸಿರುವ ಸ್ಮಾರಕನಿಧಿಯ ವಿಚಾರವನ್ನು ಸಭೆಯ ಗಮನಕ್ಕೆ ತಂದು, ಎಲ್ಲರೂ ಈ ನಿಧಿಗೆ ಸ್ವಹಸ್ತ ಪರಹಸ್ತಗಳ ಮೂಲಕ ದ್ರವ್ಯ ಸಹಾಯ ನೀಡಿ ನೆರವಾಗಬೇಕೆಂದು ಪ್ರಾರ್ಥಿಸಿದರು.

# ಕನ್ನಡ ನುಡಿ

**ಶುಕ್ರವಾರ, ಆಗಸ್ಟ್ ೧೩, ೧೯೪೩**

## ಶಿಕ್ಷಣ ಸಮಸ್ಯೆಗಳು

ಶಿಕ್ಷಣ ವಿಚಾರವಾಗಿ ಈ ಪತ್ರಿಕೆ ಆಗಾಗ ಲೇಖನಗಳನ್ನು ಬರೆಯುತ್ತಿದೆ. ಒಮ್ಮೆ ಬರೆದು ಮುಗಿಯಿತೆನ್ನುವ ಪ್ರಶ್ನೆ ಇದಲ್ಲ. ಆದ್ದರಿಂದ ಮತ್ತೆ ಅದನ್ನಿಲ್ಲಿ ಪ್ರಸ್ತಾವಿಸಿದೆ. ಈಗ ರೂಢಿಯಲ್ಲಿರುವ ಯುದ್ಧಪೂರ್ವದ ವಿದ್ಯಾಭ್ಯಾಸಕ್ರಮ ನಾನಾ ದೃಷ್ಟಿಗಳಿಂದ ಅಸಮರ್ಪಕವಾಗಿದೆಯೆಂದೂ, ಯುದ್ಧ ಮುಗಿದ ಮೇಲಾದರೂ ಅದನ್ನು ತಕ್ಕಂತೆ ಮಾರ್ಪಡಿಸಿ, ಪ್ರತಿಯೊಂದು ದೇಶವೂ ಅದರದರ ಎಲ್ಲ ಮುಖದ ಬೆಳವಣಿಗೆಯನ್ನು ಸಾಧಿಸುವುದಕ್ಕೆ ಅನುಕೂಲವಾದ ಯೋಜನೆಯನ್ನು ಕೈಕೊಳ್ಳಬೇಕೆಂದೂ, ಹೀಗೆ ಮಾಡಿದರೆ ಮಾತ್ರವೆ ಒಟ್ಟು ಜಗತ್ತಿನಲ್ಲಿ ನೆಮ್ಮದಿಯೂ ಶಾಂತಿಯೂ ನೆಲೆಗೊಳ್ಳುವುವೆಂದೂ ಅನೇಕ ತಜ್ಞರು ಆಲೋಚನೆ ಮಾಡುತ್ತಿದ್ದಾರೆ. ಪರತಂತ್ರದಿಂದ ಸ್ವತಂತ್ರಕ್ಕೆ ತಿರುಗಲಿರುವ ಹಿಂದೂಸ್ಥಾನದಲ್ಲಂತೂ ವಿದ್ಯೆಯ ಪ್ರಶ್ನೆ ಬಹಳ ಮಹತ್ವದ್ದಾಗಿದೆ.

ಮುಂದೆ ನಮ್ಮ ನಾಡು ಬಿಡುಗಡೆಗೊಂಡು, ಸರ್ವತೋಮುಖವಾದ ಮುನ್ನಡೆಯನ್ನು ಸಾಧಿಸಲು ನಾವು ನಡಸಬೇಕಾದ ಯೋಜನೆಗಳಿಗೆಲ್ಲ ವಿದ್ಯೆಯನ್ನು ಸಾರ್ವತ್ರಿಕವಾಗಿ ಹರಡುವುದೇ ತಳಪಾಯವಾಗಿರಬೇಕೆಂದು ಹೇಳಬೇಕಾಗಿಲ್ಲ. ಜನಸಾಮಾನ್ಯಕ್ಕೆ ವಿದ್ಯೆ ಕಲಿಸಿ, ಅವರಲ್ಲಿ ಕಲಿತ ವಿದ್ಯೆ ನೆಲೆಗೊಳ್ಳುವಂತೆ ಮಾಡುವ ಕೆಲಸವನ್ನು ವಿಚಕ್ಷಣೆಯಿಂದ ನಡಸಬೇಕಾಗಿದೆ. ಈ ಕೆಲಸಕ್ಕೆ ಸರಕಾರದವರೂ ವಿದ್ಯಾವಂತರೂ ಎಷ್ಟು ಬಗೆಯಲ್ಲಿ ಸಹಕರಿಸಿದರೂ ಸಾಲದು. ಮದರಾಸು ಪೌರಸಭೆಯ ಅಧ್ಯಕ್ಷರಾದ ರಾವ್ ಬಹದ್ದೂರ್ ಸಿ. ತಾಡುಲಿಂಗ ಮೊದಲಿಯಾರವರು ಮದರಾಸಿನಲ್ಲಿ ವಯಸ್ಕರ ವಿದ್ಯಾಭ್ಯಾಸ ಸಭೆಯೊಂದರಲ್ಲಿ ಮಾತನಾಡುತ್ತ ವಿಶ್ವವಿದ್ಯಾನಿಲಯದ ಡಿಗ್ರಿ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿದವರಿಗೆ ಡಿಗ್ರಿ ಕೊಡುವುದಕ್ಕೆ ಮುಂಚೆ, ಅವರು ಹತ್ತು ಮಂದಿ ಅನಕ್ಷರಸ್ಥರನ್ನಾದರೂ ಅಕ್ಷರಸ್ಥರನ್ನಾಗಿ ಮಾಡಿರಬೇಕೆಂದೂ ಈ ಬಗ್ಗೆ ವಿಶ್ವವಿದ್ಯಾನಿಲಯಗಳು ನಿಯಮ ಮಾಡಬೇಕೆಂದೂ ಸಲಹೆ ಕೊಟ್ಟರು. ಇದು ಒಳ್ಳೆಯ ಸಲಹೆ ಎನ್ನುವುದರಲ್ಲಿ ಸಂದೇಹವಿಲ್ಲ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕೆಲಕಾಲದ ಹಿಂದೆ ಈ ಪ್ರಶ್ನೆ ಪರ್ಯಾಲೋಚನೆಗೆ ಬಂದಿತ್ತೆಂದೂ ಸದ್ಯಕ್ಕೆ ನಿಯಮ ಮಾಡದೆ ತತ್ವವನ್ನು ಒಪ್ಪಿಕೊಂಡರೆ ಸಾಕೆಂದು ತೀರ್ಮಾನವಾಯಿತೆಂದೂ ಕೇಳುತ್ತೇವೆ. ದೊಡ್ಡ ಸಾಧನೆಗಳು ಕೈಗೂಡಬೇಕಾದರೆ ಶಾಸನದ ಒತ್ತಾಯದಿಂದ ಕೂಡಿದ ಪ್ರೇರಣೆ ಅಗತ್ಯವೆಂಬುದು ನಿದರ್ಶನಕ್ಕೆ ಬಂದಿದೆ. ಈತೆರದ ಒತ್ತಾಯ ನಮ್ಮ ದೇಶಕ್ಕೆ ಒಳ್ಳೆಯದಕ್ಕಾದುದರಿಂದ ವಿಶ್ವವಿದ್ಯಾನಿಲಯಗಳಲ್ಲಿ ಓದು ಮುಗಿಸಿ ಬರುವ ವಿದ್ಯಾರ್ಥಿಗಳು ಇದನ್ನು ಸ್ವಾಗತಿಸದೆ ಇರಲಾರರೆಂದು ನಂಬಿದ್ದೇವೆ.

ಎರಡನೆಯ ಒಳ್ಳೆಯ ಸಲಹೆಯನ್ನು ಕೊಟ್ಟಿರುವವರು ಸೈದಾಪೇಟೆಯ ಟೀಚರ್ಸ್ ಕಾಲೇಜು ಅಸೋಸಿಯೇಷನ್ನಿನ ಪ್ರಾರಂಭ ಭಾಷಣ ಮಾಡಿದ ಶ್ರೀ. ಎಸ್. ಕೆ. ಯಜ್ಞನಾರಾಯಣ ಅಯ್ಯರ್ ಅವರು. ಭಾರತದ ಉಪಾಧ್ಯಾಯ ವರ್ಗ ಭರತಖಂಡದ ಪುನರ್ರಚನೆಯ ಬಗ್ಗೆ ಆಸಕ್ತಿ ವಹಿಸಬೇಕೆಂದೂ, ಈ ಪುನರ್ರಚನೆಗಾಗಿ ಇಪ್ಪತ್ತು ವರ್ಷದ ದೊಡ್ಡ ಯೋಜನೆಯೊಂದನ್ನು ಸರಕಾರದವರು ರಚಿಸಿ ಉಪಾಧ್ಯಾಯ ವರ್ಗದವರ ಸಹಕಾರದಿಂದ ಕೆಲಸ ನಡಸಬೇಕೆಂಮೂ ಇವರು ಹೇಳುತ್ತಾರೆ. ಈ ಯೋಜನೆಗೆ ಮೂಲವಾದರೂ ವಿದ್ಯಾಭ್ಯಾಸ ಪದ್ಧತಿಯ ಮಾರ್ಪಾಟೇ.

ಉಪಾಧ್ಯಾಯ ವರ್ಗಕ್ಕೆ ಇಂಥ ದೊಡ್ಡ ಜವಾಬ್ದಾರಿಯನ್ನು ವಹಿಸುವಾಗ ಅವರ ಸದ್ಯದ ಸ್ಥಿತಿಯನ್ನು ಪರಿಶೀಲಿಸಬೇಕು. ಉಪಾಧ್ಯಾಯರುಗಳ ಸ್ಥಾನಮಾನಗಳನ್ನು ಉತ್ತಮಪಡಿಸಿದಲ್ಲಿ ಅವರಿಂದ ರಾಷ್ಟ್ರರಚನೆಯ ಕೆಲಸ ಯಶಸ್ವಿಯಾಗಿ ನಡೆಯುವುದರಲ್ಲಿ ಸಂದೇಹವಿಲ್ಲ.

ತಿರುವಾಂಕೂರು ಸಂಸ್ಥಾನದ ದಿವಾನರಾದ ಸರ್. ಸಿ. ಪಿ. ರಾಮಸ್ವಾಮಿ ಅಯ್ಯರ್ ಅವರು ತಿರುವನಂತಪುರದ ಟ್ರೈನಿಂಗ್ ಕಾಲೇಜ್ ಟೀಚರ್ಸ್ ಅಸೋಸಿಯೇಷನ್‌ನಲ್ಲಿ ಮಾತನಾಡುತ್ತಾ, ಮುಂದೆ ಜನಕ್ಕೆ ಕಲಿಸಬೇಕಾದ ವಿದ್ಯೆ ಬಹುಮುಖವಾಗಿರಬೇಕೆಂದು ಹೇಳಿದರು. ಅವರ ಅಭಿಪ್ರಾಯದಂತೆ, ಒಳ್ಳೆಯ ಗುಮಾಸ್ತೆಯಾಗುವುದೇ ವಿದ್ಯೆಯ ಗುರಿ ಎಂಬ ಅಭಿಪ್ರಾಯ ಹೋಗಬೇಕು. ಮುಂದೆ ಪ್ರಜೆ ಕಲಿಯುವವಿದ್ಯೆ ಅವನನ್ನು ಬದುಕಿನ ಯಾವ ಬಗೆಯ ಉದ್ಯೋಗಕ್ಕಾದರೂ ಅರ್ಹನನ್ನಾಗಿ ಮಾಡಬೇಕು. ಗುಮಾಸ್ತೆಯಾಗಿ ಕೆಲಸಕ್ಕೆ ಸೇರಿದವನು ಸಂದರ್ಭ ಬಿದ್ದರೆ ಕುಶಲತೆಯಿಂದ ಕಾರ್ಖಾನೆಯಲ್ಲಿ ಕೆಲಸ ಮಾಡಬಲ್ಲವನಾಗಬೇಕು. ಎಂದರೆ, ಇಡಿಯ ವಿದ್ಯಾಭ್ಯಾಸ ಪದ್ಧತಿಯಲ್ಲಿ ಸುಧಾರಣೆಯಾಗಿ ಪ್ರತಿಯೊಬ್ಬ ಪ್ರಜೆಯೂ ಸತ್ವವುಳ್ಳ **ಕೆಲಸಗಾರ**ನಾಗಬೇಕು, ಸತ್ವವುಳ್ಳ ಗುಮಾಸ್ತೆಮಾತ್ರ ಆಗುವಂತಾಗಬಾರದು. ಏಕೆಂದರೆ ಈಗಿನ ಯುದ್ಧದಲ್ಲಿ ತೊಡಗಿರುವ ರಾಷ್ಟ್ರಗಳಲ್ಲಿ ಮುಂದೆ ಪುನರ್ರಚನೆ ಆಗಬೇಕಾದ ಕಾಲಬಂದಾಗ, ಬಹುತೀವ್ರವಾದ ಪೈಪೋಟಿ ನಡೆಯದೆ ಗತ್ಯಂತರವಿಲ್ಲ. ರಾಷ್ಟ್ರಗಳು ನಾನು ತಾನೆಂದು ಹೂಡುವ ಈ ಸ್ಪರ್ಧೆಯಲ್ಲಿ ಭಾರತ ಮೇಲಾಗಿ ಉಳಿಯಬೇಕಾದರೆ ಏನು ಮಾಡಬೇಕು? ಎಂಬುದು ದೊಡ್ಡ ಪ್ರಶ್ನೆ. ಈಗಿನಿಂದ ಈ ವಿಚಾರವನ್ನು ಎಷ್ಟು ಗಾಢವಾಗಿ ಚಿಂತಿಸಿದರೂ ಸಾಲದು. ಒಂದು ರಾಷ್ಟ್ರ ಇನ್ನೊಂದು ರಾಷ್ಟ್ರವನ್ನು ಮುಳುಗಿಸುವ ಪ್ರಶ್ನೆ ಇದಲ್ಲವಾದ್ದರಿಂದ ಒಂದೊಂದು ರಾಷ್ಟ್ರವೂ ಮುಂದಕ್ಕೆ ಬಂದು ಒಟ್ಟು ಜಗತ್ತಿನ ಐಶ್ವರ್ಯವನ್ನೂ ಪ್ರಸನ್ನತೆಯನ್ನೂ ಹೆಚ್ಚಿಸಬೇಕಾದ ಈ ಕೆಲಸ ಜನತೆಯ ಒಳ್ಳೆಯ ಶಿಕ್ಷಣದಿಂದ ಆಗದೆ?

---

## ರಾಜಸೇವಾಸಕ್ತ ಶ್ರೀ. ಬೆಳ್ಳಾವೆ ವೆಂಕಟನಾರಾಯಣಪ್ಪನವರ ಸ್ಮಾರಕ ಉಪನ್ಯಾಸ ನಿಧಿ

ರಾಜಸೇವಾಸಕ್ತ ಶ್ರೀ. ಬೆಳ್ಳಾವೆ ವೆಂಕಟನಾರಾಯಣಪ್ಪನವರ ಪಾರ್ಥಿವ ದೇಹ ೩-೮-೧೯೪೩ನೆಯ ರಾತ್ರಿ ಕಣ್ಮರೆಯಾದ ದುಃಖವಾರ್ತೆ ಕನ್ನಡಿಗರಿಗೆಲ್ಲ ತಿಳಿದಿದೆ. ನಾಡು ನುಡಿ ಜನತೆಗಾಗಿ ನಿರ್ವಂಚನೆಯಿಂದ ಅವಿಶ್ರಾಂತವಾಗಿ ದುಡಿದ ದಿವಂಗತರ ಸ್ಮಾರಕವಾಗಿ ವರ್ಷವರ್ಷವೂ ಕನ್ನಡದಲ್ಲಿ ಉಪನ್ಯಾಸಗಳನ್ನು ಏರ್ಪಡಿಸಲು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಒಂದು ನಿಧಿಯನ್ನು ಕೂಡಿಸಬೇಕೆಂದು ಮಿತ್ರರು ನಿಶ್ಚಯಿಸಿದ್ದಾರೆ. ಈ ನಿಧಿಗೆ ಬಡವರು ಭಾಗ್ಯವಂತರು ಎಲ್ಲರೂ ಸಹಾಯ ಮಾಡಿ ಹಿರಿಯರ ಹೆಸರಿಗೆ ತಕ್ಕ ಮೊತ್ತ ಒಂದು ಕೂಡುವಂತೆ ಸಹಕರಿಸಬೇಕಾಗಿ ಬಿನ್ನಹ. ಈ ಸಂಕಲ್ಪ ಶೀಘ್ರದಲ್ಲಿಯೇ ಕಾರ್ಯರೂಪವಾಗಬೇಕಾಗಿರುವುದರಿಂದ ಇನ್ನು ಹದಿನೈದು ದಿನಗಳ ಒಳಗಾಗಿ ಎಲ್ಲ ಹಣವನ್ನೂ ಕೂಡಿಸಬೇಕೆಂದು ನಿಶ್ಚಯಿಸಿದೆ. ಆದ್ದರಿಂದ ಹಣಕೊಡಬಯಸುವವರು ದಯವಿಟ್ಟು ಇದೇ **ಆಗಸ್ಟ್ ೨೫ನೆಯ ತಾರೀಖಿನೊಳಗೆ** ತಮ್ಮ ಸಹಾಯವನ್ನು ಪರಿಷತ್ತಿನ ಕಾರ್ಯದರ್ಶಿಯವರ ಹೆಸರಿಗೆ ಕಳಿಸಿ ಕೊಡುವ ಉಪಕಾರ ಮಾಡಬೇಕಾಗಿ ಪ್ರಾರ್ಥನೆ.

ದಿವಂಗತರ ವಿದ್ಯಾರ್ಥಿಗಳು ಮಿತ್ರರು ಒಬ್ಬೊಬ್ಬರಿಗೂ ಪ್ರತ್ಯೇಕವಾಗಿ ಬರೆಯಲು ಕಾಲಾವಕಾಶ ಮೊದಲಾದ ಅನುಕೂಲಗಳು ಇಲ್ಲದ್ದರಿಂದ ಈ ಸಾರ್ವಜನಿಕ ಬಿನ್ನಹವನ್ನೇ ಒಬ್ಬೊಬ್ಬರಲ್ಲಿಯೂ ವ್ಯಕ್ತಿಶಃ ಮಾಡಿದ್ದಾಗಿ ಭಾವಿಸಿಕೊಂಡು ಈ ನಮ್ಮ ಮಿತ್ರರು ಹಿರಿಯರ ನೆನವಿನ ಕಾಣಿಕೆಗಾಗಿ ತಮ್ಮ ಕೈಯಲ್ಲಾದ್ದನ್ನು ಕಳಿಸಿಕೊಡುವ ಉಪಕಾರಮಾಡಬೇಕೆಂದು ಮತ್ತೊಮ್ಮೆ ಪ್ರಾರ್ಥನೆ. ಈ ಪ್ರಕಟನೆಯನ್ನು ನೋಡದೆ ಇರಬಹುದಾದ ತಮ್ಮ ಗೆಳೆಯರಿಗೆ ಈ ವಿಷಯವನ್ನು ತಿಳಿಸಿದರೆ ಹೆಚ್ಚು ಉಪಕಾರವಾಗುತ್ತದೆ.

**ಬಿ. ವೆಂಕೋಬರಾವ್**
ಕಾರ್ಯದರ್ಶಿ

**ಮಾಸ್ತಿ ವೆಂಕಟೇಶ ಅಯ್ಯಂಗಾರ್**
ಉಪಾಧ್ಯಕ್ಷ

ತಾ॥ ೫-೮-೧೯೪೩

## ಕಣ್ಮರೆಯಾದ ‘ಯಜಮಾನರು’

ಎತ್ತರವಾದ ನಿಲವು. ಅಗಲವಾದ ಹಣೆ. ತೀಕ್ಷ್ಣವಾದ ಕಣ್ಣುಗಳು. ಕಂಕುಳಲ್ಲೊಂದು ಬೆಳ್ಗೊಡೆ. ಮೇಲಂಗಿಯ ಮೇಲೆ ಅಚ್ಚುಕಟ್ಟಾಗಿ ಮಡಿಸಿದ ವಲ್ಲಿ. ವಿನಯದ ಪ್ರತೀಕವೋ ಎಂಬಂತೆ ಸ್ವಲ್ಪ ಬಾಗಿದ ದೇಹ. ಇವಿಷ್ಟು ವಿವರಗಳಿಂದ ಯಾರು ಬೇಕಾದರೂ ಅವರನ್ನು ರಾಜಸೇವಾಸಕ್ತ ಶ್ರೀಮಾನ್ ಬೆಳ್ಳಾವೆ ವೆಂಕಟನಾರಾಯಣಪ್ಪನವರೆಂದು ಗುರುತಿಸಬಹುದಿತ್ತು. ನಾವು ಒಮ್ಮೆ ಅಳುಕಿನಿಂದ ನಮಸ್ಕರಿಸುವುದೇ ತಡ, ಫಲಿತ ಕದಳಿಯ ಗೊನೆಯ ಬಿಣ್ಪಿನಿಂದ ಬಾಗಿದ ಬಾಳೆಯ ಗಿಡದಂತೆ ಬಾಗಿಬಿಡುತ್ತಿತ್ತು ಅವರ ಶರೀರ.

ನನ್ನದೊಂದು ಹುಚ್ಚು. ಯಾರಾದರೂ ಒಬ್ಬರ ವಿಷಯದಲ್ಲಿ ಗೌರವ ಹುಟ್ಟಿದರೆ ಸರಿ,—ಅವರನ್ನು ಕಣ್ತುಂಬ ನೋಡಬೇಕು. ಮಾತಿಲ್ಲ, ಕತೆಯಿಲ್ಲ. ಮೂಕನಂತೆ ನೋಡುತ್ತ ನಿಲ್ಲುವುದು. ಅವರೊಂದು ವೇಳೆ ಮಾತಾಡಿಸಿದರೂ ಮಾತೇ ಬಾರದು. ಅಂಥ ಹುಚ್ಚು ನನ್ನದು. ವೆಂಕಟನಾರಾಯಣಪ್ಪನವರನ್ನು ನೋಡಬೇಕೆಂಬ ಹುಚ್ಚು ನನ್ನಲ್ಲಿ ಹುಟ್ಟಿದುದು ಅವರು ಬರೆದ ‘ಕನ್ನಡ ಐದನೆಯ ಪುಸ್ತಕ’ ಓದಿದಾಗ. ಅದರಲ್ಲಿ ‘ವಿಚಾರಪರರಾಯರು’ ಮತ್ತು ‘ವಿದ್ಯುದ್ರಾಕ್ಷಸನ ಅದ್ಭುತ ಕಾರ್ಯಗಳು’ ಎಂಬ ಪಾಠಗಳು ನೆನಪಿಗೆ ಬಂದಾಗಲೆಲ್ಲ ಅವರನ್ನೊಮ್ಮೆ ನೋಡಬೇಕೆಂಬ ಆಸೆ ಮಿಂಚಿ ಮಿಂಚಿ ಮಾಯವಾಗುತ್ತಿತ್ತು. ಅವರು ಹೀಗಿದ್ದಿರಬೇಕೆಂದು ನಾನೇ ಕಲ್ಪಿಸಿಕೊಂಡ ಒಂದು ಚಿತ್ರ ಮನಸ್ಸಿನ ಮೇಲೆ ಮೂಡಿ ಮೂಡಿ ಮರೆಯಾಗುತ್ತಿತ್ತು.

ನಾನು ಅವರನ್ನು ಕಣ್ಣಾರೆ ಕಂಡುದು ಸುಮಾರು ಮೂರು ವರುಷಗಳ ಹಿಂದೆ—ಅವರು ಬಸವನಗುಡಿಯ ತಮ್ಮ ಮನೆಯಿಂದ ಕನ್ನಡ ಸಾಹಿತ್ಯ ಪರಿಷತ್ತಿಗೆ ಹೋಗುತ್ತಿದ್ದಾಗ. ನನ್ನ ಜತೆಯಲ್ಲಿದ್ದ ಗೆಳೆಯ ಅವರ ಕಡೆ ಕೈ ಮಾಡಿ ತೋರಿಸಿದ. ಕೂಡಲೆ ನನ್ನ ಹುಚ್ಚು ಹೃದಯದಿಂದ ಹಾರಿ ಬಂತು. ಮನಸ್ಸಿನಲ್ಲಿ ಮೂಡಿದ್ದ ಅವರ ಚಿತ್ರವನ್ನೂ ಕಣ್ಣಾರೆ ಕಂಡ ಅವರ ರೂಪವನ್ನೂ ಹೋಲಿಸಿದೆ. ಅದಕ್ಕೂ ಇದಕ್ಕೂ ಏನೂ ವ್ಯತ್ಯಾಸ ಕಾಣಲಿಲ್ಲ.

ಬೆಂಗಳೂರಿನ ಶ್ರೀ ರಾಮಕೃಷ್ಣ ವಿದ್ಯಾರ್ಥಿನಿಲಯದ ನೆರಳಿನಲ್ಲಿ ನನ್ನ ಈ ದೇಹವನ್ನು—ಅದಕ್ಕಿಂತ ಹೆಚ್ಚಾಗಿ ನನ್ನ ಈ ಮನಸ್ಸನ್ನು—ಬೆಳಸಿಕೊಳ್ಳುವ ಭಾಗ್ಯ ನನಗೆ ಲಭಿಸಿತ್ತು. ತಮ್ಮದಲ್ಲದ ತಪ್ಪಿಗಾಗಿ ಬಡತನದಲ್ಲಿ ಹುಟ್ಟಿ ಬೆಳೆದು ಮುಂದುಗಾಣದ ವಿದ್ಯಾರ್ಥಿಗಳಿಗೆ ನೆರವಾಗುವ ಸಂಸ್ಥೆ ಅದು. ಆ ಸಂಸ್ಥೆಯ ಸ್ಥಾಪಕರಲ್ಲೊಬ್ಬರು ಶ್ರೀ. ವೆಂಕಟನಾರಾಯಣಪ್ಪನವರು.

ವೆಂಕಟನಾರಾಯಣಪ್ಪನವರೆಂದರೆ ನಮಗೆಲ್ಲ ಒಂದು ತೆರನಾದ ಭಯ—ಗೌರವ ಬೆರೆತ ಭಯ. ಅವರ ಮುಂದೆ ಸುಳಿದರೆ ಎಲ್ಲಿ ನಮ್ಮ ಕೊಂಕು ನಡೆನುಡಿಯನ್ನು ಟೀಕಿಸುವರೋ ಎಂಬ ಭೀತಿ. ಆದರೆ ಅವರನ್ನು ಮಾತಾಡಿಸಲೇಬೇಕಾಗಿ ಬಂದಾಗ ಅವರ ನಯವಾದ ನುಡಿಯನ್ನು ಕೇಳಿ, ಕರುಣೆದುಂಬಿದ ಕಣ್ಣುಗಳನ್ನು ನೋಡಿ ನಮ್ಮ ಭೀತಿಗಾಗಿ ನಮಗೇ ನಗೆ ಬರುತ್ತಿತ್ತು. ವಿದ್ಯಾರ್ಥಿಗಳೆಂದರೆ ಅವರಿಗೆ ಬಲು ವಿಶ್ವಾಸ. ನಮ್ಮ ವಿದ್ಯಾರ್ಥಿನಿಲಯವಂತೂ ಅವರಿಗೆ ಪ್ರಾಣಕ್ಕಿಂತ ಹೆಚ್ಚು. ಅಲ್ಲೇ ನಮಗವರ ವ್ಯಕ್ತಿ ಪರಿಚಯವಾದದ್ದು.

ಕಂಡ ತಪ್ಪನ್ನು ಕಟುವಾಗಿ ಟೀಕಿಸುತ್ತಿದ್ದ ಅವರ ಹೃದಯ ಕಷ್ಟದಲ್ಲಿರುವವರನ್ನು ಕಂಡಾಗ ಕರಗಿಹೋಗುತ್ತಿತ್ತು. ಅವರ ಮೃದುಹೃದಯದ ವಿಷಯದಲ್ಲಿ ನಾವೊಂದು ನಗೆ ನುಡಿಯನ್ನು ಆಡಿಕೊಳ್ಳುತ್ತಿದ್ದೆವು. ಅದನ್ನು ಇಲ್ಲಿ ಹೇಳಬಹುದೋ, ಇಲ್ಲವೋ, ನನಗೆ ತಿಳಿಯದು. ಮನಸ್ಸಿನಲ್ಲಿ ಬಂದುದಕ್ಕೆ ನೇರವಾದ ನುಡಿಗೊಡುವುದೇ ಚೆನ್ನವೆಂದು ಕಾಣುತ್ತದೆ. ಯಾವುದಾದರೂ ಸಂದರ್ಭದಲ್ಲಿ ನಮ್ಮಲ್ಲಿ ಯಾರಾದರೂ ಕಾರ್ಯನಿರ್ವಾಹಕ ಸಮಿತಿಯ ಮುಂದೆ ನಿಲ್ಲಬೇಕಾಗಿ ಬಂದಾಗ ನಾವು ಅವನಿಗೆ ಹೇಳಿ ಕಳುಹುತ್ತಿದ್ದುದು ಹೀಗೆ: “ನಿನ್ನ ಮನಸ್ಸಿಗೆ ನಿಜವೆಂದು ತೋರಿದುದನ್ನು ವೆಂಕಟನಾರಾಯಣಪ್ಪನವರನ್ನು ನೋಡುತ್ತ ನುಡಿದುಬಿಡು. ನಿನಗೆ ಜಯ ಸಿದ್ಧ!” ಸತ್ಯವನ್ನು ಅಪ್ಪಿಕೊಳ್ಳುವುದರಲ್ಲಿ ಅವರ ಆತುರ ಅಷ್ಟು. ತಮ್ಮ ಅಭಿಪ್ರಾಯವೇ ಸರಿ ಎನಿಸಿದರೂ ಇನ್ನೊಬ್ಬರು ಹೇಳುವುದೂ ಸರಿಯೇಕಿರಲಾರದು—ಎಂಬ ಅನಾಸಕ್ತಿ ಅವರದು.

ತಾವು ಮಾಡಿದುದು ತಪ್ಪೆನಿಸಿದರೆ ಅವರಷ್ಟು ನೊಂದುಕೊಳ್ಳುವವರನ್ನು ನಾನು ಬೇರೆ ಕಂಡಿಲ್ಲ. ತಮ್ಮ ಅಳಲನ್ನು ಕಂಡವರ ಮುಂದೆಲ್ಲ ತೋಡಿಕೊಂಡರೂ ಅವರಿಗೆ ಸಮಾಧಾನವಿಲ್ಲ. ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದಾಗ ತರಗತಿಯಲ್ಲಿ ಒಬ್ಬ ವಿದ್ಯಾರ್ಥಿಯ ತಪ್ಪನ್ನು ಕಂಡು ಅವರಿಗೆ ತುಂಬ ಸಿಟ್ಟು ಬಂತಂತೆ. ಕೂಡಲೆ ಬೋರ್ಡು ಒರಸುವ ಬಟ್ಟೆಯನ್ನು ಆ ವಿದ್ಯಾರ್ಥಿಯ ಮುಖದ ಮೇಲೆ ಎಸೆದರು. ಸುಣ್ಣದ ಪುಡಿ ಆ ವಿದ್ಯಾರ್ಥಿಯ ಕಣ್ಣನ್ನು ಹೊಕ್ಕಿತು. ಕೋಪ ಆರಿ ಮನಸ್ಸು ಶಾಂತವಾದ ಮೇಲೆ ತಾವು ಮಾಡಿದುದು ತಪ್ಪೆಂದು ಅವರಿಗೆ ತೋರಿತು. ಆಗ ಅವರ ತಳಮಳ ಹೇಳತೀರದು. ತಮ್ಮ ತಪ್ಪಿಗಾಗಿ ಆ ವಿದ್ಯಾರ್ಥಿಯ ಕ್ಷಮಾಪಣೆ ಕೇಳಬೇಕೆಂದು ಅವರಿಗೆ ಎನಿಸಿತು. ಹಾಗೆನಿಸಿದುದೇ ತಡ, ಇರುಳಿನಲ್ಲಿ ಬಹಳ ಹೊತ್ತಾಗಿರುವುದನ್ನೂ ಲೆಕ್ಕಿಸದೆ ಆ ವಿದ್ಯಾರ್ಥಿಯ ಮನೆಯ ಕಡೆಗೆ ನಡೆದೇಬಿಟ್ಟರು!

ಕೈ ಹಚ್ಚಿದ ಕೆಲಸವನ್ನು ಮಾಡವುದರಲ್ಲಿ ಅವರದು ಬಲು ನಿಷ್ಠೆ. ಒಂದು ಕಾಗದ ಬರೆಯಲಿ, ಅದನ್ನು ತಾವೇ ತೆಗೆದುಕೊಂಡು ಹೋಗಿ ಅಂಚೆ ಪೆಟ್ಟಿಗೆಯಲ್ಲಿ ಹಾಕಬೇಕು! ಇಂಥವರು ಒಂದು ಗಳಿಗೆ ಸುಮ್ಮನೆ ಕುಳಿತಾರೆ? ಜ್ಞಾನದ ಹಸಿವು ಅವರದು! ಈ ಮುಪ್ಪಿನಲ್ಲಿ ಕೂಡ ಗಡಿಯಾರದಂತೆ ಕೆಲಸ ಮಾಡುತ್ತಿದ್ದರು. ಗಡಿಯಾರಕ್ಕಾದರೂ ಹೊತ್ತು ಹೊತ್ತಿಗೆ ಕೀಲಿ ಕೊಡದಿದ್ದರೆ ನಿಂತುಹೋದೀತು. ಇವರು ಅದನ್ನು ಕೂಡ ದಾಟಿ ನಿಂತಿದ್ದರು. ‘ವೆಂಕಟನಾರಾಯಣಪ್ಪನವರು’ ಎನ್ನುವುದಕ್ಕೆ ‘ಕರ್ತವ್ಯನಿಷ್ಠೆ’ ಎಂಬುದನ್ನು ಪರ್ಯಾಯ ಪದವಾಗಿ ಬಳಸಬಹುದಿತ್ತು!

ಇವರು ಪರಿಷತ್ತಿನ ಕಾರ್ಯದರ್ಶಿಯಾಗಿ ಕೆಲಸ ಮಾಡಿದಾಗ ಹಲವರು ಇವರ ದುಡಿತವನ್ನು ನೋಡಿ, “ಇದೇನಿದು, ದುಡ್ಡಿಲ್ಲ; ಕಾಸಿಲ್ಲ; ಇಷ್ಟು ದುಡಿಯುತ್ತಾರಲ್ಲ!” ಎನ್ನುತ್ತಿದ್ದರಂತೆ. ಇನ್ನು ಕೆಲವರು ಇವರನ್ನೇ, “ನಿಮಗೆ ಪರಿಷತ್ತಿನಲ್ಲಿ ಎಷ್ಟು ಸಂಬಳ?” ಎಂದು ಕೇಳುತ್ತಿದ್ದರಂತೆ. ಇದಕ್ಕೆ ಏನೆಂದು ಉತ್ತರ ಹೇಳುವುದು? ಪ್ರಶ್ನೆಯೋ, ಬಲು ಸೂಕ್ಷ್ಮ. ‘ಇಲ್ಲ’ ಎಂದರೆ ಅವರು ನಂಬಿಯಾರೆಂಬ ಭರವಸೆಯೆಲ್ಲಿ? ಆಗ ಇವರು ನಗು ನಗುತ್ತ, “ಸಂಬಳವೇ? ನಾನೂರು!” ಎಂದು ಹೇಳಿ ಪ್ರಶ್ನೆಯನ್ನು ತೇಲಿಸಿಬಿಡುತ್ತಿದ್ದರು!

ಇಂಥ ವ್ಯಕ್ತಿ ಕಣ್ಮರೆಯಾಯಿತೆಂಬ ಸುದ್ದಿ ತಿಳಿದು ನನಗೆ ಸ್ವಲ್ಪ ಹೊತ್ತು ಏನೂ ತೋಚಲಿಲ್ಲ. ಇದು ಸಾಧ್ಯವೆ?—ಎನಿಸಿತು ನನಗೆ. ಎಪ್ಪತ್ತೆರಡು ವರುಷಗಳ ತುಂಬು ಜೀವನ ಅವರದು. ಈ ಮುಪ್ಪಿನಲ್ಲಿಯೂ ಇಪ್ಪತ್ತು ವರುಷದ ಯುವಕರ ಹುರುಪು ಅವರದು. ಅವರು ಇನ್ನೂ ಬಹುಕಾಲ ನಮ್ಮ ನಡುವೆ ಇದ್ದು ನಮ್ಮನ್ನು ಹರಸಬಹುದಿತ್ತು. ಆದರೆ ದೇವರಿಗೆ ಆ ಇಷ್ಟ ಇರಲಿಲ್ಲ.

ಸಾವನ್ನು ಕುರಿತು ಸಾಕ್ರೆಟೀಸ್ ಈ ವಿವರಣೆ ಕೊಟ್ಟಿದ್ದಾನೆ:

“ಜಿಜ್ಞಾಸುವಿಗೆ ಜ್ಞಾನವೇ ಇನಿಯಳು; ಆಕೆಯನ್ನು ಪರಲೋಕದಲ್ಲಿ ಮಾತ್ರವೇ ಹೊಂದಬಹುದೆನ್ನುವುದು ಅವನ ದೃಢವಾದ ನಂಬಿಕೆ. ಹೀಗಿರುವಾಗ ಅವನು ಸಾವು ಬಂದರೆ ಆ ಲೋಕವನ್ನು ಬೇಗ ಸೇರಬಹುದೆಂದು ಸಂತೋಷದಿಂದ ಹೊರಡದೆ ದುಃಖಪಡುವುದುಂಟೆ? ಇಲ್ಲ. ಸಿಮಿಯಾಸ್, ಅವನು ನಿಜವಾದ ಜಿಜ್ಞಾಸುವಾದರೆ ಎಂದಿಗೂ ಹಾಗೆ ಮಾಡುವುದಿಲ್ಲ.”

ವೆಂಕಟನಾರಾಯಣಪ್ಪನವರು ಬದುಕಿದ್ದಿದ್ದರೆ ಸಾವನ್ನು ಕುರಿತು ಇದೇ ಸಮಾಧಾನ ಕೊಡುತ್ತಿದ್ದರೇನೋ. ಆದರೆ ನನ್ನದು ಎಷ್ಟಾದರೂ ಸ್ವಾರ್ಥದೃಷ್ಟಿ. ನನಗೆ ಎನಿಸುವುದು ಹೀಗೆ: ಕನ್ನಡ ನಾಡಿನ ಸ್ಫೂರ್ತಿಯೊಂದು ಮಾಯವಾಯಿತು! ಹಳತು ಹೊಸದರ ಕೂಡಲಿಯಲ್ಲಿ ನಿಂತು ನೇರವಾದ ನಿಟ್ಟನ್ನು ತೋರುತ್ತಿದ್ದ ಮಹಾವ್ಯಕ್ತಿಯೊಂದು ಮರೆಯಾಯಿತು! ಭೂಮಿಯನ್ನು ಬೆಳಗುತ್ತಿದ್ದ ಸಂಯಮದ ಕಿಡಿಯೊಂದು ಇಲ್ಲವಾಯಿತು! ಈ ಅಳಲನ್ನು ಯಾವ ಸಮಾಧಾನವೂ ನನ್ನ ಹೃದಯದಿಂದ ಅಳಿಸಲಾರದು.

— ಎಚ್ಚೆಸ್ಕೆ.

## ಕಂಬನಿ

೧

ಕೀರ್ತಿಶೇಷರಾದ ಮಾನ್ಯ ಶ್ರೀ. ರಾಜಸೇವಾಸಕ್ತ ಬೆಳ್ಳಾವೆ ವೆಂಕಟನಾರಾಯಣಪ್ಪನವರು ನಮ್ಮ ಕನ್ನಡದ ಸಾಹಿತ್ಯಕ್ಕೆ 'ಬಾಳ್ಗಂಬ' ವಾಗಿದ್ದರು. ಮನೋವಾಕ್ಕಾಯಗಳಲ್ಲಿ ಎರವಿಲ್ಲದೆ ಬಗೆದು, ನುಡಿದು, ಮಾಡಿ ಉತ್ತಮ ಆದರ್ಶವಾಗಿದ್ದರು. ನನಗೆ ಅವರೊಡನೆ ಮಾತಿನ ಪರಿಚಯವಾಗಿರಲಿಲ್ಲ; ಆದರೆ ಮುಖ ಪರಿಚಯ ಮಾತ್ರ ಆಗಿತ್ತು. ಅಷ್ಟರಿಂದ ಅವರೊಂದು ಆದರ್ಶ ವ್ಯಕ್ತಿಯೆಂದು ಮನವರಿಕೆಯೂ ಆಗಿತ್ತು. ಅವರ ಸಂಪಾದಕತ್ವದಿಂದ ಪ್ರಕಟಿಸಲ್ಪಟ್ಟ "ಪಂಪ ಭಾರತ"ವೇ ಮೊದಲಾದ ಗ್ರಂಥಗಳ ಮುನ್ನುಡಿಯ ಲೇಖನಗಳು ಅಕೃತಕ ವೃತ್ತಿಯನ್ನು ಹೊಳೆಯಿಸುತ್ತವೆ. ಅಂಥವರ ಲೋಪದಿಂದ ಸಾಹಿತ್ಯ ಭಕ್ತನಾದವನ ಹೃದಯವು ಮರುಗದಿರುವುದು ಸಾಧ್ಯವಿಲ್ಲ. ಆದರೆ, "ಅಳಿದವರ್ಗಳ್ವಿದವರೇಳ್ವೊಡಂ . . . " ಎಂಬ ಬೋಧೆಗನು ಸಾರವಾಗಿ ಮರುಗದೆ ಮರಣವೆಂಬುದು ಸಂಸಾರ ಧರ್ಮವೆಂದು ಸಮಾಧಾನಗೊಳ್ಳಬೇಕಾಗಿದೆ. ಕೀರ್ತಿಶೇಷರ ಅಭಾವದಿಂದ ನಮ್ಮ ಸಹೃದಯ ಕನ್ನಡಿಗರಲ್ಲಿ ಒಂದು ಭಾವನೆ ತಲೆದೋರಬೇಕಾಗಿದೆ; ಅದೇನೆಂದರೆ, ಆ ಸ್ಥಾನಕ್ಕೆ ತದ್ದ್ವಿಗುಣ ಶಕ್ತಿಯುಕ್ತವಾದ ಇನ್ನೊಂದೊ, ಎರಡೊ, ಮೂರೊ ಸಮರ್ಥ ವ್ಯಕ್ತಿಗಳು ಒದಗುವಂತೆ ಪ್ರಯತ್ನಿಸುವುದು. ಕೀರ್ತಿಶೇಷರ ಆತ್ಮಕ್ಕೆ ಪರಮಾತ್ಮನು ಶಾಂತಿಯನ್ನೀಯಲಿ. ಕನ್ನಡ ಸಾಹಿತ್ಯವು ವೃದ್ಧಿಗೊಳ್ಳುವಂತಾದರೆ ಕೀರ್ತಿಶೇಷರ ಆತ್ಮಕ್ಕೆ ಶಾಂತಿಯೊದಗುವುದೆಂದು ಕನ್ನಡಿಗರು ಭಾವಿಸಲಿ.

— ಮುಳಿಯ ತಿಮ್ಮಪ್ಪಯ್ಯ.

೨

ನುಡಿದಂತೆ ನಡೆವ ಮಾನ್ಯರ ।
ಪಡೆವೊಡೆ ಬೆಳ್ಳಾವೆ ವೆಂಕಟಾರ್ಯಂ ಧನ್ಯಂ ॥
ನಡೆನುಡಿಗಳ ಸಂಯಮಕೇಂ ।
ಮೃಡ ಹರಿ ಕಮಲಜರು ಪೆರತೆ ಧನ್ಯತೆವಡೆಯಲ್ ॥ ೧ ॥
ಕಿರಿದಪ್ಪರ ಹಿರಿತನವಂ ।
ಹಿರಿದಪ್ಪರ ಕಿರಿಯತನವ ಶೋಧಿಸಿ ಬಲ್ಲಂ ॥
ತೊರೆಯುವ ಸಮದರ್ಶಿತ್ವದ ।
ಗುರುಗಳ ಗುರುವಾದನಲ್ತೆ ಬೆಳ್ಳಾವೆಯು ತಾಂ ॥ ೨ ॥
ಬಳೆವುದು ಬೆಳ್ಳಾವೆಯ ನಿ ।
ರ್ಮಳ ವೆಂಕಟನಾರಣಪ್ಪನೊಲಿದಿತ್ತಿದ ಕೋ ॥
ಮಳಕನ್ನಡ ಸಾಹಿತ್ಯದ ।
ಚೆಲುವಿನ ಪರಿಷತ್ತು ಮಾನ್ಯನಾತನ ಗುರಿಯಿಂ ॥ ೩ ॥

— ಡಿ. ಅರ್. ರಾಮಯ್ಯ.

## ಪರಿಷತ್ತಿನ ಸುದ್ದಿ

### ಪರಿಷತ್ತಿನ ಸದಸ್ಯರ ಬೆಳವಣಿಗೆ

**ಸಹಾಯಕ ಸದಸ್ಯರು (೧೦೦ ರೂ.):** ಶ್ರೀ.ಗಳಾದ ೧. ಎನ್. ಲಕ್ಷ್ಮಣರಾಯರು, ಬಿ.ಎ., ಬಿ.ಎಲ್., ಸಬ್ ಡಿವಿಜನ್ ಆಫೀಸರು, ಸಕಲೇಶಪುರ. ೨. ಎಂ. ಎಚ್. ಮಂಚಿಗಯ್ಯನವರು, ಬಿ.ಇ., ಅ॥ ಇಂಜನಿಯರು, ಮಂಡ್ಯ. ೩. ಕೆ. ಎಚ್. ಶ್ರೀನಿವಾಸನ್ ಅವರು, ಎಂ.ಎ., ಬಿ.ಎಸ್.ಸಿ., ಡೆಪ್ಯುಟಿ ಡೈರೆಕ್ಟರ್ ಆಫ್ ಅಗ್ರಿಕಲ್ಚರ್, ಬೆಂಗಳೂರು.

**ಸಾಮಾನ್ಯ ಸದಸ್ಯರು (೬ ರೂ.):** ಶ್ರೀ.ಗಳಾದ ಎಂ. ಸಿ. ಚಿಕ್ಕನಂಜುಂಡಪ್ಪನವರು, ಗೌ॥ ಕಂಟ್ರಾಕ್ಟರ್, ನಂ.೧೨, ಶಂಕರಪುರ.

**ಸಾಮಾನ್ಯ ಸದಸ್ಯರು (೩ ರೂ.):** ಶ್ರೀ.ಗಳಾದ ೧. ಎಂ. ಆರ್. ಸತ್ಯನಾರಾಯಣರಾವ್, ೧೩೨, ಮಾರ್ಗೋಸಾ ರಸ್ತೆ, ೧೭ ನೆಯ ಕ್ರಾಸ್, ಮಲ್ಲೇಶ್ವರ. ೨. ಶ್ರೀಮತಿ ಸೌ॥ ಜಯಲಕ್ಷ್ಮೀ ಆರ್. ಶ್ರೀನಿವಾಸನ್ ಅವರು, C/o ಶ್ರೀ. ಕೆ. ಶ್ರೀನಿವಾಸನ್ ಅವರು, ಬಿ.ಎಸ್‌ಸಿ., ಬಸವನಗುಡಿ. ೩. ಡಿ. ವಿ. ಶೇಷಗಿರಿರಾಯರು, ಅಕೌಂಟೆಂಟರು, ಬೌರಿಂಗ್ ಇನ್‌ಸಿಟ್ಯೂಟ್, ಚಾಮರಾಜಪೇಟೆ ಬೆಂಗಳೂರು. ೪. ಮಾ. ಕೃ. ಸೀತಾರಾಮರಾವ್, ನಂ. ೨೫, ಪಾಪಯ್ಯ ಬೀದಿ, ದೊಡ್ಡಮಾವಳ್ಳಿ, ಬೆಂಗಳೂರು.

### ಮಹಿಳಾ ಶಾಖೆ

**ತಾರೀಖು ೧೪-೮-೧೯೪೩ನೆಯ ಶನಿವಾರ ಸಂಜೆ ೫-೩೦ ಗಂಟೆಗೆ** ಶ್ರೀಮತಿ ಸೌಭಾಗ್ಯವತಿ ಜಯಲಕ್ಷ್ಮಮ್ಮ ಆರ್. ಶ್ರೀನಿವಾಸನ್ ಅವರು ತಾವು ಬರೆದಿರುವ ಕೆಲವು **ಸಣ್ಣ ಕತೆಗಳನ್ನು** ವಾಚಿಸುವರು. ಬೆಂಗಳೂರು ಮಹಿಳಾ ಸೇವಾ ಸಮಾಜದ ಅಧ್ಯಾಪಕರಾದ ಶ್ರೀಮತಿ ಜಿ. ಲಕ್ಷ್ಮೀಬಾಯಿ, ಬಿ.ಎ., ಬಿ.ಟಿ. ಅವರು ಅಧ್ಯಕ್ಷತೆ ವಹಿಸಲು ದಯಮಾಡಿ ಒಪ್ಪಿರುವರು.

## ಕನ್ನಡ ಸುದ್ದಿ

### ಶ್ರೀ. ಶಾಂತೇಶ ಧರ್ಮಾರ್ಥ ವಾಚನಾಲಯ, ಧಾರವಾಡ
### ವಾರ್ಷಿಕೋತ್ಸವ

೬-೮-೪೩ನೆಯ ದಿನ ಸಂಜೆ ೬-೩೦ ಗಂಟೆಗೆ ಶ್ರೀಮಾನ್ ಜಿ. ಅರ್. ನಲವಡಿ, ಎಂ.ಎಲ್.ಎ. ಅವರ ಅಧ್ಯಕ್ಷತೆಯಲ್ಲಿ ಶ್ರೀ. ಶಾಂತೇಶ ವಾಚನಾಲಯದ ವಾರ್ಷಿಕೋತ್ಸವ ವಿಜೃಂಭಣೆಯಿಂದ ನೆರವೇರಿತು. ಉತ್ಸವದ ಅಂಗವಾಗಿ ೯-೮-೪೩ನೆಯ ದಿನ ಲೋಕಮಾನ್ಯ ವಕ್ತೃತ್ವ ಸ್ಪರ್ಧೆಯೂ ಆಗಸ್ಟ್ ೨ರಿಂದ ೫ನೆಯ ದಿನದವರೆಗೆ ಸಾಸನೂರ ವ್ಯಾಖ್ಯಾನಮಾಲೆಯೂ ನಡೆದುವು.

### ಹುಬ್ಬಳ್ಳಿ ವ್ಯಾಪಾರಿ ವಾಚನ ಮಂದಿರದ ರಜತ ಮಹೋತ್ಸವ

ಈ ವಾಚನ ಮಂದಿರ ೧೯೧೭ರಲ್ಲಿ ಸ್ಥಾಪಿತವಾಯಿತು. ಹತ್ತಿ ವ್ಯಾಪಾರದಿಂದ ಬಂದ ಲಾಭದಿಂದ ವರ್ತಕ ಮಹನೀಯರು ವಾಚನಾಲಯವನ್ನು ನಡಸಿಕೊಂಡು ಬರುತ್ತಿದ್ದಾರೆ. ಈ ಸಂಸ್ಥೆಯ ರಜತ ಮಹೋತ್ಸವದ ಅಂಗವಾಗಿ ಕೆಳಗೆ ಕಂಡ ಕಾರ್ಯಕ್ರಮಗಳು ನಡೆದುವು.

ವಾಚನಾಲಯದಲ್ಲಿ ತಾ॥ ೨-೮-೪೩ ಸೋಮವಾರ ಶ್ರೀ. ಹಿರೇಮಠ ಅವರು ಮಾಮಲೇದಾರರು, ಹುಬ್ಬಳ್ಳಿ ಅವರ ಅಧ್ಯಕ್ಷತೆಯಲ್ಲಿ 'ಸಂಸ್ಕೃತಿ' ಎಂಬ ವಿಷಯದಮೇಲೆ ಧಾರವಾಡದ ಶ್ರೀಯುತ ಶಂ. ಬಾ. ಜೋಶಿ ಅವರು ವ್ಯಾಖ್ಯಾನ ಮಾಡಿದರು.

ತಾ॥ ೩-೮-೪೩ ಮಂಗಳವಾರ ಸರ್ ಸಿದ್ಧಪ್ಪ ಕಂಬಳಿ ಅವರ ಅಧ್ಯಕ್ಷತೆಯಲ್ಲಿ ಶ್ರೀ. ಪ್ರೊಫೆಸರ್ ಮಾಳವಾಡ ಅವರು 'ಕನ್ನಡದ ವ್ಯಾಪ್ತಿ' ಎಂಬ ವಿಷಯದಮೇಲೆ ವ್ಯಾಖ್ಯಾನ ಮಾಡಿದರು.

**ಮೇಲುಕೋಟೆ: ಕನ್ನಡ ಸಂಘ**

ಈ ಸಂಘದ ಕೈಬರಹದ ತ್ರೈಮಾಸಿಕ ಪತ್ರಿಕೆಯಾದ 'ಯದುಗಿರಿ'ಯ ಈ ವರ್ಷದ ಶ್ರೀಕೃಷ್ಣರಾಜಮುಡಿ ಉತ್ಸವದ ಸಂಚಿಕೆಯ (ಸಂಪುಟ ೪, ಸಂಚಿಕೆ ೩) ಪ್ರಕಟಣೋತ್ಸವ ತಾ॥ ೫-೮-೧೯೪೩ನೆಯ ಗುರುವಾರ ಸಂಜೆ ಸಾರ್ವಜನಿಕ ವಾಚನಾಲಯದಲ್ಲಿ ಬಹಳ ಸಂಭ್ರಮದಿಂದ ಜರುಗಿತು. ಅಧ್ಯಕ್ಷತೆ ವಹಿಸಿದ್ದ ಫ್ರೆಂಚ್‌ರಾಕ್ಸ್ ಸಬ್ ಡಿವಿಜನ್ ಅಧಿಕಾರಿಗಳಾದ ಶ್ರೀ. ಕೆ. ಬಾಲಸುಬ್ರಹ್ಮಣ್ಯಂ, ಎಂ.ಎಸ್‌ಸಿ. ಅವರು ಪತ್ರಿಕೆಯ ಭಾಷಾಸೇವೆಯನ್ನು ಪ್ರಶಂಸಿಸಿದರು.

**ಮಂಡ್ಯ: ಕರ್ನಾಟಕ ಸಂಘ**

ಈ ಸಂಘದ ಆಶ್ರಯದಲ್ಲಿ ಮಂಡ್ಯ ಪ್ರೌಢ ಶಾಲೆಯ ಸಭಾಂಗಣದಲ್ಲಿ ೭ನೆಯ ತಾರೀಖು ಶನಿವಾರ ಮತ್ತು ೮ನೆಯ ತಾರೀಖು ಭಾನುವಾರ ಸಂಜೆ ೬-೩೦ ಗಂಟೆಗೆ ಕೆಳಕಂಡ ಕಾರ್ಯಕ್ರಮಗಳು ನಡೆದುವು. ಶ್ರೀ. ಬಿ. ಎಸ್. ರಾಮರಾಯರು ಎರಡು ದಿನಗಳೂ ಶ್ರೀ. ಟಿ. ಪಿ. ಕೈಲಾಸಂ ಅವರ 'ಪೋಲೀ ಕಿಟ್ಟಿ' ನಾಟಕವನ್ನು ವಾಚಿಸಿದರು.

ಶ್ರೀ. ಓ. ಎನ್. ಲಿಂಗಣ್ಣಯ್ಯನವರು "ರಾಘವಾಂಕನ ಕಥನ ಕೌಶಲ" ಎಂಬ ವಿಷಯವನ್ನಧಿಕರಿಸಿ ೮ನೆಯ ತಾರೀಖು ಭಾನುವಾರ ಉಪನ್ಯಾಸ ಮಾಡಿದರು.

**ಕುದೇರು: ಕರ್ನಾಟಕ ಸಂಘ**

೪-೮-೧೯೪೩ನೆಯ ದಿನ ಸಂಘದ ಸಾರ್ವಜನಿಕ ಸಭೆ ಸೇರಿತ್ತು. ೧೯೪೩-೪೪ನೆಯ ಸಾಲಿಗೆ ಸಂಘದ ಕಾರ್ಯನಿರ್ವಾಹಕ ಮಂಡಲಿಗೆ ಸದಸ್ಯರನ್ನು ಚುನಾಯಿಸಲಾಯಿತು.

ಅಧ್ಯಕ್ಷರು: ಸಾಹುಕಾರ್ ಶ್ರೀ. ಕೆ. ವಿ. ವೀರಣ್ಣ. ಖಜಾಂಚಿ: ಶ್ರೀ. ಕೆ. ವಿ. ನಾಗಸುಂದರಮೂರ್ತಿ, ಕಾರ್ಯದರ್ಶಿಗಳು: ಶ್ರೀ. ಕೆ.ವಿ. ಕುಮಾರಸ್ವಾಮಿ, ಎಚ್. ಬಿ. ನಂಜಯ್ಯ. ೧೨ ಮಂದಿ ಸದಸ್ಯರನ್ನು ಕಾರ್ಯನಿರ್ವಾಹಕ ಸಮಿತಿಗೆ ಚುನಾಯಿಸಲಾಯಿತು.

ಕೆಂಪನಪುರದ ಶ್ರೀ. ನರಸಿಂಹಾಚಾರ್ ಮತ್ತು ಶ್ರೀ. ಬಿಳಿಗಿರಿ ರಂಗಾಚಾರ್ ಇವರುಗಳಿಂದ ಭಾರತಪಠನ ಆಯಿತು.

೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧॥
ಬಿಡಿ ಪತ್ರಿಕೆ: ೬ ಕಾಸು



ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈ ಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೪೩
ಬೆಂಗಳೂರು: ಶುಕ್ರವಾರ, ಆಗಸ್ಟ್ ೨೦, ೧೯೪೩

### ರಾಜಸೇವಾಸಕ್ತ

## ಶ್ರೀ. ಬೆಳ್ಳಾವೆ ವೆಂಕಟನಾರಾಯಣಪ್ಪನವರು

ಪ್ರಾತಃಸ್ಮರಣೀಯರಾದ ಶ್ರೀಮಾನ್ ಬೆಳ್ಳಾವೆ ವೆಂಕಟನಾರಾಯಣಪ್ಪನವರು ೩-೮-೪೩ನೆಯ ಮಂಗಳವಾರ ರಾತ್ರಿ ಸ್ವರ್ಗಸ್ಥರಾದರೆಂಬುದು ಆಗಸ್ಟ್ ೬ನೆಯ ದಿನಾಂಕದ 'ಕನ್ನಡ ನುಡಿ'ಯಿಂದ ತಿಳಿದು, ಮನಸ್ಸಿಗೆ ಬಹು ವಿಷಾದವಾಯಿತು.

ಅತ್ಯಂತ ಕರ್ತವ್ಯ ದಕ್ಷತೆಯಿಂದ ಕನ್ನಡ ಸಾಹಿತ್ಯ ಪರಿಷತ್ತಿಗೆ ಈಗಿನ ಮೂರ್ತಸ್ವರೂಪವನ್ನು ತಂದುಕೊಟ್ಟವರು ಇವರೇ. ಪ್ರಾಂಜಲ ಮನಸ್ಸಿನ ಪ್ರೇಮ ಮೂರ್ತಿಗಳಾದ ಶ್ರೀಮಾನ್. ಕರ್ಪೂರ ಶ್ರೀನಿವಾಸರಾಯರು, ಉಗ್ರ ಕರ್ತವ್ಯ ತಪಸ್ವಿಗಳಾದ ಶ್ರೀಮಾನ್ ಬೆಳ್ಳಾವೆ ವೆಂಕಟನಾರಾಯಣಪ್ಪನವರು, ಹಾಗೂ ಸಾಧುವರ್ಯರಾದ ಶ್ರೀಮಾನ್ ನಂಗಪುರಂ ವೆಂಕಟೇಶ ಅಯ್ಯಂಗಾರ್ ಅವರು ಈ ಮುನಿತ್ರಯರು ಸಾಹಿತ್ಯ ಪರಿಷತ್ತಿನ ಅಧಿಕಾರ ಸ್ಥಾನಗಳಲ್ಲಿದ್ದಾಗ್ಗೆ ಈ ಸಂಸ್ಥೆ ನಿಜವಾದ ಪ್ರಾತಿನಿಧಿಕ ಸ್ವರೂಪವನ್ನು ಧರಿಸಿ, ಲೋಕೋತ್ತರವಾದ ಕನ್ನಡ ಭಾಷಾ ಸೇವೆಯನ್ನು ಸಲ್ಲಿಸಿತು.

ಈ ಮಹನೀಯರ ಮನೋವೃತ್ತಿ ಧೀರೋದಾತ್ತವಾದದ್ದು. ಇವರ ಕಾಲದಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನದ ಸಮಯದಲ್ಲಿ ಜರುಗುವ ವಿಷಯ ನಿಯಾಮಕ ಸಭೆಯಲ್ಲಿ ಅಥವಾ ವಾರ್ಷಿಕ ಅಧಿವೇಶನದಲ್ಲಿ ಪ್ರಾಮಾಣಿಕ ಮತಭೇದದ ಬಗ್ಗೆ ವೆಂಕಟನಾರಾಯಣಪ್ಪನವರಿಗೂ ಉತ್ತರ ಕರ್ನಾಟಕದವರಾದ ನಮಗೂ ಕಠೋರವಾದ ವಾಗ್ಯುದ್ಧಗಳು ನಡೆಯುತ್ತಿದ್ದರೂ ಅವುಗಳ ಪರ್ಯವಸಾನ ದ್ವೇಷದಲ್ಲಿ ಆಗುತ್ತಿರಲಿಲ್ಲ. ಉತ್ತರ ಕ್ಷಣದಲ್ಲಿಯೇ ಅವುಗಳನ್ನು ಮರೆತು ಪರಸ್ಪರ ಪ್ರೇಮ ಪೂರ್ಣರಾಗಿ ಇರುತ್ತಿದ್ದೆವು.

ಇವರ ಕರ್ತವ್ಯನಿಷ್ಠೆಯನ್ನಂತೂ ಎಷ್ಟು ಹೊಗಳಿದರೂ ಸ್ವಲ್ಪವೇ ಸರಿ. ಸಮ್ಮೇಳನದ ಕಾಲದಲ್ಲಿ ಸಮ್ಮೇಳನದ ಬಹಿರಂಗದ ಅಧಿವೇಶನಕ್ಕೆ ಬೇಕಾಗುವ ಸಿದ್ಧತೆಯನ್ನು ಮಾಡಿಕೊಳ್ಳುವ ಕಾರ್ಯದಲ್ಲಿ ಮಗ್ನರಾದರೆಂದರೆ ಸೂರ್ಯನು ಯಾವಾಗ ಅಸ್ತನಾದನೋ ಯಾವಾಗ ಉದಯನಾದನೋ ಇದರ ಅರಿವೇ ಇವರಿಗೆ ಇರುತ್ತಿರಲಿಲ್ಲ! ಇಷ್ಟು ಇವರು ಕಾರ್ಯದಲ್ಲಿ ತಲ್ಲೀನರಾಗಿರುತ್ತಿದ್ದರು. ಆಗಿನ ಕಾಲದಲ್ಲಿ ಸಮ್ಮೇಳನದಲ್ಲಿ ಓದುವುದಕ್ಕೆಂದು ಬಹಳ ಪ್ರಬಂಧಗಳು ಬರುತ್ತಿದ್ದವು. ಈ ಪ್ರಬಂಧಗಳನ್ನು ತಾವು ಸ್ವತಃ ಕಣ್ಮುಟ್ಟಿ ಓದಿ ನೋಡಿ, ಅವುಗಳನ್ನು ಓದಿಸುವ ವೇಳೆಯ ತಾರತಮ್ಯವನ್ನು ನಿಶ್ಚಯಿಸುವುದಕ್ಕೋಸ್ಕರ ಅವುಗಳನ್ನು ಓದುವುದು ರಾತ್ರಿ ಕಾಲದಲ್ಲಿ ಮುಗಿಯದಿದ್ದರೆ, ಆ ಓದದೆ ಉಳಿದಿರುವ ಪ್ರಬಂಧಗಳನ್ನು ಬೆಳಗಿನ ಜಾವದಲ್ಲಿ ಪೂರ್ಣ ಓದಿಕೊಂಡು ಬರುತ್ತಿದ್ದರು!

ಇವರ ಪರಿಶುದ್ಧವಾದ ಚಾರಿತ್ರ್ಯ ಬಹು ಶ್ಲಾಘನೀಯವಾಗಿದೆ. ಇವರು ಸುಕರ್ಮಠರೂ ವೈದಿಕ ಮಾರ್ಗ ತತ್ಪರರೂ ಆಗಿದ್ದರು. ವಿಜಾಪೂರದಲ್ಲಿ ನೆರವೇರಿದ ೯ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಮುಗಿದ ಬಳಿಕ ಈ ಸಮ್ಮೇಳನದ ಅಧ್ಯಕ್ಷರಾದ ಮಹಾಮಹೋಪಾಧ್ಯಾಯ ಸಿದ್ಧಾಂತಿ ಶ್ರೀ ಶಿವಶಂಕರಶಾಸ್ತ್ರಿಗಳವರು, ವೆಂಕಟನಾರಾಯಣಪ್ಪನವರು, ಟಿ. ಎಸ್. ವೆಂಕಣ್ಣಯ್ಯನವರು, 'ವಿಶ್ವಕರ್ಣಾಟಕ'ದ ಸಂಪಾದಕರಾದ ತಿರುಮಲೆ ತಾತಾಚಾರ್ಯಶರ್ಮ ಅವರು ಹಾಗೂ ನಾರಾಯಣರಾವ ದೇಶಪಾಂಡೆಯವರು ಮತ್ತು ನಾನು– ಈ ಪ್ರಕಾರ ನಾವೆಲ್ಲರೂ ವಿಜಾಪುರದಿಂದ ಹೊರಟು, ಮಾರ್ಗದಲ್ಲಿ ಚಾಳುಕ್ಯ ಚಕ್ರವರ್ತಿಗಳ ರಾಜಧಾನಿಯಾದ ಬಾದಾಮಿಯನ್ನೂ ಅದರ ಬಳಿಯಲ್ಲಿಯೆ ಇದ್ದ ಬನಶಂಕರಿ ಕ್ಷೇತ್ರವನ್ನೂ ನೋಡಿಕೊಂಡು, ಮಧ್ಯರಾತ್ರಿಗೆ ಗದುಗಕ್ಕೆ ಬಂದು, ಒಂದು ವಿದ್ಯಾಲಯದ ಕಟ್ಟಡದಲ್ಲಿ ತಂಗಿದೆವು. ವೆಂಕಟನಾರಾಯಣಪ್ಪನವರು ಪ್ರಾತಃಕಾಲ ೫ ಘಂಟೆಗೆ ಎದ್ದು, ಸ್ನಾನ ಸಂಧ್ಯಾವಂದನೆ ಸೂರ್ಯ ನಮಸ್ಕಾರಗಳು ಮುಂತಾದ ತಮ್ಮ ನಿತ್ಯದ ಪ್ರಾತರಾಹ್ನಿಕವನ್ನು ಮುಗಿಸಿಕೊಂಡು, ಅಡಿಗೆಯನ್ನು ಮಾಡಿಕೊಂಡು ನಮ್ಮೆಲ್ಲರಿಗೆ, "ಸ್ನಾನ ಮಾಡಿ ಊಟಕ್ಕೆ ಕುಳಿತುಕೊಳ್ಳಿರಿ" ಎಂದು ಹೇಳಿದರು. ಇಷ್ಟು ಮಾತ್ರವೇ ಅಲ್ಲ. ಅಧ್ಯಕ್ಷ ಮಹಾಶಯರ ಬೇವಿನ ಎಲೆಗಳ ಆಹಾರವೊಂದನ್ನು ಸಿದ್ಧಪಡಿಸಬೇಕಾಗಿದ್ದಿತು. ಇದಕ್ಕೋಸ್ಕರ ತಾವೇ ಸ್ವತಃ ಬೇವಿನ ಗಿಡಕ್ಕೆ ಹೋಗಿ, ಅದರ ಎಲೆಗಳನ್ನು ತಂದು, ಕುಟ್ಟಿ, ಅದರಲ್ಲಿ ಸಕ್ಕರೆ ಏಲಕ್ಕಿಗಳನ್ನು ಸೇರಿಸಿ ಮುದ್ದೆಯನ್ನು ಮಾಡಿ ಉಂಡೆಗಳನ್ನು ಕಟ್ಟಿ ಅಧ್ಯಕ್ಷರ ಆಹಾರವನ್ನು ಸಿದ್ಧಪಡಿಸಿ, ನಮ್ಮೆಲ್ಲರಿಗೂ ಊಟಕ್ಕೆ ಬಡಿಸಿ ಕೊನೆಗೆ ತಾವು ಊಟ ಮಾಡಿದರು!

ಇದೇ ಮೇರೆಗೆ ವಾಙ್ಮಯ ಕ್ಷೇತ್ರದಲ್ಲಿ ಸಹ ಬಹು ದಕ್ಷತೆಯಿಂದ ಕಾರ್ಯವನ್ನು ನೆರವೇರಿಸುತ್ತಿದ್ದರು. ಸಾಹಿತ್ಯ ಪರಿಷತ್ತಿನಿಂದ ಪ್ರಕಟವಾದ "ಪಂಪ ಭಾರತ"ದ ಸಂಪಾದಕತ್ವದ ಕಾರ್ಯವನ್ನು ಇವರು ಎಷ್ಟು ಉತ್ತಮ ರೀತಿಯಿಂದ ಮಾಡಿದರೆಂಬುದು ಸುಪ್ರಸಿದ್ಧವಾಗಿಯೇ ಇದೆ.

ನಾನು ಬೆಂಗಳೂರಿಗೆ ಬಂದ ಸಲಕ್ಕೊಮ್ಮೆ ಶ್ರೀಮಾನ್ ವೆಂಕಟನಾರಾಯಣಪ್ಪನವರ ಮನೆಗೆ ಹೋಗಿ, ಅವರೊಡನೆ ನಾಲ್ಕು ಮಾತುಕತೆಗಳನ್ನಾಡಿದ ಹೊರತು ನನ್ನ ಮನಸ್ಸಿಗೆ ತೃಪ್ತಿಯುಂಟಾಗುತ್ತಿರಲಿಲ್ಲ. ಇತ್ತೀಚೆಗೆ ಮೊನ್ನೆ 'ಶ್ರೀ ಯಾಜ್ಞವಲ್ಕ್ಯರ ಚರಿತ್ರೆ'ಯನ್ನು ತೆಗೆದುಕೊಂಡು ಬೆಂಗಳೂರಿಗೆ ಹೋದ ಕಾಲದಲ್ಲಿ ಇವರ ಮನೆಗೆ ಹೋದಾಗ್ಗೆ ಇವರೊಡನೆ ಅನೇಕ ಮಾತು ಕಥೆಗಳು ನಡೆದವು. ಆ ಸಮಯದಲ್ಲಿ ಇವರು ಹೀಗೆ ನುಡಿದರು:—"ಇಂಗ್ಲಿಷ್–ಕನ್ನಡ ಕೋಶವನ್ನು ನಿರ್ಮಿಸುವ ಯೋಜನೆಯ ಬಗ್ಗೆ ಹೋರಾಡುವಾಗ್ಗೆ ಬಹು ಜನರು ನನ್ನ ಪ್ರಯತ್ನಕ್ಕೆ ವಿರೋಧ ಮಾಡಿದರು. ಆದರೆ ನಮ್ಮ ಸಂಸ್ಥಾನದ ದಿವಾನರಾದ ಸರ್ ಮಿರ್ಜಾ ಸಾಹೇಬರು ನನಗೆ ಬೆಂಬಲ ಕೊಟ್ಟು ಸಹಾಯಕರಾದ್ದರಿಂದ ಈ ಕಾರ್ಯದಲ್ಲಿ ನಾನು ಯಶಸ್ವಿಯಾದೆನು."

ಈ ಕೋಶಕ್ಕೆ ಇವರೇ ಮುಖ್ಯ ಸಂಪಾದಕರಾಗಿ ದುಡಿದು ಕನ್ನಡ ಭಾಷೆಗೆ ಮಹದುಪಕಾರವನ್ನು ಮಾಡಿದ್ದಾರೆ.

ಇಂಥ ಮಹಾಭಾಗರ ಆತ್ಮಕ್ಕೆ ಜಗನ್ನಿಯಾಮಕನಾದ ಪರಮಾತ್ಮನು ಶಾಂತಿಯನ್ನೀಯಲೆಂದು ಆತನನ್ನು ಕುರಿತು ಪ್ರಾರ್ಥಿಸುತ್ತೇನೆ.

ನಾ. ಶ್ರೀ. ರಾಜಪುರೋಹಿತ,
ಇತಿಹಾಸ ಸಂಶೋಧಕ, ಧಾರವಾಡ

# ಕನ್ನಡ ನುಡಿ

**ಶುಕ್ರವಾರ, ಆಗಸ್ಟ್ ೨೦, ೧೯೪೩**

## ತರುಣರ ಕರ್ತವ್ಯ

ಕಳೆದ ವಾರ ಇಬ್ಬರು ಹಿರಿಯ ಕನ್ನಡಿಗರು ನಾಡಿನ ಬೇರೆ ಬೇರೆ ಕಡೆಗಳಲ್ಲಿ ತರುಣರನ್ನುದ್ದೇಶಿಸಿ ಮಾತನಾಡಿ, ಈಗಿನ ಸ್ಥಿತಿಯಲ್ಲಿ ನಮ್ಮ ತರುಣರ ಕರ್ತವ್ಯವೇನೆಂದು ತಿಳಿಸಿ ಉಪಕಾರ ಮಾಡಿದ್ದಾರೆ.

ಮೈಸೂರು ಸಂಸ್ಥಾನದ ಹಿಂದಿನ ದಿವಾನರೂ, ಜಯಪುರ ಸಂಸ್ಥಾನದ ಈಗಿನ ಮುಖ್ಯ ಮಂತ್ರಿಗಳೂ ಆದ ಅಮೀನ್-ಉಲ್-ಮುಲ್ಕ್ ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರು ೧೪-೮-೧೯೪೩ ನೆಯ ದಿನ ನಾಗಪುರ ವಿಶ್ವವಿದ್ಯಾನಿಲಯದ ಘಟಿಕೋತ್ಸವ ಸಂದರ್ಭದಲ್ಲಿ ಮಾಡಿದ ಉಪದೇಶ ಭಾಷಣದಲ್ಲಿ ತರುಣರು ನಾಡಿನಲ್ಲಿ ಐಕ್ಯತೆಯ ಮಧುರವಾತಾವರಣವನ್ನು ನೆಲೆಗೊಳಿಸಲು ತಮ್ಮ ಕೈಯಲ್ಲಾದ ಪ್ರಯತ್ನವನ್ನೆಲ್ಲಾ ಮಾಡಬೇಕೆಂದು ಬೋಧಿಸಿದರು.

ಸರ್ ಮಿರ್ಜಾ ಅವರ ಭಾಷಣದ ಸಾರಾಂಶ ಇದು :

"ಮುಂದಿನ ವರ್ಷಗಳೆಂದರೆ ನಮ್ಮ ನಾಡಿಗೆ ರಾಷ್ಟ್ರೀಯ ಪುನರ್ಜನ್ಮ ಕಾಲ. ಆಗ ಬದುಕಿನ ಎಲ್ಲ ರಂಗಗಳಲ್ಲೂ ವಿಶ್ವವಿದ್ಯಾನಿಲಯಗಳ ಮುಂದಾಳುತನ ತುಂಬಾ ಬೇಕಾಗುವುದು. ಹೊರಗಿನ ಬೆಳವಣಿಗೆಗೂ ಒಳಗಿನ ಬೆಳಕು ಸ್ಫೂರ್ತಿಗಳಿಗೂ ಈ ಸಾಯಕತ್ವದಿಂದ ಬಹಳ ಉಪಯೋಗವಾಗುವುದು.

ಈಗಿನ ಯುದ್ಧ ಮುಗಿದು, ಶಾಂತಿ ಮೂಡಿದಾಗ ನಮ್ಮ ದೇಶಕ್ಕೆ ಪರಿಪೂರ್ಣ ಸ್ವಾತಂತ್ರ್ಯ ಲಭಿಸಿ, ಅದರಲ್ಲೂ ಕೈಗಾರಿಕೆಯ ಕ್ಷೇತ್ರದಲ್ಲಿ ಹಿಂದೆ ಎಂದೂ ಒದಗಿರದ ದೊಡ್ಡ ಅವಕಾಶವೇರ್ಪಡುವುದು. ಇಂದಿನ ಪದವೀಧರರು ಮುಂದೆ ತೀರ ಹೊಸ ಪ್ರಪಂಚದಲ್ಲಿ ಬಾಳಬೇಕಾಗುವುದು. ಬಹು ತೊಡಕಾದ ಸಾಮಾಜಿಕ, ಆರ್ಥಿಕ, ರಾಜಕೀಯ ಸಮಸ್ಯೆಗಳನ್ನು ಬಿಡಿಸಿ ನಾಡನ್ನು ಕಟ್ಟುವ ಬಹುದೊಡ್ಡ ಅವಕಾಶ ಅವರಿಗೆ ಒದಗಿ ಬರುವುದು. ಈ ಸಮಸ್ಯೆಗಳನ್ನು ಬಿಡಿಸಬೇಕಾದವರು ನಮ್ಮ ವಿಶ್ವವಿದ್ಯಾನಿಲಯಗಳ ಮಂದಿ. ಹೀಗೆ ಬಿಡಿಸುವಾಗ, ಅವರಿಗಿರುವ ಒಳ್ಳೆಯ ಸಾಧನಗಳೆಂದರೆ ತಾಳ್ಮೆಯಿಂದ ಕೂಡಿದ ಆಲೋಚನೆ, ನಿಸ್ಸ್ವಾರ್ಥವೂ ದೇಶಾಭಿಮಾನಪೂರ್ಣವೂ ಆದ ಮಾತು. ಈ ದೇಶ ಮತ್ತೆ ಪ್ರಪಂಚದಲ್ಲಿ ಹಿರಿಯ ರಾಷ್ಟ್ರವಾಗಿ ಅರಳಬೇಕಾದರೆ ಅದು ತನ್ನ ಎಲ್ಲಾ ಸತ್ವ ಚೈತನ್ಯಗಳನ್ನೂ ಸಾಧನಸಂಪತ್ತುಗಳನ್ನೂ ಸರಿಯಾದ ದಿಕ್ಕಿನಲ್ಲಿ ಬಳಸಬೇಕು. ಯಾವುದೂ ಪೋಲಾಗಿ, ದಿಕ್ಕು ಪಾಲಾಗಿ, ಅಪವ್ಯಯವಾಗದಂತೆ ನೋಡಿಕೊಳ್ಳಬೇಕು. ಮುಂದೆ ನಮ್ಮ ಸ್ವತಂತ್ರ ರಾಜ್ಯಾಂಗ ಪದ್ಧತಿ ಯಾವ ರೂಪವನ್ನೇ ತಾಳಲಿ, ನಾವು, ಅದರಲ್ಲೂ ವಿಶ್ವವಿದ್ಯಾನಿಲಯಗಳಲ್ಲಿ ಜ್ಞಾನಾರ್ಜನೆ ಮಾಡಿದ ತರುಣರು, ಬೆಳಸಿಕೊಳ್ಳಬೇಕಾದ ಗುಣ ಇದು : ಆಲೋಚನೆಯಲ್ಲಿ, ಭಾವನೆಯಲ್ಲಿ, ಆಚರಣೆಯಲ್ಲಿ ಒಂದು ಬಗೆಯ ಆತ್ಮಶಿಕ್ಷಣ ಕಂಡುಬರಬೇಕು; ಪರಸ್ಪರ ಸಹನೆ, ಪರಸ್ಪರ ಗೌರವ, ಪರಸ್ಪರ ಒಡಂಬಡಿಕೆ— ರಾಜಕೀಯವಾಗಿ ಸಾಮಾಜಿಕವಾಗಿ ಸಮನ್ವಯ ಪ್ರವೃತ್ತಿಯ (Spirit of Compromise) ಒಂದು ವ್ಯವಹಾರ್ಯ ನೀತಿ.

ಈ ಸಮನ್ವಯ ಪ್ರವೃತ್ತಿಯಿಲ್ಲದಿದ್ದರೆ ಭಾರತದಲ್ಲಿ ಐಕ್ಯತೆ ನೆಲಸದು. ನಮ್ಮ ಜನದಲ್ಲಿ ಕೊಟ್ಟು ತೆಗೆದುಕೊಳ್ಳುವ ಬುದ್ಧಿ ಮೂಡಬೇಕಾದ್ದು ಎರಡು ಕಾರಣಗಳಿಂದ. ಒಂದು; ವ್ಯಕ್ತಿಯ ಇಲ್ಲವೆ ಗುಂಪಿನ ಸ್ವಾರ್ಥ ಇರಬಾರದು ; ಎಲ್ಲರ 'ಸ್ವಾರ್ಥ' ಕೈಗೂಡಬೇಕು. ದೇಶಕ್ಕಾಗಿ ಕೆಲಮಟ್ಟಿನ ತ್ಯಾಗಗಳಿಗೆ ಎಲ್ಲರೂ ಸಿದ್ಧವಾಗಬೇಕು. ಇನ್ನೊಂದು, ಇನ್ನೂ ವಿಶಾಲವೂ ಗಂಭೀರವೂ ಆದ ಭಾವನೆ – ಒಂದು ಭೂಖಂಡವನ್ನು, ನಾನಾ ಜಾತಿ ಮತಗಳ ಜನ ಇರುವ ಬೃಹತ್‌ರಾಷ್ಟ್ರವನ್ನು ಸಮರಸವಾಗಿರುವಂತೆ, ಬಲಶಾಲಿಯಾಗಿರುವಂತೆ. ರಾಷ್ಟ್ರದ ಪ್ರತಿಯೊಂದು ಸಮಾಜವೂ ತನ್ನ ಪಾಲಿನ ಕರ್ತವ್ಯವನ್ನು ನಡಸಬೇಕು."

ಮೈಸೂರು ಸಂಸ್ಥಾನದ ಪಬ್ಲಿಕ್ ವರ್ಕ್ಸ್ ಮಂತ್ರಿಗಳಾದ ಶ್ರೀ. ಜೆ. ಮಹಮದ್ ಇಮಾಂ ಅವರು ೧೫-೮-೪೩ನೆಯ ದಿನ ಪರಿಷನ್ಮಂದಿರದಲ್ಲಿ ಬೆಂಗಳೂರು ಮಿತ್ರಸಂಘದ ಆರಂಭಭಾಷಣ ಮಾಡುತ್ತ, ನಮ್ಮ ತರುಣರಲ್ಲಿ ಮೂಡಬೇಕಾದ ಮೂರು ದೊಡ್ಡ ಗುಣಗಳನ್ನು ಒತ್ತಿ ಹೇಳಿದರು. "ಒಂದು, ಶ್ರದ್ಧೆಯಿಂದ ಬಹುಮುಖವಾದ ಜ್ಞಾನಾರ್ಜನೆ ಮಾಡುವುದು ; ಇನ್ನೊಂದು, ಪಡೆದ ಜ್ಞಾನವನ್ನು ದೇಶಹಿತಕ್ಕಾಗಿ ವಿನಿಯೋಗ ಮಾಡುವುದು. ಸರಕಾರದ ಉದ್ಯೋಗಕ್ಕೆಂದೇ ಕಾಯದೆ, ಯಾವ ಕೆಲಸಕ್ಕೆಂದರೆ ಆ ಕೆಲಸಕ್ಕೆ ಸೇರಿ, ಮುಖ್ಯವಾಗಿ ಕೈಗಾರಿಕೆ ವಾಣಿಜ್ಯ ಮುಂತಾದ ಕ್ಷೇತ್ರಗಳಲ್ಲಿ ಮುನ್ನಡೆದು, ಲೋಕೋಪಯುಕ್ತವಾದ ನೌಕರಿಗಳಿಗೆ ಸೇರಿ ರಾಷ್ಟ್ರಸೇವೆಮಾಡಿ ರಾಷ್ಟ್ರಸಂಪತ್ತನ್ನು ಹೆಚ್ಚಿಸುವುದು. ಮೂರನೆಯದು, ಎಲ್ಲಕ್ಕಿಂತ ಈಗ ಬಹು ಅಗತ್ಯವಾಗಿರುವುದೆಂದರೆ, ದೇಶದಲ್ಲಿ ಐಕ್ಯತೆಯನ್ನು ನೆಲೆಗೊಳಿಸಲು ನಮ್ಮ ತರುಣರು ಮಾಡಬೇಕಾಗಿರುವ ಕರ್ತವ್ಯ. ಚಿಕ್ಕಂದಿನಲ್ಲಿ ಬೆಸೆದ ಸ್ನೇಹವೇ ಸ್ಥಾಯಿಯಾದುದು. ಆದ್ದರಿಂದ ಮುಂದೆ ದೇಶದಲ್ಲಿ ಶಾಂತಿ ಸಾಮರಸ್ಯಗಳನ್ನು ನೆಲೆಗೊಳಿಸಿ ಬೆಳಸುವುದಕ್ಕಾಗಿ ಈಗಿನಿಂದ ತರುಣರು ಜಾತಿಮತ ಭೇದಗಳನ್ನು ಗಣನೆಗೆ ತಾರದೆ ಲೌಕಿಕ ಜೀವನದಲ್ಲಿ ಮೈತ್ರಿಯಿಂದ ವರ್ತಿಸಬೇಕು."

ನಮ್ಮ ನಾಡಿನ ತರುಣರು ಈ ಎರಡು ದೊಡ್ಡ ಉಪದೇಶಗಳನ್ನು ಮನನಮಾಡಿ ಆಚರಣೆಗೆ ತರುವರೆಂದು ನಾವು ನಿರೀಕ್ಷಿಸುತ್ತೇವೆ. ನಮ್ಮ ತರುಣರು ಜ್ಞಾನಾರ್ಜನೆಮಾಡಿ ತಮ್ಮ ಬದುಕನ್ನು ಬೆಳಸಿಕೊಂಡು ರಾಷ್ಟ್ರಜೀವನದಲ್ಲಿ ಶಾಂತಿಸಾಮರಸ್ಯಗಳ ದೂತರಾಗಿದ್ದು ಲೋಕದ ಬದುಕನ್ನು ಬೆಳಸುವುದಕ್ಕಿಂತ ಹೆಚ್ಚಿನ ಭಾಗ್ಯ ಅವರಿಗಾವುದಿದೆ ?

---

**ವಿಮರ್ಶೆ**

**'ಕೃಷ್ಣ ಸಂಧಾನ'**: ಮೈಸೂರು ಸಂಸ್ಥಾನದ ಅಕ್ಷರಪ್ರಚಾರ ಸಮಿತಿಯ 'ಬೆಳಕು' ವಾರಪತ್ರಿಕೆಯ ೨೪-೭-೪೩ ನೆಯ ತಾರೀಖಿನ ಸಂಚಿಕೆಗೆ ಪುರವಣಿಯಾಗಿ ಶ್ರೀ. ಎಚ್. ಎಂ. ಶಂಕರನಾರಾಯಣ ರಾಯರು 'ಕುಮಾರವ್ಯಾಸ ಭಾರತ'ದಿಂದ ತಕ್ಕ ವಿವರಣೆಗಳೊಡನೆ ಸಂಗ್ರಹಿಸಿರುವ ಭಾಗ.

ನಾರಣಪ್ಪನ ಭಾರತದಲ್ಲಿ 'ಕೃಷ್ಣ ಸಂಧಾನ' ಅತಿ ಸ್ವಾರಸ್ಯವಾದ ಭಾಗ. ಗಮಕಿಗಳಿಗಂತೂ ಬಹು ಪ್ರಿಯವಾದ ಭಾಗವಾಗಿದೆ. ಅಲ್ಲಿ ಬರುವ ಕೃಷ್ಣ ದುರ್ಯೋಧನರ ಸಂವಾದ, ವಿಶ್ವರೂಪ ದರ್ಶನ, ಕೃಷ್ಣನ ಮಹಿಮೆ ಇವುಗಳು ಓದುಗರನ್ನೂ, ಕೇಳುವವರನ್ನೂ ಭಾವಪರವಶರನ್ನಾಗಿ ಮಾಡುತ್ತವೆ. ಆದರೆ ಒಂದು ಕಡೆ ದುರ್ಯೋಧನನು ಕೃಷ್ಣನಲ್ಲಿ ಅವನು ದೇವರು ಎಂಬ ನಂಬಿಕೆಯನ್ನಿಟ್ಟಿರುವುದು, ಮತ್ತೊಂದು ಕಡೆ ಅವನ ಬುದ್ಧಿವಾದವನ್ನು ಕೇಳದೆ ಅವನನ್ನು ಹಗ್ಗದಿಂದ ಕಟ್ಟುವ ಪ್ರಯತ್ನ ಮಾಡುವುದು !— ಇವು ಪರಸ್ಪರ ಬಹಳ ಅಸಮಂಜಸವಾಗಿ ಕಾಣುತ್ತವೆ. ಕೃಷ್ಣನು ಸೂತ್ರಧಾರನಾಗಿ ನಿಂತು ದುರ್ಯೋಧನಾದಿಗಳ ಅಂತರ್ಯಾಮಿಯಾಗಿದ್ದು ತನ್ನ ಕಾರ್ಯಸಾಧನೆಗೆ ತಕ್ಕಂತೆ ಅವರನ್ನು ಆಡಿಸುತ್ತಿದ್ದಾನೆ. ಎಲ್ಲವೂ ಅವನ ಲೀಲಾಜಾಲ ಎಂದು ಸಮಾಧಾನ ಹೊಂದಬಲ್ಲವರಿಗೆ ಈ ಆಕ್ಷೇಪಣೆ ರುಚಿಸಲಾರದು. ಮತ್ತು ಕೃಷ್ಣನ ಮಹಿಮೆಯನ್ನು ಸಾರುವುದೇ ಕವಿಯ ಮುಖ್ಯೋದ್ದೇಶ; ಅದರ ಸಾಧನೆಗೆ ದುರ್ಯೋಧನನನ್ನು ಚಮತ್ಕಾರವಾಗಿ ಕವಿ ಮಾತನಾಡಿಸಿದ್ದಾನೆ, ಎಂದೂ ಹೇಳಬಹುದು.

ಆಗ ಈ ಕಥೆ ಹಳೆಯ ಪ್ರಪಂಚಕ್ಕೆ ಸೇರಿದ ಪುರಾಣ ಭಾಗವಾಗುತ್ತದೆ. ನಮಗೆ, ಈ ದಿನ, ಅದರ ಅರ್ಥವೇನು ? ನಮ್ಮ ನಿತ್ಯ

ಜೀವನದ ಪ್ರತಿಬಿಂಬವಾಗಿ ನಮ್ಮ ಆತ್ಮವಿಕಾಸಕ್ಕೆ ಸಹಾಯವಾಗುವ ಸಾಹಿತ್ಯವಿಲ್ಲಿದೆಯೇ ? .... ಎಂದು ನಾವು ವಿಚಾರ ಮಾಡಬೇಕು. ಹತ್ತಾರು ಸಲ ಈ ಭಾಗವನ್ನು ನಾನು ಓದಿ ಮನನ ಮಾಡಿದ ಮೇಲೆ ಮಾನವನ ನೈಜ ಸ್ವಭಾವದ ವಿಮರ್ಶೆ ಈ ಕಥೆಯಲ್ಲಿದೆ; ಅದೇ ಕೃಷ್ಣ ಸಂಧಾನದ ಮಹತ್ವ ಎಂದು ನನಗೆ ಅನ್ನಿಸಿದೆ. ಅದನ್ನು ಮುಂದೆ ಇಲ್ಲಿ ವಿವರಿಸಲು ಪ್ರಯತ್ನಿಸಿದ್ದೇನೆ.

ಕೃಷ್ಣನು ಪಾಂಡವರ ದೂತನಾಗಿ ಕೌರವನ ಆಸ್ಥಾನಕ್ಕೆ ಬಂದು ಸಂಧಿಯ ಮಾತನ್ನು ಆಡುತ್ತಾ "ಅವನಿಯರ್ಧವನೀವುದು ಈ ಅಧ್ರುವದ ಬಾಳಿಕೆಯೊಳಗೆ ಪುರುಷಾರ್ಥವ ಸಂಚಿಸೆ ಕಲಿಯಬೇಹುದು." ಎಂದು ಮೊದಲು ಹೇಳಿದಾಗ ದುರ್ಯೋಧನನು, "ಬೆರಳ ಮೀಸೆಯೊಳಿಡುತೆ" ಕಿರುನಗೆಯಿಂದ ಕರ್ಣಾದಿಗಳ ಕಡೆ ನೋಡುತ್ತ "ಸಂಧಿಯ ಮಾತ ಮರೆಯೆಂದ."

ಅರ್ಧ ರಾಜ್ಯವನ್ನು ಕೊಡದಿದ್ದರೆ ಬೇಡ, ಅವರಿಗೆ ಸಲ್ಲಬೇಕಾದ ರಾಜ್ಯಭಾಗವನ್ನು ಪಾಂಡವರು "ನಿನಗೊಲಿದು ಬಿಡುವರು, ಗ್ರಾಮ ವೈದನು ಸಲಿಸಿ ಪಾಂಡುಕುಮಾರರನು ನಿನ್ನತ್ತ ಮಾಡಿದೊಡೆ ಕುಲದ ಕೊಲೆ ತಪ್ಪುವುದು." ಎಂದು ಕೃಷ್ಣ ಪುನಃ ಹೇಳಿದಾಗ ಕುರುರಾಯ ಬಹು ಚಮತ್ಕಾರವಾಗಿ ಕೃಷ್ಣನೊಂದಿಗೆ ಬಹು ಸರಸದಿಂದ, "ಕರೆದು ಮೂರಡಿ ನೆಲನ ಧಾರೆಯನೆರೆದ ಬಲಿ ತಳಕಿಳಿದ..... ಪರಮ ಪುರುಷ ನೀನು, ನಿನಗೆ ಆಂ ಶರಣುಹೊಕ್ಕೆನು ಬಂದ ಪಥದೊಳು ಮರಳಿ ಬಿಜಯಂಗೈಯುವುದು ಎಂದನು ನಗುತೆ."

ದುರ್ಯೋಧನನ ಈ ಮಾತುಗಳಿಂದ ಕೃಷ್ಣನು ಪರಮ ಪುರುಷ, ದೇವರು ಎಂದು ಅವನಿಗೆ ಗೊತ್ತಿದೆ ಎಂದು ಹೇಳಬೇಕಾಗುತ್ತದೆ. ಆದರೂ ಇಲ್ಲಿ ದುರ್ಯೋಧನ ವ್ಯಂಗ್ಯವಾಗಿ ಮಾತನಾಡುತ್ತಿದ್ದಾನೆ. ಎಂದು ವ್ಯಾಖ್ಯಾನ ಮಾಡುವುದಕ್ಕೆ ಅವಕಾಶವುಂಟು. "ಕೃಷ್ಣಾ ಎಲ್ಲರ ಕಡೆಯಿಂದಲೂ ನೀನು ವಿಷ್ಣುವಿನ ಅವತಾರವೆಂದು ಹೊಗಳಿಸಿ ಕೊಳ್ಳುತ್ತಿದೀಯೆ. ಹಾಗಿದ್ದರೆ ನೀನು ಹಿಂದೆ ವಾಮನನಾಗಿ ಬಂದು ಮೂರಡಿ ನೆಲವನ್ನು ಯಾಚಿಸಿದೆ: ದಾನ ಕೊಟ್ಟವನನ್ನು ಪಾತಾಳಕ್ಕೆ ತುಳಿದೆ. ಇದನ್ನು ತಿಳಿದೂ ತಿಳಿದು ನಿನ್ನ ಮಾತಿಗೆ ಮರಳಾಗುತ್ತೇನೆಯೇ ?" ಎಂದು ಹಾಸ್ಯಮಾಡಿ ದುರ್ಯೋಧನ ನುಡಿದಿರಬಹುದು. ಆದರೆ ಮುಂದಿನ "ಮಣಿದು ಬದುಕವವನಲ್ಲ .... ಕೃಷ್ಣನ ಕೆಣಕಿದಲ್ಲದೆ ವಹಿಲದೊಳು ಕೈವಲ್ಯವಿಲ್ಲೆಂದ "— ಎಂದು ಹೇಳುವ ಪದ್ಯದಲ್ಲಿ ಕೃಷ್ಣನ ದೈವತ್ವದಲ್ಲಿ ಪೂರ್ಣ ನಂಬಿಕೆ ದುರ್ಯೋಧನನಿಗಿದೆ ಎಂಬ ಅಂಶ ವಿಶದವಾಗುತ್ತದೆ.

ಹೀಗಿದ್ದರೂ ಕೃಷ್ಣನ ಬುದ್ಧಿವಾದವನ್ನು ಕೇಳಲು ಅವನಿಗೆ ಮನಸ್ಸೇಕೆ ಬರುವುದಿಲ್ಲ ? ತಾನು ಕೇಳಬೇಕು ಎಂದೆನಿಸಿದರೂ ತನ್ನ ಮನಸ್ಸನ್ನು ಒಪ್ಪಿಸುವುದು ದುರ್ಯೋಧನನಿಗೆ ಅಸಾಧ್ಯವಾಗಿದೆ: ಅವನ ಮನಸ್ಸು ಹಾಗೆ ಬೆಳೆದು ಬಂದಿದೆ. ಮನಸ್ಸಿಗೆ ಒಂದು ಹಟ ಬಂದರೆ ಅದನ್ನು ದಾರಿಗೆ ತರುವುದು ಕಷ್ಟ. ದುರ್ಯೋಧನನಲ್ಲಿ ಈ ಹಠ ತುಂಬಿದೆ. ಮನಸ್ಸು ಇಂದ್ರಿಯಗಳನ್ನು ಕುದುರೆಗಳಿಗೆ ಹೋಲಿಸುವುದು ನಮ್ಮಲ್ಲಿ ವಾಡಿಕೆ; ಅದರಲ್ಲಿ ಬಹಳ ಔಚಿತ್ಯವಿದೆ. ಆ ಮಾರ್ಗ ಸರಿ, ನಾವು ಹಿಡಿದಿರುವ ಈ ಮಾರ್ಗ ತಪ್ಪು, ಇದರಿಂದ ಅನರ್ಥವಾಗುತ್ತದೆ ಎಂದು ತಿಳಿದಿದ್ದರೂ ಕೂಡ ಸರಿಯಾದ ದಾರಿಯನ್ನು ಹಿಡಿಯಲು ಮನಸ್ಸನ್ನು ಒಪ್ಪಿಸುವುದು ಕಷ್ಟ. ಇದು ಮನುಷ್ಯ ಸ್ವಭಾವಕ್ಕೆ ಬಹಳ ಸಹಜವಾದದ್ದು. ಅಂತಃಕರಣವನ್ನು ಹೊಕ್ಕು ನೋಡಿ, ಸಾವಧಾನವಾಗಿ ಆತ್ಮ ವಿಮರ್ಶನೆ ಮಾಡಿಕೊಂಡರೆ ನಮಗೆ ನಮ್ಮ ತಪ್ಪು ಕಾಣುತ್ತದೆ; ಆದರೆ ಮನಸ್ಸು ಮಾತ್ರ ತಪ್ಪು ದಾರಿಯನ್ನೆ ಹಿಡಿಯಲು ಹಾತೊರೆಯುತ್ತಿರುತ್ತದೆ. ತಪ್ಪನ್ನು ಒಪ್ಪಿಕೊಂಡು ಅದನ್ನು ತಿದ್ದಿ ಕೊಳ್ಳಲು ಮನಸ್ಸು ಒಡಂಬಡುವುದಿಲ್ಲ. ಇದು ಒಂದು ಅಭಿಮಾನದ ಫಲವಾಗಿಯೋ, ಹಠದ ಫಲವಾಗಿಯೋ ಆದರಂತೂ ಮನಸ್ಸು ದುರ್ದಮವಾಗುತ್ತದೆ. "ದುಷ್ಟಾಶ್ವಾ ಇವ ಸಾರಥೇಃ." ದೇವರೇ ಎದುರಿಗೆ ಬಂದು ನಿಂತು ಬುದ್ಧಿವಾದವನ್ನು ಹೇಳಿದರೂ ನಾವು ಕೇಳಲಾರೆವು. ಇದನ್ನೇ ದುರ್ಯೋಧನನ ನಡವಳಿಕೆ ಸಾರುವುದು.

ಹೋಗಲಿ, "ಜಲಧಿ ಮೇರೆಯ ಮಹಿಯೊಳು ಒಂದೇ ಸ್ಥಳವನು ಐವರಿಗೆ ಈವುದು" ಎಂದು ಪುನಃ ಕೃಷ್ಣನು ಕೇಳಿದಾಗ ದುರ್ಯೋಧನನು ಜಗದ ಪಾಲಕನನ್ನು ಜರೆಯುತ್ತಾ "ಅರ್ಧ ರಾಜ್ಯವನ್ನು ಕೊಡುವುದಿರಲಿ, ಐದು ಗ್ರಾಮಗಳನ್ನು ಕೊಡುವುದು ಹಾಗಿರಲಿ. 'ಎನ್ನಿಳೆಯ ಭಾಗವನೀಸ ಕೊಟ್ಟೊಡೆ ನಿನ್ನ ಮೇಲಾಣೆ, ನೆಲನ ಕಡೆಯೊಳು ಮುಳ್ಳು ಮೊನೆಯುಚ್ಚಳಿಪ ಧರಿಣಿಯನು ಇತ್ತೆನಾದೊಡೆ ಬಳಿಕ ನೀಂ ನಗುಹೋಗು ಬವರವ ಕೊಂಡು ಬಾ ಎಂದ."

ಆಮೇಲೆ, ಕೃಷ್ಣನು ಅವನನ್ನು ಹೆದರಿಸಲು ಪ್ರಯತ್ನಿಸಿದಾಗ ಅದರಲ್ಲೂ, ತುಂಬಿದ ಸಭೆಯಲ್ಲಿ ಅವನು ಹಿಂದೆ ಚಿತ್ರರಥನ ಸೆರೆಯಲ್ಲಿ ಸಿಕ್ಕಿದ ಪ್ರಸಂಗವನ್ನು ಎತ್ತಿ ಆಡಿದಾಗ ಮಾನಧನನಾದ ದುರ್ಯೋಧನನಿಗೆ ತಡೆಯಲಾಗಲಿಲ್ಲ. ತಾನು ಏನು ಮಾಡುತ್ತಿರುವೆನೆಂಬ ಪರಿಜ್ಞಾನವೇ ಇಲ್ಲದೆ "ಎರಡು ಬಲವನು ಮಸೆದು ಕೊಲಿಸುವ ಭರವು ಯಾದವನದು" ಎಂದು ಜರೆಯುತ್ತಾ ಕೃಷ್ಣನನ್ನು ಕಟ್ಟುವ ಆಲೋಚನೆ ಮಾಡುತ್ತಾನೆ. ಆ ಪ್ರಯತ್ನ ವಿಫಲವಾಗಲು ತನ್ನ ನಡತೆ ದಾರಿ ತಪ್ಪಿದೆ ಎಂದು ತಿಳಿದರೂ ಕೂಡ "ಆದದ್ದಾಗಲಿ, ಮಣಿದು ಬದುಕವವನಲ್ಲ . . . ಕೃಷ್ಣನ ಕೆಣಕಿದಲ್ಲದೆ ವಹಿಲದೊಳು ಕೈವಲ್ಯವಿಲ್ಲೆಂದ."

ಈ ವರ್ತನೆ ಮತ್ತು ಮಾತು ಹಟದ ಪರಮಾವಧಿ. ನಾವುಗಳೆಲ್ಲ ನಡೆಯುವುದೇ ಹೀಗೆ.

— ಎಸ್. ವಿ. ಶ್ರೀ.

## ಪರಿಷತ್ತಿನ ಸುದ್ದಿ

### ದಿವಂಗತ ಶ್ರೀ ಇ. ಎ. ಭಾಸ್ಕರರಾಯರ ಜ್ಞಾಪಕ ಸ್ಪರ್ಧೆ

ದಿವಂಗತ ಶ್ರೀ ಇ. ಎ. ಭಾಸ್ಕರರಾಯರ ಹೆಸರಿನಲ್ಲಿ ಕನ್ನಡ ಸಾಹಿತ್ಯ ಪ್ರೋತ್ಸಾಹದ ಒಂದು ಏರ್ಪಾಟನ್ನು ನಡಸಬೇಕೆಂಬ ಉದ್ದೇಶದಿಂದ ಅವರ ತಾಯಿಯವರಾದ ಶ್ರೀಮತಿ ಎ. ಶೇಷಮ್ಮನವರು ಒಂದು ಜ್ಞಾಪಕನಿಧಿಯನ್ನು ಪರಿಷತ್ತಿಗೆ ಕೊಟ್ಟಿರುವುದು ಸರಿಯಷ್ಟೆ. ಈ ಜ್ಞಾಪಕನಿಧಿಯ ಸಂಬಂಧದಲ್ಲಿ ಈ ವರ್ಷ (೧೯೫೩) ಒಂದು **ಪ್ರಬಂಧ ಸ್ಪರ್ಧೆ**ಯನ್ನು ನಡಸಬೇಕೆಂದು ನಿಶ್ಚಯಿಸಿದೆ.

ಪ್ರಬಂಧದ ವಿಷಯ : **"ಕನ್ನಡದಲ್ಲಿ ವಿಡಂಬನ ಸಾಹಿತ್ಯ"**

**ಸ್ಪರ್ಧೆಯ ನಿಯಮಗಳು**

೧. ಪ್ರಬಂಧ ಸ್ವತಂತ್ರವಾಗಿರಬೇಕು ಮತ್ತು ಇದುವರೆಗೆ ಅಚ್ಚಾಗಿರಬಾರದು.

೨. ಪ್ರಬಂಧ ಫೂಲ್ಸ್‌ಸ್ಕ್ಯಾಪ್ ಆಕಾರದ ೨೦ ಪುಟಗಳ ಪರಿಮಿತಿಯಲ್ಲಿ ಇರಬೇಕು; ಮತ್ತು ಅದನ್ನು ಕಾಗದದ ಒಂದೇ ಪಕ್ಕದಲ್ಲಿ ಶಾಯಿಯಲ್ಲಿ ಸ್ಪಷ್ಟಾಕ್ಷರಗಳಲ್ಲಿ ಬರೆದಿರಬೇಕು.

೩. ೧೯೫೩ನೆಯ ಇಸವಿ **ಅಕ್ಟೋಬರ್ ತಿಂಗಳು ೧೭ನೆಯ ತಾರೀಖಿನೊಳಗಾಗಿ** ಪ್ರಬಂಧ ಪರಿಷತ್ತಿನ ಕಚೇರಿಗೆ ತಲಪಬೇಕು.

೪. ಅತ್ಯುತ್ತಮವೆಂದು ಪರೀಕ್ಷಾಸಮಿತಿ ತೀರ್ಮಾನಿಸಿದ ಪ್ರಬಂಧಕ್ಕೆ ೨೦ ರೂಪಾಯಿಗಳ ಬೆಲೆಯುಳ್ಳ ಬಹುಮಾನವನ್ನು ಕೊಡಲಾಗುವುದು.

೫. ಬಹುಮಾನ ಪಡೆದ ಪ್ರಬಂಧವನ್ನು ಪ್ರಕಟಿಸಲು ಪರಿಷತ್ತಿಗೆ ಹಕ್ಕು ಇರುತ್ತದೆ.

೬. ಸ್ಪರ್ಧೆಗೆ ಬಂದ ಪ್ರಬಂಧಗಳು ಬಹುಮಾನಕ್ಕೆ ಅರ್ಹವಾದವುಗಳಲ್ಲವೆಂದು ಕಂಡುಬಂದರೂ ಮತ್ತು ಸಾಕಷ್ಟು ಸಂಖ್ಯೆಯಲ್ಲಿ ಪ್ರಬಂಧಗಳು ಬರದಿದ್ದರೂ ಸ್ಪರ್ಧೆಯನ್ನು ನಿಲ್ಲಿಸಬಹುದು.

೭. ಹಿಂದಿನ ವರ್ಷಗಳ ಸ್ಪರ್ಧೆಯಲ್ಲಿ ಬಹುಮಾನ ಪಡೆದವರು ಈ ಸ್ಪರ್ಧೆಗೆ ನಿಲ್ಲಬಾರದು.

ಸ್ಪರ್ಧೆಗೆ ಸಂಬಂಧಿಸಿದ ಪತ್ರವ್ಯವಹಾರವನ್ನು ಪರಿಷತ್ತಿನ ಕಾರ್ಯದರ್ಶಿಯವರೊಂದಿಗೆ ನಡಸತಕ್ಕದ್ದು.

[ವಿ. ಸೂ.—ಸ್ಪರ್ಧೆಗೆ ಬಂದ ಪ್ರಬಂಧವನ್ನು ಹಿಂದಿರುಗಿಸುವುದಿಲ್ಲವಾದ್ದರಿಂದ ಸ್ಪರ್ಧಿಗಳು ತಮ್ಮ ಪ್ರಬಂಧದ ಒಂದು ಪ್ರತಿಯನ್ನು ತಮ್ಮಲ್ಲಿ ಉಳಿಸಿಕೊಳ್ಳಬೇಕೆಂದು ಪ್ರಾರ್ಥನೆ.]

ಬೆಂಗಳೂರು
೧೮—೮—೧೯೫೩

**ಬಿ. ವೆಂಕೋಬರಾವ್**
ಕಾರ್ಯದರ್ಶಿ

## ಉಪಾಧ್ಯಕ್ಷರ ಪ್ರವಾಸ

ಪರಿಷತ್ತಿನ ಉಪಾಧ್ಯಕ್ಷರು ರಾಜಸೇವಾಪ್ರಸಕ್ತ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ಸೆಪ್ಟೆಂಬರ್ ೧ನೆಯ ತಾರೀಖು ಬುಧವಾರದಿಂದ ೧೦ ದಿನಗಳ ಕಾಲ ಹೈದರ್ರಾಬಾದು ಮತ್ತು ಉತ್ತರ ಕರ್ನಾಟಕ ಪ್ರದೇಶಗಳಲ್ಲಿ ಸಂಚರಿಸುತ್ತಾರೆ.

೧-೯-೪೩ ಬುಧವಾರ ರಾತ್ರಿ ಬೆಂಗಳೂರು ಬಿಟ್ಟು, ಮರುದಿನ ಮಧ್ಯಾಹ್ನ ಕೊಪ್ಪಳ.
೩-೯-೪೩ ಕೊಪ್ಪಳದಿಂದ ಕುಕನೂರು.
೪-೯-೪೩ ಕುಕನೂರಿನಿಂದ ಕೊಪ್ಪಳ.
೫-೯-೪೩ ಕೊಪ್ಪಳದಿಂದ ಗದುಗು.
(ಗದುಗಿನಲ್ಲಿ ಎರಡು ದಿನ ಕಾರ್ಯಕ್ರಮ)
೭-೯-೪೩ ಗದುಗಿನಿಂದ ಹುಬ್ಬಳ್ಳಿ ಮಾರ್ಗವಾಗಿ ಧಾರವಾಡ.
(ಧಾರವಾಡದಲ್ಲಿ ಮೂರುದಿನ ಕಾರ್ಯಕ್ರಮ)
೧೦-೯-೪೩ ಧಾರವಾಡದಿಂದ ರಾಣಿಬೆನ್ನೂರು.
೧೧-೯-೪೩ ಬೆಳಗ್ಗೆ ರಾಣಿಬೆನ್ನೂರು ಬಿಟ್ಟು ರಾತ್ರಿ ಬೆಂಗಳೂರು

## ಪರಿಷತ್ತಿನ ಸದಸ್ಯರ ಬೆಳವಣಿಗೆ

**ಸಹಾಯಕ ಸದಸ್ಯರು (೧೦೦ ರೂ.):** ಶ್ರೀಮಾನ್ ಎಚ್. ರಂಗಾಚಾರ್, ಎಂ.ಎ. ಅವರು, ಟ್ರಾಫಿಕ್ ಮ್ಯಾನೇಜರು, ಮೈಸೂರು ಸ್ಟೇಟ್ ರೈಲ್ವೆ, ಮೈಸೂರು.

**ಸಾಮಾನ್ಯ ಸದಸ್ಯರು (೬ ರೂ.):** ಶ್ರೀ.ಗಳಾದ ೧. ಸಿ. ಎಲ್. ಸ್ಯಾಮ್ಯುಲ್ ಅವರು, ವಾರ್ಡ್ಲಾ ಹೈಸ್ಕೂಲು, ಬಳ್ಳಾರಿ. ೨. ಕೆ. ಎಂ. ಬಂಡಯ್ಯನವರು, C/o ಕೆ. ಎಂ. ದಕ್ಷಿಣಾಮೂರ್ತಿ, ಎಂ.ಎ., ಬಿ.ಎಲ್. ಅವರು, ಬೆಂಗಳೂರು ರಸ್ತೆ, ಬಳ್ಳಾರಿ.

**ಸಾಮಾನ್ಯ ಸದಸ್ಯರು (೩ ರೂ.):** ಶ್ರೀ.ಗಳಾದ ೧. ಎಂ. ಬಂಡಯ್ಯನವರು, C/o ಮೆಸರ್ಸ್ ಎಸ್. ಶಿವಪ್ಪ ಅಂಡ್ ಕೆ. ಲಿಂಗಪ್ಪ, ದಳ್ಳಾಳಿ ವ್ಯಾಪಾರಿಗಳು, ಬೆಂಗಳೂರು ರಸ್ತೆ, ಬಳ್ಳಾರಿ. ೨. ಕೆ. ಎಚ್. ವೀರಪ್ಪನವರು, ವೀರಶೈವ ಹಾಸ್ಟೆಲ್, ಗಾಂಧಿನಗರ, ಬಳ್ಳಾರಿ.

**ಅಂಗಸಂಸ್ಥೆ:** ಕನ್ನಡ ಸಂಘ, ವಾರ್ಡ್ಲಾ ಹೈಸ್ಕೂಲು, ಬಳ್ಳಾರಿ.

## ಸಾಹಿತ್ಯ ಪರೀಕ್ಷೆಗಳು

ಈ ಸಲದ ಸಾಹಿತ್ಯ ಪರೀಕ್ಷೆಗಳು **ಸೆಪ್ಟೆಂಬರು ೧೦, ೧೧, ೧೨ನೆಯ** ತಾರೀಖುಗಳಲ್ಲಿ ಪ್ರತಿದಿನವೂ ಬೆಳಗ್ಗೆ **೯ರಿಂದ ೧೨ರ** ವರೆಗೆ ನಡೆಯುವುವು.

### ಪರೀಕ್ಷೆಗಳ ಕಾಲಪಟ್ಟಿ
(ಪ್ರತಿ ದಿನವೂ ಬೆಳಗ್ಗೆ ೯ರಿಂದ ೧೨ರ ವರೆಗೆ)

**೧೦-೯-೪೩ನೆಯ ಶುಕ್ರವಾರ**

೩ನೆಯ (ಜಾಣ) ಪರೀಕ್ಷೆ: ಸಾಹಿತ್ಯಭಾಗ (ನಾಟಕ, ಕಾವ್ಯ, ಗದ್ಯ)
೨ನೆಯ (ಕಾವ) ಪರೀಕ್ಷೆ: ಸಾಹಿತ್ಯಭಾಗ ( ,, )

**೧೧-೯-೪೩ನೆಯ ಶನಿವಾರ**

೩ನೆಯ ಪರೀಕ್ಷೆ: ವ್ಯಾಕರಣ, ಭಾಷಾಚರಿತ್ರೆ, ಸಾಹಿತ್ಯಚರಿತ್ರೆ ಮತ್ತು ವಿಮರ್ಶೆ.
೨ನೆಯ ಪರೀಕ್ಷೆ: ವ್ಯಾಕರಣ ಮತ್ತು ಸಂಸ್ಕೃತಿ.

**೧೨-೯-೪೩ನೆಯ ಭಾನುವಾರ**

೩ನೆಯ ಪರೀಕ್ಷೆ: ಸಂಸ್ಕೃತಿ ಮತ್ತು ಚರಿತ್ರೆ.
೧ನೆಯ (ಅಣುಗ) ಪರೀಕ್ಷೆ

## ೨೭ನೆಯ ಕನ್ನಡ ಸಾಹಿತ್ಯ ಸಮ್ಮೇಳನ

ಶಿವಮೊಗ್ಗದಲ್ಲಿ ಕಳೆದ ವರ್ಷವೇ ನಡೆಯಬೇಕಾಗಿದ್ದು ಕಾರಣಾಂತರಗಳಿಂದ ನಡೆಯದೆ ಇದ್ದ **೨೭ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಡಿಸೆಂಬರು ತಿಂಗಳಿನಲ್ಲಿ ಶಿವಮೊಗ್ಗದಲ್ಲಿಯೇ** ನಡೆಯುವಂತೆ ನಿರ್ಧರವಾಗಿದೆಯೆಂದು ತಿಳಿಸಲು ಸಂತೋಷಿಸುತ್ತೇವೆ.

## ಪರಿಷತ್ತಿನ ಸದಸ್ಯರಲ್ಲಿ ವಿಜ್ಞಾಪನೆ

ಬರುವ ಡಿಸೆಂಬರು ತಿಂಗಳು ಶಿವಮೊಗ್ಗದಲ್ಲಿ ನಡೆಯಲಿರುವ **ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರ ಆಯ್ಕೆ** ಸದ್ಯದಲ್ಲೆ ನಡೆಯುತ್ತದೆ. ಪರಿಷತ್ತಿನ ನಿಬಂಧನೆ ೪೭ (೧)ರ ಮೇರೆಗೆ ಈ ಆಯ್ಕೆಯಲ್ಲಿ ಪ್ರತಿಯೊಬ್ಬ ಸದಸ್ಯರೂ ತಮ್ಮ ಅಭಿಮತವನ್ನು ಕೊಡಬೇಕಾಗಿದೆ. ಮತ ಕೊಡುವ ಅರ್ಹತೆಯನ್ನು ಪಡೆಯಬೇಕಾದರೆ ತಮ್ಮಿಂದ ಪರಿಷತ್ತಿಗೆ ಸಲ್ಲಬೇಕಾದ ಎಲ್ಲ ಹಣವನ್ನೂ ಆಯ್ಕೆಯ ವೇಳೆಗೆ ಪೂರ್ತಿಯಾಗಿ ಸಲ್ಲಿಸಬೇಕು, ಆದಕಾರಣ ಸದಸ್ಯರು ತಮ್ಮಿಂದ ಸಲ್ಲಬೇಕಾಗಿರಬಹುದಾದ ಚಂದಾ ಬಾಕಿಯನ್ನು ಕೂಡಲೆ ಪರಿಷತ್ತಿಗೆ ಕಳಿಸಿಕೊಟ್ಟು ಉಪಕಾರ ಮಾಡಬೇಕಾಗಿ ಪ್ರಾರ್ಥನೆ.

೧೮-೮-೧೯೪೩ ಬೆಂಗಳೂರು — ಬಿ. ವೆಂಕೋಬರಾವ್, ಕಾರ್ಯದರ್ಶಿ

## ರಾಜಸೇವಾಸಕ್ತ ಶ್ರೀ. ಬೆಳ್ಳಾವೆ ವೆಂಕಟನಾರಾಯಣಪ್ಪನವರ ಸ್ಮಾರಕ ಉಪನ್ಯಾಸ ನಿಧಿ

ಈ ನಿಧಿಯ ಏರ್ಪಾಟಿನ ವಿಚಾರವನ್ನು ಕನ್ನಡಿಗರ ಗಮನಕ್ಕೆ ತಂದು ದ್ರವ್ಯ ಸಹಾಯ ಮಾಡಬೇಕೆಂದು ಪ್ರಾರ್ಥಿಸಿಕೊಂಡಿದೆಯಷ್ಟೆ. ಈಗಾಗಲೆ ಹಲವು ಮಹನೀಯರು ದ್ರವ್ಯ ಸಹಾಯ ಮಾಡಿ ಉಪಕಾರ ಮಾಡಿದ್ದಾರೆ. ನಿಧಿ ಸಂಗ್ರಹಕ್ಕೆ ಇಟ್ಟಿರುವ ಅವಧಿಯನ್ನು ಹೆಚ್ಚಿಸಿದಲ್ಲಿ ಇನ್ನೂ ಹೆಚ್ಚು ಮೊತ್ತ ಕೂಡಬಹುದೆಂದು ಮಿತ್ರರು ಅಪೇಕ್ಷೆಪಟ್ಟು ಸಲಹೆ ಕೊಟ್ಟಿರುವುದರಿಂದ ಅದರಂತೆ **ಅವಧಿಯನ್ನು ಸೆಪ್ಟೆಂಬರು ೧ನೆಯ ತಾರೀಖಿನವರೆಗೆ ಹೆಚ್ಚಿಸಿದೆ.**

ದಿವಂಗತರ ವಿದ್ಯಾರ್ಥಿಗಳು ಮಿತ್ರರು ಒಬ್ಬೊಬ್ಬರಿಗೂ ಪ್ರತ್ಯೇಕವಾಗಿ ಬರೆಯಲು ಕಾಲಾವಕಾಶ ಮೊದಲಾದ ಅನುಕೂಲಗಳು ಇಲ್ಲದ್ದರಿಂದ ಈ ಸಾರ್ವಜನಿಕ ಬಿನ್ನಹವನ್ನೇ ಒಬ್ಬೊಬ್ಬರಲ್ಲಿಯೂ ವ್ಯಕ್ತಿಶಃ ಮಾಡಿದ್ದಾಗಿ ಭಾವಿಸಿಕೊಂಡು ಈ ನಮ್ಮ ಮಿತ್ರರು ಹಿರಿಯರ ನೆನವಿನ ಕಾಣಿಕೆಗಾಗಿ ತಮ್ಮ ಕೈಯಲ್ಲಾದ್ದನ್ನು ಕಳಿಸಿಕೊಡುವ ಉಪಕಾರಮಾಡಬೇಕೆಂದು ಮತ್ತೊಮ್ಮೆ ಪ್ರಾರ್ಥನೆ. ಈ ಪ್ರಕಟನೆಯನ್ನು ನೋಡದೆ ಇರಬಹುದಾದ ತಮ್ಮ ಗೆಳೆಯರಿಗೆ ಈ ವಿಷಯವನ್ನು ತಿಳಿಸಿದರೆ ಹೆಚ್ಚು ಉಪಕಾರವಾಗುತ್ತದೆ.

ಬಿ. ವೆಂಕೋಬರಾವ್, ಕಾರ್ಯದರ್ಶಿ — ಮಾಸ್ತಿ ವೆಂಕಟೇಶ ಅಯ್ಯಂಗಾರ್, ಉಪಾಧ್ಯಕ್ಷ

## ಮೈಸೂರು ಪ್ರಾಂತ ಸಮಿತಿ

**ತಾ॥ ೨೪-೮-೪೩ನೆಯ ಮಂಗಳವಾರ ಸಂಜೆ ೭ ಗಂಟೆಗೆ** ಪರಿಷನ್ಮಂದಿರದಲ್ಲಿ ಇಂಡಿಯನ್ ಪಿ. ಇ. ಎನ್. ಮತ್ತು ಆರ್ಯನ್ ಪಾತ್ ಪತ್ರಿಕೆಗಳ ಸಂಪಾದಕರಾದ ಶ್ರೀಮತಿ ಸೋಫಿಯಾ ವಾಡಿಯಾ ಅವರು "Essentials of Culture" ಎಂಬ ವಿಷಯವಾಗಿ ಇಂಗ್ಲಿಷಿನಲ್ಲಿ ಭಾಷಣ ಮಾಡುತ್ತಾರೆ.

**ತಾ॥ ೨೫-೮-೪೩ನೆಯ ಬುಧವಾರ ಸಂಜೆ ೭ ಗಂಟೆಗೆ** ಪರಿಷನ್ಮಂದಿರದಲ್ಲಿ ಡಾಕ್ಟರ್ ಪಿ. ಕೃಷ್ಣರಾವ್, ಬಿ.ಎಸ್‌ಸಿ., ಎಂ.ಬಿ.ಬಿ.ಎಸ್., ಡಿ.ಟಿ.ಎಂ. ಅಂಡ್ ಎಚ್. ಇವರು **"ಈಗಿನ ಕಾಲದ ರೋಗ ನಿದಾನ ಮಾರ್ಗಗಳು"** ಎಂಬ ವಿಷಯವನ್ನು ಕುರಿತು ದೀಪಚಿತ್ರ ಸಹಿತ ಭಾಷಣ ಮಾಡುತ್ತಾರೆ.

## ಮಹಿಳಾ ಶಾಖೆ

ಕಳೆದ ಶನಿವಾರ ಸಂಜೆ ಶ್ರೀಮತಿ ಲಕ್ಷ್ಮಿಬಾಯಿ, ಬಿ.ಎ., ಬಿ.ಟಿ., ಅವರು 'ಗಾಂಧೀಜಿ ಅವರ ಹಾಸ್ಯ ಪ್ರವೃತ್ತಿ' ಎಂಬ ಪುಸ್ತಕದಿಂದ ಕೆಲವು ಭಾಗಗಳನ್ನು ಓದಿದರು. ಶ್ರೀಮತಿ ಕೆ. ವಿ. ರತ್ನಮ್ಮ, ಬಿ.ಎಸ್‌ಸಿ. ಅವರು, ಶ್ರೀಮತಿ ಕುಮುದಾಬಾಯಿ ಅವರು 'ಆರತಿ'ಯಿಂದ ಕೆಲವು ಕಥೆಗಳನ್ನು ವಾಚಿಸಿದರು.

೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ.

ಪ್ರತಿ ಶುಕ್ರವಾರ ಹೊರಡುತ್ತದೆ

**Reg. No. M. 3975**

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧೨
ಬಿಡಿ ಪತ್ರಿಕೆ: ೬ ಕಾಸು



ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ'ಯನ್ನು ಸಂಸ್ಥಾನದ ಎಲ್ಲಾ ಹೈ ಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೪೪
ಬೆಂಗಳೂರು: ಶುಕ್ರವಾರ, ಆಗಸ್ಟ್ ೨೭, ೧೯೪೩

## ಸಂಸ್ಕೃತಿಯ ಅವಶ್ಯ ಸತ್ತ್ವಗಳು

೨೪-೮-೪೩ನೆಯ ಮಂಗಳವಾರ ಸಂಜೆ ಪರಿಷನ್ಮಂದಿರದಲ್ಲಿ 'ಆರ್ಯನ್‌ಪಾತ್' ಮತ್ತು 'ಇಂಡಿಯನ್ ಪಿ.ಇ.ಎನ್.' ಪತ್ರಿಕೆಗಳ ಸಂಪಾದಕರಾದ ಶ್ರೀಮತಿ ಸೋಫಿಯಾ ವಾಡಿಯಾ ಅವರು Essentials of Culture (ಸಂಸ್ಕೃತಿಯ ಅವಶ್ಯ ಸತ್ತ್ವಗಳು) ಎಂಬ ವಿಷಯವನ್ನು ಕುರಿತು ಇಂಗ್ಲಿಷಿನಲ್ಲಿ ವಿಚಾರಪೂರ್ಣವೂ ಸ್ಫೂರ್ತಿದಾಯಕವೂ ಆದ ಭಾಷಣವನ್ನು ಮಾಡಿದರು. ಪರಿಷನ್ಮಂದಿರದಲ್ಲಿ ಜನ ಕಿಕ್ಕಿರಿದು ಸೇರಿತ್ತು.

ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ಉಪನ್ಯಾಸಕರನ್ನು ಸಭೆಗೆ ಪರಿಚಯಮಾಡಿ ಕೊಡುತ್ತ, ಶ್ರೀಮತಿ ಸೋಫಿಯಾ ವಾಡಿಯಾ ಅವರು ಈಚೆಗೆ ಪರಿಷತ್ತಿನ 'ಸಹಾಯಕ'ರಾಗಿರುತ್ತಾರೆಂದು ಹೇಳಿ ಶ್ರೀಮತಿಯವರು ಆರ್ಯನ್‌ಪಾತ್ ಮತ್ತು ಪಿ.ಇ.ಎನ್. ಪತ್ರಿಕೆಗಳ ಮೂಲಕ ಭರತಖಂಡದ ಸಂಸ್ಕೃತಿಗೂ ತನ್ಮೂಲಕ ವಿಶ್ವಸಂಸ್ಕೃತಿಗೂ ಮಾಡುತ್ತಿರುವ ಸೇವೆಯನ್ನು ಪ್ರಶಂಸಿಸಿ, ಅವರು ಭರತಖಂಡದ ಸಮಸ್ತ ಅಭ್ಯುದಯಕ್ಕೆ ಒಂದು ಶಕ್ತಿಯಾಗಿ ದುಡಿಯುತ್ತ ಮುಂದೆ ಮಾರ್ಗರೆಟ್‌ನೋಬಲ್, ಆನಿಬೆಸೆಂಟ್ ಮುಂತಾಗಿ ಹೊರಗಿನಿಂದ ಬಂದು ಇಲ್ಲಿ ಭರತಖಂಡದ ಮೇಲ್ಮೆಗೆ ದುಡಿದ ಹಿರಿಯ ಹೆಸರುಗಳ ಸಾಲಿನಲ್ಲಿ ಮೆರೆಯುವರೆಂದರು.

ಶ್ರೀಮತಿ ಸೋಫಿಯಾ ವಾಡಿಯಾ ಅವರ ಉಪನ್ಯಾಸದ ಸಾರಾಂಶ:

"ಸಂಸ್ಕೃತಿಯೂ ನಾಗರಿಕತೆಯೂ ಸಮಾನಾರ್ಥ ಪದಗಳು ಎಂಬ ತಪ್ಪುತಿಳಿವಳಿಕೆ ಅನೇಕರಲ್ಲಿರುತ್ತದೆ. ಆದರೆ ಎರಡೂ ವಿಶಿಷ್ಟ ಗುಣ ಲಕ್ಷಣಗಳುಳ್ಳ ಬೇರೆ ಬೇರೆ ಮಾತುಗಳು. ಸಂಸ್ಕೃತಿ ಆತ್ಮಗುಣವುಳ್ಳದ್ದು, ನಾಗರಿಕತೆ ಭೌತ ಗುಣವುಳ್ಳದ್ದು. ಸಂಸ್ಕೃತಿಯ ವಿಕಸನಕ್ಕೆ ನಾಗರಿಕತೆ ಒಂದು ಸಾಧನ, ಉಪಾಧಿ; ಆದ್ದರಿಂದ ನಾಗರಿಕತೆಗೆ ನಾವು ಎಷ್ಟು ಬೆಲೆ ಕೊಡಬೇಕು, ಸಂಸ್ಕೃತಿಗೆ ಎಷ್ಟು ಬೆಲೆ ಕೊಡಬೇಕು ಎಂಬ ವಿಷಯವನ್ನು ಚೆನ್ನಾಗಿ ತಿಳಿದವರಾಗಬೇಕು.

ಸಂಸ್ಕೃತಿಯ ಮೇಲ್ಮೆ ಎಂದರೆ ಮಾನವ ವ್ಯಕ್ತಿತ್ವದ ಶಾಶ್ವತ ಪ್ರಗತಿಯ ಚಿಹ್ನೆ. ನಾಗರಿಕತೆಯ ಮೇಲ್ಮೆ ಎಂದರೆ ತಾತ್ಕಾಲಿಕವಾಗಿ ಸಾಧಿಸಿರುವ ಭೌತ ಪ್ರಗತಿಯ ಮಟ್ಟ. ಪ್ರಪಂಚ ಹುಟ್ಟಿದಾಗಿನಿಂದ ಎಷ್ಟೋ ನಾಗರಿಕತೆಗಳು ಪಾರ್ಥಿವ ದೇಹದಂತೆ ಹುಟ್ಟಿದುವು, ಅಳಿದುವು. ಆದರೆ ಸಂಸ್ಕೃತಿಯ ಹೊಳೆ ಮಾತ್ರ, ಆತ್ಮದಂತೆ ಅವಿನಾಶಿಯಾಗಿ, ಹರಿದುಬಂದಿದೆ. "ವಾಸಾಂಸಿ ಜೀರ್ಣಾನಿ ಯಥಾ ವಿಹಾಯ . . ." ಎಂಬ ಗೀತಾ ವಾಕ್ಯದಂತೆ ಸಂಸ್ಕೃತಿ, ಜೀರ್ಣವಾದ ನಾಗರಿಕತೆಗಳನ್ನು ಬಿಟ್ಟು, ಹೊಸದಾಗಿ ರೂಪುಗೊಂಡ ನಾಗರಿಕತೆಗಳಲ್ಲಿ ನೆಲಸಿ ಆ ಮೂಲಕ ಪ್ರಕಾಶಕ್ಕೆ ಬರುತ್ತಿದೆ.

ಚೀನ, ಭಾರತ, ಈಜಿಪ್ಟ್, ಗ್ರೀಸ್, ರೋಮ್ ದೇಶಗಳ ಹಿಂದಿನ ಸುಸಂಸ್ಕೃತ ಜೀವಿಗಳು ಈ ದೇಶಗಳ ಇಂದಿನ ಸುಸಂಸ್ಕೃತ ಜೀವಿಗಳು ಸಂಧಿಸಿದಲ್ಲಿ ಅವರು ಪರಸ್ಪರ ಗುರುತಿಸಬಲ್ಲರು. ಇದರಿಂದ ಗೊತ್ತಾಗುವುದು ಸಂಸ್ಕೃತಿಯ ಅವಿನಾಶಿತ್ವ. ಆದರೆ ಈ ದೇಶಗಳ ನಾಗರಿಕತೆಗಳು ಮಾತ್ರ ಶಾಶ್ವತವಾಗಿ ಬದುಕಲಿಲ್ಲ.

ಎಷ್ಟೋ ವೇಳೆ ಭೌತಗುಣಪ್ರಧಾನವಾದ ನಾಗರಿಕತೆಯ ಕೈ ಮೇಲಾಗಿ ಸಂಸ್ಕೃತಿ ಹಿನ್ನೆಲೆಗೆ ಬಿದ್ದು ದೇಶಕ್ಕೆ ಅಮಂಗಳ ಉಂಟಾಗುವ ಪರಿಸ್ಥಿತಿಗಳು ತೋರಿಕೊಳ್ಳುತ್ತವೆ. ಆಧುನಿಕ ನಾಗರಿಕತೆ– ಪಶ್ಚಿಮದಲ್ಲಿ ಮಾತ್ರವೆ ಅಲ್ಲ ಪೂರ್ವದಲ್ಲೂ ಸಹ– ಆತ್ಮಪ್ರಾಯವಾದ ಸಂಸ್ಕೃತಿಯ ಇರವಿಗೇ ಆತಂಕವೊಡ್ಡುತ್ತಿದೆ. ವಿಜ್ಞಾನ ಪ್ರಗತಿಯಿಂದ ಬೇಕಾದಷ್ಟು ಪ್ರಯೋಜನಗಳು ಲಭಿಸಿ ಮಾನವನ ನಾಗರಿಕತೆ ಮೇಲಾಗಿ ಇರಬಹುದು. ಆದರೆ ಅಂಥ ಪ್ರಯೋಜನಗಳ ಫಲವಾಗಿ ಅವನಲ್ಲಿ ಸ್ವಾರ್ಥ ಮುಂತಾದ ದುರ್ಗುಣಗಳು ಬೆಳೆದುವೇ ಹೊರತು ಮಾನವಪ್ರೇಮ ಮೊದಲಾದ ಸುಗುಣಗಳು ಬೆಳೆಯಲಿಲ್ಲ. ಪ್ರಪಂಚವನ್ನೇ ಗೆದ್ದು ಆತ್ಮವನ್ನು ಕಳೆದುಕೊಂಡರೆ ಏನು ಸುಖ?

ಪ್ರಪಂಚದ ಇತರ ದೇಶಗಳಂತೆಯೇ ಭರತಖಂಡವೂ ಇಂದು ಬಹು ಉತ್ಕಟವಾದ ಸಂಕಟದ ಕಾಲವನ್ನು ಎದುರಿಸುತ್ತಿದೆ. ನಾಗರಿಕತೆಯ ಕೈ ಮೇಲಾಗಿ ಜನಜೀವನದ ಗುರಿ ನಿಜವಲ್ಲದ ಬೆಲೆಗಳ ಕಡೆಗೆ ಹರಿದುಹೋಗಿದೆ. ಬದುಕಿಗೆ ರಸವನ್ನೂ ಶ್ರೇಯಸ್ಸನ್ನೂ ನೀಡುವ ಸಂಸ್ಕೃತಿಯ ಮಹಾ ಗುಣಗಳನ್ನು ಮಾನವನು ಹುಡುಕಿಕೊಳ್ಳದಿದ್ದರೆ ಗತಿಯಿಲ್ಲ. ಯಾವನು ಸಂಸ್ಕೃತಿಯ ಅವಶ್ಯ ಸತ್ತ್ವಗಳನ್ನು ಮೈಗೂಡಿಸಿಕೊಳ್ಳುವನೊ, ಅವನು ವಿಷಮ ಪರಿಸ್ಥಿತಿಯಿಂದ ಪಾರಾಗಬಲ್ಲ. ಭರತಖಂಡ ಹೀಗೆ ಪಾರಾಗಿ ನೋವಿಗೀಡಾಗಿರುವ ಪ್ರಪಂಚದ ಬದುಕನ್ನು ಉದ್ಧರಿಸಲು ಮತ್ತೆ ತೊಡಗಬೇಕಾಗಿದೆ.

ಪ್ರತಿಯೊಬ್ಬ ಸುಸಂಸ್ಕೃತನಲ್ಲಿಯೂ ಇಂದು ಮೊತ್ತಮೊದಲು ಪ್ರಕಟವಾಗಬೇಕಾದ ಗುಣಗಳೆಂದರೆ:

೧. ಶೀಲ ಶುದ್ಧಿ, ೨. ಸೇವಾ ಬುದ್ಧಿ, ೩. ವಿವಿಧತೆಯಲ್ಲಿ ಏಕತೆಯನ್ನು ಕಾಣುವ ಮನೋಧರ್ಮ, ೪. ಶಾಶ್ವತ ಪ್ರಗತಿ ಸೂಚಕವಾದ ಗುಣಗಳನ್ನು ಅರ್ಥ ಮಾಡಿಕೊಂಡು, ತಾತ್ಕಾಲಿಕವಾಗಿ ಬದುಕಿಗೆ ಒಳ್ಳೆಯದು ಮಾಡುವ ಭೌತಪ್ರಗತಿಗೆ ಯಾವ ಸ್ಥಳವನ್ನು ಎಷ್ಟು ಬೆಲೆಯನ್ನು ಕೊಡಬೇಕು, ಬದುಕಿಗೆ ಶಾಶ್ವತ ಶ್ರೇಯಸ್ಸನ್ನು ಕೊಡುವ ಸಂಸ್ಕೃತಿಯ ಮಾನವೀಯ ಆತ್ಮಗುಣಕ್ಕೆ ಯಾವ ಸ್ಥಾನವನ್ನು ಕೊಟ್ಟು ಎಷ್ಟು ಬೆಲೆಯನ್ನು ಕಟ್ಟಬೇಕು ಎಂಬುದರ ವಿವೇಚನಾಶಕ್ತಿ, ೫. ನಮ್ಮ ಶರೀರದಲ್ಲೆ ವಾಸಮಾಡುವ ಆತ್ಮದ ದರ್ಶನ, ಅದರ ಸಂಪರ್ಕ ಮತ್ತು ಬೆಳವಣಿಗೆ.

ಭಾರತ ಎಚ್ಚತ್ತು, ಮೇಲೆ ಹೇಳಿದ ನಿಜವಾದ ಸತ್ತ್ವಗಳನ್ನು ಬೆಳಸಿಕೊಂಡು ಬೆಳಕು ಜ್ಞಾನಗಳ ಕೇಂದ್ರವಾಗಿ ಜಗತ್ತಿಗೆ ಮತ್ತೆ ಗುರುವಾಗಿ ಮಾರ್ಗದರ್ಶಕವಾಗಬೇಕಾಗಿದೆ. ಇದು ಈಡೇರುವಂತೆ ಮಾಡಬೇಕಾದ್ದು ಪ್ರತಿ ಭಾರತೀಯನ ಕರ್ತವ್ಯ."

ಶ್ರೀ. ಸಿ. ಕೆ. ವೆಂಕಟರಾಮಯ್ಯನವರಿಂದ ಧನ್ಯವಾದ ಸಮರ್ಪಣೆಯಾದ ಬಳಿಕ ಉಪನ್ಯಾಸ ಕಾರ್ಯಕ್ರಮ ಮುಗಿಯಿತು.

# ಕನ್ನಡ ನುಡಿ

**ಶುಕ್ರವಾರ, ಆಗಸ್ಟ್ ೨೭, ೧೯೪೩**

## ಗಡಿನಾಡಿನಲ್ಲಿ ಕನ್ನಡ

"ಕನ್ನಡ ನಾಡಿನ ಗಡಿನಾಡಾದ ಸೊಲ್ಲಾಪುರ ಜಿಲ್ಲೆಯ ಸೊಲ್ಲಾಪುರ ತಾಲ್ಲೂಕಿನ ಪೂರ್ವಭಾಗದ ಪರಿಸ್ಥಿತಿ ಅತ್ಯಂತ ಶೋಚನೀಯವಾಗಿದೆ. ಕಾಂಗ್ರೆಸ್ ಮಂತ್ರಿಮಂಡಲ ಅಧಿಕಾರ ಸೂತ್ರಗಳನ್ನು ಕೈಕೊಂಡ ಕೂಡಲೆ ಮುಂಬಯಿ ಶಾಸನ ಸಭೆಯಲ್ಲಿ ಓರ್ವ ಸದಸ್ಯರು ಕೇಳಿದ ಪ್ರಶ್ನೆಗೆ ಉತ್ತರ ಕೊಡುವಾಗ ಆಗಿನ ಮುಖ್ಯಮಂತ್ರಿಗಳಾಗಿದ್ದ ಮಾನ್ಯ ಶ್ರೀ. ಬಾಳಾ ಸಾಹೇಬ ಖೇರರು ಸೊಲ್ಲಾಪುರ ತಾಲ್ಲೂಕಿನ ಪೂರ್ವಭಾಗದ ೮೦ ಹಳ್ಳಿಗಳು ಶುದ್ಧ ಕನ್ನಡ ಹಳ್ಳಿಗಳೆಂದು ಒಪ್ಪಿ, ಆ ಹಳ್ಳಿಗಳಲ್ಲಿ ಕನ್ನಡ ಶಾಲೆಗಳನ್ನು ಸ್ಥಾಪಿಸುವ ವಿಚಾರವನ್ನು ಬೆಂಬಲಿಸಿದರು.

**ಒಳಸಂಗ** ಈ ೮೦ ಗ್ರಾಮಗಳ ಪೈಕಿ ಒಂದು. ಈ ಹಳ್ಳಿಯ ಜನಸಂಖ್ಯೆ ಸುಮಾರು ಆರು ಸಾವಿರ. ಇದೊಂದು ಒಳ್ಳೆಯ ಉದ್ಯೋಗ ಕೇಂದ್ರ; ವ್ಯಾಪಾರದ ಸ್ಥಳ. ಬಣ್ಣಗಾರರ ಮನೆಗಳು ಇಲ್ಲಿ ವಿಶೇಷ. ಆದರೆ ಆ ವ್ಯವಸಾಯ ಪರದೇಶಿ ಬಣ್ಣದ ಕಾರ್ಖಾನೆಗಳ ಏರಾಟದ ಮೂಲಕ ಮುಗ್ಗಿಹೋಗಿದೆ. ಆದರೂ ಒಕ್ಕಲತನ ಉದ್ಯೋಗ ವ್ಯವಸಾಯಗಳನ್ನು ಮಾಡಿಕೊಂಡು ಜನರು ಉತ್ಸಾಹಭರಿತರಾಗಿರುವರು. ಈ ಊರಲ್ಲಿ ಒಂದು ವಾಚನಾಲಯವಿದೆ. ಆದರಿಂದ ಜನರಲ್ಲಿ ಪ್ರಚಲಿತ ರಾಜಕೀಯ ವಿಷಯಗಳ ಪರಿಚಯ ಚೆನ್ನಾಗಿದೆ. ಜನರು ಆಡುವ ಭಾಷೆ ಕನ್ನಡವಾದರೂ ಸುಮಾರು ೫೦ ವರ್ಷಗಳಿಂದಲೂ ಮರಾಠಿ ಶಾಲೆಗಳಲ್ಲಿ ಮರಾಠಿಯನ್ನೆ ಕಲಿತಿರುವುದರಿಂದ ಮರಾಠಿ ಪತ್ರಿಕೆಗಳನ್ನು ಓದುವುದೇ ಹೆಚ್ಚು. ಶಿಕ್ಷಣಕ್ರಮದ ಈ ತಿರವುಮುರುವಿನಿಂದ ತಮಗಾದ ಹಾನಿಯನ್ನು ಅವರು ಚೆನ್ನಾಗಿ ಅರಿತಿರುವರು. ಅಂತೆಯೇ ಅವರು ಕನ್ನಡದ ಬಗ್ಗೆ ಹುರುಪಿನಿಂದ ಮುಂದೆ ಬಂದಿರುವರು. ಇಲ್ಲಿಯ ಮರಾಠಿ ಶಾಲೆಯಲ್ಲಿ ದುಡಿಯುತ್ತಿರುವ ಶಿಕ್ಷಕರ ಮನೆ ಮಾತು ಕನ್ನಡ; ಈಗ್ಗೂ ಕನ್ನಡವನ್ನೇ ಆಡುತ್ತಿರುವರು. ಕನ್ನಡ ಮುಲ್ಕೀ ಪರೀಕ್ಷೆಗೆ ಕುಳಿತು ಕೆಲವರು ತೇರ್ಗಡೆ ಹೊಂದಿರುವರು.

ಸರ್ಕಾರದವರ ಮೇಲಿನ ಧೋರಣವನ್ನು ನೋಡಿ ಈ ಗ್ರಾಮದ ಜನರು ಉತ್ಸಾಹಗೊಂಡು ತಮ್ಮ ಊರಲ್ಲಿದ್ದ ಮರಾಠಿ ಶಾಲೆಯನ್ನು ತೆಗೆದು ಅಲ್ಲಿ ಕನ್ನಡ ಶಾಲೆಯನ್ನು ಆರಂಭಿಸಬೇಕೆಂದು ಕೇಳಿಕೊಂಡರು. ಅವರ ಈ ಬೇಡಿಕೆ ಸಮಂಜಸವಾದುದೆಂದು ತಿಳಿದು ಸರ್ಕಾರದವರು ಕನ್ನಡ ಶಾಲೆಯನ್ನು ಆರಂಭಿಸಿ ಮರಾಠಿ ಶಾಲೆಯಲ್ಲಿಯ ಒಂದೊಂದೇ ವರ್ಗವನ್ನು ಕಡಿಮೆ ಮಾಡುವ ಧೋರಣೆಯನ್ನು ಪುರಸ್ಕರಿಸಿದರು. ಅದರ ಫಲವಾಗಿ ಈಗ ಒಳಸಂಗದಲ್ಲಿ ಕನ್ನಡ ಶಾಲೆ ಬೆಳೆಯುತ್ತ ಬಂದಿದೆ. ಶ್ರೀ. ಖೇರರ ಕೈಯಿಂದಲೇ ಆ ಶಾಲೆಯ ಆರಂಭೋತ್ಸವ ಜರುಗಿತು. ಸರಕಾರದವರು ಕೈಕೊಂಡ ಈ ಧೋರಣವು ಉಳಿದ ೭೯ ಹಳ್ಳಿಗಳ ವಿಷಯದಲ್ಲಿ ಅನುಸರಿಸಲ್ಪಡುವದೆಂದು ಎಲ್ಲರೂ ನಂಬಿದ್ದರು. ಆದರೆ ದುರ್ದೈವದಿಂದ ಕಾಂಗ್ರೆಸ್ ಮಂತ್ರಿಮಂಡಲ ಅಧಿಕಾರತ್ಯಾಗ ಮಾಡಿದ ಕೂಡಲೆ ಈಗಿನ ಸರಕಾರದವರು ಆ ನೀತಿಯನ್ನು ಮುಂದರಿಸಲಿಲ್ಲ. ಹಳ್ಳಿಗಳ ಜನರು ಕನ್ನಡ ಶಾಲೆಗಳು ಬೇಕೆಂದು ಕೇಳಿದರೆ ಕೊಡುವ ವಿಚಾರವನ್ನು ಮಾಡಲು ಬಂದೀತು ಎಂಬ ಧೋರಣೆಯ ಮಾತನ್ನಾಡಲಾರಂಭಿಸಿದರು. ಆದರಿಂದ ಜನರಲ್ಲಿಯ ಹುರುಪು ಕುಗ್ಗುತ್ತ ಬಂದು ಈಗ ಒಳಸಂಗದವರಿಗೂ ಸಹ ತಾವು ಮಾಡಿದ ಕೆಲಸ ಸರಿಯಾಯಿತೋ ಇಲ್ಲವೊ ಎಂಬ ಶಂಕೆ ಬಾಧಿಸಹತ್ತಿದೆ. ಈ ಮನೋವೃತ್ತಿ ಬಲಿಯುತ್ತ ನಡೆದರೆ ಇಷ್ಟು ದಿವಸಗಳ ವರೆಗೆ ಮಾಡಿದ ಪ್ರಯೋಗವೆಲ್ಲ ನೀರಿನಲ್ಲಿ ಹೋಮ ಮಾಡಿದಂತೆ ನಿರರ್ಥಕವಾಗುವದಲ್ಲದೆ ಕನ್ನಡದ ಪುನರುಜ್ಜೀವನಕ್ಕೆ ಒಂದು ದೊಡ್ಡ ಏಟು ಬಿದ್ದಂತಾಗುವದು."

ಶ್ರೀಮಾನ್ ನಾಯಕ ವೆಂಕಟರಾಯರು ಕನ್ನಡದ ಸೊಲ್ಲಾಪುರ ಗಡಿಯತ್ತಣ ಪರಿಸ್ಥಿತಿಯನ್ನು ಮೇಲ್ಕಂಡಂತೆ ಚಿತ್ರಿಸಿದ್ದಾರೆ. ಸಮಸ್ಯೆ ಕಣ್ಣಿಗೆ ಕಟ್ಟಿದಂತಿದೆ. ಒಳಸಂಗದಲ್ಲಿ ಸಾರ್ಥಕವಾಗಿ ಕಂಡ ಪ್ರಯೋಗ ನೆರೆಯ ಕನ್ನಡ ಹಳ್ಳಿಗಳಿಗೆಲ್ಲ ಹರಡಬೇಕು. ಆ ಭಾಗದ ಪ್ರಮುಖ ಕನ್ನಡಿಗರು ತಮ್ಮ ಕನ್ನಡದ ಪ್ರೇಮವನ್ನೂ ಹುರುಪನ್ನೂ ದೃಢಪಡಿಸಿಕೊಂಡು ಜಾಗ್ರತೆಯಾಗಿ ಕಾರ್ಯೋನ್ಮುಖರಾಗಬೇಕೆಂದು ಆಗ್ರಹಪೂರ್ವಕವಾಗಿ ಸೂಚಿಸಲಿಚ್ಛಿಸುತ್ತೇವೆ. ಈ ವಿಷಯದಲ್ಲಿ ಪರಿಷತ್ತು ತನ್ನ ಕೈಯಲ್ಲಾಗುವ ಸಹಾಯವನ್ನು ಮಾಡಲು ಸಿದ್ಧವಾಗಿದೆ.

---

## ಕನ್ನಡದಲ್ಲಿ ಉಪಯುಕ್ತ ವಾಙ್ಮಯ

(ಲೇಖಕರು: ಶ್ರೀ. ಹಳಪೇಟಿ ಚಿಂತಾಮಣಿರಾಯರು, ಧಾರವಾಡ)

ಸಾಹಿತ್ಯ (ವಾಙ್ಮಯ) ದಲ್ಲಿ ಆದರ್ಶ, ವಾಸ್ತವ, ಉಪಯುಕ್ತ ಎಂದು ಭೇದಗಳನ್ನು ಕಲ್ಪಿಸುವದಾದರೆ, ಉಪಯುಕ್ತ ವಾಙ್ಮಯ ಕನ್ನಡಕ್ಕೆ ಇಂದು ಹೆಚ್ಚು ಅವಶ್ಯವಾಗಿದೆ. ಅಲ್ಲದೆ ಅದರ ಕಡೆ ವಿಶೇಷವಾಗಿ ಲಕ್ಷ್ಯ ಕೊಡುವ ಕಾಲ ಈಗ ಬಂದಿದೆ ಎಂದು ಹೇಳಿದರೆ ಅತಿಶಯೋಕ್ತಿಯಲ್ಲ. ಈ ಕಾರ್ಯವನ್ನು ನೆರೆ ಪ್ರಾಂತಗಳು, ಪರಪ್ರಾಂತಗಳು ಮಾಡುತ್ತಿವೆ ಎಂದು ನಾವು ಮಾಡಬೇಕಿಲ್ಲ. ಕನ್ನಡಿಗರ ಜೀವನಕ್ಕಿದು ಅವಶ್ಯವೆಂಬ ಮಾತನ್ನು ತಿಳಿದಾದರೂ ತಜ್ಞ ಸಾಹಿತಿಗಳ (ಯಾವ ವಿಚಾರವನ್ನೂ ಲಿಪಿಬದ್ಧಗೊಳಿಸುವ ಕ್ರಮವರಿತವರ) ಲಕ್ಷ್ಯ ಇತ್ತ ಹೊರಳಬಾರದೇ? ಇಲ್ಲಿ ಜೀವನಕ್ಕುಪಯುಕ್ತ ಉದ್ಯಮಗಳ ವಾಙ್ಮಯವೆಂದು ಸಾಹಿತ್ಯದ ವ್ಯಾಖ್ಯವನ್ನು ಸಂಕುಚಿತಗೊಳಿಸಿಕೊಂಡಿದ್ದೇನೆ ಇರಲಿ.

ಕಮಲ ಪುಷ್ಪ, ಜೊಗಚಿಯ ಹೂ ಎರಡನ್ನೂ ಎದುರಿಗೆ ಇಟ್ಟಾಗ, ಕಮಲದ ಕೋಮಲತೆ ಯಾವನನ್ನೂ ಮೋಹಿಸಬಹುದು. ಅವನ ಹೊಟ್ಟೆಯಲ್ಲಿಯೇ ಕಲಮಲವೆದ್ದಾಗ ಪಲ್ಲೆಗಾದರೂ ಉಪಯೋಗವಾಗುವ ಜೊಗಚಿಯ ಹೂವೇ ಆಕರ್ಷಿಸಬಹುದಲ್ಲವೇ? ವಸ್ತುಗಳ ಬೆಲೆಯನ್ನು ಆವಶ್ಯಕತೆ ನಿರ್ಣಯಿಸುವಂತೆ, ಬದುಕುವದಕ್ಕಾಗಿ ಬೇಕಾಗುವ ಸಾಹಿತ್ಯ ಈಗ ಕನ್ನಡ ನಾಡಿಗೆ ಹೆಚ್ಚು ಅಗತ್ಯವಾಗಿಲ್ಲವೇ? ನಾವು ಒಳ್ಳೆಯದಾಗಿ ಬದುಕಿದಾಗ ಇನ್ನುಳಿದ ಸಾಹಿತ್ಯಗಳು ಅಂದವಾಗಿ ಬೆಳೆಯಬಹುದಲ್ಲವೇ? ಬರಿಯ ಜ್ಞಾನದ ಜಂಬವನ್ನು ಕೊಚ್ಚುತ್ತ ಕುಳಿತರೆ, ಕೋಡುಗಳ ಸೌಂದರ್ಯದ ಮಬ್ಬಿನಲ್ಲಿ ಕಾಲುಗಳನ್ನು ಹೀಗಳೆದ ಸಾರಂಗ, ಬೇಟೆಗಾರರು ಬಂದಾಗ ಒದ್ದಾಡಿದಂತೆ ಕನ್ನಡಿಗರ ಗತಿಯಾಗಬಾರದಷ್ಟೆ?

ಆ ಸಾರಂಗ ತನ್ನ ಕಾಲ್ಗಳನ್ನು ಹೀಗಳೆದಂತೆ ಯಾಕೋ! ನಮ್ಮಲ್ಲಿ ಬದುಕುವದಕ್ಕಾಗಿ – ಒಳ್ಳೆಯದಾಗಿ ಬದುಕುವದಕ್ಕಾಗಿ – ಬೇಕಾಗುವ ಉದ್ಯಮ ವ್ಯವಸಾಯಗಳನ್ನು ಹೀನವಾಗಿ ಕಾಣುವ ದುಷ್ಟ ರೂಢಿ ಬಿದ್ದುಬಿಟ್ಟಿದೆ. ಅಂತೆಯೇ ಅದರ ಸಾಹಿತ್ಯ ಕನ್ನಡದಲ್ಲಿ ಆಗಿಲ್ಲದಿರಬಹುದು. ಅದನ್ನು ಹೇಗಾದರೂ ತುಂಬಿಕೊಳ್ಳೋಣ ಎಂದರೆ, ಉದ್ಯಮ ವ್ಯವಸಾಯಿಗಳಿಗೆ ಸಾಹಿತ್ಯ ಜ್ಞಾನವೇ ಸಾಧ್ಯವಿಲ್ಲ ಎನ್ನುವ ಹೀನ ಪ್ರಚಾರ ಕೆಲವರಿಂದ ತಿಳಿದೋ, ತಿಳಿಯದೆಯೋ ನಡೆದಿರುವದನ್ನು ನೋಡಿದರೆ ಆಶ್ಚರ್ಯವೆನಿಸುತ್ತಲ್ಲದೆ ಅವರ ಅಜ್ಞಾನದ ಬಗ್ಗೆ ಕರುಣೆ ಬರುತ್ತದೆ.

ಒಂದು ಸಣ್ಣ ಮಾತನ್ನು ಹೇಳಬೇಕೆಂದರೆ, ಚಿಪ್ಪಿಗನಂಗಡಿಗೆ ಭೇಟಿ ಕೊಡದ ತಜ್ಞ ಸಾಹಿತಿ ಯಾರು? ಅವನ ಬಗ್ಗೆ ಈವರೆಗೆ ಯಾರಾದರೂ ವಿಚಾರ ಮಾಡಿದ್ದಾರೆಯೇ? ಅವನ ತಡೆ, ತೊಂದರೆಗಳನ್ನು ನಿವಾರಿಸುವಲ್ಲಿ ತಮ್ಮದೇನಾದರೂ ಸಹಾಯ ಶಕ್ಯವಿದೆ ಎಂಬ ಕಲ್ಪನೆ ತಪ್ಪಿಯಾದರೂ ಬಂದಿದೆಯೇ? ಜರ್ಮನಿಯ ವಾಂಪೆನ್ನನೆಂಬ ಗಣಿತಜ್ಞನು ಸೂಚಿಶಿಲ್ಪಕಲೆಯ ಶಾಸ್ತ್ರ ಬರೆದಿದ್ದಾನೆಂದು ಹೇಳಿದರೆ ನಮ್ಮಲ್ಲಿಯ ಅನೇಕ ಕಲಾತಜ್ಞರಿಗೆ ಆಶ್ಚರ್ಯವಾಗಬಹುದು.

ಉದ್ಯಮ ವ್ಯವಸಾಯಗಳು ನಾಡಿನಲ್ಲಿ ಬೆಳೆದು ನಿಲ್ಲಬೇಕು. ಆನಂತರ ಅವುಗಳ ಸಾಹಿತ್ಯ ಬೆಳೆಯಬಹುದೆಂದು ಸಾಹಿತಿಗಳು ಹೇಳಿದರೆ, ಅವುಗಳ ಸಾಹಿತ್ಯ ಬೆಳೆದು ನಿಂತಾಗ ಸುಶಿಕ್ಷಿತರೆಂದು

ಹೇಳಿಸಿಕೊಳ್ಳುವವರ ಲಕ್ಷ್ಯ ಆ ಕಡೆಗೆ ಹೊರಳಿ ವ್ಯವಸಾಯ ಉದ್ಯಮಗಳು ವೃದ್ಧಿಹೊಂದಬಹುದೆಂದು ಉದ್ಯಮಿಗಳು ಹೇಳಬಹುದು. ನಿಜವಾದ ಮಾತೆಂದರೆ ಕೋಡುಗಳಂತೆಯೇ– ಏಕೆ, ಅದಕ್ಕೂ ಹೆಚ್ಚಾಗಿ– ಕಾಲುಗಳ ಬೆಲೆ ಕೂಡ ಇದೆಯಾಗಿ ಯಾರಾದರೂ ತಿಳಿಸಿಕೊಟ್ಟರೆ ಕೋಡಿನ ಸೌಂದರ್ಯದಲ್ಲಿ ಪಡೆದ ಆನಂದವನ್ನೇ ಕಾಲಿನ ಉಪಯುಕ್ತತೆಯಲ್ಲಿಯೂ ಆ ಸಾರಂಗ ಪಡೆಯಬಹುದು. ತಲೆಗೆಲಸದ ಹೆಮ್ಮೆಯಲ್ಲಿ ಕೈ ಕೆಲಸವನ್ನು ಕಡೆಗಾಣುವದು ಸಮಂಜಸವಲ್ಲ ಎಂಬ ಕಲ್ಪನೆಯನ್ನು ಜನತೆಗೆ ಸಾಹಿತಿಗಳು ತೋರಿಸಿಕೊಟ್ಟರೆ ಕನ್ನಡ ಕುಲ ಉಳಿಯುವುದು; ಜನದ ಬದುಕು ಸಂಪದ್ಯುಕ್ತವಾಗುವುದು.

ಈ ವಿಷಯದಲ್ಲಿ ಭಾರತಕ್ಕೆ ಉದ್ಯಮ ವ್ಯವಸಾಯಗಳಲ್ಲಿ ಆದರ್ಶವಾಗಿ ನಿಂತ ಮೈಸೂರು ಕರ್ನಾಟಕದ ಪ್ರಜೆಗಳು ಬ್ರಿಟಿಷ್ ಕರ್ನಾಟಕದವರಿಗಿಂತ ಸುದೈವಿಗಳೆಂದು ಹೇಳಬಹುದು. ಅವರನ್ನಾಳ್ವ ಮಹಾರಾಜರವರ ಕೃಪೆಯಿಂದ ನಮಗಿಂತಲೂ ಹೆಚ್ಚು ಉದ್ಯಮ ಶಿಕ್ಷಣ ಅವರಿಗೆ ಸಿಕ್ಕುತ್ತಿದೆ ಎಂದು ಹೇಳುವದಕ್ಕೆ ಆನಂದದೊಂದಿಗೆ ಅಭಿಮಾನವೆನ್ನಿಸುತ್ತಿದೆ. ಅಲ್ಲಿನವರಿಗೆ ಉಳಿದಿರುವ ಕೆಲಸವೆಂದರೆ ಬೆಳೆದು ನಿಲ್ಲುತ್ತಿರುವ ಉದ್ಯಮಗಳ ಶಾಸ್ತ್ರೀಯ ಸಾಹಿತ್ಯವನ್ನು ನಿರ್ಮಿಸುವದಷ್ಟೇ. ಬ್ರಿಟಿಷ್ ಕನ್ನಡಿಗರಿಗೆ ಹಾಗಿಲ್ಲ. ವ್ಯವಸಾಯ ಉದ್ಯಮಗಳ ಬೆಳವಣಿಗೆಯ ಕಡೆಗೆ ಬೆಂಬಲ ಕೊಡುತ್ತ ಅದರ ಸಂಗಡವೇ ಬೆಳೆಯಬಹುದಾದವುಗಳ ಶಾಸ್ತ್ರೀಯ ಸಾಹಿತ್ಯವನ್ನು ನಿರ್ಮಿಸುವ ಜೋಡು ಹೊಣೆ ಇದೆ. ಈ ಎರಡೂ ಕಾರ್ಯಗಳು ಇಲ್ಲಿ ಆಗಬೇಕಾಗಿವೆ ಎನ್ನುವದಕ್ಕೆ ಇನ್ನೇನೂ ಉದಾಹರಣೆ ಬೇಡ. ಅಖಿಲಭಾರತ ವಣಿಕ್ ಸಂಘ, ವಣಿಕ್ ಹಾಗೂ ಉದ್ಯಮ ಸಂಘ (ಚೇಂಬರ್ ಆಫ್ ಕಾಮರ್ಸ್ ಅಂಡ್ ಇಂಡಸ್ಟ್ರಿ) ಆಗಿರುವಾಗ ಅಖಿಲ ಕನ್ನಡ ವಣಿಕ್ ಸಂಘ ಕೇವಲ ವಣಿಕ್ ಸಂಘವಾಗಿಯೇ ಉಳಿದಿದೆ ಎಂಬ ಮಾತೇ ಸಾಕು. ಆದುದರಿಂದ ದಯವಿಟ್ಟು ಕನ್ನಡ ತಜ್ಞ ಸಾಹಿತಿಗಳು, ಸುಜ್ಞ ಪತ್ರಿಕೆಗಳು ಬೇಟೆಗಾರರು ಬರುವ ಪೂರ್ವದಲ್ಲಿಯೇ ಕನ್ನಡ ಸಾರಂಗಕ್ಕೆ ಸ್ವರೂಪ ಜ್ಞಾನ ತಂದುಕೊಡುವರೆಂದು ನಂಬಬಹುದೇ ?

---

## ವಿಮರ್ಶೆ

**ಮೈಸೂರು ಮಹನೀಯರು:** 'ಕಥಾ ಚಂದ್ರಿಕೆ'ಯ ವಾರ್ಷಿಕ ಸಂಚಿಕೆ. ಸಂಪಾದಕರು: ಶ್ರೀ. ಜಿ. ಎಸ್. ಕೃಷ್ಣರಾಯರು. ಬೆಲೆ ಆರಾಣೆ.

ಮಾನವನಲ್ಲಿ ಅಡಗಿರುವ ಪ್ರತಿಭೆ ತಕ್ಕ ಸನ್ನಿವೇಶ ಒದಗಿದಾಗ ಸತ್ವಯುತವಾದ ಕೃತಿಗಳಾಗಿ ಪ್ರಕಾಶಗೊಂಡು ಅದು ಹಲವರಿಗೆ ಜೀವನದ ಆದರ್ಶವಾಗುವುದೆಂಬ ವಿಷಯವನ್ನು ಈ ಗ್ರಂಥದ ಲೇಖಕರು ಕನ್ನಡಿಯಂತೆ ಚೆನ್ನಾಗಿ ಪ್ರತಿಬಿಂಬಿಸಿದ್ದಾರೆ. ದಿವಂಗತ 'ತಾತಯ್ಯ' (ಶ್ರೀ. ಎಂ. ವೆಂಕಟಕೃಷ್ಣಯ್ಯ)ನವರು ಅಪಾರ ದಯಾಶೀಲರು; ವಿಶ್ವಕುಟುಂಬಿಗಳು. ರಾಜಕೀಯದಲ್ಲಿಯೂ ವಿದ್ಯಾಭಿವೃದ್ಧಿಯ ಕಾರ್ಯದಲ್ಲಿಯೂ, ಸ್ವದೇಶ ಪ್ರೇಮದಲ್ಲಿಯೂ ಸಾಟಿಯಿಲ್ಲದವರು. ಕನ್ನಡ ಜನರ ಏಳಿಗೆಗಾಗಿ ತಮ್ಮ ಜೀವನವನ್ನೇ ಧಾರೆಯೆರೆದವರು. ದಿವಂಗತ ನಾಟಕ ಶಿರೋಮಣಿ ಶ್ರೀ ಎ. ವಿ. ವರದಾಚಾರ್ಯರಾದರೋ ಹುಟ್ಟುಕಲಾವಿದರು. ಅಲ್ಲದೆ, ಅನುಪಮ ಕರುಣಾಹೃದಯರು, ದಾನಶೂರರು ಮಾತ್ರವಲ್ಲದೆ, ಕನ್ನಡ ರಂಗಭೂಮಿಯ ಮೇಲ್ಮೆಗಾಗಿ ತಮ್ಮ ಜೀವನವನ್ನೇ ಸವೆಯಿಸಿದ ಮಹಾನುಭಾವರು. ಈ ಅಮೂಲ್ಯ ಗ್ರಂಥವನ್ನು ಪ್ರಕಟಿಸುವ ಮೂಲಕ ಕಥಾ ಚಂದ್ರಿಕೆಯ ಸಂಪಾದಕರು ಮೈಸೂರಿನ ಈ ಇಬ್ಬರು ಮಹನೀಯರಿಗೆ ಗ್ರಂಥರೂಪವಾಗಿ ತಕ್ಕ ಕೃತಜ್ಞತೆಯನ್ನು ಸಲ್ಲಿಸಿರುವರು. ಇದೇ ರೀತಿಯಲ್ಲಿ ಇತರ ಮಹನೀಯರನೇಕರ ಜೀವನ ಚರಿತ್ರೆಗಳನ್ನು ಪ್ರಕಟಿಸುವುದು ಒಳ್ಳೆಯದು. ಎಲ್ಲರೂ ಓದಬೇಕಾದ ಗ್ರಂಥವಿದು. ಆಚಾರ್ಯರ 'ಅಚ್ಚುಮೆಚ್ಚಿನ ಗೀತ'ಗಳನ್ನು ಈಗ ಕೊಟ್ಟಿರುವಂತೆ ಸ್ವರಪ್ರಸ್ತಾರದೊಂದಿಗೆ ಪ್ರಕಟಿಸದೆ ಇದ್ದಿದ್ದರೂ ಗ್ರಂಥಕ್ಕೆ ಕುಂದೇನೂ ಉಂಟಾಗುತ್ತಿರಲಿಲ್ಲ.

—'ರಾ.'

**ಕೈವಲ್ಯ ದರ್ಪಣ:** ಶ್ರೀಮನ್ನಿರಂಜನ ಮಹಂತಲಿಂಗ ಮಹಾಶಿವಯೋಗಿ ವಿರಚಿತ. ಸಂಪಾದಕರು: ಪ್ರೊ. ಶಿ. ಶಿ. ಬಸವನಾಳ, ಎಂ.ಎ., ಪ್ರಕಾಶಕರು: ಶ್ರೀ. ಮ. ನಿ. ಪ್ರ. ಮೃತ್ಯುಂಜಯ ಮಹಾಸ್ವಾಮಿಗಳು, ಮುರುಘಾ ಮಠ, ಹಾವೇರಿ ಪೇಟೆ, ಧಾರವಾಡ. ಕ್ರೌನ್ ಅಷ್ಟಪತ್ರ ೧೬೫ ಪುಟಗಳು, ಬೆಲೆ ೧-೪-೦.

ಇದರಲ್ಲಿ ಶ್ರೀ ಮಹಂತಲಿಂಗ ಶಿವಯೋಗಿಗಳಿಂದ (ಕಾಲ: ೧೮೨೩–೧೮೫೯) ಹರಿದಾಸರ ಕೃತಿಗಳಂತೆ ಇಲ್ಲಿ ವಿವಿಧ ರಾಗ, ತಾಳ, ಛಂದಸ್ಸುಗಳಲ್ಲಿ ರಚಿತವಾದ ೧೪೧ ಸಂಗೀತ ಕೃತಿಗಳಿವೆ. ಜನಸಾಮಾನ್ಯರೆಲ್ಲರಿಗೂ ಅರ್ಥವಾಗುವಂತೆ ಸರಳವಾದ ಶೈಲಿಯಲ್ಲಿ ಭಕ್ತಿ ಜ್ಞಾನ ವೈರಾಗ್ಯಗಳನ್ನು ವಿವರಿಸಿದೆ. ಮೈಸೂರೊಡೆಯರು ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರಿಗೆ ಈ ಶಿವಯೋಗಿಗಳು ದರ್ಶನವಿತ್ತು ನೀತಿ ಬೋಧೆ ಮಾಡಿದರೆಂದು ತಿಳಿದುಬರುತ್ತದೆ.

---

## ಮಂಕುತಿಮ್ಮನ ಕಗ್ಗ*

ಹುಲ್ಲಾಗು ಬೆಟ್ಟದಡಿ, ಮನೆಗೆ ಮಲ್ಲಿಗೆಯಾಗು
ಕಲ್ಲಾಗು ಕಷ್ಟಗಳ ಮಳೆಯ ವಿಧಿ ಸುರಿಯೆ ।
ಬೆಲ್ಲ ಸಕ್ಕರೆಯಾಗು ದೀನದುರ್ಬಲರಿಂಗೆ
ಎಲ್ಲರೊಳಗೊಂದಾಗು – ಮಂಕುತಿಮ್ಮ ॥ ೧ ॥

ಏನನಾನಂ ಮಾಡು ಕೈಗೆ ದೊರೆತುಜ್ಜುಗವ
ನಾನೇನು ಹುಲುಕಡ್ಡಿಯೆಂಬ ನುಡಿ ಬೇಡ ।
ಹೀನಮಾವುದುಮಿಲ್ಲ ಜಗದ ಗುಡಿಯೊಳಗದಿ
ತಾಣ ನಿನಗಿಹುದಲ್ಲಿ – ಮಂಕುತಿಮ್ಮ ॥ ೨ ॥

ರಣದಿ ಬಿದ್ದಾ ಸೈನ್ಯಪತಿ ಸಿಡ್ನಿ ಯುತ್ಕ್ರಮಣ
ದೊಣಗು ಬಾಯಿಗೆ ನೀರನೊಡ್ಡಲ್ ಅದನವನು ।
ತನಗಿಂತ ಕೆಲದ ಭಟನಿಗದು ಸಲ್ವುದೆಂದಿತ್ತು
ತಣಿವನಾಂತುದ ನೆನೆಯೊ – ಮಂಕುತಿಮ್ಮ ॥ ೩ ॥

ಹೃದಯಜೀವನಕಿನಿತು ಬೆಲೆಯಿರದೆ? ಫಲವಿರದೆ?
ಮಧುರ ಭಾವ ಪ್ರೇಮ ದಯೆಯೆಲ್ಲ ಬರಿದೆ? ।
ವಿಧಿಯಂಗಡಿಯೊಳದನು ಕಸವೆಂದು ತಳ್ಳುವೊಡೆ
ಬದುಕಿನಲಿ ತಿರುಳೇನು? – ಮಂಕುತಿಮ್ಮ ॥ ೪ ॥

ಆಗುಂಬೆಯಸ್ತಮಯ ದ್ರೋಣಪರ್ವತದುದಯ
ತ್ಯಾಗರಾಜನ ಗಾನ ವಾಲ್ಮೀಕಿ ಕವನ ।
ಆಗಿಸವೆ ತಾವಿವೆಮ್ಮಂತರಂಗದಿ ಸತ್ಯ
ಯೋಗ ಪುಲಕಾಂಕುರವ? – ಮಂಕುತಿಮ್ಮ ॥ ೫ ॥

ಗ್ರೀಸಿನಾ ಕಬ್ಬಗಳನೋದುವರು ದೆಹಲಿಯಲಿ
ಕಾಶಿಯಾ ಶಾಸ್ತ್ರಗಳನಾಕ್ಸ್‌ಫರ್ಡಿನವರು ।
ದೇಶ ಕಾಲ ವಿಭಾಗ ಮನದ ರಾಜ್ಯದೊಳಿರದು
ಶ್ವಾಸವದು ಬೊಮ್ಮನದು – ಮಂಕುತಿಮ್ಮ ॥ ೬ ॥

ಕಟ್ಟಡದ ಪರಿಯನಿಟ್ಟಿಗೆಯೆಂತು ಕಂಡೀತು ?
ಗಟ್ಟನಿಲದದುಬೀಳೆ, ಗೋಡೆ ಬಿರಿಯುವುದು ।
ಸೃಷ್ಟಿ ಕೋಟೆಯಲಿ ನೀನೊಂದಿಟಿಕೆ ; ಸೊಟ್ಟಾಗೆ
ಪೆಟ್ಟು ತಿನ್ನುವೆ ಜೋಕೆ – ಮಂಕುತಿಮ್ಮ ॥ ೭ ॥

ಹೊಸ ಚಿಗುರು ಹಳೆಬೇರು ಕೂಡಿರಲು ಮರಸೊಬಗು
ಹೊಸಯುಕ್ತಿ ಹಳೆತತ್ತ್ವದೊಡಗೂಡೆ ಧರ್ಮ ।
ಋಷಿವಾಕ್ಯದೊಡನೆ ವಿಜ್ಞಾನ ಕಲೆ ಮೇಳವಿಸೆ
ಜಸವು ಜನಜೀವನಕೆ – ಮಂಕುತಿಮ್ಮ ॥ ೮ ॥

ಪುಸ್ತಕದಿ ದೊರೆತರಿವು ಮಸ್ತಕದಿ ತಳೆದ ಮಣಿ
ಚಿತ್ತದೊಳು ಬೆಳೆದರಿವು ತರು ತಳೆದ ಪುಷ್ಪ ।
ವಸ್ತು ಸಾಕ್ಷಾತ್ಕಾರವಂತರೀಕ್ಷಣೆಯಿಂದ
ಶಾಸ್ತ್ರಿತನದಿಂದಲ್ಲ – ಮಂಕುತಿಮ್ಮ ॥ ೯ ॥

---

* ಸಂಪಾದಕರು: ಶ್ರೀ. ಡಿ. ವಿ. ಗುಂಡಪ್ಪನವರು. ಪ್ರಕಾಶಕರು: ಕರ್ನಾಟಕ ಪ್ರಕಟನಾಲಯ, ಕೋಟೆ, ಬೆಂಗಳೂರು. "ವಿಶದಮಾದೊಂದು ಜೀವನಧರ್ಮ ದರ್ಶನವ . . . . . ಪಾಮರ ಜನದ ಮಾತಿನಲ್ಲಿ ಹವಣಿಸಿರುವ" ೯೪೫ ಪದ್ಯಗಳನ್ನು ಒಳಗೊಂಡ ೨೧೬ ಪುಟಗಳ ಪುಸ್ತಕ ಈ ವಾರದಲ್ಲಿ ಪ್ರಕಟವಾಯಿತು. ಬೆಲೆ ೧೨ ಆಣೆ.

## ಪರಿಷತ್ತಿನ ಸುದ್ದಿ

### ರಾಜಸೇವಾಸಕ್ತ ಶ್ರೀ. ಬೆಳ್ಳಾವೆ ವೆಂಕಟನಾರಾಯಣಪ್ಪನವರ ಸ್ಮಾರಕ ಉಪನ್ಯಾಸ ನಿಧಿ

ಮೇಲ್ಕಂಡ ನಿಧಿಗೆ ಇದುವರೆಗೆ ಬಂದಿರುವ ದ್ರವ್ಯಸಹಾಯವನ್ನು ಪರಿಷತ್ತು ಕೃತಜ್ಞತೆಯಿಂದ ಸ್ವೀಕರಿಸಿದೆ.

ಶ್ರೀ.ಗಳಾದ

| | | | | |
|---|---|---|---|---|
| ೧. | ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯನವರು | ೨೫೦ | ೦ | ೦ |
| ೨. | ರಾಜಸೇವಾಪ್ರಸಕ್ತ ಮಾಸ್ತಿ ವೆಂಕಟೇಶ ಅಯ್ಯಂಗಾರರು | ೧೦೦ | ೦ | ೦ |
| ೩. | ಶ್ರೀಮತಿ ಡಿ. ಚಂಪಾಬಾಯಿ ಅವರು | ೧೦೦ | ೦ | ೦ |
| ೪. | ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರು | ೧೦೦ | ೦ | ೦ |
| ೫. | ಕರ್ನಾಟಕ ಸಂಘ, ಸೆಂಟ್ರಲ್ ಕಾಲೇಜು, ಬೆಂಗಳೂರು | ೫೦ | ೦ | ೦ |
| ೬. | ರಾಜಸೇವಾಸಕ್ತ ಡಾ. ಬಿ. ಕೆ. ನಾರಾಯಣರಾಯರು | ೨೫ | ೦ | ೦ |
| ೭. | ಡಿ. ವಿ. ಗುಂಡಪ್ಪನವರು | ೧೦ | ೦ | ೦ |
| ೮. | ಎಂ. ವಾಸುದೇವ ಮೂರ್ತಿಗಳು | ೧೦ | ೦ | ೦ |
| ೯. | ದೇಶೀಯ ವಿದ್ಯಾಶಾಲೆಯ ಉಪಾಧ್ಯಾಯರುಗಳು | ೧೦ | ೦ | ೦ |
| ೧೦. | ಜ. ಚ. ಅಬಕಾರ ಅವರು, ಬನಹಟ್ಟಿ | ೧೦ | ೦ | ೦ |
| ೧೧. | ಕ. ವೆಂ. ರಾಘವಾಚಾರ್ಯರು | ೧೦ | ೦ | ೦ |
| ೧೨. | ಎಂ. ವಿ. ಸೀತಾರಾಮಯ್ಯನವರು | ೧೦ | ೦ | ೦ |
| ೧೩. | ತೀ. ನಂ. ಶ್ರೀಕಂಠಯ್ಯನವರು | ೧೦ | ೦ | ೦ |
| ೧೪. | ಡಿ. ಕೆ. ಭಾರದ್ವಾಜರು | ೫ | ೦ | ೦ |
| ೧೫. | ಎಚ್. ಸುಬ್ಬಾಜೋಯಿಸ್ ಅವರು | ೫ | ೦ | ೦ |
| ೧೬. | ವಿ. ನಾರಾಯಣರಾಯರು, ಉರಿಗಾಂ | ೫ | ೦ | ೦ |
| ೧೭. | ಲಕ್ಕಯ್ಯನವರು | ೫ | ೦ | ೦ |
| ೧೮. | ಕರ್ನಾಟಕ ಸಂಘ, ಡಿ.ಎ.ವಿ. ಕಾಲೇಜು, ಸೊಲ್ಲಾಪುರ | ೫ | ೦ | ೦ |
| ೧೯. | ಮಾನ್ಯ ಮಹಿಳೆಯರು ಒಬ್ಬರು | ೫ | ೦ | ೦ |
| ೨೦. | ಎಂ. ಕೃಷ್ಣರಾಯರು | ೫ | ೦ | ೦ |
| ೨೧. | ಡಿ. ಆರ್. ರಾಮಯ್ಯನವರು | ೩ | ೦ | ೦ |
| ೨೨. | ಪಂಡಿತ ಎಚ್. ಹನುಮಂತರಾಯರು, ಕೋಲಾರ | ೩ | ೦ | ೦ |
| ೨೩. | ಸಿ. ಎನ್. ರಾಘವಾಚಾರ್ಯರು | ೨ | ೦ | ೦ |
| ೨೪. | ಶ್ರೀಮತಿ ಎ. ಶೇಷಮ್ಮನವರು | ೨ | ೦ | ೦ |
| ೨೫. | ಎಚ್. ಚೆನ್ನಕೇಶವ ಅಯ್ಯಂಗಾರ್ ಅವರು, ಮೈಸೂರು | ೨ | ೦ | ೦ |
| ೨೬. | ಎಂ. ಹರಿನಾರಾಯಣ ಅವರು | ೧ | ೦ | ೦ |
| ೨೭. | ದ. ರಾ. ಬೇಂದ್ರೆ ಅವರು, ಪುಣೆ | ೧ | ೦ | ೦ |
| ೨೮. | ಕೆ. ವೆಂಕಟರಾಮಯ್ಯನವರು | ೧ | ೦ | ೦ |
| | ಒಟ್ಟು | ೭೪೫ | ೦ | ೦ |

### ಪರಿಷತ್ತಿನ ಸದಸ್ಯರ ಬೆಳವಣಿಗೆ

**ಸಹಾಯಕ ಸದಸ್ಯರು (೧೦೦ ರೂ.) :** ಶ್ರೀಮಾನ್ ಸಿ. ಇ. ಸೂರ್ಯನಾರಾಯಣರಾಯರು, ಚಿನ್ನದ ಗಣಿಗಳ ನಿವೃತ್ತ ಛೀಫ್ ಇನ್ಸ್‌ಪೆಕ್ಟರು, ಶಂಕರಪುರ, ಬೆಂಗಳೂರು.

**ಸಾಮಾನ್ಯ ಸದಸ್ಯರು (೬ ರೂ.) :** ಶ್ರೀ. ಡಾಕ್ಟರ್ ಎಲ್. ಎಸ್. ದೊರೆಸ್ವಾಮಿ ಅವರು, ಎಂ.ಎಸ್‌ಸಿ., ಪಿಎಚ್.ಡಿ., ಬಸವನಗುಡಿ, ಬೆಂಗಳೂರು.

### ಮೈಸೂರು ಪ್ರಾಂತ ಸಮಿತಿ

**ತಾ|| ೨೮-೮-೧೯೪೩ನೆಯ ಶನಿವಾರ ಸಂಜೆ ೭ ಗಂಟೆಗೆ** ಪರಿಷನ್ಮಂದಿರದಲ್ಲಿ ಶ್ರೀ. ಬಿ. ಎಸ್. ರಾಮರಾವ್, ಬಿ.ಎ. ಅವರು, ಶ್ರೀ. ಟಿ. ಪಿ. ಕೈಲಾಸಂ ಅವರು ಬರೆದಿರುವ "**ಯೋಧ್ಧೃವಾಣಿ**" ಎಂಬ ನಾಟಕವನ್ನೂ ಇನ್ನೂ ಅಚ್ಚಾಗಿಲ್ಲದ ಅದರ ಮುಂದಿನ ಭಾಗವನ್ನೂ ಓದುವರು.

**ತಾ|| ೩೦-೮-೧೯೪೩ನೆಯ ಸೋಮವಾರ ಸಂಜೆ ೭ ಗಂಟೆಗೆ** ಪರಿಷನ್ಮಂದಿರದಲ್ಲಿ ಶ್ರೀ. ಎಂ. ಪಿ. ಎಲ್. ಶಾಸ್ತ್ರೀ, ಎಂ.ಎ. ಅವರು "**ಅಶ್ವಘೋಷನ ಕಾವ್ಯಗಳು**" ಎಂಬ ವಿಷಯವನ್ನು ಕುರಿತು ಭಾಷಣ ಮಾಡುವರು.

### ಮಹಿಳಾ ಶಾಖೆ

**ತಾ|| ೩೧-೮-೧೯೪೩ನೆಯ ಮಂಗಳವಾರ ಸಂಜೆ ೬-೩೦ ಗಂಟೆಗೆ** ಪರಿಷನ್ಮಂದಿರದಲ್ಲಿ ಶ್ರೀಮತಿ ಟಿ. ಎಸ್. ಚಿನ್ನಮ್ಮನವರಿಂದ **ಹಾಡುಗಾರಿಕೆ** ನಡೆಯುತ್ತದೆ.

## ಕನ್ನಡ ಸುದ್ದಿ

### ದೇವರಾಜ ಬಹದ್ದೂರ್ ಸಾಹಿತ್ಯ ನಿಧಿಯ ಬಹುಮಾನ ೧೯೪೩

೧. **ಮರಳಿ ಮಣ್ಣಿಗೆ** (ಶ್ರೀ. ಕೆ. ಶಿವರಾಮ ಕಾರಂತರು): ೪೦೦ ರೂ. ೨. **ಸಂತಾನ ಶಾಸ್ತ್ರ** (ಶ್ರೀ. ಬಿ. ಜಿ. ಎಲ್. ಸ್ವಾಮಿಯವರು, ಬಿ.ಎಸ್‌ಸಿ. [ಆನರ್ಸ್]): ೨೦೦ ರೂ. ೩. **ಸಂಸ್ಕೃತ ಕವಿ ಚರಿತ್ರೆ– ಭಾಗ ೩** (ಶ್ರೀ. ಎಂ. ಎನ್. ಶ್ರೀನಿವಾಸ ಅಯ್ಯಂಗಾರ್ ಅವರು): ೧೦೦ ರೂ.

ಮೊದಲನೆಯದು ಅಚ್ಚಾದದ್ದು– ಕಾದಂಬರಿ. ಮಿಕ್ಕ ಎರಡು ಹಸ್ತಪ್ರತಿಗಳು.

### ಕನ್ನಡ ಎಂ.ಎ. ಫಲಿತಾಂಶ

ಈಸಲ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಎಂ.ಎ. ಪರೀಕ್ಷೆಯಲ್ಲಿ ಶ್ರೀ.ಗಳಾದ ಜಿ. ವರದರಾಜಾರಾಯರು ಮೊದಲನೆಯ ತರಗತಿಯಲ್ಲಿಯೂ, ಜವರೇಗೌಡ ಅವರು ಮತ್ತು ಆರ್. ಎಸ್. ರಾಮರಾಯರು ಎರಡನೆಯ ತರಗತಿಯಲ್ಲಿಯೂ ತೇರ್ಗಡೆ ಹೊಂದಿರುತ್ತಾರೆ.

### ಕರ್ನಾಟಕ ಸಂಘ, ಕೊಪ್ಪಳ: ಸಾಹಿತ್ಯೋತ್ಸವ

**೨-೯-೪೩ ಗುರುವಾರ**

ಸಂಜೆ ೫ರಿಂದ ೬ ಪ್ರಶಸ್ತಿ ಪತ್ರಿಕಾ ಪ್ರದಾನ ಸಮಾರಂಭ. ೬ರಿಂದ ೭-೩೦ ಶ್ರೀ. ಮಾಸ್ತಿಯವರ ಭಾಷಣ— "ಕರ್ನಾಟಕ ಜನತೆಯ ಸಂಸ್ಕೃತಿ." ೭-೩೦ ರಿಂದ ೯ ಶ್ರೀ. ರಾಘವಾಚಾರ್ಯರ ಭಾಷಣ—"ಸಾಕ್ರಟೀಸನ ಜೀವನ."

**೪-೯-೪೩ ಶನಿವಾರ**

ಮಧ್ಯಾಹ್ನ ೩ರಿಂದ ೪ ಕಾರ್ಯಕರ್ತರ ಸಭೆ. ೪ರಿಂದ ೫ ಸ್ಥಳೀಯ ಸಂಸ್ಥೆಗಳಿಗೆ ಭೇಟಿ. ೫ರಿಂದ ೭. ಶ್ರೀ. ಮಾಸ್ತಿಯವರಿಗೆ ಮಾನಪತ್ರ ಕೊಡುವಿಕೆ; ಗಜಾನನ ಉತ್ಸವದ ಆಶ್ರಯದಲ್ಲಿ ಅವರ ಭಾಷಣ— "ಭಾರತೀಯ ಸಂಸ್ಕೃತಿಯ ಮುನ್ನೋಟ." ೭ರಿಂದ ೮-೩೦ ಶ್ರೀ. ಕೆ. ವಿ. ರಾಘವಾಚಾರ್ಯರ ಭಾಷಣ— "ಕನ್ನಡಿಗರ ಧರ್ಮದೃಷ್ಟಿ." ೮-೩೦ರಿಂದ ೯ ಶ್ರೀ. ಪದ್ಮನಾಭ ಪುರಾಣಿಕರ ಭಾಷಣ— "ಜೀವನದಲ್ಲಿ ವಿಜ್ಞಾನದ ಸ್ಥಾನ." ರಾತ್ರಿ ೧೦-೩೦ಕ್ಕೆ ನಾಟಕಗಳ ಸಂದರ್ಶನ.

**೫-೯-೪೩ ಭಾನುವಾರ**

ಬೆಳಗ್ಗೆ ೯ರಿಂದ ೧೧. ದಿವಂಗತರಾದ ನಾ. ಭಾ. ಶಾಸ್ತ್ರಿಗಳ ಸ್ಮಾರಕ ಉಪನ್ಯಾಸಮಾಲೆಯ ಪ್ರಾರಂಭ. ಶ್ರೀ. ಮಾಸ್ತಿಯವರ ಭಾಷಣ— "ಆದಿಕವಿ ವಾಲ್ಮೀಕಿ." ೧೧ರಿಂದ ೧೨ ಶ್ರೀ. ಕೆ. ವಿ. ರಾಘವಾಚಾರ್ಯರ ಭಾಷಣ— "ಪಂಪ ಭಾರತ." ಸಂಘದ ಅಧ್ಯಕ್ಷರಿಂದ ಧನ್ಯವಾದಗಳು.

### ವಿದ್ಯಾನಂದ ಗುರುಕುಲ, ಕುಕನೂರು

ಮೇಲ್ಕಂಡ ಸಂಸ್ಥೆಯ ೨೧ನೆಯ ವಾರ್ಷಿಕೋತ್ಸವ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ ಅಧ್ಯಕ್ಷತೆಯಲ್ಲಿ ೩-೯-೪೩ನೆಯ ಶುಕ್ರವಾರ ನಡೆಯುವದು.

### ಶ್ರೀಮಾನ್ ಎನ್. ಎಸ್. ಸುಬ್ಬರಾವ್ ಸ್ಮಾರಕ ಚರ್ಚಾ ಸ್ಪರ್ಧೆ

ಶಿವಮೊಗ್ಗ ಇಂಟರ್‌ಮೀಡಿಯೆಟ್ ಕಾಲೇಜು ಕರ್ನಾಟಕ ಸಂಘದ ಆಶ್ರಯದಲ್ಲಿ, ಈ ವರ್ಷ ಮೊದಲ್ಗೊಂಡು ಪ್ರತಿ ವರ್ಷವೂ, ಮೈಸೂರು ವಿಶ್ವವಿದ್ಯಾನಿಲಯದ ಇಂಟರ್‌ಮೀಡಿಯೆಟ್ ಕಾಲೇಜುಗಳ ವಿದ್ಯಾರ್ಥಿಗಳಿಗಾಗಿ ಕನ್ನಡದಲ್ಲಿ **ಚರ್ಚಾಸ್ಪರ್ಧೆ**ಯೊಂದನ್ನು ನಡಸಲು ನಿಶ್ಚಯಿಸಿದೆ. ಸುಂದರವಾದ ರಜತ ಪಾತ್ರವೊಂದನ್ನು ಸ್ಪರ್ಧೆಯ ಪರ್ಯಾಯ ಪಾರಿತೋಷಕವಾಗಿ ಇಡಲು ತೀರ್ಮಾನಿಸಿದೆ. ದ್ರವ್ಯ ಸಹಾಯಮಾಡಲು ಬಯಸುವ ಅಭಿಮಾನಿಗಳು ಹಣವನ್ನು ಸಂಘಕ್ಕೆ ಕಳಿಸಿಕೊಡಬಹುದೆಂದು ಪ್ರಾರ್ಥಿಸಿದೆ.

### ಶಿವಮೊಗ್ಗ: ಇಂಟರ್‌ಮೀಡಿಯೆಟ್ ಕಾಲೇಜು ಸಂಸ್ಕೃತ ಸಂಘ

ಶಿವಮೊಗ್ಗ ಇಂಟರ್‌ಮೀಡಿಯೆಟ್ ಕಾಲೇಜು ಸಂಸ್ಕೃತ ಸಂಘದ ಆರಂಭ ಭಾಷಣ ಕರ್ನಾಟಕ ಸಂಘದ ಭವನದಲ್ಲಿ ಶ್ರೀ. ಎಂ. ಎ. ಕೃಷ್ಣಸ್ವಾಮಿಯವರಿಂದ ೧೮-೮-೪೩ನೆಯ ಬುಧವಾರ ನಡೆಯಿತು. ಭಾಷಣ ವಿಷಯ: 'ವೇದಗಳು'. ಶ್ರೀ. ಎಚ್. ರಾಮಸ್ವಾಮಿ ಅಯ್ಯಂಗಾರ್, ಎಂ.ಎಸ್‌ಸಿ., ಅವರು ಅಧ್ಯಕ್ಷತೆ ವಹಿಸಿದ್ದರು.

### ಮಂಡ್ಯ: ಕರ್ನಾಟಕ ಸಂಘ

**ನಾಟಕ ವಾಚನ:** ೪-೯-೪೩ನೆಯ ಶನಿವಾರ ಸಂಜೆ ಆಶ್ರಯದಲ್ಲಿ ಮಂಡ್ಯದ ಸಕ್ಕರೆ ಕಂಪೆನಿಯ ಅತಿಥಿ ಮಂದಿರದಲ್ಲಿ ಬೆಂಗಳೂರಿನ ಶ್ರೀ. ಬಿ.ಎಸ್. ರಾಮರಾಯರು, ಶ್ರೀ. ಟಿ. ಪಿ. ಕೈಲಾಸಂ ಅವರ ಏಕಲವ್ಯ ನಾಟಕವನ್ನೂ, ೫-೮-೪೩ನೆಯ ಭಾನುವಾರ ಸಂಜೆ ಪುರ ಪ್ರೌಢ ಶಾಲೆಯ ಸಭಾಂಗಣದಲ್ಲಿ 'ಅಮ್ಮಾವ್ರ ಗಂಡ' ನಾಟಕವನ್ನೂ ವಾಚಿಸುತ್ತಾರೆ.

ಸಂಘದ **ಸಕಲ ಸದಸ್ಯರ ವಾರ್ಷಿಕ ಅಧಿವೇಶನ** ತಾ|| ೫-೯-೪೩ನೆಯ ಭಾನುವಾರ ಮಧ್ಯಾಹ್ನ ೪ ಗಂಟೆಗೆ ಮಂಡ್ಯದ ಶ್ರೀ ಜಯಚಾಮರಾಜೇಂದ್ರ ಪುರಭವನದಲ್ಲಿ ನಡೆಯುತ್ತದೆ.

೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧॥
ಬಿಡಿ ಪತ್ರಿಕೆ: ೬ ಕಾಸು




ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈ ಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿ ಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೪೫

ಬೆಂಗಳೂರು: ಶುಕ್ರವಾರ, ಸೆಪ್ಟೆಂಬರ್ ೩, ೧೯೪೩

## ಸಾಸನೂರ ವ್ಯಾಖ್ಯಾನಮಾಲೆ*

### ೧. ಹಿಂದುಸ್ತಾನದ ಯುದ್ಧವೆಚ್ಚ

(ಪ್ರೊ. ಎಸ್. ಕೆ. ಮುರಂಜನ ಅವರು, ಕರ್ನಾಟಕ ಕಾಲೇಜು, ಧಾರವಾಡ)

ಜಗತ್ತಿನ ರಾಷ್ಟ್ರಗಳ ಸ್ವಾತಂತ್ರ್ಯ, ವಾಕ್ ಸ್ವಾತಂತ್ರ್ಯ, ಪ್ರಜಾ ಸ್ವಾತಂತ್ರ್ಯ, ಪ್ರಜಾಸತ್ತೆಗಳನ್ನು ಕಾಪಾಡುವದಕ್ಕೆ ಈ ಯುದ್ಧವನ್ನು ಹೂಡಿದೆ ಎಂದು ಸಾರುತಲಿರುವರು. ಸ್ವಾತಂತ್ರ್ಯವಿಲ್ಲದ ಹಿಂದುಸ್ತಾನ ಅದೆಷ್ಟು ಹಿತವನ್ನು ಯುದ್ಧದಿಂದ ಪಡೆಯುವದೋ ಹೇಳಲಾಗದು. ಯುದ್ಧದಿಂದುಂಟಾಗುವ ಆರ್ಥಿಕ ಸಮಸ್ಯೆಗಳು ಅತ್ಯಂತ ಮಹತ್ವವುಳ್ಳವಾಗಿವೆ. ಆದ್ದರಿಂದ ಹಿಂದುಸ್ತಾನ ಸರಕಾರದವರ ಯುದ್ಧ ವೆಚ್ಚದ ನೀತಿಯನ್ನು ಅರಿಯುವದು ಅವಶ್ಯವಿದೆ. ತಮ್ಮ ಹಿತಾನುಸಾರವಾಗಿ ಆಯಾ ದೇಶದವರು ಯುದ್ಧದ ವೆಚ್ಚವನ್ನು ಗೊತ್ತುಪಡಿಸುವರು. ಆದರೆ ಹಿಂದುಸ್ತಾನದ ಯುದ್ಧ ವೆಚ್ಚವನ್ನು ಬೇರೆಯವರು ನಿಯಂತ್ರಿಸುವರು. ಜನತೆಯ ಸರಕಾರವಿಲ್ಲದ್ದರಿಂದ ಯುದ್ಧ ವೆಚ್ಚ ರಾಜಕೀಯ ಕಾರಣಗಳಿಂದ ಮಾರ್ಪಡುತ್ತಿದೆ ಎಂಬ ಭೀತಿ ಜನತೆಗುಂಟಾದರೆ ತಪ್ಪಿಲ್ಲ. ಯುದ್ಧ ವೆಚ್ಚದ ಹಲವು ಅಂಕೆ ಸಂಖ್ಯೆಗಳನ್ನೂ ಈ ಹಣ ದೊರೆವ ಮಾರ್ಗವನ್ನೂ ಅರಿತಿರುವದು ಯುಕ್ತವಾಗಿದೆ.

ಯುದ್ಧಕ್ಕಿಂತ ಮುಂಚೆ ಹಿಂದುಸ್ತಾನದ ಸೈನ್ಯ ಖಾತೆಯ ವೆಚ್ಚ ೫೦ ಕೋಟಿ ರೂಪಾಯಿಗಳಿದ್ದಿತು. ಅದು ಈಗ ೪೦೦ ಕೋಟಿ ರೂಪಾಯಿಗಳಿಗೆ ಏರಿದೆ. ಅದರಲ್ಲಿ ಅರ್ಧ ನಿತ್ಯ ವೆಚ್ಚಕ್ಕಾಗಿ, ಉಳಿದ ಅರ್ಧ ಹಡಗು ಪಡೆ, ವಿಮಾನ ನಿರ್ಮಾಣ, ಯಂತ್ರ ಶಾಲೆ ಮುಂತಾದವುಗಳಿಗಾಗಿ ವ್ಯಯವಾಗುತ್ತಿದೆ. ಹಿಂದುಸ್ತಾನದಲ್ಲಿ ಪ್ರತಿಯೊಬ್ಬನ ವಾರ್ಷಿಕ ಉತ್ಪನ್ನ ಒಂದುನೂರು ರೂಪಾಯಿಗಳೆಂದು ತಿಳಿದರೂ ದೇಶದ ಒಟ್ಟು ಉತ್ಪನ್ನದ ಹತ್ತು ಪಾಲಿನಲ್ಲಿ ಒಂದು ಪಾಲು ಸಂರಕ್ಷಣೆಗೆಂದು ವ್ಯಯವಾಗುತ್ತಲಿದೆ. ಕಳೆದ ಸ್ವಲ್ಪ ವರ್ಷಗಳಲ್ಲಿ ಯುದ್ಧ ವೆಚ್ಚ ನಾಲ್ಕು ಪಟ್ಟು ಹೆಚ್ಚಿದೆ. ಆದರೂ ಇದು ಇಲ್ಲಿಗೆ ನಿಂತಿತು ಎಂದು ಹೇಳಲು ಬರುವಂತಿಲ್ಲ. ಈ ಹಣದಲ್ಲಿ ಕಾಲು ಪಾಲು ಮಾತ್ರ ಪ್ರತ್ಯಕ್ಷ ಕರಗಳಾಗಿವೆ. ಇವು ಉತ್ಪನ್ನ ಮತ್ತು ಲಾಭದ ಮೇಲಿನ ಕರಗಳು. ಯುದ್ಧದಿಂದ ವಸ್ತುಗಳ ಬೆಲೆ ಏರುವದರಿಂದ ಲಾಭದ ಕರ ನ್ಯಾಯವಾಗಿದೆ. ಅದರಂತೆ ಉತ್ಪನ್ನದ ಕರ ಶ್ರೀಮಂತರಿಂದಲೆ ದೊರೆವುದಾದರೂ ಉಳಿದ ದೇಶಗಳಲ್ಲಿ ಈ ಬಗ್ಗೆ ಇರುವ ಸವಲತ್ತುಗಳು ನಮ್ಮ ದೇಶದಲ್ಲಿಲ್ಲ. ಇನ್ನೊಂದು ಕಾಲು ಪಾಲು ಅಪ್ರತ್ಯಕ್ಷ ಕರಗಳಿಂದ ಬರುತ್ತದೆ. ರೇಲ್ವೆ ಅಂಚೆಗಳಿಗಾಗಿ ನಾವು ಕೊಡಬೇಕಾಗುವ ಹಣ ಇಂತಹ ಕರಗಳಾಗಿವೆ. ಇವುಗಳ ಭಾರ ಹೆಚ್ಚಾಗಿ ಬಡವರ ಮೇಲೆಯೇ ಬೀಳುವದು. ಇನ್ನುಳಿದ ಅರ್ಧ ಹಣವನ್ನು ದೊರೆಕಿಸುವ ಮಾರ್ಗ ಚಮತ್ಕಾರಿಕವಾಗಿದೆ.

ಇದುವರೆಗಿನ ಯುದ್ಧಗಳನ್ನು ನೋಡಿದರೆ, ನಮಗೆ ವಿಪರೀತ ಪರಿಣಾಮವೊಂದು ಒಡೆದು ಕಾಣುವದು. ಯುದ್ಧದ ಸಲುವಾಗಿ ಶ್ರೀಮಂತರು ಹಣವನ್ನಷ್ಟೆ ಕೊಟ್ಟು ಯುದ್ಧಾನಂತರದಲ್ಲಿ ಬಡ್ಡಿ ಸಹಿತವಾಗಿ ಹಣವನ್ನು ಪಡೆವರು. ಬಡವರು ಮಾತ್ರ ಯುದ್ಧಕ್ಕಾಗಿ ತಮ ಪ್ರಾಣವನ್ನೇ ಕೊಡುವರು. ಸರಕಾರದವರು ಈ ಅರ್ಧಕ್ಕಾಗಿ ಸಾಲವನ್ನೆತ್ತಲು ಯತ್ನಿಸಿದರು. ಶ್ರೀಮಂತರು ಈ ಸಾಲಗಳನ್ನು (Bonds) ಕೊಳ್ಳದಾಗಲು ಸರಕಾರದವರು ಒಂದು ಉಪಾಯವನ್ನು ಕಂಡರು. ಅದು ಕಾಗದ ನಾಣ್ಯಗಳ ಪ್ರಸರಣ. ಅದನ್ನು ಇಲ್ಲಿ ಸ್ವಲ್ಪ ವಿವರಿಸುವದು ಅವಶ್ಯವಿದೆ.

ಹಿಂದುಸ್ತಾನದಲ್ಲಿ ೧೮೬೧ರಲ್ಲಿ ನಾಲ್ಕು ಕೋಟಿ ರೂಪಾಯಿಗಳಷ್ಟು ನೋಟುಗಳನ್ನು ಮಾತ್ರ ಚಲನಕ್ಕೆ ತರಲಾಗಿದ್ದಿತು. ಕಳೆದ ಮಹಾ ಯುದ್ಧದ ನಂತರ ೧೭೦ ಕೋಟಿ ರೂಪಾಯಿಗಳ ನೋಟುಗಳು ಚಲನದಲ್ಲಿ ಬಂದುವು. ಈಗ ಸ್ವಲ್ಪೇ ವರ್ಷಗಳಲ್ಲಿ ಅಂದರೆ ಈ ಯುದ್ಧ ಶುರುವಾದಂದಿನಿಂದ ೬೪೩ ಕೋಟಿ ರೂಪಾಯಿಗಳಷ್ಟು ನೋಟುಗಳು ಪ್ರಸರಣವಾಗಿವೆ. ಹಿಂದುಸ್ತಾನ ಪೂರೈಸುವ ಸಾಮಗ್ರಿಗಳಿಗಾಗಿ ಪರದೇಶಗಳವರು ಹಣವನ್ನು ಕೊಡಬೇಕಾಗುವದು. ಇದು ವಾಸ್ತವವಾಗಿ ಬೆಳ್ಳಿ ಬಂಗಾರದ ರೂಪದಲ್ಲಿ ಇಲ್ಲವೆ ಬೇರೆ ಒಡವೆಗಳ ರೂಪದಲ್ಲಿ ಹಿಂದುಸ್ತಾನಕ್ಕೆ ದೊರೆಯಬೇಕು. ಆದರೆ ಇದಾವುದೂ ದೊರೆಯದಂತಾಗಿದೆ. ಹಿಂದುಸ್ತಾನವು ಪರದೇಶಗಳವರಿಗೆ ಪೂರೈಸಿದ ಒಡವೆಗಳ ಬೆಲೆ ಇಂಗ್ಲಂಡದ ಬ್ಯಾಂಕಿನ ನೋಟುಗಳ ರೂಪದಲ್ಲಿದೆ. ಅದಕ್ಕಾಗಿ ಹಿಂದುಸ್ತಾನ ಸರಕಾರದವರು ಮಿತಿಯಿಲ್ಲದಷ್ಟು ನೋಟುಗಳನ್ನು ಮುದ್ರಿಸಿ ಪ್ರಸರಣದಲ್ಲಿ ತಂದಿರುವರು. ಉಳಿದವುಗಳಂತೆಯೆ ನಾಣ್ಯವೂ ಒಂದು ಒಡವೆಯಾದ್ದರಿಂದ, ಅತಿಯಾದ ಒಡವೆಯ ಬೆಲೆ ಇಳಿಯುವಂತೆ ನಮ್ಮ ನಾಣ್ಯದ ಬೆಲೆ ಕುಸಿದುಬಿದ್ದಿದೆ. ಯುದ್ಧಾನಂತರದಲ್ಲಿ ನೋಟುಗಳ ಅತಿ ಪ್ರಸರಣದ ಪರಿಣಾಮ ಅನಿಷ್ಟಕರವಾಗದಿರದು. ಇದನ್ನು ತಡೆಯಲು ನಾವು ಈಗಲಿಂದಲೇ ಯತ್ನಿಸಬೇಕು.

ಯುದ್ಧಕ್ಕಾಗಿ ಬೇಕಾಗುವ ಹಣವನ್ನು ದೊರಕಿಸುವ ಮಾರ್ಗಗಳು ಈ ತೆರನಾಗಿವೆ. ೧. ಸಾಲವನ್ನು ಎತ್ತುವದು, ೨. ಕರಗಳನ್ನು ಹೆಚ್ಚಿಸುವುದು, ೩. ಪ್ರತಿಯೊಬ್ಬನ ಉತ್ಪನ್ನದ ಕೆಲವೊಂದು ಭಾಗವನ್ನು ಕಡ್ಡಾಯವಾಗಿ ಪಡೆವುದು. ಸಾಲವನ್ನೆತ್ತಿ ಯುದ್ಧವನ್ನು ಸಾಗಿಸಲೆತ್ನಿಸುವುದು ಅಷ್ಟು ಹಿತಕರವಲ್ಲ, ಶಕ್ಯವೂ ಇಲ್ಲ. ಕಡೆಯ ಎರಡು ಮಾರ್ಗಗಳೆ ಹೆಚ್ಚು ಒಳಿತಾಗಿವೆ. ಆದರೆ ಕರವನ್ನು ಹೆಚ್ಚಿಸುವಾಗ, ಕಡ್ಡಾಯವಾಗಿ ಉತ್ಪನ್ನವನ್ನುಳಿಸುವಾಗ, ಬಹು ಜಾಗರೂಕತೆಯಿಂದ ಸಾಗಬೇಕು. ಬಡ ಹಿಂದೀಯನ ಮೇಲೆ ಕರಭಾರ ಈಗಲೇ ಹೆಚ್ಚಾಗಿದೆ. ಇನ್ನೂ ಹೆಚ್ಚಾದ ಕರ ಹೇರಿದರೆ ಅವನು ಕುಸಿದು ಬೀಳುವನು. ಆದ್ದರಿಂದ ಶ್ರೀಮಂತರ ಮೇಲೆಯೇ ಹೆಚ್ಚಾದ ಕರ ಬೀಳುವಂತೆ ಯೋಚಿಸಬೇಕು. ಯುದ್ಧ ಸಮಯದಲ್ಲಿ ಧಾರಣೆಗಳನ್ನು ನಿಯಂತ್ರಿಸುವದೂ ಆರ್ಥಿಕ ಮುಗ್ಗಟ್ಟನ್ನೆದುರಿಸುವ ಉಪಾಯಗಳಲ್ಲೊಂದಾಗಿದೆ. ಆದರೆ ಇದು ಅಷ್ಟು ಸುಲಭವಾದ ಉಪಾಯವಲ್ಲ. ವಿಸ್ತಾರವಾದ ನಮ್ಮ ಈ ದೇಶದಲ್ಲಿ ಅದು ಯಶಸ್ವಿಯೂ ಆಗಲಾರದು. ಆದ್ದರಿಂದ ಮೇಲಿನವೆರಡು ಮಾರ್ಗಗಳಿಂದಲೇ ಯುದ್ಧಾನಂತರದ ಮುಗ್ಗಟ್ಟನ್ನು ಯಶಸ್ವಿಯಾಗಿ ಎದುರಿಸಬಹುದು.

(೨೩೫ನೆಯ ಪುಟಕ್ಕೆ)

*ಧಾರವಾಡದ ವಿದ್ಯಾವರ್ಧಕ ಸಂಘದ ಆಶ್ರಯದಲ್ಲಿ ನಡೆದ ಶ್ರೀ. ಸಾಸನೂರ ವ್ಯಾಖ್ಯಾನಮಾಲೆಯ ಮೂರು ಭಾಷಣಗಳ ಸಾರಾಂಶ.

# ಕನ್ನಡ ನುಡಿ

ಶುಕ್ರವಾರ, ಸೆಪ್ಟೆಂಬರ್ ೩, ೧೯೪೩

## ಒಳಸಂಗ

ಒಳಸಂಗ ಒಂದು ಗ್ರಾಮ. ಸುಮಾರು ಆರು ಸಾವಿರ ಜನ ಸಂಖ್ಯೆಯದು. ನೂರಕ್ಕೆ ತೊಂಬತ್ತು ಜನ ಮನೆಯಲ್ಲಿ ಕನ್ನಡ ಆಡುವರು.

ಇಲ್ಲಿ ಈಗ ಏಳು ವರ್ಷಗಳವರೆಗೆ ಕನ್ನಡ ಶಾಲೆ ಇರಲಿಲ್ಲ. ಮಹಾರಾಷ್ಟ್ರದ ಶಾಲೆ ಇತ್ತು. ಕನ್ನಡ ಮಕ್ಕಳು ಕನ್ನಡವನ್ನರಿಯದೆ ಮರಾಠಿ ಭಾಷೆಯನ್ನು ಕಲಿತರು, ಕಲಿಯುತ್ತಿದ್ದರು. ಪ್ರತಿನಿಧಿ ಸರಕಾರ ಬಂದಾಗ ಇಲ್ಲಿಗೆ ಕನ್ನಡದ ಶಾಲೆಯನ್ನು ಕೊಡುವ ಏರ್ಪಾಡು ಮೊದಲಾಯಿತು. ಈಗ ಇಲ್ಲಿಯ ಶಾಲೆಯಲ್ಲಿ ಮೇಲಿನ ಒಂದೆರಡು ತರಗತಿ ಹೊರತು ಉಳಿದ ತರಗತಿಗಳು ಕನ್ನಡದವು ಆಗಿವೆ.

ಇಂಥ ಗ್ರಾಮ ಇದೇ ಸುತ್ತಿನಲ್ಲಿ ಸುಮಾರು ಎಂಬತ್ತು ಇವೆ. ಉಳಿದ ಗ್ರಾಮಗಳಲ್ಲಿ ಕನ್ನಡ ಮಕ್ಕಳು ಈಗಲೂ ಕನ್ನಡವನ್ನು ಕಲಿಯದೆ ಮರಾಠಿಯನ್ನೇ ಕಲಿಯುತ್ತಿದ್ದಾರೆ. ಎಪ್ಪತ್ತೊಂಬತ್ತು ಗ್ರಾಮ ಹೀಗಿರುತ್ತ ನಾವು ಒಂದು ಗ್ರಾಮದವರು ಕನ್ನಡ ಕಲಿತು ಮರಾಠಿಯನ್ನು ಬಿಟ್ಟು ಬದುಕುವುದು ಹೇಗೆ ಎಂದು ಒಳಸಂಗದ ಕೆಲವರು ಬುದ್ಧಿವಂತರು ಯೋಚಿಸುತ್ತಾ ಇರುವಂತೆ ಕಾಣಿಸುತ್ತದೆ.

ಈ ಗ್ರಾಮಗಳೆಲ್ಲ ಇರುವುದು ಸೊಲ್ಲಾಪುರದ ಜಿಲ್ಲೆಯಲ್ಲಿ. ಶಿವಶರಣ ಸಿದ್ಧರಾಮಣ್ಣನವರ ಗದ್ದುಗೆಯ ನೆರಳಲ್ಲಿ; ಸೊಲ್ಲಾಪುರದ ಈಗಲೂ ಪ್ರತಿಷ್ಠಿತರಾಗಿರುವ ಕನ್ನಡ ಪ್ರಮುಖರ ಸಮ್ಮುಖದಲ್ಲಿ.

ಈ ವಿಷಯ ನಾವು ಸೊಲ್ಲಾಪುರಕ್ಕೆ ಹೋಗಿದ್ದಾಗ ನಮ್ಮ ಗಮನಕ್ಕೆ ಬಂದಿತು. ಇದನ್ನು ಕುರಿತು ಮಾನ್ಯ ಕನ್ನಡಿಗರಾದ ಶ್ರೀ. ವೆಂಕಟರಾವ್ ಭೀ. ನಾಯಕರವರು ಬರೆದ ಒಂದು ಲೇಖನವನ್ನು ಈ ಪತ್ರಿಕೆಯಲ್ಲಿ ಹಿಂದಿನ ವಾರ ಪ್ರಕಟ ಮಾಡಿದೆವು.

ನೂರು ಜನದಲ್ಲಿ ತೊಂಬತ್ತು ಜನ ಮನೆಯಲ್ಲಿ ಕನ್ನಡ ಆಡುವ ಗ್ರಾಮಗಳಲ್ಲಿ ಕನ್ನಡಕ್ಕೆ ಶಾಲೆ ಇಲ್ಲದಿರುವುದು ಅಥವಾ ಇರುವ ಶಾಲೆ ಇರಬೇಕೆ ಎಂಬ ಪ್ರಶ್ನೆ ಏಳುವುದು ಕನ್ನಡಿಗರಿಗೆ ಶುಭವಲ್ಲ. ಹೀಗಿರುವುದನ್ನು ನೋಡುತ್ತ ಸುಮ್ಮನಿರುವುದು ಬುದ್ಧಿಯಲ್ಲ, ಲಕ್ಷಣವಲ್ಲ. ಇದು ಸರಿಯಲ್ಲವೆಂದು ತಿಳಿದ ಪ್ರಮುಖರು ಇದನ್ನು ತಿದ್ದುವುದಕ್ಕೆ ಯತ್ನಿಸದೆ ಇರುವುದು ಎಚ್ಚರ ಎನಿಸಿಕೊಳ್ಳಲಾರರು.

ಶ್ರೀ. ವೆಂಕಟರಾಯರು ಪರಿಷತ್ತು ಸರ್ಕಾರಕ್ಕೆ ಒಂದು ಶಿಷ್ಟ ಮಂಡಲವನ್ನು ಕಳುಹಿಸಿಕೊಡಬೇಕೆಂದು ಸೂಚನೆ ಮಾಡಿದಾರೆ. ಇದು ಬಹು ಒಳ್ಳೆಯ ಸಲಹೆ. ಇದಕ್ಕೆ ಮೊದಲು ಸ್ಥಳದಲ್ಲಿ ಕೈಗೊಳ್ಳಬೇಕಾದ ಕಾರ್ಯಕ್ರಮ ಒಂದಿದೆ. ಎಂಬತ್ತು ಕನ್ನಡ ಗ್ರಾಮಗಳ ಪ್ರತಿನಿಧಿಗಳನ್ನು ಒಳಗೊಂಡು ಸೊಲ್ಲಾಪುರದಲ್ಲಿ ಒಂದು ಸಭೆ ನೆರೆಯಬೇಕು. ಸೊಲ್ಲಾಪುರದ ಪ್ರಮುಖ ಮಹನೀಯರ ಬೆಂಬಲದಿಂದ ಈ ಸಭೆ ನಮ್ಮ ಗ್ರಾಮಗಳಿಗೆ ಕನ್ನಡ ಶಾಲೆ ಕೊಡುವ ಕಾರ್ಯಕ್ರಮವನ್ನು ಸರಕಾರ ಮುಂದರಿಸಬೇಕೆಂದು ಪ್ರಾರ್ಥಿಸಬೇಕು. ಹಾಗೆಯೇ ಈ ವಿಚಾರದಲ್ಲಿ ಅವಶ್ಯಕವಾದ ವ್ಯವಹಾರವನ್ನು ನಡಸುವುದಕ್ಕೆ ಒಂದು ಸಮಿತಿಯನ್ನು ನೇಮಿಸಿ ಆ ಸಮಿತಿ ಕನ್ನಡ ಸಾಹಿತ್ಯ ಪರಿಷತ್ತಿನ ಸಹಕಾರದಿಂದ ಮುಂದಿನ ಕಾರ್ಯವನ್ನು ಕೈಕೊಳ್ಳಬೇಕೆಂದು ನಿರ್ಣಯಿಸಬೇಕು.

ಸೊಲ್ಲಾಪುರದಲ್ಲಿರುವ ಕನ್ನಡ ಬಂಧುಗಳು ಈ ವಿಷಯದಲ್ಲಿ ತಕ್ಕ ಕಾರ್ಯಕ್ರಮವನ್ನು ಕೈಕೊಳ್ಳಬೇಕೆಂದು ಕನ್ನಡ ಸಾಹಿತ್ಯ ಪರಿಷತ್ತು ಪ್ರಾರ್ಥಿಸುತ್ತದೆ. ಒಳಸಂಗ ಒಂದು ಗ್ರಾಮ. ಸೊಲ್ಲಾಪುರದ ಜಿಲ್ಲೆಯಲ್ಲಿ ಇಂಥ ಗ್ರಾಮಗಳು ಎಂಬತ್ತು. ಕನ್ನಡ ನಾಡಿನಲ್ಲಿ ಎಂಟು ನೂರೋ ಎಂಟು ಸಾವಿರವೋ! ಉಳಿಯುವುದೇ ಅಳಿಯುವುದೇ ಎಂಬ ಪ್ರಶ್ನೆ ಈ ಗ್ರಾಮಗಳ ಕನ್ನಡಿಗರ ಮುಂದೆ ನಿಂತಿದೆ. ಉಳಿಯುವುದು ಎಂಬ ಉತ್ತರವನ್ನು ಈ ಗ್ರಾಮಗಳು ಕೊಡಬೇಕಾಗಿದೆ.

ಒಳಸಂಗವೇ ಈ ಪ್ರಶ್ನೆಗೆ ಸರಿಯಾದ ಉತ್ತರವನ್ನು ಹೇಳಬೇಕಾಗಿದೆ. ಅದನ್ನು ನಡೆದು ತೋರಿಸಿ ತನ್ನಂತಹ ಇತರ ಗ್ರಾಮಗಳಿಗೆ ಮಾರ್ಗದರ್ಶಕ ಆಗಬೇಕಾಗಿದೆ. ಒಳಸಂಗ ಧೈರ್ಯದಿಂದ ನಡೆದು ತಿಳಿವಿನಿಂದ ನಡೆದು ಕೃತಕೃತ್ಯ ಆಗಲೆಂದು ನಾವು ಹಾರೈಸುತ್ತೇವೆ.

— ಮಾ. ನೆಂ. ಅ.

## ಕಾವ್ಯಾವಲೋಕನ

**ಜಹನಾರ:** ಬರೆದವರು: ಶ್ರೀ. ಎಸ್. ವಿ. ಪರಮೇಶ್ವರಭಟ್ಟ, ಎಂ.ಎ., ಅವರು. ಕಿರೀಟ ಆಕಾರದ ಅಷ್ಟಪತ್ರ. ೩೯ ಪುಟಗಳು. ಬೆಲೆ ಸುಂದರ ಪ್ರತಿ ೧೨ ಆಣೆ. ಸಾಮಾನ್ಯ ಪ್ರತಿ ೮ ಅಣೆ.

'ಜಹನಾರ' ಒಂದು ಕಥನ ಕವನ. ಇತಿಹಾಸದಲ್ಲಿ ಸುಳಿದು ಹೋದ ಒಂದು ಹೆಣ್ಣಿನ ಕತೆ ಇದರ ವಸ್ತು. ಇಲ್ಲಿ ಕಾಣುವುದು ಕಾವ್ಯದ ಕುಲುಮೆಯಲ್ಲಿ ಪುಟಗೊಂಡು ಆ ಹೆಣ್ಣು ಮರುಮೈ ತಳೆದು ನಿಲ್ಲುವ ರೀತಿ; ಆ ಬಾಳಿನ ಏಳು ಬೀಳುಗಳ ಬಿಡಿಬಿಡಿಯಾದ, ಬಣ್ಣ ಬಣ್ಣವಾದ, ರಾಗೋಜ್ವಲವಾದ ರೂಪಣ: ಶ್ರೀ. ಪರಮೇಶ್ವರಭಟ್ಟರ ಕಳಿತಿರುವ ಕಲ್ಪನೆ, ನಯವಾದ ನುಡಿಕಟ್ಟು, ಕೌಶಲದ ಕೈವಾಡ.

ಸರಳ ರಗಳೆಯ ರಚನೆಯಲ್ಲಿ ಭಟ್ಟರ ಕೈ ಕುದುರುತ್ತಿದೆ. ಈ ಕೃತಿ ಅದಕ್ಕೆ ಒಂದು ಮಾದರಿ. ಕ್ಲೇಶವಿಲ್ಲದ ಕಥನ ರೀತಿ, ಛಂದಸ್ಸಿನ ಹಿತವಾದ ನಡೆ, ಅಲ್ಲಲ್ಲೆ ಹೊಳೆಯುವ ಊಹಾವಿಲಾಸ, ಉಕ್ತಿ ವೈಚಿತ್ರ್ಯ, ಆ ಹೆಣ್ಣು ಜೀವದ ನೋವು ನಲಿವು ಆಶೆ ನಿರಾಶೆ ರಾಗ ವಿರಾಗ ಕನಸು ನನಸುಗಳನ್ನು ತನ್ನದೆಂಬಂತೆ ತೋಡಿಕೊಳ್ಳುವ ತಾದಾತ್ಮ್ಯ—ಇವು ಚಿತ್ತಮೋಹಕವಾಗಿವೆ.

ಒಂದೆರಡು ಕಡೆ ಕವಿ ವ್ಯಾಕರಣದ ನಿಯಮವನ್ನು ಮೆಟ್ಟಿರಬಹುದು; ಕಾವಿನಲ್ಲಿ ಕುಗ್ಗಿರಬಹುದು; ವೈರಾಗ್ಯ ಬಹುವಾಚ್ಯವಾಗಿ 'ಏಕನಾದ'ವಾಗುವಷ್ಟು ತುಂಬಿರಬಹುದು. ಆದರೆ ಇವೆಲ್ಲ ಕೊರತೆ ಎನ್ನಿಸಿಕೊಳ್ಳಬಹುದಾದಷ್ಟು ದೊಡ್ಡವಲ್ಲ. ಕೃತಿಯ ಒಟ್ಟಿನ ಚೆಲುವಿಗೆ ಇವು ಯಾವುವೂ ಅಡ್ಡಿಯಾಗುವುದಿಲ್ಲ. 'ಈ ಕೃತಿ ಎಲ್ಲರೂ ಓದತಕ್ಕದ್ದು; ಓದಿ ಮೆಚ್ಚತಕ್ಕದ್ದು. ಶ್ರೀ. ಪರಮೇಶ್ವರಭಟ್ಟರ ಕಾವ್ಯ ಕಲಾರಾಧನೆ ಹೀಗೆಯೆ ನಿರ್ವಿಘ್ನವಾಗಿ ನಡೆಯುತ್ತಿರಲಿ ಎಂದು ಹಾರೈಕೆ.

— ಭಾ. ಪ್ರಿ.

## ಸಾದರ ಸ್ವೀಕಾರ

ಶ್ರೀ ವ್ಯಾಸತೀರ್ಥ ವಿರಚಿತಂ **ತರ್ಕತಾಂಡವಂ:** ನಾಲ್ಕನೆಯ ಸಂಪುಟ. [ಶ್ರೀ ರಾಘವೇಂದ್ರತೀರ್ಥ ಕೃತ ನ್ಯಾಯದೀಪಾಖ್ಯ ವ್ಯಾಖ್ಯಾಸಮಲಂಕೃತಮ್]. ಮೈಸೂರು ವಿಶ್ವವಿದ್ಯಾನಿಲಯದ ಓರಿಯೆಂಟಲ್ ಲೈಬ್ರರಿಯ ಸಂಸ್ಕೃತ ಗ್ರಂಥಮಾಲೆಯ ೭೨ನೆಯ ಪುಸ್ತಕ. ಡೆಮಿ ಅಷ್ಟಪತ್ರ. ೪೯೦ ಪುಟಗಳು. ಬೆಲೆ ರೂ. ೩-೪-೦.

ಕುಮಾರವ್ಯಾಸ ಮಹಾಕವಿ ವಿರಚಿತ **ಕನ್ನಡ ಮಹಾಭಾರತ:** ಹತ್ತನೆಯ ಸಂಪುಟ. (ಶಲ್ಯಗದಾ ಪರ್ವಗಳು). ಮೈಸೂರು ವಿಶ್ವವಿದ್ಯಾನಿಲಯದ ಓರಿಯೆಂಟಲ್ ಲೈಬ್ರರಿಯ ಕನ್ನಡ ಗ್ರಂಥಮಾಲೆಯ ೩೪ನೆಯ ಪುಸ್ತಕ. ಡೆಮಿ ಅಷ್ಟಪತ್ರ. ೨೦೦ ಪುಟಗಳು. ಬೆಲೆ ರೂ. ೧.

**ಕೀಟಗಳು:** ಬರೆದವರು: ಶ್ರೀಮಾನ್ ಡಿ. ಎಚ್. ವೀರಯ್ಯನವರು, ಎಂ.ಎಸ್‌ಸಿ. ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರ ಪುಸ್ತಕ ಮಾಲೆಯ ೪೭ನೆಯ ಪುಸ್ತಕ. ಫೂಲ್ಸ್‌ಕ್ಯಾಪ್ ಅಷ್ಟಪತ್ರ. ೬೪ ಪುಟಗಳು. ಬೆಲೆ ೪ ಆಣೆ.

**ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ:** ಬರೆದವರು: ಶ್ರೀ. ಆ. ನ. ಕೃಷ್ಣರಾಯರು, ಬೆಂಗಳೂರು. ಪ್ರಕಾಶಕರು: ಎಸ್. ಎಸ್. ಎನ್. ಬುಕ್ ಡಿಪೊ, ನ್ಯೂ ಮಾರ್ಕೆಟ್, ಬೆಂಗಳೂರು. ಕ್ರೌನ್ ಅಷ್ಟಪತ್ರ. ೩೨೬ ಪುಟಗಳು. ಬೆಲೆ ರೂ. ೨.

ಮೊದಲನೆಯ ಪುಟದಿಂದ:

### ೨. ಸೌಂದರ್ಯ ವಿಚಾರ

(ಶ್ರೀ. ಶಂ. ಬಾ. ಜೋಶಿಯವರು, ಧಾರವಾಡ)

'ಸೌಂದರ್ಯ ಶ್ರೀಮಂತರ ಸೊತ್ತು, ಬಡವರಿಗೆಲ್ಲಿಯ ಸೊಗಸು' ಎನ್ನುವರು. ಹಸಿವು ಹಿಂಗದೆ ಸೊಗದೋರದು ನಿಜ. ಆದರೆ ಹೊಟ್ಟೆ ತುಂಬಿದಮೇಲೆಯೆ ಬಡವರೂ ಶ್ರೀಮಂತರೂ ತಂತಮ್ಮ ರೀತಿಯಲ್ಲಿ ಸೊಗಸು ಅಥವಾ ಸೌಂದರ್ಯವನ್ನರಸುವರು. ಸೊಗಸು ಮಾನವನಿಗೆ ಸಹಜವಾದುದು. ಸೊಗಯಿಸದ ಮಾನವರಿಲ್ಲ.

ಸೌಂದರ್ಯ ನಾನಾ ವಿಧವಾಗಿ ಕಾಣುವದು. ಸೌಂದರ್ಯವನ್ನು ಬಣ್ಣಿಸುವುದು ಕಠಿನವಾದರೂ ಅದನ್ನನುಭವಿಸದವರಿಲ್ಲ. ಸೌಂದರ್ಯ ನಾನಾ ತೆರನಾಗಿ ಕಾಣಿಸಿಕೊಳ್ಳುತ್ತಲಿದೆ. ಅದಕ್ಕೆ ಒಂದೇ ಮೈ ಇಲ್ಲ, ಅನಂತ ಮೈಗಳಿವೆ. ವಜ್ರದಂತೆ ಎತ್ತನೋಡಿದರೂ ಅದು ಹೊಳೆವುದು. ಸೌಂದರ್ಯವನ್ನು ಸೊಗಸು ಆನಂದ ಎಂದು ಮುಂತಾಗಿ ಹೇಳಬಹುದು. ಅದನ್ನು ಬಣ್ಣಿಸುವ ಅನೇಕ ಶಬ್ದಗಳಿವೆ. ಕನ್ನಡದಲ್ಲಿಯ 'ಅಂದ' ಶಬ್ದದಿಂದ ಸೌಂದರ್ಯದ ಕಲ್ಪನೆ ಬಹು ಚೆನ್ನಾಗಿ ಸೂಸುತ್ತದೆ.

ಸೌಂದರ್ಯ ಮಾತಿಗೆ ನಿಲುಕದು, ಅನುಭವಿಸಿಯೇ ತಿಳಿಯಬೇಕು. ಸೌಂದರ್ಯಾನುಭವದಿಂದುಂಟಾದ ಆನಂದ ಮೂಕನ ಕನಸಿನ ಹಾಗೆ. ಸೌಂದರ್ಯ ಹೊರಗಣ ವಸ್ತುವಲ್ಲ, ಅಂತರಂಗಾನುಭವ. ಸತ್ಯವೇ ಸೌಂದರ್ಯ, ಸೌಂದರ್ಯವೇ ಸತ್ಯ ಎಂದು ಆಂಗ್ಲ ಕವಿಯೊಬ್ಬನು ಹೇಳಿರುವನು. ಸೌಂದರ್ಯವನ್ನು ಬಣ್ಣಿಸುವುದು ದುಸ್ತರವಾಗಿದೆ. ಆದರೂ ಸೌಂದರ್ಯ ಎಂದರೆ ಬೆಳಕು ಎಂದು ಹೇಳಬಹುದು. ನಮ್ಮ 'ದೇವರು' ಬೆಳಕು. 'ದಿವ್' (ಹೊಳೆ) ಎಂಬುದರಿಂದ ದೇವ. ಇದರಿಂದ ನಮ್ಮ ಪೂರ್ವಜರ ಸೌಂದರ್ಯಾನುಭವ ಗೊತ್ತಾಗದಿರದು.

ತಲ್ಲೀನವಾಗಿಸುವದರಿಂದ ಸೌಂದರ್ಯವನ್ನು ಮೋಹಿನೀ ಎಂದು ಕರೆದಿರುವರು. ಆದರೆ ಸೌಂದರ್ಯಕ್ಕೆ ಮಾರು ಹೋದವರು ರಕ್ಕಸರಿಂದ ಕಡೆ. ಪ್ರಪಂಚದಲ್ಲಿ ಬೆಳಕು ಕತ್ತಲೆ ಎರಡೂ ಇವೆ. ಅಥವಾ ಕತ್ತಲೆ ಇದೆ ಎಂತಲೇ ಬೆಳಕಿಗೆ ಬೆಲೆ. ವಿದ್ಯೆ–ಅವಿದ್ಯೆ, ಸತ್ಯ–ಅಸತ್ಯ, ಒಳ್ಳೆಯದು–ಕೆಟ್ಟುದು ಕೂಡಿಯೇ ಇವೆ. ಇವುಗಳಲ್ಲಿ ಭೇದವು ಅತ್ಯಂತ ಸೂಕ್ಷ್ಮವಾಗಿದೆ. ಈ ದ್ವಂದ್ವದಿಂದ ಸತ್ಯ ಸೌಂದರ್ಯಗಳನ್ನು ಬೇರೆ ಪಡಿಸಿಕೊಂಬುದೇ ಚಾತುರ್ಯ. ಈ ಸೂಕ್ಷ್ಮ ಭೇದವನ್ನರಿತು ಸಮತೂಕದಿಂದ ಸಾಗಬಲ್ಲುದೇ ಜಾಣ್ಮೆ. ಹೀಗೆ ಸಾಗಬಲ್ಲವನೇ ಜ್ಞಾನಿ, ನಿಜವಾದ ಸೌಂದರ್ಯಾನುಭವಿ. ನಮ್ಮ ದೇಶ ಕೈಗೆ ನಿಲುಕದ ಸಗ್ಗಕ್ಕೆ ಬಯಸಿ ನಾವು ಇಹದಲ್ಲಿಯ ಸುಖಕ್ಕೆ ಎರವಾಗಿದ್ದೇವೆ. ಇಹದ ಸೌಂದರ್ಯವನ್ನು–ಕೀಳು ಸೌಂದರ್ಯವಲ್ಲ–ಅನುಭವಿಸಿದರೆ ಪರದಲ್ಲಿಯ ಸಗ್ಗ ನಮ್ಮದಾಗುವದು. ನಮ್ಮ ಪೂರ್ವಜರು ಜ್ಞಾನಿಯನ್ನು 'ಪರಮಹಂಸ'ನೆಂದು ಕರೆದಿರುವದು ಅದೆಷ್ಟು ಸರಿಯಾಗಿದೆ! ಹಂಸ ಹಾಲಿನಲ್ಲಿಯ ನೀರನ್ನುಳಿದು ಕ್ಷೀರವನ್ನೇ ಸವಿಯುವದು. ಹಾಗೆಯೆ ನಾವು ಇಹದಲ್ಲಿಯ ಬೆಳಕು ಕತ್ತಲೆಯನ್ನು ಬೇರ್ಪಡಿಸಬೇಕು. ಇದೇ ನಿಜವಾದ ಸೌಂದರ್ಯಾನುಭವ.

### ೩. ನಮ್ಮ ಸಮಾಜ

(ಶ್ರೀ. ನೆಗಳೂರ ಶ್ರೀನಿವಾಸರಾಯರು, ಧಾರವಾಡ)

'ನಮ್ಮ ಸಮಾಜ'ವೆಂದರೆ ಸಂಕುಚಿತ ರೀತಿಯಲ್ಲಿ ನಮ್ಮ ಜಾತಿ, ನಮ್ಮ ಧರ್ಮವೆಂದಾಗುತ್ತದೆ. ಅದರ ವಿಸ್ತೃತ ಅರ್ಥ ಅಖಿಲ ಜಗತ್ತಿನ ಮಾನವ ಸಮಾಜವೆಂದಾಗುತ್ತದೆ. ಮಾನವ ಸಮಾಜ ಮೊದಲು ಹೇಗಿತ್ತು, ಈಗ ಯಾವ ಸ್ಥಿತಿಯಲ್ಲಿದೆ ಮುಂದೆ ಬೆಳೆದು ಉನ್ನತಿಯನ್ನು ಹೇಗೆ ಪಡೆಯಬೇಕು ಎಂಬುದೇ ಈ ವಿಷಯದ ಗುರಿ.

ಸುಮಾರು ೨೦೦ ಕೋಟಿ ವರುಷಗಳ ಹಿಂದೆ ಪೃಥ್ವಿ ಅತ್ಯಂತ ತಪ್ತವಾದ ರೀತಿಯಲ್ಲಿಯೇ ಸೂರ್ಯಮಂಡಲದಿಂದ ಸಿಡಿದು ಬೇರೆಯಾಯಿತು. ಕ್ರಮೇಣ ಅದರ ಉಷ್ಣತೆ ಆರುತ್ತ ಬಂದಂತೆ ನೀರು, ನೀರಿನಲ್ಲಿ ಸಸ್ಯಾದಿಗಳು, ಆಮೇಲೆ ಅವುಗಳ ಮೇಲೆ ಉಪಜೀವಿಸುವ ಜೀವಿಗಳು, ಪಶುಗಳು, ಮೆದುಳಿನ ಬಲವುಳ್ಳ ಪ್ರಾಣಿಗಳು, ಕೋತಿಗಳು, ವಾನರರು, ಅರೆ-ನರರು ಉಂಟಾದರು. ಈ ಸ್ಥಿತ್ಯಂತರವನ್ನು ನೋಡಿದರೆ ಪರಿವರ್ತನೆ ಸಮಾಜದ ಮೂಲ ತತ್ವವಾಗಿದೆ ಎಂದು ಹೇಳಬಹುದು. ಪರಿವರ್ತನೆ ಜೀವದ ರಹಸ್ಯ. ಪರಿವರ್ತನೆಯಿಂದ ಮಾನವನು ಪ್ರಗತಿಯನ್ನು ಹೊಂದಬಲ್ಲನು. ಪರಿವರ್ತನೆಗೆ ಸಿದ್ಧನಾಗಿರದವನು ದುರ್ಗತಿಯನ್ನೆ ಕಾಣುವನು. ಆಹಾರ, ಹೊದಿಕೆ, ಮಾತು, ಮನೆ, ಉಪಕರಣಗಳು ಈ ಎಲ್ಲ ವಿಷಯಗಳಲ್ಲಿಯೂ ಮಾನವನು ಪರಿವರ್ತನೆಯ ತತ್ವವನ್ನವಲಂಬಿಸಿಯೆ ಪ್ರಗತಿಯನ್ನು ಹೊಂದಿದ್ದಾನೆ.

ಈಗ ಮಾನವ ಸಮಾಜ ಸಂಸ್ಕೃತಿಯ ಶಿಖರವನ್ನು ಮುಟ್ಟಿದೆ. ಸಂಸ್ಕೃತಿಯ ಗುರಿ ಕೇವಲ ಆಧಿಭೌತಿಕವಲ್ಲ, ಆಧ್ಯಾತ್ಮಿಕ ಸುಖವೂ ಇದೆ. ಈಗ ಮಾತ್ರ ಮಾನವ ಸಂಸ್ಕೃತಿ ಕೆಳಕ್ಕೆ ಇಳಿಯುವಂತೆ ತೋರುತ್ತಿದೆ. ಧರ್ಮದ ಹೆಸರಿನಿಂದ ಕೊಲೆ ಸುಲಿಗೆಗಳೂ ಸ್ವಾರ್ಥ ಲೋಲುಪತೆಯೂ ನಿರಾತಂಕವಾಗಿವೆ. ಸಮಾಜದ ಹಿತವನ್ನು ಬಯಸದೆ ವ್ಯಕ್ತಿಯ ಸ್ವಾರ್ಥವನ್ನೇ ಸಾಧಿಸಲು ಧರ್ಮದ ಉಪಯೋಗವಾಗುತ್ತಲಿದೆ. ಆಧಿ ಭೌತಿಕ ಸುಖದಿಂದ ಸಂಪತ್ತಿನಿಂದ ಮಾನವನ ತಲೆ ಬಾತುಹೋಗಿದೆ. ಆಕ್ರಮಣಶೀಲತೆ ಅವನಲ್ಲಿ ಬೆಳೆಯುತ್ತಿದೆ. ಬಲಿಷ್ಠ ರಾಷ್ಟ್ರಗಳು ಸಣ್ಣ ಸಣ್ಣ ರಾಷ್ಟ್ರಗಳನ್ನು ನುಂಗಿ ನೀರು ಕುಡಿಯಹತ್ತಿವೆ. ಹಾಗಾದರೆ ಮಾನವ ಸಮಾಜ ಅಧೋಗತಿಗೆ ಇಳಿಯುತ್ತಿದೆಯೇ?

ಮೇಲೆ ಹೇಳಿದಂತೆ ಸಮಾಜ ಶಾಸ್ತ್ರ ನಮ್ಮನ್ನು ನಿರಾಶರನ್ನಾಗಿ ಮಾಡುವದಿಲ್ಲ. ಇಂತಹ ಸಮಯದಲ್ಲಿಯೂ ಕೂಡ ಅಲ್ಲಲ್ಲಿ ಹಲವು ಶ್ರೇಷ್ಠ ಮಾನವರು ಇದ್ದೇ ಇದ್ದಾರೆ. ಶಾಂತಿ ಸಮರವನ್ನೂ ವಿಶ್ವ ಕುಟುಂಬದ ದೃಷ್ಟಿಯನ್ನೂ ಉಪದೇಶಿಸುವ ಮಹಾತ್ಮಾ ಗಾಂಧಿಯವರು ಅವರಲ್ಲೊಬ್ಬರು. ಇಂತಹ ಒಂದೇ ಒಂದು ವ್ಯಕ್ತಿ ಕೂಡ ಮಾನವ ಸಮಾಜವನ್ನು ಎತ್ತಿ ಹಿಡಿಯಲು ಮಾಡುತ್ತಿರುವ ಯತ್ನವನ್ನು ನೋಡಿದರೆ, ಮಾನವ ಸಮಾಜ ಎಂದೂ ಅಧೋಗತಿಗೆ ಹೋಗಲಾರದೆಂಬ ಧೈರ್ಯ ಬರುವಂತಿದೆ. ನಮ್ಮ ಸಮಾಜ ಈಗ ರೋಗಗ್ರಸ್ತ ಸಮಾಜವಾಗಿದೆ. ಸತ್ತ ಸಮಾಜದಂತಿದೆ. ಅದರಲ್ಲಿ ಜೀವ ಕಳೆಯನ್ನು ತುಂಬಬೇಕಾಗಿದೆ. ಹಾಗೆ ಮಾಡಲು ಮಾನವನಲ್ಲಿ ಶಕ್ತಿ ಇದೆ. ಸಮಾಜದಲ್ಲಿಯ ಕೊಳೆಯನ್ನು ತೊಳೆದು, ಭಾರತೀಯ ಸಮಾಜ ಪ್ರಗತಿಯ ಮೇಲ್ಮೆಟ್ಟಲುಗಳನ್ನೇರುವಂತೆ ಯುವಕರು ಯತ್ನಿಸಬೇಕು.

---

## ಕನ್ನಡ ಸುದ್ದಿ

### ಕನ್ನಡಕ್ಕೆ ರಾಜ ಪ್ರೋತ್ಸಾಹ

ಶ್ರೀಮನ್ಮಹಾರಾಜರವರು ಶ್ರೀ. ಜಯಚಾಮರಾಜ ಒಡೆಯರವರು, ಶ್ರೀ. ಮತಿಘಟ್ಟದ ಕೃಷ್ಣಮೂರ್ತಿಗಳು ಮಾಡಿರುವ 'ಜನಪದ ಸಾಹಿತ್ಯ' ಸಂಗ್ರಹವನ್ನು ಪರಾಮರ್ಶಿಸಿ, ಮೆಚ್ಚಿ ೧೦೦ ರೂ.ಗಳನ್ನು ಅನುಗ್ರಹಿಸಿರುತ್ತಾರೆಂದು ತಿಳಿಸಲು ಸಂತೋಷವಾಗುತ್ತದೆ.

**ಬೆಳಗಾಂವಿ: ಲಾ ಕಾಲೇಜು ಕರ್ನಾಟಕ ಸಂಘ**

ರಾಜಾ ಲಖಮಗೌಡಾ ಲಾ ಕಾಲೇಜು ಕರ್ನಾಟಕ ಸಂಘದಲ್ಲಿ ೭-೮-೪೩ನೆಯ ದಿನ ಪ್ರೊ. ಡಿ.ಆರ್. ಮಜಲಿ ಅವರ ಅಧ್ಯಕ್ಷತೆಯಲ್ಲಿ 'ರವೀಂದ್ರ ದಿನ'ವನ್ನು ಆಚರಿಸಲಾಯಿತು. ಕವಿ. ರವೀಂದ್ರರ ಕೃತಿಗಳಿಂದ ವಾಚನವೂ ಅಭಿನಯವೂ ಏರ್ಪಟ್ಟಿದ್ದುವು.

ಸಂಘದ ಆಶ್ರಯದಲ್ಲಿ ೧೪-೮-೪೩ನೆಯ ದಿನ 'ವಕೀಲ ವೃತ್ತಿಗಿಂತ ಹೀನ ವೃತ್ತಿ ಮತ್ತೊಂದಿಲ್ಲ' ಎಂಬ ವಿಷಯದ ಮೇಲೆ ಚರ್ಚೆ ನಡೆಯಿತು. ಶ್ರೀ. ಅಕ್ಕಾದಾಸ ಅವರು ಅಧ್ಯಕ್ಷತೆ ವಹಿಸಿದ್ದರು.

**ಬೆಂಗಳೂರು: ರವೀಂದ್ರ ದಿನ**

೩೧-೮-೧೯೪೩ನೆಯ ಮಂಗಳವಾರ ಸಂಜೆ ಬೆಂಗಳೂರು ವಿಶ್ವವಿದ್ಯಾನಿಲಯ ಸಂಘದಲ್ಲಿ ರವೀಂದ್ರ ದಿನಾಚರಣೆ ನಡೆಯಿತು. ರಾಜಸೇವಾಪ್ರಸಕ್ತ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ಅಧ್ಯಕ್ಷತೆ ವಹಿಸಿದ್ದರು.

**ತುಮಕೂರು: ಇಂಟರ್ ಕಾಲೇಜು ಸಂಘ**

ಶ್ರೀ. ಕೆ. ವಿ. ರಾಘವಾಚಾರ್ಯರು ೨೮-೮-೪೩ನೆಯ ಶನಿವಾರ ಸಂಜೆ 'ರುದ್ರ ಕಾವ್ಯಗಳು' ಎಂಬ ವಿಷಯವಾಗಿ ಭಾಷಣ ಮಾಡಿದರು.

**ಕನ್ನಡ ಕೃತಿಮಾಲೆ**

### ೧. ಪ್ರಾರ್ಥನೆ

**ರಾಗ – ಮಲಯಮಾರುತ** **ತಾಳ – ಆದಿ**

**ಆರೋಹಣ** – ಸ ರಿ ಗ ಪ ಧ ನಿ ಸ
**ಅವರೋಹಣ** – ಸ ನಿ ಧ ಪ ಗ ರಿ ಸ

ಸಾರ ಸರಸ ಸಂಸ್ಫೂರ್ತಿಯ ನೀಡು
ಸಾರದೆ ಶಾರದೆ ನೀನೊಲಿದು ಸದಾ ॥ ಪ ॥

ನೀರಜಮುಖಿ ಮುಂಜಾವದ ಬೆಳಕಲಿ
ಪಾರದೋರದ ತೆರದಿ ನೆಲಸಿ ಸಂ
ಸಾರದಾಸರೆಯ ಹದನ ಕೋರಿ ನಲ
ವೇರಿ ನೆರೆ ನುತಿಪ ಭಕುತರಿಗೆ ನೀ ॥ ಚ ॥

— ಶ್ರೀ ಗುಹ

**ಸ್ವರ ಜೋಡಣೆ:**
ವೈಣಿಕ ವಿದ್ವಾನ್ ಶ್ರೀ. ಮೈಸೂರು ಎಲ್. ರಾಜಾರಾಯರು.

| ೦ | । | । | |
|---|---|---|---|
| ಗಾಗಪ ಧನಿರಿಸ ನಿಧ | ಪಾಗ ನಿಧಪಾ | ಗಾಧಪ ಗರಿಸರಿ | † |
| ಸಾರಸ ರ . . ಸ ಸಂ. | ಸ್ಫೂ.. ರ್ತಿ. ಯ | ನೀ . . ಡು. . . | |
| ಸಾನಿ ರಿಸರೀ ಗರಿಗಪ | ಧ ನಿ ಸಾ ನಿ ಧ | ಪಗಧಪ ಗರಿಸರಿ | ಪ |
| ಸಾ. . ರ . ದೆ ಶಾ.ರದೆ | ನೀ . . ನೊಲಿ | ದು . ಸ. ದಾ. . . | |
| ಪಾಗ ನಿಧ ಪಗಧಪ ಗರಿರಿಸ | ಸಾ ಸರೀಗರೀ | ಗ ಗ ಪ ಪ | |
| ನೀ.. ರಜ ಮು.ಖಿ. ಮುಂ.. | . ಜಾ . ವದ | ಬೆ ಳ ಕ ಲಿ | |
| ಗಾಪಗ ಗರಿಪಗ ಗರಿರಿಸ | ನಿ ಧ ನಿ ಸ | ಸ ರಿ ಗಾ | |
| ಪಾ . ರ ದೋ.. ರ . ದ. | ತೆ ರ ದಿ ನೆ | ಲ ಸಿ ಸಂ | |
| ಪಾಧ ಧಪಗ ಪರಿಗಪಪ | ಪ ಧ ಪ ಧ | ನಿ ಸ ರಿ ಸ | |
| ಸಾ . ರ . . ದಾ. ಸರೆಯ | ಹ ದ ನ.ಕೋ | . ರಿ ನ ಲ | |
| ಗರಿ ಪಗರಿ ಸಾನಿಧನೀ. | ಸ ನಿ ಧ ಪ | ಗಾಧಪ ಗರಿಸರಿ | † |
| ವೇ. ರಿನೆರೆ ನು ತಿ . ಪ . | ಭ ಕು ತ ರಿ | ಗೆ . . ನೀ. . . | ಚ |

## ಪರಿಷತ್ತಿನ ಸುದ್ದಿ

### ಪರಿಷತ್ತಿನ ಸದಸ್ಯರಲ್ಲಿ ವಿಜ್ಞಾಪನೆ

ಬರುವ ಡಿಸೆಂಬರು ತಿಂಗಳು ಶಿವಮೊಗ್ಗದಲ್ಲಿ ನಡೆಯಲಿರುವ **ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರ ಆಯ್ಕೆ** ಸದ್ಯದಲ್ಲಿ ನಡೆಯುತ್ತದೆ. ಪರಿಷತ್ತಿನ ನಿಬಂಧನೆ ೪೭ (೧)ರ ಮೇರೆಗೆ ಈ ಆಯ್ಕೆಯಲ್ಲಿ ಪ್ರತಿಯೊಬ್ಬ ಸದಸ್ಯರೂ ತಮ್ಮ ಅಭಿಮತವನ್ನು ಕೊಡಬೇಕಾಗಿದೆ. ಮತ ಕೊಡುವ ಅರ್ಹತೆಯನ್ನು ಪಡೆಯಬೇಕಾದರೆ ತಮ್ಮಿಂದ ಪರಿಷತ್ತಿಗೆ ಸಲ್ಲಬೇಕಾದ ಎಲ್ಲ ಹಣವನ್ನೂ ಆಯ್ಕೆಯ ವೇಳೆಗೆ ಪೂರ್ತಿಯಾಗಿ ಸಲ್ಲಿಸಬೇಕು, ಆದಕಾರಣ ಸದಸ್ಯರು ತಮ್ಮಿಂದ ಸಲ್ಲಬೇಕಾಗಿರಬಹುದಾದ ಚಂದಾ ಬಾಕಿಯನ್ನು ಕೂಡಲೆ ಪರಿಷತ್ತಿಗೆ ಕಳಿಸಿಕೊಟ್ಟು ಉಪಕಾರ ಮಾಡಬೇಕಾಗಿ ಪ್ರಾರ್ಥನೆ.

೧೮–೮–೧೯೪೩
ಬೆಂಗಳೂರು

ಬಿ. ವೆಂಕೋಬರಾವ್
ಕಾರ್ಯದರ್ಶಿ

### ಪರಿಷತ್ತಿನ ಸದಸ್ಯರ ಬೆಳವಣಿಗೆ

**ಸಹಾಯಕ ಸದಸ್ಯರು (೧೦೦ ರೂ.):** ಶ್ರೀ.ಗಳಾದ ೧. ಪಿ. ಆರ್. ರಾಮಯ್ಯನವರು, ಬಿ.ಎಸ್‌ಸಿ., ಸಂಪಾದಕರು, ಡೈಲಿ ನ್ಯೂಸ್, ಬೆಂಗಳೂರು. ೨. ಎ. ಸಿ. ಶ್ರೀಕಂಠಯ್ಯನವರು, ಮ್ಯಾನೇಜರ್, ಹೈದರಾಬಾದ್ ಬ್ಯಾಂಕ್, ನಿಜಾಂಶಾಹಿ ರೋಡ್, ಹೈದರಾಬಾದ್. ೩. ಡಿ. ಎಚ್. ಚಂದ್ರಶೇಖರಯ್ಯನವರು, ಬಿ.ಎ., ಎಲ್‌ಎಲ್.ಬಿ., ನ್ಯಾಯವಿಧಾಯಕ ಸಭೆಯ ಅಧ್ಯಕ್ಷರು, ಬೆಂಗಳೂರು. ೪. ಗುರು ಭೀಮಾಚಾರ್ಯ ವಿ. ಸೂಲಿಭಾವಿಯವರು, ಬಿ.ಎ., ಜಿ.ಡಿ.ಎ. ಕಮರ್ಷಿಯಲ್ ಕಾರ್ಪೊರೇಷನ್, ಹೈದರಾಬಾದು.

**ಸಾಮಾನ್ಯ ಸದಸ್ಯರು (೩ ರೂ.):** ೧. ಶ್ರೀಮಾನ್ ಕೆ. ವೆಂಕಟಾಚಲ ಅಯ್ಯಂಗಾರ್ ಅವರು, ಎಂ.ಎಸ್‌ಸಿ., ಗಣಿತ ಶಾಸ್ತ್ರದ ಅ॥ ಪ್ರೊಫೆಸರು, ಇಂಟರ್‌ಮೀಡಿಯೇಟ್ ಕಾಲೇಜು, ತುಮಕೂರು. ೨. ಶ್ರೀಮತಿ ಜಿ. ಮಣಿಬಾಯಿ ಅವರು, ೪, ೩ನೆಯ ಕ್ರಾಸ್ ರಸ್ತೆ, ಬಸವನಗುಡಿ.

**ಅಂಗಸಂಸ್ಥೆ:** ಕನ್ನಡ ಸಾಹಿತ್ಯ ಸಂಘ, ರಂಗಂಪೇಟೆ, ಸುರಪುರ.

### ಗಮಕ ನಿಧಿಗೆ ಸಹಾಯ

ಬೆಂಗಳೂರು ಇಂಟರ್‌ಮೀಡಿಯೇಟ್ ಕಾಲೇಜಿನಲ್ಲಿ ಕನ್ನಡ ಅ॥ ಪ್ರೊಫೆಸರಾದ ಶ್ರೀ. ತೀ. ನಂ. ಶ್ರೀಕಂಠಯ್ಯ, ಎಂ.ಎ. ಅವರು ತಮ್ಮ ಸೋದರತ್ತೆ ದಿವಂಗತೆ ಶ್ರೀಮತಿ ಲಕ್ಷ್ಮೀದೇವಮ್ಮನವರ ನೆನಪಿನಲ್ಲಿ ಪರಿಷತ್ತಿನ **ಗಮಕ ನಿಧಿಗೆ ೧೦೦ ರೂ.ಗಳ ದ್ರವ್ಯ ಸಹಾಯ** ಮಾಡಿರುತ್ತಾರೆ. ಇದನ್ನು ಪರಿಷತ್ತು ಕೃತಜ್ಞತೆಯಿಂದ ಸ್ವೀಕರಿಸಿದೆ.

### ರಾಜಸೇವಾಸಕ್ತ ಶ್ರೀ. ಬೆಳ್ಳಾವೆ ವೆಂಕಟನಾರಾಯಣಪ್ಪನವರ ಸ್ಮಾರಕ ಉಪನ್ಯಾಸ ನಿಧಿ

ಈ ಕೆಳಗಿನ ಸಹಾಯವನ್ನು ಕೃತಜ್ಞತೆಯಿಂದ ಸ್ವೀಕರಿಸಿದೆ.

| | | | |
|---|---|---|---|
| ಹಿಂದಿನ ಸಂಚಿಕೆಯಲ್ಲಿ: ರೂ. | ೭೪೫ | ೦ | ೦ |
| ಶ್ರೀಗಳಾದ | | | |
| ೧. ಬೆಲ್ದೋಣಿ ಭೀಮರಾಯರು, ಬಳ್ಳಾರಿ | ೧೦ | ೦ | ೦ |
| ೨. ರಾವ್‌ಸಾಹೇಬ್ ಎಂ. ರಾಮರಾಯರು | ೧೦ | ೦ | ೦ |
| ೩. ಡಾ॥ ಸಿ. ಬಿ. ರಾಮರಾಯರು | ೧೦ | ೦ | ೦ |
| ೪. ಎಸ್. ವಿ. ಶ್ರೀನಿವಾಸರಾಯರು | ೧೦ | ೦ | ೦ |
| ೫. ಕೆ. ವೆಂಕಟಾಚಲ ಅಯ್ಯಂಗಾರ್ ಅವರು, ತುಮಕೂರು | ೫ | ೦ | ೦ |
| ೬. ಬಿ. ಎಸ್. ಶಾಮರಾಯರು, ಮೈಸೂರು | ೫ | ೦ | ೦ |
| ೭. ಜಿ. ಎಸ್. ಕೃಷ್ಣಮೂರ್ತಿ ಅವರು, | ೨ | ೦ | ೦ |
| ೮. ದೇವುಡು ನರಸಿಂಹ ಶಾಸ್ತ್ರಿಗಳು | ೨ | ೦ | ೦ |
| | ೭೯೯ | ೦ | ೦ |

### ಮಹಿಳಾ ಶಾಖೆ

**ತಾ॥ ೪–೯–೧೯೪೩ನೆಯ ಶನಿವಾರ ಸಂಜೆ ೬–೩೦ ಗಂಟೆಗೆ** ಪರಿಷನ್ಮಂದಿರದಲ್ಲಿ ಶ್ರೀಮತಿ ಟಿ ಎಸ್. ಚಿನ್ನಮ್ಮನವರಿಂದ **ಹಾಡುಗಾರಿಕೆ** ನಡೆಯುತ್ತದೆ.

### ಮೈಸೂರು ಪ್ರಾಂತ ಸಮಿತಿ

**ತಾ॥ ೮–೯–೧೯೪೩ನೆಯ ಬುಧವಾರ ಸಂಜೆ ೭ ಗಂಟೆಗೆ** ಪರಿಷನ್ಮಂದಿರದಲ್ಲಿ ಶ್ರೀ. ತೀ. ನಂ. ಶ್ರೀಕಂಠಯ್ಯ, ಎಂ.ಎ., ಅವರು **"ಹರಿಹರ ಕವಿಯ ರಗಳೆಗಳು"** ಎಂಬ ವಿಷಯದ ಮೇಲೆ ಉಪನ್ಯಾಸ ಮಾಡಲು ದಯವಿಟ್ಟು ಸಮ್ಮತಿಸಿದ್ದಾರೆ.

೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ : ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ : ಆಣೆ ೧॥
ಬಿಡಿ ಪತ್ರಿಕೆ : ೬ ಕಾಸು




ಸಂಪಾದಕ :
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈ ಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೪೬
ಬೆಂಗಳೂರು : ಶುಕ್ರವಾರ, ಸೆಪ್ಟೆಂಬರ್ ೧೦, ೧೯೪೩

ವಿಮರ್ಶೆ

## ಸಂಧ್ಯಾಕಾಲ

(ಮೂರು ಅಂಕಗಳ ಸಾಮಾಜಿಕ ನಾಟಕ)

ಬರೆದವರು : ಶ್ರೀರಂಗ

ಬೆಂಗಳೂರು ವಸಂತ ಗ್ರಂಥಮಾಲೆಯ ಎರಡನೆಯ ಪ್ರಕಟನೆ.
ಕ್ರೌನ್ ಅಷ್ಟಪತ್ರ. ೭೬ ಪುಟಗಳು. ಬೆಲೆ ೧ ರೂಪಾಯಿ.

ಕನ್ನಡಿಗರಿಗೆ ಶ್ರೀರಂಗರ ಹೆಸರನ್ನು ಹೊಸದಾಗಿ ಪರಿಚಯ ಮಾಡಿಕೊಡಬೇಕಾಗಿಲ್ಲ. ಅವರು ಮುಖ್ಯವಾಗಿ ನಾಟಕಕಾರರೆಂದು ನಾಡಿಗೆ ಸುಪರಿಚಿತರು. ಅವರ ಹರಿತವಾದ ಬುದ್ಧಿಶಕ್ತಿ, ವ್ಯಂಗ್ಯ ಹಾಸ್ಯ, ಕಟು ವಿಡಂಬನೆ, ಮಾರ್ಮಿಕವಾದ ಮಾತುಗಾರಿಕೆ, ಹದಿರು ನುಡಿಯ ಹೆಕ್ಕಳ ಮತ್ತು ಅವರ ವಿಚಾರ ಸರಣಿ, ವ್ಯಕ್ತಿತ್ವ– ಇವುಗಳೆಲ್ಲ ಅವರ ನಾಟಕಗಳಲ್ಲಿ ಚೆನ್ನಾಗಿ ಹೊಮ್ಮಿವೆ. ಬರಿಯ ವಿನೋದಕ್ಕಾಗಿ ಇಲ್ಲ ಅವರ ನಾಟಕಗಳು; ಅವು ವಿಚಾರಕ್ಕಾಗಿ, ವಿಕಾಸಕ್ಕಾಗಿ– ವಿಡಂಬನ ವಿನೋದಗಳ ಮೂಲಕ. ಬರಿಯ ಒಂದು ಸ್ವಾರಸ್ಯವಾದ ಕಥೆಯನ್ನು ದೃಶ್ಯರೂಪದಲ್ಲಿ ಹೇಳಲು ಮಾತ್ರವಲ್ಲದೆ, ನಾಟಕಕಾರನು ತನ್ನ ವಿಚಾರಗಳನ್ನು ಮತ್ತು ತನ್ನ ಕಾಲದ ಸಮಸ್ಯೆಗಳನ್ನು ಜನರ ಮುಂದೆ ಮಂಡಿಸುವುದಕ್ಕೆ, ಅವರನ್ನು ವಿಚಾರಪರರನ್ನಾಗಿ ಮಾಡುವುದಕ್ಕೆ, ನಾಟಕ ಉತ್ತಮಸಾಧನವಾಗಿ ಪರಿಣಮಿಸಬಲ್ಲದು. ಜಗತ್ ಪ್ರಸಿದ್ಧರಾದ ಇಬ್ಸೆನ್, ಗಾಲ್ಸ್‌ವರ್ದಿ, ಷಾ ಮೊದಲಾದವರ ನಾಟಕಗಳು ಈ ಬಗೆಯವು. ಶ್ರೀರಂಗರ ನಾಟಕಗಳಾದರೂ ಬಹುಮಟ್ಟಿಗೆ ಈ ಜಾತಿಗೆ ಸೇರಿದವು; ಇವುಗಳಲ್ಲಿ ಮುಖ್ಯವಾಗಿ ಷಾ ಅವರ ಮಾರ್ಗದ ಅನುಸರಣ ಕಂಡುಬರುತ್ತದೆ. ಷಾ ಅವರ ನಾಟಕಗಳಲ್ಲಿ ಎಂತೋ ಅಂತೆ ಶ್ರೀರಂಗರ ನಾಟಕಗಳಲ್ಲೂ ಮಾತಾಡುತ್ತಿರುವವರು ಪಾತ್ರಗಳೇ ಇಲ್ಲವೆ ನಾಟಕಕಾರರೇ? ಎಂಬ ಸಂದೇಹ ಹಲವೊಮ್ಮೆ ಹುಟ್ಟುತ್ತದೆ. ನಾಟಕ ಕಲೆಯಲ್ಲಿ ಇದು ಕುಂದೇ ಅಲ್ಲವೇ ಎಂಬುದು ಚರ್ಚೆಯ ವಿಷಯ; ಭಿನ್ನಾಭಿಪ್ರಾಯವಿರಬಹುದಾದ ಸಂಗತಿ; ಇಲ್ಲಿಯಂತೂ ಅಪ್ರಕೃತ. ಆದರೂ, ಈ ಅಂಶವನ್ನಿಲ್ಲಿ ಎತ್ತಿದುದರ ಉದ್ದೇಶ ಇಷ್ಟು: ಶ್ರೀರಂಗರ ಈ ನಾಟಕ, ಅವರ ಕೆಲ ಗೆಳೆಯರು ಅಭಿಪ್ರಾಯಪಟ್ಟಿರುವಂತೆ (ಹಾಗೆಂದು ಗ್ರಂಥಕರ್ತರು 'ಅರಿಕೆ'ಯಲ್ಲಿ ತಿಳಿಸಿದ್ದಾರೆ), ಸಂವಿಧಾನಕದ ದೃಷ್ಟಿಯಿಂದ ಅವರ ಮಿಕ್ಕ ಒಂದೂ ನಾಟಕದಂತಿಲ್ಲ; ನಿಜ. ಆದರೆ ಬೇರೆಯ ತೆರನಾಗಿರುವುದೇ ಈ ನಾಟಕದ ಗುಣ ಅಥವಾ ವೈಶಿಷ್ಟ್ಯ ಅಲ್ಲ; ಅವರ ಇದುವರೆಗಿನ ಕೃತಿಗಳಲ್ಲಿ ಅಷ್ಟಾಗಿ ಕಾಣಬರದ ಗುಣಗಳು ಈ ನಾಟಕದಲ್ಲಿ ಒಡಮೂಡಿವೆ; ಉಪನ್ಯಾಸಕ ಶ್ರೀರಂಗರು ಸಂಪೂರ್ಣವಾಗಿ ನಿಷ್ಕ್ರಮಿಸಿ ನಾಟಕಕಾರ ಶ್ರೀರಂಗರು ಪ್ರವೇಶಿಸಿದ್ದಾರೆ. ಸನ್ನಿವೇಶ ಜೋಡಣೆಯ ಜಾಣ್ಮೆ; ಮೊದಲಿಂದ ಕಡೆಯವರೆಗೆ ಅಪ್ರಕೃತಗಳಿಗೆ ಎಡೆಗೊಡದೆ ಗುರಿಯ ಕಡೆಗೇ ಒಯ್ಯುವ ವಸ್ತು ಪ್ರತಿಪಾದನ; ಮಿತವಾದ, ಬಿಗಿಯಾದ, ವ್ಯಂಜಕವಾದ, ಸ್ವಾಭಾವಿಕ ಮಾತುಗಾರಿಕೆ; ಎಲ್ಲಿಯೂ ಕುಂಟದೆ ತಳುವದೆ ನೇರವಾಗಿ ಸಾಗುವ ಸ್ವಾರಸ್ಯವಾದ ಹಾಸ್ಯಮಯ ಸಂಭಾಷಣೆ; ಕಟುವಾದರೂ ದಿಟವನ್ನು ನುಡಿಯುವ, ಕೆಲವರಿಗೆ ಹಿತವೆನಿಸದಿದ್ದರೂ ಮಿತವಾದ ವಿಡಂಬನೆ– ಇವೆಲ್ಲ ಗುಣಗಳು ಅರಳಿ, ಅವುಗಳ ಸಮುದಾಯ ಶೋಭೆ ನಾಟಕಕ್ಕೆ ವಿಶೇಷ ಕಳೆಕೊಟ್ಟು ವಸ್ತುವಿನ ಸಾಮಾನ್ಯತೆಯನ್ನು ಮರಸಿದೆ.

ನಾಟಕ ವಸ್ತುವನ್ನು ಸಾಮಾನ್ಯವೆಂದೆವು: ಎಂದರೆ ಇದೇ ವಸ್ತುವನ್ನು ಇತರರು ಪ್ರತಿಪಾದಿಸಿ ನಾಟಕಗಳನ್ನು ಬರೆದಿದ್ದಾರೆಂದು ಅರ್ಥವಲ್ಲ; ನೂತನವಲ್ಲವೆಂದು, ಅಷ್ಟೆ. ಇವರು ಮಾಡಿರುವ ಕೆಲಸವನ್ನೆ (ಎಂದರೆ, ಬ್ರಾಹ್ಮಣ್ಯದ ಅರ್ಥವಿಲ್ಲದ ಬಹಿರಾಚರಣೆಗಳ ಖಂಡನೆಯನ್ನು) ಹಿಂದೆ ಪುರಂದರದಾಸರು, ವಚನಕಾರರು, ಕೆಲ ಜೈನ ಕವಿಗಳು ಮತ್ತು ಈಚೆಗೆ ಕೈಲಾಸಂ ಅವರು, ಕಾರಂತರು ಮೊದಲಾದ ಆಧುನಿಕರು ಮಾಡಿದ್ದಾರೆ. ಆದರೆ, ಕುತ್ತವಿನ್ನೂ ಇರುವುದರಿಂದ ಮದ್ದು ಕೊಡುತ್ತಿರಲೇಬೇಕು. ಆ ಕೆಲಸವನ್ನು ಶ್ರೀರಂಗರು ಪರಿಣಾಮಕಾರಿಯಾಗಿ ಮಾಡಿದ್ದಾರೆ.

**ನಾಟಕದ ಮುಖ್ಯ ವಸ್ತು :**

ಬ್ರಾಹ್ಮಣ ಮುದುಕನೊಬ್ಬನ ದಿನಚರಿಯನ್ನು ಚಿತ್ರಿಸಿ, ಆ ಮೂಲಕ "ಬ್ರಾಹ್ಮಣ್ಯದ ಹಿರಿಮೆಯನ್ನು ಪ್ರಶ್ನಿಸಿರುವುದಲ್ಲದೆ ಅವರ ಮೂಢ ರೂಢಿಯಾಚಾರದ ಪೊಳ್ಳನ್ನು . . . ತೋರಿಸಿದ್ದಾರೆ" ನಾಟಕಕಾರರು. ಪ್ರಾತರ್, ಮಧ್ಯಾಹ್ನ, ಸಾಯಂ– ಈ ಮೂರೂ ಸಂಧ್ಯಾಕಾಲಗಳಲ್ಲಿ ಸಂಧ್ಯಾವಂದನೆ ಮಾಡುವುದಕ್ಕಿಂತ ಅದನ್ನು ಮಾಡಬೇಕೆಂಬ ಒದರಾಟವೇ ಹೆಚ್ಚಾಗಿರುವ, ಈಗಿನ ಕಾಲದವರಿಗೆ ಎರಡು ಬಟ್ಟಲು ಚಹ ಕುಡಿಯುವುದು ಎಷ್ಟು ಸುಲಭವೊ ಅಷ್ಟು ಸುಲಭವಾಗಿ ಎರಡು ಮದುವೆ ಮಾಡಿಕೊಂಡಿರುವ, ಬಡ್ಡಿಗೆ ಸಾಲ ಕೊಟ್ಟು ಬಡ್ಡಿ ಸಮೇತ ಅದನ್ನು ಹಿಂದಕ್ಕೆ ಪಡೆಯುವುದೆ ಪರಮೋಪಕಾರವೆಂದು ತಿಳಿದಿರುವ, ಸಂಧ್ಯಾಕಾಲವಾದೊಡನೆ ಗುಡಿಗೆ ಹೋಗುವ ನೆಪ ಹೇಳಿ ಮಂಜಾಸಾನಿಯ ಮನೆಗೆ ಹೋಗುವ, ಆ ಅವಸರದಲ್ಲಿ ಪಾವಟಿಗೆ ಎಡವಿ ಕಾಲುಮುರಿದುಕೊಳ್ಳುವ, ಜೀವನದ ಸಂಧ್ಯಾಕಾಲದಲ್ಲಿದ್ದು ಆ ಕಾಲ ಕೂಡ ಮುಗಿಯುವುದರಲ್ಲಿದ್ದರೂ ಆಚಾರದ ಸೋಗಿನಲ್ಲಿ ಅನಾಚಾರ ಮಾಡುವ ಹಳೆಯ ಕಾಲದ ಬೂಟಾಟಿಕೆಯ ಬ್ರಾಹ್ಮಣನಿಗಿಂತ ಅವನ ಮಗ– ಸಂಧ್ಯಾವಂದನೆ ಮಾಡದ, ತಂದೆಯ ಕಾಟಕ್ಕಾಗಿ ಊಟಕ್ಕೆ ಕುಳಿತುಕೊಳ್ಳುವಾಗ ಮಾತ್ರ ಜನಿವಾರ ಹಾಕಿಕೊಳ್ಳುವ, ಬಾಲ ವಿಧವೆಯೆಂದು ತಿಳಿಯದೆ ಒಬ್ಬ ತರುಣಿಯನ್ನು ಒಲಿದ ತಪ್ಪಿಗೆ ಆಕೆಯನ್ನು ಮದುವೆಯಾಗಲು ತಯಾರಿರುವ ಅವನ ಮಗ– ಪುಟ್ಟುವಿನಂಥ ನೇರ ನಡತೆಯ ತರುಣ ಮೇಲು ಎನ್ನುವುದನ್ನು ಬಹು ಕೌಶಲದಿಂದ ಸೂಚಿಸಿದ್ದಾರೆ ನಾಟಕಕಾರರು.

ಬಾಲ ವಿಧವೆಯನ್ನು ತನ್ನ ತಂಗಿ ಎಂದು ಹೇಳಿ ಅವಳನ್ನು ಪುಟ್ಟುವಿಗೆ ಗಂಟುಹಾಕುವ ಉದ್ದೇಶದಿಂದ ಅವನ ಗೆಳೆಯ ವೆಂಕಪ್ಪ ಆಚಾರವಂತ ಬ್ರಾಹ್ಮಣನ ವೇಷದಲ್ಲಿ ಮುದುಕನ ಭೇಟಿಗೆ ಬರುವುದು, ಮದುವೆಯ ಪ್ರಸ್ತಾಪಕ್ಕೆ ಬಂದಿರುವ 'ಆಚಾರ್ಯ'ರನ್ನು ಸಾಲಕ್ಕಾಗಿ ಬಂದಿದ್ದಾರೆಂದು ಮುದುಕ ತಪ್ಪು ತಿಳಿದುಕೊಳ್ಳುವುದು, ತಾನು ಆಚಾರ್ಯರ ವೇಷದಲ್ಲಿ ಬಂದ ತಪ್ಪಿಗೆ ವೆಂಕಪ್ಪ ಆ ದಿನ ಅವರ ಮನೆಯಲ್ಲಿ ಪೂಜೆಮಾಡುವ ಕೆಲಸ ಒಪ್ಪಿಕೊಳ್ಳಬೇಕಾಗಿ ಬರುವುದು, ತನಗೆ ತಲೆಯಲ್ಲಿ ಚಂಡಿಕೆ ಇಲ್ಲದ್ದರಿಂದ ಅದನ್ನು ಮರಸಲು ಪಿತ್ತವಿಕಾರ ನಟಿಸಿ ತಲೆಗೆ ಒದ್ದೆ ಬಟ್ಟೆ ಕಟ್ಟಿಕೊಳ್ಳುವುದಾಗಿ ಹೇಳುವುದು ಮತ್ತು ಜನಿವಾರವೂ ಇಲ್ಲದ್ದರಿಂದ ಮಧ್ಯಾಹ್ನದ ವೇಳೆ ಮನೆಗೆ ಬಂದ ಅಂಚೆಯವನು ಹಾಗೂ ದಾಸಯ್ಯ ಇವರುಗಳಿಂದ ಜನಿವಾರ ಕಸಿದುಕೊಳ್ಳಲು ಪ್ರಯತ್ನಿಸುವುದು— ಮೊದಲಾದ ಸನ್ನಿವೇಶಗಳು ನಾಟಕಕಾರರ ನಾಟಕೀಯ ಚಮತ್ಕಾರ, ಹಾಸ್ಯ ದೃಷ್ಟಿಗಳಿಗೆ ನಿದರ್ಶನಗಳು; ಇವು ರಂಗದ ಮೇಲೆ ವಿಶೇಷ ರಂಜಕವಾಗಿರುವುದರಲ್ಲಿ ಸಂದೇಹವಿಲ್ಲ. ಆದರೆ, ಜನಿವಾರ ಸಂಪಾದನೆಯ ಪ್ರಕರಣವೊಂದೇ ಹೆಚ್ಚು ಕಡಮೆ ಇಡಿಯ ನಡುವಣ ಅಂಕವನ್ನು ಆಕ್ರಮಿಸಿಕೊಂಡಿರುವುದು ತುಸ ಮಿತಿಮೀರಿದವಂತೆ ತೋರುತ್ತದೆ.

ಬ್ರಾಹ್ಮಣಿಕೆಯ ಬಾಹ್ಯ ಲಕ್ಷಣಗಳನ್ನು ಭರ್ತ್ಸನೆ ಮಾಡುವ
(೨೯೯ನೆಯ ಪುಟಕ್ಕೆ)

# ಕನ್ನಡ ನುಡಿ

**ಶುಕ್ರವಾರ, ಸೆಪ್ಟೆಂಬರ್ ೧೦, ೧೯೪೩**

## ಮೈಸೂರು ಸಂಸ್ಥಾನದ ಪತ್ರಿಕೋದ್ಯೋಗಿಗಳ ಎರಡನೆಯ ಸಮ್ಮೇಳನ

ಈ ತಿಂಗಳು ೧೮, ೧೯ನೆಯ ತಾರೀಖುಗಳಲ್ಲಿ ಮೈಸೂರು ಸಂಸ್ಥಾನದ ಪತ್ರಿಕೋದ್ಯೋಗಿ ಸಂಘದ ಆಶ್ರಯದಲ್ಲಿ ಎರಡನೆಯ ಸಮ್ಮೇಳನ ಬೆಂಗಳೂರಿನಲ್ಲಿ ನಡೆಯುವುದು. ಮೂರು ವರ್ಷಗಳ ಹಿಂದೆ ಶ್ರೀ. ಡಿ. ವಿ. ಗುಂಡಪ್ಪನವರ ಅಧ್ಯಕ್ಷತೆಯಲ್ಲಿ ಮೊದಲನೆಯ ಸಮ್ಮೇಳನ ನಡೆಯಿತು. ಈ ಅಂತರದಲ್ಲಿ ಸಂಘದ ಸದಸ್ಯ ಸಂಪತ್ತು ಹೆಚ್ಚಿದೆ; ಸಂಸ್ಥಾನದಲ್ಲಿರುವ ಪತ್ರಿಕೋದ್ಯೋಗಿಗಳ ಹಿತಕ್ಕೂ ಪತ್ರಿಕೋದ್ಯಮದ ಮುನ್ನಡೆಗೂ ಕೈಕೊಳ್ಳಬೇಕಾದ ಕಾರ್ಯಕ್ರಮಗಳೇನು ಮುಂತಾಗಿ ಸಂಘ ಆಗಾಗ್ಗೆ ವಿಚಾರ ಮಾಡುತ್ತ ಬಂದಿದೆ. ಈಗ ಮತ್ತೆ ಸಮ್ಮೇಳನವಾಗಿ ಸೇರಿ ಈ ಮೂರು ವರ್ಷಗಳ ಆಲೋಚನೆಗಳನ್ನು ಪರಿಶೀಲಿಸಿ ತೀರ್ಮಾನಗಳಿಗೆ ಬರಲಿದೆ. ಸಮ್ಮೇಳನ ಯಶಸ್ವಿಯಾಗಲೆಂದು ಹಾರೈಸುತ್ತೇವೆ.

ಈ ಸಂದರ್ಭದಲ್ಲಿ ಒಂದು ಸಂತೋಷದ ಸಂಗತಿಯನ್ನು ನಾವು ನೆನಪುಮಾಡಿಕೊಳ್ಳಬೇಕಾಗಿದೆ. ಮೊದಲನೆಯ ಸಮ್ಮೇಳನದ ಕಾಲದಲ್ಲಿ ಬಡ ಪತ್ರಿಕೋದ್ಯೋಗಿಗಳ ಯೋಗಕ್ಷೇಮಕ್ಕಾಗಿ ಹಲವು ಯೋಜನೆಗಳನ್ನು ಕೈಗೊಳ್ಳಬೇಕೆಂದು ತೀರ್ಮಾನವಾಯಿತಷ್ಟೆ. ಅವುಗಳಲ್ಲಿ ಪತ್ರಿಕೋದ್ಯೋಗಿಗಳ ಸಹಾಯ ನಿಧಿಯ ಏರ್ಪಾಟೂ ಒಂದು. ಈ ನಿಧಿಗೆ ಹಣ ಸಂಗ್ರಹವಾಗುತ್ತಿದೆ. ಈಚೆಗೆ ಶ್ರೀಮನ್ಮಹಾರಾಜರವರು ಒಂದು ಸಾವಿರ ರೂಪಾಯಿಗಳನ್ನು ಕೊಟ್ಟು, ನಿಧಿಯ ಉದ್ದೇಶಕ್ಕೆ ತಮ್ಮ ಪ್ರೋತ್ಸಾಹವನ್ನು ಅನುಗ್ರಹಿಸಿರುವರು. ಪತ್ರಿಕೋದ್ಯಮ ನಾಡಿಗೆ ಎಂಥ ಶಕ್ತಿ, ವರ ಎಂಬ ವಿಷಯವನ್ನು ಮನಸ್ಸಿಗೆ ತಂದುಕೊಂಡು, ಈ ಉದ್ಯಮದಲ್ಲಿ ಆಸಕ್ತಿಯೂ ಅಭಿಮಾನವೂ ಉಳ್ಳ ದೇಶಬಾಂಧವರೆಲ್ಲ ಈ ನಿಧಿಯನ್ನು ಬೆಳಸಲು ಸಹಾಯ ಮಾಡಬೇಕೆಂದು ಪ್ರಾರ್ಥಿಸುತ್ತೇವೆ.

ಮೊದಲನೆಯ ಸಮ್ಮೇಳನದಿಂದ ಎರಡನೆಯ ಸಮ್ಮೇಳನದ ಹೊತ್ತಿಗೆ ಪತ್ರಿಕೋದ್ಯೋಗ ಕ್ಷೇತ್ರದಲ್ಲಿ ಆಗಿರುವ ವ್ಯತ್ಯಾಸಗಳು ಸ್ವಲ್ಪವಲ್ಲ. ಪತ್ರಿಕೆಗಳನ್ನು ನಡಸುವವರಿಗೂ, ಓದುವವರಿಗೂ ಈ ವೃತ್ತಿಯ ಗಾಂಭೀರ್ಯ ಗೌರವಗಳು ಮನವರಿಕೆಯಾಗುತ್ತಿದೆ. ಈ ವೃತ್ತಿಯ ಅವಲಂಬನೆ ದೇಶಕ್ಕೆ ಹಿತವೆಂಬ ನಂಬಿಕೆ ದೃಢವಾಗುತ್ತಿದೆ. ಎಷ್ಟು ಕಷ್ಟವಾದರೂ ಪತ್ರಿಕೆಗಳನ್ನು ನಿಲ್ಲಿಸದೆ ನಾಡ ಸೇವೆ ಮಾಡುವ ನಿಷ್ಠೆ ಬಲಿಯುತ್ತಿದೆ. ಈ ಒಂದು ಮನವರಿಕೆ, ನಂಬಿಕೆ, ನಿಷ್ಠೆ ಸ್ಥಾಯಿಯಾಗಲಿ. ಜನತೆಯ ವಿದ್ಯಾಪೀಠವೆನ್ನಿಸಿಕೊಂಡಿರುವ ಪತ್ರಿಕೋದ್ಯಮ ಎಲ್ಲ ಮುಖದಿಂದಲೂ ಮುಂದುವರಿದು ನಾಡಿಗೆ ಕಲ್ಯಾಣವಾಗಲಿ.

---

## ಒಂದು ಒಳ್ಳೆಯ ಸಲಹೆ

ಇಂಗ್ಲೆಂಡಿನಲ್ಲಿ ಸ್ಥಾಪಿತವಾಗಿರುವ ರಾಷ್ಟ್ರೀಯ ಪುಸ್ತಕ ಸಮಿತಿ (National Book Council) ಬಹು ಪ್ರಯೋಜನಕರವಾದ ಕೆಲಸವನ್ನು ಮಾಡುತ್ತಿದೆ. ಈಚೆಗೆ ಇಂಗ್ಲೆಂಡಿನಲ್ಲಿ 'ಕೈಗಾರಿಕೆಯ ಮನೋಧರ್ಮ', 'ಭೂಪಟಗಳು' ಎಂಬೀ ವಿಭಾಗಗಳಲ್ಲಿ ಪ್ರಕಟವಾಗಿರುವ ಪುಸ್ತಕಗಳ ಪಟ್ಟಿಯನ್ನು ಅದು ಪ್ರಕಟಿಸಿದೆ. ಶುದ್ಧ ಸಾಹಿತ್ಯ ವಿಭಾಗದ ಪುಸ್ತಕಗಳ ಪ್ರಕಟನೆಗಳಂತೆ ವಿಜ್ಞಾನಶಾಸ್ತ್ರ ವಿಭಾಗದ ಗ್ರಂಥ ಪ್ರಕಟನೆಗಳೂ ಜನಕ್ಕೆ ತಿಳಿಯಬೇಕಾದ ಆವಶ್ಯಕತೆಯಿದೆ ಎಂಬುದನ್ನು ಒತ್ತಿ ಹೇಳಬೇಕಾಗಿಲ್ಲ. ಈ ಪಟ್ಟಿಗಳ ಜೊತೆಗೆ ಸಮಾಚಾರ ಪತ್ರಿಕೆಯೂ ಇದ್ದು ಇವುಗಳಿಂದ ಇಂಗ್ಲೆಂಡಿನ ಜನಕ್ಕೆ ಮಾತ್ರವಲ್ಲದೆ ಬರಹಗಾರರಿಗೂ, ಪ್ರಕಾಶಕರಿಗೂ, ಪುಸ್ತಕ ವ್ಯಾಪಾರಿಗಳಿಗೂ ಬಹಳ ಉಪಯೋಗವಾಗುತ್ತಿದೆ.

ಈಚೆಗೆ ಮೇಲ್ಕಂಡ ಸಮಿತಿ ತನ್ನ ಕಾರ್ಯಕ್ಷೇತ್ರವನ್ನು ವಿಸ್ತರಿಸಿ, ವರ್ಷದ ಕೊನೆಯಲ್ಲಿ ಒಂದು ಉಪನ್ಯಾಸವನ್ನು ನಡಸುವ ಏರ್ಪಾಟನ್ನು ಕೈಗೊಂಡಿದೆ. ಇದರ ಉದ್ದೇಶ "ಬ್ರಿಟಿಷ್ ಪ್ರಜೆಗಳಿಗೆ ಅವರ ಸಾಹಿತ್ಯಸಂಪತ್ತನ್ನು ಜ್ಞಾಪಿಸಿಕೊಟ್ಟು, ಬಾಳಿಗೆ ಹೆಚ್ಚು ಐಶ್ವರ್ಯವನ್ನೂ, ಶಾಂತಿ ಸಮಾಧಾನಗಳನ್ನೂ ಕೊಡುವುದಕ್ಕೆ ತಕ್ಕ ಸಾಧನವನ್ನಾಗಿ ಪುಸ್ತಕಗಳನ್ನು ಸಾರ್ವತ್ರಿಕವಾಗಿ ಬಳಸಬೇಕೆಂದು ಪ್ರೋತ್ಸಾಹ ಕೊಡುವುದಾಗಿದೆ."

ಈ ವಿಚಾರವನ್ನು ಇಂಡಿಯನ್ ಪಿ. ಇ. ಎನ್. ಸಂಸ್ಥೆಯ ಮಾಸ ಪತ್ರಿಕೆ (ಸೆಪ್ಟೆಂಬರ್ ಸಂಚಿಕೆ) ಪ್ರಸ್ತಾವಿಸಿ, ಭಾರತಕ್ಕೆ ಒಂದು ರಾಷ್ಟ್ರೀಯ ಪುಸ್ತಕ ಸಮಿತಿಯ ಆವಶ್ಯಕತೆ ಇದೆ ಎಂಬ ಸಲಹೆಯನ್ನು ಕೊಟ್ಟಿದೆ.

ಭರತಖಂಡದ ಪುರೋಭಿವೃದ್ಧಿಗೆ ನಾನಾ ಬಗೆಯಲ್ಲಿ ಸಹಾಯ ಮಾಡುತ್ತಿರುವ ಈ ಸಂಸ್ಥೆಯ ದೂರದೃಷ್ಟಿಯಿಂದ ಕೂಡಿದ ಈ ಸಲಹೆಯನ್ನು ಸ್ವಾಗತಿಸಿ ಅದಕ್ಕೆ ಬೇಕಾದ ಪ್ರಚಾರಕೊಟ್ಟು ನೆರವಾಗುವುದು ನಾಡಿನ ಪತ್ರಿಕೆಗಳ ಕರ್ತವ್ಯವಾಗಿದೆ.

ಈಗಾಗಲೆ ನಮ್ಮ ನಾಡಿನಲ್ಲಿ ವಿಜ್ಞಾನ, ಪ್ರಾಚ್ಯವಿದ್ಯೆ ಮೊದಲಾದ ಹಲವು ಕ್ಷೇತ್ರಗಳಲ್ಲಿ ನಮ್ಮ ವಿವಿಧ ಭಾಷಾ ಪ್ರಾಂತಗಳು ಒಟ್ಟುಗೂಡಿ ವಿಚಾರ ವಿನಿಮಯಮಾಡಲು ಅವಕಾಶ ಒದಗಿದೆ. ಸಾಹಿತ್ಯ ಕ್ಷೇತ್ರದಲ್ಲಿ ಇನ್ನೂ ಒದಗಿಲ್ಲ. ಬಹಳ ಆಗತ್ಯವಾದ ಈ ಕೆಲಸವನ್ನು ಕೈಕೊಂಡು ಸಾಧಿಸುವುದು ಪ್ರತಿ ಪ್ರಾಂತದ ಭಾಷಾ ಸಾಹಿತ್ಯ ಸೇವಕರ, ಗ್ರಂಥ ಪ್ರಕಾಶಕರ ಕರ್ತವ್ಯವಾಗಿದೆ.

ಸಂಕ್ಷಿಪ್ತ ಭಾರತಗಳಂತಿರುವ ನಾಡಿನ ಬೇರೆ ಬೇರೆ ಪ್ರಾಂತಗಳವರು ಒಂದು ಕಡೆ ಸೇರಿ ನಾಡಿನ ಒಟ್ಟು ಐಶ್ವರ್ಯವನ್ನು ಬೆಳಸುವುದಕ್ಕೆ ಅನುಕೂಲಿಸುವ ಒಂದು ಅಖಿಲ ಭಾರತ ಸಾಹಿತ್ಯ ಪರಿಷತ್ತು, ಒಂದು ಅಖಿಲ ಭಾರತ ಗ್ರಂಥ ಸಮಿತಿ ಹುಟ್ಟಿ ಕೆಲಸ ಮಾಡುವುದು ನಮ್ಮ ಪರಿಷತ್ತಿಗೆ ಬಹಳ ಪ್ರಿಯವಾದ ವಿಚಾರವೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಅದಷ್ಟು ಬೇಗನೆ ಸ್ಥಾಪಿತವಾಗಲೆಂದು ಘಾರೈಸುತ್ತೇವೆ.

---

## ಅನ್ಯೋಕ್ತಿಗಳು

### ಮುಗಿಲು

ಜಲಕಣವ ಕೊಂಡೊಯ್ದು ಬಾನ ಸೇರಿದ ನೀನು
ಹಿರಿದು ಹಿರಿದಾಗುತ್ತ ಮೈಮರೆತೆ ಮುಗಿಲೆ!
ಉಪಕೃತಿಯ ನೆನೆಯದೆಯೆ, ಕಡಲಮೇಲೆಯೆ ನಿಂತು
ಗರ್ಜಿಸುವೆಯೇಕಿಂತು ತರವೆ ನಿನಗೆ?

### ಮೂರ್ಖ

ಮೂರ್ಖನನು ಸಜ್ಜನನ ಮಾಳ್ಪೆನೆಂಬವ ಜಗದಿ
ಬಾನೊಳಗೆ ಗುಡಿಕಟ್ಟಿ, ನೀರಿನಲಿ ಮನೆಕಟ್ಟಿ
ನೋವನರಿಯದೆ ನೆಲಸಿ, ನೀರಿನಿಂ ಗಾಳಿಯನು
ತೋಯಿಸುವೆನೆಂದೆಂಬ ಚತುರ ಪುರುಷ!

### ಹಿರಿಯರು

ರೂಪು ನೋಡಲು ಬಾಳ ಧಾರೆವೊಲು ಚೂಪು
ಕ್ರೌರ್ಯವೋ ಕೆರಳಿರುವ ಸರ್ಪಕ್ಕೆ ಸಾಟಿ
ಒಳವೊಕ್ಕು ನೋಡಿದರೆ ಕೆಲಜನರ ಮಾನಸವು
ದ್ರಾಕ್ಷೆಗಿಂತಲು ಮೆದುವು; ಹಿರಿಯರವರೆ!

### ದುಂಬಿ

ರಸ ತುಂಬಿ ತುಳುಕುವೀ ತಾವರೆಯ ಮಡಿಲಲ್ಲಿ
ಇನಿತೊಂದು ದಿನಗಳನು ಕಳೆದೆಯೈ ಮಧುಕರನೆ!
ಈಗಿಂತು ಕುಟಜದಲಿ ಜೇನಿನಾಸೆಗೆ ನೀನು
ಮನಸೋತು ಹಾರುವುದೆ ಮರಳು ಮರಳು!

— ಶ್ರೀ ಗುಹ

## ಸಂಧ್ಯಾಕಾಲ

[೨೨೭ನೆಯ ಪುಟದಿಂದ]

ನಾಟಕಕಾರರು, ರಂಗ ಪ್ರವೇಶ ಮಾಡುವ ದಾಸಯ್ಯನ ಪಾತ್ರದ ಪರಿಚಯವನ್ನು ಹೀಗೆ ಮಾಡಿಕೊಡುತ್ತಾರೆ:

"... ಅವನ ಮೈಯೊಳಗೆ (ಮೈಮೇಲೆ?) ಬಿಳಿದಾದ, ಉದ್ದವಾದ ಯಜ್ಞೋಪವೀತವಿದೆ; ಮುಖಚರ್ಯೆ (ಚಹರೆ?)ಯಲ್ಲಿ ಮಾತ್ರ ಬ್ರಾಹ್ಮಣ್ಯದ ಒಂದೂ ಲಕ್ಷಣವಿಲ್ಲ."

ಈ ಸ್ವಯಂ ವಿರೋಧೋಕ್ತಿ ಆಶ್ಚರ್ಯಕರವಾಗಿದೆ!

ನಾಟಕದ ಹೆಸರಿನ ವಿಚಾರವಾಗಿ ಒಂದೆರಡು ಮಾತು: ಕೃತಿಗಳ ಹೆಸರಿಡುವಿಕೆಯಲ್ಲೇ ಶ್ರೀರಂಗರ ಸಾಮರ್ಥ್ಯವನ್ನು ಸಂಕ್ಷಿಪ್ತದಲ್ಲಿ ಕಾಣುತ್ತೇವೆ. (ಉದಾ: ಹರಿಜನ್ವಾರ: ಹರಿಜನ–ವಾರ, ಹರಿ–ಜನ್ವಾರ); ಈ ನಾಟಕ ಮತ್ತೂ ಒಂದು ನಿದರ್ಶನ. ಇದರ ಹೆಸರಿನಲ್ಲಿ ಸೂಚಿತವಾಗಬಹುದಾದ ಅರ್ಥಗಳನ್ನು ವಸ್ತು ವಿವರಣೆಯ ಅವಸರದಲ್ಲಿ ಸೂಚಿಸಲು ಪ್ರಯತ್ನಪಟ್ಟದೆ. ಹೆಸರಿಗೆ ಹೀಗೂ ಅರ್ಥ ಕಲ್ಪಿಸಬಹುದೇನೋ: ಎಲ್ಲ ಸಮಾಜಗಳಂತೆ ಬ್ರಾಹ್ಮಣ ಸಮಾಜವೂ ಈಗ **ಸಂಧ್ಯಾಕಾಲ** (Transition)ದಲ್ಲಿದೆ — ಅದು ಈಗ ಇರುವಂತೆ ಉಳಿಯಲಾರದು; ಅಳಿಯಬೇಕು. ಅಳಿಯಬೇಕೇಕೆ? ಉಳಿಯಬಾರದೇಕೆ? ಉಳಿಯಬೇಕಾದರೆ ಹೇಗೆ? ನಿಜವಾದ ಬ್ರಾಹ್ಮಣ ವಾವುದು? ನಿಜವಾದ ಬ್ರಾಹ್ಮಣ್ಯ ಬರಿಯ ಹುಟ್ಟಿನಿಂದಲೆ, ಇಲ್ಲವೆ ಉತ್ತಮ ಜ್ಞಾನ ನಡತೆಗಳಿಂದಲೆ, ಇಲ್ಲವೆ ಎರಡೂ ಕೂಡಿಯೇ? ಮುಂದೆಯೂ ನಿಜವಾದ ಬ್ರಾಹ್ಮಣ್ಯದಿಂದ ಲೋಕೋಪಕಾರವಾಗಲಾರದೆ? ಹಾಗೆ ಆಗುವಂತಾಗಬೇಕಾದರೆ ಏನು ಮದ್ದು? ಎಂಬವು ಪ್ರಶ್ನೆಗಳು, ಸಮಸ್ಯೆ. ಈ ನಾಟಕದಲ್ಲಿ ಇವೇನೂ ಇಲ್ಲ; ಆದ್ದರಿಂದ ಉತ್ತರವೂ ಇಲ್ಲ; ಪರಿಹಾರೋಪಾಯವೂ ಇಲ್ಲ–ಸಹಜವಾಗಿ. ಆದರೂ, ಹಣ್ಣಿಗೆ ಉಂಡಿಗೆ ಹಾಕಿ ಹೋಳು ತೆಗೆದು ಹಣ್ಣಿನ ಅಂತಃಸ್ವರೂಪವನ್ನು ತೋರಿಸುವಂತೆ, ಸಂಧ್ಯಾಕಾಲದಲ್ಲಿರುವ ಬ್ರಾಹ್ಮಣ ಸಮಾಜದ ಪ್ರತೀಕ ವ್ಯಕ್ತಿಯನ್ನು ನಮ್ಮ ಮುಂದೆ ನಿಲ್ಲಿಸಿ ಅದರ ಈಗಿನ ನಿಜವಾದ ಸ್ವರೂಪವನ್ನು ತೋರಿಸಿ, ಅದರ **ಸಂಧ್ಯಾಕಾಲ** (ಅವಸಾನ ಕಾಲ) ಇದು, ಅದರ ಕಾಲ ಮುಗಿಯುತ್ತಿದೆ ಎಂದು ಸೂಚಿಸಿರಬಹುದಲ್ಲವೆ?

ಮೇಲಿನ ಅರ್ಥಗಳು ಹೇಗೂ ಇರಲಿ. ಇನ್ನೊಂದು ಅರ್ಥ ಹೊಳೆದದ್ದರಿಂದಲೂ ನಾಟಕಕ್ಕೆ ಈ ಹೆಸರು ಎಂದು ನಾಟಕಕಾರರೇ ಅರಿಕೆಯಲ್ಲಿ ತಿಳಿಸಿದ್ದಾರೆ: ಈಗ ಎರಡು ವರ್ಷಗಳಿಂದ ನಾಟಕಗಳನ್ನೇ ಬರೆಯದೆ ಇರುವುದರಿಂದ, ತಮ್ಮ 'ನಾಟ್ಯ ಸೂರ್ಯನು' ಇನ್ನು 'ಅಸ್ತವಾಗಬಹುದಾಗಿದೆ' ಎಂಬ ಶಂಕೆಯಿಂದ ಕನ್ನಡಿಗರನ್ನು ಶ್ರೀರಂಗರು ಬೀಳ್ಕೊಡಬಯಸಿದ್ದಾರೆ. ಇದು ನಿಜವಾಗಿಯೂ ಸಂತೋಷದ ಸಂಗತಿಯಲ್ಲ. 'ಸಂಧ್ಯಾಕಾಲ' ನಾಟಕದಲ್ಲಿ ಶ್ರೀರಂಗರ ನಾಟ್ಯ ಸೂರ್ಯನು (ಶೈಲಿಯ ದೃಷ್ಟಿಯಿಂದ) ನಡುನೆತ್ತಿಯ ಮೇಲೆ ಬೆಳಗುತ್ತಿದ್ದಾನೆ. ಇನ್ನೂ ಸಂಧ್ಯಾಕಾಲವೆಲ್ಲಿ ಬಂತು? ಆದ್ದರಿಂದ, ಶ್ರೀರಂಗರು ಇನ್ನೂ ದೊಡ್ಡ ದೊಡ್ಡ ಸಮಸ್ಯೆಗಳನ್ನು ತೆಗೆದುಕೊಂಡು ನಾಟಕಗಳನ್ನು ಬರೆದು, ನಲಿವು ಕೊಡುವುದರ ಮೂಲಕ ನಾಡಿಗೆ ತಿಳಿವಳಿಕೆಯನ್ನೂ ಪ್ರಬೋಧನೆಯನ್ನೂ ಉಂಟುಮಾಡಿ, ನಾಟಕಗಳ ಮೂಲಕವಾಗಿಯೇ ಇನ್ನೂ ಹೆಚ್ಚಿನ ನುಡಿಸೇವೆ ಮಾಡಲೆಂಬುದು ನಮ್ಮ ಮನಃಪೂರ್ವಕವಾದ ಹಾರೈಕೆ.

ಈಗ ಪುಸ್ತಕ ಪ್ರಕಟಿಸುವುದೇ ದೊಡ್ಡ ಸಾಹಸ. ಹಾಗಾದರೂ, ಈ ನಾಟಕವನ್ನು ಅಚ್ಚುಕಟ್ಟಾದ ರೀತಿಯಲ್ಲಿ ಪ್ರಕಟಿಸಿರುವುದಕ್ಕಾಗಿ 'ವಸಂತ ಗ್ರಂಥ ಮಾಲೆ'ಯ ಸಂಚಾಲಕರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇವೆ. ಗ್ರಂಥಮಾಲೆಗೆ ಕನ್ನಡಿಗರು ಎಲ್ಲ ಬಗೆಯಲ್ಲೂ ನೆರವು ನೀಡಿ ಅದು ಚಿರಕಾಲ ನಾಡುನುಡಿಗಳ ಸೇವೆ ಮಾಡುವಂತಾಗಲೆಂದು ಕೋರುತ್ತೇವೆ.

— ಎಂ.ವಿ.ಸೀ.

ಒಂದು ಪ್ರಬಂಧ

## ವಾಸ್ತವತೆ ಹಾಗೂ ಸೌಂದರ್ಯಾನ್ವೇಷಣೆ

(ಶ್ರೀ. ಎಸ್. ಎಸ್. ಗದಗಕರ, ಬಿ.ಎ., ಧಾರವಾಡ)

ಎಷ್ಟೊಂದು ಸತ್ವಹೀನವೆಂದು ಕೆಲ ವಸ್ತುಗಳು ತೋರಿದರೂ ಅವುಗಳಲ್ಲಿ ಜೀವಕಳೆ ತುಂಬಿ ಥಳಥಳಿಸುವಂತೆ ರೂಪಿಡುವುದೇ ಸಾಹಿತ್ಯದ ಹಿರಿಯ ಗುರಿ. ನಿತ್ಯವೂ ಕಣ್ಣಿಗೆ ಬೀಳುವ ಸಾಮಾನ್ಯ ವಸ್ತುಗಳಿಗೆ ಒಂದು ಮೆರುಗು ಕೊಡಬೇಕಾದರೆ ನೋಡುವವನ ಮನದಾಗಸದಲ್ಲಿ ಸೌಂದರ್ಯದ ಕಲ್ಪನೆ ಮೊಳೆಯಬೇಕು. ಅಂತರಂಗವನ್ನು ಬೆದಕಿ ನೋಡುವ ಪ್ರವೃತ್ತಿ ಅವಶ್ಯ. ಹಾಗೇ ನೋಡಿದರೆ ವಸ್ತುಗಳ ವಾಸ್ತವ ಸ್ವರೂಪ ಯಾರ ಮನವನ್ನೂ ಸೆಳೆಯಲಿಕ್ಕಿಲ್ಲ. ಕುತೂಹಲ ಬುದ್ಧಿಯನ್ನೇ ಮುಂದುಮಾಡಿ, ನಮ್ಮ ಹೃದಯವನ್ನು ವಿಶಾಲಗೊಳಿಸಿ, ಜೀವನದ ರಹಸ್ಯವನ್ನು ಸೂರೆಗೈಯ್ಯಬೇಕೆಂಬ ಹಟ ತೊಟ್ಟವನಿಗೆ ನಿಜವಾಗಿಯೂ ಸೌಂದರ್ಯ ಕಣ್ಣಿಗೆ ಕಟ್ಟುವುದು. ಆಗ ರಸಜ್ಞನ ಹೃದಯದಿಂದ ಚಿಕ್ಕ ಚಿಕ್ಕ ಮಾತಿನ ಜೋಡಣೆಯೊಡನೆ ಜಗತ್ತಿನ ತತ್ವಗಳ ಹೊನಲು ಹರಿಯುವುದುಂಟು.

ಇಂದಿನ ಹಾಗೂ ಹಿಂದಿನ ಜಾಗತಿಕ ಸಾಹಿತ್ಯ ಮಂದಿರವನ್ನು ಒಳಹೊಕ್ಕು ನೋಡಿದುದಾದರೆ ಸಾಹಿತಿಯ ದೃಷ್ಟಿಕೋನಕ್ಕೇ ಪ್ರಾಧಾನ್ಯವಿರುವುದು ಕಂಡುಬರುವುದು. ಬರಿಯ ವಾಸ್ತವತೆ ಕಲಾಕೃತಿಯ ಪ್ರಾಕೃತಿಕ ಸ್ವರೂಪವಷ್ಟೇ. ಸಂಶೋಧಕ ಬುದ್ಧಿಯಿಂದ ಜಗತ್ತಿನ ತತ್ವಗಳನ್ನು ತೀರ ಮನೆಮಾತಿನಲ್ಲಿ ಪರಿಕಿಸಿದ ಮಹಾನುಭಾವರೆಷ್ಟೊ! ಆ್ಯಡಿಸನ್ನನ 'ಮಿರ್ಜನ ಕನಸು' (Vision of Mirza) ಎಂಬ ಪ್ರಬಂಧದ ಪ್ರಾರಂಭದ ಸ್ವಾಭಾವಿಕತೆ ಎಂತಹದು! ಆದರೆ ಅದೇ ವಾಸ್ತವಿಕತೆಗೆ ಮೊರೆಹೋಗಿ ಪ್ರಬಂಧದ ಮುಕ್ತಾಯವೂ ಆಗಿದ್ದರೆ, ಬರಹಗಾರನ ಕಲ್ಪನಾ ಸೌಂದರ್ಯಕ್ಕೆ ಹಾಗೂ ರೂಪಕದ ರಚನೆಗೆ ಎಡೆ ದೊರೆಯುತ್ತಿದ್ದಿಲ್ಲ. 'ವೆರ್ನನ್ ಲೀ' (Vernon Lee) ಎಂಬ ಮಹಿಳೆ,–ರೈಲು ತಪ್ಪಿಸಿಕೊಂಡಾಗ ಎರ್ದೆ ತೆರೆಯುವಂತೆ ವಿಚಾರ ವೈಖರಿಯನ್ನು ಬಣ್ಣಿಸ ಹೋಗಿ ವಾಸ್ತವತೆ ದಾಟಿ, ಸೌಂದರ್ಯೋಪಾಸನೆಯ ಸೋಪಾನವೇರಿದುದನ್ನು ರಸಿಕರು ಕಂಡುಕೊಂಡಿರಲಿಕ್ಕಿಲ್ಲವೇ? ಆಂಗ್ಲ ಸಾಹಿತ್ಯದ ಪ್ರಮಾಣವೇ ಏಕೆ? ಶ್ರೀರಂಗರಂತಹ ಪ್ರಸಿದ್ಧ ಕನ್ನಡ ನಗೆಗಾರರು ತೀರ ವಾಸ್ತವವಾದ ನಿರುದ್ಯೋಗ ಸಮಸ್ಯೆಗೆ ತುತ್ತಾದ ವ್ಯಕ್ತಿಯೊಬ್ಬನ ಜೀವನ ಸ್ವರೂಪವನ್ನು ಸುಂದರವಾದ ಕಲ್ಪಕತೆಯ ಕಟ್ಟಡವನ್ನಾಗಿ 'ವಿಶ್ವಾಮಿತ್ರನ ಸೃಷ್ಟಿ'ಯಲ್ಲಿ ಚಿತ್ರಿಸಿರುವರು! ಸಣ್ಣಕತೆ ಬರೆದು ದೊಡ್ಡವರಾದ ಶ್ರೀನಿವಾಸರು ಅಶಾಂತಿಪರ್ವಕ್ಕಾಗಿ ಬೇಜಾರಹೊಂದಿ, ಶಾಂತಿಗಾಗಿ ಹಂಬಲಿಸಿ, ಪ್ರಕೃತಿಯನ್ನೇ ಹಿನ್ನೆಲೆಯಾಗಿಟ್ಟುಕೊಂಡು, ವಾಸ್ತವ ಜೀವನಕ್ಕೆ ಸೌಂದರ್ಯದ ಕಲ್ಪನೆಯನ್ನು ಮಾಡಿಕೊಟ್ಟುದಲ್ಲದೆ ಆಧ್ಯಾತ್ಮಿತ ರಂಗಕ್ಕೂ ಆಹಾರ ಒದಗಿಸಿದ್ದಾರೆ. ಕೊನೆಗೆ ದಿನದಿನವೂ ನಿರಾಶೆಯಲ್ಲಿದ್ದೇವೆಂದು, ಇನ್ನೇನು ಗತಿ ಎಂದು ನಿರ್ಗತಿಕರಂತೆ ಪ್ರಾರಬ್ಧ ಹಳಿಯುವವರಿಗೆ ಜ್ಞಾನದ ದೀವಿಗೆ ತೋರಿದಂತೆ ಆನಂದ ಕಂದರು 'ಬಾಳಿದು ಕನಸಲ್ಲ, ಗೋಳಿನ ತಿನಿಸಲ್ಲ' ಎಂದು ಉಸಿರಿರುವುದು ಸೌಂದರ್ಯಾನ್ವೇಷಣೆಯ ಹೊಸ ದೃಷ್ಟಿಕೋನವಲ್ಲವೇ?

ಹೃದಯ ವಿಶಾಲವಿದ್ದುದಾದರೆ ಸೌಂದರ್ಯಾನ್ವೇಷಣೆಗೆ ತಡೆ ಇಲ್ಲ. ವಸ್ತುಗಳು ಆಗ ಅಸಾಮಾನ್ಯವಾಗಿ ಕಾಣುವುದು ಸಹಜ. ಮಾದರಿಗಾಗಿ, ಸಂತೆಯಲ್ಲಿ ಬಾಗವಾನರು (ಪಲ್ಲೆ ಮಾರುವ ಹೆಣ್ಣು ಮಕ್ಕಳು) ಹಚ್ಚುವ ಕಾಡಿಗೆ ಕಾರುವ ಕಪ್ಪುಹೊರಮೈಯ ಅಂದಗೇಡಿ ದೀಪವನ್ನೆ ನೋಡುವಾ. ಸೃಷ್ಟಿಯಲ್ಲಿ ಒಂದು ಕಾಲಕ್ಕೆ ಆವರಿಸಿದ ಕತ್ತಲೆಯನ್ನು ಹೊಡೆದೋಡಿಸಲು ಮನುಷ್ಯನು ಉಂಟುಮಾಡಿದ ಮೊತ್ತಮೊದಲ ಉಪಕರಣವಿದು. ಸೃಷ್ಟಿಯ ಮೇಲೆ ಪ್ರಭುತ್ವ ತೋರಲು ಹವಣಿಸಿದ ಮನುಷ್ಯನ ಬುದ್ಧಿಯ ದ್ಯೋತಕವಿದು. ಹೀಗೆ–ಇನ್ನೂ ಏನನ್ನೊ ವಸ್ತುವಿನ ಅಂತರಂಗವನ್ನು ಒಳಹೊಕ್ಕು ನೋಡಿದಾಗ ಕಾಣಬಹುದು. ಅಹುದು. ಹೀಗೆಯೇ ನಾಯಿಯ ಕಿವಿಯಂತೆ ಮಡಿಚಿ ಮೂಲೆಗುಂಪಾಗಿ ಸಂದುಗೊಂದುಗಳಲ್ಲಿ ಒರಗುವ ಅಚ್ಚು

ಹಾಕಿದ ಹಳೆಯ ಕಾಗದದ ಚೂರನ್ನೇ ನಿರೀಕ್ಷಿಸುವಾ. ಅಲ್ಲಿ ಐತಿಹಾಸಿಕ ಘಟನೆಗಳ ಸೌಂದರ್ಯವೇ ತುಂಬಿ ತುಳುಕುವುದು! ಪಾಶ್ಚಿಮಾತ್ಯ ರಾಷ್ಟ್ರಗಳಿಗೆ ಮುಟ್ಟುವ ಕಾಲಕ್ಕಿಂತ ಸಾವಿರ ವರ್ಷ ಮೊದಲು ಚೀನ ದೇಶದಲ್ಲಿ ಹೇಗೆ ಕಾಗದ ಅವತರಿಸಿತ್ತೆಂಬ ಸಂಗತಿ ಮೊದಲು ಹೊಳೆಯುವುದು. ಫೊನಿಶಿಯನ್ ಜನರು ಅಕ್ಷರ ಸಂಶೋಧಿಸಿದ ಸಂಗತಿಯೂ, ಗ್ರೀಕರು ಅದನ್ನೇ ತಮ್ಮ ಬುದ್ಧಿ ಸಂಸ್ಕಾರಕ್ಕನುಗುಣವಾಗಿ ಮಾರ್ಪಡಿಸಿಕೊಂಡದ್ದೂ, ಕೊನೆಗೆ ರೋಮನ್ನರು ಲಿಪಿಯಲ್ಲಿ ಹೊಚ್ಚ ಹೊಸ ಚೈತನ್ಯ ತುಂಬಿದ ಸ್ಥಿತ್ಯಂತರಗಳೂ ತೆರೆತೆರೆಯಾಗಿ ಮಿಂಚಿ ಮಾಯವಾಗುವುವು.

ಇಂತು "ಚೆಲುವಾದುದು ಎಂದೆಂದಿಗೂ ನಲವು ಕೊಡುವುದು. ಅದರ ಸೊಬಗು ಹೆಚ್ಚುವುದೇ ಹೊರತು ಎಂದಿಗೂ ಇಲ್ಲವಾಗದು." (A thing of Beauty is a joy forever; its Lovliness increases, but it will never pass into nothingness) ಎಂಬ ಕೀಟ್ಸ್ ಮಹಾಕವಿಯ ಉಕ್ತಿಯಂತೆ, ಸಾಮಾನ್ಯ ವಸ್ತುಗಳ ಬಗೆಗೆ ನಾವು ಸೂಕ್ಷ್ಮ ನಿರೀಕ್ಷಣಾಶಕ್ತಿ ತೋರುವುದರಿಂದ ಹೊರಸೂಸುವ ವಿಚಾರ ಸೌಂದರ್ಯ ಬಹುಕಾಲ ಬಾಳುವಂತಹದಲ್ಲವೇ?

---

## ಪರಿಷತ್ತಿನ ಸುದ್ದಿ

### ಪರಿಷತ್ತಿನ ಸದಸ್ಯರ ಬೆಳವಣಿಗೆ

**ಸಹಾಯಕ ಸದಸ್ಯರು (೧೦೦ ರೂ.):** ಶ್ರೀ.ಗಳಾದ ೧. ಜಿ. ಮಾಧವರಾಯರು ಬಿ.ಎ., ಮೈಸೂರು ಸರಕಾರದ ಜೀವ ವಿಮಾ ಇಲಾಖೆಯ ಕಾರ್ಯದರ್ಶಿಗಳು, ಬಸವನಗುಡಿ. (ಬದಲಾವಣೆ) ೨. ರಾಘವೇಂದ್ರರಾವ್ ಚಾಕಲಬ್ಬಿ, ಅವರು, ವಕೀಲರು, ಕೊಪ್ಪಳ (ಬದಲಾವಣೆ). ೩. ಮಾಣಿಕಚಂದ ಕಿಶನಲಾಲ ಅವರು, ಕೊಪ್ಪಳ. ೪. ಬಸವಲಿಂಗನ ಗೌಡ ಪಾಟೀಲ ಅವರು, [illegible]ಟಗಿ ಪೋಸ್ಟ್, ಕೊಪ್ಪಳ. ೫. ತಮ್ಮನಗೌಡ ಪಾಟೀಲ್ಕ ಅವರು, ಬನ್ನಿಕೊಪ್ಪ ಪೋಸ್ಟ್, ಕೊಪ್ಪಳ. ೬. ಹನುಮಂತಾಚಾರ್ಯ ಹೊಸೂರ ಅವರು, ತಹಸೀಲದಾರರು, ಯಲಬುರ್ಗಿ ಪೋಸ್ಟ್, ಕೊಪ್ಪಳ. ೭. ಕೆ. ಲಕ್ಷ್ಮಣ ರಾಯರು, ವಕೀಲರು, ಕೊಪ್ಪಳ. ೮. ಅಡವಿರಾವ್ ಮುಧೋಳ ಅವರು, ಕೊಪ್ಪಳ. ೯. ಜನಾರ್ಧನರಾವ್ ಅವರು, ವಕೀಲರು, ಕೊಪ್ಪಳ. ೧೦. ಭವಾನಸಿಂಗ್ ಸಾಹೇಬ ಅವರು, ವಕೀಲರು, ಕೊಪ್ಪಳ.

**ಸಾಮಾನ್ಯ ಸದಸ್ಯರು (೬ ರೂ.):** ಶ್ರೀ.ಗಳಾದ ೧. ಸಿದ್ದರಾಮಪ್ಪ ಸಂಕ್ಲಾಪುರ ಸಾಹು ಅವರು, ಕೊಪ್ಪಳ. ೨. ಕೃಷ್ಣಾಚಾರ್ಯರು, ವಕೀಲರು, ಕೊಪ್ಪಳ. ೩. ಶ್ರೀನಿವಾಸಾಚಾರ್ಯ ಹುಲಗಿ ಅವರು, ಬಿ.ಎ., ಕೊಪ್ಪಳ. ೪. ಚೆನ್ನವೀರಸ್ವಾಮಿ ಇನಾಮದಾರ ಅವರು, ಅಳವಿಂಡಿ ಪೋಸ್ಟ್, ಕೊಪ್ಪಳ. ೫. ಬಸಪ್ಪ ಅಂಗಡಿ ಅವರು, ಜೇವೂರ ಪೋಸ್ಟ್ ಕೊಪ್ಪಳ.

**ಸಾಮಾನ್ಯ ಸದಸ್ಯರು (೩ ರೂ.):** ಶ್ರೀ.ಗಳಾದ ೧. ಗಂಗಾಧರ ಭಾವೂ ಶಾಸ್ತ್ರಿಗಳು, ಕೊಪ್ಪಳ. ೨. ವೀರಭದ್ರಪ್ಪ ಸಿರೂರ ಅಡೂರ ಅವರು, ಕುಕನೂರ ಪೋಸ್ಟ್, ಕೊಪ್ಪಳ. ೩. ಬಸವಂತರಾವ್ ಕಾಟರಹಳ್ಳಿ ಅವರು, ಕೊಪ್ಪಳ. ೪. ಬಸವಲಿಂಗನ ಗೌಡ ಅಡೂರ ಅವರು, ವ್ಯಾಪಾರಿಗಳು, ಕೊಪ್ಪಳ. ೫. ನೀಲಕಂಠ ಶಾಸ್ತ್ರಿಗಳು, ಕೊಪ್ಪಳ. ೬. ರಾಮಚಂದ್ರರಾವ್ ತೊಂಡೇಹಾಳ, ಅವರು, ವಕೀಲರು, ಕೊಪ್ಪಳ. ೭. ದತ್ತಾತ್ರೇಯರಾವ್ ಔರಡಿ ಅವರು, ಲೊಕಲ್ ಫಂಡ್, ಜಗತ್, ಗುಲ್ಬರ್ಗ.

[ಈ ಮೇಲಿನ ಸದಸ್ಯ ಮಹನೀಯರುಗಳ ವಿಳಾಸಗಳಲ್ಲಿ ಏನಾದರೂ ಬದಲಾವಣೆ ಇದ್ದರೆ ದಯಮಾಡಿ ಪರಿಷತ್ತಿನ ಕಚೇರಿಗೆ ತಿಳಿಸಬೇಕಾಗಿ ಬಿನ್ನಹ.]

### ಮೈಸೂರು ಪ್ರಾಂತ ಸಮಿತಿ

**೧೪-೯-೧೯೪೩ ನೆಯ ಮಂಗಳವಾರ ಸಂಜೆ ೭ ಗಂಟೆಗೆ** ಪರಿಷನ್ಮಂದಿರದಲ್ಲಿ ಗಮಕ ವಿದ್ವಾನ್ ಶ್ರೀ. ಕೆ. ಜಿ. ಸಂಪತ್ಕುಮಾರಾಚಾರ್ಯರು **ಶ್ರೀ ಪುರಂದರ ದಾಸರ ಕೃತಿಗಳನ್ನು** ಉಚಿತ ಪಕ್ಕವಾದ್ಯಗಳೊಡನೆ ಹಾಡುವರು.

### ರಾಜಸೇವಾಸಕ್ತ ಶ್ರೀ ಬೆಳ್ಳಾವೆ ವೆಂಕಟನಾರಾಯಣಪ್ಪನವರ ಸ್ಮಾರಕ ಉಪನ್ಯಾಸ ನಿಧಿ

ಈ ಕೆಳಗಿನ ಸಹಾಯವನ್ನು ಕೃತಜ್ಞತೆಯಿಂದ ಸ್ವೀಕರಿಸಿದೆ.

| | |
|---|---|
| ಹಿಂದಿನ ಸಂಚಿಕೆಯಲ್ಲಿ: | ರೂ. ೭೯೯-೦-೦ |
| ಶ್ರೀಗಳಾದ | |
| ೧. ಡಿ. ಸಿ. ಸುಬ್ಬರಾಯಪ್ಪನವರು | ೨೫-೦-೦ |
| ೨. ಸಿ. ಕೆ. ವೆಂಕಟರಾಮಯ್ಯನವರು | ೨೫-೦-೦ |
| ೩. ಶ್ರೀಯುತರ ಶಿಷ್ಯರೊಬ್ಬರು | ೧೦-೦-೦ |
| | ೮೫೯-೦-೦ |

ಈ ನಿಧಿಗೆ ಹಿರಿಯರ ಹೆಸರಿಗೆ ತಕ್ಕಂಥ ಒಂದು ಮೊತ್ತ ಇನ್ನೂ ಕೂಡಿಲ್ಲವೆಂದು ತಿಳಿಸಬೇಕಾಗಿ ಬಂದಿರುವುದು ನಮ್ಮ ದೌರ್ಭಾಗ್ಯ. ಆದ್ದರಿಂದ ಈ ನಿಧಿಗೆ ದ್ರವ್ಯ ಸಹಾಯ ಮಾಡಬಹುದಾದ ಅವಧಿಯನ್ನು ಹೆಚ್ಚಿಸಿದೆ. ಇನ್ನೂ ಹಣ ಕೊಡದಿರುವ ಮಿತ್ರರು ಆದಷ್ಟು ಬೇಗನೆ ಕಳಿಸಿಕೊಟ್ಟು ಉಪಕಾರ ಮಾಡಬೇಕಾಗಿ ಪ್ರಾರ್ಥನೆ.

### ಪರಿಷತ್ತಿನ ಸದಸ್ಯರಲ್ಲಿ ವಿಜ್ಞಾಪನೆ

ಬರುವ ಡಿಸೆಂಬರು ತಿಂಗಳು ಶಿವಮೊಗ್ಗದಲ್ಲಿ ನಡೆಯಲಿರುವ **ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರ ಆಯ್ಕೆ** ಸದ್ಯದಲ್ಲೇ ನಡೆಯುತ್ತದೆ. ಪರಿಷತ್ತಿನ ನಿಬಂಧನೆ ೪೭ (೧)ರ ಮೇರೆಗೆ ಈ ಆಯ್ಕೆಯಲ್ಲಿ ಪ್ರತಿಯೊಬ್ಬ ಸದಸ್ಯರೂ ತಮ್ಮ ಅಭಿಮತವನ್ನು ಕೊಡಬೇಕಾಗಿದೆ. ಮತ ಕೊಡುವ ಅರ್ಹತೆಯನ್ನು ಪಡೆಯಬೇಕಾದರೆ ತಮ್ಮಿಂದ ಪರಿಷತ್ತಿಗೆ ಸಲ್ಲಬೇಕಾದ ಎಲ್ಲ ಹಣವನ್ನೂ ಆಯ್ಕೆಯ ವೇಳೆಗೆ ಪೂರ್ತಿಯಾಗಿ ಸಲ್ಲಿಸಬೇಕು, ಆದಕಾರಣ ಸದಸ್ಯರು ತಮ್ಮಿಂದ ಸಲ್ಲಬೇಕಾಗಿರಬಹುದಾದ ಚಂದಾ ಬಾಕಿಯನ್ನು ಕೂಡಲೆ ಪರಿಷತ್ತಿಗೆ ಕಳಿಸಿಕೊಟ್ಟು ಉಪಕಾರ ಮಾಡಬೇಕಾಗಿ ಪ್ರಾರ್ಥನೆ.

೧೪-೮-೧೯೪೩ ಬೆಂಗಳೂರು

ಬಿ. ವೆಂಕೋಬರಾವ್
ಕಾರ್ಯದರ್ಶಿ

## ಕನ್ನಡ ಸುದ್ದಿ

**ಮುಂಬಯಿ, ಕರ್ನಾಟಕ ಸಂಘ: ೧೦ನೆಯ ವಾರ್ಷಿಕೋತ್ಸವ**

ಸಂಘದ ವಾರ್ಷಿಕೋತ್ಸವದ ಕಾರ್ಯಕಲಾಪಗಳು ಕಳೆದವಾರ ಗಿರಿಗಾಂವದಲ್ಲಿರುವ ವಾಗಳೆ ಮೆಮೋರಿಯಲ್ ಹಾಲಿನಲ್ಲಿ ನಡೆದುವು. ಶ್ರೀ. ಬೇಂದ್ರೆಯವರು ಮುಖ್ಯ ಅತಿಥಿಗಳಾಗಿದ್ದರು.

ಸಂಘದ ಸಾಧಾರಣ ಸಭೆ ಸೇರಿ ಈ ಸಲ **ನ್ಯಾಯಮೂರ್ತಿ ಲೋಕೂರ ನಾರಾಯಣರಾಯರು** ಅಧ್ಯಕ್ಷರಾಗಿಯೂ, ಶ್ರೀ. ಇಮಾರತಿ ಹಣುಮಂತರಾಯರು ಕಾರ್ಯದರ್ಶಿಗಳಾಗಿಯೂ ಸರ್ವಾನುಮತದಿಂದ ಆರಿಸಲ್ಪಟ್ಟರು.

**ಮದರಾಸು: ಆಕಾಶವಾಣಿಯಲ್ಲಿ ಕನ್ನಡ ಹಾಡುಗಳು**

ಗಮಕ ವಿದ್ವಾನ್ ಶ್ರೀ. ಕೆ. ಜಿ. ಸಂಪತ್ಕುಮಾರಾಚಾರ್ಯರು ೧೧-೯-೪೩ ನೆಯ ಶನಿವಾರ ಮದರಾಸು ಆಕಾಶವಾಣಿಯಲ್ಲಿ ಬೆಳಗ್ಗೆ ಮತ್ತು ಮಧ್ಯಾಹ್ನ ದೇವರನಾಮಗಳನ್ನೂ ಕನ್ನಡ ಕೃತಿಗಳನ್ನೂ ಹಾಡುವರು.

**ಬೆಂಗಳೂರು: ಮಹಾರಾಣಿ ಕಾಲೇಜು ಕರ್ನಾಟಕ ಸಂಘ**

೧-೯-೪೩ನೆಯ ದಿನ ಶ್ರೀ. ತೀ. ನಂ. ಶ್ರೀಕಂಠಯ್ಯನವರು ಮೇಲ್ಕಂಡ ಸಂಘದ ಆರಂಭ ಭಾಷಣವನ್ನು ಮಾಡಿದರು. ಭಾಷಣ ವಿಷಯ: "ಹಳ್ಳಿಯ ಹಾಡುಗಳು."

**ತುಮಕೂರು: ಕರ್ನಾಟಕ ಸಂಘ**

ಸ್ಥಳೀಯ ಕರ್ನಾಟಕ ಸಂಘದ ಆಶ್ರಯದಲ್ಲಿ ೩೦-೮-೧೯೪೩ನೆಯ ಸಾಯಂಕಾಲ ಜಿಲ್ಲಾ ನಾರ್ಮಲ್ ಸ್ಕೂಲ್ ಕಟ್ಟಡದಲ್ಲಿ ಇಲ್ಲಿನ ಇಂಟರ್ ಕಾಲೇಜು ಕನ್ನಡ ಅಧ್ಯಾಪಕರಾದ ಶ್ರೀ. ಜಿ. ಪಿ. ರಾಜರತ್ನಂ ಅವರು ಶ್ರೀ. ಶಿವರಾಮ ಕಾರಂತರ "ಮುಕ್ತದ್ವಾರ" ಎಂಬ ನಾಟಕವನ್ನು ಓದಿ, ಶ್ರೀ. ಕಾರಂತರ ಸರ್ವಧರ್ಮಸಮನ್ವಯ ತತ್ವವನ್ನು ವಿವರಿಸಿದರು.

೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧೨
ಬಿಡಿ ಪತ್ರಿಕೆ: ೬ ಕಾಸು



ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೪೭
ಬೆಂಗಳೂರು: ಶುಕ್ರವಾರ, ಸೆಪ್ಟೆಂಬರ್ ೧೭, ೧೯೪೩

## ಬಳ್ಳಾರಿ ಜಿಲ್ಲೆಯ ಕನ್ನಡ ಗೆಳೆಯರ ಗುಂಪು

ತಾ|| ೨೪-೮-೪೩ನೆಯ ದಿನ ಸಾಯಂಕಾಲ ೬ ಗಂಟೆಗೆ ಶ್ರೀ. ಸಕ್ಕರಿ ಕರಡೆಪ್ಪನವರ ಚವುಕಿಯಲ್ಲಿ "ಬಳ್ಳಾರಿ ಜಿಲ್ಲಾ ಕನ್ನಡ ಗೆಳೆಯರ ಗುಂಪು" ಇವರ ಮಹಾಸಭೆ ಸೇರಿ ಸರ್ವಾನುಮತದಿಂದ ತೀರ್ಮಾನಿಸಿದ ಈ ಕೆಳಕಂಡ ಗೊತ್ತುವಳಿಗಳನ್ನು ಜನರ ಅವಗಾಹನೆಗೆ ತರಲು ಪ್ರಕಟಿಸಿರುತ್ತೇವೆ.

೧. "ಕರ್ನಾಟಕಕ್ಕೆ ಸೇರಿರುವ ಬಳ್ಳಾರಿಯಲ್ಲಿ ಆಂಧ್ರಮಹಾಸಭೆಯನ್ನು ನಡೆಯಿಸಿ ಈ ಜಿಲ್ಲೆ ಆಂಧ್ರ ಪ್ರಾಂತಕ್ಕೆ ಸೇರಿದ್ದೆಂದು ಜನತೆಯಲ್ಲಿ ತಪ್ಪು ತಿಳುವಳಿಕೆಯನ್ನು ಕಲ್ಪಿಸಬೇಕೆಂದಿರುವ ಅಲ್ಪ ಸಂಖ್ಯಾಕರಾದ ಕೆಲವು ತೆಲುಗು ಭಾಷಾಭಿಮಾನಿಗಳ ಆಕ್ರಮಣ ಶೀಲತೆಯ ಚಟುವಟಿಕೆಗಳನ್ನು ವಿರೋಧಿಸುತ್ತೇವೆ."

೨. "ಕರ್ನಾಟಕಕ್ಕೆ ಸೇರಿರುವ ಬಳ್ಳಾರಿಯ ವರ್ತಕ ಸಂಘದವರನ್ನು ಸಂಘದ ಮಹಾಸಭೆಯ ಸದಸ್ಯರಿಗೆ ತಿಳಿಸಿ ಅನುಮತಿಯನ್ನು ಪಡೆಯದೆ ಆಂಧ್ರ ವಣಿಕ್ ಸಂಘಕ್ಕೆ ಸೇರಿಸಿದ್ದನ್ನು ವಿರೋಧಿಸುತ್ತೇವೆ."

೩. "ಸರಕಾರದವರು ಮದ್ರಾಸು ಇಂಜಿನೀಯರಿಂಗ್ ಕಾಲೇಜಿನಲ್ಲಿ ಭಾಷಾವಾರ ಜಿಲ್ಲೆಗಳಿಗೆ ಸೀಟುಗಳು ಕೊಟ್ಟದ್ದು ಬಳ್ಳಾರಿ ಜಿಲ್ಲೆಯನ್ನು ಆಂಧ್ರ ಜಿಲ್ಲೆಗಳಲ್ಲಿ ಸೇರಿಸಿದ್ದು ಅನ್ಯಾಯವಾದ್ದರಿಂದ ಕರ್ನಾಟಕದವರಿಗೆ ಪ್ರತ್ಯೇಕ ಸ್ಥಳವನ್ನು ನೇಮಿಸುವಂತೆ ಸರಕಾರದವರನ್ನು ಬೇಡುತ್ತೇವೆ."

೪. "ಕರ್ನಾಟಕಕ್ಕೆ ಸೇರಿರುವ ಬಳ್ಳಾರಿಯಲ್ಲಿ ಯಾವತ್ತು ಮುನಿಸಿಪಲ್ ಮತ್ತು ಇತರ ಶಾಲೆಗಳಲ್ಲಿ ಹೆಚ್ಚು ಸಂಖ್ಯೆಯಲ್ಲಿರುವ ನಮ್ಮ ಕನ್ನಡ ವಿದ್ಯಾರ್ಥಿಗಳ ಕಷ್ಟ ನಿವಾರಿಸುವುದಕ್ಕಾಗಿ ಇನ್ನುಮುಂದೆ ಹೊಸದಾಗಿ ನೇಮಿಸುವ ಉಪಾಧ್ಯಾಯರೆಲ್ಲರೂ ಕನ್ನಡದಲ್ಲಿ ಚೆನ್ನಾಗಿ ನುರಿತವರನ್ನೇ ತೆಗೆದುಕೊಳ್ಳಬೇಕೆಂದು ಕೋರುತ್ತೇವೆ."

೫. "ಸರಕಾರದವರು ಕ್ಷಾಮ ನಿವಾರಣೆಗಾಗಿ ದತ್ತಮಂಡಲದಲ್ಲಿ ಖರ್ಚು ಮಾಡುತ್ತಿರುವ ಹಣವನ್ನು ತುಂಗಭದ್ರ ಪ್ರಾಜಕ್ಟ್‌ಗಾಗಿ ವೆಚ್ಚಮಾಡಿ ನಮ್ಮ ಪ್ರಾಜಕ್ಟ್ ಕಾರ್ಯವನ್ನು ತಡಮಾಡದೆ ಈಗಿನಿಂದಲೇ ಪ್ರಾರಂಭಿಸಬೇಕೆಂದು ಪ್ರಾರ್ಥಿಸುತ್ತೇವೆ."

೬. "ಈ ಎಲ್ಲಾ ತೀರ್ಮಾನಗಳ ಪ್ರತಿಗಳನ್ನು ಇವುಗಳಿಗೆ ಸಂಬಂಧಿಸಿದ ಪ್ರತಿ ಅಧಿಕಾರಿಗಳಿಗೂ ಕಳಿಸತಕ್ಕದ್ದು."

ಸೂಚನೆ: ಇನ್ನು ಈ ಬಗ್ಗೆ ನಾವು ಕೈಕೊಳ್ಳುವ ಎಲ್ಲಾ ಕಾರ್ಯಕ್ರಮಗಳನ್ನೂ ಮತ್ತು ಅವುಗಳ ಪ್ರತಿಫಲಗಳನ್ನೂ ನಮ್ಮ ಕನ್ನಡ ಬಾಂಧವರೆಲ್ಲರಿಗೂ ತಿಳಿಯಲು ಆಗಿಂದಾಗ್ಗೆ ಪ್ರಚುರಪಡಿಸುತ್ತೇವೆ. ಈ ಕಾರ್ಯಕ್ರಮಗಳಲ್ಲೆಲ್ಲ ನಮ್ಮ ಕನ್ನಡಿಗರೆಲ್ಲರೂ ಸಹಕರಿಸಬೇಕೆಂದು ನಮ್ಮ ಕಳಕಳಿಯ ವಿನಂತಿ.

## ಧಾರವಾಡದಲ್ಲಿ ಪರಿಷತ್ತಿನ ಉಪಾಧ್ಯಕ್ಷರು

ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಪ್ರಸಕ್ತ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ಪರಿಷತ್ತಿನ ಕಾರ್ಯದ ಸಲುವಾಗಿ ಉತ್ತರ ಕರ್ನಾಟಕದಲ್ಲಿ ಕೈಕೊಂಡ ಸಂಚಾರದಲ್ಲಿ ಧಾರವಾಡಕ್ಕೆ ಸೆಪ್ಟೆಂಬರ್ ೭ನೆಯ ದಿನ ಆಗಮಿಸಿದರು. ಇಲ್ಲಿ ಮೂರು ದಿನಗಳವರೆಗೆ ಅವರ ವಿವಿಧ ಕಾರ್ಯಕ್ರಮಗಳು ನಡೆದುವು. ಅನೇಕ ಸಂಸ್ಥೆಗಳನ್ನು ಸಂದರ್ಶಿಸಿದರಲ್ಲದೆ, ಅಲ್ಲಲ್ಲಿ ಅವರ ಉಪನ್ಯಾಸಗಳೂ ಜರುಗಿದುವು.

ಅದೇ ಸಂಜೆ ೬-೩೦ ಗಂಟೆಗೆ ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ಗಮಕ ತರಗತಿಗಳ ಪ್ರಾರಂಭೋತ್ಸವ ಸಭೆ ಸೇರಿದ್ದಿತು. ರಾಜಸೇವಾಪ್ರಸಕ್ತ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ಮುಖ್ಯ ಅತಿಥಿಗಳಾಗಿದ್ದರು. ಪರಿಷತ್ತಿನ ಕಾರ್ಯದರ್ಶಿಗಳಾದ ಶ್ರೀ. ಬಿ. ವೆಂಕೋಬರಾಯರೂ ಕಲಬುರ್ಗಿಯ ಪುರಾಣಿಕ ಪದ್ಮನಾಭಾಚಾರ್ಯರೂ ಸ್ಥಳೀಯ ಅನೇಕ ಮಹನೀಯರೂ ನಿವೃತ್ತ ಅಧಿಕಾರಿಗಳೂ ವಿದ್ಯಾವಂತರೂ ಮಹಿಳೆಯರೂ ಸಭೆಗೆ ಆಗಮಿಸಿದ್ದರು. ಸಭಾ ಮಂದಿರ ಕಿಕ್ಕಿರಿದು ತುಂಬಿದ್ದಿತು.

ಪ್ರಾರ್ಥನೆಯಾದಮೇಲೆ, ಪ್ರೊ. ರಂ. ಜಾಗಿರದಾರ ಅವರು ಸಭಾಧ್ಯಕ್ಷರ ಪರಿಚಯಮಾಡಿಕೊಟ್ಟು ಅವರ ಪ್ರವಾಸದ ಉದ್ದೇಶವನ್ನು ತಿಳುಹಿದರು.

ಶ್ರೀ. ಬೆಟಗೇರಿ ಕೃಷ್ಣಶರ್ಮರು ಗಮಕ ಕಲೆಯ ಬಗ್ಗೆ ಹಾಗೂ ಇಲ್ಲಿಯ ಗಮಕ ವರ್ಗವನ್ನು ನಡಸುವದಕ್ಕೆ ಶ್ರೀ. ದೇಶಪಾಂಡೆ ಗುರುರಾಯರು ದೊರೆತ ಬಗ್ಗೆ ನಾಲ್ಕು ಉಚಿತ ಮಾತುಗಳನ್ನು ಹೇಳಿ, ಅದನ್ನು ಪ್ರಾರಂಭಿಸಲು ರಾಜಸೇವಾಪ್ರಸಕ್ತ ಶ್ರೀ. ಮಾಸ್ತಿಯವರನ್ನು ಬಿನ್ನವಿಸಿದರು. ಅನಂತರ ಶ್ರೀ. ದೇಶಪಾಂಡೆ ಗುರುರಾಯರು ಕುಮಾರ ವ್ಯಾಸ ಭಾರತದ ವಿರಾಟ ಪರ್ವದಲ್ಲಿಯ ಕೀಚಕ ವಧೆಯ ಭಾಗವನ್ನು ರಸವತ್ತಾಗಿ ಓದಿ ಸಭಿಕರನ್ನು ಆನಂದದಲ್ಲಿ ತೇಲಿಸಿದರು.

ಗಮಕ ವರ್ಗದ ಉದ್ಘಾಟನವನ್ನು ಮಾಡಿದ ನಂತರ, ಪರಿಷತ್ತಿನ ವಿಷಯವಾಗಿ ಹೀಗೆ ನುಡಿದರು: "ಪರಿಷತ್ತು ಬೆಂಗಳೂರು ಮೈಸೂರಿನವರದೇ ಅಲ್ಲ. ಹಿಂದೆ ಉತ್ತರ ಕರ್ನಾಟಕದ ಮತ್ತು ಮಂಗಳೂರು ಪ್ರಾಂತದ ಹಿರಿಯರೆ ಅದನ್ನು ಸ್ಥಾಪಿಸಲು ಮೊದಲು ಮುತುವರ್ಜಿ ವಹಿಸಿದ್ದು ಎಲ್ಲರಿಗೂ ಗೊತ್ತಿರುವ ವಿಷಯ. ಅದು ಅಖಿಲ ಕನ್ನಡ ನಾಡಿನ ಸಂಸ್ಥೆ. ನಮ್ಮ ನಾಡಿನ ಒಂದು ಕೇಂದ್ರ ಸಂಸ್ಥೆ ಬೆಳೆಯದೆ ನಮ್ಮ ನಾಡಿನ ಹಿತ ಸಾಧಿಸದು. ಒಂದೂವರೆ ಕೋಟಿ ಜನರಿರುವ ಕನ್ನಡ ದೇಶದಲ್ಲಿ ಪರಿಷತ್ತಿಗೆ ೮೨೬ರಷ್ಟೆ ಸದಸ್ಯರು. ಇದು ಹಿತಕರವಲ್ಲ. ಕನ್ನಡ ನಾಡು ಒಂದಾದರೆ, ಮಂತ್ರಿಸಿ ಬಿಟ್ಟ ಮೂರು ಹುಲ್ಲುಕಡ್ಡಿಗಳೂ ಮೂರು ಲೋಕಗಳನ್ನು ಜಯಿಸಬಲ್ಲವು. ಆದ್ದರಿಂದ ಕನ್ನಡಿಗರೆಲ್ಲರೂ ಸದಸ್ಯರಾಗಿ ಪರಿಷತ್ತನ್ನು ಬಲಯುತವನ್ನಾಗಿ ಮಾಡಿ" ಎಂದು ಬಿನ್ನವಿಸಿದರು.

ಬಳಿಕ, ಅಂದಿನ ತಮ್ಮ ಉಪನ್ಯಾಸ ವಿಷಯವಾದ 'ಭಾರತೀಯ ಸಂಸ್ಕೃತಿಯ ಮುನ್ನೋಟ'ದ ಬಗ್ಗೆ ಒಂದು ಗಂಟೆಯವರೆಗೆ ಕೆಳಗಿನಂತೆ

(೨೩೩ನೆಯ ಪುಟಕ್ಕೆ)

# ಕನ್ನಡ ನುಡಿ

**ಶುಕ್ರವಾರ, ಸೆಪ್ಟೆಂಬರ್ ೧೭, ೧೯೪೩**

## ಬಳ್ಳಾರಿ

ಎರಡು ವಾರದ ಹಿಂದೆ ಸೊಲ್ಲಾಪುರ ಜಿಲ್ಲೆಯ ಒಳಸಂಗ ಮೊದಲಾದ ಗ್ರಾಮಸಮುದಾಯದ ಕಷ್ಟವನ್ನು ಕುರಿತು ಬರೆದುದಾಯಿತು. ಈಗ ಕನ್ನಡದ ಒಂದು ಇಡೀ ಜಿಲ್ಲೆಯ ಕಷ್ಟವನ್ನೇ ಅಧಿಕರಿಸಿ ಗಾನ ಮಾಡಬೇಕಾಗಿದೆ. ಆ ಜಿಲ್ಲೆ ಬಳ್ಳಾರಿ.

ಬಳ್ಳಾರಿ ಜಿಲ್ಲೆಯ ಬಹು ಭಾಗ ಕನ್ನಡ ಪ್ರಜೆ. ಐತಿಹಾಸಿಕವಾದ ಕೆಲವು ಕಾರಣಗಳಿಂದ ಬಳ್ಳಾರಿ ಪಟ್ಟಣದಲ್ಲಿ ತೆಲುಗ ಪ್ರಜೆ ತಕ್ಕಷ್ಟು ನೆಲಸಿದೆ. ಇದೇ ಕಾರಣಗಳಿಂದ ಅಲ್ಲಿ ತೆಲುಗು ಜನರು ಅಧಿಕಾರಗಳಲ್ಲಿ, ಉದ್ಯೋಗಗಳಲ್ಲಿ, ವ್ಯಾಪಾರಗಳಲ್ಲಿ, ಅನೇಕ ಮುಖ್ಯ ಸ್ಥಾನಗಳಲ್ಲಿ ನಿಂತಿದಾರೆ. ತಾವು ಕನ್ನಡದ ಜಿಲ್ಲೆಯಲ್ಲಿ ನೆಲಸಿರುವ ತೆಲುಗರು ಎಂಬುದನ್ನು ಇವರು ಒಮ್ಮೊಮ್ಮೆ ಮರೆಯುವಂತೆ ಕಾಣುತ್ತದೆ. ಒಟ್ಟು ಜಿಲ್ಲೆಯನ್ನು ತೆಲುಗು ಸೀಮೆ ಎಂದು ಭಾವಿಸುವಂತೆ ತೋರಿಬರುತ್ತದೆ.

ತೆಲುಗಾಣ್ಯದ ಆಂಧ್ರನಾಯಕರು ಇಂಥ ಭಾವನೆಗೆ ಅವಕಾಶ ಕೊಡಬಾರದು. ತೆಲುಗು ಜಿಲ್ಲೆ ಒಂದನ್ನು ತಮಿಳು ದೇಶಕ್ಕೆ ಸೇರಿಸುವೆವೆಂದರೆ ತಾವು ಏನು ಹೇಳುತ್ತಿದ್ದರು? ಕನ್ನಡದ ಜಿಲ್ಲೆ ಒಂದನ್ನು ತೆಲುಗು ಸೀಮೆಗೆ ಸೇರಿಸಬೇಕೆಂದಾಗಲೂ ಅವರು ಅದೇ ಮಾತನ್ನು ಹೇಳಬೇಕು. ಹಾಗೆ ಹೇಳದಿದ್ದರೆ ಅದು ನಾಯಕರ ಧರ್ಮ ಅಲ್ಲ; ತೆಲುಗಿಗೆ ಒಳಿತಲ್ಲ.

ಆಂಧ್ರದ ನಾಯಕರು ಬಳ್ಳಾರಿಯಲ್ಲಿ ಆಂಧ್ರಮಹಾಸಭೆಯನ್ನು ನೆರೆಯಿಸಲು ಏರ್ಪಡಿಸುತ್ತಿದಾರೆಂದು ಕೇಳುತ್ತೇವೆ. ಈ ಬಗ್ಗೆ ಬಳ್ಳಾರಿಯ ಕನ್ನಡ ಗೆಳೆಯರ ಗುಂಪು ಸಭೆ ಸೇರಿ ಕೆಲವು ನಿರ್ಣಯಗಳನ್ನು ಮಾಡಿತು. ಈ ವಿಚಾರವಾಗಿ ಗುಂಪಿನಿಂದ ಬಂದ ಸಾರುಹವನ್ನು ಈ ಪತ್ರಿಕೆಯ ಬೇರೊಂದು ಕಡೆ ಪ್ರಕಟಿಸಿದೆ.

**ಬಳ್ಳಾರಿ ಕನ್ನಡ ಭೂಮಿ.** ಅಲ್ಲಿ ಆಂಧ್ರಮಹಾಸಭೆ ಸೇರಬೇಕಾದ ಕಾರಣ ಕಾಣುವುದಿಲ್ಲ. ಬಳ್ಳಾರಿಯನ್ನು ತೆಲುಗ ಸೀಮೆಗೆ ಸೇರಿಸಬೇಕೆಂಬ ಉದ್ದೇಶದಿಂದ ಇಂಥ ಸಭೆ ಸೇರುವುದಾದರೆ ಅದರ ಅನೌಚಿತ್ಯವನ್ನು ವರ್ಣಿಸುವುದು ಸಾಧ್ಯವಲ್ಲ. ಆಂಧ್ರ ನಾಯಕರು ಈ ಯೋಜನೆಯನ್ನು ಬಿಟ್ಟುಬಿಡಬೇಕು. ಅಲ್ಲಿಯ ಬಳ್ಳಾರಿಯ ಕನ್ನಡಿಗರು ಎಚ್ಚತ್ತಿರುವುದು ನಮಗೆ ಸಂತೋಷ. ಪ್ರಮುಖರಾದ ಕನ್ನಡಿಗರೆಲ್ಲ ಈ ಗುಂಪಿನಲ್ಲಿ ಸೇರಿದಾರೆ ಎಂದು ನಾವು ನಂಬಿದೇವೆ. ಈಗ ಗುಂಪು ಎಂದು ಒಟ್ಟುಗೂಡಿರುವವರು ಇನ್ನೂ ತಮ್ಮೊಂದಿಗೆ ಸೇರದ ಹಿರಿಯರು ಯಾರು ಇರಬಹುದು ಎಂದು ನೋಡಿ ಅವರನ್ನೂ ಕರೆದು ಗುಂಪಿಗೆ ಸೇರಿಸಿಕೊಳ್ಳಬೇಕು. ಹಿರಿಯರನ್ನು ಮಾತ್ರ ಅಲ್ಲದೆ ಒಟ್ಟು ಜನತೆಯಿಂದಲೂ ಪ್ರತಿನಿಧಿಗಳನ್ನು ಬರಮಾಡಿಕೊಂಡು ಗುಂಪಿನ ನೆಲಗಟ್ಟನ್ನು ವಿಸ್ತರಿಸಬೇಕು; ಭದ್ರಪಡಿಸಬೇಕು. ಗುಂಪು ಆಡುವ ಮಾತು ಒಟ್ಟು ಕನ್ನಡಿಗರ ಮಾತು ಎಂದು ಸರಕಾರಕ್ಕೂ ಆಂಧ್ರ ಜನರಿಗೂ ಸ್ಪಷ್ಟವಾಗಿ ತೋರಬೇಕು.

ಈ ಪ್ರಶ್ನೆ ಮುಖ್ಯವಾಗಿ ರಾಜಕೀಯವಲ್ಲ. ಇದು ಮುಖ್ಯವಾಗಿ ಭಾಷಾ ವಿಷಯಕ; ಅನುಸಂಗದಿಂದ ರಾಜಕೀಯ. ಇಲ್ಲಿ ಕೋಪತಾಪಗಳಿಗೆ ಎಡೆ ಕೊಡಬೇಕಾಗಿಲ್ಲ. ಕನ್ನಡಿಗರನಕ ಎಲ್ಲ ವೇಳೆಯಲ್ಲೂ ಸ್ಪಷ್ಟವಾಗಿ ಆದರೂ ಸಮಾಧಾನವಾಗಿ ಮಾತನಾಡಬೇಕು; ಧೈರ್ಯದಿಂದ ಆದರೂ ಶಾಂತಿಯಿಂದ ನಡೆಯಬೇಕು.

ಭಾರತ ಭೂಮಿಯನ್ನು ಭಾಷಾ ದೃಷ್ಟಿಯಿಂದ ವಿಂಗಡಿಸಬೇಕೆಂದು ನಿರ್ಮಿತವಾದ ಕಾಂಗ್ರೆಸ್ ಸಮಿತಿ **ಬಳ್ಳಾರಿ ಕನ್ನಡ ನಾಡು** ಎಂದು ತೀರ್ಪು ಕೊಟ್ಟಿದೆ. ಕನ್ನಡ ನಾಡಿನ ಇತರ ಪ್ರಾಂತಗಳ ಜನರು ಈ ಸಂದರ್ಭದಲ್ಲಿ ಬಳ್ಳಾರಿಗೆ ನೆರವು ನೇಹಗಳನ್ನು ತೋರಬೇಕು. ಆಡಳಿತಗಳು ಬೇರೆಯಾಗಿದ್ದರೂ ಕನ್ನಡದ ಜನತೆ ತಾನು ಒಂದು ಎಂಬುದನ್ನು ರುಜು ಮಾಡಬೇಕು.

ಕನ್ನಡ ಸಾಹಿತ್ಯ ಪರಿಷತ್ತಿನಿಂದ ಆಂಧ್ರ ನಾಯಕರಿಗೂ ಮದರಾಸು ಸರಕಾರಕ್ಕೂ ಯುಕ್ತರೀತಿಯ ಪತ್ರಗಳನ್ನು ಬರೆಯುವುದಾಗುತ್ತದೆ. ಬಳ್ಳಾರಿಯ ಗೆಳೆಯರು ಅಪೇಕ್ಷಿಸಿದರೆ ಪರಿಷತ್ತಿನ ಪರವಾಗಿ ಒಬ್ಬ ಇಬ್ಬರು ಪ್ರತಿನಿಧಿಗಳನ್ನು ಬಳ್ಳಾರಿಗೆ ಕಳುಹಿಸಲು ಏರ್ಪಡಿಸಬಹುದು. ಒಟ್ಟಿನಲ್ಲಿ ಆಂಧ್ರರ ಯಾವ ಕಾರ್ಯಕ್ರಮದಿಂದಲೆ ಆಗಲಿ ಬಳ್ಳಾರಿಯ ಕನ್ನಡತ್ವಕ್ಕೆ ಕೊರತೆಬಾರದಂತೆ ನೋಡಿಕೊಳ್ಳುವುದು ಎಲ್ಲ ಕನ್ನಡಿಗರ ಕರ್ತವ್ಯ; ಮುಖ್ಯವಾಗಿ ಬಳ್ಳಾರಿಯ ಕನ್ನಡಿಗರ ಕರ್ತವ್ಯ.

ಬಳ್ಳಾರಿಯ ಕನ್ನಡ ಗೆಳೆಯರ ಗುಂಪು ಅಲ್ಲಿಯ ಕನ್ನಡಿಗರು ಎಚ್ಚರದಿಂದಿದಾರೆಂದು ತೋರಿಸಿದೆ. ತಮ್ಮ ಸ್ವತ್ತನ್ನು ಕಾಯಲು ತೊಡಗಿರುವ ಇವರಿಗೆ ಜಯವಾಗಲಿ. ಬರುವ ಕಾಲದ ಕನ್ನಡದ ಒನ್ನಾಡಿಗೆ ಒಂದು ಮುಖ್ಯ ಅಂಗವಾಗಿ ಬಾಳುವಂತೆ ಬಳ್ಳಾರಿ ತನ್ನ ಕನ್ನಡತನವನ್ನು ಉಳಿಸಿಕೊಂಡು ಬಾಳಲಿ.

## ಎರಡು ದೊಡ್ಡ ಧರ್ಮಕಾರ್ಯಗಳು

ಕೇರಳದ ದೊಡ್ಡ ಗಿರಣಿ (Cochin Textiles) ಯಜಮಾನರೂ ಪ್ರಸಿದ್ಧ ವಾಣಿಜ್ಯ ಪಟುಗಳೂ ಆದ ಶ್ರೀ. ಅಳಗಪ್ಪ ಚೆಟ್ಟಿಯಾರ್, ಬಾರ್-ಅಟ್-ಲಾ ಅವರು ಈಚೆಗೆ ಕೊಟ್ಟಯೂರಿನಲ್ಲಿ ನಡಸಿದ ತಮ್ಮ ಮಗಳು ಶ್ರೀಮತಿ ಉಮಾಯಾಳ್ ಎಂಬಾಕೆಯ ವಿವಾಹ ಮಹೋತ್ಸವದ ಸಂದರ್ಭದಲ್ಲಿ ತಿರುವಾಂಕೂರು ವಿಶ್ವವಿದ್ಯಾನಿಲಯದಲ್ಲಿ ತಮಿಳು ಭಾಷೆಯ ಅಧ್ಯಯನದ ಪ್ರೋತ್ಸಾಹಕ್ಕಾಗಿ **ಒಂದು ಲಕ್ಷದ ಒಂದು** ರೂ.ಗಳ ದಾನ ಮಾಡಿದ್ದಾರೆ. ಅಲ್ಲದೆ ಮದರಾಸಿನಲ್ಲಿ ಲೇಡಿ ವೆಂಕಟಸುಬ್ಬರಾಯರ ನೇತೃತ್ವದಲ್ಲಿ ನಡೆಯುತ್ತಿರುವ 'ಸೇವಾ ಸದನ'ಕ್ಕೆ ತಮ್ಮ ಮಗಳ ಹೆಸರಿನಲ್ಲಿ ಒಂದು ವಸತಿ ಗೃಹವನ್ನು ಕಟ್ಟಲು, ತಮ್ಮ ಗಿರಣಿಯಲ್ಲಿ ದುಡಿಯುವ ಕೆಲಸಗಾರರಿಗೆ ಸೌಕರ್ಯಗಳನ್ನು ಕಲ್ಪಿಸಲು ದ್ರವ್ಯಸಹಾಯದ ವಾಗ್ದಾನ ಮಾಡಿದ್ದಾರೆ.

ಹೀಗೆಯೆ, ತಿರುವಾಂಕೂರು ಸಂಸ್ಥಾನದ ದಿವಾನರಾದ ಸಚಿವೋತ್ತಮ ಸರ್ ಸಿ. ಪಿ. ರಾಮಸ್ವಾಮಿ ಅಯ್ಯರ್ ಅವರು ಮದರಾಸಿನ ವಕೀಲ ವೃಂದದ ನೆರವು ನಿಧಿಗೆ ಬೀಜಪ್ರಾಯವಾಗಿ ಒಂದು ದೊಡ್ಡ ಮೊತ್ತವನ್ನು ದಾನಮಾಡಿ, ವಕೀಲ ವೃತ್ತಿಯಲ್ಲಿ ಅಷ್ಟು ಅದೃಷ್ಟವಿಲ್ಲದೆ ಮುಂದುಗಾಣದಿರುವವರಿಗೂ, ವೃದ್ಧರಾಗಿ ವೃತ್ತಿಬಿಟ್ಟು ಉಪಪತ್ತಿಯಿಲ್ಲದಿರುವವರಿಗೂ ಈ ನಿಧಿಯಿಂದ ಸಹಾಯ ಮಾಡಬೇಕೆಂದು ಉದ್ದೇಶಪಟ್ಟಿರುತ್ತಾರೆ.

ಒಂದು ಕಡೆ ಜ್ಞಾನ ಸಂಸ್ಕೃತಿಗಳ ಪ್ರೋತ್ಸಾಹಕ್ಕೆ, ಇನ್ನೊಂದು ಕಡೆ, ಸಮಾಜ ಸೇವೆಯ ಪ್ರೋತ್ಸಾಹಕ್ಕೆ ಎಂದು ಈ ರೀತಿಯ ಎರಡು ದೊಡ್ಡ ದಾನಗಳು ಲಭಿಸಿರುವುದನ್ನು ನಾವು ಸಂತೋಷದಿಂದ ಇಲ್ಲಿ ನೆನೆಯುತ್ತೇವೆ ಮತ್ತು ಇಬ್ಬರು ದಾತರನ್ನೂ ಹೃತ್ಪೂರ್ವಕವಾಗಿ ಅಭಿನಂದಿಸುತ್ತೇವೆ.

ಈ ಸಂದರ್ಭದಲ್ಲಿ ಒಂದು ಮಾತು. ಈಚೆಗೆ ನಮ್ಮ ದೇಶದಲ್ಲೂ ಧನಿಕರಾದ ಕನ್ನಡಿಗರು ಈ ರೀತಿಯ ಹಲವು ದಾನ ಧರ್ಮಗಳಿಗೆ ಮನಸ್ಸು ಕೊಡುತ್ತ ಜನದ ಕೃತಜ್ಞತೆಗೆ ಪಾತ್ರರಾಗುತ್ತಿದ್ದಾರೆ. ಆದರೆ ಕನ್ನಡ ಭಾಷಾ ಸಂಸ್ಕೃತಿಗಳು ಇನ್ನೂ ಅವರ ಧರ್ಮದ ಸೀಮೆಯೊಳಕ್ಕೆ ಅಷ್ಟು ಸ್ಪಷ್ಟವಾಗಿ ಬಂದಿಲ್ಲವಾದರೂ ನಮ್ಮ ನಾಡಿನ ಧನಿಕರು ಕನ್ನಡವೂ ತಮ್ಮ ಧರ್ಮ ಕಾರ್ಯಗಳಿಗೆ ಪಾತ್ರವಾಗತಕ್ಕ ವಿಷಯವೆಂಬುದನ್ನು ಈಗಾಗಲೆ ಸ್ವಲ್ಪ ಸ್ವಲ್ಪವಾಗಿ ತೋರಿಸುತ್ತ ಬಂದಿರುವರಾಗಿ ಈ ಹಿತವಾದ ಒತ್ತಾಯವನ್ನು ಮುಂದೊತ್ತಲು ನಮಗೆ ಸಂಕೋಚವಾಗುವುದಿಲ್ಲ. ಸರಸ್ವತಿಯ ಪೂರ್ಣ ಪ್ರಸಾದ ನಾಡಿಗೆ ಲಭಿಸಲು ಮುಂದೆ ಇನ್ನೂ ಹೆಚ್ಚು ಹೆಚ್ಚು ಪ್ರಮಾಣದಲ್ಲಿ ಲಕ್ಷ್ಮೀಕಟಾಕ್ಷ ದೊದಗಬೇಕಾದ್ದು ಅಗತ್ಯ, ನ್ಯಾಯ. ಈ ಧರ್ಮವನ್ನು ನಮ್ಮ ಧನವಂತರು ತಕ್ಕಂತೆ ನಡಸುವರೆಂದು ನಂಬಿದ್ದೇವೆ.

## ಅಭಿನಂದನೆ

ತಾಯಿನಾಡು ಪತ್ರಿಕೆಯ ೧೬ನೆಯ ವಾರ್ಷಿಕೋತ್ಸವ ಕಳೆದ ಭಾನುವಾರ ನಡೆಯಿತು. ಶ್ರೀ. ಪಿ. ಆರ್. ರಾಮಯ್ಯನವರು ಈ ಸಂದರ್ಭದಲ್ಲಿ ಪತ್ರಿಕೆಯಲ್ಲಿ ಅಭಿಮಾನವಿರುವ ಹಲವು ಮಹನೀಯರನ್ನು ಆಹ್ವಾನಿಸಿ ಸತ್ಕರಿಸಿ, ತಾಯಿನಾಡು ಪತ್ರಿಕೆಗೂ ಈಚೆಗೆ ತಾವು ನಡಸುತ್ತಿರುವ 'ಡೆಯ್ಲಿ ನ್ಯೂಸ್' ಪತ್ರಿಕೆಗೂ ಮಹಾಜನರಿಂದ ದೊರೆಯುತ್ತಿರುವ ಪ್ರೋತ್ಸಾಹಕ್ಕಾಗಿ ಕೃತಜ್ಞತೆಯನ್ನು ಅರ್ಪಿಸಿದರು. ಅತಿಥಿಗಳಲ್ಲಿ ಹಲವು ಮಹನೀಯರು ಅವರನ್ನು ಅಭಿನಂದಿಸಿದರು. ಈ ಅಭಿನಂದನೆಗಳಿಗೆ ನುಡಿ ತನ್ನ ದನಿಯನ್ನು ಸೇರಿಸುತ್ತದೆ.

ತಾಯಿನಾಡು ಪತ್ರಿಕೆ ಕನ್ನಡಿಗರ ಪ್ರೀತಿ ವಿಶ್ವಾಸಗಳಿಗೆ ಪಾತ್ರವಾಗಿದೆ. ಅದು ಈ ಹದಿನಾರು ವರ್ಷಗಳಿಂದ ಕಷ್ಟಗಳನ್ನು ಕಂಡಿದೆ. ಸುಖವನ್ನು ಕಂಡಿದೆ. ಕಷ್ಟವೊ ಸುಖವೊ ಸೋದರ ಪತ್ರಿಕೆಗಳೊಡನೆ ಅದನ್ನು ಹಂಚಿಕೊಂಡು ನಾಡ ಸೇವೆಯನ್ನು ಶ್ರದ್ಧೆಯಿಂದ ನಡಸುತ್ತಿದೆ. ಜನಕ್ಕೆ ಬೇಕಾದ ತಿಳಿವಳಿಕೆಯನ್ನು ನೀಡುತ್ತ ನಾಡ ಮುನ್ನಡೆಗೆ ನೆರವಾಗುತ್ತಿದೆ. ದಿನ ಪತ್ರಿಕೆಗಳಲ್ಲಿ ತಾಯಿನಾಡು ಅಣ್ಣನಂತೆ. ತಮ್ಮಂದಿರು ಈಚೆಗೆ ಹುಟ್ಟಿ ಸೇವೆ ಮಾಡುತ್ತಿದ್ದಾರೆ. ಸ್ನೇಹ ಸಾಮರಸ್ಯಗಳಿಂದ ಈ ಸಂಸಾರ ಬೆಳೆಯಲಿ, ಬೆಳೆದು ನಾಡನ್ನು ಬೆಳಸಲಿ.

---

## ಧಾರವಾಡದಲ್ಲಿ ಪರಿಷತ್ತಿನ ಉಪಾಧ್ಯಕ್ಷರು

(೨೩೧ನೆಯ ಪುಟದಿಂದ)

ವಿಚಾರಪೂರ್ಣ ಭಾಷಣವನ್ನು ಮಾಡಿದರು. ಮನೆಯ ಮುದುಕನಿಗೆ ಬುದ್ಧಿಯಿಲ್ಲವೆಂದು ತರುಣರು ಬೀಳುಗಳೆದರೂ, ಅವನ ಪ್ರಯೋಜನ ಇದ್ದೇ ಇದೆ. ಭಾರತ ಅಣ್ಣದೇಶ. ಅನ್ಯದೇಶದವರಿಗೆ ಅಣ್ಣನು ದಾರಿ ತೋರಬೇಕಾಗಿದೆ. ಪಾಶ್ಚಾತ್ಯ ರಾಷ್ಟ್ರಗಳು ಕ್ರೈಸ್ತಧರ್ಮ ಕ್ರೈಸ್ತ ಸಂಸ್ಕೃತಿಗಳ ರಕ್ಷಣೆಗಳಿಗಷ್ಟೆಯೆ ಹೋರಾಡುತ್ತವೆ. ಆದರೆ ಭಾರತೀಯರ ಸಂಸ್ಕೃತಿಯ ನೋಟ ಜಾಗತಿಕವಾಗಿದೆ. 'ಸರ್ವ ಜನರು' ಸುಖಿಯಾಗಲೆಂಬುದೇ ಭಾರತದ ಸಂದೇಶ ಎಂಬುದನ್ನು ಭಾರತದಲ್ಲಿಯ ಕಥೆಗಳನ್ನುದಾಹರಿಸಿ ತಿಳಿಯಪಡಿಸಿದರು. ಗೌತಮನು ಬ್ರಾಹ್ಮಣನಲ್ಲದ ಸತ್ಯವಂತನಿಗೆ ವೇದೋಪದೇಶವನ್ನು ಮಾಡಿದುದನ್ನೂ, ಕರ್ಮಠ ಬ್ರಾಹ್ಮಣನಿಗೆ ಬೇಡನಾದ ಧರ್ಮವ್ಯಾಧನು ಧರ್ಮವನ್ನು ತಿಳುಹಿದುದರ ಬಗೆಯನ್ನೂ, ಕನಕನ ಬಾಳೆಯ ಹಣ್ಣಿನ ಕತೆಯನ್ನೂ ಹೇಳಿ, ಹುಟ್ಟು ಮೇಲಲ್ಲ, ಗುಣ ದೊಡ್ಡದು ಎಂಬುದನ್ನು ಮನಮುಟ್ಟುವಂತೆ ಹೇಳಿದರು. ಭಾರತೀಯ ಸಂಸ್ಕೃತಿಯ ಮೇಲ್ಮೆಯನ್ನೆತ್ತಿ, ಸ್ತ್ರೀ ಸ್ವಾತಂತ್ರ್ಯದ ಮರ್ಮವನ್ನರುಹಿದರು. ಶ್ರೀ. ಶಂ. ಬಾ. ಜೋಶಿಯವರು ಅತಿಥಿಗಳ ಆಭಾರವನ್ನು ಮನ್ನಿಸಿದನಂತರ ಸಭೆ ೯ ಗಂಟೆಗೆ ಕೊನೆಗೊಂಡಿತು.

ಇದಕ್ಕೂ ಮೊದಲು ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ಉತ್ತರ ಕರ್ನಾಟಕ ಪ್ರಾಂತ ಸಮಿತಿಯ ಸಭೆ ಸೇರಿ ಪ್ರಾಂತ ಸಮಿತಿ ಹೆಚ್ಚು ಬಲವುಳ್ಳದ್ದಾಗುವಂತೆ ಯಾವ ಉಪಾಯಗಳನ್ನು ಕೈಕೊಳ್ಳಬೇಕೆಂಬ ಬಗ್ಗೆ ವಿಚಾರವಿನಿಮಯ ಆಯಿತು.

ಮಾರನೆಯ ದಿನ ಅತಿಥಿಗಳು ಹಲವು ಸಂಘ ಸಂಸ್ಥೆಗಳಿಗೆ ಭೇಟಿ ಕೊಟ್ಟು ಕನ್ನಡಿಗರು ಮಾಡಬೇಕಾದ ಕರ್ತವ್ಯವನ್ನು ತಿಳಿಸಿದರು.

೩|| ಗಂಟೆಗೆ ಅತಿಥಿಗಳು ವ್ಹಿಕ್ಟೋರಿಯ ಹೈಸ್ಕೂಲಿಗೆ ಭೇಟಿ ಕೊಟ್ಟು ತುಂಬಿ ಬಳಗದ ೮ನೆಯ ವರ್ಷದ ಪ್ರಾರಂಭೋತ್ಸವ ನೆರವೇರಿಸಿ, ತರುಣರು ದೇಶಕಾರ್ಯ ಮಾಡಲು ಮುಂದಾಗಬೇಕೆಂದು ಬೋಧಿಸಿದರು. ಆಮೇಲೆ ಲಿಂಗಾಯತ ಹೈಸ್ಕೂಲಿಗೆ ಭೇಟಿ ಕೊಟ್ಟು ಲಿಂಗಾಯಿತ ಭವನದಲ್ಲಿ ಸೇರಿದ ಸಭೆಗೆ ಬಂದರು. ಅಲ್ಲಿ ಸರ್ ಪುಟ್ಟಣ್ಣಶೆಟ್ಟಿ ಅವರ ಭಾವಚಿತ್ರವನ್ನು ಕಂಡು ಅವರ ಜೀವನವನ್ನು ಆದರ್ಶವನ್ನಾಗಿಟ್ಟುಕೊಂಡು ದೇಶಸೇವೆಯಲ್ಲಿ ಮುಂದೆ ಸಾಗಬೇಕೆಂದು ಸಭಿಕರಿಗೆ ಉಪದೇಶಿಸಿದರು.

ಅನಂತರ ಅತಿಥಿಗಳು ಸಂಜೆ ೫ ಗಂಟೆಗೆ ಕರ್ನಾಟಕ ಕಾಲೇಜನ್ನು ಸಂದರ್ಶಿಸಿದರು. ಅಲ್ಲಿಯ ಕರ್ನಾಟಕ ಸಂಘದವರು ಏರ್ಪಡಿಸಿದ ಸಭೆಯಲ್ಲಿ ಶ್ರೀ. ಮಾಸ್ತಿಯವರು 'ಎರಡು ನಿಲುವು' (two attitudes) ಎಂಬ ವಿಷಯವನ್ನು ತೆಗೆದುಕೊಂಡು ಹೆನ್ಲೆ ಕವಿ ಹೇಳಿರುವ ಒಂದು ನಿಲುವನ್ನೂ ಎಮಿಲಿ ಬ್ರಾಂಟಳು ಸೂಚಿಸಿರುವ ಇನ್ನೊಂದು ನಿಲುವನ್ನೂ ಕುರಿತು ಒಂದು ಗಂಟೆಯ ವರೆಗೆ ಉದ್ಬೋಧಕವಾಗಿ ಭಾಷಣ ಮಾಡಿದರು. ದೇವನಿರಲಿ, ಇಲ್ಲದಿರಲಿ ಅಜೇಯ ಆತ್ಮವೊಂದಿರಬೇಕು ಎಂಬುದು ಒಂದನೆಯ ನಿಲುವು. ನಮ್ಮ ಹೃದಯದಲ್ಲಿ ದೇವನಿದ್ದು ಎಲ್ಲವನ್ನೂ ಮಾಡಿಸುವನು ಎಂಬುದು ಎರಡನೆಯ ನಿಲುವು. ತೋರಿಕೆಗೆ ಬೇರೆಯಾಗಿ ಕಂಡರೂ ಈ ಎರಡೂ ನಿಲುವುಗಳ ಆಶಯ ಒಂದೇ ಆಗಿದೆ. ಭಾರತ ವರ್ಷದಲ್ಲಿಯೂ ಈ ನಿಲುವುಗಳನ್ನು ಚೆನ್ನಾಗಿ ಕಾಣಬಹುದು. ನಮ್ಮ ಪೂರ್ವಿಕರು ಇದನ್ನು ಬಹು ಚೆನ್ನಾಗಿ ಅರಿತಿದ್ದರು. ನಾವು ಆತ್ಮವಂತರಾಗಬೇಕು. ಆತ್ಮವಿಲ್ಲದ ದೇಹದಿಂದ ಏನು ಪ್ರಯೋಜನವಾಗುವದು? ಗಡ್ಡೆ ಗೆಣಸುಗಳಿಂದ ಗಾಂಧೀಜಿಯವರ ವರೆಗೆ ಎಲ್ಲ ಜೀವರಾಶಿಗಳಲ್ಲಿಯೂ ಈ ಆತ್ಮ ಇರುವದು. ಅದನ್ನು ನಾವು ವಿಕಾಸಗೊಳಿಸಬೇಕು. ವಿಕಸನಗೊಳ್ಳಲು ಆತ್ಮ ಯಾವಾಗಲೂ ಯತ್ನಿಸುತ್ತದೆ. ಹೆಜ್ಜೆ ಹೆಜ್ಜೆಗೆ ಕರ್ತವ್ಯದ ಬಗ್ಗೆ ಸಂದೇಹಗಳು ತಲೆದೋರುತ್ತವೆ. ನಮ್ಮ ಆತ್ಮ ಸತ್ಯವೆಂದು ಹೇಳುವುದನ್ನು ನಾವು ಆಚರಣೆಯಲ್ಲಿ ತರಬೇಕು. ಈ ಬಗೆಯ ಆತ್ಮತತ್ವ, ಗಂಡುತನ, ಕೆಚ್ಚು ನಮ್ಮಲ್ಲಿ ಬೆಳೆಯಬೇಕು, ಎಂದು ಹೇಳಿ ಜರ್ಮನಿಯ ಐನ್‌ಸ್ಟೀನ್ ಅವರ ಸತ್ಯನಿಷ್ಠೆಯನ್ನು ಉದಾಹರಿಸಿ, ಭಾರತ ಅಣ್ಣದೇಶ. ಅದು ಎಲ್ಲರಿಗೂ ಮಾರ್ಗದೋರುವಂತಾಗಲಿ ಎಂದು ಹಾರೈಸಿ ಭಾಷಣ ಮುಗಿಸಿದರು.

ಸಂಜೆ ೬-೩೦ ಗಂಟೆಗೆ ಇಲ್ಲಿಯ ವೀರಶೈವ ವಿದ್ಯಾಭಿವೃದ್ಧಿಯ ಸಂಸ್ಥೆಯನ್ನು ಸಂದರ್ಶಿಸಿ, ಅಲ್ಲಿ ಶ್ರೀ. ಮಾಸ್ತಿಯವರು 'ಮಾನವ ಧರ್ಮ'ವನ್ನು ಕುರಿತು ಮಾತನಾಡಿದರು. ಸರ್ವ ಧರ್ಮ ಸಮನ್ವಯ ದೃಷ್ಟಿಯಿಂದ ವರ್ತಿಸಬೇಕೆಂದು ತಿಳಿಸಿ ಕೊನೆಗೆ ಪರಿಷತ್ತಿಗೆ ಸಹಾಯವನ್ನೀಯಲು ಸಕಲರನ್ನೂ ಬಿನ್ನವಿಸಿದರು.

ಮೂರನೆಯ ದಿನ ಮಧ್ಯಾಹ್ನ ೩|| ಗಂಟೆಗೆ ಕೆ. ಇ. ಬೋರ್ಡಿನ ಶಾಲೆಗಳನ್ನು ಸಂದರ್ಶಿಸಿ ಮಾಳಮಡ್ಡಿಯ ಶಾಲೆಯ ಭವ್ಯ ಸಭಾಂಗಣದಲ್ಲಿ ನೆರೆದ ವಿದ್ಯಾರ್ಥಿಗಳಿಗೆಲ್ಲ ನಾಲ್ಕು ಉಪದೇಶದ ಮಾತುಗಳನ್ನು ಹೇಳಿ, ನಂದಾದೀಪ, ಕಿರಣ ಎಂಬ ಕೈಬರೆಹದ ಪತ್ರಿಕೆಗಳ ಪ್ರಕಾಶನವನ್ನು ಮಾಡಿದರು.

ಸಂಜೆ ೫ಕ್ಕೆ ಬಾಸೆಲ್ ಮಿಶನ್ ಹೈಸ್ಕೂಲನ್ನು ಸಂದರ್ಶಿಸಿದರು. ಶ್ರೀ. ಕೆ. ವ್ಹಿ. ಕುಲಕರ್ಣಿಯವರು ಅತಿಥಿಗಳ ಪರಿಚಯ ಮಾಡಿಕೊಡುತ್ತ ಸ್ವಲ್ಪದರಲ್ಲಿ ಹೈಸ್ಕೂಲಿನ ಇತಿಹಾಸವನ್ನು ಬಣ್ಣಿಸಿದರು. ಶ್ರೀ. ಮಾಸ್ತಿಯವರು ಈ ಸಂಸ್ಥೆಗೆ ಸಂಬಂಧಪಟ್ಟವರೆಂದು ಹೇಳಲಾದ ಝೀಗಲರ್, ಕಿಟಲ್ ಮೊದಲಾದವರ ಕನ್ನಡ ಸೇವೆಯನ್ನು ಪ್ರಶಂಸಿಸಿ ಕರ್ನಾಟಕ ಸಂಘದ ಉದ್ಘಾಟನ ಸಮಾರಂಭವನ್ನು ಜರುಗಿಸಿದರು. ಅನಂತರ ಪ್ರೊ. ಬಾಗಿಯವರ ಮನೆಯಲ್ಲಿ ಸ್ಥಳದ ಮುಖಂಡರನ್ನು ಭೇಟಿ ಮಾಡಿ, ಪರಿಷತ್ತಿನ ಸದಸ್ಯತ್ವವನ್ನು ಹೆಚ್ಚಿಸುವ ವಿಚಾರ ವಿನಿಮಯ ಮಾಡಿದರು.

ಆಮೇಲೆ ಸಂಜೆ ೮ ಗಂಟೆಗೆ ಅಸ್ವಸ್ಥರಾಗಿದ್ದರೂ, ಶ್ರೀ. ಮಾಸ್ತಿಯವರು ಮಹಿಳೆಯರಿಗಾಗಿ ಕರ್ನಾಟಕ ವಿದ್ಯಾವರ್ಧಕ ಸಂಘದಟ್ಟದಲ್ಲಿ ಮಹಿಳಾ ಮಂಡಲದವರು ಏರ್ಪಡಿಸಿದ್ದ ಸಭೆಗೆ ಬಂದರು. ಶ್ರೀಮತಿ ಶಾಂತಕ್ಕಾ ಮಾಳವಾಡರು ಅತಿಥಿಗಳ ಪರಿಚಯ ಮಾಡಿಕೊಟ್ಟರು. ಅನಂತರ ಶ್ರೀ. ಮಾಸ್ತಿಯವರು ಭಾಷಣವನ್ನು ಪ್ರಾರಂಭಿಸಿ ಹೆಣ್ಣುಮಕ್ಕಳಿಗೆ ಹಿತಕರವಾದ ನಾಲ್ಕು ಮಾತುಗಳನ್ನು ಹೇಳಿ, ಸ್ತ್ರೀಯರ ಗೌರವವನ್ನೂ ಸ್ತ್ರೀತ್ವ ರಕ್ಷಣೆಯ ಮಹತ್ವವನ್ನೂ ಬಹು ಚೆನ್ನಾಗಿ ಬಣ್ಣಿಸಿದರು. ಅನಂತರ ಶ್ರೀ. ಬಿ. ವೆಂಕೋಬರಾಯರು ಮಹಿಳೆಯರು ಪರಿಷತ್ತಿನ ಸದಸ್ಯರಾಗಿ ಸಹಾಯ ಮಾಡಬೇಕೆಂದು ಕೇಳಿಕೊಂಡರು. ಹೆಣ್ಣುಮಕ್ಕಳ ಟ್ರೇನಿಂಗ್ ಕಾಲೇಜದ ಶ್ರೀಮತಿ ಎಲಾಯಿಜಾ ಅವರು ಅತಿಥಿಗಳ ಆಭಾರವನ್ನು ಮನ್ನಿಸಿದರು.

ಹೀಗೆ ಧಾರವಾಡದ ಕಾರ್ಯಕ್ರಮಗಳು ಮುಗಿದುವು.

**ಗದಗಿನಲ್ಲಿ:—** ಉಪಾಧ್ಯಕ್ಷರು ಶ್ರೀ.ಗಳಾದ ಪದ್ಮನಾಭ ಪುರಾಣಿಕ ಅವರು ಮತ್ತು ಕ. ವೆಂ. ರಾಘವಾಚಾರ್ಯರೊಂದಿಗೆ ಗದಗಿಗೆ ದಯಮಾಡಿಸಿದರು. ಸೆಪ್ಟೆಂಬರ್ ೫,೬ನೆಯ ದಿನಗಳಲ್ಲಿ ಸ್ಥಳೀಯ ಮಹನೀಯರೊಡನೆ ಕನ್ನಡದ ಮುನ್ನಡೆ, ಪರಿಷತ್ತಿನ ಸದಸ್ಯತ್ವ ಹೆಚ್ಚಿಸುವುದು ಮುಂತಾದ ಮಾತುಕತೆ ನಡಸಿದರು. ಅಕ್ಕನ ಬಳಗ, ಗಿರಣಿ ಕೆಲಸಗಾರರ ಸಂಸ್ಥೆ ಮೊದಲಾದುವನ್ನು ಸಂದರ್ಶಿಸಿದರು.

ಶ್ರೀ. ಪದ್ಮನಾಭ ಪುರಾಣಿಕ ಅವರಿಂದ 'ವಿಜ್ಞಾನ ದೃಷ್ಟಿ', ಶ್ರೀ. ಕ. ವೆಂ. ರಾಘವಾಚಾರ್ಯರಿಂದ 'ಸಾಕ್ರಟೀಸ್' ಮತ್ತು ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರಿಂದ 'ಭಾರತೀಯ ಸಂಸ್ಕೃತಿಯ ಮುನ್ನೋಟ' – ಹೀಗೆ ಭಾಷಣಗಳಾದುವು.

## ಪರಿಷತ್ತಿನ ಸುದ್ದಿ

**ಸಹಾಯಕ ಸದಸ್ಯರು (೧೦೦ ರೂ.) :** ಶ್ರೀ.ಗಳಾದ ೧. ಡಾ|| ಎನ್. ಎಚ್. ಗೋಡಬೋಲೆ ಅವರು, ಗದಗು. ೨. ಮಾ. ಕೃ. ನರಸಿಂಹಯ್ಯನವರು, ಸಬ್‌ಡಿವಿಜನ್ ಆಫೀಸರ್, ಡಿಸ್ಟ್ರಿಕ್ ಬೋರ್ಡ್, ಗದಗು (ಬದಲಾವಣೆ). ೩. ಸಂಗನ ಗೌಡ ಸಿದ್ಧನ ಗೌಡ ಪಾಟೀಲ ಅವರು, ಹೊಳೆ ಆಲೂರು, (ರೋಣ ತಾಲ್ಲೂಕು).

**ಸಾಮಾನ್ಯ ಸದಸ್ಯರು (೬ ರೂ.) :** ಶ್ರೀಗಳಾದ ೧. ವೈದ್ಯ ಜಯರಾಮಾಚಾರ್ಯ ಮಳಗಿ ಅವರು, ಗದಗು. ೨. ಗೋಪಾಲರಾವ್ ನವಲಿ ಅವರು, ವಕೀಲರು, ಗದಗು.

**ಸಾಮಾನ್ಯ ಸದಸ್ಯರು (೩ ರೂ.) :** ಶ್ರೀಗಳಾದ ೧. ವಾಸುದೇವರಾವ್ ಶ್ರೀನಿವಾಸರಾವ್ ಇನಾಮದಾರ್ ಅವರು, ವಕೀಲರು, ಧಾರವಾಡ. ೨. ಶ್ರೀಮತಿ ಗೀತಾದೇವಿ ಕುಲಕರ್ಣಿ ಅವರು, ಸಾಧನ ಮುದ್ರಣಾಲಯ, ಧಾರವಾಡ. ೩. ಶ್ರೀ. ಕುಮಾರ ಬೇಂದ್ರೆ ಅವರು, ಧಾರವಾಡ.

### ಮಹಿಳಾ ಶಾಖೆ

**ತಾ|| ೧೮–೯–೧೯೪೩ನೆಯ ಶನಿವಾರ ಸಂಜೆ ೬ ಗಂಟೆಗೆ** ಪರಿಷನ್ಮಂದಿರದಲ್ಲಿ ಶ್ರೀಮತಿ ಸ್ವರ್ಣಾಂಬ ಅವರು **ಭಾರತ ವಾಚನ** ಮಾಡುವರು.

### ಮೈಸೂರು ಪ್ರಾಂತ ಸಮಿತಿ

**ತಾ|| ೨೫–೯–೧೯೪೩ನೆಯ ಶನಿವಾರ ಸಂಜೆ ೭ ಗಂಟೆಗೆ** ಪರಿಷನ್ಮಂದಿರದಲ್ಲಿ ಶ್ರೀ. ಕೆ. ವಿ. ಪುಟ್ಟಪ್ಪ, ಎಂ.ಎ., ಅವರು **"ಶೂದ್ರ ಮುನಿ"** ಎಂಬ ತಮ್ಮ ಹೊಸ ನಾಟಕ ವಾಚನ ಮಾಡುವರು.

**ತಾ|| ೨೬–೯–೧೯೪೩ನೆಯ ಭಾನುವಾರ ಸಂಜೆ ೭ ಗಂಟೆಗೆ** ಪರಿಷನ್ಮಂದಿರದಲ್ಲಿ ಎಸ್. ಎಲ್. ಎನ್. ವಿದ್ಯಾಶಾಲೆಯ ನಾಟಕ ಸಂಘದವರು ಶ್ರೀ. ಟಿ. ಪಿ. ಕೈಲಾಸಂ ಅವರ **"ಬಂಡ್ವಾಳ್ವಿಲ್ಲದ ಬಡಾಯಿ"** ನಾಟಕ ಪ್ರದರ್ಶನ ಮಾಡುವರು.

### ರಾಜಸೇವಾಸಕ್ತ ಶ್ರೀ ಬೆಳ್ಳಾವೆ ವೆಂಕಟನಾರಾಯಣಪ್ಪನವರ ಸ್ಮಾರಕ ಉಪನ್ಯಾಸ ನಿಧಿ

| | | |
|---|---|---|
| | ಹಿಂದಿನ ಸಂಚಿಕೆಯಲ್ಲಿ ರೂ. | ೮೫೯–೦–೦ |
| | ಶ್ರೀ.ಗಳಾದ | |
| ೧. | ಎಂ. ಶ್ರೀನಿವಾಸ ಅಯ್ಯಂಗಾರ್ ಅವರು, ವಿಶ್ವೇಶ್ವರಪುರ | ೧೦–೦–೦ |
| ೨. | ಕರ್ನಾಟಕ ಸಂಘ, ವಿಲಿಂಗಡನ್ ಕಾಲೇಜು, ಸಾಂಗ್ಲಿ | ೫–೦–೦ |
| ೩. | ಎಚ್. ಎನ್. ವೆಂಕಟರಾಮಯ್ಯನವರು, ವಿಶ್ವೇಶ್ವರಪುರ | ೫–೦–೦ |
| ೪. | ಸಿ. ರಾಮರಾಯರು, ಬಸವನಗುಡಿ | ೫–೦–೦ |
| ೫. | ಮಾನ್ಯ ಮಹಿಳೆಯರೊಬ್ಬರು | ೫–೦–೦ |
| ೬. | ಬಿ. ರಾಮಾನುಜ ಅಯ್ಯಂಗಾರ್ ಅವರು, ವಿಶ್ವೇಶ್ವರಪುರ | ೫–೦–೦ |
| ೭. | ಎನ್. ಎಸ್. ರಾಮಚಂದ್ರಯ್ಯನವರು | ೨–೦–೦ |
| ೮. | ಗುರುನಾಥ ರಾಮಚಂದ್ರ ಪುರಾಣಿಕ ಅವರು, ಮುಧೋಳ | ೧–೦–೦ |
| ೯. | ಆಸ್ಥಾನವಿದ್ವಾನ್ ಎಂ. ಎಸ್. ಸುಬ್ರಹ್ಮಣ್ಯ ಶಾಸ್ತ್ರಿಗಳು | ೧–೦–೦ |
| | ರೂ. | ೮೯೮–೦–೦ |

## ಕರ್ಣಾಟಕ ಸಂಘ, ಸೆಂಟ್ರಲ್ ಕಾಲೇಜು ಬೆಂಗಳೂರು

### ರಜತೋತ್ಸವದ ಏರ್ಪಾಡು

ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘ ೧೯೧೮ನೆಯ ಆಗಸ್ಟ್ ತಿಂಗಳಲ್ಲಿ ಸ್ಥಾಪಿತವಾಯಿತು. ಈ ವರ್ಷ ಸಂಘದ ರಜತೋತ್ಸವವನ್ನು ನಡಸಬೇಕೆಂದು ನಿಶ್ಚಯಿಸಲಾಗಿದೆ. ಉತ್ಸವದ ವಿವರಗಳನ್ನು ನಿಷ್ಕರ್ಷಿಸುವುದಕ್ಕಾಗಿ ಸಂಘದ ಕಾರ್ಯ ಸಮಿತಿ ಇದೇ **ಸೆಪ್ಟೆಂಬರ್ ೨೩ನೆಯ ತಾರೀಖು ಗುರುವಾರ ಸಂಜೆ ೬–೩೦ಕ್ಕೆ** ಕಾಲೇಜಿನ ಗಣಿತ ಭವನದ ಮಹಡಿಯ ಮೇಲೆ ಸಭೆ ಸೇರುತ್ತದೆ. ಈ ಸಭೆಗೆ, ಸಂಘದ ಹಿಂದಿನ ಎಲ್ಲ ಕಾರ್ಯ ದರ್ಶಿಗಳೂ, ಅಧಿಕಾರಿ ವರ್ಗದವರೂ ಮತ್ತು ಅಭಿಮಾನಿಗಳೂ ತಪ್ಪದೆ ದಯಮಾಡಿಸಿ ತಮ್ಮ ಅಮೂಲ್ಯವಾದ ಸಲಹೆಗಳನ್ನು ಕೊಟ್ಟು ಉತ್ಸವ ಯಶಸ್ವಿಯಾಗಿ ನಡೆಯುವಂತೆ ನೆರವಾಗಬೇಕಾಗಿ ಪ್ರಾರ್ಥನೆ.

ಕಾಲಾವಕಾಶ ಬಹು ಕಡಮೆಯಾಗಿರುವುದರಿಂದಲೂ ಅನೇಕ ಮಹನೀಯರ ವಿಳಾಸ ನಮಗೆ ಗೊತ್ತಿಲ್ಲವಾದ್ದರಿಂದಲೂ ಎಲ್ಲರಿಗೂ ಪ್ರತ್ಯೇಕವಾಗಿ ಪತ್ರ ಬರೆಯಲು ಸಾಧ್ಯವಾಗಿಲ್ಲ. ಈ ಪ್ರಕಟನೆಯನ್ನೇ ಆಹ್ವಾನವೆಂದು ಭಾವಿಸಿ ಸಭೆಗೆ ಬರಬೇಕೆಂದು ಕೋರುತ್ತೇನೆ. ಕಾರಣಾಂತರಗಳಿಂದ ಸಭೆಗೆ ದಯಮಾಡಿಸಲು ಅವಕಾಶವಿಲ್ಲದವರು ತಮ್ಮ ಸಲಹೆಗಳನ್ನು ಸಂಘದ ಉಪಾಧ್ಯಕ್ಷರಾದ ಶ್ರೀಮಾನ್ ಕೆ. ವಿ. ಪುಟ್ಟಪ್ಪ, ಎಂ.ಎ., ಅಸಿಸ್ಟೆಂಟ್ ಪ್ರೊಫೆಸರ್, ಸೆಂಟ್ರಲ್ ಕಾಲೇಜು, ಬೆಂಗಳೂರು — ಅವರಿಗೆ ದಯವಿಟ್ಟು ಕೂಡಲೆ ಪತ್ರ ಬರೆದು ತಿಳಿಸಬೇಕಾಗಿ ಕೋರಿಕೆ.

೧೫–೯–೧೯೪೩
ಬೆಂಗಳೂರು

**ಬಿ. ಎಲ್. ಗುರುರಾಜರಾವ್**
ಕಾರ್ಯದರ್ಶಿ

## ಕನ್ನಡ ಸುದ್ದಿ

**ಸೇಡಂ (ಕಲ್ಬುರ್ಗಿ) : ಭಾಷಣ**

ಕಲ್ಬುರ್ಗಿಯ ಜಿಲ್ಲೆಗೆ ಸೇರಿದ ಸೇಡಮ್ಮಿನಲ್ಲಿ ತಾ|| ೪–೯–೧೯೪೩ನೆಯ ದಿವಸ ಶ್ರೀ. ಕೊತ್ತಲ ಬಸವೇಶ್ವರ ದೇವಸ್ಥಾನದಲ್ಲಿ ಶ್ರೀ ಸಿದ್ಧರಾಮೇಶ್ವರ ಪುರಾಣ ಸಮಾಪ್ತಿಯ ಕಾಲದಲ್ಲಿ, ವ್ಯಾಕರಣತೀರ್ಥ ಶ್ರೀ. ಚಂದ್ರಶೇಖರ ಶಾಸ್ತ್ರಿಗಳ ಭಾಷಣವಾಯಿತು. ಮೊದಲು ಶ್ರೀ ಸಿದ್ಧರಾಮ ಪುರಾಣದ ಮತ್ತು ರಾಘವಾಂಕ ಕವಿಯ ವಿಷಯದಲ್ಲಿ ಕೆಲವು ಮಾತುಗಳನ್ನು ಹೇಳಿ, ಆಮೇಲೆ "ಸೇಡಂ ಗ್ರಾಮ ೧೦ ಸಾವಿರ ಜನಸಂಖೆಯುಳ್ಳ ಊರು. ಇದು ಕನ್ನಡ ಪ್ರದೇಶ. ಹೀಗಿದ್ದರೂ ಇಲ್ಲಿ ಮರಾಠಿ ಭಾಷೆ ಪ್ರಬಲವಾಗುತ್ತಿರುವದು ಅತ್ಯಂತ ಶೋಚನೀಯವಾದುದು. ಇಲ್ಲಿಯ ವೀರಶೈವರು ಮತ್ತು ಉಳಿದ ಕನ್ನಡಿಗರು ಇನ್ನು ಮುಂದೆ ತಮ್ಮ ಮಕ್ಕಳಿಗೆ ಕನ್ನಡ ಭಾಷೆಯನ್ನು ಮೊದಲು ಪ್ರಾರಂಭಿಸಬೇಕಲ್ಲದೆ, ಅಂಗಡಿಯ ಲೆಖ್ಖಗಳನ್ನೆಲ್ಲ ಕನ್ನಡದಲ್ಲಿಯೇ ಇಡಬೇಕು. ಪ್ರತಿಜ್ಞಾಬದ್ಧರಾಗಿ ಈ ಕಾರ್ಯವನ್ನು ಕೈಕೊಳ್ಳಬೇಕು" ಎಂದು ಬೋಧಿಸಿದರು. ಮತ್ತು ಈ ತಾಲ್ಲೂಕಿನಲ್ಲಿ ಎಲ್ಲ ಹಳ್ಳಿಗಳಲ್ಲಿಯೂ ಕನ್ನಡ ಶಾಲೆಗಳನ್ನು ಸ್ಥಾಪಿಸಬೇಕೆಂತಲೂ ಹೇಳಿ ತಮ್ಮ ಉಪನ್ಯಾಸ ಮುಗಿಸಿದರು.

**ಚಿಂತಾಮಣಿ: ಕನ್ನಡ ಸಂಘ**

ತಾ|| ೨೫–೯–೪೩ನೆಯ ದಿನ ರಾಜಸೇವಾಪ್ರಸಕ್ತ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ಮೇಲ್ಕಂಡ ಸಂಘದ ಆರಂಭ ಭಾಷಣವನ್ನು ಮಾಡಲು ಒಪ್ಪಿರುತ್ತಾರೆ.

**ಬೆಳಗಾಂವಿ : ಕನ್ನಡ ಸಾಹಿತ್ಯ ತರಗತಿಗಳು**

ಈ ಸಲ ಇದೇ ಅಗಸ್ಟ್ ತಿಂಗಳ ೧೫ನೆಯ ತಾರೀಖಿನಿಂದ ಬೆಳಗಾಂವಿಯಲ್ಲಿ ಪರಿಷತ್ತಿನ ಕಾವ, ಜಾಣ ಪರೀಕ್ಷೆಗೆ ಕುಳಿತುಕೊಳ್ಳುವ ವಿದ್ಯಾರ್ಥಿಗಳ ಸಲುವಾಗಿ ವರ್ಗಗಳು ಪ್ರಾರಂಭಿಸಲ್ಪಟ್ಟಿರುತ್ತವೆ. ಈಗಾಗಲೇ ಪ್ರತಿಯೊಂದು ತರಗತಿಯಲ್ಲಿ ಸುಮಾರು ೨೦ರಷ್ಟು ವಿದ್ಯಾರ್ಥಿಗಳಿದ್ದಾರೆ. ಶ್ರೀ.ಗಳಾದ ಕರ್ಕಿಯವರು, ಕಂಬಿಯವರು, ಹಣಮಂತಗಡ ಅವರು, ತುರಮರಿಯವರು, ಇಂಚಲ ಅವರು, ಲೋಕಾಪೂರ ಅವರು, ಅ. ಗು. ಜೋಶಿಯವರು, ತೊರಗಲ್ಲ ಅವರು, ಯರಗುಬ್ಬಿಯವರು, ಪ್ರ. ಗೊ. ಕುಲಕರಣಿ ಮೊದಲಾದವರು ವರ್ಗಗಳಿಗೆ ಪಾಠಗಳನ್ನು ಹೇಳುತ್ತಿದ್ದಾರೆ.

೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧೨
ಬಿಡಿ ಪತ್ರಿಕೆ: ೬ ಕಾಸು



ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈ ಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ

ಬೆಂಗಳೂರು: ಶುಕ್ರವಾರ, ಸೆಪ್ಟೆಂಬರ್ ೨೪, ೧೯೪೩

ಸಂಚಿಕೆ ೪೮

## ಬಳ್ಳಾರಿ ಜಿಲ್ಲೆಯ ಕನ್ನಡಿಗರಿಗೊಂದೆಚ್ಚರಿಕೆ

(ಬರೆದವರು: ಶ್ರೀ. ವ್ಯಾಕರಣತೀರ್ಥ ಚಂದ್ರಶೇಖರ ಶಾಸ್ತ್ರಿಗಳು)

೧೫ ದಿವಸಗಳ ಕೆಳಗೆ ಬೇವಿನಹಾಳಿನ ಗೌಡಿನ ಗೌಡರು ಕಾರ್ಯಾಂತರದಿಂದ ಯಾದಗಿರಿಗೆ ಬಂದಿದ್ದರು. ನಾನು 'ಗೌಡರೇ, ನಿಮ್ಮ ಊರಿನಲ್ಲಿ ಜನರಾಡುವ ಭಾಷೆ ಯಾವುದು?' ಎಂದು ಕೇಳಿದೆನು. ಕೂಡಲೇ ಅವರು ಕನ್ನಡವೆಂದುತ್ತರ ಕೊಟ್ಟರು. ಹಾಗಾದರೆ, ಶಾಲೆಯೂ ಕನ್ನಡ ಇರಬಹುದಲ್ಲವೆ? ಎಂದು ಕೇಳಲು, ಇಲ್ಲ 'ಸ್ವಾಮಿಾ ತೆಲುಗು' ಎಂದು ಹೇಳಿದರು. ನಾನು ಆಗ, 'ಇದು ಸರಿಯಾದುದಲ್ಲ; ನಿಮ್ಮೂರಿನ ಸುತ್ತಲೂ ಇರತಕ್ಕ ಹಳ್ಳಿಗಳಲ್ಲಿ. ಕನ್ನಡ ಶಾಲೆಗಳನ್ನು ಮಾಡಲಿಕ್ಕೆ ನೀವು ಪ್ರಯತ್ನಿಸಬೇಕು' ಎಂದು ಹೇಳಲು ಅವರು ಸಂತೋಷದಿಂದ ಒಪ್ಪಿಕೊಂಡರು. ಇನ್ನು ಅಲ್ಲಿ ಕಾರ್ಯ ಮಾಡತಕ್ಕವರಿಗೆ ಅನುಕೂಲ ದೊರೆಯುವ ಸಂಭವವಿದೆ.

ಬಳ್ಳಾರಿ ಜಿಲ್ಲೆಯ ಕೆಲವು ತಾಲ್ಲೂಕುಗಳಲ್ಲಿ ಆಂಧ್ರರು ಬಹಳ ಚಟುವಟಿಕೆಗಳನ್ನು ನಡೆಯಿಸಿರುತ್ತಾರೆ. ಜನರಾಡುವ ಭಾಷೆ ಕನ್ನಡವಾದರೂ ತೆಲಗು ಶಾಖೆಗಳಿರುತ್ತವೆ. ಕನ್ನಡಿಗರ ಸಾಕಷ್ಟು ಪ್ರಯತ್ನವಿಲ್ಲದಿರುವದರಂದ ಈ ಶೋಚನೀಯ ಸ್ಥಿತಿಯಾಗಿದೆ. ಮನೆಯ ಮಾತು ಕನ್ನಡವಾಗಿದ್ದರೂ ಶಾಲೆಗಳಲ್ಲಿ ಕಲಿಯುವದು ತೆಲುಗು, ಆದರೆ ಆ ಕನ್ನಡ ಬಹಳ ದಿವಸ ಬಾಳಲಾರದು.

ಬಳ್ಳಾರಿ ಜಿಲ್ಲೆಯನ್ನು ಆಂಧ್ರ ವಿಶ್ವವಿದ್ಯಾನಿಲಯಕ್ಕೆ ಕೂಡಿಸಬೇಕೆಂದು ಆಂಧ್ರರು ಸಾಹಸಪಡುತ್ತಲಿದ್ದಾರೆ. ಐದು ವರ್ಷಗಳ ಕೆಳಗೆ ಆಂಧ್ರ ಮಹಾಸಭೆ ಅಧ್ಯಕ್ಷರಾಗಿದ್ದ ಜಗದ್ವಿಖ್ಯಾತ ಪಂಡಿತರಾಗಿರುವ ಸರ್ ರಾಧಾಕೃಷ್ಣರೂ ಕೂಡಾ ಬಳ್ಳಾರಿ ಜಿಲ್ಲೆಯವರು ಆಂಧ್ರ ವಿಶ್ವವಿದ್ಯಾನಿಲಯಕ್ಕೆ ಕೂಡುವದು ಯೋಗ್ಯವೆಂದು ಹೇಳಿರುತ್ತಾರೆ. ಇಂದು ವಿಶ್ವವಿದ್ಯಾನಿಲಯಕ್ಕೆ ಕೂಡಿದರೆ ಮುಂದೆ ಸ್ವಾಭಾವಿಕವಾಗಿ ಆಂಧ್ರ ಪ್ರಾಂತ ಏಕೀಕರಣವಾದಾಗ್ಗೆ ಬಳ್ಳಾರಿ ಜಿಲ್ಲೆ ನಮ್ಮದಾಗುವದೆಂದೇ ಅವರ ಬಯಕೆಯಾಗಿರುತ್ತದೆ.

ಸರ್ ಡಾಕ್ಟರ್ ಭಾಂಡಾರಕರರಂಥವರು ಮರಾಠಿ ದೇಶ ತುಂಗಭದ್ರೆಯವರೆಗೆ (ಹರಿಹರ) ಇತ್ತೆಂದು ಬರೆದಿರುತ್ತಾರೆ. ಇತ್ತ ಆಂಧ್ರರು ಹರಿಹರದವರೆಗೆ ಆಂಧ್ರವಿತ್ತೆಂದು ಹೇಳುತ್ತಾರಲ್ಲದೆ ಪ್ರತ್ಯಕ್ಷ ಕೃತಿಯನ್ನು ನಡಸಿರುತ್ತಾರೆ. ಆದ್ದರಿಂದಲೇ ಬಳ್ಳಾರಿ ಜಿಲ್ಲೆ ನಮ್ಮದೆಂದು ಹೇಳುವರು. ಮೂರು ತಾಲ್ಲೂಕುಗಳಲ್ಲಿ ಕೊಂಚಮಟ್ಟಿಗೆ ಅವರ ಸಂಖ್ಯೆ ಇದ್ದರೂ, ಇಡೀ ಜಿಲ್ಲೆಯನ್ನೇ ತಮ್ಮ ಕಡೆಗೆಳೆದುಕೊಳ್ಳಲು ಸಾಹಸಮಾಡುತ್ತಾರೆ. ನಮ್ಮ ಶಂಕರರಾವ ಜೋಶಿಯವರು ನಾಸಿಕದವರೆಗೆ ಕನ್ನಡಿಗರಿದ್ದರೆಂದು ಹೇಳುತ್ತಾರೆ. ಅದರಂತೆ ಕನ್ನಡಿಗರ ಕೃತಿಯೂ ಬೇಕಷ್ಟೆ? ನಾನು ಹೋದ ವಾರ ಸೇಡಮ್ಮಿಗೆ ಉಪನ್ಯಾಸಕ್ಕೆ ಹೋಗಿದ್ದೆನು. ಇದು ಕಲ್ಬುರ್ಗಿ ಜಿಲ್ಲೆಯ ಒಂದು ತಾಲ್ಲೂಕಿನ ಸ್ಥಳವಾಗಿದೆ. ಆ ಗುಡಿಯ ಮಹಾದ್ವಾರದಲ್ಲಿ ಕೊತ್ತಲ ಬಸವೇಶ್ವರ ದೇವಾಲಯವೆಂದು ಬಾಲಬೋಧ (ನಾಗರಿ) ಲಪಿಯಲ್ಲಿ ಕೆತ್ತಿಸಿದ್ದನ್ನು ನೋಡಿ ಹೀಗೇಕೆಂದು ಕೇಳಲು ವ್ಯವಸ್ಥಾಪಕರು ಇಲ್ಲಿ ಮರಾಠಿಯ ಚರ್ಚೆ ಬಹಳ ಇರುತ್ತದೆ ಎಂದು ಹೇಳಿದರು. ಈ ಊರಿನ ಜನಸಂಖ್ಯೆ ಹತ್ತು ಸಾವಿರವಿದ್ದೂ ಮರಾಠಿ ಮಾತನಾಡುವರು ಒಬ್ಬರೂ ಇಲ್ಲ. ಆದರೆ ಮರಾಠಿಗರ ಪ್ರಯತ್ನ ಹಾಗಿದೆ. ಅಂದಿನ ಸಭೆಯಲ್ಲಿ ಪ್ರತಿಯೊಬ್ಬನೂ ಕನ್ನಡ ಕಲಿಯಲಿಕ್ಕೇ ಬೇಕು; ಪ್ರತಿಜ್ಞಾಪೂರ್ವಕ ಈ ಕಾರ್ಯ ಮಾಡಬೇಕೆಂದು ಪ್ರಾರ್ಥಿಸಿಕೊಂಡೆನು. ನನ್ನ ಪ್ರಾರ್ಥನೆ ಸಾರ್ಥಕವಾಗುವದೆಂದು ಬಹಳ ಸಂತೋಷವಾಯಿತು.

ಕನ್ನಡಿಗರ ಸಾಮ್ರಾಟನಾದ ನೃಪತುಂಗನ ರಾಜಧಾನಿ (ಮಾನ್ಯಖೇಡ) ಮಳಖೇಡವಷ್ಟೆ; ಮಳಖೇಡ ಸ್ಟೇಶನ್ನಿನ ಮುಂದಿನ ಸ್ಟೇಶನ್ ಸೇಡಮ್ ಇರುತ್ತದೆ. ನೃಪತುಂಗನು ಗೋದಾವರಿ ನದಿಯವರೆಗೆ ಕನ್ನಡ ನಾಡೆಂದು 'ಕವಿರಾಜ ಮಾರ್ಗ'ದಲ್ಲಿ ಹೇಳಿದ್ದಾನೆ. ಆದರೆ ಈಗ ಮಳಖೇಡದವರೆಗೆ ಪಶ್ಚಿಮ ದಿಕ್ಕಿನಿಂದ ಮರಾಠಿಗರ ಆಕ್ರಮಣವಿದೆ. ಪೂರ್ವ ದಿಕ್ಕಿನಿಂದ ತೆಲುಗರ ಆಕ್ರಮಣವಿದೆ. ಸೇಡಮ್ ತಾಲ್ಲೂಕಿನ ಪೂರ್ವ ದಿಕ್ಕಿನ ಹಳ್ಳಿಗಳಲ್ಲಿ ತೆಲುಗು ಶಾಲೆಗಳು ಪ್ರಾರಂಭವಾಗುತ್ತಲಿವೆ. ಗೋದಾವರಿ ಮಳಖೇಡಕ್ಕೆ ಐವತ್ತು ಮೈಲುಗಳಿಗಿಂತಲೂ, ದೂರವಿದೆ ಎಂಬುದನ್ನು ಕನ್ನಡಿಗರು ತಿಳಿಯಬೇಕು. ಅಂತೂ ಆಂಧ್ರ ಮತ್ತು ಮರಾಠಿಗಳ ಸಂಗಮಸ್ಥಾನವೆಂದು ಹೇಳಬಹುದು. ಯಾದಗಿರಿ ತಾಲ್ಲೂಕು ಸೇಡಮ್ ತಾಲ್ಲೂಕು ಕೂಡಿವೆ. ಅಲ್ಲಿ ತೆಲುಗು ಶಾಲೆಗಳಿವೆ. ಪಶ್ಚಿಮದಲ್ಲಿ ಬಳ್ಳಾರಿ ಜಿಲ್ಲೆಯ ವಿಷಯ ಮುಖ್ಯವಾದುದಾದರೂ, ಕನ್ನಡ ನಾಡಿನ ಸ್ಥಿತಿ ಬರುಬರುತ್ತ ಹೇಗೆ ದುರ್ಬಲವಾಗುತ್ತ ನಡೆದಿದೆಯೆಂಬುದನ್ನು ಕನ್ನಡಿಗರು ಕಣ್ಣನ್ನು ತೆರೆದು ನೋಡಬೇಕು.

ಎಲ್ಲ ಕಡೆಗೂ ಹೀಗೆಯೇ ಆಗುತ್ತ ನಡೆದರೆ ಕನ್ನಡ ನಾಡು ಎಷ್ಟು ದಿನ ಉಳಿಯುವದು? ಮತ್ತು ೨೨ ಸಂಸ್ಥಾನಗಳಲ್ಲಿ ಸೇರಿದ ಕನ್ನಡಿಗರ ಶೋಚನೀಯ ಸ್ಥಿತಿ ಹಾಗೆಯೇ ಇದ್ದು ಬೇರೆಬೇರೆ ಸಂಸ್ಥಾನಗಳಲ್ಲಿ ಕನ್ನಡಿಗರು ಬೇರೆಬೇರೆ ಭಾಷೆಗಳಿಗೆ ತಲೆ ಬಾಗಬೇಕಾಗಿದೆ. ಇಂತಹ ಸ್ಥಿತಿಯಲ್ಲಿ ಕನ್ನಡಿಗರು ಸ್ವಾಭಿಮಾನದಿಂದ ಕಾರ್ಯ ಮಾಡಲೇಬೇಕಾಗಿದೆ. ಕರ್ನಾಟಕ ಏಕೀಕರಣವಾದರೆ ಈ ಪ್ರಶ್ನೆಗಳೆಲ್ಲ ಬಗೆಹರಿಯುತ್ತವೆಂದು ಕೆಲವರು ಹೇಳುತ್ತಾರೆ. ಅಲ್ಲಿಯವರೆಗೆ ಈಗಿದ್ದ ನಾಡಾದರೂ ಕನ್ನಡಿಗರಿಗೆ ಉಳಿಯುವದೆಂದು ಯಾರು ಹೇಳುವರು? ಅಂತೂ ಕರ್ನಾಟಕದ ಗಡಿನಾಡಿನ ಸಮಸ್ಯೆ ಬಹಳ ಅಂಧಕಾರಮಯವಾಗಿರುತ್ತದೆ. ಬಳ್ಳಾರಿ ಜಿಲ್ಲೆ ವಿಜಯನಗರ ಸಾಮ್ರಾಜ್ಯದ ಕೇಂದ್ರಸ್ಥಾನ. ಅಲ್ಲಿ ಇಂತಹ ಪರಿಸ್ಥಿತಿ ಒದಗಿರುವದು ಅತ್ಯಂತ ಖೇದಕರವಾದುದು. ಆದರೆ ಕನ್ನಡಿಗರೆಲ್ಲ ಧೈರ್ಯದಿಂದ ಮುಂದೆ ಬಂದು ತಮ್ಮ ಭಾಷೆಯ ಉದ್ಧಾರದ ಈ ಮಹತ್ಕಾರ್ಯಕ್ಕೆ ಸಹಾಯ ಮಾಡಲೇಬೇಕು. ಬಳ್ಳಾರಿಯ ಕನ್ನಡಿಗರು ಪ್ರಚಂಡವಾದ ಆಂದೋಲನವನ್ನು ಪ್ರಾರಂಭಿಸಬೇಕು. ಪ್ರತಿಯೊಂದು ಹಳ್ಳಿಗೆ ಹೋಗಿ ಸಂಘಟನೆ ಮಾಡಬೇಕು. ಹೀಗೆಯೆ ಅನಂತಪುರ ಜಿಲ್ಲೆಯವರೂ ಎಚ್ಚತ್ತು ಪ್ರತಿಯೊಂದು ತಾಲ್ಲೂಕಿನಲ್ಲಿಯೂ, ಕನ್ನಡ ಸಂಘಗಳನ್ನು ಸ್ಥಾಪಿಸಬೇಕಲ್ಲದೆ ಆ ಸಂಘದವರು ಇಡಿಯ ತಾಲ್ಲೂಕಿನ ಜವಾಬ್ದಾರಿಯನ್ನು ವಹಿಸಬೇಕು. ಹಳ್ಳಿಹಳ್ಳಿಗೂ ಕನ್ನಡ ಶಾಲೆಗಳು ಪ್ರಾರಂಭವಾಗಬೇಕು. ಕೇಂದ್ರ ಸಂಘ ಬಳ್ಳಾರಿಯಲ್ಲಿರಬೇಕು. ಇದಕ್ಕೆ ಪ್ರತಿಯೊಬ್ಬ ಕನ್ನಡಿಗನು ಜಾತಿ, ಮತ, ಪಂಥ, ಪಕ್ಷಗಳ ಬಡಿದಾಟಕ್ಕೆ ಎಡೆಗೊಡದೆ ಸುಸಂಘಟಿತ ರೀತಿಯಿಂದ ಕಾರ್ಯ ಮಾಡಬೇಕಾಗಿದೆ. ಪ್ರಚಂಡ ಪ್ರಚಾರವನ್ನು ಅವಿಚ್ಛಿನ್ನವಾಗಿ ಮಾಡಿದರೆ ಮಾತ್ರ ಇದು ಸಾಧ್ಯವಾಗುವುದೆಂಬುದನ್ನು ಬಳ್ಳಾರಿಯ ಕನ್ನಡಿಗರು ತಿಳಿಯಬೇಕು. ಹೀಗೆ ಕಾರ್ಯ ಮಾಡಿದರೆ ಅಖಂಡ ಕರ್ನಾಟಕದ ಬೆಂಬಲವೂ ದೊರೆಯುವದು.

# ಕನ್ನಡ ನುಡಿ

**ಶುಕ್ರವಾರ, ಸೆಪ್ಟೆಂಬರ್ ೨೪, ೧೯೪೩**


## ಮೈಸೂರೊಡೆಯರ ಜೀವದಯೆ

ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರು ಶ್ರೀ. ಜಯಚಾಮುರಾಜ ಒಡೆಯರವರು ರಾಜಧಾನಿಯಲ್ಲಿ ಬಡಬಗ್ಗರಿಗೆ ಅನ್ನದಾನ ಮಾಡಲು ತಿಂಗಳೊಂದಕ್ಕೆ ೨,೦೦೦ ರೂ. ಗಳನ್ನು ಅನುಗ್ರಹಿಸಿರುತ್ತಾರೆಂದೂ, ಪೌರಸಭೆಯವರು ಅನ್ನದಾನದ ಏರ್ಪಾಟನ್ನು ಮಾಡುತ್ತಿದ್ದಾರೆಂದೂ ಕೇಳಿ ಸಂತೋಷವಾಗಿದೆ.

ನಮ್ಮ ನಾಡಿನಲ್ಲಿ ಹಲವು ಕಡೆ ಅನ್ನಾಭಾವದಿಂದ ಕ್ಷಾಮ ತಲೆಹಾಕಿ ಜೀವಹಾನಿಯಾಗುತ್ತಿದೆ. ಮೈಸೂರೊಡೆಯರ ಈ ಅನುಗ್ರಹ ಮೇಲ್ಪಂಕ್ತಿಯಾಗಿ, ಮುಂದೆ ಸುಭಿಕ್ಷ ಪ್ರಾಪ್ತವಾಗುವವರೆಗೆ ಶ್ರೀಮಂತರು ಬಡವರಿಗೆ ಒಲಿಯುತ್ತ ಜೀವರಕ್ಷಣೆ ಮಾಡಲೆಂದು ಹಾರೈಸುತ್ತೇವೆ. ಮೈಸೂರೊಡೆಯರ ಹೃದಯದಲ್ಲಿ ಚಿಮ್ಮಿರುವ ಜೀವದಯೆಗಾಗಿ ನಾಡೆಲ್ಲ ಸಂತೋಷಪಡುತ್ತಿದೆ.

---

## ಉತ್ತರ ಕರ್ನಾಟಕಕ್ಕೊಂದು ಪ್ರಾದೇಶಿಕ ವಿಶ್ವವಿದ್ಯಾನಿಲಯ

ಮೂರು ನಾಲ್ಕು ಬೇರೆ ಬೇರೆ ಭಾಷಾಪ್ರದೇಶಗಳಿರುವ ಒಂದು ದೊಡ್ಡ ಪ್ರಾಂತದಲ್ಲಿ ಈ ಎಲ್ಲ ಭಾಗಗಳಿಗೂ ಒದಗುವುದಕ್ಕಾಗಿ ಒಂದೇ ವಿಶ್ವವಿದ್ಯಾನಿಲಯವಿರುವುದರ ಕಷ್ಟ ಈಗಾಗಲೆ ಅನುಭವಕ್ಕೆ ಬಂದಿದೆ. ಈ ಏಕಮಾತ್ರ ವಿಶ್ವವಿದ್ಯಾನಿಲಯದ ನೇತೃತ್ವದಲ್ಲಿ ಪ್ರಾಂತದ ಯಾವ ಒಂದು ಭಾಷಾ ಸಂಸ್ಕೃತಿಯ ಸಹಜ ವಿಕಾಸಕ್ಕೂ ಪ್ರಗತಿಗೂ ಸಾಕಾದಷ್ಟು ಅವಕಾಶವಿರುವುದಿಲ್ಲ. ಭಾಷೆ ಒಂದೇ ಆದರೂ ವಿಸ್ತಾರ ಹೆಚ್ಚಾಗಿರುವ ಪ್ರಾಂತದಲ್ಲಿ ಒಂದಕ್ಕಿಂತ ಹೆಚ್ಚಿಗೆ ವಿಶ್ವವಿದ್ಯಾನಿಲಯಗಳು ಹುಟ್ಟಿ, ಪ್ರೌಢ ವಿದ್ಯಾಭ್ಯಾಸದ ಪ್ರಯೋಜನಗಳನ್ನು ಜನಕ್ಕೆ ವಿಶೇಷ ಪ್ರಮಾಣದಲ್ಲಿ ಒದಗಿಸುತ್ತಿರುವ ನಿದರ್ಶನಗಳು ನಾಡಿನ ಬೇರೆ ಕಡೆಗಳಲ್ಲಿ – ಉದಾ: ಬಂಗಾಳಕ್ಕೆ ಕಲ್ಕತ್ತ, ಶಾಂತಿನಿಕೇತನ ಮತ್ತು ಢಾಕಾಗಳಲ್ಲಿರುವ ವಿಶ್ವವಿದ್ಯಾನಿಲಯಗಳು – ಇರುವಾಗ, ಮೂರು ನಾಲ್ಕು ಭಾಷೆಗಳು ಬಳಕೆಯಲ್ಲಿರುವ ಮುಂಬಯಿಯಂಥ ದೊಡ್ಡ ಪ್ರಾಂತದಲ್ಲಿಯೂ ಭಾಷಾನುಗುಣವಾಗಿ ವಿಶ್ವವಿದ್ಯಾನಿಲಯಗಳನ್ನು ಹೆಚ್ಚಿಸದಿದ್ದರೆ ಅತೃಪ್ತಿ ಬೆಳೆಯುವುದರಲ್ಲಿ ಸಂದೇಹವಿಲ್ಲ.

ಈ ಅಭಿಪ್ರಾಯಕ್ಕೆ ಬೆಂಬಲ ಸಿಕ್ಕಿದೆ. ಮಹಾರಾಷ್ಟ್ರ ವಿಶ್ವವಿದ್ಯಾನಿಲಯ ಸಮಿತಿ ಪ್ರಸಿದ್ಧ ನಾಯಕರಾದ ಶ್ರೀಮಾನ್ ಎಂ. ಆರ್. ಜಯಕರ್ ಅವರ ಅಧ್ಯಕ್ಷತೆಯಲ್ಲಿ ೧೯೪೦ರ ಫೆಬ್ರುವರಿ ತಿಂಗಳಲ್ಲಿ ನೇಮಕವಾಯಿತು. ಈ ಸಮಿತಿಯ ವರದಿ ಮೊನ್ನೆ ತಾನೆ ಹೊರಬಿದ್ದಿದೆ. ಈ ಸಮಿತಿ ಮಹಾರಾಷ್ಟ್ರಕ್ಕೆ ಒಂದು ಪ್ರತ್ಯೇಕ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಬೇಕಾದ ಅಗತ್ಯವನ್ನೂ ಅದರ ಸಾಧ್ಯಾಸಾಧ್ಯತೆಗಳನ್ನೂ ಕೂಲಂಕಷವಾಗಿ ಪರಿಶೀಲನೆ ಮಾಡಿ ಮುಂಬಯಿ ಸರಕಾರಕ್ಕೆ ತನ್ನ ವರದಿಯನ್ನು ಒಪ್ಪಿಸಿತು.

ವರದಿಯ ಸ್ಥೂಲ ಅಂಶಗಳು ಯಾವುವೆಂದರೆ:

೧. ಮುಂಬಯಿ ವಿಶ್ವವಿದ್ಯಾನಿಲಯ ಮುಂಬಯಿಯಂಥ ದೊಡ್ಡ ಪ್ರಾಂತದ ಉದ್ದ ಅಗಲಕ್ಕೂ ಒದಗಲು ಅದರ ಮೇಲೆ ಹೊರೆ ಹೆಚ್ಚಾಗಿದೆ. ಮತ್ತು ಇಷ್ಟು ದೊಡ್ಡ ಪ್ರಾಂತಕ್ಕೆ ಒಂದೇ ವಿಶ್ವವಿದ್ಯಾನಿಲಯ ಸಾಲದಾಗಿದೆ.

೨. ಮುಂಬಯಿ ವಿಶ್ವವಿದ್ಯಾನಿಲಯದಲ್ಲಿ ನಡೆಯುತ್ತಿರುವ ಕೆಲಸಗಳ ಪ್ರತ್ಯಕ್ಷ ಪರಿಶೀಲನೆಯಿಂದ ಗೊತ್ತಾಗುವುದೇನೆಂದರೆ: ಮುಂಬಯಿ ಪ್ರಾಂತಕ್ಕೆ ಒಂದಕ್ಕಿಂತ ಹೆಚ್ಚು ಸಂಖ್ಯೆಯಲ್ಲಿ ವಿಶ್ವವಿದ್ಯಾನಿಲಯಗಳು ಹುಟ್ಟುವುದು ಮೂಲ ವಿದ್ಯಾಪೀಠಕ್ಕೂ ಹೊಸ ವಿದ್ಯಾಪೀಠಗಳಿಗೂ ಅನುಕೂಲ.

## ಅನ್ನಹೀನರ ಆರ್ತನಾದ

೧

ಅನ್ನ ಅನ್ನ ಅನ್ನವೆಂದು
ಬನ್ನಪಡುತ ಕೂಗುತಿರುವ
ಅನ್ನಹೀನರಾರ್ತನಾದ
ವಿನ್ನು ನಿನಗೆ ಕೇಳದೊ?

೨

ಅನ್ನದೇವ ಜನರ ಪ್ರಾಣ
ಅನ್ನಗೇಡಿಯಾಗೆ ಮರಣ
ಅನ್ನದಿಂದ ಅಖಿಲ ಸೊಗವು
ಅನ್ನವಳಿಯೆ ದಾಸ್ಯ ನೊಗವು

೩

ನರಳಿ ಹೊರಳಿ ಹಾದಿಯಲ್ಲಿ
ಹರಣ ಹಾರಿ ಬೀದಿಯಲ್ಲಿ
ಮರಣವೈದಿ ಉರುಳುತಿಹರ
ಕರುಳಕಿಚ್ಚು ಚುಚ್ಚದಿಹುದೆ?

೪

ಅನ್ನವಿಲ್ಲದವರ ಬಾಳು
ಮಾನಗೇಡಿತನದ ಗೋಳು
ನನ್ನಿ ನಲ್ಮೆಯೆಲ್ಲ ಹಾಳು
ಚೆನ್ನು ಚೆಲ್ವು ಮಣ್ಣುದೂಳು

## ಕೂಳಿನ ಕಾಳಗ

೧

ಕೂಳಿನ ಕಾಳಗದಬ್ಬರದಲ್ಲಿ
ನಾಣ್ಯ ನೋಟುಗಳ ಉಬ್ಬರದಲ್ಲಿ
ಬಾಳುವುದೊಂದೇ ಇಂದಿನ ಚಿಂತೆ
ಆಳು ಬಾಳಿನಾ ಗೋಳಿನ ಸಂತೆ

೨

ತುತ್ತಿನ ಚೀಲದ ಒತ್ತಡದಲ್ಲಿ
ಮುತ್ತರ ಕಣ್ಮನ ಕತ್ತಲೆಯಲ್ಲಿ
ಬುತ್ತಿಯು ಕಾಳಗ ಸಾಗುತಿದೆ
ಚಿತ್ತಗ್ಲಾನಿಯು ಮಾಡುತಿದೆ

೩

ದವಸ ಧಾನ್ಯಗಳ ಕೊಳಗುಳದಲ್ಲಿ
ಜೀವ ಸಾವುಗಳ ಹೋರಟೆಯಲ್ಲಿ
ಕಣ್ಮನ ಕತ್ತಲೆಗೊಳ್ಳುತಿದೆ
ಮಣ್ಣಲಿ ಕರುಳನು ಹೂಳುತಿದೆ

೪

ಅನ್ನ ಬೋನಗಳ ಸಂಗರದಾಗ
ಅನ್ನಂ ಮಂತ್ರಿಯು ಡೊಂಬರ ಲಾಗ
ಅನ್ನಗೇಡಿಗಳ ಜನ್ನದ ಕುಂಡ
ಧಣ ಧಣ ಧಣ ಧಣ ಉರಿಯುತಿದೆ

— ನಾ. ವೆ. ಸೊಲ್ಲಾಪುರ

---

೩. ಮಹಾರಾಷ್ಟ್ರಕ್ಕೆ ಒಂದು ಪ್ರಾದೇಶಿಕ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಬೇಕೆಂದು ಸೂಚನೆ ಮಾಡಿದೆಯಷ್ಟೆ. ಹೀಗೆ ಸ್ಥಾಪಿಸುವುದರಿಂದ ಸಂಕುಚಿತದೃಷ್ಟಿ ಮತ್ತು ಪ್ರಾಂತೀಯತೆಗಳು ತಲೆಯತ್ತುವ ಸಂಭವವಿಲ್ಲ; ಏಕೆಂದರೆ, ಈ ಹೊಸ ವಿದ್ಯಾನಿಲಯ ಇರುವ ವಿಸ್ತಾರ ಪ್ರದೇಶದಲ್ಲಿ ಮರಾಠಿಯೊಂದೇ ಅಲ್ಲದೆ ಬೇರೆ ಬೇರೆ ಭಾಷೆ ಸಂಪ್ರದಾಯಗಳ ಪ್ರತಿನಿಧಿಗಳೂ ಇರುವುದರಿಂದ ಅದನ್ನು 'ಪುಣೆಯ ವಿಶ್ವವಿದ್ಯಾನಿಲಯ' ಎಂದು ಕರೆಯಬಹುದೆಂದು ಸಮಿತಿ ಅಭಿಪ್ರಾಯಪಡುತ್ತದೆ. ಮಹಾರಾಷ್ಟ್ರ ವಿಶ್ವವಿದ್ಯಾನಿಲಯ ಎಂದು ಅದನ್ನು ಕರೆಯುವುದು ಉಚಿತವಾಗಲಾರದು; ಏಕೆಂದರೆ, ಅದರ ಶಿಕ್ಷಣ ಆಡಳಿತವಲಯಕ್ಕೆ ಸೇರಿಸಿಕೊಳ್ಳಲಾಗದೆ ಇರುವ ಮರಾಠಿ ಪ್ರದೇಶಗಳೂ ಇವೆ.

ಮಹಾರಾಷ್ಟ್ರದ ಭಾಷಾ ಸಾಹಿತ್ಯಗಳ ಅಭಿವೃದ್ಧಿಗೆ ಹೆಚ್ಚಿನ ಸ್ಫೂರ್ತಿಯೂ ಬಲವೂ ಆಗಿ ಅಲ್ಲಿಗೆ ಒಂದು ಹೊಸ ವಿಶ್ವವಿದ್ಯಾನಿಲಯ ಸ್ಥಾಪನೆಯಾಗುವ ಪ್ರಶ್ನೆ ಬಗೆಹರಿಯುತ್ತಾ ಬಂದಿರುವುದು ಸೋದರ ಪ್ರಾಂತದವರಾದ ನಮಗೆ ಸಂತೋಷಕ್ಕೆ ಕಾರಣವಾಗಿದೆ. ಈ ಹಿಂದೆ ಆಂಧ್ರ ವಿಶ್ವವಿದ್ಯಾನಿಲಯವೂ ಅಣ್ಣಾಮಲೈ ವಿಶ್ವವಿದ್ಯಾನಿಲಯವೂ ಹುಟ್ಟಿ ತೆಲುಗು ತಮಿಳು ಭಾಷೆಗಳ ಏಳಿಗೆಗೆ ಬಹಳ ಅನುಕೂಲವಾಗಿದೆ. ಹೀಗೆ ಒಂದೊಂದು ಭಾಷೆಗೂ ಅದರ ಸಹಜವಾದ ಬೆಳವಣಿಗೆಗೆ ಅವಕಾಶ ಕೊಡುವ ವಿದ್ಯಾಪೀಠಗಳು ಹುಟ್ಟುತ್ತಿರುವುದು ನ್ಯಾಯವೆ ಆಗಿದೆ. ಭರತಖಂಡದ ಒಟ್ಟು ಪ್ರಗತಿಯನ್ನು ಸಾಧಿಸುವ ಪ್ರಯತ್ನಗಳಿವು ಎಂಬ ದೃಷ್ಟಿ ಇಲ್ಲಿ ಮುಖ್ಯವಾಗಿದೆ.

ಇನ್ನು ವಿಸ್ತಾರವಾದ ಕನ್ನಡ ಪ್ರದೇಶದ ಮಾತು. ಕನ್ನಡಿಗರು ಮುಖ ತಿರುಗಿಸಿ ತಮ್ಮ ಮುನ್ನಡೆಗಾಗಿ ಪ್ರಸಾದ ಬೇಡಬೇಕಾಗಿರುವುದು ಒಂದು ಸರಕಾರವನ್ನಲ್ಲ, ಒಂದು ವಿಶ್ವವಿದ್ಯಾನಿಲಯವನ್ನಲ್ಲ. ಈ ಪರಿಸ್ಥಿತಿಯಿಂದ ನಾಡ ಮುನ್ನಡೆ ಕುಂಠಿತವಾಗಿರುವುದನ್ನು ನೆನೆದು ತಪಿಸುತ್ತ, ಈ ಪರಿಸ್ಥಿತಿಯಿಂದ ಪಾರಾಗಲು ಕನ್ನಡ ಜನ ಹಲವು ವರ್ಷಗಳಿಂದ ಏಕೀಕರಣ ಮಂತ್ರವನ್ನು ಜಪಿಸುತ್ತಿದ್ದಾರೆ. ಆದರೆ ಈ ತಪದ, ಜಪದ ಸಿದ್ಧಿಯ ಕಾಲ ಇನ್ನೂ ಮುಸುಕಾಗಿಯೇ ಇದೆ.

ಈಗ ಕನ್ನಡ ಜನ ಕಾರ್ಯಪ್ರವೃತ್ತರಾಗಬೇಕಾಗಿರುವುದು

ಮರಾಠಿಗರ ಮೇಲಣ ಅಸೂಯೆಯಿಂದ ಅಲ್ಲ. ಕನ್ನಡಕ್ಕೆ ತಾನೂ ಬೆಳೆದು ಭಾರತದ ಒಟ್ಟು ಸಿರಿಯನ್ನು ಬೆಳಸುವ ಅಧಿಕಾರ ಇದೆ; ಆದರೆ ಅವಕಾಶ ಇಲ್ಲ. ಈ ಅವಕಾಶವನ್ನು ಬೇಗ ಪಡೆದುಕೊಳ್ಳಬೇಕಾಗಿದೆ. ಪುಣೆಯ ವಿಶ್ವವಿದ್ಯಾನಿಲಯ ಸ್ಥಾಪನೆಯಾಗುವ ಸಂದರ್ಭದಲ್ಲಿ ಮುಂಬಯಿ ಪ್ರಾಂತದ ಮುಖ್ಯ ಪ್ರದೇಶವಾದ ಉತ್ತರ ಕರ್ನಾಟಕಕ್ಕೂ ಒಂದು ಪ್ರಾದೇಶಿಕ ವಿಶ್ವವಿದ್ಯಾನಿಲಯ ಸ್ಥಾಪಿತವಾಗಲು ಈಗಿನಿಂದ ಕೆಲಸ ನಡಸಬೇಕಾಗಿದೆ. ಇಲ್ಲದಿದ್ದರೆ, ಕರ್ನಾಟಕದ ಕೆಲವು ಪ್ರೌಢಶಾಲೆಗಳನ್ನು ಪುಣೆಯ ವಿಶ್ವವಿದ್ಯಾನಿಲಯಕ್ಕೆ ಜೋಡಿಸಬೇಕೆಂದು ಕರ್ನಾಟಕದ ಮರಾಠಿ ಬಾಂಧವರು ಮತ್ತೆ ಪ್ರಯತ್ನಪಟ್ಟಾರು! (ಕನ್ನಡ ನುಡಿ: ೨೭-೩-೧೯೪೨ನೆಯ ತಾರೀಖಿನ ಸಂಚಿಕೆ ಪುಟ ೨೦೧ ನೋಡಿ). ಸ್ವಂತ ವಿಶ್ವವಿದ್ಯಾನಿಲಯವಿಲ್ಲದಿರುವಾಗ ನಮ್ಮ ನಿಷ್ಠೆ ಮುಂಬಯಿಗಾದರೇನು, ಪುಣೆಗಾದರೇನು ಎಂಬ ಜಡಸ್ವಭಾವವಾದರೆ ಅದರ ಮಾತು ಬೇರೆ. ಕನ್ನಡಿಗರು ಈ ಜಡ ಸ್ವಭಾವವನ್ನು ಮೈಯೊದರಿ ಬಿಡಿಸಿಕೊಳ್ಳುತ್ತಿರುವಾಗ ಮತ್ತೆ ಅದು ಮೈಗೂಡದಂತೆ ಎಚ್ಚರದಿಂದಿರುವುದು ಒಳ್ಳೆಯದು.

ಆದ್ದರಿಂದಲೆ, ಉತ್ತರ ಕರ್ನಾಟಕದ ಧಾರವಾಡ ಇಲ್ಲವೆ ಬೆಳಗಾಂವಿಯಂಥ ಮಧ್ಯ ಪ್ರದೇಶದಲ್ಲಿ ಒಂದು ಕಡೆ ಕನ್ನಡಕ್ಕಾಗಿ ಒಂದು ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಲು ಕನ್ನಡಿಗರು ತಕ್ಕ ಪ್ರಯತ್ನವನ್ನು ಕೈಗೊಳ್ಳಬೇಕೆಂದು ನಾವು ಆಗ್ರಹಪೂರ್ವಕವಾಗಿ ಕೇಳಿಕೊಳ್ಳುತ್ತೇವೆ. ಈ ಪ್ರಯತ್ನ ಬಿಡುವಿಲ್ಲದೆ ಶ್ರದ್ಧೆಯಿಂದ ನಡೆದು ಸಫಲವಾಗಲೆಂದು ಹಾರೈಸುತ್ತೇವೆ. ವಿಸ್ತಾರವಾದ ಕರ್ನಾಟಕಕ್ಕೆ ಎರಡು ವಿಶ್ವವಿದ್ಯಾನಿಲಯಗಳು ಹೆಚ್ಚೇನೂ ಆಗಲಾರವು. ಹೈದರಾಬಾದಿನ ಉರ್ದು ಮಾಧ್ಯಮದ ಪೀಠದ ಜೊತೆಗೆ ಮಿಕ್ಕ ಮೂರು ಭಾಷೆಗಳಿಗೆ ಒಂದೊಂದರಂತೆ ರಾಯಚೂರು ಇಲ್ಲವೆ ಕಲ್ಬುರ್ಗಿಯಲ್ಲಿ ಕನ್ನಡಕ್ಕೆ ಒಂದು ವಿದ್ಯಾಪೀಠವಾದರೂ ಸಂತೋಷವೆ.

---

## ಮೈಸೂರು ಸಂಸ್ಥಾನದ ಪತ್ರಿಕೋದ್ಯೋಗಿಗಳ ಎರಡನೆಯ ಸಮ್ಮೇಳನ

ಈ ಸಮ್ಮೇಳನ ೧೯-೯-೧೯೪೩ನೆಯ ಭಾನುವಾರ ಬೆಳಗ್ಗೆ ಪರಿಷನ್ಮಂದಿರದಲ್ಲಿ ನಡೆಯಿತು. ಸುಮಾರು ೧೪೦ ಮಂದಿ ಪತ್ರಿಕೋದ್ಯೋಗಿಗಳು ಸಂಸ್ಥಾನದ ನಾನಾ ಭಾಗಗಳಿಂದ ಪ್ರತಿನಿಧಿಗಳಾಗಿ ಬಂದಿದ್ದರು. ಮೈಸೂರು ಸಂಸ್ಥಾನದ ದಿವಾನರಾದ ಪ್ರಧಾನಶಿರೋಮಣಿ ಶ್ರೀ. ಎನ್. ಮಾಧವರಾಯರು ಸಮ್ಮೇಳನ ಸಮಾರಂಭಗೊಳಿಸಿದರು.

ಸ್ವಾಗತ ಸಮಿತಿಯ ಅಧ್ಯಕ್ಷರಾದ ಶ್ರೀ. ಪಿ. ಬಿ. ಶ್ರೀನಿವಾಸನ್ ಅವರು ಎಲ್ಲರನ್ನೂ ಸ್ವಾಗತಿಸುತ್ತ, ಸಮ್ಮೇಳನವನ್ನು ಸಮಾರಂಭಗೊಳಿಸಲು ಒಪ್ಪಿ ದಯಮಾಡಿಸಿದ ಶ್ರೀ. ಮಾಧವರಾಯರು ಪತ್ರಿಕೋದ್ಯಮದಲ್ಲಿ ತೋರಿಸುತ್ತಿರುವ ಗಾಢವಾದ ಆಸಕ್ತಿಯನ್ನೂ, ಅಧ್ಯಕ್ಷತೆ ವಹಿಸುವ ಶ್ರೀ. ತಿರುಮಲೆ ತಾತಾಚಾರ್ಯಶರ್ಮರವರು ಮಾಡಿರುವ ತ್ಯಾಗಗಳನ್ನೂ ಪ್ರಶಂಸಿಸಿದರು.

ದಿವಾನ್ ಸಾಹೇಬರು ತಮ್ಮ ಭಾಷಣದಲ್ಲಿ ಪತ್ರಿಕೋದ್ಯೋಗಿಗಳ ಕರ್ತವ್ಯವನ್ನು ವಿವರಿಸಿದರು. ತಾವು ಪತ್ರಿಕೋದ್ಯೋಗಿಯಾಗಿದ್ದರೆ, ಸುದ್ದಿಗಾರನಾಗಿ ಉದ್ಯಮದ ಏಣಿಯ ಮೊದಲ ಮೆಟ್ಟಲಿಂದ ತಮ್ಮ ಸೇವೆಯನ್ನು ಪ್ರಾರಂಭಿಸುತ್ತಿದ್ದುದಾಗಿ ಹೇಳಿ, 'ಸುದ್ದಿಗಾರನು ಉದ್ಯಮದ ದೀನ ಸೇವಕನಾದರೂ ಆತನ ದೈನ್ಯ ವಿಧೇಯತೆ ಸಂಪಾದಕರಿಗೇ ಹೊರತು ಮತ್ತಾರಿಗೂ ಅಲ್ಲ. ತಾನು ಅರಸುವ ದಿಟ ಸರಿಯಾಗಿದ್ದರೆ ಸಾಕು, ಅದನ್ನು ಹೊರಗೆಡಹಲು ಹಿಂದುಮುಂದು ನೋಡಬಾರದು. ತಾನು ಸಾರುವ ಸತ್ಯವು ಕಲ್ಪನೆಗಿಂತ ಒಂದು ಕೈ ಮೇಲೆಂಬ ಪ್ರಲೋಭನೆಗೆ ಒಳಗಾಗದಂತೆ ಎಚ್ಚರದಿಂದಿರಬೇಕು ಎಂದರು. ಪತ್ರಿಕೋದ್ಯೋಗಿಗಳು ವಿರಾಮಕಾಲದಲ್ಲಿ ಸಾರ್ವಜನಿಕ ಹಿತಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಅಧ್ಯಯನ ಮಾಡಬೇಕೆಂದೂ ಪತ್ರಿಕೆಗಳಲ್ಲಿ ಗ್ರಂಥ ವಿಮರ್ಶೆಗಳ ವಿಭಾಗ ಇನ್ನೂ ಪುಷ್ಟವಾಗಬೇಕೆಂದೂ ಅಮೂಲ್ಯವಾದ ಸಲಹೆಗಳನ್ನು ಕೊಟ್ಟರು. ದಿನಪತ್ರಿಕೆಗಳಿಗೆ ಆರ್ಥಿಕ ಸಹಾಯ ಬೆಂಬಲಗಳು ಹೆಚ್ಚಿ ಅವುಗಳ ಸೇವೆ ಸಾರ್ಥಕವಾಗಲೆಂದು ಹಾರೈಸಿದರು.

ಶ್ರೀ. ತಿ. ತಾ. ಶರ್ಮರವರು ಮಾಡಿದ ಭಾಷಣದ ಸಾರಾಂಶವನ್ನು ಕೆಳಗೆ ಕೊಟ್ಟಿದೆ:

ಪತ್ರಿಕೆಗಳ ಕರ್ತವ್ಯ ಲೋಕಕಲ್ಯಾಣ ಸಾಧನೆ. ನಾವು ನಮ್ಮ ಪತ್ರಿಕೆಗಳನ್ನು ನಮ್ಮ ನಾಗರಿಕತೆ, ಸಂಸ್ಕೃತಿಗಳ ವಾಹಿನಿಗಳನ್ನಾಗಿ ಮಾಡಬೇಕು. ನಮ್ಮ ಹಿರಿಯರ ಜೀವನದ ಭವ್ಯತೆಯ ಪರಿಚಯವನ್ನು ಜನರಿಗೆ ಮಾಡಿಕೊಡಬೇಕು. ಸಾಹಿತ್ಯ, ವಿಜ್ಞಾನ, ದರ್ಶನ, ಧರ್ಮ ಇವುಗಳನ್ನು ಕುರಿತು ಬರೆಯುವುದು ಮಾತ್ರವಲ್ಲ, ಇವುಗಳ ಹಿರಿಮೆಯನ್ನೆತ್ತಿ ಹಾಡಬೇಕು. ಪತ್ರಿಕಾಕರ್ತರು ಮಣಿಯಬೇಕಾದುದು ಸಾರ್ವಜನಿಕಾಭಿಪ್ರಾಯಕ್ಕೆ ಮತ್ತು ಸತ್ಯಕ್ಕೆ. ಸತ್ಯವೇ ಪತ್ರಿಕೆಗಳ ಪರಮ ಧರ್ಮ. ಮನುಷ್ಯನ ಉನ್ನತಿಯು ಸಹ ಸತ್ಯದ ಸಂಗಡಲೇ ಇರುತ್ತದೆ. ಸತ್ಯದ ಪ್ರಚಾರ ಮತ್ತು ಪ್ರಕಟನೆಯು ಮಹಾ ಪುಣ್ಯದ ಕೆಲಸ. ಪತ್ರಿಕೆಗಳಿಗೆ ಈ ಭಾಗ್ಯವು ವಿಶಿಷ್ಟವೆನಿಸಿದೆ.

ಪತ್ರಿಕಾಕರ್ತರ ಜೀವನ ಕಠೋರವಾದುದು. ಅದನ್ನು ಆಶ್ರಯಿಸುವುದಕ್ಕೆ ಮೊದಲು ವೃತ್ತಿಯ ಉಗ್ರಸ್ವರೂಪವನ್ನು ಚೆನ್ನಾಗಿ ತಿಳಿದುಕೊಳ್ಳಬೇಕು. ಇದೊಂದು ಯಜ್ಞದೀಕ್ಷೆ.

ಮಹರ್ಷಿಗಳು ಹಿಂದೆ ವಹಿಸಿದ್ದ ಜ್ಞಾನದಾನದ ಜವಾಬ್ದಾರಿಯು ಇಂದು ಪತ್ರಿಕಾಪ್ರಪಂಚದ ಮೇಲೆ ಬಿದ್ದಿದೆ. ಈ ಕಾರ್ಯಕ್ಷೇತ್ರ ಪ್ರವೇಶಮಾಡುವವರು ಅಪೂರ್ವ ಸಾಹಸವನ್ನು ತೋರಿಸಬೇಕಾಗುತ್ತದೆ. ಜೊತೆಗೆ ಆತ್ಮಬಲವೂ ಬೇಕು. ಪತ್ರಿಕಾಕರ್ತರು ಸತ್ಯ ಸೇವಕರು. ಅವರ ಆದರ್ಶದಲ್ಲಿ ಅವರಿಗೆ ವಿಶ್ವಾಸವಿರಬೇಕು. ಅವರು ಎಂದು ತಮ್ಮ ಆದರ್ಶಜೀವನದಿಂದ ಪತಿತರಾಗುವರೋ, ತಿಳಿದೂ ತಿಳಿದೂ ಅಸತ್ಯದ ಪಕ್ಷಪಾತಿಯಾಗುವರೋ ಅಂದೇ ಅವರ ಜೀವನದ ಮಹಾ ದೌರ್ಭಾಗ್ಯದ ದಿನವೆಂದು ಹೇಳಬೇಕಾಗುತ್ತದೆ. ಅವರ ಅನೈತಿಕ ಜೀವನದ ಸಾವಿನೊಂದಿಗೇ ಅವರ ವೃತ್ತಿ ಜೀವನದ ಅಂತ್ಯವೂ ಸಹ ಆಗುತ್ತದೆ.

ಪತ್ರಿಕಾಕರ್ತರು ಲೋಕಶಿಕ್ಷಕರು. ಯಾವ ಸುವ್ಯವಸ್ಥಿತ ವಿದ್ಯಾಪೀಠವೂ ಪತ್ರಿಕಾಕರ್ತರು ಮಾಡುವಂತಹ ಕೆಲಸವನ್ನು ಮಾಡಲಾರದು. ಪತ್ರಿಕೆಗಳು ಜನರ ಜ್ಞಾನಕ್ಷಿತಿಜವನ್ನು ವಿಸ್ತಾರಗೊಳಿಸುತ್ತವೆ. ಜೀವನದ ಪ್ರತಿಯೊಂದು ಕ್ಷೇತ್ರದಲ್ಲೂ ಅವು ಪ್ರವೇಶಮಾಡುತ್ತವೆ.

ಪತ್ರಿಕಾಕರ್ತರು ತಮ್ಮ ಕರ್ತವ್ಯ ನಿರ್ವಾಹಕ್ಕೆ ಬೇಕಾದ ಪಾಂಡಿತ್ಯವನ್ನು ಪಡೆಯಬೇಕು. ನೈಪುಣ್ಯತೆಯನ್ನು ಸಂಪಾದನೆ ಮಾಡಬೇಕು. ದಿನದಿನವೂ ಬೆಳೆಯುತ್ತಿರುವ ಪತ್ರಿಕಾವೃತ್ತಿ ಅಪೇಕ್ಷಕರಿಗೆ ಅಗತ್ಯವಾದ ಶಿಕ್ಷಣ ಕ್ರಮವೊಂದನ್ನು ನಿಶ್ಚಯ ಮಾಡಬೇಕು. ಪ್ರತಿಯೊಂದು ಜಿಲ್ಲಾ ಮುಖ್ಯ ಪಟ್ಟಣದಲ್ಲೂ ಒಂದು ತಿಂಗಳು ಕಾಲವಾದರೂ ಪತ್ರಿಕಾಕರ್ತರಿಗೆ ಮತ್ತು ಆ ವೃತ್ತಿಯನ್ನು ಅನುಸರಿಸಬಯಸುವವರಿಗೆ ಶಿಕ್ಷಣವನ್ನು ಕೊಡುವ ಏರ್ಪಾಟು ಮಾಡಬೇಕು. ಯೋಗ್ಯತಾಸಿದ್ಧಿಸಂಪನ್ನರಾದ ಪತ್ರಿಕಾಕರ್ತರನ್ನು ಮಾತ್ರ ಇನ್ನು ಮೇಲೆ ವೃತ್ತಪತ್ರಿಕಾ ಕಾರ್ಯಾಲಯಗಳಿಗೆ ಸೇರಿಸಿಕೊಂಡರೆ ಅವುಗಳ ಪ್ರಯೋಜನ ಪ್ರತಿಷ್ಠೆ ಹೆಚ್ಚುವುದು.

ನಮ್ಮ ದೇಶದಲ್ಲಿರುವ ಪತ್ರಿಕೆಗಳೆಲ್ಲ ಕನ್ನಡ ಪತ್ರಿಕೆಗಳು. ಆದಕಾರಣ ಪತ್ರಿಕಾವೃತ್ತಿಯನ್ನು ಅಪೇಕ್ಷಿಸುವವರೆಲ್ಲ ಕನ್ನಡವನ್ನು ಚೆನ್ನಾಗಿ ಅಭ್ಯಾಸ ಮಾಡಬೇಕು. ಕನ್ನಡ ಪತ್ರಿಕಾಕರ್ತರಿಗೆ ಕನ್ನಡ ಭಾಷಾಜ್ಞಾನವಿರಬೇಕು. ಅವರು ಪಂಡಿತರಾಗಬೇಕಾದ್ದಿಲ್ಲ. ಆದರೆ ಸಾಕಾದಷ್ಟು ಭಾಷಾಜ್ಞಾನವಿರಬೇಕು. ಭಾಷಾಜ್ಞಾನ ಮಾತ್ರ ಸಾಲದು. ತಕ್ಕಮಟ್ಟಿಗೆ ಸಾಹಿತ್ಯ ಜ್ಞಾನವೂ ಇರಬೇಕು.

'ಪತ್ರಿಕಾಕರ್ತರು ಸಾಹಿತಿಗಳಲ್ಲ. ಪತ್ರಿಕಾ ಲೇಖನಗಳು ಸಾಹಿತ್ಯವಲ್ಲ' ಎಂಬುದಾಗಿ ಹೇಳುವುದು ನ್ಯಾಯವಲ್ಲ. ಕನ್ನಡ ಪತ್ರಿಕಾಕರ್ತರೆಷ್ಟೋ ಮಂದಿ ಗ್ರಂಥಕರ್ತರಾಗಿದ್ದಾರೆ; ವಿಮರ್ಶಾ ಗ್ರಂಥಗಳನ್ನು ಬರೆದಿದ್ದಾರೆ. ಕಥೆ, ನಾಟಕ, ಪ್ರಬಂಧಗಳನ್ನು ನಿರ್ಮಿಸಿದ್ದಾರೆ.

ಕನ್ನಡ ಪತ್ರಿಕೆಗಳಲ್ಲಿ ಗದ್ಯವು ನಾನಾ ರೂಪಗಳನ್ನು ಪಡೆಯಬೇಕು. ಲೇಖಕರೊಬ್ಬೊಬ್ಬರೂ ಪ್ರತ್ಯೇಕ ಶೈಲಿಗಳನ್ನು ಸೃಷ್ಟಿಸಬೇಕು. ಕನ್ನಡ ಗದ್ಯಕ್ಕೆ ಜೀವ, ತೇಜಸ್ಸು ಬರಬೇಕಾದರೆ ಕನ್ನಡ ವೃತ್ತ ಪತ್ರಿಕಾ ಕಾರ್ಯಾಲಯಗಳಲ್ಲಿ ಪ್ರಚಂಡ ಪ್ರಯೋಗಗಳಾಗ

---

## ಪರಿಷತ್ತಿನ ಸುದ್ದಿ

### ಪರಿಷತ್ತಿನ ಸದಸ್ಯರ ಬೆಳವಣಿಗೆ

**ಸಾಮಾನ್ಯ ಸದಸ್ಯರು (೩ ರೂ.) :** ಶ್ರೀಗಳಾದ ೧. ಸದಾನಂದ ಅವರು, ಮಾವಳ್ಳಿ ಸರ್ಕಲ್, ಬೆಂಗಳೂರು. ೨. ಕೆ. ಗುಬ್ಬಯ್ಯನವರು, ಅಡ್ವೊಕೇಟರು, ೫ನೆಯ ರಸ್ತೆ, ಚಾಮರಾಜಪೇಟೆ, ಬೆಂಗಳೂರು.

### ಪರಿಷತ್ತಿಗೆ ಕಾಣಿಕೆ

ಶ್ರೀ. ಎಚ್. ಎನ್. ಸತ್ಯನಾರಾಯಣರಾವ್ (ಲಕ್ಷ್ಮೀವಿಲಾಸ ಅಗ್ರಹಾರ, ಮೈಸೂರು) ಅವರು, ತಮ್ಮ ಮದುವೆಯ ಸಂದರ್ಭದಲ್ಲಿ ಪರಿಷತ್ತಿಗೆ ಸಲ್ಲಿಸಿರುವ ೩ ರೂ.ಗಳ ಕಾಣಿಕೆಯನ್ನು ಪರಿಷತ್ತು ಕೃತಜ್ಞತೆಯಿಂದ ಸ್ವೀಕರಿಸಿದೆ.

### ಪ್ರವಾಸ

೧. ಉಪಾಧ್ಯಕ್ಷರ, ಕಾರ್ಯದರ್ಶಿಗಳ ಪ್ರವಾಸ.

೨೩-೯-೪೩ : ಬೌರಿಂಗ್‌ಪೇಟೆ. ೨೫-೯-೪೩ : ಚಿಂತಾಮಣಿ.
೨೮-೯-೪೩ : ಕೋಲಾರ.

೨. ಪರಿಷತ್ತಿನ ಪರವಾಗಿ, ಪ್ರಚಾರ ಮತ್ತು 'ಸದಸ್ಯ ಸಂಪಾದನೆಗಾಗಿ ಶ್ರೀ. ಕೆ. ವಿ. ರಾಘವಾಚಾರ್ಯರು ಈ ಕೆಳಗಿನಂತೆ ಪ್ರವಾಸ ಮಾಡುತ್ತಾರೆ.

| | | | |
|---|---|---|---|
| ೩೦-೯-೪೩ : | } ಸಾಂಗ್ಲಿ. | ೪-೧೦-೪೩ : | ಸಾಂಗ್ಲಿ. |
| ೧-೧೦-೪೩ : | | ೬-೧೦-೪೩ : | ಕೊಲ್ಲಾಪುರ. |
| ೨-೧೦-೪೩ : | ಅಥಣಿ. | ೯-೧೦-೪೩ : | ಪೂನಾ. |
| ೩-೧೦-೪೩ : | ಜಮಖಂಡಿ. | ೧೨-೧೦-೪೩ : | ಶಿವಮೊಗ್ಗ. |

### ರಾಜಸೇವಾಸಕ್ತ ಶ್ರೀ ಬೆಳ್ಳಾವೆ ವೆಂಕಟನಾರಾಯಣಪ್ಪನವರ ಸ್ಮಾರಕ ಉಪನ್ಯಾಸ ನಿಧಿ

| | | |
|---|---|---|
| | ಹಿಂದಿನ ಸಂಚಿಕೆಯಲ್ಲಿ ರೂ. | ೮೯೮-೦-೦ |
| | ಶ್ರೀ.ಗಳಾದ | |
| ೧. | ಎಸ್. ಮಂಜನಾಥ್ ಅವರು, ತುಮಕೂರು | ೧೦-೦-೦ |
| ೨. | ಕೆ. ಆಂಬ್ರೋಸ್ ಆನಂದ ಅವರು | ೫-೦-೦ |
| ೩. | ಪ. ರಮಾನಂದರಾಯರು, ಮದ್ರಾಸು | ೫-೦-೦ |
| ೪. | ವ್ಯಾಕರಣತೀರ್ಥ ಚಂದ್ರಶೇಖರ ಶಾಸ್ತ್ರಿಗಳು, ಯಾದಗಿರಿ | ೫-೦-೦ |
| ೫. | ಎಂ. ಕಾಳಪ್ಪನವರು, ಮಲ್ಲೇಶ್ವರ | ೩-೦-೦ |
| ೬. | ಅ. ನ. ಕೃಷ್ಣರಾಯರು | ೨-೦-೦ |
| ೭. | ವೈಣಿಕ ವಿದ್ವಾನ್ ಎಲ್. ರಾಜಾರಾಯರು | ೧-೦-೦ |
| ೮. | ಎಂ. ಅನಂತರಾಮರಾಯರು, ತುಮಕೂರು | ೧-೦-೦ |
| | ರೂ. | ೯೩೦-೦-೦ |

### ಮಹಿಳಾ ಶಾಖೆ

**ತಾ|| ೨೪-೯-೧೯೪೩ನೆಯ ಶುಕ್ರವಾರ ಸಂಜೆ ೬ ಗಂಟೆಗೆ ಪರಿಷನ್ಮಂದಿರದಲ್ಲಿ ಶ್ರೀಮತಿ ವೇದಾಂಬಾ ಅವರ ವೀಣಾವಾದನ.**

### ಮೈಸೂರು ಪ್ರಾಂತ ಸಮಿತಿ

**ತಾ|| ೨೫-೯-೧೯೪೩ನೆಯ ಶನಿವಾರ ಸಂಜೆ ೭ ಗಂಟೆಗೆ ಪರಿಷನ್ಮಂದಿರದಲ್ಲಿ ಶ್ರೀ. ಕೆ. ವಿ. ಪುಟ್ಟಪ್ಪ, ಎಂ.ಎ., ಅವರು "ಶೂದ್ರ ತಪಸ್ವಿ" ಎಂಬ ತಮ್ಮ ಹೊಸ ನಾಟಕವನ್ನು ವಾಚನ ಮಾಡುವರು.**

### ನಾಟಕ ಪ್ರದರ್ಶನ

ಕಳೆದ ಸಂಚಿಕೆಯಲ್ಲಿ ಪ್ರಕಟಿಸಿದ್ದಂತೆ ೨೬-೯-೧೯೪೩ನೆಯ ತಾರೀಖಿನಲ್ಲಿ ನಡೆಯಬೇಕಾಗಿದ್ದ **'ಬಂಡ್ವಾಳ್ವಿಲ್ಲದ ಬಡಾಯಿ'** ಎಂಬ ನಾಟಕದ ಪ್ರದರ್ಶನವನ್ನು ಅನಿವಾರ್ಯ ಕಾರಣಗಳಿಂದ ಮುಂದೆ ಹಾಕಿದೆ.

## ಕನ್ನಡ ಸುದ್ದಿ

### ಗಮಕ ಮತ್ತು ಶಿಲ್ಪಕಲೆಗಳಿಗೆ ಗುರುಮನೆಯಿಂದ ಸನ್ಮಾನ

ಶ್ರೀಮಜ್ಜಗದ್ಗುರು ಶ್ರೀ ಕೂಡಲಿ ಶೃಂಗೇರಿ ಮಹಾಸಂಸ್ಥಾನದ ಶ್ರೀ ಶ್ರೀಗಳವರು ೧೪-೯-೪೩ನೆಯ ದಿನ ನಡಸಿದ ವಿಶ್ವರೂಪಯಾತ್ರಾ ಮಹೋತ್ಸವದ ಸಂಬಂಧವಾಗಿ ಧರ್ಮಸಭೆ ನಡಸಿ, ಚಾತುರ್ಮಾಸ್ಯ ಸಂಕಲ್ಪ ಮತ್ತು ವಿಶ್ವರೂಪ ಯಾತ್ರೆಯ ಕಾರಣ ಉದ್ದೇಶಗಳನ್ನು ವಿವರಿಸಿ, ಕರ್ನಾಟಕ ಭಾಷೆ ಮತ್ತು ಶಿಲ್ಪಕಲೆ ಮೊದಲಾದುವುಗಳಿಗೆ ಉತ್ತೇಜನವಾಗಲೆಂದು ಬಿರುದು ಖಿಲ್ಲತ್ತುಗಳನ್ನು ಅನುಗ್ರಹಿಸಿದರು.

ಶ್ರೀ. ಸಂತೆಬೆನ್ನೂರು ಗೋವಿಂದರಾಯರ ಪುತ್ರರಾದ ಬಿಂದೂರಾಯರು ಕನ್ನಡ ಭಾರತವನ್ನು ಪ್ರಚಾರ ಮಾಡಿರುವುದನ್ನು ಮನಸ್ಸಿಗೆ ತಂದು 'ಕರ್ನಾಟಕ ಭಾರತ ವಾಚನ ಪ್ರವೀಣ' ಎಂಬ ಅಭಿಧಾನವನ್ನೂ, ಚೆನ್ನಗಿರಿ ತಾಲ್ಲೂಕು ಅಜ್ಜಿಹಳ್ಳಿಯ ಶಿಲ್ಪಶಾಸ್ತ್ರಿ ಶ್ರೀ. ನಾಗೇಂದ್ರಾಚಾರ್ಯರವರಿಗೆ 'ಶಿಲ್ಪ ನಿಪುಣ' ಎಂಬ ಅಭಿಧಾನವನ್ನೂ ಶಾಲು ಕಲಾಬತ್ತು ವಲ್ಲಿಗಳೊಡನೆ ಅನುಗ್ರಹಿಸಿದರು.

### ಕಲ್ಬುರ್ಗಿಯಲ್ಲಿ ನಾಡಹಬ್ಬ

ತಾ. ೧೪-೯-೪೩ನೆಯ ಕನ್ನಡ ಸಾಹಿತ್ಯ ಸಂಘದ ಕಾರ್ಯಸಮಿತಿಯ ಸಭೆ ಸೇರಿ ಮುಂಬರುವ ನಾಡಹಬ್ಬದ ಬಗ್ಗೆ ಈ ನಿರ್ಣಯವನ್ನು ಮಾಡಿದೆ.

"ಪ್ರತಿವರ್ಷದಂತೆ ಈ ಸಲವೂ ಕನ್ನಡ ಸಾಹಿತ್ಯ ಸಂಘ ನಾಡಹಬ್ಬವನ್ನು ಸಾರ್ವಜನಿಕವಾಗಿ ಆಚರಿಸಬೇಕೆಂದು ಕಾರ್ಯಸಮಿತಿಯಲ್ಲಿ ನಿಶ್ಚಯವಾಗಿ, ಈ ಕೆಲಸಕ್ಕಾಗಿ ನೇಮಿಸಲ್ಪಟ್ಟ ಉಪಸಮಿತಿ ತನ್ನ ಕಾರ್ಯವನ್ನು ಪ್ರಾರಂಭಿಸಿತ್ತು. ಈ ಮಧ್ಯದಲ್ಲಿ ಇದೇ ನಗರದಲ್ಲಿ ಬೇರೊಂದು ನಾಡಹಬ್ಬ ನಡಯಲಿರುವುದೆಂದು ವಿಶ್ವಸನೀಯವಾಗಿ ತಿಳಿದು ಬಂದಿರುವುದರಿಂದ ಒಂದೇ ಉತ್ಸವವನ್ನು ಇತ್ತಂಡವಾಗಿ ಆಚರಿಸುವುದು ಸಮಂಜಸವಲ್ಲವೆಂದು ಈ ಕಾರ್ಯಸಮಿತಿ ಅಭಿಪ್ರಾಯಪಡುತ್ತದೆ. ಮತ್ತು ಈ ವರ್ಷದ ಮಟ್ಟಿಗೆ ನಾಡಹಬ್ಬ ಆಚರಿಸುವುದನ್ನು ನಿಲ್ಲಿಸಬೇಕೆಂದು ತೀರ್ಮಾನಿಸುತ್ತದೆ."

### ಸತ್ಕಾರ ಸಭೆ

ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ನಡೆದ ಜಾಣ ಮತ್ತು ಕಾವ ಸಾಹಿತ್ಯ ತರಗತಿಗಳ ವಿದ್ಯಾರ್ಥಿ ವಿದ್ಯಾರ್ಥಿನಿಯರು ತಮ್ಮ ಉಪಾಧ್ಯಾಯರುಗಳನ್ನು ಸತ್ಕರಿಸಲು ಇದೇ ೧೮ನೆಯ ತಾರೀಖು ಶನಿವಾರ ಸಂಜೆ ಪರಿಷತ್ತಿನಲ್ಲಿ ಒಂದು ಸಭೆಯನ್ನು ಏರ್ಪಡಿಸಿದ್ದರು. ಶ್ರೀಮತಿ ಅನಸೂಯಾಬಾಯಿಯವರಿಂದ ಪ್ರಾರ್ಥನೆ, ಶ್ರೀ. ಶೇಷಾದ್ರಿಯವರು, ಶ್ರೀಮತಿ ಆರ್. ಕಾಮಾಕ್ಷಮ್ಮ ಮತ್ತು ಶ್ರೀಮತಿ ಮುತ್ತೂಬಾಯಿ ಇವರಿಂದ ಭಾಷಣ ಆದಮೇಲೆ ಉಪಾಧ್ಯಾಯರುಗಳು ಕೆಲವು ಹಿತವಚನಗಳನ್ನು ನುಡಿದರು. ಸಭಾಧ್ಯಕ್ಷರಾದ ಶ್ರೀಮಾನ್ ಮಾಸ್ತಿ ವೆಂಕಟೇಶಯ್ಯಂಗಾರ್ ಅವರು ಸಾಹಿತ್ಯ ತರಗತಿಗಳ ಉದ್ದೇಶವನ್ನು ವಿವರಿಸಿದರು.

**ಧಾರವಾಡ : ವಿದ್ಯಾವರ್ಧಕ ಸಂಘ**

ಕನ್ನಡ ಸಾಹಿತ್ಯದ ಪರಿಷತ್ತಿನ ಉಪಾಧ್ಯಕ್ಷರೊಡನೆ ಧಾರವಾಡಕ್ಕೆ ಪ್ರವಾಸ ಬಂದಿದ್ದ ಕಲ್ಬುರ್ಗಿಯ ಶ್ರೀ. ಪದ್ಮನಾಭಾಚಾರ್ಯ ಪುರಾಣಿಕ, ಎಂ. ಎಸ್ ಸಿ. ಅವರು ೮-೯-೪೩ ನೆಯ ಸಂಜೆ ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ವಿಜ್ಞಾನ ಗುರಿ ಎಂಬ ವಿಷಯವನ್ನು ಕುರಿತು ಮಾತನಾಡಿದರು. ಶ್ರೀ. ಶಂ. ಬಾ. ಜೋಶಿಯವರು ಉಪನ್ಯಾಸಕರನ್ನು ಪರಿಚಯಮಾಡಿ ಕೊಡುತ್ತ, ನೈಜಾಂ ಕರ್ನಾಟಕದಲ್ಲಿ ಕನ್ನಡದ ಏಳ್ಗೆಗಾಗಿ ದುಡಿಯುತ್ತಿರುವವರಲ್ಲಿ ಇವರೊಬ್ಬರೆಂದೂ, ಕನ್ನಡದಲ್ಲಿ ವಿಜ್ಞಾನದ ತಿಳಿವಳಿಕೆಯನ್ನು ಹರಡುವ ಕೆಲಸವನ್ನು ನಡಸುತ್ತಿರುವರೆಂದೂ ಹೇಳಿದರು. (ಭಾಷಣದ ಸಾರಾಂಶ ಮುಂದಿನ ವಾರ)

**ತುಮಕೂರು : ವ್ಯಾಸಂಗಗೋಷ್ಠಿ**

**೧೧-೯-೪೩ನೆಯ ಶನಿವಾರ**

ಇಂಟರ್‌ಮೀಡಿಯೆಟ್ ಕಾಲೇಜಿನ **'ಪ್ರೊಫೆಸರ್ ವೆಂಕಣ್ಣಯ್ಯ ವ್ಯಾಸಂಗಗೋಷ್ಠಿ'** ಎಂಬ ಕನ್ನಡ ಅಭ್ಯಾಸ ಕೂಟ ಎಂದಿನಂತೆ ಸೇರಿತ್ತು. ಬೆಳಗ್ಗೆ ೮ರಿಂದ ೯ರ ವರೆಗೆ ಗೀತಾ ಅಭ್ಯಾಸವೂ, ೯ರಿಂದ ೧೧ರ ವರೆಗೆ ಶ್ರೀ. ಕೈಲಾಸಂ ಅವರ 'ಪಾತು ತೌರ್ಮನೆ' ಅಭ್ಯಾಸವೂ ನಡೆಯಿತು. ಈ ವ್ಯಾಸಂಗಗೋಷ್ಠಿಗೆ ಮೂವತ್ತು ಮಂದಿ ಸದಸ್ಯರಿದ್ದಾರೆ.

ಇಂಟರ್‌ಮೀಡಿಯೆಟ್ ಕಾಲೇಜು ಸಂಘದ ಆಶ್ರಯದಲ್ಲಿ ಶ್ರೀ. ಡಿ. ಎಚ್. ವೀರಯ್ಯನವರು 'ಅವಳಿ ಜವಳಿಗಳ ರಹಸ್ಯ' ಎಂಬ ವಿಷಯವನ್ನು ಸಚಿತ್ರವಾಗಿ ಕನ್ನಡದಲ್ಲಿ ವಿವರಿಸಿದರು. ಸಭಾ ಭವನ ಕಿಕ್ಕಿರಿದು ತುಂಬಿತ್ತು.

---

೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

ಪ್ರತಿ ಶುಕ್ರವಾರ ಹೊರಡುತ್ತದೆ

Reg. No. M. 3975

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ಆಣೆ ೧೨
ಬಿಡಿ ಪತ್ರಿಕೆ: ೬ ಕಾಸು




ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಮೈಸೂರು ವಿದ್ಯಾಖಾತೆಯ ಟಿ.ಬಿ.ಸಿ. ೭೪/೩೮-೩೯ನೆಯ (T.B.C. 74 of 38-9) ನಿರೂಪದ ಪ್ರಕಾರ 'ಕನ್ನಡನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

ಸಂಪುಟ ೫ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಚಿಕೆ ೪೯
ಬೆಂಗಳೂರು: ಶುಕ್ರವಾರ, ಅಕ್ಟೋಬರ್ ೧, ೧೯೪೩

## ತಮಿಳಿನ 'ಪುಱನಾನೂಱು'ನಲ್ಲಿ ಪೊಯ್ಸಳರು?

ಸುಮಾರು ಒಂದು ಎರಡನೆಯ ಶತಮಾನದ ಕಾಲದ್ದೆಂದು ಹೇಳುವ 'ಪುಱನಾನೂಱು' ಎಂಬ ತಮಿಳಿನ ಗ್ರಂಥದಲ್ಲಿ ಎರಡು ಕವಿತೆಗಳು ಹೊಯ್ಸಳರ ರಾಜವಂಶವನ್ನು ಸೂಚಿಸುವಂತಿವೆ. ಹೊಯ್ಸಳರ ಕಾಲ ೯ನೆಯ ಶತಮಾನದ ಕಡೆಯಿಂದ ೧೪ನೆಯ ಶತಮಾನದ ಮೊದಲನೆಯ ಭಾಗದವರೆಗೆ ಆಗುವುದರಿಂದ ಈ ಸೂಚನೆ ನಿಜವೆ ಎಂಬ ಪ್ರಶ್ನೆ ಏಳುತ್ತದೆ. ಈ ಕವಿತೆಗಳು ಪುಱನಾನೂಱಿನ ೨೦೧–೨೦೨ ಆಗಿವೆ. ಇವನ್ನು ಹಾಡಿದವರು ಕಡೆಯ ಸಂಘದ ಪ್ರಸಿದ್ಧ ಕವಿಗಳಾದ ಕಪಿಲರು. ತಮ್ಮ ಕೆಳೆಯನಾದ ಪಱಂಬುನಾಡಿನ ಪಱಂಬುಮಲೆಯ ಒಡೆಯನಾದ ವೇಳ್‌ಪಾರಿ ಸತ್ತಮೇಲೆ ಅವನ ಇಬ್ಬರು ಹೆಣ್ಣುಮಕ್ಕಳನ್ನು ಕರೆದುಕೊಂಡು ವಿಚ್ಚಿಕ್ಕೋನ್ ಎಂಬ ದೊರೆಯ ಬಳಿ ಹೋಗಿ, ಅವರನ್ನು ಮದುವೆ ಮಾಡಿಕೊಳ್ಳಬೇಕೆಂದು ಕವಿ ಕೇಳಿದನು. ರಾಜನು ಒಪ್ಪಲಿಲ್ಲ. ಆಮೇಲೆ ಉತ್ತರ ದಿಕ್ಕಿನಲ್ಲಿ ಹೋಗಿ **ತುವರೈ** ಎಂಬ ಊರನ್ನು ಆಳುವ **ಇರುಂಗೋವೇಳ್** ಎಂಬ ಅರಸನನ್ನು ಬೇಡಲು ಅವನೂ ಒಪ್ಪಲಿಲ್ಲ, ಅಲ್ಲಿಂದ ಹೋಗಿ ಬ್ರಾಹ್ಮಣರಿಗೆ ಆ ಹೆಣ್ಣುಮಕ್ಕಳನ್ನು ಮದುವೆ ಮಾಡಿಕೊಟ್ಟನು (೩೬) ಎಂದು ಮೇಲೆ ಹೇಳಿದ ಕವಿತೆಗಳಿಂದ ತಿಳಿದುಬರುತ್ತದೆ.

ಇರುಂಗೋವೇಳ್ ಎಂಬ ರಾಜನನ್ನು ಈ ಎರಡು ಕವಿತೆಗಳಲ್ಲಿ **ಪುಲಿಕಡಿಮಾಲ್** ಎಂದು ಕರೆದಿದೆ. ಈ ಗ್ರಂಥದ ಹಳೆಯ ಒರೆಯಲ್ಲಿ (ಉರೈ = ಅರ್ಥವಿವರಣೆ) ತುವರೈ ಎನ್ನುವುದಕ್ಕೆ ತುವರಾಪತಿ = ದ್ವಾರಾವತಿ ಯೆನ್ನುಂ ಪಡೈವೀಡು, ಎಂದು ಹೇಳಿದೆ. ಗ್ರಂಥದ ಸಂಪಾದಕರಾದ ಡಾಕ್ಟರ್ ಸ್ವಾಮಿನಾಥಯ್ಯರವರು ದ್ವಾರಾವತಿಯನ್ನು ದ್ವಾರಸಮುದ್ರವೆಂದು ಸ್ಪಷ್ಟಪಡಿಸಿದ್ದಾರೆ. ಪುಲಿಕಡಿಮಾಲ್ ಎಂದರೆ ಹುಲಿಯನ್ನು ಕಡಿದ ವೀರ ಎಂಬ ಮಾತು, ಸಳನು ಹುಲಿಯನ್ನು ಹೊಯ್ದು ಹೊಯ್ಸಳ ಎಂಬ ಹೆಸರನ್ನು ಪಡೆದ ಕಥೆಯನ್ನು ನೆನಪಿಗೆ ತರುತ್ತದೆ. ಒಟ್ಟಿನಮೇಲೆ ಈ ದ್ವಾರಾವತಿಯ ಹುಲಿ ಕಡಿದವನು ಹೊಯ್ಸಳನೇ ಎಂಬ ಪ್ರತೀತಿ ತಮಿಳರಲ್ಲಿ ಇದ್ದುದು ಹೊರಪಡುತ್ತದೆ. ೧೩ನೆಯ ಶತಮಾನದಲ್ಲಿ ಹೊಯ್ಸಳರು ತಮಿಳು ಜಿಲ್ಲೆಗಳನ್ನು ಗೆದ್ದು ಕಣ್ಣನೂರನ್ನು ರಾಜಧಾನಿಯಾಗಿ ಮಾಡಿಕೊಂಡಿದ್ದದ್ದು ಚರಿತ್ರೆಯ ವಿಷಯವಾಗಿದೆ.

ಪೊಯ್ಸಳರಿಗೂ ಪುಱನಾನೂಱಿನ ಈ ಎರಡು ಕವಿತೆಗಳಿಗೂ ಎರಡನೆಯ ಶತಮಾನದಷ್ಟು ಹಳೆಯದಾದುದೆಂದು ಊಹಿಸಿರುವ ಪುಱನಾನೂಱು ಗ್ರಂಥಕ್ಕೂ ಹೇಗೆ ಸಂಬಂಧ ಬಂದಿರಬಹುದು?

ನಮಗೆ ಬೇಕಾದ ಭಾಗಗಳನ್ನು ಈ ಕವಿತೆಗಳಿಂದ ಎತ್ತಿ ತೆಗೆಯೋಣ.

೨೦೧. ನೀಯೇ ವಡಪಾನ್ ಮುನಿವನ್ ತಡವಿನುಳ್ ತೋನ್ಱಿ
. . . ತುವರೈಯಾಂಡು
ನಾಱ್ಪತ್ತೊಂಬದು ವೞಿಮುಱೈ ವಂದ
ವೇಳಿರುಳ್ ವೇಳೇ . . .
. . . . . . ಪುಲಿಕಡಿಮಾಅಲ್
ಯಾನ್ ತರ ವಿವರೈ ಕೊಣ್ಮದಿ . . .

೨೦೨. ನೀಡುನಿಲೈಯರೈಯತ್ತುಕ್ಕೇಡುಂ ಕೇಳಿನಿ
ನುಂದೈ ತಾಯ ನಿಱೈವುಱ ವೆಯ್ದಿಯ . . .
. . . . . . ಪುಲಿಕಡಿಮಾಅಲ್
ನುಂಬೋಲಱಿವಿನುಮರೊಳೊರುವನ್
ಪುಗೞ್ನ್ದ ಚೆಯ್ಯುಳ್ ಕೞಾಅತ್ತಲೈಯೈ
ಯಿಗೞ್ನ್ದದನ್ ಪಯನೇ . . .

ಈ ಎರಡು ಭಾಗಗಳಲ್ಲಿ ಹುಲಿಯನ್ನು ಕಡಿದ ಈ ದೊರೆ ಬಡಗ ದೆಸೆಯಲ್ಲಿ ಒಬ್ಬ ಮುನಿಯ ಹೋಮಕುಂಡದಲ್ಲಿ ಹುಟ್ಟಿ ದ್ವಾರಾವತಿಯನ್ನು ಆಳಿ, ೪೯ ತಲೆಮೊರೆ ನಡೆದುಬಂದ ರಾಜವಂಶದ ರಾಜನೆಂದೂ, ಇವನ ಹಿರಿಯರು ಪಡೆದ ದಾಯಭಾಗ ತುಂಬಿ ಬಂದಿತೆಂದೂ ದೊಡ್ಡ ನೆಲೆಯಾದ 'ಅರೈಯ' ಎಂಬ ಊರು ನಾಶವಾಯಿತೆಂದೂ, ಅದು ಅವನಂತೆಯೇ ಹೀನ ಬುದ್ಧಿಯುಳ್ಳ ಆವರ ಹಿರಿಯನೊಬ್ಬನು ಪ್ರಸಿದ್ಧ ಕವಿಯಾದ ಕೞಾಅತ್ತಲೈಯನ್ನು ತೆಗಳಿದ್ದರ ಫಲವೆಂದೂ ಹೇಳಿರುತ್ತದೆ.

ಇಲ್ಲಿ ವಿಚಾರಿಸತಕ್ಕ ಸಂಗತಿಗಳು ಯಾವುವೆಂದರೆ:

೧. ಹೊಯ್ಸಳರ ಕಾಲಕ್ಕೂ ಪುಱನಾನೂಱಿನ ಕಾಲಕ್ಕೂ ಹೊಂದುತ್ತದೆಯೆ?

೨. ಪುಲಿಕಡಿಮಾಲ್ ಎಂಬುದು ಸಳನಿಗೆ ಸಂಬಂಧಿಸಿದ್ದೇ?

೩. ಸಳನ ಹಿಂದೆ ೪೯ ಮಂದಿ ಆ ವಂಶದ ರಾಜರು ಇದ್ದರೇ?

೪. ವೇಳ್, ವೆಳ್ಳಾಳ, ಬಲ್ಲಾಳ ಇವು ಒಂದೇ ಶಬ್ದದ ರೂಪಾಂತರಗಳೇ?

೫. ಹೋಮಕುಂಡದಲ್ಲಿ ಹುಟ್ಟಿದ್ದು ಹೊಯ್ಸಳರಿಗೆ ಇನ್ನೆಲ್ಲಾದರೂ ಹೇಳಿದೆಯೇ?

೬. ತುವರೈ ಎಂಬುದು ದ್ವಾರಸಮುದ್ರವಾದರೆ ಅರೈಯ ಎಂಬುದು ಯಾವ ಊರು? (ಇದು ಪೇರರೈಯಂ, ಚಿತ್ತರೈಯಂ ಎಂದ ಎರಡು ಭಾಗವಾಗಿತ್ತೆಂದು ಹೇಳಿದೆ.)

೭. ಪುಱನಾನೂಱು ಸಂಗ್ರಹದ ಕವಿತೆಗಳೆಲ್ಲವೂ ಒಂದು ಕಾಲದ್ದಲ್ಲ, ಬೇರೆಬೇರೆ ಕಾಲದವು ಎಂದು ಊಹಿಸಿ, ಪುಱನಾನೂಱು ಎರಡನೆಯ ಶತಮಾನದಷ್ಟು ಹಳೆಯದಲ್ಲವೆಂದು ಸಂಶಯಪಡಬಹುದೆ?

೮. ಹೋಮಕುಂಡದಲ್ಲಿ ಹುಟ್ಟಿದ್ದು, ಹುಲಿಯನ್ನು ಇರಿದದ್ದು, ಮೊಲ ನಾಯಿಯನ್ನು ಅಟ್ಟಿಸಿಕೊಂಡು ಹೋದದ್ದು, ಹಾವು ತಲೆಯ ಮೇಲೆ ಆಡಿದ್ದು, ಕೊಪ್ಪರಿಗೆ ಸಿಕ್ಕಿದ್ದು ಮುಂತಾದ ನಾಡ ಕಥೆಗಳು ಜನರಲ್ಲಿ ದಂತಕಥೆಗಳಾಗಿ ತೇಲಾಡುತ್ತಿದ್ದು, ಬೇರೆಬೇರೆ ಕಾಲದಲ್ಲಿ ಬೇರೆಬೇರೆ ರಾಜರುಗಳಿಗೆ ಅಂಟಿಕೊಂಡಿರಬಹುದೆ?

ಇವೇ ಮುಂತಾದ ವಿಚಾರಗಳನ್ನು ಚರಿತ್ರೆಯ ಶೋಧಕರು ವಿಮರ್ಶಿಸಬೇಕಾಗಿದೆ.

— ಶ್ರೀ

**ತಿಳಿವಳಿಕೆ**

**ನಾಡಹಬ್ಬದ** ಪ್ರಯುಕ್ತ ೮-೧೦-೧೯೫೩ನೆಯ ದಿನ **ಕನ್ನಡ ನುಡಿ**ಯ ಕಾರ್ಯಾಲಯಕ್ಕೆ ಬಿಡುವು ಕೊಟ್ಟಿದೆ. ಆ ದಿನದ ಸಂಚಿಕೆ ಹೊರಡುವುದಿಲ್ಲ. — **ಸಂಪಾದಕ**

# ಕನ್ನಡ ನುಡಿ

**ಶುಕ್ರವಾರ, ಅಕ್ಟೋಬರ್ ೧, ೧೯೫೩**

## ಬಳ್ಳಾರಿಯ ವಿಚಾರ

ಎರಡು ವಾರದ ಹಿಂದೆ ಬಳ್ಳಾರಿಯನ್ನು ಕುರಿತು ಒಂದು ಲೇಖನ ಬರೆದದ್ದಾಯಿತು. ಈಚೆಗೆ ಈ ವಿಚಾರದಲ್ಲಿ ನಡೆದ ಒಂದೆರಡು ಸಂಗತಿಯನ್ನು ಈಗ ಕನ್ನಡಿಗರಲ್ಲಿ ಬಿನ್ನವಿಸಬೇಕಾಗಿದೆ.

ಬಳ್ಳಾರಿ ಕನ್ನಡ ಜಿಲ್ಲೆ, ಅದನ್ನು ಆಂಧ್ರದೇಶಕ್ಕೆ ಸೇರಿಸಿಕೊಳ್ಳಬೇಕೆಂಬ ಪ್ರಚಾರ ಮಾಡುವ ಬಗ್ಗೆ ಆಂಧ್ರ ಮಹಾಸಭೆ ನೆರೆಯುವುದಕ್ಕೆ ಸರಕಾರ ಅಪ್ಪಣೆ ಕೊಡಬಾರದು, ಎಂದು ಮದರಾಸು ಗೌರ್ನರ್ ಮಹಾಶಯರಲ್ಲಿ ಪರಿಷತ್ತು ವಿಜ್ಞಾಪನೆ ಮಾಡಿತು. ಅವರು ಅದಕ್ಕೆ ಉತ್ತರವಾಗಿ, ಮಹಾಸಭೆ ನೆರೆಯಲು ಅಪ್ಪಣೆ ಕೊಟ್ಟು ಹಲದಿನ ಕಳೆದಿದೆ, ಆ ಬಗ್ಗೆ ಏರ್ಪಾಡು ಸಾಕಾದಷ್ಟು ಮುಂದುವರಿದಿರಬಹುದಾದ ಕಾರಣದಿಂದ ಈಗ ಅಪ್ಪಣೆಯನ್ನು ಹಿಂದಕ್ಕೆ ತೆಗೆದುಕೊಳ್ಳುವುದು ಸೂಕ್ತವಲ್ಲ, ಎಂದು ತಿಳಿಸಿದಾರೆ. ಆಂಧ್ರ ಮಹಾಸಭೆ ಬಳ್ಳಾರಿಯಲ್ಲಿ ನೆರೆಯುತ್ತದೆ ಎಂದಾಯಿತು. ಕನ್ನಡಿಗರು ಮುಂದಿನ ಯೋಚನೆ ಮಾಡಬೇಕಾಗಿದೆ.

ಆಂಧ್ರ ನಾಯಕರಾದ ವಿಜಯನಗರದ ರಾಜಕುಮಾರರು ಮದರಾಸಿನಲ್ಲಿ ಒಂದು ಸತ್ಕಾರ ಕೂಟದಲ್ಲಿ ಮಾತನಾಡುತ್ತಾ, ತಾವು ಸಭೆ ನೆರೆಯಿಸುವುದು "chiefly to concert measures of relief" ಎಂದು ಹೇಳಿದಂತೆ ಪತ್ರಿಕೆಗಳಲ್ಲಿ ವರದಿಯಾಗಿದೆ. ಬಳ್ಳಾರಿಯ ಪ್ರಮುಖರು ಹೊರಡಿಸಿದ ಒಂದು ಪ್ರಕಟನೆಗೆ ಉತ್ತರವಾಗಿ ಗೌರ್ನರ್ ಮಹಾಶಯರು ಆಂಧ್ರ ದೇಶವಾಗಬೇಕೆಂಬ ವಿಷಯದಲ್ಲಿ 'ರಾಯಲ ಸೀಮೆ ನಿಮ್ಮ ಜೊತೆಗೆ ಇದೆಯೇ' ಎಂದು ಕೇಳಿದರೆಂದೂ ರಾಜಕುಮಾರರು 'ತೀರದ ಜಿಲ್ಲೆಗಳಲ್ಲಿ ಇದ್ದರೂ ರಾಯಲ ಸೀಮೆಯಲ್ಲಿದ್ದರೂ ನಾವೆಲ್ಲ ಆಂಧ್ರರೇ' ಎಂದು ಹೇಳಿದರೆಂದೂ ತಿಳಿಸಿದಾರೆ. ರಾಯಲ ಸೀಮೆಯಲ್ಲಿರುವ ಆಂಧ್ರರು ಆಂಧ್ರರೇ ಸರಿ. ಆದರೆ ರಾಯಲ ಸೀಮೆಯಲ್ಲಿರುವ ಕನ್ನಡಿಗರೂ ಆಂಧ್ರರಾಗುವರೇನು? ರಾಜಕುಮಾರರು ರಾಯಲ ಸೀಮೆಯ ಆಂಧ್ರ ಜನವನ್ನು ಆಂಧ್ರ ದೇಶಕ್ಕೆ ಸೇರಿಸಿಕೊಳ್ಳುವ ಮಾತನ್ನು ಆಡಬಹುದು. ಇದನ್ನು ಅವರು ಸ್ಪಷ್ಟಪಡಿಸದೆ ರಾಯಲ ಸೀಮೆಯನ್ನೆಲ್ಲ ಆಂಧ್ರ ದೇಶಕ್ಕೆ ಸೇರಿಸಿಕೊಳ್ಳುವೆನು ಎಂದರೆ ಸಭೆಯನ್ನು ನೆರೆಯಿಸುವ ಆಶಯ ದುಷ್ಟವಾಗುತ್ತದೆ.

ಸಭೆ ನೆರೆಯಿಸುವುದು chiefly to concert measures of relief. Secondarily ಯಾವುದಕ್ಕಾಗಿ? ನಾಯಕರು ಇದನ್ನು ಸ್ಪಷ್ಟಪಡಿಸಬೇಕು.

ಆಂಧ್ರರು ಬೇರೆಯ ದೇಶವನ್ನು ಬೇಡುವುದು separatist ಎಂದರೆ ಬೇರೆಯಾಗುವ ಬುದ್ಧಿಯಿಂದ, ಇದು ಕೆಟ್ಟದು, ಎಂದು ಹೇಳುವ ತಮಿಳರಿಗೆ ಉತ್ತರ ಹೇಳುತ್ತಾ, ರಾಜಕುಮಾರರು "My anxiety is that the Andhras and Tamilians should move like blood brothers hand in hand" ಎಂದು ಹೇಳಿದರಂತೆ. ಇವರಿಗೆ ಈ anxiety ಕನ್ನಡಿಗರನ್ನು ಕುರಿತು ಇರಬೇಡವೇ? ಇವರು ರಾಯಲ ಸೀಮೆಯ ಏಳು ಲಕ್ಷಕ್ಕೆ ಮೇಲ್ಪಟ್ಟ ಸಂಖ್ಯೆಯ ಕನ್ನಡ ಪ್ರಜೆಯನ್ನು ಏಕೆ ವಿರೋಧಿಗಳನ್ನಾಗಿ ಮಾಡಿಕೊಳ್ಳುತ್ತಿದಾರೆ?

ಕನ್ನಡದ ಏಳು ಲಕ್ಷ ಪ್ರಜೆಯನ್ನು ಆಂಧ್ರದೇಶಕ್ಕೆ ಸೇರಿಸಿಕೊಳ್ಳುವುದು ತಪ್ಪು ಎಂದು ಬಳ್ಳಾರಿಯ ಪ್ರಮುಖರು ಹೊರಡಿಸಿರುವ ಪ್ರಕಟನೆಯನ್ನು ರಾಜಕುಮಾರರು 'malicious propaganda' ಎಂದು ವರ್ಣಿಸಿದಂತೆ ಪತ್ರಿಕೆಗಳ ವರದಿಯಿಂದ ಭಾಸವಾಗುತ್ತದೆ. ಏಳು ಲಕ್ಷ ಕನ್ನಡ ಪ್ರಜೆಗಳ ನಾಯಕರು ಮೂರು ಲಕ್ಷ ಆಂಧ್ರ ಪ್ರಜೆಗಳ ನಾಯಕರನ್ನು ಕುರಿತು, ಒಟ್ಟು ಜಿಲ್ಲೆ ಆಂಧ್ರ ಆಗಲಾರದು, ಎಂದು ಹೇಳಿದರೆ ಅವರ ಮಾತು malicious ಆಗುತ್ತದೆಯೇ? ತನ್ನ ಭಾಗದ ರಾಜ್ಯವನ್ನು ತಾನು ನೋಡಿಕೊಳ್ಳುತ್ತೇನೆ ಎಂದ ಧರ್ಮರಾಯನು ಮತ್ಸರಿಯೇ, ಅದನ್ನು ಕಸುಕೊಳ್ಳಬೇಕೆಂದು ನೋಡಿದ ದುರ್ಯೋಧನನು ಮತ್ಸರಿಯೇ? ಆಂಧ್ರ ಭರತವರ್ಷವನ್ನು ಬಿಟ್ಟು ದೇಶವಾಗುವುದಿಲ್ಲ. ತನ್ನಂತಹ ಇನ್ನು ಇಪ್ಪತ್ತು ದೇಶಗಳೊಂದಿಗೆ ಒಂದು ದೇಶವಾಗಿರಬೇಕು. ರಾಜಕುಮಾರರಂತಹ ದೇಶಪ್ರೇಮಿ ನಾಯಕರು ಒಂದು ಚರ್ಚೆಯಲ್ಲಿ ಪ್ರತಿಪಕ್ಷವನ್ನು ಮತ್ಸರಿಗಳೆಂದು ಹೇಳುವುದು ಅಸಮಂಜಸ.

ಮುಖ್ಯವಿಷಯ ಏನೆಂದರೆ, ಭರತವರ್ಷದ ಈಗಣ ಪ್ರಾಂತ ರಚನೆ ಐತಿಹಾಸಿಕ ಕಾರಣಗಳಿಂದ ಸಿಕ್ಕಾಬಟ್ಟೆ ಆಗಿ ನಿಂತಿದೆ. ಇದರಿಂದ ಜನರ ಏಳಿಗೆಗೆ ಕೊರತೆ ಬಂದಿದೆ. ಇದನ್ನು ಸರಿಪಡಿಸಬೇಕೆಂದೇ ಆಂಧ್ರರು ಆಂಧ್ರದೇಶ ಒಂದನ್ನು ಮಾಡಬೇಕೆನ್ನುವುದು. ಕನ್ನಡಿಗರು ಅದೇ ಕಾರಣದಿಂದ ಒಂದು ಕನ್ನಡ ದೇಶ ಆಗಬೇಕೆಂದು ಬಯಸುತ್ತಾರೆ. ತಮ್ಮ ಕಣ್ಣಿಗೆ ಬೆಣ್ಣೆ ಬೇಡುವ ಆಂಧ್ರ ರಾಜಕುಮಾರರು ಕನ್ನಡ ನಾಯಕರ ಕಣ್ಣಿಗೆ ಸುಣ್ಣವನ್ನು ನೀಡುವುದಾಗದು.

ಬಳ್ಳಾರಿಯ ಕನ್ನಡ ನಾಯಕರು ಗೌರ್ನರ್ ಮಹಾಶಯರ ಹೆಸರನ್ನು ವೃಥಾ ಹೊರಗೆ ತಂದರೆಂದು ರಾಜಕುಮಾರರು ಟೀಕೆ ಮಾಡಿರುವಂತೆ ಕಾಣುತ್ತದೆ. ಗೌರ್ನರವರು ರಾಜಕುಮಾರರನ್ನು ಏನೋ ಕೇಳಿದಂತೆ, ಗೌರ್ನರವರಿಗೆ ರಾಜಕುಮಾರರು ಏನೋ ಹೇಳಿದಂತೆ ಸುದ್ದಿ ಕಿವಿಗೆ ಬಿದ್ದು, ಕನ್ನಡ ಪ್ರಮುಖರು ಗೌರ್ನರ್ ಮಹಾಶಯರ ಮಾತನ್ನು ಎತ್ತಬೇಕಾಯಿತು. ಮೊದಲು ಗೌರ್ನರವರ ಹೆಸರನ್ನು ಹೊರಗೆ ತಂದವರಾರು? ಆ ಮಹಾಶಯರಿಗೂ ರಾಜಕುಮಾರರಿಗೂ ನಡೆದ ಮಾತು, ಇಲ್ಲವೇ ಗೌರ್ನರ್ ಮಹಾಶಯರಿಂದ, ಇಲ್ಲವೇ ರಾಜಕುಮಾರರಿಂದ, ಹೊರಕ್ಕೆ ಬಂತು. ಅದರ ಮೇಲೆ ಕನ್ನಡ ನಾಯಕರು ಟೀಕೆಮಾಡಿದರೆ ಗೌರ್ನರವರ ಹೆಸರನ್ನು ಹೊರಕ್ಕೆ ತಂದ ತಪ್ಪು ಅವರದಾಗುವುದಿಲ್ಲ. ತಮ್ಮ ಮತ್ತು ಗೌರ್ನರ್ ಮಹಾಶಯರ ನಡುವಣ ಮಾತನ್ನು ರಾಜಕುಮಾರರು ಎಲ್ಲಿಯಾದರೂ ಆಡಿದ್ದರೆ ಗೌರ್ನರವರ ಹೆಸರನ್ನು ಹೊರಕ್ಕೆ ಎಳೆದ ಹೊಣೆ ರಾಜಕುಮಾರರದಾಗುತ್ತದೆ. ತಾವೇ ಅವರ ಹೆಸರನ್ನು ಬಯಲಿಗೆ ಎಳೆದು ಅದನ್ನು ಬಯಲಿಗೆ ಎಳೆಯುತ್ತಿದಾರೆಂದು ಕನ್ನಡಿಗರನ್ನು ದೂರಿ, ಕನ್ನಡಿಗರ ವಿಷಯದಲ್ಲಿ ಗೌರ್ನರ್ ಮಹಾಶಯರ ಮನಸ್ಸನ್ನು ಕೆಡಿಸುವೆನೆಂಬ ಈ ಪ್ರಯತ್ನ ರಾಜಕುಮಾರರಿಗೆ ಯೋಗ್ಯವಾದುದಲ್ಲ.

ಒಟ್ಟು ನಮ್ಮ ಮಾತು ಇಷ್ಟೆ. ಆಂಧ್ರ ಜನವೆಲ್ಲ ಸೇರಿ ಒಂದು ಆಂಧ್ರದೇಶವಾಗಲಿ. ಅದಕ್ಕೆ ನಮ್ಮ ಅಡ್ಡಿಯಿಲ್ಲ. ಆದಾದರೆ ಸಂತೋಷ. ಆದರೆ ರಾಯಲ ಸೀಮೆಯಲ್ಲಿ ಬಳ್ಳಾರಿ ಸೇರಿದೆ ಎಂಬ ಕಾರಣದಿಂದ ಬಳ್ಳಾರಿಯ **ಮೂರು** ಚಿಲ್ಲರೆ ಲಕ್ಷದ ಆಂಧ್ರರು ಅದೇ ಜಿಲ್ಲೆಯ ಸುಮಸುಮಾರು **ಆರು** ಲಕ್ಷದ ಕನ್ನಡಿಗರನ್ನು ಎಳೆದುಕೊಂಡು ಆಂಧ್ರ ದೇಶದಲ್ಲಿ ಸೇರಬೇಕೆನ್ನುವ ಮಾತನ್ನು ಮಾತ್ರ ತಕ್ಷಣ ನಿಲ್ಲಿಸಬೇಕು. ನಿಲ್ಲಿಸದಿದ್ದರೆ ಆರು ಲಕ್ಷದ ಜನ ಮೂರು ಲಕ್ಷ ಜನಕ್ಕೆ ಪ್ರತಿಯಾಗಿ ನಿಲ್ಲಬೇಕಾಗುತ್ತದೆ. ಇದು ಯಾವ ದೃಷ್ಟಿಯಿಂದಲೂ ಒಳ್ಳೆಯದಲ್ಲ. ಕನ್ನಡದಲ್ಲಿ ಆಗಬೇಕಾದ ಕೆಲಸ ಬಹಳ ಇದೆ: ಅದನ್ನು ಬಿಟ್ಟು ಕನ್ನಡಿಗರು ಆತ್ಮರಕ್ಷಣೆಗಾಗಿ ವಾದಮಾಡಬೇಕಾಗುತ್ತದೆ. ಆಂಧ್ರರು ಮಾಡಬೇಕಾದ ಕೆಲಸ ಬಹಳ ಇದೆ: ಅದನ್ನು ಬಿಟ್ಟು ಅವರು ಕನ್ನಡದ ಜನತೆಯನ್ನು ಸಗ್ಗಿಸುವೆವು ಎಂಬ ದುರಾಗ್ರಹದಲ್ಲಿ ಪ್ರಯಾಸಪಡಬೇಕಾಗುತ್ತದೆ. ಇವೆರಡೂ ಅನರ್ಥವೇ. ಇಂಗ್ಲಿಷಿನಲ್ಲಿ 'ಬಾಲ ನಾಯಿಯನ್ನು ಆಡಿಸಿತು' ಎಂಬ ಗಾದೆಯಿದೆ. ಆ ಗಾದೆಗೆ ನಿದರ್ಶನವಾಗುವಂತಹ ನಡತೆಯನ್ನು ಬಳ್ಳಾರಿಯ ಆಂಧ್ರರು ನಡಸಬಾರದೆಂದು ನಮ್ಮ ಆಗ್ರಹದ ವಿನಂತಿ.

**ಮಾ. ವೆಂ. ಅ.**

## ಕೃತಜ್ಞತೆ

ಈ ಸಂಚಿಕೆಯೊಂದಿಗೆ **ಕನ್ನಡ ನುಡಿ**ಯ ಐದನೆಯ ಸಂಪುಟ ಮುಗಿಯುವುದು. ಈ ಸಂದರ್ಭದಲ್ಲಿ ಪತ್ರಿಕೆಗೆ ನೆರವಾದ ಎಲ್ಲ ಮಹನೀಯರಿಗೂ **ನುಡಿ** ತನ್ನ ಕೃತಜ್ಞತೆಗಳನ್ನು ಸಮರ್ಪಿಸುತ್ತದೆ.

ಮುಂದಿನ ವಾರದಿಂದ ಹೊಸ ಸಂಪುಟ ಪ್ರಾರಂಭವಾಗುತ್ತದೆ. **ನುಡಿಗೆ** ಲೇಖನ ಕೊಡುವುದರ ಮೂಲಕವೂ ಚಂದಾದಾರರಾಗುವುದರ ಮೂಲಕವೂ ಸಹಾಯಮಾಡಿ, ಜನಕ್ಕೆ ಪತ್ರಿಕೆಯಿಂದ ಇನ್ನೂ ಹೆಚ್ಚಿನ ಪ್ರಯೋಜನವಾಗುವಂತೆ ಎಲ್ಲರ ನೆರವು ಇನ್ನು ಮುಂದೆಯೂ ಒದಗಿಬರುವುವೆಂದು **ನುಡಿ** ಹಾರೈಸುತ್ತದೆ.

——

## ಶಿಕ್ಷಣ ಸುಧಾರಣೆ

ಇಂಡಿಯಾ ಸರಕಾರದ ಶಿಕ್ಷಣ ಸಲಹೆಗಾರರಾದ ಡಾಕ್ಟರ್ ಜಾನ್ ಸಾರ್ಜೆಂಟ್ ಅವರು ಭಾರತ ಪ್ರಾಂತಗಳಲ್ಲೂ ಸಂಸ್ಥಾನಗಳಲ್ಲೂ ಶಿಕ್ಷಣ ವ್ಯವಸ್ಥೆಯನ್ನು ಎಲ್ಲ ಮುಖದಿಂದಲೂ ಸುಧಾರಿಸುವ ವಿಸ್ತಾರವಾದ ಯೋಜನೆಯೊಂದನ್ನು ತಯಾರಿಸಿದ್ದಾರೆಂದು ಕೇಳುತ್ತೇವೆ. ದೆಹಲಿಯಲ್ಲಿ ಈ ಅಕ್ಟೋಬರ್ ತಿಂಗಳಲ್ಲಿ ನಡೆಯುವ ಕೇಂದ್ರ ಶಿಕ್ಷಣ ಸಲಹಾ ಸಮಿತಿಯಲ್ಲಿ ಈ ಯೋಜನೆ ಪರ್ಯಾಲೋಚನೆಗೆ ಬರುವುದಾಗಿದೆ.

ಈ ಯೋಜನೆಯಲ್ಲಿ ಸ್ಥೂಲ ವಿವರಗಳಿವು: ೧. ಒಂದು ನಿರ್ದಿಷ್ಟವಾದ ವಯಸ್ಸಿನವರೆಗೆ ಎಲ್ಲರಿಗೂ ಸಾರ್ವತ್ರಿಕವಾಗಿ ಉಚಿತವಾದ ಒತ್ತಾಯದ ಶಿಕ್ಷಣ. ೨. ಆಮೇಲೆ ಸೆಕೆಂಡರಿ ದರ್ಜೆಯ ಹಾಗೂ ವಿಶ್ವವಿದ್ಯಾನಿಲಯದ ತರಗತಿಗಳಿಗೂ ಪರಿಕರ್ಮ (ಟೆಕ್ನಿಕಲ್) ವಿಷಯಗಳ ಅಧ್ಯಯನಕ್ಕೂ ವಿದ್ಯಾರ್ಥಿಗಳನ್ನು ಆಯ್ಕೆ ಮಾಡಲು ವ್ಯವಸ್ಥೆ. ೩. ಕೆಲವು ವರ್ಷಗಳ ಅವಧಿಯಲ್ಲಿ ಅನಕ್ಷರತೆ ನಿವಾರಣೆಯಾಗಲು ವಯಸ್ಕರ ವಿದ್ಯಾಭ್ಯಾಸವನ್ನು ಸುಧಾರಿಸುವುದು.

ಕೇಂದ್ರ ಸಮಿತಿಯಲ್ಲಿ ಈ ಯೋಜನೆಗೆ ಒಪ್ಪಿಗೆ ದೊರೆತಲ್ಲಿ, ಸಾಧ್ಯವಾದ ಮಟ್ಟಿಗೆ ಜಾಗ್ರತೆಯಾಗಿ ಅದರ ಹಲವು ಅಂಶಗಳನ್ನೂ ಯುದ್ಧಾನಂತರ ಇಡಿಯ ಯೋಜನೆಯನ್ನೂ ಕಾರ್ಯದಲ್ಲಿ ತರಲಾಗುವುದಂತೆ.

ಒಳ್ಳೆಯ ಸುದ್ದಿಯೆ ಇದು. ಇದರ ವಿವರಗಳನ್ನೂ ಕೇಂದ್ರ ಸಮಿತಿಯ ಶಿಫಾರಸುಗಳನ್ನೂ ನಾಡಿನ ಶಿಕ್ಷಣ ಪ್ರೇಮಿಗಳು ಬಹಳ ಆಸಕ್ತಿಯಿಂದ ನಿರೀಕ್ಷಿಸುತ್ತಿರುವರೆಂಬುದರಲ್ಲಿ ಸಂದೇಹವಿಲ್ಲ.

——

## ಬೆಳಗಾಂವಿ: ಕರ್ನಾಟಕ ಸಂಘದ ವಿಶೇಷ ಸಭೆ

ಸಂಘದ ಸಭೆ ರವಿವಾರ ದಿನ ಸಾಯಂಕಾಲ ೬ ಘಂಟೆಗೆ ಸಂಘದ ಕಾರ್ಯಾಲಯದಲ್ಲಿ ಕೂಡಿತ್ತು. ಸಭೆಗೆ ಸಂಘದ ಕಾರ್ಯಾಧ್ಯಕ್ಷರಾಗಿದ್ದ ಡಾ|| ತೆರಗುಂಡಿಯವರು ಅಧ್ಯಕ್ಷರಾಗಿದ್ದರು.

ಅಧ್ಯಕ್ಷರೂ ಶ್ರೀ. ಬಿ. ಡಿ. ಶ್ಯಾಮರಾಯರೂ ಮಾತನಾಡಿದ ಮೇಲೆ ಈ ಸಲ, ಬೆಳಗಾಂವಿಯಲ್ಲಿ ನಾಡಹಬ್ಬವನ್ನು ಆಚರಿಸಬೇಕೆಂದು ತೀರ್ಮಾನವಾಯಿತು.

ಆ ಮೇಲೆ ಕರ್ನಾಟಕ ಸಂಘದ ಕಾರ್ಯಕಾರಿ ಮಂಡಲದ ಆಯ್ಕೆಯಾಗಿ ಕೆಳಗಿನ ಕಾರ್ಯಕಾರಿ ಮಂಡಲ ಆರಿಸಲ್ಪಟ್ಟಿತು.

ಗೌರವಾಧ್ಯಕ್ಷರು: ಡಾ|| ಸವಣೂರ ಹನುಮಂತರಾಯರು.

ಕಾರ್ಯಾಧ್ಯಕ್ಷರು: ಶ್ರೀ ಬಿ. ಡಿ. ಶ್ಯಾಮರಾಯರು.

ಉಪಾಧ್ಯಕ್ಷರು: ೧. ಡಾ. ತೆರಗುಂಡಿ ಹನುಮಂತರಾಯರು. ೨. ಶ್ರೀ. ಮಲ್ಲೇಶಪ್ರಭು ವಾಲಿಯವರು.

ಕಾರ್ಯದರ್ಶಿಗಳು: ೧. ಶ್ರೀ. ಸಾತ್ವಿಕ ಗುಂಡೇರಾಯರು. ೨. ಗೆಜ್ಜಿ ಗೋವಿಂದರಾಯರು.

ಸದಸ್ಯರು: ಶ್ರೀಗಳಾದ ೧. ಮುತಾಲೀಕ ವೆಂಕಟರಾಯರು. ೨. ಜೋಶಿ ನರಸಿಂಗರಾಯರು. ೩. ಬಿ. ಎಸ್. ಶೇಷಗಿರಿಯವರು. ೪. ಆರ್. ಕೆ. ಲಕ್ಕುಂಡಿಯವರು. ೫. ವ್ಹಿ. ಆರ್. ಭಟ್ ಅವರು. ೬. ಬಿ. ಎಮ್. ಮಿಮಾಂಸಿಯವರು. ೭. ಗುತ್ತಿಗೋಳಿ ಸಂಗಪ್ಪನವರು. ೮. ತೊರಗಲ್ಲ ವೆಂಕಟರಾಯರು. ೯. ಕೆ. ಜಿ. ಯರಗುದ್ದಿಯವರು.

## ತುಮಕೂರಿನಲ್ಲಿ ಸಾಹಿತ್ಯ ಚಟುವಟಿಕೆಗಳು

**೬-೯-೪೩ ಸೋಮವಾರ**

ನಗರ ಕರ್ನಾಟಕ ಸಂಘದಲ್ಲಿ ಶ್ರೀ. ಅ. ತಿ. ಶಾಮಾಚಾರ್ಯರು ಶ್ರೀ. ಶ್ರೀಧರ ಖಾನೋಳಕರರ 'ನೌಕಾ ಕ್ರೀಡನ'ವನ್ನು ಮಧುರವಾಗಿ ವಾಚನ ಮಾಡಿದರು.

**೧೨-೯-೪೩ ಭಾನುವಾರ**

ಶ್ರೀ ಜಯದೇವ ವಿದ್ಯಾರ್ಥಿ ನಿಲಯದ ಸಂಘದ ಆರಂಭ ಭಾಷಣವನ್ನು ಶ್ರೀ. ಡಿ. ಎಚ್. ವೀರಯ್ಯನವರು ನಡಸಿದರು.

**೧೩-೯-೪೩ ಸೋಮವಾರ**

ಪ್ರೊಫೆಸರ್ ವೆಂಕಣ್ಣಯ್ಯ ವ್ಯಾಸಂಗಗೋಷ್ಠಿಯಲ್ಲಿ ಶ್ರೀ. ರಾಜರತ್ನಂ ಅವರು 'ಹೊಸಗನ್ನಡ ಛಂದಸ್ಸಿನ ವೈವಿಧ್ಯ' ಎಂಬ ವಿಷಯವಾಗಿ ಮಾತನಾಡುತ್ತಾ, ಡಿ. ವಿ. ಜಿ. ಅವರ 'ನಿವೇದನ', ಗೋವಿಂದಪೈ ಅವರ 'ಕನ್ನಡಿಗರ ತಾಯಿ', 'ಬಲ್ಲುದೆ ಲತೆ ಫಲಂ ತನ್ನ', ಪುಟ್ಟಪ್ಪನವರ 'ಸುಗ್ಗಿ ಬರುತಿದೆ', 'ಕಲಾ ಸುಂದರಿ', ಶ್ರೀ ಅವರ 'ಮುದ್ದಿನ ಕುರಿಮರಿ', 'ಬಡವನ ಹುರುಡು' ಮತ್ತು 'ಅಶ್ವತ್ಥಾಮನ್', 'ಪಾರಸಿಕರು' ನಾಟಕಗಳ ಕೆಲವು ಭಾಗಗಳು—ಇದೇ ಮುಂತಾದ ಹಲವು ಹೊಸ ಕವನಗಳು ಹೇಗೆ ಹಳೆಯ ಭೋಗ ಷಟ್ಪದಿಯಿಂದ ಹುಟ್ಟಿ ಬೆಳೆದಿವೆ ಎಂಬುದನ್ನು ಮನಮುಟ್ಟುವಂತೆ ವಿಶದಪಡಿಸಿದರು.

ಸಂಜೆ, ನಗರ ಕರ್ನಾಟಕ ಸಂಘದಲ್ಲಿ ಶ್ರೀಮಾನ್ ಆರ್. ನರಸಿಂಹಮೂರ್ತಿಯವರು, ಸ್ವಾಮಿ ವಿವೇಕಾನಂದರ 'ನನ್ನ ಗುರುದೇವ' ಎಂಬ ಗ್ರಂಥದ ಮೇಲೆ ವ್ಯಾಖ್ಯಾನ ಮಾಡಿದರು.

**೧೮-೯-೪೩ ಶನಿವಾರ**

ಇಂಟರ್ ಮೀಡಿಯೆಟ್ ಕಾಲೇಜಿನ ಪ್ರೊಫೆಸರ್ ವೆಂಕಣ್ಣಯ್ಯ ವ್ಯಾಸಂಗ ಗೋಷ್ಠಿಯಲ್ಲಿ ಬೆಳಗ್ಗೆ ೮ ರಿಂದ ೯ ಗೀತಾ ಅಭ್ಯಾಸವೂ, ೯ ರಿಂದ ೧೦ ಕೈಲಾಸಂ 'ಪಾತೂ ತೌರ್ಮನೆ' ಅಭ್ಯಾಸವೂ ನಡೆಯಿತು.

ಇಂಟರ್ ಕಾಲೇಜು ಸಂಘದ ಸಂಗೀತ ಮತ್ತು ನಾಟಕ ಶಾಖೆಯವರ ಆಶ್ರಯದಲ್ಲಿ ಸಂಜೆ ಸುಮಾರು ೧|| ಗಂಟೆ ಕಾಲ 'ಆಧುನಿಕ ಕಾವ್ಯವಾಚನ' ನಡೆಯಿತು. ಹನ್ನೆರಡು ಮಂದಿ ವಿದ್ಯಾರ್ಥಿಗಳು ತಮ್ಮ ಮೆಚ್ಚುಗೆಯ ಹೊಸ ಕಾವ್ಯಗಳನ್ನು ಸುಶ್ರಾವ್ಯವಾಗಿ ವಾಚನ ಮಾಡಿದರು.

**೧೯-೯-೪೩ ಭಾನುವಾರ**

ಇಂಟರ್ ಕಾಲೇಜು ಸಂಘದ ಸಂಗೀತ ಮತ್ತು ನಾಟಕ ಶಾಖೆಯವರು ಬೆಳಗ್ಗೆ ೧೦ ಗಂಟೆಗೆ **ಭಾಸ ಜಯಂತಿ**ಯನ್ನು ಆಚರಿಸಿದರು. ಶ್ರೀ. ವೈ. ವಿ. ಸಂಪತ್ತೈಯಂಗಾರ್ ಎಂಬ ಜೂನಿಯರ್ ವಿದ್ಯಾರ್ಥಿ ಭಾಸನಿಂದ ನಾಂದೀ ಭರತ ವಾಕ್ಯಗಳನ್ನೂ, ಕೃಷ್ಣಮೂರ್ತಿಯೆಂಬ ಸೀನಿಯರ್ ವಿದ್ಯಾರ್ಥಿ ಭಾಸ ಪ್ರಶಂಸೆಯನ್ನೂ ಹಾಡಿದರು. ಅನಂತರ ವಿ. ಸಿ. ಬ್ರಹ್ಮರಾಯಪ್ಪ (ಜೂ.) ಪ್ರತಿಮಾ ನಾಟಕವನ್ನೂ, ಎಂ. ವಿ. ಮುನಿರಾಜು (ಜೂ.) ಪ್ರತಿಜ್ಞಾಯೌಗಂಧರಾಯಣವನ್ನೂ, ಬಿ. ಎಸ್. ರಾಮಚಂದ್ರರಾವ್ (ಸೀ.) ಸ್ವಪ್ನವಾಸವದತ್ತವನ್ನೂ, ಬಿ. ಟಿ. ಸೋದಣ್ಣನವರು (ಸೀ) ಪಾಂಚರಾತ್ರವನ್ನೂ ಕುರಿತು ಮಾತನಾಡಿದರು. ಈ ಭಾಷಣ ಮಾಡಲು ಅವರು ಭಾಸ ನಾಟಕಗಳ ಕನ್ನಡ ಅನುವಾದಗಳನ್ನೂ, ಶ್ರೀ.ಗಳಾದ ಕೃಷ್ಣಶಾಸ್ತ್ರಿ, ವೆಂಕಟರಾಮಯ್ಯ, ಹರಿಯಪ್ಪ ಇವರ ವಿಮರ್ಶೆ ಗ್ರಂಥಗಳನ್ನೂ ವ್ಯಾಸಂಗಮಾಡಿ ಸಿದ್ಧರಾಗಿದ್ದರು.

ಇಂಥ ಅಭ್ಯಾಸಗಳೂ ಉತ್ಸವಗಳೂ ಇನ್ನೂ ಆಗಬೇಕೆಂದು ಶ್ರೀ. ರಾಜರತ್ನಂ ಅವರು ಕೋರಿದರು.

**೨೦-೯-೪೩ ಸೋಮವಾರ**

ನಗರದ ಕರ್ಣಾಟಕ ಸಂಘದಲ್ಲಿ ಶ್ರೀಮಾನ್ ಶ್ರೀನಿವಾಸ ತಾತಾಚಾರ್ಯ ಅವರು 'ರವೀಂದ್ರರ' ಕೆಲವು ಕೃತಿಗಳನ್ನು ಕುರಿತು ಭಾಷಣ ಮಾಡಿದರು.

**೨೪-೯-೪೩ ಶುಕ್ರವಾರ**

ಗೌವರ್ನಮೆಂಟ್ ಹೈಸ್ಕೂಲು ಸಂಘದಲ್ಲಿ ಸಂಜೆ ಶ್ರೀ. ರಾಜರತ್ನಂ ಅವರು ಶ್ರೀ. ಕೈಲಾಸಂ ಅವರ 'ಪೋಲಿ ಕಿಟ್ಟಿ' ಓದಿದರು.

ಇಂಟರ್‌ಮೀಡಿಯೆಟ್ ಕಾಲೇಜು ವಿಧ್ಯಾರ್ಥಿ ನಿಲಯದಲ್ಲಿ, ರಾತ್ರೆ, ಶ್ರೀ. ಎಂ. ಎ. ಕೃಷ್ಣಸ್ವಾಮಿಗಳು 'ಪೂಜೆ' ಎಂಬುದನ್ನು ವಿವರಿಸಿದರು.

**೨೫-೯-೪೩ ಶನಿವಾರ**

ಬೆಳಗ್ಗೆ, ಇಂಟರ್‌ಕಾಲೇಜು **'ಪ್ರೊಫೆಸರ್ ವೆಂಕಣ್ಣಯ್ಯ ಗೋಷ್ಠಿ'**ಯಲ್ಲಿ ಶ್ರೀ. ಎಂ. ಎ. ಕೃಷ್ಣಸ್ವಾಮಿಗಳು ಗೀತೆಯ 'ವಿಶ್ವರೂಪ ದರ್ಶನ ಯೋಗ'ವನ್ನು ಓದಿದರು.

ಸಂಜೆ, ಇಂಟರ್ ಕಾಲೇಜು ಸಂಘದಲ್ಲಿ ಶ್ರೀ. ಕೃಷ್ಣಸ್ವಾಮಿಗಳು ಗಯಟೆ ಮಹಾಕವಿಯ 'ಫೌಸ್ಟ್' ಗ್ರಂಥವನ್ನು ಕುರಿತು ಭಾಷಣ ಮಾಡಿದರು.

**೨೬-೯-೪೩ ಭಾನುವಾರ**

ಶ್ರೀ. ಸಿದ್ಧಗಂಗಾ ಕ್ಷೇತ್ರದಲ್ಲಿ ಶ್ರೀ. ತೋಂಟದಾರ್ಯ ವಿದ್ಯಾಭಿವರ್ಧಿನೀ ಸಭೆಯಲ್ಲಿ ಶ್ರೀ. ಎಂ. ಎ. ಕೃಷ್ಣಸ್ವಾಮಿಗಳು 'ಆರ್ಯ ಸಂಸ್ಕೃತಿ' ಎಂಬುದನ್ನು ಕುರಿತು ವ್ಯಾಖ್ಯಾನ ಮಾಡಿದರು.

**೨೭-೯-೪೩ ಸೋಮವಾರ**

ತುಮಕೂರು ಕರ್ಣಾಟಕ ಸಂಘದ ಆಶ್ರಯದಲ್ಲಿ ಶ್ರೀ. ಎಸ್. ಮಂಜನಾಥ್ ಅವರು 'ಕಾರಂತರ ಕಾದಂಬರಿಗಳು' ಎಂಬ ಭಾಷಣಮಾಲೆಯಲ್ಲಿ ಮೊದಲ ಭಾಷಣ ಮಾಡಿದರು.

# ಪರಿಷತ್ತಿನ ಸುದ್ದಿ

## ಪರಿಷತ್ತಿನ ಸದಸ್ಯರ ಬೆಳವಣಿಗೆ

**ಸಹಾಯಕ ಸದಸ್ಯರು (೧೦೦ ರೂ.) :** ಶ್ರೀ.ಗಳಾದ ೧. ರಾಜಾ ಸಂಪಂಗಿರಾಮಶೆಟ್ಟರು, ಮುನಿಸಿಪಲ್ ಕೌನ್ಸಿಲರು, ಬೌರಿಂಗ್‌ಪೇಟೆ. ೨. ಕುಸುಮಾರಾಮಕೃಷ್ಣಶೆಟ್ಟರು, ಬಿ.ಎ., ಎಲ್‌ಎಲ್.ಬಿ., ಅಡ್ವೊಕೇಟರು, ಬೌರಿಂಗ್‌ಪೇಟೆ. ೩. ಸಿ. ಸದಾಶಿವ ರಾವ್, ಬಿ.ಎ., ಎಲ್‌ಎಲ್.ಬಿ., ಮ್ಯಾಜಿಸ್ಟ್ರೇಟರು, ಕೋಲಾರ. ೪. ಎಂ. ರಾಮಬ್ರಹ್ಮ, ಎಂ.ಎ., ಎಲ್,ಟಿ., ಮುಂಬಯಿ ಸರಕಾರದ ನಿವೃತ್ತ ಶಿಕ್ಷಣಾಧಿಕಾರಿಗಳು, ಕೋಲಾರ. ೫. ಟಿ. ಎಸ್. ವೆಂಕಟಾಚಾರ್, ಬಿ.ಎ., ಬಿ.ಎಲ್., ಅಡ್ವೊಕೇಟರು, ಕೋಲಾರ. ೬. ಬಿ. ಎ. ಶಾಮಯ್ಯಂಗಾರ್, ಬಿ.ಎ., ಬಿ.ಎಲ್., ಪ್ಲೀಡರು, ಕೋಲಾರ. ೭. ಟಿ. ಶ್ರೀನಿವಾಸಾಚಾರ್, ಪ್ಲೀಡರು, ಕೋಲಾರ. ೮. ಎನ್. ನರಸಿಂಹ ಅಯ್ಯಂಗಾರ್, ಬಿ.ಇ., ಎಗ್ಸಿಕ್ಯುಟೀವ್ ಇಂಜಿನೀಯರು, ಕೋಲಾರ. ೯. ಟಿ. ಎಲ್. ಶ್ರೀನಿವಾಸಾಚಾರ್, ಬಿ.ಎ., ಎಲ್‌ಎಲ್.ಬಿ., ಅಮಲ್ದಾರರು, ಚಿಂತಾಮಣಿ. ೧೦. ವೆಂಕಟನರಸಿಂಹಭಟ್ಟರಾಚಾರ್ಯರು, ಜೋಡಿ ಮಿಂಡಗಲ್, ಪೋಸ್ಟ್ ಇರಗಂಪಲ್ಲಿ, ತಾಲ್ಲೂಕು ಚಿಂತಾಮಣಿ.

**ಸಾಮಾನ್ಯ ಸದಸ್ಯರು (೬ ರೂ.) :** ಶ್ರೀಗಳಾದ ೧. ಎಸ್. ರಾಮರಾಯರು, ಪ್ಲೀಡರು, ಚಿಕ್ಕಬಳ್ಳಾಪುರ. ೨. ಎಚ್. ವಿ. ರಾಮಚಂದ್ರರಾಯರು, ಪ್ಲೀಡರು, ಚಿಕ್ಕಬಳ್ಳಾಪುರ. ೩. ಬಿ. ಜಿ. ಗೋಖಲೆಯವರು, ಎಲ್‌ಎಲ್.ಬಿ., ಪ್ಲೀಡರು, ಗದಗು.

**ಸಾಮಾನ್ಯ ಸದಸ್ಯರು (೩ ರೂ.) :** ಶ್ರೀಗಳಾದ ೧. ಎಸ್. ರಾಮಪ್ಪ, ವೈಸ್ ಪ್ರೆಸಿಡೆಂಟರು, ಡಿಸ್ಟ್ರಿಕ್ಟ್‌ಬೋರ್ಡ್, ಕೋಲಾರ. ೨. ಟಿ. ಎಸ್. ರಾಧಾಕಾಂತ, ಬಿ.ಎ., ಎಲ್‌ಎಲ್.ಬಿ., ಪ್ಲೀಡರು, ಚಿಕ್ಕಬಳ್ಳಾಪುರ.

**ಅಂಗಸಂಸ್ಥೆ :** ಕರ್ನಾಟಕ ಸಂಘ, ಮುನಿಸಿಪಲ್ ಹೈಸ್ಕೂಲು, ಬೌರಿಂಗ್‌ಪೇಟೆ.

### ಪರಿಷತ್ತಿನ ಉಪಾಧ್ಯಕ್ಷರ ಮತ್ತು ಕಾರ್ಯದರ್ಶಿಗಳ ಪ್ರವಾಸ

ಅಕ್ಟೋಬರ್ ೩ ಬೆಂಗಳೂರಿನಿಂದ ಪ್ರಯಾಣ.
,, ೪ ರಾಣಿಬೆನ್ನೂರು.
,, ೫ ಹಾವೇರಿ.
,, ೬ ಕುಂದಗೋಳ.
,, ೭, ೮ ಹುಬ್ಬಳ್ಳಿ.
,, ೧೦, ೧೧ ಸಿರಸಿ.
,, ೧೩, ೧೪, ೧೫ ಬಳ್ಳಾರಿ.

### ರಾಜಸೇವಾಸಕ್ತ ಶ್ರೀ ಬೆಳ್ಳಾವೆ ವೆಂಕಟನಾರಾಯಣಪ್ಪನವರ ಸ್ಮಾರಕ ಉಪನ್ಯಾಸ ನಿಧಿ

| | | |
|---|---|---|
| | ಹಿಂದಿನ ಸಂಚಿಕೆಯಲ್ಲಿ ರೂ. | ೯೩೦-೦-೦ |
| | ಶ್ರೀ.ಗಳಾದ | |
| ೧. | ಬಿ. ಪುಟ್ಟಯ್ಯನವರು | ೧೦-೦-೦ |
| ೨. | ಕಾರ್ಯದರ್ಶಿಗಳು, ಮಹಾರಾಜರವರ ಕಾಲೇಜು, ಕರ್ಣಾಟಕ ಸಂಘ, ಮೈಸೂರು | ೧೦-೦-೦ |
| ೩. | ಜಿ. ಹನುಮಂತರಾಯರು, ಮೈಸೂರು | ೫-೦-೦ |
| ೪. | ಡಾಕ್ಟರ್ ಪಿ. ಕೃಷ್ಣರಾಯರು | ೫-೦-೦ |
| ೫. | ಕಾಗಲ ಶ್ರೀನಿವಾಸರಾಯರು, ಹೈದರಾಬಾದು | ೨-೦-೦ |
| ೬. | ಮಾರ್ತಾಂಡ ಶ್ರೀಪಾದ ಕುಲಕರ್ಣಿಯವರು | ೧-೦-೦ |
| | ರೂ. | ೯೬೩-೦-೦ |

### ಮಹಿಳಾ ಶಾಖೆ

ತಾ|| ೨೫-೯-೧೯೪೩ನೆಯ ಶನಿವಾರ ಸಂಜೆ ಶ್ರೀಮತಿಯರಾದ ಸ್ವರ್ಣಾಂಬ, ವಿಜಯಲಕ್ಷ್ಮಿ ಅವರು ಸುಶ್ರಾವ್ಯವಾಗಿ ಭಾವಪೂರ್ಣವಾಗಿ ಭಾರತವಾಚನ ಮಾಡಿದರು.

ಕಳೆದ ಶುಕ್ರವಾರ(೨೪) ಶ್ರೀಮತಿ ವೇದಾಂಬ ಅವರು ಇಂಪಾಗಿ ವೀಣೆಯನ್ನು ಎರಡು ಗಂಟೆ ನುಡಿಸಿ ಸಭಿಕರನ್ನು ಆನಂದಗೊಳಿಸಿದರು.

ತಾ|| ೨೬-೯-೧೯೪೩ನೆಯ ಭಾನುವಾರ ಶ್ರೀಮತಿ ಅನುಸೂಯಾ ಬಾಯಿ ಅವರು ಹರಿಶ್ಚಂದ್ರ ಕಾವ್ಯದಿಂದ ಸೊಗಸಾಗಿ ಪದ್ಯಪಠನ ಮಾಡಿದರು. ಆಮೇಲೆ ಮಹಾರಾಣಿಯವರ ಕಾಲೇಜಿನ ವಿದ್ಯಾರ್ಥಿನಿಯರು 'ಗುಟ್ಟುರಟ್ಟು' ಎಂಬ ಸಣ್ಣ ದೃಶ್ಯವನ್ನು ಅಚ್ಚುಮೆಚ್ಚಾಗಿ ಅಭಿನಯಿಸಿದರು.

### ಬಳ್ಳಾರಿಯ ಪ್ರಶ್ನೆ : ಸಾರ್ವಜನಿಕ ಸಭೆ

ಬಳ್ಳಾರಿ ಜಿಲ್ಲೆಯನ್ನೂ ಅನಂತಪುರ ಜಿಲ್ಲೆಯ ಕನ್ನಡ ಪ್ರದೇಶಗಳನ್ನೂ ಆಂಧ್ರ ಸೀಮೆಗೆ ಸೇರಿಸಿಕೊಳ್ಳಲು ಆಂಧ್ರರು ಕೈಕೊಂಡಿರುವ ಪ್ರಯತ್ನವನ್ನು ವಿರೋಧಿಸುವುದಕ್ಕಾಗಿ **೨-೧೦-೪೩ನೆಯ ಶನಿವಾರ ಸಂಜೆ ೭ ಗಂಟೆಗೆ** ಪರಿಷನ್ಮಂದಿರದಲ್ಲಿ ರಾಜಸೇವಾಸಕ್ತ **ಶ್ರೀ. ಬಿ. ಎಂ. ಶ್ರೀಕಂಠಯ್ಯನವರ** ಅಧ್ಯಕ್ಷತೆಯಲ್ಲಿ ಸಾರ್ವಜನಿಕ ಸಭೆ ಸೇರುವುದು. ಎಲ್ಲರೂ ಬರಬೇಕಾಗಿ ಆಗ್ರಹದ ವಿನಂತಿ.

# ಕನ್ನಡ ಸುದ್ದಿ

ಗಮಕ ವಿದ್ವಾನ್ ಶ್ರೀ. ಸಂಪತ್ಕುಮಾರಾಚಾರ್ಯರು ನಾಡಹಬ್ಬದ ಪ್ರಯುಕ್ತ ಕರ್ನಾಟಕ ಪ್ರವಾಸ ಮಾಡುತ್ತಾರೆ. ಅಕ್ಟೋಬರ್ ೨, ೩ ಮತ್ತು ೪: ಗುಲ್ಬರ್ಗ. ೫: ಸೋಲಾಪುರ. ೬, ೭ ಮತ್ತು ೮: ರಾಯಚೂರು.

### ಶರಣ ಸಾಹಿತ್ಯ ವಾರ್ಷಿಕೋತ್ಸವ

ಇದೇ ತಾ|| ೨೬-೯-೪೩ಯ ದಿನ ಶರಣ ಸಾಹಿತ್ಯ ಮಾಸ ಪತ್ರಿಕೆಯ ವಾರ್ಷಿಕೋತ್ಸವ ಮೈಸೂರು ಶಾಸನ ಸಭಾಧ್ಯಕ್ಷರಾದ ಶ್ರೀಮಾನ್ ಡಿ. ಹೆಚ್. ಚಂದ್ರಶೇಖರಯ್ಯನವರ ಅಧ್ಯಕ್ಷತೆಯಲ್ಲಿ ಅತ್ಯಂತ ವೈಭವದಿಂದ ಜರುಗಿತು. ಈ ಉತ್ಸವಕ್ಕೆ ಅನೇಕ ಮಾನ್ಯ ಅಧಿಕಾರಿಗಳೂ, ಪುರಪ್ರಮುಖರೂ ಆಗಮಿಸಿದ್ದರು. ಶರಣ ಸಾಹಿತ್ಯದ ಸೇವೆ, ಕನ್ನಡ ಸಾಹಿತ್ಯದ ಮಾಧುರ್ಯ, ವೀರಶೈವ ಸಾಹಿತ್ಯದ ಹಿರಿಮೆ ಈ ವಿಷಯಗಳ ಮೇಲೆ ಶ್ರೀಗಳಾದ ಕೆ. ಎಸ್. ಧರಣೇಂದ್ರಯ್ಯನವರು, ಎಂ.ಎ., ಬಿ.ಟಿ., ಜೀರಗೆ ಕೆ. ಬಸವಪ್ಪನವರು, ಬಿ.ಎ., ಎಂ. ಆರ್. ಶ್ರೀನಿವಾಸ ಮೂರ್ತಿಗಳು, ಬಿ.ಎ. ಅವರು ಸ್ವಾರಸ್ಯವಾದ ಭಾಷಣಗಳನ್ನು ಮಾಡಿದರು. ವ್ಯವಸ್ಥಾಪಕರಾದ ಕೀರ್ತನಕೇಸರಿ ವೇ|| ಬಿ. ಶಿವಮೂರ್ತಿ ಶಾಸ್ತ್ರಿಗಳು ಮಾನ್ಯ ಅಧ್ಯಕ್ಷರನ್ನೂ, ಅತಿಥಿಗಳನ್ನೂ ವಂದಿಸಿದರು. ಪತ್ರಿಕಾ ವ್ಯವಸಾಯದ ಕಷ್ಟನಷ್ಟಗಳನ್ನೂ, ಅದರ ಪವಿತ್ರತೆಯನ್ನೂ ವಿವರಿಸಿದರು.

### ಕವಿ ಜಯಂತಿಗಳು

ಕರ್ನಾಟಕ ಕವಿ ಪ್ರಶಸ್ತಿ ಗ್ರಂಥ ಪ್ರಕಟನಾ ಸಮಿತಿಯವರು ಶ್ರೀ ಚಾಮರಾಜೇಂದ್ರ ಸಂಸ್ಕೃತ ಮಹಾ ಪಾಠಶಾಲೆಯ ಸಭಾಂಗಣದಲ್ಲಿ ೧೮-೯-೪೩ನೆಯ ಸಂಜೆ ಅಭಿನವ ಕಾಳಿದಾಸ **ಬಸವಪ್ಪ ಶಾಸ್ತ್ರಿಗಳ** ಜಯಂತಿಯನ್ನೂ, ೧೯-೯-೪೩ನೆಯ ಸಂಜೆ ಮಹಾಕವಿ ರತ್ನಾಕರವರ್ಣಿಯ ಜಯಂತಿಯನ್ನೂ ಆಚರಿಸಿದರು. ದಿವಾನ್ ಬಹದ್ದೂರ್ ರಾಜಧರ್ಮಪ್ರವೀಣ ನಿವೃತ್ತ ಪ್ರಧಾನ ನ್ಯಾಯಾಧೀಶರಾದ ಶ್ರೀಮಾನ್ ಪಿ. ಮಹದೇವಯ್ಯನವರು ಮೊದಲನೆಯ ದಿನವೂ, ಶ್ರೀ. ದೇವುಡು ನರಸಿಂಹ ಶಾಸ್ತ್ರಿಗಳು ಎರಡನೆಯ ದಿನವೂ ಸಭಾಧ್ಯಕ್ಷತೆ ವಹಿಸಿದ್ದರು.

ತಾ|| ೨೩-೯-೪೩ ನೇ ದಿನ ಬೆಂಗಳೂರು ಶ್ರೀ. ಗೌಡರ ವೀರಭದ್ರಪ್ಪನವರ ಛತ್ರದಲ್ಲಿ ಪಬ್ಲಿಕ್ ಸರ್ವಿಸ್ ಕಮಿಷನರ್ ಅವರಾದ ಶ್ರೀ. ಬಿ. ಎಸ್. ಪುಟ್ಟಸ್ವಾಮಿಯವರ ಅಧ್ಯಕ್ಷತೆಯಲ್ಲಿ ಮಹಾಕವಿ **ರಾಘವಾಂಕನ** ಜಯಂತಿ ವೈಭವದಿಂದ ನೆರವೇರಿಸಲ್ಪಟ್ಟಿತು. ಈ ಸಮಾರಂಭವನ್ನೂ ಕರ್ನಾಟಕ ಕವಿ ಪ್ರಶಸ್ತಿ ಪ್ರಕಟನಾ ಸಮಿತಿಯವರು ಏರ್ಪಡಿಸಿದ್ದರು.

ಹಲವು ವಿದ್ವಾಂಸರಿಂದ ಕಾವ್ಯವಾಚನ, ಭಾಷಣಾದಿ ಕಾರ್ಯಕ್ರಮಗಳು ಯಶಸ್ವಿಯಾಗಿ ನಡೆದುವು.

**ಮಂಗಳೂರು: ಮಿತ್ರಮಂಡಲಿ**

೨೫-೯-೪೩ ನೆಯ ಶನಿವಾರ ಥಿಯೊಸೊಫಿಕಲ್ ಲೋಜಿನಲ್ಲಿ ಸತ್ಕಾರ ಸಭೆ ನಡೆದು ಶ್ರೀ. ವಿ. ಎಸ್. ಕುಡ್ವ ಅವರು ಮತ್ತು ಶ್ರೀ. ಕೆ. ಶಿವರಾಮ ಕಾರಂತರು ಇವರನ್ನು ಮುಖ್ಯ ಅತಿಥಿಗಳನ್ನಾಗಿ ಬರಮಾಡಿಕೊಂಡು ಗೌರವಿಸಲಾಯಿತು.

**ಕಲ್ಬುರ್ಗಿ: ಕನ್ನಡ ಸಾಹಿತ್ಯ ಸಂಘ**

ಇಲ್ಲಿಯ ಸುಪ್ರಸಿದ್ಧ ನಾಗರಿಕರಾದ ಶ್ರೀಮಾನ್ ಭೀಮಸೇನರಾವ್ ದೇಶಮುಖ ಮುಡಬಾಗಲ ಇವರು ಸಂಘಕ್ಕೆ ನೂರು ರೂಪಾಯಿಗಳ ಉದಾರ ದಾನವನ್ನು ಕೊಟ್ಟಿದ್ದಾರೆ. ಈ ಬಗ್ಗೆ ಸಂಘ ಅವರಿಗೆ ಚಿರಋಣಿ.

ಸಂಘದಲ್ಲಿ ಜಾಣ ಮತ್ತು ಕಾವ ತರಗತಿಗಳ ಅಭ್ಯಾಸ ಪ್ರಾರಂಭವಾಗಲಿದೆ.

ದಿನಾಂಕ ೨೪-೯-೪೩ ಸಾಯಂಕಾಲ ಸಂಘದ ಕಟ್ಟಡದಲ್ಲಿ ಶ್ರೀ. ಕಟ್ಟಿ ಸುಬ್ಬಾಚಾರ್ಯರು 'ದಾಸ ಸಾಹಿತ್ಯ' ಎಂಬ ವಿಷಯದ ಮೇಲೆ ಶ್ರೀ. ಅಶ್ವತ್ಥರಾಯರು ಬಿ.ಎ., ಎಲ್‌ಎಲ್.ಬಿ. ಇವರ ಅಧ್ಯಕ್ಷತೆಯಲ್ಲಿ ಭಾಷಣ ಮಾಡಿದರು.

೧೯೪೩ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

